# ಕರ್ನಾಟಕದ ಚಿತ್ರಕಲಾ ಸಾಹಿತ್ಯ

## ಒಂದು ವೈಚಾರಿಕ ಅಧ್ಯಯನ

ಪಿ.ಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ
ಸಾದರ ಪಡಿಸಿದ ಸಂಶೋಧನ ಮಹಾಪ್ರಬಂಧ

ಸಂಶೋಧಕ
ಪ್ರೇಮಾನಂದ ತಿ. ಲಕ್ಕಣ್ಣನವರ

ಮಾರ್ಗದರ್ಶಕರು
ಡಾ. ಎಸ್. ಸಿ. ಪಾಟೀಲ
ಮುಖ್ಯಸ್ಥರು, ದೃಶ್ಯಕಲಾ ವಿಭಾಗ, ಡೀನ್, ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ



ದೃಶ್ಯಕಲಾ ವಿಭಾಗ, ಲಲಿತಕಲಾ ನಿಕಾಯ
ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ-೫೮೩ ೨೭೬



# ಕರ್ನಾಟಕದ ಚಿತ್ರಕಲಾ ಸಾಹಿತ್ಯ

## ಒಂದು ವೈಚಾರಿಕ ಅಧ್ಯಯನ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಸಾದರಪಡಿಸಿದ
ಸಂಶೋಧನಾ ಮಹಾಪ್ರಬಂಧ

ಸಂಶೋಧಕ
**ಪ್ರೇಮಾನಂದ ತಿ. ಲಕ್ಕಣ್ಣನವರ**

ಮಾರ್ಗದರ್ಶಕರು
**ಡಾ.ಎಸ್.ಸಿ.ಪಾಟೀಲ**
ಮುಖ್ಯಸ್ಥರು ದೃಶ್ಯಕಲಾ ವಿಭಾಗ
ಡೀನ್, ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ-೫೮೩ ೨೭೬



ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೦೮

# ಘೋಷಣಾ ಪತ್ರ

**ಪ್ರೇಮಾನಂದ ತಿ. ಲಕ್ಕಣ್ಣನವರ** ಎಂಬ ನಾನು ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗದಲ್ಲಿ ಬಾಹ್ಯ ಸಂಶೋಧನಾ ವಿದ್ಯಾರ್ಥಿಯಾಗಿ ಪಿಹೆಚ್.ಡಿ.ಅಧ್ಯಯನ ಮಾಡುತ್ತಿದ್ದು, ವಿಭಾಗದ ಮುಖ್ಯಸ್ಥರಾದ ಡಾ.ಎಸ್.ಸಿ.ಪಾಟೀಲರ ಮಾರ್ಗದರ್ಶನದಲ್ಲಿ **'ಕರ್ನಾಟಕದ ಚಿತ್ರಕಲಾ ಸಾಹಿತ್ಯ ಒಂದು ವೈಚಾರಿಕ ಅಧ್ಯಯನ'** ಎಂಬ ಮಹಾಪ್ರಬಂಧ ಸಿದ್ಧಪಡಿಸಿದ್ದೇನೆ. ಇದು ಮೂಲ ಸಂಶೋಧನಾ ಕೃತಿಯಾಗಿದ್ದು, ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೆ ಪದವಿಗಾಗಿ ಅಥವಾ ಇನ್ನಿತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ತಮ್ಮ ವಿಶ್ವಾಸದ,

(ಪ್ರೇಮಾನಂದ ತಿ. ಲಕ್ಕಣ್ಣನವರ)
ಆಯ್ಕೆ ಶ್ರೇಣಿ ಕನ್ನಡ ಉಪನ್ಯಾಸಕರು,
ಬಿ.ಇ.ಎಸ್.ವರ್ತಕರ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ,
ಬ್ಯಾಡಗಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೫-೦೯-೨೦೦೮

## ದೃಢೀಕರಣ ಪತ್ರ

**ಪ್ರೇಮಾನಂದ ತಿ. ಲಕ್ಕಣ್ಣನವರ** ಎಂಬ ಅಭ್ಯರ್ಥಿಯು ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗದಲ್ಲಿ ಬಾಹ್ಯ ಸಂಶೋಧನಾ ವಿದ್ಯಾರ್ಥಿಯಾಗಿ ಪಿಹೆಚ್.ಡಿ. ಅಧ್ಯಯನ ಮಾಡುತ್ತಿದ್ದು, ನನ್ನ ಮಾರ್ಗದರ್ಶನದಲ್ಲಿ **'ಕರ್ನಾಟಕದ ಚಿತ್ರಕಲಾ ಸಾಹಿತ್ಯ – ಒಂದು ವೈಚಾರಿಕ ಅಧ್ಯಯನ'** ಎಂಬ ಮಹಾಪ್ರಬಂಧ ಸಿದ್ಧಪಡಿಸಿದ್ದಾರೆ. ಇದು ಮೂಲ ಸಂಶೋಧನಾ ಕೃತಿಯಾಗಿದ್ದು, ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇನ್ನಿತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ. ಮತ್ತು ವಿಭಾಗದ ಮೂಲಕ ಮುಂದಿನ ಕ್ರಮಕ್ಕಾಗಿ ಪ್ರಬಂಧಗಳನ್ನು ಅಧ್ಯಯನಾಂಗಕ್ಕೆ ಸಲ್ಲಿಸಲಾಗುತ್ತಿದೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೫-೦೯-೨೦೦೮

**(ಡಾ.ಎಸ್.ಸಿ.ಪಾಟೀಲ)**
ಮಾರ್ಗದರ್ಶಕರು,
ಮುಖ್ಯಸ್ಥರು ದೃಶ್ಯಕಲಾ ವಿಭಾಗ
ಡೀನ್, ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ

# ಕರ್ನಾಟಕದ ಚಿತ್ರಕಲಾ ಸಾಹಿತ್ಯ

## ಒಂದು ವೈಚಾರಿಕ ಅಧ್ಯಯನ

---

## ಪರಿವಿಡಿ



*****

**ಅಧ್ಯಯನದ ಉದ್ದೇಶ :**

ಸಾಹಿತ್ಯ ಪ್ರಕಾರವು ಇತ್ತೀಚಿನ ದಿನಗಳಲ್ಲಿ ಹಲವು ಜ್ಞಾನಶಾಖೆಗಳಲ್ಲಿ ಪ್ರಬುದ್ಧವಾಗಿ ಬೆಳೆದು ಬರುತ್ತಿದೆ. ಹಿಂದಿನ ದಿನಗಳಲ್ಲಿ ಕೇವಲ ಶುದ್ಧ ಸಾಹಿತ್ಯವನ್ನು ಮಾತ್ರ ಸಾಹಿತ್ಯ ಪ್ರಕಾರವೆಂಬುದಾಗಿ ಪರಿಗಣಿಸುತ್ತಿದ್ದ ಸಂದರ್ಭಕ್ಕಿಂತ ಭಿನ್ನವಾಗಿ ವಿವೇಚಿಸುವ, ಆಲೋಚಿಸುವ ಮನಸ್ಸುಗಳು ಈ ಹೊತ್ತು ಹೆಚ್ಚುತ್ತಲಿವೆ. ವೈಜ್ಞಾನಿಕ, ಮಾನವಿಕ ಹಾಗೂ ಲಲಿತಕಲೆಗಳಂತಹ ಸಾಹಿತ್ಯೇತರ ಜ್ಞಾನಶಾಖೆಗಳೂ ಇಂದು ತಮ್ಮದೇ ಆದ ಸಾಹಿತ್ಯದಿಂದಾಗಿ ವಿಜ್ಞಾನ ಸಾಹಿತ್ಯ, ವೈದ್ಯ ಸಾಹಿತ್ಯ, ಲಲಿತಕಲಾ ಸಾಹಿತ್ಯ ಕಾನೂನು ಸಾಹಿತ್ಯ, ಕೃಷಿ ಸಾಹಿತ್ಯ ಎಂಬ ಹೆಸರಿನಿಂದ ಗುರುತಿಸಿಕೊಂಡಿರುವುದನ್ನು ನೋಡಬಹುದು.

ಲಲಿತಕಲೆಗಳ ಕಲಾಪ್ರಕಾರಗಳಾದ ಸಾಹಿತ್ಯ, ಸಂಗೀತ, ನೃತ್ಯ, ವಾಸ್ತು, ನಾಟಕ ಶಿಲ್ಪ, ಚಿತ್ರ ಮುಂತಾದ ಕಲೆಗಳಿಗೆ ಅವುಗಳದೇ ಆದ ಪ್ರತ್ಯೇಕ ವ್ಯಾಕರಣಾಂಶಗಳಿವೆ. ಅಭಿವ್ಯಕ್ತಿ ಮಾಧ್ಯಮವು ವಿಭಿನ್ನವಾಗಿದೆ. ಇಂದು ಅವು ಬೇರೆ ಬೇರೆಯಾದ ಸಾಹಿತ್ಯ ಪ್ರಕಾರವನ್ನು ಹೊಂದಿವೆ. ಪಾಶ್ಚಿಮಾತ್ಯರು ಈ ಬಗೆಯ ಕಲಾ ಸಾಹಿತ್ಯವನ್ನು ಬೇರೆಯಾಗಿ ವಿಂಗಡಿಸಿ ಅಧ್ಯಯನ ಮಾಡುವ ಕ್ರಮವನ್ನು ನಮಗಿಂತ ಮೊದಲೆ ಪ್ರಾರಂಭಿಸಿಕೊಂಡು ಬಂದಿದ್ದಾರೆ. ಆದರೆ ಪ್ರಾಚೀನ ಭಾರತೀಯರು ಕಲಾ

ಸಾಹಿತ್ಯವನ್ನು ಒಂದು ಪ್ರತ್ಯೇಕ ವಿಭಾಗವಾಗಿ ಪರಿಗಣಿಸದೇ ಸಾಂದರ್ಭಿಕವಾಗಿ ರಚನೆ ಮಾಡುತ್ತಾ ಬಂದರು. ತೀರ ಇತ್ತೀಚೆಗೆ ಭಾರತೀಯರೂ ಈ ಲಲಿತಕಲಾ ಸಾಹಿತ್ಯ ಪ್ರಕಾರವನ್ನು ಒಂದು ಪ್ರತ್ಯೇಕ ಜ್ಞಾನಶಾಖೆಯಾಗಿ ಪ್ರತ್ಯೇಕಿಸಿದ್ದಾರೆ. ಕಲಾ ಶಿಕ್ಷಣದಂತೆ ಲಲಿತಕಲಾ ಸಾಹಿತ್ಯವು ಒಂದು ಅಧ್ಯಯನದ ಶಿಸ್ತಾಗಿ ಬೆಳೆಯುತ್ತಿರುವುದು ಈ ಕ್ಷೇತ್ರದಲ್ಲಾದ ಬದಲಾವಣೆ ಮತ್ತು ಬೆಳವಣಿಗೆ ಕೂಡ ಆಗಿದೆ.

ಸಾಮಾನ್ಯವಾಗಿ ಸಾಹಿತ್ಯದಲ್ಲಿ ಕಾವ್ಯ, ಕಥೆ, ಕಾದಂಬರಿ, ಜೀವನಚರಿತ್ರೆ, ವಿಮರ್ಶೆ, ಸಂಶೋಧನೆ, ಸಂಪಾದನೆ, ಅನುವಾದ, ಪ್ರವಾಸಕಥನ ಮುಂತಾದ ಅನೇಕ ಬಗೆಗಳು ಒಳಗೊಂಡಿರುತ್ತವೆ. ಅದೇ ರೀತಿ ಲಲಿತಕಲಾ ಸಾಹಿತ್ಯದಲ್ಲಿ ಶಿಲ್ಪ, ಸಂಗೀತ, ನೃತ್ಯ, ನಾಟಕ, ವಾಸ್ತುಶಿಲ್ಪ, ಸಾಹಿತ್ಯ, ಚಿತ್ರಕಲೆಯಂತಹ ವಿಷಯಗಳನ್ನು ಪ್ರಮುಖವಾಗಿ ಪರಿಗಣಿಸುತ್ತಾರೆ. ಇವುಗಳಲ್ಲಿ ಪ್ರಸ್ತುತ ಚಿತ್ರಕಲಾ ಸಾಹಿತ್ಯವು ಇಂದು ಸಂಪಾದನೆ, ವೈಚಾರಿಕತೆ, ವಿಮರ್ಶೆ, ಸಂಶೋಧನೆ, ಪತ್ರಿಕಾ ಸಾಹಿತ್ಯ, ವ್ಯಕ್ತಿ ಅಧ್ಯಯನ ಅನುವಾದ, ಪ್ರವಾಸ ಮುಂತಾದ ಹಲವು ಪ್ರಕಾರಗಳಲ್ಲಿ ಮೈಚಾಚಿಕೊಂಡು ಬೆಳೆಯುತ್ತಲಿದೆ.[೧] ಡಾ.ಎಸ್.ಸಿ.ಪಾಟೀಲರವರು[೨] ಕರ್ನಾಟಕದ ಲಲಿತಕಲೆಗಳ ಸಾಹಿತ್ಯವನ್ನು ಅಧ್ಯಯನದ ದೃಷ್ಟಿಯಿಂದ ಮೇಲೆ ತಿಳಿಸಿದ ರೀತಿಯಲ್ಲಿ ಒಂಭತ್ತು ವಿಭಾಗಗಳನ್ನಾಗಿ ಮಾಡಿ ಸ್ಥೂಲವಾಗಿ ವಿವೇಚಿಸಿದ್ದಾರೆ. ಕರ್ನಾಟಕದಲ್ಲಿ ತೀರ ಇತ್ತೀಚೆಗೆ ಈ ಚಿತ್ರಕಲಾ ಸಾಹಿತ್ಯವು ತನ್ನ ನೆಲೆಯನ್ನು ನಿಧಾನವಾಗಿ ಕಂಡುಕೊಳ್ಳುತ್ತ ವೈವಿಧ್ಯಮಯವಾಗಿ ರಚನೆಯಾಗುತ್ತ ಬಂದಿದೆ.

ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಕುರಿತಾ ಇಲ್ಲಿಯವರೆಗೆ ಒಂದು ಸ್ಪಷ್ಟ ಕಲ್ಪನೆ ಕಂಡುಬಂದಿಲ್ಲವೆಂದರೆ ತಪ್ಪಾಗಲಾರದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಪ್ರಾಚೀನತೆ, ಬೆಳೆದು ಬಂದ ದಾರಿ, ಸ್ವರೂಪ, ಸಾಧ್ಯಾಸಾಧ್ಯತೆಗಳನ್ನು ಕುರಿತು ಅಧ್ಯಯನ ಕೈಗೊಳ್ಳುವಂತಹ ಅವಶ್ಯಕತೆ ಇಂದು ತುಂಬಾ ಇದೆ. ಅಲ್ಲದೆ ಕರ್ನಾಟಕದ ಚಿತ್ರಕಲಾ ಸಾಹಿತ್ಯದಲ್ಲಿರುವ ವಿವಿಧ ಪ್ರಕಾರಗಳನ್ನು ವ್ಯವಸ್ಥಿತವಾಗಿ ವಿಂಗಡಿಸಿಕೊಂಡು ವಿಶ್ಲೇಷಿಸುವ ಆ ಮೂಲಕ ಈ ನಾಡಿನ ಜನತೆ ಚಿತ್ರಕಲಾ ಸಾಹಿತ್ಯ ರಚನೆಯಲ್ಲಿ ಯಾವ ಬಗೆಯ ಪಾತ್ರ ವಹಿಸಿದರು ಎನ್ನುವಂತಹ ಬಹುಮುಖ್ಯ ಸಂಗತಿಗಳನ್ನು ಇಂತಹ ಅಧ್ಯಯನಗಳಿಂದ ತಿಳಿದುಕೊಳ್ಳುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

ಕರ್ನಾಟಕದ ಚಿತ್ರಕಲಾ ಸಾಹಿತ್ಯವು ತೀರ ಇತ್ತೀಚೆಗೆ ಬೆಳೆದು ಬಂದರೂ ಪ್ರಾಚೀನ ಕಾಲದ ಬೌದ್ಧ, ಜೈನ ಸಾಹಿತ್ಯ ಕೃತಿಗಳಲ್ಲಿ ಮತ್ತು ಪರೋಕ್ಷವಾಗಿ ಕವಿರಾಜಮಾರ್ಗದಿಂದಲೇ ಅದರ ಆರಂಭದ ಹಂತಗಳನ್ನು ಗುರುತಿಸಬಹುದಾಗಿದೆ. ಅಲ್ಲದೆ ಹೊಯ್ಸಳರ ಕಾಲದಲ್ಲಿ ಹನ್ನೆರಡನೆ ಶತಮಾನದ ಶರಣರ ವಚನಗಳಲ್ಲಿ ವಿಜಯನಗರ ಕಾಲದ ಸಾಹಿತ್ಯ ಕೃತಿಗಳಲ್ಲಿ ಚಿತ್ರಕಲೆ ಬಗೆಗಿನ ಉಲ್ಲೇಖಗಳಿವೆ. ಹೀಗೆ ಪ್ರಾಚೀನ ಕಾಲದಿಂದ ಕರ್ನಾಟಕದ ಚಿತ್ರಕಲಾ ಸಾಹಿತ್ಯವು ಬೆಳೆದುಬಂದ ಐತಿಹಾಸಿಕ ಹಿನ್ನೆಲೆಯನ್ನು ಗುರುತಿಸುವ ಉದ್ದೇಶವನ್ನು ಸಹ ಈ ಅಧ್ಯಯನದಲ್ಲಿ ಹೊಂದಲಾಗಿದೆ.

ಚಿತ್ರಕಲಾ ಸಾಹಿತ್ಯದಲ್ಲಿ ಪ್ರಾರಂಭಿಕ ಹಂತದಲ್ಲಿ ಸಂಪಾದನೆ ಸಾಹಿತ್ಯವು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ಅಭಿನಂದನಾ ಗ್ರಂಥಗಳು, ಸ್ಮರಣ ಸಂಚಿಕೆಗಳಲ್ಲದೆ, ಕೆಲವು ವೈಚಾರಿಕ ಮತ್ತು ವಿಮರ್ಶಾತ್ಮಕ ಕೃತಿಗಳೂ ಸಹಿತ ಸಂಪಾದನಾ ವ್ಯಾಪ್ತಿಯಲ್ಲಿ ಒಳಗೊಳ್ಳುತ್ತವೆ. ಅಲ್ಲದೆ ಕೆಲವು ಕೃತಿಗಳನ್ನು ಒಬ್ಬರಿಗಿಂತ ಹೆಚ್ಚಿನ ಜನರು ಸಂಪಾದಿಸಿರುವುದೂ ಕಂಡುಬರುತ್ತದೆ.

೧. ಡಾ.ಎಫ್.ಟಿ. ಹಳ್ಳಿಕೇರಿ ಮತ್ತು ಡಾ.ಕಿ.ರವೀಂದ್ರನಾಥ (ಸಂ) : ದಶಕದ ಕನ್ನಡ ಸಾಹಿತ್ಯ

೨. ಡಾ. ಎಸ್.ಸಿ.ಪಾಟೀಲರವರ ಲೇಖನ : ಲಲಿತಕಲೆಗಳ ಸಾಹಿತ್ಯ : ಪುಟ-೩೨೦

ಇಲ್ಲಿ ಆಯಾ ವ್ಯಕ್ತಿಗಳ ಅಭಿರುಚಿ, ಆಸಕ್ತಿಯ ಜೊತೆಗೆ ಅವರ ಜ್ಞಾನವಿಸ್ತಾರದ ಹರವುಗಳೂ ಒಂದು ಕೃತಿಯ ಮೂಲಕ ಸ್ಥೂಲವಾಗಿ ಗೋಚರವಾಗಿತ್ತವೆ. ಇಲ್ಲಿ ಆಯಾ ವ್ಯಕ್ತಿಗಳ ಅಭಿರುಚಿ, ಆಸಕ್ತಿಯ ಜೊತೆಗೆ ಅವರ ಜ್ಞಾನವಿಸ್ತಾರದ ಹರವುಗಳೂ ಒಂದು ಕೃತಿಯ ಮೂಲಕ ಸ್ಥೂಲವಾಗಿ ಗೋಚರವಾಗಿತ್ತವೆ.ಇಲ್ಲಿ ಆಯಾ ವ್ಯಕ್ತಿಗಳ ಅಭಿರುಚಿ, ಆಸಕ್ತಿಯ ಜೊತೆಗೆ ಅವರ ಜ್ಞಾನವಿಸ್ತಾರದ ಹರವುಗಳೂ ಒಂದು ಕೃತಿಯ ಮೂಲಕ ಸ್ಥೂಲವಾಗಿ ಗೋಚರವಾಗಿತ್ತವೆ.ಇದಲ್ಲದೆ ಸಂಪಾದನಾ ಸಾಹಿತ್ಯ ಕೃತಿಗಳಲ್ಲಿ ಕಲಾ ನೆಲೆಗಳು, ಕಲಾ ಪ್ರಕಾರಗಳು, ಕಲಾ ಶೈಲಿ, ಕಲಾವಿದರ ಜೀವನ ಮತ್ತು ಕೃತಿಗಳು, ಹೀಗೆ ಹತ್ತು ಹಲವು ವಿಷಯಗಳಿಗೆ ಸಂಬಂಧಿಸಿದ ಕೃತಿಗಳಿವೆ. ಈ ರೀತಿ ವೈವಿಧ್ಯಮಯವಾದ ಚಿತ್ರಕಲಾ ಸಂಪಾದನಾ ಸಾಹಿತ್ಯವನ್ನು ವಿಷಯಾನುಸಾರ ವಿಂಗಡಿಸಿಕೊಂಡು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ಕರ್ನಾಟಕದಲ್ಲಿ ಕಲಾವಿದರ ವ್ಯಕ್ತಿಚಿತ್ರಣಗಳಿಗೆ ಹೆಚ್ಚು ಆದ್ಯತೆ ಕೊಟ್ಟು ಕಲಾವಿದರ ಪರಿಚಯಾತ್ಮಕ ಕಲಾಸಾಹಿತ್ಯ ಹೇರಳವಾಗಿ ಸೃಷ್ಟಿಯಾಗಿದ್ದು ಅವುಗಳ ನೆಲೆ-ಬೆಲೆಗಳನ್ನು ವಸ್ತುನಿಷ್ಠವಾಗಿ ಅಧ್ಯಯನಕ್ಕೊಳಪಡಿಸುವ ಮತ್ತು ಮಹತ್ವದ ಅಂಶಗಳನ್ನು ದಾಖಲಿಸುವ ಅಧ್ಯಯನದ ಕಾರ್ಯವು ನಡೆಯಬೇಕಾಗಿದೆ.

ಸಾಹಿತ್ಯ ಪ್ರಕಾರಗಳಲ್ಲಿ ಪ್ರವಾಸ ಸಾಹಿತ್ಯವೂ ಒಂದಾಗಿದ್ದು ಚಿತ್ರಕಲಾ ಕ್ಷೇತ್ರದಲ್ಲಿಯೂ ಇದು ರಚನೆಯಾಗುತ್ತಲಿದೆ. ನಿರ್ದಿಷ್ಟ ಉದ್ದೇಶದನ್ವಯ ಪ್ರವಾಸದ ಮೂಲಕ ಚಿತ್ರಕಲೆಯನ್ನು ಅಧ್ಯಯನ ಮಾಡಿ ಅದನ್ನು ಗ್ರಂಥರೂಪದಲ್ಲಿ ತಂದಿರುವುದು ಒಂದು ಬಗೆಯಾದರೆ, ಮನರಂಜನೆ ಅಥವಾ ಇನ್ನಿತರ ಉದ್ದೇಶಗಳ ಪ್ರವಾಸದ ವೇಳೆಯಲ್ಲಿ ಕಂಡುಬಂದ ಕಲಾ ಅಂಶಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸುವಂತಹ ಇನ್ನೊಂದು ರೀತಿಯ ಚಿತ್ರಕಲಾ ಪ್ರವಾಸ ಸಾಹಿತ್ಯವೂ ದೊರಕುತ್ತದೆ. ಇನ್ನೊಂದು ಮಹತ್ವದ ಅನುವಾದ ಕಲಾಸಾಹಿತ್ಯ ಪ್ರಕಾರವು ಕನ್ನಡದಲ್ಲಿ ಬೆಳವಣಿಗೆಯಾಗಿದೆ. ಇಲ್ಲಿ ಬೇರೆ ಭಾಷೆಗಳಿಂದ ಕನ್ನಡಕ್ಕೆ ಅನುವಾದವಾದ ಹಾಗೂ ಕನ್ನಡದಿಂದ ಬೇರೆ ಭಾಷೆಗಳಿಗೆ ಅನುವಾದವಾದ ಕಲಾಸಾಹಿತ್ಯವನ್ನು ಗಂಭೀರವಾಗಿ ಅಧ್ಯಯನಕ್ಕೆ ಒಳಪಡಿಸುವ ಉದ್ದೇಶವು ಇಲ್ಲಿದೆ.

ಚಿತ್ರಕಲಾ ಸಾಹಿತ್ಯದಲ್ಲಿ ಸಂಶೋಧನಾ ಸಾಹಿತ್ಯವು ತನ್ನದೇ ಆದ ಮಹತ್ವದ ಸ್ಥಾನ ಪಡೆದುಕೊಂಡಿದೆ. ಮಾನವನ ಸಾಂಸ್ಕೃತಿಕ ಬದುಕಿನೊಟ್ಟಿಗೆ ಬೆಳೆದುಬಂದ ಚಿತ್ರಕಲೆಯ ಸಂಶೋಧನೆಯಿಂದ ಆಯಾ ಕಲಾ ಪ್ರಕಾರಗಳ ತಾಂತ್ರಿಕ ಅಂಶಗಳಲ್ಲದೇ ಆತನ ಜೀವನ ಪದ್ಧತಿಗಳಲ್ಲಾದ ಬದಲಾವಣೆಗಳಂತಹ ಸಂಗತಿಗಳು ಪ್ರಮುಖವಾಗಿ ತಿಳಿದುಬರುತ್ತವೆ. ಈ ರೀತಿಯ ಮಹತ್ವ ಪೂರ್ಣ ಅಂಶಗಳನ್ನು ಒಳಗೊಂಡ ಚಿತ್ರಕಲಾ ಸಂಶೋಧನಾ ಸಾಹಿತ್ಯದಲ್ಲಿ ಪ್ರಕಟಿತ ಮತ್ತು ಅಪ್ರಕಟಿತ ಎಂಬುದಾಗಿ ವಿಂಗಡಿಸಬಹುದು. ಅಲ್ಲದೆ ಈ ಸಂಶೋಧನಾ ಸಾಹಿತ್ಯದಲ್ಲಿ ಪಿಹೆಚ್.ಡಿ. ಪ್ರಬಂಧಗಳು, ಡಿ.ಲಿಟ್. ಪ್ರಬಂಧಗಳು, ಎಂ.ಫಿಲ್ ಪ್ರಬಂಧಗಳು, ಸ್ನಾತಕೋತ್ತರ ಪದವಿಯ ಲಘು ಶೋಧ ಪ್ರಬಂಧಗಳು. ವಿಶೇಷ ಅಧ್ಯಯನದ ಹಿನ್ನೆಲೆಯಲ್ಲಿ ರಚನೆಯಾದ ಕೃತಿಗಳು ಮುಂತಾದವುಗಳು ಸೇರುತ್ತವೆ. ಈರೀತಿ ಎಲ್ಲ ಬಗೆಯ ಚಿತ್ರಕಲಾ ಸಂಶೋಧನಾ ಸಾಹಿತ್ಯವನ್ನು ಇಲ್ಲಿ ವಿಷಯಾನುಸಾರ ವಿಂಗಡಿಸಿಕೊಂಡು ಅಧ್ಯಯನಕ್ಕೆ ಒಳಪಡಿಸುವ ಉದ್ದೇಶವನ್ನು ಇಟ್ಟುಕೊಳ್ಳಲಾಗಿದೆ. ಶೈಕ್ಷಣಿಕ ಹಿನ್ನೆಲೆಯಲಿರಚನೆಯಾಗುವ ಚಿತ್ರಕಲಾ ಸಾಹಿತ್ಯವು ಪಠ್ಯ ಸಾಹಿತ್ಯ, ಶಿಕ್ಷಣ ವಿಧಿವಿಧಾನಗಳ ಸಾಹಿತ್ಯ, ಶಿಕ್ಷಣ ಸಂಬಂಧಿ ಕೈಪಿಡಿ ಸಾಹಿತ್ಯ ಮತ್ತು ಚಿತ್ರಕಲಾ ಅಭ್ಯಾಸ ಪತ್ರಿಕೆ ಸಾಹಿತ್ಯ ಎಂಬಂತಹ

ವಿಭಾಗಗಳಲ್ಲಿ ಪ್ರತ್ಯೇಕವಾದ ಸಾಹಿತ್ಯವು ರಚನೆಯಾಗುತ್ತದೆ. ಚಿತ್ರಕಲಾ ಪ್ರದರ್ಶನ ಸಂದರ್ಭಗಳಲ್ಲಿ ಹೊರತರುವ ಕ್ಯಾಟಲಾಗ್, ಚಿತ್ರಕಲಾ ಕೃತಿಗಳ ಅಲ್ಬಂ, ಕ್ವಿಜ್‌ಗಳಿಂದಲೂ ಚಿತ್ರಕಲಾ ಸಾಹಿತ್ಯವು ರೂಪುಗೊಂಡಿದೆ. ಇದಲ್ಲದೆ ಕಲಾವಿದರ ಆತ್ಮಚರಿತ್ರೆ, ವಿಶ್ವಕೋಶ, ಶಬ್ದಕೋಶಗಳು ತಮ್ಮದೇ ಆದ ಶೈಲಿಯಲ್ಲಿ ಚಿತ್ರಕಲಾ ಸಾಹಿತ್ಯವನ್ನು ಬೆಳೆಸುತ್ತಲಿವೆ. ಇಂತಹ ಚಿತ್ರಕಲಾ ಸಾಹಿತ್ಯವನ್ನು ಸಹಿತ ಅಧ್ಯಯನಕ್ಕೊಳಪಡಿಸುವ ಮಹತ್ವದ ಉದ್ದೇಶವನ್ನು ಹೊಂದಲಾಗಿದೆ.

**ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು :**

ಕರ್ನಾಟಕದಲ್ಲಿ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಯ ಕುರಿತ ಅಧ್ಯಯನಗಳು ಆರಂಭವಾಗಿರುವುದು ತೀರಾ ಇತ್ತೀಚೆಗೆ ಎನ್ನಬಹುದು. ಎಸ್. ಸಿ. ಪಾಟೀಲ ಅವರು 'ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ ಒಂದು ಅಧ್ಯಯನ' ಎಂಬ ಕಿರು ಪ್ರಬಂಧವನ್ನು ಸ್ನಾತಕೋತ್ತರ ಪದವಿಯ ಅಂಶಿಕ ಅವಶ್ಯಕತೆಗಾಗಿ ೧೯೮೩ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡಕ್ಕೆ ಸಲ್ಲಿಸಿರುವುದು ದೃಶ್ಯಕಲಾ ಕ್ಷೇತ್ರದಲ್ಲಿ ನಡೆಸಿದ ಪ್ರಥಮ ಅಧ್ಯಯನವಾಗಿದೆ. ಅನಂತರ ೧೯೮೭ ರಲ್ಲಿ ಬಿ.ಕೆ.ಹಿರೇಮಠರು 'ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ' ಎಂಬ ಪಿಹೆಚ್.ಡಿ. ಪ್ರಬಂಧ ಚಿತ್ರಕಲೆಯ ಕುರಿತು ಒಂದೆರಡು ಅಧ್ಯಾಯಗಳಿದ್ದು ಹಸ್ತಪ್ರತಿ ಕುರಿತಾದ ಪ್ರಮುಖ ಅಧ್ಯಯನವಾಗಿದೆ. ಮತ್ತೆ ಎಸ್.ಸಿ.ಪಾಟೀಲ ಅವರ 'ಕರ್ನಾಟಕದ ಜನಪದ ಚಿತ್ರಕಲೆ' ಪಿಹೆಚ್.ಡಿ. ಪ್ರಬಂಧವು ೧೯೯೧ ರಲ್ಲಿ ಪೂರ್ಣಪ್ರಮಾಣದಲ್ಲಿ ಚಿತ್ರಕಲೆಯನ್ನೇ ಕುರಿತು ಬಂದ ಕನ್ನಡದ ಮೊಟ್ಟ ಮೊದಲ ಪಿಹೆಚ್.ಡಿ. ಪ್ರಬಂಧವಾಗಿದೆ. 'ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು' ಎಂಬ ಪಿಹೆಚ್.ಡಿ. ಪ್ರಬಂಧವು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಅ.ಲ.ನರಸಿಂಹನ್ ಅವರಿಂದ ೧೯೯೬ ರಲ್ಲಿ ಸಲ್ಲಿಸಲ್ಪಟ್ಟಿತು. ಅನಂತರ ೧೯೯೭ ರಲ್ಲಿ ಪುಷ್ಪಾ ದ್ರಾವಿಡ ಅವರು 'ಕಲಾವಿದ ರೋರಿಚ್ ಜೀವನ ಮತ್ತು ಕಲಾಕೃತಿಗಳು' ಎಂಬ ವಿಷಯದ ಮೇಲೆ ಪಿಹೆಚ್.ಡಿ. ಪಡೆದುಕೊಂಡರು.

'ಹಿಂದುಸ್ಥಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು' ಎಂಬ ವಿಷಯದ ಮೇಲೆ ಸಂಪದಾ ಭಟ್‌ರು ೧೯೯೮ ರಲ್ಲಿ ಕನ್ನಡ ವಿಶ್ವವಿದ್ಯಾಲಯದಿಂದ ಪಿಹೆಚ್.ಡಿ. ಪಡೆದುಕೊಂಡರು. ಯಾದಪ್ಪ ಪರದೇಶಿ 'ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ' ವಿಷಯದ ಮೇಲೆ ಪ್ರಬಂಧ ಮಂಡಿಸಿ ೨೦೦೦ ರಲ್ಲಿ ಪಿಹೆಚ್.ಡಿ. ಪದವಿ ಪಡೆದರು. ಶಿವಾನಂದ ಬಂಟನೂರ ೨೦೦೨ ರಲ್ಲಿ 'ಕರ್ನಾಟಕದ 'ಜನಪದ ಚಿತ್ರಕಲೆ', ಗಿರೀಶಕುಮಾರವರು 'ಬುಡಕಟ್ಟು ಚಿತ್ರಕಲೆ' ಬಗ್ಗೆ ಇದೇ ಅವಧಿಯಲ್ಲಿ ಪಿಹೆಚ್.ಡಿ. ಪಡೆದುಕೊಂಡರು. 'ಚಿತ್ರಕಲಾವಿದ ಎಂ. ಎ. ಚೆಟ್ಟಿ ಜೀವನ ಮತ್ತು ಕಲಾಕೃತಿಗಳು' ವಿಷಯದ ಮೇಲೆ ಲಕ್ಷ್ಮೀದೇವಿ ಗವಾಯಿ ೨೦೦೩ ರಲ್ಲಿ ಮತ್ತು ಶರಣಬಸಪ್ಪ ಕೋಲ್ಕಾರ್ 'ಹಂಪಿ ಪ್ರದೇಶದ ಪ್ರಾಗೈತಿಹಾಸದ ಕಲೆ' ಎಂಬ ವಿಷಯದ ಮೇಲೆ ೨೦೦೪ ರಲ್ಲಿ ಪಿಹೆಚ್.ಡಿ. ಪ್ರಬಂಧಗಳನ್ನು ಮಂಡಿಸಿದರು. ಸಿದ್ಧಲಿಂಗಸ್ವಾಮಿ ಹಿರೇಮಠರು 'ಚಿತ್ರಕಲಾವಿದ ಆರ್. ಎಂ. ಹಡಪದ' ಪ್ರಬಂಧವನ್ನು ಮಂಡಿಸಿ ಪಿಹೆಚ್.ಡಿ. ಪದವಿ ಪಡೆದುಕೊಂಡರು. ಗುಲಬರ್ಗಾ ವಿಶ್ವವಿದ್ಯಾಲಯದಿಂದ ಶಿವಕುಮಾರ ಎ. ಒ. ಅವರು 'ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು' ವಿಷಯದ ಮೇಲೆ ಅದೇ ವರ್ಷದಲ್ಲಿ ಪಿಹೆಚ್.ಡಿ. ಪದವಿ ಪಡೆದುಕೊಂಡರು. ವಿ. ಎಂ. ಭಾಗಾಯತ್ 'ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ' ಬಗ್ಗೆ ಮತ್ತು ಶಶಿಕಲಾ

ಹೂಗಾರ ಅವರು 'ಕರ್ನಾಟಕದ ತೊಗಲುಗೊಂಬೆ ಚಿತ್ರಕಲೆ' ಬಗ್ಗೆ ಮುಂದಿನ ವರ್ಷದಲ್ಲಿ ಪಡೆದುಕೊಂಡರು.

'ಕರ್ನಾಟಕದ ರಥಶಿಲ್ಪಕಲೆ' ವಿಷಯದ ಮೇಲೆ ಶಿವಪ್ರಕಾಶ ತುಕ್ಕಣ್ಣವರ, 'ಹಸ್ತಪ್ರತಿ ಚಿತ್ರಕಲೆಯ ಬಗ್ಗೆ ಎಚ್. ಎನ್. ಚಿತ್ರಗಾರ ೨೦೦೫ ರಲ್ಲಿ ಪಿಹೆಚ್.ಡಿ. ಪಡೆದುಕೊಂಡರು. 'ಯಂತ್ರಾ ದಿ ವಿಜ್ಯುವಲ್ ಆಫ್ ಶಂಕರ ಫಿಲಾಸಫಿ ವಿಥ್ ರೆಫರೆನ್ಸ್ ಟು ಕಾಂಟೆಂಪರರಿ ಆರ್ಟಿಸ್ಟ್' ಎಂಬ ವಿಷಯದ ಮೇಲೆ ಸೌಮ್ಯ ಎಂಬವರು, 'ಮೈಂಡ್, ಮ್ಯೂಜಿಕ್ ಆಂಡ್ ಡೆವಲಪ್‌ಮೆಂಟ್ ಆಫ್ ರಾಗಮಾಲಾ ಪೇಂಟಿಂಗ್' ಎಂಬುದರ ಬಗ್ಗೆ ಪ್ರಮೀಳಾ ಲೋಚನ ಅವರು, 'ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ' ವಿಷಯದ ಬಗ್ಗೆ ವೀಣಾಶೇಖರ ಅವರು,'ಎ ಕ್ರಿಟಿಕಲ್‌ಎನಾಲಸಿಸ್ ಆಫ್ ಆರ್ಟ್ ಎಜ್ಯುಕೇಷನ್ ಆಟ್ ಸ್ಕೂಲ್ ಲೆವಲ್ ಇನ್ ಕರ್ನಾಟಕ ಸ್ಟೇಟ್ ವಿಥ್ ಸ್ಪೇಶಲ್ ರೆಫರೆನ್ಸ್ ಟು ಡ್ರಾಯಿಂಗ್ ಆಂಡ್ ಪೇಂಟಿಂಗ್' ವಿಷಯದ ಮೇಲೆ ಡಾ.ಎಸ್.ಸಿ. ಪಾಟೀಲ ತಮ್ಮ ಎರಡನೆಯ ಪಿಹೆಚ್.ಡಿ. ಪದವಿಯನ್ನುಪಡೆದುಕೊಂಡಿದ್ದಾರೆ.

ಅದೇ ರೀತಿ 'ರಂಗೋಲಿ ಚಿತ್ರಕಲೆ ಒಂದು ಸಾಂಸ್ಕೃತಿಕ ಅಧ್ಯಯನ', 'ಸುರಪುರ ಚಿತ್ರಕಲೆ ಒಂದು ಅಧ್ಯಯನ' ಮತ್ತು 'ಎಸ್.ಎಮ್.ಪಂಡಿತ್ ಕಲಾಬದುಕು ಮತ್ತು ಕಲಾಕೃತಿ'ಗಳ ಬಗ್ಗೆ ಗುಲಬರ್ಗಾ ವಿಶ್ವವಿದ್ಯಾಲಯದಿಂದ ಅನುಕ್ರಮವಾಗಿ ವಿಶ್ವೇಶ್ವರಿ ತಿವಾರಿ, ಮಲ್ಲಿಕಾರ್ಜುನ ಬಾಗೋಡಿ ಮತ್ತು ಮೋಹನ ಬಿ. ಪಂಚಾಳ ಅವರು ಪಿಹೆಚ್.ಡಿ. ಪಡೆದುಕೊಂಡವರಾಗಿದ್ದಾರೆ.

ಎಂ.ಫಿಲ್. ಅಧ್ಯಯನಗಳಲ್ಲಿ ಮಲ್ಲಿಕಾರ್ಜುನ ಬಾಗೋಡಿಯವರ 'ಚಿತ್ರಕಲಾವಿದ ಜೆ. ಎಸ್. ಖಂಡೇರಾವ್, ಎ. ಎಸ್. ವಿಶ್ವನಾಥ ಅವರ 'ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣಗಳು', ಸಿ.ಡಿ.ಜಟ್ಟೆಣ್ಣವರ ಮಂಡಿಸಿದ 'ಎಂ.ವಿ.ಮಿಣಜಗಿ ಕಲಾಬದುಕು', ಶಂಕರ ಕುಂದಗೋಳರ 'ಡಿ.ವಿ.ಹಾಲಭಾವಿಯವರ ಕಲಾಜೀವನ', ಬಿ.ಎಂ.ಪಾಟೀಲರ 'ನಿಪ್ಪಾಣಿ ಚಿತ್ರಕಲೆ', ಉಮೇಶ ಎ. ಎಸ್. ಇವರ 'ಜೈನ ಚಿತ್ರಕಲೆ', ರವಿನಾಯಕರ 'ಕಿನ್ನಾಳಕಲೆ', ಸುಚಿತ್ರಾ ಲಿಂಗದಳ್ಳಿಯವರ 'ವಿಜಯನಗರದ ಭಿತ್ತಿಚಿತ್ರಕಲೆ', ಶಶಿಕಾಂತ ಬಸರಿಕಟ್ಟಿಯವರ 'ಕಲಘಟಗಿ ಚಿತ್ರಕಲೆ', ಶೈಲಾ ಬರಡೋಲರ 'ಸಂತ ಶುಭರಾಯರ ಚಿತ್ರಕಲೆ ಎಂಬ ಪ್ರಬಂಧಗಳು ಪ್ರಮುಖವಾಗಿವೆ.

ಡಿ.ಲಿಟ್. ಪ್ರಬಂಧಗಳಲ್ಲಿ ದೇವದಾಸ ಕಳಸದ ಇವರ 'ರಂಗಭೂಮಿ ರಂಗಸಜ್ಜಿಕೆಯ ಕಲಾವಿನ್ಯಾಸ', ಆನಂದ ಪೂಜಾರರ ಕರಾವಳಿಯ 'ಕಾವಿ ಚಿತ್ರಕಲೆ', ಡಿ.ಎ.ಉಪಾಧ್ಯ ಇವರ 'ದೃಶ್ಯಕಲೆಗಳ ತೌಲನಿಕ ಅಧ್ಯಯನ(ವಾಸ್ತುಶಿಲ್ಪ, ಚಿತ್ರಕಲೆಯ ಹಿನ್ನೆಲೆಯಲ್ಲಿ) ಸೌಂದರ್ಯದ ಪರಿಕಲ್ಪನೆ', ಇವುಗಳು ಮುಖ್ಯವಾಗಿವೆ. ಇದಲ್ಲದೆ ಇನ್ನೂ ಅನೇಕ ಪಿಹೆಚ್.ಡಿ., ಎಂ.ಫಿಲ್. ಮತ್ತು ಡಿ.ಲಿಟ್. ಪ್ರಬಂಧಗಳು ರಚನೆಯ ಹಂತದಲ್ಲಿ ಮತ್ತು ಪದವಿ ಪಡೆಯುವ ಹಂತದಲ್ಲಿವೆ. ಇವುಗಳಲ್ಲದೇ ಸ್ನಾತಕೋತ್ತರ ಮತ್ತು ಸ್ನಾತಕ ಪದವಿಗಳ ಹಂತದಲ್ಲಿಯೂ ಕಿರುಶೋಧ ಪ್ರಬಂಧಗಳು ರಚನೆಯಾಗುತ್ತಲಿರುವುದು ಗಮನಾರ್ಹ ಸಂಗತಿಯಾಗಿದೆ.

**ಚಿತ್ರಕಲಾ ಸಾಹಿತ್ಯದ ಬಗ್ಗೆ ಇದುವರೆಗೆ ನಡೆದ ಅಧ್ಯಯನ :**

ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಬಗ್ಗೆ ಅಲ್ಲಲ್ಲಿ ಕೆಲವು ಚಿಕ್ಕ-ಪುಟ್ಟ ಲೇಖನಗಳು ಪ್ರಕಟಗೊಂಡಿವೆಯೇ ಹೊರತು ಅಂತಹ ಗಂಭೀರ ಅಧ್ಯಯನಗಳು ನಡೆದಿಲ್ಲ ಎಂದೇ ಹೇಳಬಹುದು.

ಇದುವರೆಗೆ ಕರ್ನಾಟಕ ಚಿತ್ರಕಲಾ ಸಾಹಿತ್ಯದ ಬಗ್ಗೆ ನಡೆದಿರುವ ಅಧ್ಯಯನಗಳು ಮತ್ತು ಆ ಹಿನ್ನೆಲೆಯಲ್ಲಿ ಬಂದ ಬರಹಗಳನ್ನು ಈ ಕೆಳಗಿನಂತೆ ಸಮೀಕ್ಷಿಸಲಾಗಿದೆ.

ಕರ್ನಾಟಕದ ಬರಹಗಾರರಲ್ಲಿ ಖ್ಯಾತರಾಗಿದ್ದ ಮತ್ತು ಕಲೆಯ ಕುರಿತು ಪರಿಣಾಮಕಾರಿಯಾಗಿ ಬರೆಯಬಲ್ಲವರಾಗಿದ್ದ ಶಿವರಾಮ ಕಾರಂತ ಅವರು ೧೯೩೦ ರಲ್ಲಿ 'ಭಾರತೀಯ ಚಿತ್ರಕಲೆ' ಎಂಬ ಪುಸ್ತಕ ಬರೆದಿದ್ದಾರೆ.[೩] ಇದರಲ್ಲಿ ಭಾರತೀಯ ಚಿತ್ರಕಲೆಯ ಪ್ರಾಚೀನತೆಯನ್ನು ಹೇಳುವಾಗ ಕೆಲವು ಪ್ರಾಚೀನ ಸಾಹಿತ್ಯ ಕೃತಿಗಳನ್ನು ಉದಾಹರಣೆಯಾಗಿ ಕೊಟ್ಟಿದ್ದಾರೆ. ವೇದಗಳು, ಉಪನಿಷತ್ತುಗಳು, ರಾಮಾಯಣ, ಮಹಾಭಾರತಗಳು, ಪುರಾಣಗಳು, ಮುಂತಾದ ಕೆಲವು ಸಾಹಿತ್ಯ ಕೃತಿಗಳಲ್ಲಿನ ಚಿತ್ರಕಲೆಯ ಉಲ್ಲೇಖಗಳನ್ನು ಸಾಂದರ್ಭಿಕವಾಗಿ ಹೇಳಿದ್ದಾರೆ. ಇವರೇ ೧೯೫೦ರಲ್ಲಿ 'ಕಲೆಯ ದರ್ಶನ' ಎಂಬ ಕೃತಿ ರಚಿಸಿದ್ದು,[೪] ಅಲ್ಲಿಯೂ ಭಾರತೀಯ ಕಲೆಯ ಮಹತ್ವವನ್ನು ಪ್ರತಿಬಿಂಬಿಸುವಾಗ ಕೆಲವು ಪ್ರಾಚೀನ ಸಾಹಿತ್ಯ ಕೃತಿಗಳನ್ನು ಸಾಂದರ್ಭಿಕವಾಗಿ ಹೆಸರಿಸಿದ್ದಾರೆ.

ಪಿ.ಆರ್. ತಿಪ್ಪೇಸ್ವಾಮಿಯವರು ೧೯೬೨ರಲ್ಲಿ 'ಬೆಳೆದು ಬಂದ ಭಾರತದ ಚಿತ್ರಕಲೆ' ಎಂಬ ಪುಸ್ತಕ ಬರೆದಿದ್ದು,[೫] ಅದರಲ್ಲಿ ಭಾರತದ ಪ್ರಾಚೀನ ಚಿತ್ರಕಲೆಯ ಬೆಳವಣಿಗೆಯನ್ನು ಹೇಳುವಾಗ ಸಾಂದರ್ಭಿಕವಾಗಿ ಪ್ರಾಚೀನ ಸಾಹಿತ್ಯ ಕೃತಿಗಳನ್ನು ಹೆಸರಿಸಿದ್ದಾರೆ. ಭಾರತೀಯ ಚಿತ್ರಕಲೆ ಯಾವ ಯಾವ ರೀತಿಯಲ್ಲಿ ಹೇಗೆ ಬೆಳೆದು ಬಂದಿತು ಎಂದು ಹೇಳುವಾಗ ಈ ಸಾಹಿತ್ಯ ಕೃತಿಗಳಲ್ಲಿನ ಚಿತ್ರಕಲೆಯ ಉಲ್ಲೇಖದ ಅಂಶಗಳನ್ನು ಬಳಸಿಕೊಂಡಿದ್ದಾರೆ.

'ಕಲಾನಿವೇದನಾ' ಎಂಬ ಸಂಪಾದನಾ ಕೃತಿಯು ೧೯೬೯ರಲ್ಲಿ ಹೊರಬಂದಿದ್ದು[೬] ಇದರಲ್ಲಿ 'ಕಲೆ ಮತ್ತು ಸಾಹಿತ್ಯ' ಎಂಬ ಒಂದು ಚಿಕ್ಕ ಲೇಖನವಿದೆ. ಇದು ಕಲೆ ಮತ್ತು ಸಾಹಿತ್ಯದ ಆಂತರಿಕ ಸಂಬಂಧಗಳ ಬಗ್ಗೆ ತಿಳಿಸುತ್ತದೆ. ಹಳೆಯ ತಲೆಮಾರಿನ ಬರಹಗಾರರಲ್ಲಿ ಚಿತ್ರಕಲೆಯ ಬಗ್ಗೆ ಬರೆಯುತ್ತಿದ್ದ ಮತ್ತೊಬ್ಬ ಗಮನಾರ್ಹ ಲೇಖಕರೆಂದರೆ ಅ.ನ.ಕೃ ಅವರು. ಇವರು ೧೯೭೦ರಲ್ಲಿ 'ಚಿತ್ರಕಲೆ' ಎಂಬ ಪುಸ್ತಕ ಬರೆದಿದ್ದಾರೆ.[೭] ಇದರಲ್ಲಿ ಅ.ನ.ಕೃ. ಅವರೇ ಬರೆದ ಕಲೆಯ ಬಗೆಗಿನ ಹನ್ನೆರಡು ಲೇಖನಗಳಿವೆ. ಇದರಲ್ಲಿ ಒಂದು ಲೇಖನ 'ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಚಿತ್ರಕಲೆಯ ಉಲ್ಲೇಖಗಳು' ಎಂಬುದಾಗಿದೆ. ಈ ಲೇಖನದಲ್ಲಿ ವೇದಗಳು, ಉಪನಿಷತ್ತುಗಳು, ರಾಮಾಯಣ, ಮಹಾಭಾರತಗಳು, ವಿಷ್ಣುಧರ್ಮೋತ್ತರ, ಮಾನಸೋಲ್ಲಾಸ, ಶಿವತತ್ವರತ್ನಾಕರ, ಕಾಳಿದಾಸನ ಕೃತಿಗಳು ಹೀಗೆ ಅನೇಕ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಗೊಂಡಿರುವ ಚಿತ್ರಕಲೆಯ ಅಂಶಗಳ ಬಗ್ಗೆ ವಿವೇಚಿಸಲಾಗಿದೆ.

'ಕಲೆಯ ನೆಲೆ' ಎಂಬ ಕೃತಿಯನ್ನು ವಿ.ಕೃ.ಗೋಕಾಕ ಅವರು ೧೯೭೮ರಲ್ಲಿ ರಚಿಸಿದ್ದು,[೮] ಇದರಲ್ಲಿ ಕಲೆಯ ಬಗೆಗಿನ ಮೂರು ಲೇಖನಗಳಿವೆ. ಅದರಲ್ಲಿ ಒಂದು ಲೇಖನ 'ಕಲಾರೂಪ ಮತ್ತು ಸಾಹಿತ್ಯ ಸ್ವರೂಪ ಎಂಬುದಾಗಿದ್ದು ಇದರಲ್ಲಿ ಕಲೆ ಮತ್ತು ಸಾಹಿತ್ಯ ಇವುಗಳ ಬಗೆಗಿನ ಪ್ರಮುಖ ಗುಣಲಕ್ಷಣಗಳು ಮತ್ತು ಅಂತರ್ ಸಂಬಂಧಗಳು ಹಾಗೂ ವೈರುಧ್ಯಗಳಂತಹ ಸಂಗತಿಗಳನ್ನು ಗಮನಿಸಲಾಗಿದೆ.

---

೩. ಶಿವರಾಮಕಾರಂತ: ಭಾರತೀಯ ಚಿತ್ರಕಲೆ: ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರಕಾರ ಬೆಂಗಳೂರು, ೧೯೩೦.

೪. ಶಿವರಾಮ ಕಾರಂತ : ಕಲೆಯ ದರ್ಶನ: ರಾಜಲಕ್ಷ್ಮೀ ಪ್ರಕಾಶನ ಬೆಂಗಳೂರು, ೧೯೫೦.

೫. ಪಿ.ಆರ್. ತಿಪ್ಪೇಸ್ವಾಮಿ : ಬೆಳೆದು ಬಂದ ಭಾರತದ ಚಿತ್ರಕಲೆ : ಕಲಾಕ್ಷೇತ್ರ ಮೈಸೂರು, ೧೯೬೨

೬. ಅ.ನ.ಸುಬ್ಬರಾವ್(ಸಂ) : ಕಲಾನಿವೇದನ : ಕಲಾ ಪ್ರಕಾಶನ, ಕಲಾಮಂದಿರ, ಬಸವನಗುಡಿ ಬೆಂಗಳೂರು, ೧೯೬೯

೭. ಅ.ನ.ಕೃ. ಚಿತ್ರಕಲೆ : ವಿದ್ಯಾನಿಧಿ ಬುಕ್ ಡಿಪೋ ಮೈಸೂರು, ೧೯೭೦

೮. ವಿ.ಕೃ.ಗೋಕಾಕ : ಕಲೆಯ ನೆಲೆ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ-೧೯೭೮

'ಭಾರತೀಯ ಚಿತ್ರಕಲೆ' ಎಂಬ ಕೃತಿಯನ್ನು ಬಿ.ಪಿ.ಬಾಯಿರಿಯವರು ೧೯೮೦ರಲ್ಲಿ ರಚಿಸಿದ್ದಾರೆ.[೯] ಇದರಲ್ಲಿ ಭಾರತೀಯ ಕಲೆಯನ್ನು ವಿವಿಧ ತಲೆಬರಹಗಳ ಅಡಿಯಲ್ಲಿ ವಿಶ್ಲೇಷಿಸಲಾಗಿದೆ. ಸಾಹಿತ್ಯ ಕೃತಿಗಳಲ್ಲಿ ಭಾರತೀಯ ಚಿತ್ರಕಲೆ ಎಂಬ ತಲೆಬರಹದಡಿಯಲ್ಲಿ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಗೊಂಡಿರುವ ಚಿತ್ರಕಲೆಯ ಅಂಶಗಳನ್ನು ವಿವೇಚಿಸಲಾಗಿದೆ. ವೇದಗಳು, ಉಪನಷತ್ತುಗಳು, ರಾಮಾಯಣ, ಮಹಾಭಾರತಗಳು, ವಿಷ್ಣುಧರ್ಮೋತ್ತರ, ಮಾನಸೋಲ್ಲಾಸ, ಬೌದ್ಧ ಮತ್ತು ಜೈನ ಸಾಹಿತ್ಯ, ನೈಷಧ ಚರಿತೆ ಹೀಗೆ ಅನೇಕ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಬಂದಿರುವ ಚಿತ್ರಕಲೆಯ ಬಗೆಗಿರುವ ಸಂಗತಿಗಳನ್ನು ವಿವೇಚಿಸಲಾಗಿದೆ.

ಎಂ.ವಿ.ಸೀತಾರಾಮಯ್ಯನವರು ೧೯೮೫ರಲ್ಲಿ 'ಸಾಹಿತ್ಯ ಮತ್ತು ಚಿತ್ರಕಲೆ' ಎಂಬ ಪುಸ್ತಕ ಬರೆದಿದ್ದು,[೧೦] ಇದರಲ್ಲಿ ಸಾಹಿತ್ಯ ಮತ್ತು ಚಿತ್ರಕಲೆಗಳ ತೌಲನಿಕ ಅಧ್ಯಯನವಿದೆ. ಸಾಹಿತ್ಯ ರೂಪಗಳು ಮತ್ತು ಕಲಾರೂಪಗಳನ್ನು ಅವುಗಳ ಗುಣಲಕ್ಷಣಗಳ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ. 'ಶೃಂಗಾರ ಲಹರಿ' ಎಂಬ ಕೃತಿಯನ್ನು ಎಂ.ಎಚ್.ಕೃಷ್ಣಯ್ಯ ಅವರು ೧೯೮೯ರಲ್ಲಿ ರಚಿಸಿದ್ದಾರೆ.[೧೧] ಇದರಲ್ಲಿ ಕಲೆಯ ಬಗೆಗಿನ ಆರು ಲೇಖನಗಳಿವೆ. ಮೊದಲನೆಯ ಲೇಖನವು 'ಭಾರತೀಯ ಚಿತ್ರಕಲೆಯಲ್ಲಿ ಶೃಂಗಾರ ಲಹರಿ' ಎಂಬುದಾಗಿದ್ದು, ಇಲ್ಲಿ ಪ್ರಾಚೀನ ಭಾರತೀಯ ಭಿತ್ತಿಚಿತ್ರ, ಕಿರುರೂಪ ಮತ್ತು ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಗೊಂಡಿರುವ ಚಿತ್ರಕಲಾ ಅಂಶಗಳಲ್ಲಿನ ಶೃಂಗಾರ ಸನ್ನಿವೇಶಗಳನ್ನು ಕುರಿತು ವಿವೇಚಿಸಲಾಗಿದೆ. ಪ್ರಾಚೀನ ಸಂಸ್ಕೃತ, ಕನ್ನಡ, ಸಾಹಿತ್ಯ ಕೃತಿಗಳಲ್ಲದೇ ಉತ್ತರ ಭಾರತದ ಗೀತಗೋವಿಂದ ಮತ್ತು ರವೀಂದ್ರನಾಥ ಟಾಗೋರರ ಬರಹಗಳಲ್ಲಿನ ಚಿತ್ರಕಲಾ ಹಿನ್ನೆಲೆಯ ಶೃಂಗಾರ ಪ್ರಸಂಗಗಳನ್ನು ತೌಲನಿಕವಾಗಿ ಚರ್ಚಿಸಲಾಗಿದೆ.

ಇದೇ ಅವಧಿಯಲ್ಲಿ ಎನ್. ಮರಿಶಾಮಾಚಾರ್ ಅವರು 'ಸಾಹಿತ್ಯದಲ್ಲಿ ಚಿತ್ರಕಲೆ' ಎಂಬ ಕಿರುಪುಸ್ತಕ ರಚಿಸಿದ್ದು,[೧೨] ಅದರಲ್ಲಿ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿನ ಚಿತ್ರಕಲಾ ಅಂಶಗಳ ಬಗ್ಗೆ ವಿವೇಚಿಸಲಾಗಿದೆ. ವೇದಗಳಿಂದ ತೊಡಗಿ ಉಪನಿಷತ್ತುಗಳು, ರಾಮಾಯಣ, ಮಹಾಭಾರತಗಳು, ಪುರಾಣಗಳು, ಕಾಳಿದಾಸನ ಕೃತಿಗಳು, ಹರ್ಷಚರಿತೆ, ನಳಚರಿತೆ, ಪಂಚದಶಿ ಹೀಗೆ ಅನೇಕ ಸಾಹಿತ್ಯ ಕೃತಿಗಳಲ್ಲಿನ ಚಿತ್ರಕಲೆಯ ಬಗೆಗಿನ ಉಲ್ಲೇಖಗಳನ್ನು ವಿವೇಚಿಸಲಾಗಿದೆ. ಈ ಕೃತಿಯಲ್ಲಿ ಸಂಸ್ಕೃತ ಸಾಹಿತ್ಯ ಕೃತಿಗಳು ಮತ್ತು ಕನ್ನಡ ಸಾಹಿತ್ಯ ಕೃತಿಗಳು ಎಂದು ವಿಂಗಡಿಸಲಾಗಿದೆ.

'ಸಾಹಿತ್ಯ ಕಲೆಗಳಲ್ಲಿ ಪರಿವರ್ತನೆ ಮತ್ತು ಪ್ರಗತಿ' ಎಂಬ[೧೩] ಸಂಪಾದನಾ ಕೃತಿಯಲ್ಲಿ ಎರಡು ಲೇಖನಗಳು ಕಲೆಯ ಬಗ್ಗೆ ಇದ್ದು ಇನ್ನುಳಿದವು ಸಾಹಿತ್ಯದ ಬಗೆಗಿವೆ. ಸಾಹಿತ್ಯದ ಬಗೆಗಿನ ಲೇಖನಗಳು ಸಾಹಿತ್ಯದ ಬೆಳವಣಿಗೆ, ಪರಿವರ್ತನೆ ಮತ್ತು ಪ್ರಗತಿಯು ಹೇಗಾಯಿತು? ಮತ್ತು ಯಾವ ಕಾಲ ಘಟ್ಟದಲ್ಲಾಯಿತು? ಹೇಗೆ, ಯಾರಿಂದ ಪ್ರೇರಣೆ ಉಂಟಾಯಿತು? ಎಂಬಂತಹ ಅಂಶಗಳ ಬಗ್ಗೆ ಸೀಮಿತವಾಗಿವೆ. ಕಲೆಯ ಬಗೆಗಿರುವ ಎರಡು ಲೇಖನಗಳಲ್ಲಿ ಒಂದು ಲೇಖನ ಮಾತ್ರ ಕಲಾ ಸಾಹಿತ್ಯದ ಬಗ್ಗೆ ಸ್ಥೂಲವಾಗಿ ಗಮನಿಸಿದೆ.

---

೯. ಬಿ.ಪಿ.ಬಾಯಿರಿ : ಭಾರತೀಯ ಚಿತ್ರಕಲೆ : ಸಮಾಜ ಪುಸ್ತಕಾಲಯ, ಧಾರವಾಡ, ೧೯೮೦

೧೦. ಎಂ.ವ್ಹಿ. ಸೀತಾರಾಮಯ್ಯ: ಸಾಹಿತ್ಯ ಮತ್ತು ಚಿತ್ರಕಲೆ : ರಾಘವ ಪ್ರಕಾಶನ ಬೆಂಗಳೂರು, ೧೯೮೫

೧೧. ಎಂ.ಎಚ್. ಕೃಷ್ಣ: ಶೃಂಗಾರ ಲಹರಿ: ಸಿ.ಎಂ.ಎನ್. ಪ್ರಕಾಶನ ಬೆಂಗಳೂರು, ೧೯೮೯

೧೨. ಎನ್.ಮಾರಿಶಾಮಾಚಾರ್: ಸಾಹಿತ್ಯದಲ್ಲಿ ಚಿತ್ರಕಲೆ : ಸಿ.ಎಂ.ಎನ್.ಪ್ರಕಾಶನ ಬೆಂಗಳೂರು, ೧೯೮೯

೧೩. ಎಂ.ಎಚ್.ಕೃಷ್ಣಯ್ಯ(ಸಂ): ಸಾಹಿತ್ಯ ಕಲೆಗಳಲ್ಲಿ ಪರಿವರ್ತನೆ ಮತ್ತು ಪ್ರಗತಿ: ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿ ಸಂಯುಕ್ತ ವೇದಿಕೆ, ಬೆಂಗಳೂರು,೧೯೯೧

'ಕರ್ನಾಟಕದ ಲಲಿತಕಲೆಗಳಲ್ಲಿ ಪರಿವರ್ತನೆ' ಎಂಬ ಈ ಲೇಖನದಲ್ಲಿ ಸಾಂದರ್ಭಿಕವಾಗಿ ಕೆಲವು ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಬಂದಿರುವ ಚಿತ್ರಕಲೆಯ ಬಗೆಗಿನ ಸಂಗತಿಗಳನ್ನು ಬಳಸಿಕೊಳ್ಳಲಾಗಿದೆ. ಬಿ.ಪಿ.ಬಾಯಿರಿ ಅವರು 'ಭಾರತೀಯ ಸಂಸ್ಕೃತಿಯಲ್ಲಿ ರಂಗವಲ್ಲಿ' ಎಂಬ ಕಿರು ಪುಸ್ತಕವನ್ನು ೧೯೯೨ರಲ್ಲಿ ರಚಿಸಿದ್ದು,[೧೪] ಇದರಲ್ಲಿ ಪ್ರಾಚೀನ ಕಾವ್ಯ ಮತ್ತು ಶಾಸನ ಬರಹಗಳಲ್ಲಿನ ಕಲೆಯ ಉಲ್ಲೇಖಗಳನ್ನು ವಿವೇಚಿಸಿದ್ದಾರೆ. ೧೯೯೨ ರಲ್ಲಿ ಪ್ರಕಟವಾದ ಡಾ.ಎಸ್.ಸಿ.ಪಾಟೀಲರ 'ಕರ್ನಾಟಕ ಜನಪದ ಚಿತ್ರಕಲೆ' ಕೃತಿಯಲ್ಲಿ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಸಂಸ್ಕೃತ ಸಾಹಿತ್ಯ ಕೃತಿಗಳಲ್ಲಿ ಬಂದ ಚಿತ್ರಕಲೆಯ ವಿವರಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ.[೧೫]

'ಚಿತ್ರಕಲಾ ಪ್ರಪಂಚ' ಎಂಬ ಸಂಪಾದನಾ ಕೃತಿಯನ್ನು ೧೯೯೩ರಲ್ಲಿ ರಾಜ್ಯ ಲಲಿತಕಲಾ ಅಕಾಡೆಮಿಯು ಹೊರತಂದಿದೆ.* ಕಲೆಯ ಬಗೆಗಿನ ಹಲವಾರು ಲೇಖನಗಳನ್ನು ಹೊಂದಿದ ಪುಸ್ತಕ ಇದಾಗಿದ್ದು, ಚಿತ್ರಕಲಾ ಸಾಹಿತ್ಯಕ್ಕೆ ಸಂಬಂಧಿಸಿದ ಹದಿಮೂರು ಲೇಖನಗಳಿವೆ. 'ಪ್ರಾಚೀನ ಚಿತ್ರಕಲೆ' ಎಂಬ ಲೇಖನವನ್ನು ಬಿ.ವಿ.ಕೆ.ಶಾಸ್ತ್ರಿ ಬರೆದಿದ್ದು, ಕಲೆಯ ಪ್ರಾಚೀನತೆ ಹೇಳುವಾಗ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿನ ಚಿತ್ರಕಲಾ ಅಂಶಗಳನ್ನು ಗಮನಿಸಲಾಗಿದೆ. 'ಸಂಪ್ರದಾಯ ಚಿತ್ರಕಲೆ' ಎನ್ನುವ ಲೇಖನವನ್ನು ಎಸ್.ಕೆ.ರಾಮಚಂದ್ರರಾವ್ ಬರೆದಿದ್ದು, ಭಾರತೀಯ ಚಿತ್ರಕಲೆಯು ಹೇಗೆ ಶಾಸ್ತ್ರೋಕ್ತವಾಗಿ ಬೆಳೆದುಬಂದಿತು ಎಂದು ಹೇಳುವಲ್ಲಿ ಪ್ರಾಚೀನ ಸಾಹಿತ್ಯ ಕೃತಿಗಳನ್ನು ಬಳಸಿಕೊಳ್ಳಲಾಗಿದೆ, ಯಾವ ಶಾಸ್ತ್ರದಲ್ಲಿ ಚಿತ್ರಕಲೆಯ ಬಗ್ಗೆ ಯಾವ ನಿಯಮಗಳನ್ನು ಹೇಳಲಾಗಿದೆ ಎಂಬುದನ್ನು ಇಲ್ಲಿ ಹೇಳಿದೆ.

'ಭಾರತೀಯ ಚಿತ್ರಕಲಾ ಪರಂಪರೆ' ಎನ್ನುವ ಲೇಖನವನ್ನು ಬಿ.ಕೆ.ಕೊಟ್ಟಾರ್ ಅವರು ಬರೆದಿದ್ದು, ಸಾಂದರ್ಭಿಕವಾಗಿ ಚಿತ್ರಕಲಾ ಉಲ್ಲೇಖಗಳನ್ನು ಹೊಂದಿದ ಗ್ರಂಥಗಳನ್ನು ವಿವೇಚಿಸಲಾಗಿದೆ. ಭಾರತೀಯ ಚಿತ್ರಕಲೆ ಅದರ ಪ್ರಾಚೀನತೆ ಮತ್ತು ಬೆಳವಣಿಗೆ ಎಂಬ ಲೇಖನವನ್ನು ಎಂ.ವಿ.ಸೀತಾರಾಮಯ್ಯ ಬರೆದಿದ್ದಾರೆ. ಭಾರತೀಯ ಚಿತ್ರಕಲೆಯ ಪ್ರಾಚೀನತೆ ಮತ್ತು ಬೆಳವಣಿಗೆಯನ್ನು ಭಿತ್ತಿಚಿತ್ರ, ಕಿರುರೂಪ ಚಿತ್ರ ಮತ್ತು ಹಸ್ತಪ್ರತಿ ಚಿತ್ರಗಳು ಮತ್ತು ಆಯಾ ಕಾಲದ ಸಾಹಿತ್ಯ ಕೃತಿಗಳಲ್ಲಿನ ಚಿತ್ರಕಲಾ ಉಲ್ಲೇಖಗಳನ್ನು ಬಳಸಿಕೊಂಡು ವಿವೇಚಿಸಲಾಗಿದೆ. ಇದಲ್ಲದೆ ಬಿ.,ಎಸ್.ಗೌಡ ಇವರ 'ಭಾರತೀಯ ಚಿತ್ರಕಲೆ' ಲೇಖನದಲ್ಲಿ ಸಾಂದರ್ಭಿಕವಾಗಿ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿನ ಕಲಾ ಅಂಶಗಳನ್ನು ಗಮನಿಸಿದೆ.

'ಭಾರತೀಯ ಚಿತ್ರಕಲೆ ಮತ್ತು ಉಲ್ಲೇಖಗಳು' ಎಂಬ ಲೇಖನವನ್ನು ಯು.ಎಸ್.ವೆಂಕಟರಾಮನ್ ಬರೆದಿದ್ದಾರೆ. ಇದರಲ್ಲಿ ಯಾವ ಪ್ರಾಚೀನ ಕೃತಿಗಳಲ್ಲಿ ಚಿತ್ರಕಲೆಯ ಉಲ್ಲೇಖಗಳು ಕಂಡು ಬರುತ್ತವೆ ಎಂಬ ಬಗ್ಗೆ ಕ್ರಮಾನುಗತ ಪದ್ಧತಿಯಲ್ಲಿ ನಿರೂಪಿಸಲಾಗಿದೆ.

'ಕನ್ನಡ ಸಾಹಿತ್ಯದಲ್ಲಿ ದೃಶ್ಯಕಲೆ' ಎಂಬ ಲೇಖನವನ್ನು ಬಿ.ವಿ.ಕೆ.ಶಾಸ್ತ್ರಿಯವರು ಬರೆದಿದ್ದು, ಇದರಲ್ಲಿ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಉಲ್ಲೇಖಗೊಂಡಿರುವ ಕಲಾ ವಿಷಯಗಳನ್ನು ವಿವೇಚಿಸಲಾಗಿದೆ. ಅದರಂತೆ ರಸಯೋಗಿ ಗೆಳೆಯರ ಗುಂಪು ಬರೆದ 'ಕನ್ನಡ ಸಾಹಿತ್ಯದಲ್ಲಿ ಕರ್ನಾಟಕದ ಚಿತ್ರಕಲೆ' ಎಂಬ ಲೇಖನದಲ್ಲಿ ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಗೊಂಡಿರುವ ಕರ್ನಾಟಕದ ಚಿತ್ರಕಲೆಯ ಬಗೆಗಿನ ಉಲ್ಲೇಖಗಳನ್ನು ವಿಶ್ಲೇಷಿಸಲಾಗಿದೆ.

೧೪. ಬಿ.ಪಿ.ಬಾಯಿರಿ : ಭಾರತೀಯ ಸಂಸ್ಕೃತಿಯಲ್ಲಿ ರಂಗವಲ್ಲಿ: ಚಿತ್ರಕುಟೀರ ಉಡುಪಿ, ೧೯೯೨

೧೫. ಡಾ.ಎಸ್.ಸಿ.ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ : ವೀರಶೈವ ಅಧ್ಯಯನ ಸಂಸ್ಥೆ, ಗದಗ-ಡಂಬಳ-೧೯೯೨

*. ಅ.ಲ.ನರಸಿಂಹನ್, ಎನ್.ಮರಿಶಾಮಾಚಾರ್: (ಸಂ) : ಚಿತ್ರಕಲಾ ಪ್ರಪಂಚ, ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೩

'ಕಾಳಿದಾಸ ಮತ್ತು ಚಿತ್ರಕಲೆ' ಎಂಬ ಲೇಖನದಲ್ಲಿ ಎ.ಎಂ.ಇನಾಮದಾರ ಅವರು ಕಾಳಿದಾಸನ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಗೊಂಡಿರುವ ಚಿತ್ರಕಲಾ ಅಂಶಗಳನ್ನು ಚರ್ಚಿಸಿದ್ದರೆ, 'ಬಾಸನಲ್ಲಿ ಚಿತ್ರಕಲೆ' ಎಂಬ ಲೇಖನದಲ್ಲಿ ಎಸ್.ರಾಮಚಂದ್ರರಾವ್ ಅವರು ಬಾಸನ ಸಾಹಿತ್ಯದಲ್ಲಿ ಕಂಡು ಬರುವ ಚಿತ್ರಕಲಾ ಉಲ್ಲೇಖಗಳ ಬಗ್ಗೆ ವಿವೇಚಿಸಿದ್ದಾರೆ. 'ಕಾವ್ಯದಲ್ಲಿ ಚಿತ್ರಕಲೆ' ಎಂಬ ಲೇಖನದಲ್ಲಿ ಡಿ.ಎಸ್. ಕರ್ಕಿಯವರು ಸಮಕಾಲೀನ ಕಾವ್ಯಗಳಲ್ಲಿ ಉಲ್ಲೇಖಗೊಂಡಿರುವ ಚಿತ್ರಕಲಾ ಅಂಶಗಳ ಬಗ್ಗೆ ಸ್ಥೂಲನೋಟ ಬೀರಿದ್ದಾರೆ. 'ಸಾಹಿತ್ಯ ಮತ್ತು ಚಿತ್ರಕಲೆ' ಎನ್ನುವ ಲೇಖನದಲ್ಲಿ ಚಿ.ಸು.ಕೃಷ್ಣಶೆಟ್ಟಿಯವರು ಸಾಹಿತ್ಯ ಮತ್ತು ಚಿತ್ರಕಲೆಯ ಸ್ವರೂಪಗಳನ್ನು ಕುರಿತು ವಿವೇಚಿಸಿದ್ದಾರೆ. ಹೀಗೆ ಈ ಸಂಪುಟದಲ್ಲಿ ಚಿತ್ರಕಲಾ ಸಾಹಿತ್ಯದ ಬಗ್ಗೆ ಲೇಖನಗಳಿದ್ದರೂ ಅವು ಬಿಡಿಬಿಡಿಯಾದ ವಿವರಗಳನ್ನು ಸಂಕ್ಷಿಪ್ತವಾಗಿ ಕೊಡುತ್ತವೆ.

ರಾಜ್ಯ ಲಲಿತಕಲಾ ಅಕಾಡೆಮಿಯು ೧೯೯೪ರಲ್ಲಿ 'ಕಲಾಕೋಶ' ಎಂಬ ಬೃಹತ್ ಕೃತಿಯನ್ನು ಹೊರತಂದಿದ್ದು[೧೬] ಇದರಲ್ಲಿ ಅಲ್ಲಲ್ಲಿ ಕೆಲವು ಸಾಹಿತ್ಯ ಕೃತಿಗಳ ನಮೂದುಗಳಿದ್ದು, ಆಯಾ ಕೃತಿಗಳಲ್ಲಿ ಹೇಳಲ್ಪಟ್ಟಿರುವ ಚಿತ್ರಕಲಾ ಅಂಶಗಳನ್ನು ಸ್ಥೂಲರೂಪದಲ್ಲಿ ಕೊಡಲಾಗಿದೆ. ವಿಷ್ಣುಧರ್ಮೋತ್ತರ, ಸಮರಾಂಗಣ ಸೂತ್ರಧಾರ, ಶಿವತತ್ವ ರತ್ನಾಕರ, ಮಾನಸೋಲ್ಲಾಸ, ಕಾಶ್ಯಪ ಶಿಲ್ಪಶಾಸ್ತ್ರ, ಶ್ರೀತತ್ವನಿಧಿ ಹೀಗೆ ಚಿತ್ರಕಲೆಯ ವಿವರಗಳನ್ನು ಹೊಂದಿದ ಗ್ರಂಥಗಳ ಬಗ್ಗೆ ಇಲ್ಲಿ ಉಲ್ಲೇಖ ಕಂಡು ಬರುತ್ತದೆ. ಈ ವಿವರ ಅರ್ಥಕೋಶ ಮಾದರಿಯಲ್ಲಿ ಹೇಳಲ್ಪಟ್ಟಿದೆ.

ಸಂಯೋಜಿತ ಸಂಸ್ಥೆಯ ಸ್ಮರಣ ಸಂಚಿಕೆ 'ಕಲಾಚೇತನ' ೧೯೯೫ರಲ್ಲಿ ಪ್ರಕಟಗೊಂಡಿದ್ದು[೧೭] ಇದರಲ್ಲಿ 'ಕನ್ನಡದಲ್ಲಿ ಕಲಾಸಾಹಿತ್ಯ ಒಂದು ಪಕ್ಷಿನೋಟ' ಎಂಬ ಲೇಖನವಿದೆ. ಡಾ.ಅ.ಲ.ನರಸಿಂಹನ್ ಅವರು ಇದನ್ನು ಬರೆದಿದ್ದು, ಅದುವರೆಗೆ ಬಂದ ಕನ್ನಡ ಕಲಾ ಸಾಹಿತ್ಯದ ಬಗ್ಗೆ ಒಂದು ಸ್ಥೂಲನೋಟ ಕೊಡುವುದರ ಜೊತೆಗೆ ಕೊನೆಯಲ್ಲಿ ಅದುವರೆಗೆ ಪ್ರಕಟಗೊಂಡ ಕನ್ನಡ ಕಲಾ ಸಾಹಿತ್ಯದ ಲೇಖನ, ಪುಸ್ತಕಗಳು ಅದರ ಲೇಖಕರು, ಪ್ರಕಟಣಾ ವರ್ಷ, ಪ್ರಕಾಶಕರು ಹೀಗೆ ಪ್ರಮುಖ ಮಾಹಿತಿ ಕೊಟ್ಟಿದ್ದಾರೆ. ಕನ್ನಡ ಕಲಾಸಾಹಿತ್ಯದ ಬಗೆಗಿನ ಅಧ್ಯಯನದಲ್ಲಿ ಇದೊಂದು ಗಮನಾರ್ಹ ಪ್ರಯತ್ನ ಎನ್ನಬಹುದು.

ಇದರಂತೆ 'ಕಲಾ ಸಂವೇದನೆಯ ಒಳನೋಟಗಳು' ಎಂಬ ಕೃತಿಯನ್ನು ಕೆ.ವಿ.ಸುಬ್ರಮ್ಹಣ್ಯ ಅವರು ೧೯೯೭ರಲ್ಲಿ ರಚಿಸಿದ್ದು[೧೮] ಅವರೇ ಬರೆದಿರುವ ಹತ್ತೊಂಭತ್ತು ಕಲಾ ಲೇಖನಗಳು ಇದರಲ್ಲಿವೆ. ಇದರಲ್ಲಿ ಒಂದು ಲೇಖನವು 'ಕನ್ನಡ' ಕಲಾ ಸಾಹಿತ್ಯ' ಎಂಬುದಾಗಿದ್ದು, ಅದುವರೆಗೆ ಬಂದ ಕನ್ನಡ ಕಲಾ ಸಾಹಿತ್ಯವನ್ನು ಸ್ಥೂಲವಾಗಿ ಸಮೀಕ್ಷಿಸಲಾಗಿದೆ. ಈ ಸಮೀಕ್ಷೆಯಲ್ಲಿ ಲೇಖನಗಳು, ಪುಸ್ತಕಗಳು ಸೇರಿದ್ದು ಅವು ಬಿಂಬಿಸುವ ವಿಷಯವಸ್ತು ಮತ್ತು ಆಶಯಗಳನ್ನು ಕುರಿತು ಹೇಳಲಾಗಿದೆ.

---

೧೬. ಎನ್.ಮರಿಶಾಮಾಚಾರ್, ಅ.ಲ.ನರಸಿಂಹನ್ : (ಸಂ): ಕಲಾಕೋಶ : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು, ೧೯೯೪
೧೭. ಎನ್.ಮರಿಶಾಮಾಚಾರ್ : ಕಲಾಚೇತನ : (ಸಂ) : ಸಂಯೋಜಿತ ಸಂಸ್ಥೆ(ರಿ), ಜಯನಗರ ಬೆಂಗಳೂರು, ೧೯೯೫
೧೮. ಕೆ.ವಿ.ಸುಬ್ರಹ್ಮಣ್ಯ : ಕಲಾ ಸಂವೇದನೆಯ ಒಳನೋಟಗಳು : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು, ೧೯೯೭

'ಚಿತ್ರಚಿತ್ತ' ಎಂಬ ಕೃತಿಯನ್ನು ಚಿ.ಸು.ಕೃಷ್ಣಶೆಟ್ಟಿಯವರು ೨೦೦೦ರಲ್ಲಿ ರಚಿಸಿದ್ದು[೧೯] ಅವರೇ ಬರೆದ ಹನ್ನೆರಡು ಲೇಖನಗಳ ಸಂಗ್ರಹ ಇದಾಗಿದೆ. ಇದರಲ್ಲಿನ ಒಂದು ಲೇಖನ, 'ಸಾಹಿತ್ಯ ಮತ್ತು ಚಿತ್ರಕಲೆ' ಎಂಬುದಾಗಿದ್ದು ಸಾಹಿತ್ಯ ಮತ್ತು ಚಿತ್ರಕಲೆಯ ಸ್ವರೂಪಗಳನ್ನು ಅವುಗಳ ಗುಣಲಕ್ಷಣಗಳೊಂದಿಗೆ ಬಿಂಬಿಸಲಾಗಿದೆ. ಅಲ್ಲದೆ ಸಾಂದರ್ಭಿಕವಾಗಿ ಕೆಲವು ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಗೊಂಡಿರುವ ಚಿತ್ರಕಲಾ ಅಂಶಗಳನ್ನು ವಿವೇಚಿಸಲಾಗಿದೆ.

'ಚಿತ್ರಕಲಾ' ಎಂಬ ಸಂಪಾದನಾ ಕೃತಿಯು ೨೦೦೦ದಲ್ಲಿ ಹೊರಬಂದಿದ್ದು,[೨೦] ಇದರಲ್ಲಿ ಇಂಗ್ಲೀಷ ಭಾಷೆಯ ಇಪ್ಪತ್ತೊಂದು ಮತ್ತು ಕನ್ನಡ ಭಾಷೆಯ ಹನ್ನೆರಡು ಕಲಾ ಲೇಖನಗಳಿವೆ. 'ಚಿತ್ರಕಲೆ ಕುರಿತ ಶಾಸ್ತ್ರ ಗ್ರಂಥಗಳು', 'ಕಾವ್ಯ ಮತ್ತು ಚಿತ್ರಕಲೆ' ಎಂಬ ಎರಡು ಲೇಖನಗಳು ಕಲಾ ಸಾಹಿತ್ಯಕ್ಕೆ ಸಂಬಂಧಪಟ್ಟಿವೆ.

ಚಿತ್ರಕಲೆ ಕುರಿತ ಶಾಸ್ತ್ರ ಗ್ರಂಥಗಳು ಲೇಖನದಲ್ಲಿ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಯಾವ ಗ್ರಂಥಗಳು ಚಿತ್ರಕಲೆಗೆ ಸಂಬಂಧಿಸಿವೆ ಎಂಬುದನ್ನು ಹೇಳಿ ಸಂಕ್ಷಿಪ್ತವಾಗಿ ವಿವೇಚಿಸಲಾಗಿದೆ. ವಿಷ್ಣುಧರ್ಮೋತ್ತರ, ಸಮರಾಂಗಣ ಸೂತ್ರಧಾರ, ಮಾನಸೋಲ್ಲಾಸ, ಶಿವತತ್ವರತ್ನಾಕರ, ನಾರದಶಿಲ್ಪ, ಶ್ರೀತತ್ವನಿಧಿ ಹೀಗೆ ಚಿತ್ರಕಲೆಯ ಬಗೆಗಿನ ಪ್ರಾಚೀನ ಗ್ರಂಥಗಳನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

'ದೃಶ್ಯಕಲಾ' ಎಂಬ ಕೃತಿಯನ್ನು ಎನ್. ಮರಿಶಾಮಾಚಾರ್ ಅವರು ೨೦೦೧ರಲ್ಲಿ ರಚಿಸಿದ್ದು[೨೧] ಅವರೇ ಬರೆದ ಹದಿನೆಂಟು ಲೇಖನಗಳು ಇದರಲ್ಲಿವೆ. ಮೊದಲನೆಯ ಲೇಖನವು 'ಸಾಹಿತ್ಯದಲ್ಲಿ ಚಿತಕ್ರಲೆ' ಎಂಬುದಾಗಿದ್ದು ಇದರಲ್ಲಿ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿನ ಚಿತ್ರಕಲಾ ಉಲ್ಲೇಖಗಳನ್ನು ವಿವೇಚಿಸಲಾಗಿದೆ. ಸಂಸ್ಕೃತ ಸಾಹಿತ್ಯ ಕೃತಿಗಳು ಮತ್ತು ಕನ್ನಡ ಸಾಹಿತ್ಯ ಕೃತಿಗಳು ಎಂದು ವಿಂಗಡಣೆ ಮಾಡಿಕೊಂಡಿದ್ದು ಇವರೇ ೧೯೮೯ರಲ್ಲಿ ಬರೆದ 'ಸಾಹಿತ್ಯದಲ್ಲಿ ಚಿತ್ರಕಲೆ' ಪುಸ್ತಕದ ಯಥಾವತ್ ನಿರೂಪಣೆ ಇಲ್ಲಿದೆ.

'ನಿಜದ ನೆಲೆ' ಎಂಬ ಬೃಹತ್ ಅಭಿನಂದನಾ ಗ್ರಂಥವನ್ನು ೨೦೦೩ರಲ್ಲಿ ಹೊರತರಲಾಗಿದೆ.[೨೨] ಇದರಲ್ಲಿ ಕಲೆಯ ಬಗೆಗಿನ ೭೪ ಲೇಖನಗಳಿವೆ. ಮೊದಲನೆಯ ಲೇಖನವು 'ಶಾಸ್ತ್ರ ಗ್ರಂಥಗಳು ಚಿತ್ರಕಲೆ' ಎಂಬುದಾಗಿದ್ದು ಡಾ.ಅ.ಲ.ನರಸಿಂಹನ್ ಅವರು ಬರೆದಿದ್ದಾರೆ. ಇದರಲ್ಲಿ ಚಿತ್ರಕಲೆಯ ಕುರಿತ ಪ್ರಾಚೀನ ಸಾಹಿತ್ಯ ಕೃತಿಗಳು ಮತ್ತು ಚಿತ್ರಕಲೆಯ ಉಲ್ಲೇಖಗಳನ್ನು ಹೊಂದಿದ ಸಾಹಿತ್ಯ ಕೃತಿಗಳು ಎಂದು ವಿಂಗಡಿಸಿ ವಿವೇಚಿಸಲಾಗಿದೆ. ಈ ಎರಡೂ ಪ್ರಕಾರದ ಗ್ರಂಥಗಳಲ್ಲಿನ ಚಿತ್ರಕಲೆಯ ಬಗೆಗಿನ ವಿವರಗಳನ್ನು ತೌಲನಿಕವಾಗಿ ಚರ್ಚಿಸಲಾಗಿದೆ. ಇನ್ನುಳಿದಂತೆ ಈ ಸಂಪುಟದಲ್ಲಿನ ಇನ್ನೂ ೧೩ ಲೇಖನಗಳು ಚಿತ್ರಕಲಾ ಸಾಹಿತ್ಯಕ್ಕೆ ಸಂಬಂಧಿಸಿದ್ದರೂ ಒಂದೊಂದು ಕೃತಿಯ ಬಗೆಗೆ ಮಾತ್ರ ವಿಶ್ಲೇಷಿಸುತ್ತವೆ. ವಿಷ್ಣುಧರ್ಮೋತ್ತರ ಚಿತ್ರಕಲೆ, ಮಾನಸೋಲ್ಲಾಸ ಚಿತ್ರಕಲೆ, ಶಿವತತ್ವರತ್ನಾಕರ ಚಿತ್ರಕಲೆ, ಶ್ರೀತತ್ವನಿಧಿ ಚಿತ್ರಕಲೆ ಹೀಗೆ ಆಯಾ ಗ್ರಂಥಗಳಲ್ಲಿ ಹೇಳಿರುವ ಚಿತ್ರಕಲೆಯ ಬಗೆಗಿನ ವಿವರಗಳ ಬಗ್ಗೆ ಈ ಲೇಖನಗಳು ಚರ್ಚಿಸುತ್ತವೆ.

---

೧೯. ಚಿ.ಸು.ಕೃಷ್ಣಶೆಟ್ಟಿ: ಚಿತ್ರಚಿತ್ತ : ಇಳಾ ಪ್ರಕಾಶನ, ಬೆಂಗಳೂರು, ೨೦೦೦

೨೦. ಡಾ.ಚೂಡಾಮಣಿ ನಂದಗೋಪಾಲ (ಸಂ): ಚಿತ್ರಕಲಾ : ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು, ೨೦೦೦

೨೧. ಎನ್.ಮರಿಶಾಮಾಚಾರ್: ದೃಶ್ಯಕಲಾ : ಸಿ.ಎಂ.ಎನ್. ಪ್ರಕಾಶನ, ಬೆಂಗಳೂರು, ೨೦೦೧

೨೨. ಡಾ:ಎಸ್.ಸಿ.ಪಾಟೀಲ, ಸತ್ಯಾನಂದ ಪಾತ್ರೋಟ :(ಸಂ): ನಿಜದ ನೆಲೆ : ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ, ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟ, ೨೦೦೩

'ಸೃಷ್ಟಿ' ಸ್ಮರಣ ಸಂಚಿಕೆಯು ಇದೇ ಅವಧಿಯಲ್ಲಿ ಹೊರಬಂದಿದ್ದು,[೨೩] ಡಾ. ಬಿ.ಕೆ.ಹಿರೇಮಠರು ವಿವಿಧ ಸಂದರ್ಭಗಳಲ್ಲಿ ಬರೆದ ಲೇಖನಗಳು ಇದರಲ್ಲಿವೆ. ಕೆಲವು ಲೇಖನಗಳು ಚಿತ್ರಕಲೆಯ ಕುರಿತಾಗಿದ್ದು, ಅದರಲ್ಲಿ ಎರಡು ಚಿತ್ರಕಲಾ ಸಾಹಿತ್ಯಕ್ಕೆ ಸಂಬಂಧಿಸಿವೆ. 'ಪ್ರಾಚೀನ ಚಿತ್ರ ಮತ್ತು ಶಿಲ್ಪಕಲಾವಿದರ ಉಲ್ಲೇಖಗಳು' ಲೇಖನದಲ್ಲಿ ಪ್ರಾಚೀನ ಸಾಹಿತ್ಯಕೃತಿಗಳು ಮತ್ತು ಶಾಸನ ಬರಹಗಳಲ್ಲಿನ ಚಿತ್ರಕಲಾ ವಿವರಗಳನ್ನು ಬಳಸಿಕೊಳ್ಳಲಾಗಿದೆ. ಅದರಂತೆ 'ಪ್ರಾಚೀನ ಶಾಸ್ತ್ರಗ್ರಂಥಗಳಲ್ಲಿ ಚಿತ್ರಕಲೆಯ ಉಲ್ಲೇಖಗಳು' ಎಂಬ ಇನ್ನೊಂದು ಲೇಖನದಲ್ಲಿ ಪ್ರಾಚೀನ ಸಂಸ್ಕೃತ ಮತ್ತು ಕನ್ನಡ ಸಾಹಿತ್ಯ ಕೃತಿಗಳಲ್ಲಿ ಕಂಡುಬರುವ ಚಿತ್ರಕಲೆಯ ಬಗೆಗಿನ ಸಂಗತಿಗಳನ್ನು ವಿವೇಚಿಸಲಾಗಿದೆ.

ಹೀಗೆ ಚಿತ್ರಕಲಾ ಸಾಹಿತ್ಯದ ಬಗೆಗೆ ೧೯೩೦ ರ ಸಂದರ್ಭದಿಂದಲೂ ಲೇಖನಗಳು, ಕೆಲವು ಚಿಕ್ಕಪುಟ್ಟ ಪುಸ್ತಕಗಳು ಪ್ರಕಟವಾಗುತ್ತ ಬಂದಿದ್ದರೂ 'ಕರ್ನಾಟಕದ ಕಲಾಸಾಹಿತ್ಯ'ದ ಬಗೆಗಿನ ಸ್ಥೂಲ ನೋಟವು ಇವುಗಳಿಂದ ದೊರಕುವುದಿಲ್ಲ.[೨೪] ಈ ಹಿಂದೆ ಗಮನಿಸಿದಂತೆ ಅ.ಲ.ನರಸಿಂಹನ್ ಮತ್ತು ಕೆ.ವ್ಹಿ.ಸುಬ್ರಹ್ಮಣ್ಯ ಅವರು ತಮ್ಮ ಲೇಖನಗಳಲ್ಲಿ ಅದುವರೆಗಿನ ಕನ್ನಡ ಕಲಾಸಾಹಿತ್ಯವನ್ನು ಮಾತ್ರ ಗಮನಿಸಿದ್ದು,[೨೫] ಅನುವಾದ ಚಿತ್ರಕಲಾ ಸಾಹಿತ್ಯ, ಇಂಗ್ಲೀಷ್ ಭಾಷೆಯ ಅನುವಾದ ಸಾಹಿತ್ಯ, ಚಿತ್ರಕಲಾ ಪತ್ರಿಕಾ ಸಾಹಿತ್ಯ ಇಂತಹ ಕೆಲವು ವಿಷಯಗಳಲ್ಲದೆ ಸಂಶೋಧನಾ ಚಿತ್ರಕಲಾ ಸಾಹಿತ್ಯ ಮುಂತಾದ ಕೆಲವು ಶಿಸ್ತುಗಳ ಬಗ್ಗೆ ಗಮನಿಸಿದಂತೆ ತೋರುವುದಿಲ್ಲ. ಇಂತಹ ಎಲ್ಲ ಹಿನ್ನೆಲೆಗಳನ್ನು ಗಮನಿಸಿದಾಗ ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಬಗ್ಗೆ ಗಂಭೀರವಾದ ಅಧ್ಯಯನಗಳು ನಡೆಯದೇ ಇರುವ ಕೊರತೆ ಕಂಡುಬರುತ್ತದೆ. ಮಾತ್ರವಲ್ಲದೆ ಕರ್ನಾಟಕದ ಚಿತ್ರಕಲಾ ಸಾಹಿತ್ಯವು ಬೆಳೆದುಬಂದ ಹಿನ್ನೆಲೆ, ವಿವಿಧ ಪ್ರಕಾರಗಳಲ್ಲಿ ಅದು ಚಾಚಿಕೊಂಡು ವಿಸ್ತರಿಸಿದ ರೀತಿ, ಮುಂತಾದ ಪ್ರಮುಖ ಅಂಶಗಳ ಬಗ್ಗೆ ಇದುವರೆಗೂ ಅಜ್ಞಾತಸ್ಥಿತಿಯೆ ಮುಂದುವರೆದಿದೆ.

ಈ ಎಲ್ಲ ಹಿನ್ನೆಲೆಯಲ್ಲಿ ಕರ್ನಾಟಕದ ಚಿತ್ರಕಲಾ ಸಾಹಿತ್ಯವನ್ನು ಇದುವರೆಗೂ ಬಂದ ಲೇಖನಗಳು, ಗ್ರಂಥಗಳು ಅವುಗಳ ವಿಶ್ಲೇಷಣೆ, ತೌಲನಿಕ ಚರ್ಚೆಗಳ ಜೊತೆಗೆ ಸಮಕಾಲೀನ ಸಾಹಿತ್ಯಕೃತಿಗಳು, ಶಾಸನ ಬರಹಗಳು, ಭಿತ್ತಿಚಿತ್ರಗಳು, ಕಿರುರೂಪ ಚಿತ್ರಗಳು ಮತ್ತು ಹಸ್ತಪ್ರತಿ ಚಿತ್ರಗಳಂತಹ ಆಕರಗಳನ್ನು ಬಳಸಿಕೊಂಡು ವ್ಯವಸ್ಥಿತವಾಗಿ ಅಧ್ಯಯನಕ್ಕೊಳಪಡಿಸುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

**ಅಧ್ಯಯನದ ಸ್ವರೂಪ :**

ಈ ಅಧ್ಯಯನವನ್ನು ಎಂಟು ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡಿದ್ದು, ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿತಗೊಂಡ ವಿಷಯಗಳನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ಹೇಳಬಹುದು.

* **ಒಂದನೆಯ ಅಧ್ಯಾಯವು** ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ ಮತ್ತು ವ್ಯಾಪ್ತಿಯನ್ನು ಕುರಿತಾಗಿದೆ.
* **ಎರಡನೆಯ ಅಧ್ಯಾಯದಲ್ಲಿ** ಚಿತ್ರಕಲಾ ಸಾಹಿತ್ಯ ನಡೆದು ಬಂದ ಚಾರಿತ್ರಿಕ ಬೆಳವಣಿಗೆಯನ್ನು ಕಟ್ಟಿಕೊಡಲಾಗಿದೆ.

---

೨೩. ಡಾ:ಬಿ.ಕೆ.ಹಿರೇಮಠ : ಸೃಷ್ಟಿ : ಬಾಪೂಜಿ ಗ್ರಾಮೀಣ ಅಭಿವೃದ್ಧಿ ಸಂಸ್ಥೆ(ರಿ) ಬಾಗಲಕೋಟ,೨೦೦೩
೨೪. ಅ.ಲ.ನರಸಿಂಹನ್ : ಕಲಾಚೇತನ : ಪುಟ ೨೫ ರಿಂದ ೩೫ ರವರೆಗೆ.
೨೫. ಕೆ.ವಿ.ಸುಬ್ರಹ್ಮಣ್ಯ : ಕಲಾ ಸಂವೇದನೆಯ ಒಳನೋಟಗಳು : ಪುಟ ೨೨ ರಿಂದ ೪೦ ರವರೆಗೆ.

* **ಮೂರನೆಯ ಅಧ್ಯಾಯದಲ್ಲಿ** ಚಿತ್ರಕಲಾ ಸಂಪಾದನಾ ಸಾಹಿತ್ಯದ ಬಗ್ಗೆ ವಿವರಣೆ ಇದ್ದು ಇದರಲ್ಲಿ ಅಭಿನಂದನಾ ಗ್ರಂಥ, ಸಂಪಾದನಾ ಗ್ರಂಥ ಮತ್ತು ಸ್ಮರಣ ಸಂಚಿಕೆಗಳ ಸಾಹಿತ್ಯವನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

* **ನಾಲ್ಕನೆಯ ಅಧ್ಯಾಯವು** ಚಿತ್ರಕಲಾ ವ್ಯಕ್ತಿಅಧ್ಯಯನ ಸಾಹಿತ್ಯವಾಗಿದ್ದು, ಇದರಲ್ಲಿ ಕಲಾವಿದರ ಬಗ್ಗೆ ಬಂದ ಗ್ರಂಥಗಳನ್ನು ವಿಶ್ಲೇಷಿಸಲಾಗಿದೆ.

* ಐದನೆಯ ಅಧ್ಯಾಯದಲ್ಲಿ ಚಿತ್ರಕಲಾ ಪ್ರವಾಸ ಸಾಹಿತ್ಯ, ಅನುವಾದ ಸಾಹಿತ್ಯ ಮತ್ತು ಇಂಗ್ಲೀಷ ಭಾಷೆಯ ಚಿತ್ರಕಲಾ ಸಾಹಿತ್ಯವನ್ನು ಕುರಿತು ಅಧ್ಯಯನ ಮಾಡಲಾಗಿದೆ.

* **ಆರನೆಯ ಅಧ್ಯಾಯವು** ಚಿತ್ರಕಲಾ ಸಂಶೋಧನಾ ಸಾಹಿತ್ಯವಾಗಿದ್ದು, ಇದರಲ್ಲಿ ಪಿ.ಎಚ್.ಡಿ. ಪ್ರಬಂಧಗಳು, ಡಿ.ಲಿಟ್. ಪ್ರಬಂಧಗಳು, ಸ್ನಾತಕೋತ್ತರ ಪದವಿಯ ಲಘುಶೋಧ ಪ್ರಬಂಧಗಳು, ಪದವಿ ಹಂತದ ಕಿರು ಯೋಜನಾ ವರದಿಗಳ ಬಗ್ಗೆ ವಿವರಣೆ ಇರುತ್ತದೆ.

* **ಏಳನೆಯ ಅಧ್ಯಾಯವು** ಚಿತ್ರಕಲಾ ಸಂಕೀರ್ಣ ಸಾಹಿತ್ಯವಾಗಿದ್ದು ಇದರಲ್ಲಿ ಕರ್ನಾಟಕ, ಭಾರತ ಮತ್ತು ಜಾಗತಿಕ ಚಿತ್ರಕಲೆಗಳ ಬಗ್ಗೆ ಕನ್ನಡದಲ್ಲಿ ಬಂದ ಕೃತಿಗಳಲ್ಲದೇ ಕಲಾವಿಮರ್ಶೆ, ಕಲಾತತ್ವ ಮತ್ತು ಕಲಾಸಾಹಿತ್ಯ ಒಳಗೊಂಡ ಗ್ರಂಥಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

* **ಎಂಟನೆಯ ಅಧ್ಯಾಯವು** ಸಮಾರೋಪವಾಗಿದ್ದು ಮೇಲಿನ ಏಳು ಅಧ್ಯಾಯಗಳ ಫಲಿತಗಳ ಸಮೀಕ್ಷೆ ಇರುತ್ತದೆ.

**ಅಧ್ಯಯನದ ವ್ಯಾಪ್ತಿ :**

ಪ್ರಸ್ತುತ ಅಧ್ಯಯನವು ಕರ್ನಾಟಕದ ಚಿತ್ರಕಲಾ ಸಾಹಿತ್ಯಕ್ಕೆ ಸಂಬಂಧಿಸಿದ್ದು, ಇದರಲ್ಲಿ ಕರ್ನಾಟಕದ ಚಿತ್ರಕಲೆ ಮತ್ತು ಕಲಾವಿದರ ಬಗ್ಗೆ ಬಂದ ಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕರ್ನಾಟಕದ ಕಲೆಯ ಬಗ್ಗೆ ಕನ್ನಡದಲ್ಲಿ ಬಂದ ಸಾಹಿತ್ಯವಲ್ಲದೆ ಬೇರೆ ಭಾಷೆಗಳಲ್ಲಿ ಬಂದ ಈ ನಾಡಿದ ಕಲೆ ಮತ್ತು ಕಲಾವಿದರ ಬಗೆಗಿನ ಸಾಹಿತ್ಯವನ್ನು ಈ ಅಧ್ಯಯನದ ವ್ಯಾಪ್ತಿಯಲ್ಲಿ ತರಲಾಗಿದೆ.

ವಿಶ್ವವಿಖ್ಯಾತ ಕಲಾ ಬರಹಗಾರರಾದ ಸ್ಟೆಲ್ಲಾ ಕ್ರಾಮ್ರಿಷ್, ಪರ್ಸಿಬ್ರೌನ್, ಆನಂದಕುಮಾರಸ್ವಾಮಿ, ಮುಂತಾದವರು ಭಾರತೀಯ ಕಲೆಯ ಬಗ್ಗೆ ಬರೆಯುವಾಗ ಸಾಂದರ್ಭಿಕವಾಗಿ ಕರ್ನಾಟಕದ ಕಲೆಯ ಕುರಿತಾಗಿಯೂ ವಿವರಣೆಗಳನ್ನು ನೀಡಿರುವರು. ಅಂತಹ ಸಾಹಿತ್ಯವನ್ನು ಇಲ್ಲಿ ಅಧ್ಯಯನದ ವ್ಯಾಪ್ತಿಗೊಳಪಡಿಸಲಾಗಿದೆ. ಇದಲ್ಲದೆ ಚಿತ್ರಕಲಾ ಸಾಹಿತ್ಯದ ಕ್ರಮಬದ್ಧ ಇತಿಹಾಸವನ್ನು ಕಟ್ಟಿಕೊಡುವ ಹಿನ್ನೆಲೆಯಲ್ಲಿ ಸಮಕಾಲೀನ ಶಾಸನ ಬರಹಗಳು ಮತ್ತು ಇನ್ನಿತರ ಪೂರಕ ಸಾಹಿತ್ಯ ಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಹಾಗೆಯೇ ಆಯಾ ಕಾಲದ ಭಿತ್ತಿಚಿತ್ರ, ಕಿರುರೂಪ ಚಿತ್ರ, ಹಸ್ತಪ್ರತಿ ಚಿತ್ರಗಳು ದೃಶ್ಯ ಭಾಷೆಯ ಮೂಲಕ ಅಂದಿನ ವಿವರಗಳನ್ನು ದಾಖಲಿಸಿ ಕೊಡುವ ಪ್ರಮುಖ ಆಕಾರಗಳಾಗಿದ್ದು ಅವುಗಳನ್ನು ಸಾಂದರ್ಭಿಕವಾಗಿ ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಮುಖ್ಯವಾಗಿ ಈ ಅಧ್ಯಯನವು ಕರ್ನಾಟಕ ಪ್ರದೇಶಕ್ಕೆ ಮಾತ್ರ ಸೀಮಿತವಾಗಿದ್ದರೂ ಇನ್ನಿತರ ಪ್ರದೇಶದ ಚಿತ್ರಕಲಾ ಸಾಹಿತ್ಯವನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ.

ಒಟ್ಟಾರೆ ಅಧ್ಯಯನವು ಕರ್ನಾಟಕದ ಚಿತ್ರಕಲಾ ಸಾಹಿತ್ಯಕ್ಕೆ ಸೀಮಿತವಾಗಿದ್ದು, ಇಲ್ಲಿ ನಮ್ಮ ಗಮನಕ್ಕೆ ಬಂದ ಎಲ್ಲ ಚಿತ್ರಕಲಾ ಸಾಹಿತ್ಯ ಕೃತಿಗಳನ್ನು ಗಮನಿಸಿ ಸಮೀಕ್ಷಾರೂಪದಲ್ಲಿ ಸ್ಥೂಲವಾಗಿ

ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇದೊಂದು ಅತ್ಯಂತ ಸ್ಥೂಲವಾದ ಅಧ್ಯಯನ, ಪ್ರಸ್ತುತ ಅಧ್ಯಯನದ ಇತಿಮಿತಿಯಲ್ಲಿ ಇಲ್ಲಿನ ಬರವಣಿಗೆ ಸೀಮಿತವಾಗಿದೆ.

**ಅಧ್ಯಯನದ ವೈಧಾನಿಕತೆ :**

ಈ ಮಹಾ ಪ್ರಬಂಧದ ರಚನೆಗೆ ಎರಡು ರೀತಿಯ ಆಕರ ಸಾಮಗ್ರಿಗಳನ್ನು ಬಳಸಿಕೊಳ್ಳಲಾಗಿದೆ.

೧. ಮೂಲ ಆಕರ ಸಾಮಗ್ರಿ

೨. ಆನುಷಂಗಿಕ ಆಕರ ಸಾಮಗ್ರಿ

**೧. ಮೂಲ ಆಕರ ಸಾಮಗ್ರಿ :**

ಮೂಲ ಆಕರ ಸಾಮಗ್ರಿಯಿಂದ ವಿಷಯ ಸಂಗ್ರಹಿಸುವಲ್ಲಿ ಕ್ಷೇತ್ರಕಾರ್ಯವು ಪ್ರಮುಖವಾಗಿದ್ದು, ಇದು ವಿವಿಧ ಹಂತದಲ್ಲಿ ಇರುತ್ತದೆ. ಇಲ್ಲಿ ಮೂಲ ಆಕರ ಸಾಮಗ್ರಿಯಾಗಿ ಸಂಬಂಧಿಸಿದ ಚಿತ್ರಕಲಾ ಸಾಹಿತ್ಯ ಕೃತಿಗಳನ್ನೇ ಬಳಸಿಕೊಳ್ಳಲಾಗಿದೆ. ಈ ಅಧ್ಯಯನದಲ್ಲಿ ಕೈಗೊಂಡ ಕ್ಷೇತ್ರಕಾರ್ಯವು ಈ ಕೆಳಕಂಡ ರೀತಿಯಲ್ಲಿದೆ.

**ಅ. ಗ್ರಂಥಾಲಯಗಳಿಗೆ ಭೇಟಿ ಕೊಡುವುದು :**

ರಾಜ್ಯದ ಬೇರೆ ಬೇರೆ ವಿಶ್ವವಿದ್ಯಾಲಯಗಳು, ದೇಶದ ಬೇರೆ ಬೇರೆ ವಿಶ್ವವಿದ್ಯಾಲಯಗಳ ಗ್ರಂಥಾಲಯಗಳಿಗೆ ಭೇಟಿ ನೀಡಿ, ಸಂಬಂಧಿಸಿದ ಸಾಹಿತ್ಯ ಕೃತಿಗಳನ್ನು ಅಧ್ಯಯನ ಮಾಡಿ ಮಾಹಿತಿಯನ್ನು ಸಂಗ್ರಹ ಮಾಡಲಾಯಿತು. ಇದಲ್ಲದೆ ರಾಜ್ಯದ ಬಹುಪಾಲು ಚಿತ್ರಕಲಾ ಸಾಹಿತ್ಯವನ್ನು ಪ್ರಕಟಿಸಿದ ಲಲಿತಕಲಾ ಅಕಾಡೆಮಿ, ಬೇರೆ ರಾಜ್ಯಗಳ ಲಲಿತಕಲಾ ಅಕಾಡೆಮಿ ಮತ್ತು ಕೇಂದ್ರ ಲಲಿತಕಲಾ ಅಕಾಡೆಮಿಗಳಿಗೂ ಭೇಟಿ ನೀಡಿ ಸಂಬಂಧಿಸಿದ ಸಾಹಿತ್ಯ ಕೃತಿಗಳಿಂದ ಮಾಹಿತಿ ಸಂಗ್ರಹ ಮಾಡಲಾಗಿದೆ. ಹಾಗೆಯೆ ರಾಜ್ಯದ ಸಾರ್ವಜನಿಕ ಗ್ರಂಥಾಲಯಗಳು, ಖಾಸಗಿ ಒಡೆತನದ ಗ್ರಂಥಾಲಯಗಳು ಮತ್ತು ಪುರಾತತ್ವ ಇಲಾಖೆಯ ಗ್ರಂಥ ಭಾಂಡಾರ ಇನ್ನಿತರ ಹಲವಾರು ಸಂಘ-ಸಂಸ್ಥೆ, ಮಠಮಾನ್ಯಗಳ ಪುಸ್ತಕ ಭಂಡಾರಗಳಿಗೂ ತೆರಳಿ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ ಸಾಹಿತ್ಯ ಕೃತಿಗಳಿಂದ ವಿಷಯ ಸಂಗ್ರಹಿಸಲಾಗಿದೆ.

**ಬ. ಛಾಯಾಚಿತ್ರ ಮತ್ತು ನೆರಳಚ್ಚು ಮಾಡಿಸುವುದು :**

ಸಂಬಂಧಿಸಿದ ಸಾಹಿತ್ಯ ಕೃತಿಗಳಲ್ಲದೆ ಪೂರಕವಾಗಿ ಭಿತ್ತಿಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಕಿರುರೂಪ ಚಿತ್ರಗಳು ಮತ್ತು ಶಾಸನಗಳಂತಹ ಸಾಮಗ್ರಿಗಳಿಂದ ವಿಷಯ ಸಂಗ್ರಹಿಸಬೇಕಾದಾಗ ಸಂಬಂಧಿಸಿದ ಕೃತಿಗಳ ಛಾಯಾಚಿತ್ರ ಮಾಡುವ ಮೂಲಕ ವಿಷಯ ಸಂಗ್ರಹಣೆ ಮಾಡಿಕೊಳ್ಳಲಾಗಿದೆ.

ಇದಲ್ಲದೆ ಗ್ರಂಥಾಲಯಗಳಿಗೆ ಭೇಟಿ ಕೊಟ್ಟಾಗ ಸಂಬಂಧಿಸಿದ ಸಾಹಿತ್ಯ ಕೃತಿಯ ವಿಷಯ ವ್ಯಾಪ್ತಿ ವಿಸ್ತಾರವಾಗಿದ್ದು, ಸಮಯದ ಕೊರತೆ ಉಂಟಾಗಿ ಮಾಹಿತಿ ಬರೆದುಕೊಳ್ಳುವುದು ಕಾಲಮಿತಿಯಲ್ಲಿ ಸಾಧ್ಯವಿಲ್ಲದೆ ಹೋದಾಗ ಆ ವಿಷಯವನ್ನು ನೆರಳಚ್ಚು ಮಾಡಿಸಿಕೊಳ್ಳುವ ವಿಧಾನವನ್ನು ಇಲ್ಲಿ ಅನುಸರಿಸಲಾಗಿದೆ.

**ಕ. ಪಟ್ಟಿಕೆಗಳನ್ನು ಮಾಡಿಕೊಳ್ಳುವುದು :**

ಕ್ಷೇತ್ರಕಾರ್ಯದಿಂದ ಮಾಹಿತಿ ಸಂಗ್ರಹಣೆ ಮಾಡಿಕೊಳ್ಳುವಾಗ ಆಯಾ ವಿಷಯಕ್ಕನುಸಾರವಾಗಿ ವಿಂಗಡಿಸಿದ ಪಟ್ಟಿಕೆಗಳಲ್ಲಿ ಮಾಹಿತಿಯನ್ನು ಬರೆದುಕೊಂಡು ನಂತರ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈ ವಿಧಾನವನ್ನು ಅನುಷಂಗಿಕ ಆಕರ ಸಾಮಗ್ರಿಯಿಂದ ವಿಷಯ ಸಂಗ್ರಹಿಸುವಾಗಲೂ ಅನುಸರಿಸಲಾಗಿದೆ.

**ಡ. ಸಂದರ್ಶನ :**

ಅಧ್ಯಯನಕ್ಕೆ ಸಂಬಂಧಿಸಿದಂತೆ ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದ ವಿದ್ವಾಂಸರು ಮತ್ತು ವಿಷಯ ತಜ್ಞರನ್ನು ಸಂದರ್ಶನ ಮಾಡಲಾಗಿದೆ. ಈ ಸಂದರ್ಭದಲ್ಲಿ ಅವರ ಅಭಿಪ್ರಾಯಗಳನ್ನು ಧ್ವನಿಮುದ್ರಿಸಿಕೊಂಡು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**೨. ಆನುಷಂಗಿಕ ಆಕರ ಸಾಮಗ್ರಿ :**

ಚಿತ್ರಕಲಾ ಸಾಹಿತ್ಯ ಕೃತಿಗಳನ್ನು ಹೊರತುಪಡಿಸಿ ಇನ್ನಿತರ ಸಾಹಿತ್ಯ ಕೃತಿಗಳಲ್ಲಿ ಪೂರಕವಾಗಿ ಚಿತ್ರಕಲೆಯ ಬಗ್ಗೆ ಬಂದ ವಿವರಣೆಗಳನ್ನು ಆನುಷಂಗಿಕ ಆಕರ ಸಾಮಗ್ರಿಯಾಗಿ ಬಳಸಿಕೊಳ್ಳಲಾಗಿದೆ. ಇದರ ಜೊತೆಗೆ ಭಿತ್ತಿಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಶಾಸನಗಳು, ಕಿರುರೂಪ ಚಿತ್ರಗಳಂತಹ ಇನ್ನಿತರ ಪೂರಕ ಸಾಮಗ್ರಿಗಳನ್ನೂ ಸಹಿತ ಈ ಅಧ್ಯಯನದಲ್ಲಿ ಆನುಷಂಗಿಕ ಆಕರ ಸಾಮಗ್ರಿಯಾಗಿ ಬಳಸಿಕೊಳ್ಳಲಾಗಿದೆ.

*****

ಭಾರತೀಯ ಚಿತ್ರಕಲಾ ಸಾಹಿತ್ಯವು ಪರೋಕ್ಷವಾಗಿ ವೇದಗಳ ಕಾಲದಿಂದಲೇ ಆರಂಭಗೊಳ್ಳುತ್ತದೆ. ಋಗ್ವೇದದಲ್ಲಿ ಕಲೆ, ಕಲಾವಿದರು, ಬಣ್ಣ, ರೇಖೆ, ಅಲಂಕಾರದಂತಹ ಸಂಗತಿಗಳು ವ್ಯಕ್ತಗೊಂಡಿವೆ. ನಂತರದ ಉಪನಿಷತ್ತುಗಳು, ಅರಣ್ಯಕಗಳು, ಪುರಾಣಗಳು ಸಾಂದರ್ಭಿಕವಾಗಿ ಚಿತ್ರಕಲೆಯ ಉಲ್ಲೇಖ ಒಳಗೊಂಡಿರುವುದು ತಿಳಿದುಬರುತ್ತದೆ. ರಾಮಾಯಣ ಮಹಾಭಾರತಗಳು ಚಿತ್ರಕಲೆಯ ಹಲವು ವಿವರಗಳನ್ನು ಒಳಗೊಂಡಿವೆ.[೧] ಪ್ರಾಚೀನ ಜೈನ ಮತ್ತು ಬೌದ್ಧಸಾಹಿತ್ಯ ಕೃತಿಗಳನ್ನೊಳಗೊಂಡಂತೆ ಅನೇಕ ಕೃತಿಗಳಲ್ಲಿ ಚಿತ್ರಕಲೆಯ ಸಾಂದರ್ಭಿಕ ಉಲ್ಲೇಖಗಳಿವೆ. ಕ್ರಿ. ಪೂ. ೩೦೦ರ ಸುಮಾರಿನ ಜೈಮಿನಿಯ ಸೂತ್ರಗಳು, ಕ್ರಿ. ಪೂ. ೧೫೦ ಕಾಲದ ಪತಂಜಲಿಯ ಯೋಗಸೂತ್ರಗಳು ಚಿತ್ರಕಲೆಯ ಸಾಂದರ್ಭಿಕ ವಿವರಗಳಿಂದ ಕೂಡಿವೆ.

ಕ್ರಿ. ಪೂ. ೧ನೇ ಶತಮಾನದಲ್ಲಿ ರಚನೆಯಾಗಿದೆ ಎಂದು ನಂಬಲಾಗಿರುವ ನಗ್ನಜಿತ್‌ನ 'ಚಿತ್ರಲಕ್ಷಣ' ಚಿತ್ರಕಲೆಯ ಬಗೆಗಿರುವ ಸಾಹಿತ್ಯ ಕೃತಿಯಾಗಿದೆ. ಇದರಲ್ಲಿ ಚಿತ್ರಕಲೆ ಹೇಗೆ ಆರಂಭವಾಯಿತೆಂದು ದೈವಿಕ ಹಿನ್ನೆಲೆ ಕೊಡಲಾಗಿದೆ. ಕ್ರಿ. ಶ. ೧ನೇ ಶತಮಾನದ ಅಶ್ವಘೋಷಣ, ಬುದ್ಧಚರಿತ, ಭಾಸಣಮಾಲವಿಕಾಗ್ನಿಮಿತ್ರ, ಸ್ವಪ್ನವಾಸವದತ್ತ, ಚಾರುದತ್ತ, ಊರುಭಂಗ, ಪಂಚರಾತ್ರ,

೧.ಡಾ.ಯಾದವಪ್ಪ ಪರದೇಶಿ: ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ:ಪುಟ-೫೮

ವಿಷ್ಣುಶರ್ಮನ ಪಂಚತಂತ್ರ, ಶೂದ್ರಕವಿಯ ಮೃಚ್ಛಕಟಿಕ, ಗುಣಾಢ್ಯನ ಬೃಹತ್ಕಥಾ ಇವುಗಳಲ್ಲಿ ಚಿತ್ರಕಲೆಯು ಕ್ರಿ.ಶ.೪ನೇ ಶತಮಾನದ ಕಾಳಿದಾಸನ ಮಾಳವಿಕಾಗ್ನಿಮಿತ್ರ, ರಘುವಂಶ, ಅಭಿಜ್ಞಾನಶಾಕುಂತಲ, ವಿಕ್ರಮೋರ್ವಶೀಯ, ಮೇಘಧೂತ ಕೃತಿಗಳು ಹೆಚ್ಚಿನ ಕಲಾಅಂಶಗಳನ್ನು ಒಳಗೊಂಡಿವೆ. ಕ್ರಿ.ಶ. ೬ ರಿಂದ ೭ನೇ ಶತಮಾನಗಳಲ್ಲಿ ಬರುವ ಸುಬಂಧುವಿನ ವಾಸವದತ್ತ, ಬಾಣನ ಕಾದಂಬರಿ, ಹರ್ಷಚರಿತ, ಬೃರ್ತೃಹರಿಯ ಶೃಂಗಾರಶತಕ, ಮಾಘನ ಶಿಶುಪಾಲವಧ, ಭವಭೂತಿಯ ಮಾಲತಿಮಾಧವ, ಪ್ರಣಯನಾಟಕ, ಮಹಾವೀರಚರಿತ, ರತ್ನಾಕರನ ಹರವಿಜಯ, ಅಮರಸಿಂಹನ ಅಮರಕೋಶ, ಕೌಟಿಲ್ಯನ ಅರ್ಥಶಾಸ್ತ್ರ, ವಾತ್ಸಾಯನನ ಕಾಮಸೂತ್ರ, ವರಾಹಮಿಹೀರನ ಪಂಚಸಿದ್ಧಾಂತಿಕಾ ಇವುಗಳಲ್ಲಿ ಸಾಂದರ್ಭಿಕ ಕಲಾ ಅಂಶಗಳಿವೆ.

ಅಲಂಕಾರ ಅಥವಾ ಲಕ್ಷಣ ಗ್ರಂಥಗಳಲ್ಲಿ ಕಲೆಯ ಸಂಗತಿಗಳೊಂದಿಗೆ ಕಲಾವಿಮರ್ಶೆಯ ಅಂಶಗಳೂ ಇದರಲ್ಲಿ ಪ್ರಸ್ತಾಪಗೊಂಡಿವೆ. ಭರತನ ನಾಟ್ಯಶಾಸ್ತ್ರ, ಭಾಮಹನ ಕಾವ್ಯಾಲಂಕಾರ, ದಂಡಿಯ ಕಾವ್ಯಾದರ್ಶ, ಉದ್ಭಟನ ಕಾವ್ಯಾಲಂಕಾರಸಾರ, ವಾಮನನ ಕಾವ್ಯಾಲಂಕಾರಸೂತ್ರವೃತ್ತಿ, ಅಭಿನವಗುಪ್ತನ ಅಭಿನವ ಭಾರತಿ, ರುದ್ರಟನ ಕಾವ್ಯಾಲಂಕಾರ, ಆನಂದವರ್ಧನನ ಧ್ವನ್ಯಾಲೋಕ, ಭಟ್ಟಾನಾಯಕನ ಹೃದಯದರ್ಪಣ, ಅಭಿನವಗುಪ್ತನ ಲೋಚನ, ಭಟ್ಟತೌತನ ಕಾವ್ಯಕೌತುಕ, ಮಹಿಮಾಭಟ್ಟನ ವೃತ್ತಿವಿವೇಕ, ಕುಂತಕನ ವಕ್ರೋಕ್ತಿಜೀವಿತ ಮುಂತಾದ ಗ್ರಂಥಗಳಲ್ಲಿ ಕಲಾವಿಮರ್ಶೆ ಕಂಡುಬರುತ್ತದೆ.

ಭಾರತೀಯ ಸಾಹಿತ್ಯ ಕ್ಷೇತ್ರದಲ್ಲಿ ಶಿಲ್ಪಶಾಸ್ತ್ರಗಳು ವಿಶಿಷ್ಟವಾಗಿದ್ದು ಹೆಚ್ಚಿನ ಕಲಾ ಅಂಶಗಳನ್ನು ಒಳಗೊಂಡಿವೆ. ಅಲ್ಲದೆ ಕೆಲವು ವಿಶ್ವಕೋಶ ಮಾದರಿಯ ಗ್ರಂಥಗಳು ಚಿತ್ರಕಲೆ ಮತ್ತು ಶಿಲ್ಪಕಲೆಯ ಬಹುಮುಖ್ಯ ಸಂಗತಿಗಳನ್ನು ತಿಳಿಸಿಕೊಡುತ್ತವೆ. ವಿಷ್ಣುಧರ್ಮೋತ್ತರ ಪುರಾಣ, ಸಮರಾಂಗಣ ಸೂತ್ರಧಾರ, ಕಾಶ್ಯಪ ಶಿಲ್ಪಶಾಸ್ತ್ರ, ಶಿಲ್ಪರತ್ನ, ಶಿವತತ್ವರತ್ನಾಕರ, ಮಾನಸೋಲ್ಲಾಸ ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದು.

ಕ್ರಿ. ಶ. ೧೦ನೇ ಶತಮಾನ ಮತ್ತು ನಂತರದ ಕಾಲದಲ್ಲಿ ಭಾರತೀಯ ಸಾಹಿತ್ಯ ಕ್ಷೇತ್ರದಲ್ಲಿ ಅನೇಕ ಕೃತಿಗಳು ರಚನೆಯಾಗಿದ್ದು, ಸಾಂದರ್ಭಿಕವಾಗಿ ಕಲೆಯ ಅಂಶಗಳನ್ನು ಒಳಗೊಂಡಿವೆ. ಶಂಕರಾಚಾರ್ಯರ ಸೌಂದರ್ಯಲಹರಿ, ಶ್ರೀಹರ್ಷನ ನೈಷಧಕಾವ್ಯ, ಬಾಲಚಂದ್ರಸೂರಿಯ ವಸಂತವಿಲಾಸ, ಸೋಮೇಶ್ವರನ ಸುರತೋತ್ಸವ, ವೀರನಂದಿಯ ಚಂದ್ರಪ್ರಭಚರಿತೆ, ನಯಚಂದ್ರನ ಹಮ್ಮೀರಕಾವ್ಯ, ಜಯದೇವನ ಚಂದ್ರಾಲೋಕ, ವಾಗ್ಭಟನ ವಾಗ್ಭಟಲಂಕಾರ, ಅರುಣದತ್ತನ ಸರ್ವಾಂಗಸುಂದರಿ ಮುಂತಾದವುಗಳು ಚಿತ್ರಕಲೆಯ ಸಾಂದರ್ಭಿಕ ವಿವರ ಒಳಗೊಂಡಿವೆ.

ಇಂತಹ ಅನೇಕ ಕೃತಿಗಳಲ್ಲದೇ ಭಾರತದಲ್ಲಿ ಆಳಿದ ಮುಸ್ಲಿಂ ಅರಸರು ಅದರಲ್ಲೂ ವಿಶೇಷವಾಗಿ ಮೊಘಲರು ರಚಿಸಿದ ಸಾಹಿತ್ಯ ಕೃತಿಗಳಲ್ಲಿ ಚಿತ್ರಕಲೆಯ ಹೆಚ್ಚಿನ ಸಂಗತಿಗಳು ಸಾಂದರ್ಭಿಕವಾಗಿ ಅಭಿವ್ಯಕ್ತಗೊಂಡಿವೆ. ಮಾತ್ರವಲ್ಲದೆ ಚಿತ್ರಕಲಾಕೃತಿಯ ಸಂಪುಟಗಳನ್ನು, ಹಸ್ತಪ್ರತಿಚಿತ್ರಕಲೆಯ ಕೃತಿಗಳನ್ನು ಇವರ ಕಾಲದಲ್ಲಿ ರಚಿಸಲಾಯಿತು.

ಬ್ರಿಟೀಷರ ಆಗಮನದೊಂದಿಗೆ ಭಾರತೀಯ ಚಿತ್ರಕಲಾ ಇತಿಹಾಸದ ರೂಪುರೇಷೆಗಳು ಬದಲಾದವು. ಕಲಾಶಿಕ್ಷಣಕ್ಕಾಗಿ ಪ್ರತ್ಯೇಕ ಕಲಾಶಾಲೆಗಳು ಆರಂಭಗೊಂಡಂತೆ ಸ್ಟೆಲ್ಲಾಕಾಮ್ರಿಶ್ಚ್, ಇ. ಬಿ. ಹ್ಯಾವೆಲ್, ಪರ್ಶಿಬ್ರೌನ್, ಆನಂದಕುಮಾರಸ್ವಾಮಿಯವರಂತಹ ವಿದ್ವಾಂಸರು ಪ್ರತ್ಯೇಕವಾದ ಕಲಾಸಾಹಿತ್ಯ

ಕೃತಿಗಳನ್ನು ರಚಿಸತೊಡಗಿದರು. ಹೀಗೆ ಭಾರತೀಯ ಚಿತ್ರಕಲಾ ಸಾಹಿತ್ಯವು ಪ್ರಾಚೀನ ಕಾಲದಿಂದಲೆ ತನ್ನ ಐತಿಹಾಸಿಕ ಘಟ್ಟಗಳನ್ನು ಸ್ಪಷ್ಟಗೊಳಿಸಿಕೊಳ್ಳುತ್ತ ಬಂದಿರುವುದನ್ನು ನೋಡಬಹುದಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಐತಿಹಾಸಿಕ ಹಿನ್ನೆಲೆಯನ್ನು ಈ ಕೆಳಗಿನಂತೆ ವಿವೇಚಿಸಬಹುದು.

ಜಗತ್ತಿನ ಯಾವುದೇ ಭಾಷೆ ಇಲ್ಲವೆ ಸಾಹಿತ್ಯ ಚರಿತ್ರೆಯಲ್ಲಿ ಚಿತ್ರಕಲೆಯು ಮಾನವನ ಮೊದಲ ಸಂಪರ್ಕ ಸಾಧನವಾಗಿರುವುದುನ್ನು ಗುರುತಿಸಲಾಗಿದೆ. ಈ ಹಂತದಲ್ಲಿ ಚಿತ್ರಕಲೆಯೇ ಭಾಷೆಯ ಅವಶ್ಯಕತೆಯನ್ನು ಪೂರೈಸುತ್ತಿದ್ದ ಬಗ್ಗೆ ವಿದ್ವಾಂಸರು ಚರ್ಚಿಸಿದ ವಿವರಗಳು[೨] ಕಂಡು ಬರುತ್ತವೆ. ಈ ಹಿನ್ನೆಲೆಯಲ್ಲಿ ಆದಿಮಾನವನ ಕಾಲದ ಚಿತ್ರಕಲೆಯನ್ನು ಒಂದು ರೀತಿಯಲ್ಲಿ ಚಿತ್ರರೂಪದ ದೃಶ್ಯ ಸಾಹಿತ್ಯ ಎಂಬುದಾಗಿಯೂ ಪರಿಗಣಿಸಬಹುದಾಗಿದೆ. ಹಾಗಾಗಿ ಪ್ರಾಗೈತಿಹಾಸ ಕಾಲದ ಚಿತ್ರಗಳಿಂದಲೆ ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಆರಂಭವನ್ನು ಅನಾವರಣಗೊಳಿಸಬಹುದಾಗಿದೆ.

ಒಟ್ಟಿನಲ್ಲಿ ಇವು ಸಮುದಾಯದ ಅನುಭವ ಮತ್ತು ನಂಬಿಕೆಗಳನ್ನು ಸಂಕೇತಗಳ ಮೂಲಕ ಹಂಚಿಕೊಳ್ಳುವ ಕಲಾಕೃತಿಗಳಾಗಿರುತ್ತವೆ. ಹಾಗೆಯೆ ಕಲೆ ಮತ್ತು ಧರ್ಮಗಳಲ್ಲಿ ಪ್ರತ್ಯೇಕತೆಯನ್ನು ಕಾಣದಂತಹ ಸಂಬಂಧವೂ ಇವುಗಳಲ್ಲಿದೆ. ಆದಿಮಾನವ ಶೈಲಿಯ ಪ್ರಭಾವವಿದ್ದರೂ ಅಲ್ಲಿ ಭಾವನೆಗಳ ಸಂಕೇತ ವಿಜ್ರಂಭಿಸಿದೆ. ಹೀಗಾಗಿ ಇವು ಚಿತ್ರಕಲಾವಿದರ ಸೃಜನಶೀಲತೆಯ ಬೆಳವಣಿಗೆಯ ಮೊದಲ ಹೆಜ್ಜೆಗಳಾಗಿವೆಯೆಂದರೆ[೩] ತಪ್ಪಲ್ಲ.

ಕರ್ನಾಟಕದಲ್ಲಿ ಕಾಲಮಾನದಿಂದ ಅತ್ಯಂತ ಪುರಾತನ ಚಿತ್ರರಚನೆಗಳು ಬಾದಾಮಿ ಬಳಿಯ ಅರೇಗುಡ್ಡ ಮತ್ತು ಹಿರೇಗುಡ್ಡ ಎಂಬ ಸ್ಥಳದಲ್ಲಿ ಕಂಡುಬಂದಿವೆ.[೩] ಇದೇ ಅವಧಿಯ ರಚನೆಗಳು ಎಂದು ಪರಿಗಣಿಸಲಾಗಿರುವ ಕೆಲವು ಚಿತ್ರಗಳು ರಾಮದುರ್ಗ ಬಳಿಯ ಮೇಗುಂಡೇಶ್ವರ ಕೊಳ್ಳದಲ್ಲಿಯೂ ಪತ್ತೆಯಾಗಿವೆ. ಇವು ಹಳೇ ಶಿಲಾಯುಗ ಕಾಲದ ಕ್ರಿ.ಪೂ.೪೦,೦೦೦ (ನಲವತ್ತು ಸಾವಿರ ) ವರ್ಷಗಳಷ್ಟು ಹಿಂದಿನವುಗಳಾಗಿವೆ[೪] ಎಂದು ಅಭಿಪ್ರಾಯ ಪಡಲಾಗಿದೆ. ಈ ಚಿತ್ರಗಳಲ್ಲಿ ಅವರ ಜನಜೀವನದ ವಿವಿಧ ಘಟನಾವಳಿಗಳು ಅಭಿವ್ಯಕ್ತಗೊಂಡಿವೆ. ಬೇಟೆಯಾಡುವುದು, ಮಾಂಸ ಬೇಯಿಸಿ ತಿನ್ನುವುದು, ಮುಖವಾಡ ಧರಿಸಿ ಕುಣಿಯುವುದು, ತಾಂತ್ರಿಕ ವಿಧಾನಗಳು ಹೀಗೆ ಹಲವಾರು ವಿವರಗಳು ಚಿತ್ರಣಗೊಂಡಿವೆ. ಅಕ್ಷರ ರೂಪದ ಸಾಹಿತ್ಯವು ನಿರ್ಮಾಣಗೊಂಡಿರದ ಅಂದಿನ ದಿನಗಳಲ್ಲಿ ಚಿತ್ರಗಳ ಮೂಲಕ ತಮ್ಮ ವಿಚಾರಗಳನ್ನು ಈ ಜನರು ದಾಖಲಿಸಿದ್ದಾರೆ. ಸ್ವಾಭಾವಿಕ ಗುಹೆ ಮತ್ತು ಶಿಲಾಶ್ರಯ ತಾಣಗಳಲ್ಲಿ ರಚನೆಯಾದ ಈ ಚಿತ್ರರೂಪದ ದೃಶ್ಯ ಸಾಹಿತ್ಯ ಇಂದಿಗೂ ಕಂಡುಬರುತ್ತದೆ.

ನಂತರದ ನೂತನ ಶಿಲಾಯುಗ ಮತ್ತು ಶಿಲಾ ತಾಮ್ರಯುಗ ಕಾಲದ ಚಿತ್ರಗಳು ಹಿರೇಬೆನಕಲ್, ಅಂಜನಹಳ್ಳಿ, ಪಿಕ್ಕಿಹಾಳ, ತೆಕ್ಕಲಕೋಟೆ, ಹಂಪಿ, ಹಳಕುಂಡಿ, ಬಂಡಿಹರ್ಲಾಪೂರ, ಬೆಳಕಲ್, ಕಲ್ಲೂರು, ಕುಳ್ಳೊಳ್ಳಿ, ಚಿಕ್ಕರಾಮಪೂರಗಳಲ್ಲಿ ಕಂಡು ಬರುತ್ತಿದ್ದು, ಆ ಕಾಲದ ಚಿತ್ರ ಸಾಹಿತ್ಯದ ಮಾದರಿಯನ್ನು ಪ್ರತಿಬಿಂಬಿಸುತ್ತವೆ.

ಈ ಚಿತ್ರಗಳಲ್ಲಿ ಆ ಕಾಲದ ವಿವಿಧ ರೀತಿಯ ಪ್ರಾಣಿಗಳಾದ ಕಾಡೆಮ್ಮೆ. ಕಾಡುಕೋಣ, ಕಾಡುಹಂದಿ, ಗೂಳಿ, ಜಿಂಕೆ, ಆನೆ, ಮೊಸಳೆ, ಮಂಗ, ನರಿ ಮುಂತಾದವುಗಳು ಕಂಡುಬರುತ್ತವೆ.[೫]

೨. ಎಸ್.ಕೆ.ಪಾಂಡೇ : ಇಂಡಿಯನ್ ರಾಕ್ ಆರ್ಟ: ಪುಟ-೨೭೫

೩. ಡಾ.ಎಸ್.ಸಿ.ಪಾಟೀಲ : ಉತ್ತರ ಕರ್ನಾಟಕದ ಜನಪದ ಚಿತ್ರಕಲೆ : ಪುಟ-೪೪

೪. ಡಾ.ಅ.ಸುಂದರ: ಕರ್ನಾಟಕ ಪ್ರಾಗೈತಿಹಾಸ ಕಾಲದ ಕಲೆ : ಪುಟ-೨೨

೫. ಡಾ.ಅ.ಸುಂದರ: ಕರ್ನಾಟಕದ ಪ್ರಾಗೈತಿಹಾಸ ಕಾಲದ ಕಲೆ :ಪುಟ-೧೪

ಅಲ್ಲದೆ ಕುಣಿತ, ಪೂಜೆ. ಸಂಭೋಗ ದೃಶ್ಯಗಳು, ತಾಂತ್ರಿಕ ಆಚರಣೆಯ ರೇಖಾ ವಿಧಾನಗಳು ಇಲ್ಲಿವೆ. ಈ ಚಿತ್ರಗಳು ಕ್ರಿ.ಪೂ. ೨೦೦೦ (ಎರಡು ಸಾವಿರ) ವರ್ಷಗಳ ಪ್ರಾಚೀನತೆಯನ್ನು ಹೊಂದಿವೆ ಎಂದು ಹೇಳಲಾಗುತ್ತಿದೆ. ತಮ್ಮ ಅಭಿಪ್ರಾಯಗಳನ್ನು ಇನ್ನೊಬ್ಬರಿಗೆ ತಿಳಿಸಲು ಸಂಬಂಧಿಸಿದ ಘಟನಾವಳಿಯ ಚಿತ್ರ ಬರೆದು ತೋರಿಸುವ ಪದ್ಧತಿ ಇವರದಾಗಿರಬಹುದು. ಇಲ್ಲವೆ ಸಂಪರ್ಕ ಸಾಧನವೇ ಚಿತ್ರಭಾಷೆಯಾಗಿದ್ದರಿಂದ ಅವರ ಕಾಲದ ಚಿತ್ರಭಾಷೆಯ ಶಾಸನಗಳೆಂದು ಇವುಗಳನ್ನು ಪರಿಗಣಿಸಬಹುದು.

ಕ್ರಿಪೂ. ೧೦೦೦ (ಒಂದುಸಾವಿರ) ವರ್ಷಗಳ ಹಿಂದಿನ ಚಿತ್ರಗಳು ಐಹೊಳೆ, ಕೊಪ್ಪಳ, ಬಿಳಿಭಾವಿ, ಮಲ್ಲಾಪೂರ, ಚಿತ್ರದುರ್ಗ ಪ್ರದೇಶಗಳಲ್ಲಿ ರಚನೆಯಾಗಿದ್ದು,[೬] ಇವು ಕೂಡಾ ಅವರ ನಿತ್ಯ ಬದುಕಿನ ಘಟನಾವಳಿಗಳು, ಅವರ ಸುತ್ತಲಿನ ಪ್ರಾಣಿಗಳು, ನಿಸರ್ಗ, ನಂಬಿಕೆ, ಆಚರಣೆಗಳಿಗೆ ಸಂಬಂಧಿಸಿವೆ. ಪ್ರಾಗೈತಿಹಾಸಿಕ ಕಾಲದ ಈ ಚಿತ್ರರಚನೆಗಳು ಮುಖ್ಯವಾಗಿ ಎರಡು ಸ್ವರೂಪದಲ್ಲಿ ಕಂಡುಬರುತ್ತವೆ.[೭] ೧. ಬಯಲು ಬಂಡೆಯ ಮೇಲಿನ ಶಿಲಾಶ್ರಯವ ಚಿತ್ರಗಳು ೨. ಗವಿಯ ಒಳಗೆ ಚಿತ್ರಿಸಿದ ಶಿಲಾಶ್ರಯದ ವರ್ಣಚಿತ್ರಗಳು. ಈ ಚಿತ್ರಗಳು ಅವರ ಅಭಿವ್ಯಕ್ತಿಯ ನೇರ ನಿರೂಪಣೆಯಾಗಿದ್ದು, ತಮಗೆ ಅನಿಸಿದ್ದನ್ನು ಚಿತ್ರಭಾಷೆಯ ಮೂಲಕ ಕಲ್ಲಿನ ಮೇಲೆ ಚಿತ್ರಿಸಿದ್ದಾರೆ. ಇದು ಆರಂಭಿಕ ಹಂತದ ಸಾಹಿತ್ಯ ಸ್ವರೂಪವಾಗಿದ್ದು ಚಿತ್ರರೂಪದಲ್ಲಿ ಅಭಿವ್ಯಕ್ತಗೊಂಡಿದೆ.

ಕ್ರಿಪೂ. ೫೦೦ (ಐದುನೂರು) ಹೊತ್ತಿಗೆ ದಕ್ಷಿಣ ಭಾರತದಲ್ಲಿ ಪಂಚ ದ್ರಾವಿಡ ಭಾಷೆಗಳು ಅಸ್ತಿತ್ವ ಪಡೆದುಕೊಂಡ ಬಗ್ಗೆ ತಿಳಿದು ಬರುತ್ತದೆ. ಇದರಲ್ಲಿ ಕನ್ನಡ ಭಾಷೆಯೂ ಒಂದಾಗಿದೆ. ಈ ಪಂಚ ದ್ರಾವಿಡ ಭಾಷೆಗಳು ಸಿಂಧೂ ಸಂಸ್ಕೃತಿಯಲ್ಲಿ ಪ್ರಚಲಿತದಲ್ಲಿದ್ದ ಆದಿದ್ರಾವಿಡ ಭಾಷೆಯಿಂದ ರೂಪುಗೊಂಡಿದ್ದು, ಸಿಂಧೂ ಸಂಸ್ಕೃತಿಯ ಭಾಷೆಯೂ ಚಿತ್ರರೂಪದಲ್ಲಿರುವುದನ್ನು[೮] ವಿದ್ವಾಂಸರು ವಿಶೇಷವಾಗಿ ಗುರುತಿಸಿದ್ದಾರೆ.

ಕ್ರಿಪೂ. ೫೦೦ ಸುಮಾರಿಗೆ ಕನ್ನಡ ಭಾಷೆಯು ರೂಪುಗೊಳ್ಳಲು ತೊಡಗಿಕೊಂಡರು. ಕ್ರಿ.ಶ. ಆರಂಭದ ಹಂತದವರೆಗೂ ಸ್ಪಷ್ಟವಾದ ಯಾವುದೇ ಬಗೆಯ ಬರವಣಿಗೆಗಳು ಕಂಡುಬಂದಿಲ್ಲ. ಈಗಿನ ಮಟ್ಟಿಗೆ ಅಶೋಕನ ಶಾಸನಗಳೆ ಈ ನಾಡಿನ ಪ್ರಥಮ ಬರವಣಿಗೆಗಳಾಗಿವೆ.[೯] ಇವುಗಳ ಕಾಲ ಕ್ರಿಪೂ.೩೦೦ (ಮೂರುನೂರು) ಆಗಿದ್ದು, ಇಲ್ಲಿಂದ ಮುಂದೆ. ಕ್ರಿ.ಶ ೪೫೦ ವರೆಗಿನ ಹಲ್ಮಿಡಿ ಶಾಸನ ಹುಟ್ಟುವವರೆಗಿನ ಸುಮಾರು ೭೫೦ ವರ್ಷಗಳ ಅವಧಿಯಲ್ಲಿ ಕರ್ನಾಟಕದಲ್ಲಿ ಸುಮಾರು ೧೩ ಶಾಸನಗಳು ಲಭ್ಯವಾಗಿದ್ದು, ಇವು ಪ್ರಾಕೃತ ಭಾಷೆಯಲ್ಲಿವೆ.

ಕ್ರಿ. ಶ. ಪೂರ್ವದಲ್ಲಿಯೇ ದ್ರಾವಿಡದಿಂದ ಬೇರ್ಪಟ್ಟ ಕನ್ನಡ ಭಾಷೆಯು ತನ್ನದೆ ಆದ ವಿಶಿಷ್ಟ ಭಾಷೆ ಮತ್ತು ಲಿಪಿಗಳ ವಿಕಾಸಕ್ಕೆ ತೊಡಗಿ ಕ್ರಿ.ಶ. ೨ನೇಯ ಶತಮಾನದ ಹೊತ್ತಿಗೆ ಸ್ವತಂತ್ರವಾದ ಕನ್ನಡ ಲಿಪಿಯನ್ನು ಸೃಷ್ಟಿಸಿಕೊಂಡು ತನ್ನ ನುಡಿ, ಸಾಹಿತ್ಯಗಳನ್ನು ಅಭಿವೃದ್ಧಿ ಪಡಿಸಿಕೊಳ್ಳುತ್ತ ಬಂದಿದೆ ಎನ್ನುವ ಅಭಿಪ್ರಾಯವಿದ್ದರೂ[೧೦] ಆ ಕಾಲ ಯಾವುದೆ ಗ್ರಂಥಸ್ತ ಬರವಣಿಗೆಗಳು ಕಂಡುಬಂದಿಲ್ಲ.

---

೬. ಡಾ.ಅ.ಸುಂದರ : ಕರ್ನಾಟಕದ ಪ್ರಾಗೈತಿಹಾಸ ಕಾಲದ ಕಲೆ :ಪುಟ-೧೫

೭. ಡಾ.ಎಸ್.ಸಿ.ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ : ಪುಟ-೩೧

೮. ಡಾ.ಬಿ.ಕೆ.ಹಿರೇಮಠ : ಸೃಷ್ಟಿ : ಪುಟ-೯೯

೯. ಡಾ.ಎಂ.ಎಂ.ಕಲಬುರ್ಗಿ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂ-೧) : ಪುಟ-೨

೧೦. ಡಾ.ಬಿ.ಕೆ.ಹಿರೇಮಠ : ಸೃಷ್ಟಿ : ಪುಟ-೧೦೨

ಆದರೆ ಆ ಕಾಲಾವಧಿಯಲ್ಲಿ ಕನ್ನಡದಲ್ಲಿ ಪ್ರಬಲವಾದ ಸಾಹಿತ್ಯವಲ್ಲದಿದ್ದರೂ ಸಾಮಾನ್ಯ ಸಾಹಿತ್ಯವಾದರೂ ಪ್ರಚಲಿತದಲ್ಲಿರಬೇಕು ಎಂಬುದಕ್ಕೆ ಅನೇಕ ಸಾಕ್ಷಾಧಾರಗಳು[೧೧] ಬೇರೆ ಮೂಲಗಳಿಂದ ಲಭ್ಯವಾಗುತ್ತವೆ.

ಕ್ರಿ. ಶ. ೧ನೇ ಶತಮಾನದಲ್ಲಿ ರಚನೆಯಾದ ಜೈನ ಸಾಹಿತ್ಯ ಕೃತಿಗಳಾದ ಪನ್ನಾವಣಾಸೂತ್ರ ಮತ್ತು ಸಮರಾಂಗಣ ಸೂತ್ರಗಳಲ್ಲಿ ಆಗ ಅಸ್ತಿತ್ವದಲ್ಲಿದ್ದ ಹದಿನೆಂಟು ವಿಧವಾದ ಲಿಪಿಗಳನ್ನು ಹೆಸರಿಸಲಾಗಿದೆ. ಅವುಗಳಲ್ಲಿ ಪಂಚ ದ್ರಾವಿಡ ಭಾಷೆಗಳು ಅದರಲ್ಲೊಂದಾದ ಕನ್ನಡವೂ ಸೇರಿದೆ. ಇದಲ್ಲದೆ ಕ್ರಿ.ಶ. ಆರಂಭ ಕಾಲದಲ್ಲಿ ಬೌದ್ಧರು ಕನ್ನಡ ಭಾಷೆಯಲ್ಲಿ ಧಾರ್ಮಿಕ ಸಾಹಿತ್ಯ ರಚನೆ ಮಾಡಿದ್ದು, ಬೌದ್ಧ ಮತದ ನಾಶದೊಂದಿಗೆ ಈ ಸಾಹಿತ್ಯವು ನಾಶವಾಗಿರಬೇಕೆಂಬ ಅಭಿಪ್ರಾಯವಿದೆ.[೧೨] ಅದರಂತೆ ಕವಿರಾಜಮಾರ್ಗದ ಪೂರ್ವದ ಕವಿಗಳಾದ ವಿಮಲೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತ ಇವರ ಹೆಸರುಗಳಲ್ಲಿ ಬೌದ್ಧ ಮತದ ಸೊಗಡು ಕಂಡು ಬರುವುದೆಂಬ ಮಾತಿನಿಂದಲೂ ಈ ವಿಚಾರಕ್ಕೆ ಇನ್ನಷ್ಟು ಪುಷ್ಟಿ ದೊರಕುತ್ತದೆ.[೧೩] ಈ ಸಂಗತಿಗಳನ್ನು ಆಧಾರವಾಗಿಟ್ಟುಕೊಂಡು ಕ್ರಿ. ಶ. ೧ನೇ ಶತಮಾನದಲ್ಲಿ ಕನ್ನಡ ಸಾಹಿತ್ಯ ರಚನೆಯ ಪ್ರಕ್ರಿಯೆ ಆರಂಭಗೊಂಡಿದ್ದರೂ ಹೆಚ್ಚಾಗಿ ಬೌದ್ಧ ಮತದ ಧಾರ್ಮಿಕ ವಿಚಾರಗಳು, ಧಾರ್ಮಿಕ ತತ್ವ ಮತ್ತು ಉಪದೇಶಗಳನ್ನು ಜನರಿಗೆ ತಿಳಿಸುವುದಕ್ಕಾಗಿ ಚಿತ್ರಕಲೆಯನ್ನು ಪ್ರಮುಖವಾಗಿ ಬಳಸಿಕೊಂಡಿರುವದನ್ನು ನೋಡಿದಾಗ[೧೪] ಈ ಕಾಲದ ಬೌದ್ಧಧಾರ್ಮಿಕ ಸಾಹಿತ್ಯದಲ್ಲಿ ಸಾಂದರ್ಭಿಕವಾಗಿಯಾದರೂ ಚಿತ್ರಕಲೆಯ ಉಲ್ಲೇಖಗಳು ಇದ್ದಿರಬಹುದಾಗಿದೆ. ಹಾಗಾಗಿ ಒಂದು ರೀತಿಯ ಚಿತ್ರಕಲಾ ಸಾಹಿತ್ಯ ಕರ್ನಾಟಕದಲ್ಲಿ ಕ್ರಿ. ಶ. ಆರಂಭದ ಕಾಲದಲ್ಲಿ ರಚನೆಯಾಗಿದ್ದ ಬಗ್ಗೆ ಇಂಥ ಸಂಗತಿಗಳಿಂದ ತಿಳಿದುಬರುತ್ತದೆ. ಈ ವಾದಕ್ಕೆ ಇನ್ನೂ ಕೆಲವು ಮೂಲಗಳಿಂದ ಪುಷ್ಟಿಕೊಡಬಹುದು. ಕ್ರಿ. ಶ. ೧ನೇ ಶತಮಾನದ ಹೊತ್ತಿಗಾಗಲೇ ಆಳ್ವಿಕೆ ಪ್ರಾರಂಭಿಸಿದ್ದ ಶಾತವಾಹನರು ಕನ್ನಡ ಅರಸರೆಂದು ತಜ್ಞರು ಕರೆದಿದ್ದಾರೆ. ಶಾತವಾಹನರ ಕಾಲದಲ್ಲಿ ಅನೇಕ ಸಾಹಿತ್ಯ ಚಟುವಟಿಕೆಗಳು ನಡೆದಿವೆ. ಹಾಲರಾಜನು 'ಗಾಥಾಸಪ್ತಶತಿ' ಎಂಬ ಸಾಹಿತ್ಯ ಕೃತಿಯನ್ನು ರಚಿಸಿದ್ದು,[೧೫] ಅದರಲ್ಲಿ ಸಾಂದರ್ಭಿಕ ಚಿತ್ರಕಲಾ ಸಂಗತಿಗಳು ಉಲ್ಲೇಖಗೊಂಡಿರಬಹುದಾಗಿದೆ. ಮಾತ್ರವಲ್ಲದೇ ಅಜಂತಾ ಗುಹಾಲಯಗಳಲ್ಲಿ ಆರಂಭಿಕ ಹಂತದ ಚಿತ್ರಗಳನ್ನು ಇವರ ಕಾಲದಲ್ಲಿಯೇ ರಚನೆ ಮಾಡಲಾಗಿದೆ. ಈ ಕೃತಿ ರಚನೆಗಳು ಶಾಸ್ತ್ರೋಕ್ತ ವಿಧಿವಿಧಾನಗಳ ಹಿನ್ನೆಲೆಯಲ್ಲಿ ರಚನೆಗೊಂಡಿವೆ. ಇಷ್ಟು ಉತ್ತಮಮಟ್ಟದ ಚಿತ್ರಗಳು ಆಗ ರಚನೆಯಾಗಬೇಕಾದರೆ ಅದರ ಕುರಿತಾದ ಶಾಸ್ತ್ರಗ್ರಂಥಗಳು ಇರಲೇಬೇಕು. ಆದರೆ ಕಾಲಮಾನದ ಪ್ರಭಾವದಿಂದ ಈ ಚಿತ್ರಕಲಾ ಸಾಹಿತ್ಯಕೃತಿಗಳು ನಾಶವಾಗಿ ನಮಗೆ ದೊರಕದೇ ಹೋಗಿವೆ ಎಂದು ಹೇಳಬಹುದು. ಈ ಸಂದರ್ಭದ ಸಾಹಿತ್ಯ ಮತ್ತು ಅಜಂತಾ ಒಳಗೊಂಡಂತೆ ರಚನೆಯಾದ ಚಿತ್ರಗಳು ಬೌದ್ಧಮತಕ್ಕೆ ಸಂಬಂಧಿಸಿವೆ.[೧೬] ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಕ್ರಿ. ಶ. ೧ನೇ ಶತಮಾನದ ಹೊತ್ತಿಗೆ ಕರ್ನಾಟದಲ್ಲಿ ಚಿತ್ರಕಲಾ ಸಾಹಿತ್ಯವು ಹೆಚ್ಚಾಗಿ ಬೌದ್ಧಮತದ ಪ್ರೇರಣೆಗಳಿಗೆ ಒಳಗಾಗಿದ್ದು ತಿಳಿದುಬರುತ್ತದೆ.

---

೧೧. ಡಾ.ಬಿ.ಕೆ.ಹಿರೇಮಠ: ಸೃಷ್ಟಿ : ಪುಟ-೧೦೪.
೧೨. ಡಾ.ಬಿ.ಕೆ.ಹಿರೇಮಠ : ಸೃಷ್ಟಿ : ಪುಟ-೧೦೩
೧೩. ಡಾ.ಟಿ.ಎಸ್.ವೆಂಕಣ್ಣಯ್ಯ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಪುಟ-೪೧
೧೪. ಡಾ.ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಪುಟ-೯೨
೧೫. ಡಾ.ಎಚ್.ತಿಪ್ಪೇರುದ್ರಸ್ವಾಮಿ: ಕರ್ನಾಟಕ ಸಂಸ್ಕೃತಿ ಸಮೀಕ್ಷೆ : ಪುಟ-೮೧
೧೬. ಡಾ.ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಪುಟ-೯೫

ಕ್ರಿ ಶ. ೨ನೇ ಶತಮಾನದ ಕರ್ನಾಟಕ ಚಿತ್ರಕಲಾ ಸಾಹಿತ್ಯವನ್ನು ಪ್ರತ್ಯೇಕವಾಗಿ ವಿವೇಚಿಸಲು ಸಾಕಷ್ಟು ಆಧಾರಗಳು ಲಭ್ಯವಿಲ್ಲದ ಕಾರಣ ಸಾಮಾನ್ಯ ಸಾಹಿತ್ಯದ ಹಿನ್ನೆಲೆಯಿಂದಲೇ ಕಲಾಸಾಹಿತ್ಯದ ಅಂಶಗಳನ್ನು ಹೆಕ್ಕಿ ತೆಗೆಯಬೇಕಾಗಿದೆ. ಹಲ್ಮಿಡಿ ಶಾಸನಕ್ಕಿಂತ ಪೂರ್ವದ ಕೆಲವು ಶಾಸನಗಳನ್ನು ಪತ್ತೆ ಮಾಡಲಾಗಿದ್ದು ಇವು ಕ್ರಿ.ಶ. ೨ನೇ ಶತಮಾನಕ್ಕೆ ಸೇರುತ್ತವೆ. ಇವು ಮೌಲಿಕಸಾಹಿತ್ಯ ಅಂಶಗಳಿಂದ ಕೂಡಿರದೆ ಸಾಮಾನ್ಯ ಬರವಣಿಗೆಗಳಾಗಿವೆ ಎಂದು ವಿದ್ವಾಂಸರು ತರ್ಕಿಸಿದ್ದಾರೆ.[೧೭] ಆದರೆ ಸಾಹಿತ್ಯ ಮೌಲ್ಯಗಳು ಇವುಗಳಲ್ಲಿ ಇರದಿದ್ದರೂ ಸಾಹಿತ್ಯ ಚರಿತ್ರೆಯ ಐತಿಹಾಸಿಕ ಹಿನ್ನೆಲೆಯಿಂದ ಇವು ಮಹತ್ವ ಪಡೆದುಕೊಳ್ಳುತ್ತವೆ.

ಕ್ರಿ.ಶ. ೨ನೇ ಶತಮಾನದಲ್ಲಿ ರಚನೆಗೊಂಡ ಬೌದ್ಧ ಸಾಹಿತ್ಯ ಕೃತಿ ಲಲಿತ ವಿಸ್ತಾರವು ಅನೇಕ ಭಾಷೆ ಮತ್ತು ಲಿಪಿಗಳ ಬಗ್ಗೆ ವಿವರಿಸಿದ್ದು, ಇದರಲ್ಲಿ ಕನ್ನಡ ಲಿಪಿಯ ಕುರಿತಾಗಿಯೂ ಮಾಹಿತಿ ಇದೆ. ಇದರಲ್ಲಿ ಕನ್ನಡ ಲಿಪಿಯನ್ನು 'ಕನಾರಿ' ಲಿಪಿ ಎಂದು ಕರೆಯಲಾಗಿದ್ದು,[೧೮] ಅದರ ಬಗ್ಗೆ ಸ್ಥೂಲ ಮಾಹಿತಿ ಕೊಡಲಾಗಿದೆ. ಇದರಿಂದಲೂ ಆ ಕಾಲದ ಕರ್ನಾಟಕ ಸಾಹಿತ್ಯದ ಸಂಗತಿ ತಿಳಿದು ಬರುತ್ತದೆ.

ಕ್ರಿ.ಶ. ೩ನೇ ಶತಮಾನದ ಶಾತವಾಹನರ ಕೆಲವು ಶಾಸನಗಳು ಲಭ್ಯವಾಗಿದ್ದು,[೧೯] ಇವುಗಳ ಬರಹಗಳಿಂದ ಆ ಕಾಲದ ಸಾಹಿತ್ಯವನ್ನು ತಿಳಿದುಕೊಳ್ಳಬಹುದಾಗಿದೆ. ಇವುಗಳೆಲ್ಲ ಸಾಮಾನ್ಯವಾಗಿ ರಾಜರ ವಂಶಾವಳಿ ಮತ್ತು ದಿಗ್ವಿಜಯಗಳನ್ನು ತಿಳಿಸುವ ಬರಹಗಳಾಗಿದ್ದು, ಕಲಾ ಸಾಹಿತ್ಯದ ಅಂಶಗಳನ್ನು ಪೂರಕವಾಗಿ ಇಲ್ಲವೆ ಉಪಮೆಯ ರೀತಿಯಲ್ಲಿ ಗುರುತಿಸಬಹುದಾಗಿದೆ.

ಕ್ರಿ.ಶ. ೩ನೇ ಶತಮಾನದಲ್ಲಿ ಅಜಂತದ ಕೆಲವು ಗುಹೆಗಳಲ್ಲಿ ಶಾತವಾಹನರ ಕಾಲದ ಚಿತ್ರಗಳು ರಚನೆಯಾಗಿದ್ದು ಮಾತ್ರವಲ್ಲದೆ ಕರ್ನಾಟಕದಲ್ಲಿ ಇದೇ ಕಾಲದ ಚಿತ್ರಮಯ ಫಲಕ ದೊರಕಿದ್ದು, ಇದರಿಂದ ಆ ಕಾಲದ ಕಲಾ ಸಾಹಿತ್ಯದ ಮಟ್ಟವನ್ನು ಗುರುತಿಸಬಹುದಾಗಿದೆ.

ಕ್ರಿ.ಶ. ೪ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಕದಂಬರ ಆಳ್ವಿಕೆ ಪ್ರಾರಂಭಗೊಂಡ ನಂತರ ಶಾಸನ ಮತ್ತು ಇತರ ಸಾಹಿತ್ಯ ರಚನೆ ಹೆಚ್ಚಾದಂತೆ ತೋರುತ್ತದೆ. ಇವರ ಕಾಲದ ಸಾಹಿತ್ಯ ಕೃತಿಗಳು ಹೆಚ್ಚಾಗಿ ಲಭ್ಯವಾಗಿಲ್ಲ. ಆದರೆ ಅವರ ಕಾಲದ ಕಲಾ ಚಟುವಟಿಕೆಗಳ ಬಗ್ಗೆ ಆ ಕಾಲದ ಶಾಸನ ಸಾಹಿತ್ಯದಿಂದ ತಿಳಿದುಬರುತ್ತದೆ. ಕದಂಬ ದೊರೆ ರವಿವರ್ಮನು ಬರೆಸಿದ ಗುಡ್ನಾಪುರದಲ್ಲಿನ ಸ್ತಂಭಶಾಸನ ಒಂದರಲ್ಲಿ ಅರಮನೆ, ಅಂತಃಪುರಗಳು, ಎರಡು ನೃತ್ಯ ಶಾಲೆಗಳು ಮತ್ತು ಮನ್ಮಥನಿಗೆ ಒಂದು ಮಂದಿರ ಕಟ್ಟಿಸಿದ ಉಲ್ಲೇಖವಿದೆ.[೨೦] ಅರಮನೆ ದೇವಾಲಯ ಮತ್ತು ನೃತ್ಯಶಾಲೆಗಳಲ್ಲಿ ಭಿತ್ತಿ ಚಿತ್ರಗಳನ್ನು ರಚಿಸುವ ಬಗೆಗಿನ ವಿವರಗಳು, ಚಿತ್ರಗಳಿಗಾಗಿಯೇ ಪ್ರತ್ಯೇಕ ಚಿತ್ರಶಾಲೆಗಳನ್ನು ರಚಿಸುವ ಬಗ್ಗೆ ರಾಮಾಯಣ ಮಹಾಭಾರತಗಳಲ್ಲೇ ಉಲ್ಲೇಖಿಸಲ್ಪಟ್ಟಿದೆ. ಹಾಗಾಗಿ ಕದಂಬರ ಕಾಲದಲ್ಲಿ ರಚನೆಯಾದ ಈ ವಾಸ್ತುರಚನೆಗಳು ಚಿತ್ರಗಳಿಂದ ಅಲಂಕರಿಸಲ್ಪಟ್ಟಿದ್ದವು.[೨೧] ಮಾತ್ರವಲ್ಲದೆ ಚಿತ್ರ ರಚನೆಯ ಬಗೆಗಿನ ಸಾಹಿತ್ಯ ಕೂಡಾ ಇದ್ದಿರಬಹುದೆಂದು ಹೇಳಬಹುದಾಗಿದೆ.

---

೧೭. ಟಿ.ಎಸ್.ವೆಂಕಣ್ಣಯ್ಯ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೧) : ಪುಟ-೫೪

೧೮. ಡಾ.ಬಿ.ಕೆ.ಹಿರೇಮಠ :ಸೃಷ್ಟಿ : ಪುಟ-೧೦೧

೧೯. ಡಾ.ಎಚ್.ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ : ಪುಟ-೨೪೦

೨೦. ಅ.ಸುಂದರ : ಕರ್ನಾಟಕ ಚರಿತ್ರೆ ಸಂಪುಟ-೧ : ಪುಟ_೩೯

೨೧. ಅ.ಸುಂದರ : ಕರ್ನಾಟಕ ಚರಿತ್ರೆ ಸಂಪುಟ-೧ : ಪುಟ ೩೯೫

ಇವುಗಳಲ್ಲದೆ ಬಳ್ಳಾರಿ ಜಿಲ್ಲೆಯ ಮ್ಯಾಕೆಡೋನಿಯಲ್ಲಿ ಸಿಕ್ಕಿರುವ ೨ನೇ ಪುಳುಮಾವಿಯ ಶಾಸನ ಬನವಾಸಿಯ ಶಿವಸ್ಕಂದ ನಾಗಶ್ರೀಯ ಶಾಸನ. ಕದಂಬ ಮಯೂರವರ್ಮನ ಶಾಸನಗಳು[೨೨] ಈ ಕಾಲಕ್ಕೆ ಸೇರಿದ್ದ ಅವುಗಳಲ್ಲಿ ಉಪಮೇಯ ರೀತಿಯ ಕಲಾ ಉಲ್ಲೇಖಗಳು ಕಂಡುಬರುತ್ತವೆ.

ಕ್ರಿ. ಶ. ೪ನೇ ಶತಮಾನದಲ್ಲಿ ರಚನೆಯಾದ ಕೆಲವು ಸಾಹಿತ್ಯ ಕೃತಿಗಳಲ್ಲಿ ಸಾಂದರ್ಭಿಕವಾಗಿ ಚಿತ್ರಕಲೆಯ ಉಲ್ಲೇಖಗಳು ಬಂದಿದ್ದು, ಆ ಮೂಲಕ ಅಂದಿನ ಕಲಾ ಸಾಹಿತ್ಯದ ವಿವರಗಳನ್ನು ತಿಳಿದುಕೊಳ್ಳಬಹುದು. ಸುಮಂತಭದ್ರ ಎಂಬ ಕವಿಯು (ಕ್ರಿ.ಶ.೪೦೦) ಈ ಕಾಲದಲ್ಲಿ ಸಂಸ್ಕೃತ, ಪ್ರಾಕೃತ ಗ್ರಂಥಗಳಿಗೆ ಹಳಗನ್ನಡದಲ್ಲಿ ವ್ಯಾಖ್ಯಾನ ಬರೆದಿದ್ದು[೨೩] ಇವುಗಳಲ್ಲಿ ಸಾಂದರ್ಭಿಕವಾಗಿ ಉಪಮೇಯ ರೀತಿಯ ಚಿತ್ರಕಲಾ ವಿಚಾರಗಳು ಕಂಡುಬರುತ್ತವೆ.

ಇದೇ ಕಾಲಾವಧಿಯಲ್ಲಿ ಜೀವಿಸಿದ್ದ (ಕ್ರಿ.ಶ.೪೦೦) ವಿಮಲನೆಂಬ ಕವಿಯು 'ರತ್ನಮಾಲಿಕಾ' ಹಾಗೂ ಪಉಮಚರಿಯ ಎಂಬ ಎರಡು ಕಾವ್ಯಗಳನ್ನು ಬರೆದಿದ್ದಾನೆ.[೨೪] ಪಉಮಚರಿಯ ಕಾವ್ಯವು ೧೧೮ ಉದ್ದೇಶಗಳನ್ನು ಅವುಗಳಲ್ಲಿ ೮೬೫೧ ಗಾಥೆಯನ್ನು ಹೊಂದಿದೆ. ಇದು ರಾಮ, ಲಕ್ಷ್ಮಣ, ರಾವಣರ ಕಥೆಯಾಗಿದ್ದು, ಇಲ್ಲಿ ಬಣ್ಣ, ಚಿತ್ರ, ಆಕಾರ, ರೇಖೆ ಇವುಗಳ ಬಗೆಗೆ ಉಲ್ಲೇಖಗಳಿವೆ. ಕಿಷ್ಕಿಂಧೆ ಸೈನಿಕರ ಬಾವುಟಗಳಲ್ಲಿ ಕಪಿಯ ಚಿತ್ರ, ರಾಮ ಮತ್ತು ರಾವಣರ ಅರಮನೆ ವರ್ಣನೆಗಳಲ್ಲಿ ಚಿತ್ರಕಲೆಯ ಉಲ್ಲೇಖಗಳಿವೆ.

ಕ್ರಿ.ಶ. ೫ನೇ ಶತಮಾನದಿಂದ ಕರ್ನಾಟಕದ ಸಾಹಿತ್ಯ ಚರಿತ್ರೆಯನ್ನು ಕಟ್ಟಿಕೊಡಲು ಅಧಿಕೃತವಾದ ಆಧಾರಗಳು ಲಭ್ಯವಾಗುತ್ತವೆ ಎಂಬ ಮಾತಿದ್ದು ಇದು ಕಲಾ ಸಾಹಿತ್ಯಕ್ಕೂ ಅನ್ವಯಿಸಬಹುದು. ಪ್ರತ್ಯೇಕವಾಗಿರುವ ಕಲಾಸಾಹಿತ್ಯ ಕೃತಿಗಳು ಕರ್ನಾಟಕದಲ್ಲಿ ಲಭ್ಯವಾಗದೇ ಹೋದರೂ ಸಮಕಾಲೀನ ಸಾಹಿತ್ಯ ಕೃತಿಗಳು ಮತ್ತು ಶಾಸನ ಬರಹಗಳಲ್ಲಿನ ಸಾಹಿತ್ಯದಲ್ಲಿನ ಚಿತ್ರಕಲೆಯ ಬಗೆಗಿನ ಸಾಂದರ್ಭಿಕ ಉಲ್ಲೇಖಗಳಿಂದ ಆ ಕಾಲದ ಚಿತ್ರಕಲಾ ಸಾಹಿತ್ಯದ ಸ್ಥಿತಿಗತಿಗಳನ್ನು ನಿರ್ಧರಿಸಬಹುದಾಗಿದೆ.

ಕ್ರಿ.ಶ.೪೫೦ರಲ್ಲಿ ರಚನೆಯಾಗಿದೆ ಎಂದು ಹೇಳಲಾಗುವ ಹಲ್ಮಿಡಿ ಶಾಸನವು ಕರ್ನಾಟಕದ ಮೊದಲ ಕನ್ನಡ ಶಾಸನವೆಂದು ಪರಿಗಣಿಸಲಾಗಿದೆ.[೨೫] ಅಲ್ಲದೆ ಪ್ರಥಮ ಗದ್ಯಶಾಸನವೂ ಇದಾಗಿದೆ. ಇದು ವೀರರ ಪರಾಕ್ರಮವನ್ನು ಪುರಸ್ಕರಿಸುವದಕ್ಕಾಗಿ ಹುಟ್ಟಿಕೊಂಡ ಶಾಸನವಾಗಿದ್ದು, ವರ್ಣನೆಯ ಸಂದರ್ಭದಲ್ಲಿ ಉಪಮೇಯ ರೀತಿಯ ಕಲಾ ಉಲ್ಲೇಖಗಳನ್ನು ಗುರುತಿಸಬಹುದಾಗಿದೆ. ತಮಟಕಲ್ಲು ಶಾಸನವು ಕ್ರಿ.ಶ.೫೦೦ರಲ್ಲಿ ರಚನೆಯಾಗಿದ್ದು,[೨೬] ಇದರಲ್ಲಿ ಚಿತ್ರಕಲೆ ವಿವರಗಳು ಸಾಂದರ್ಭಿಕವಾಗಿ ಹೇಳಲ್ಪಟ್ಟಿವೆ.

> 'ಪ್ರಣಯಿಜನಕ್ಕೆ ಕಾಮನಸಿತೋತ್ಪಲ ವರ್ಣನವನ್
> ಗುಣಮಧುರಾಂಕ್ಕ ದಿವ್ಯಪುರುಷನ್ ಪುರುಷ ಪ್ರವರನ್'

ಎಂಬಲ್ಲಿ ವರ್ಣ ಮತ್ತು ಆಕಾರಗಳ ಉಲ್ಲೇಖಗಳು ಕಂಡುಬರುತ್ತವೆ.

---

೨೨. ಡಾ.ಎಚ್. ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ : ಪುಟ-೧೪೫

೨೩. ಡಾ.ಎಂ.ಎಂ.ಕಲಬುರ್ಗಿ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೧ : ಪುಟ-೧೧೮

೨೪. ಡಾ.ಎಂ.ಎಂ.ಕಲಬುರ್ಗಿ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೧ : ಪುಟ-೧೧೯

೨೫. ಡಾ.ಎಚ್.ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ : ಪುಟ-೨೪೨

೨೬. ಡಾ.ಹಾ.ಮಾ.ನಾಯಕ್ : ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೧ : ಪುಟ-೫೧೮

ಇದೇ ಕಾಲಾವಧಿಯ ಕ್ರಿ.ಶ. ೫ನೇ ಶತಮಾನದ ಮತ್ತೊಂದು ಶಾಸನವು ತಾಳಗುಂದದಲ್ಲಿ ಲಭ್ಯವಾಗಿದ್ದು,[೨೭] ಕದಂಬ ದೊರೆ ಶಾಂತಿವರ್ಮನಿಂದ ಬರೆಸಲ್ಪಟ್ಟಿದೆ. ಬೃಹತ್ತಾದ ಈ ಶಾಸನವು ಸಂಸ್ಕೃತ ಭಾಷೆಯಲ್ಲಿದ್ದು, ಸಾಹಿತ್ಯಕ ಮೌಲ್ಯಗಳಿಂದ ಕೂಡಿದೆ. ಇದು ಕದಂಬ ವಂಶದ ಪ್ರಾರಂಭ ಮತ್ತು ಮಯೂರ ವರ್ಮನ ಪರಾಕ್ರಮವನ್ನು ತಿಳಿಸುತ್ತದೆ. ಜೊತೆಗೆ ಕಂಚಿ, ಬನವಾಸಿ, ಶ್ರೀಪರ್ವತ, ಮುಂತಾದ ಪ್ರದೇಶವನ್ನು ಸೊಗಸಾಗಿ ವರ್ಣಿಸಿದೆ. ಹೀಗೆ ವರ್ಣಿಸುವಾಗ ಸಾಂದರ್ಭಿಕವಾಗಿ ಚಿತ್ರಕಲೆ ಉಲ್ಲೇಖಗಳು ಉಪಮೇಯ ರೀತಿಯಲ್ಲು ಬಳಕೆಗೊಂಡಿವೆ. ಬಣ್ಣ, ಆಕಾರ, ಗಾತ್ರ, ರೇಖೆ, ಸೌಂದರ್ಯ, ನವರಸಗಳು, ಕಲಾ ಪ್ರಾವೀಣ್ಯತೆ, ಕಲಾವಿದ್ಯೆ, ಸಾಹಿತ್ಯವಿದ್ಯೆ, ವಿವಿಧ ಶಾಸ್ತ್ರವಿದ್ಯೆಗಳ, ಬಗೆಗಿನ ಸಂಗತಿಗಳು ಮತ್ತು ದೇವಾಲಯ ನಿರ್ಮಾಣ, ಶಿಲ್ಪ ರಚನೆಯಂತಹ ವಾಸ್ತು ಹಾಗೂ ಶಿಲ್ಪಕಲಾ ಸಂಗತಿಗಳೂ ಇಲ್ಲಿ ಹೇಳಲ್ಪಟ್ಟಿವೆ.

ದಕ್ಷಿಣ ಕರ್ನಾಟಕದಲ್ಲಿ ಕ್ರಿ.ಶ.೩೫೦ರ ಸುಮಾರಿಗೆ ತಲಕಾಡನ್ನು ರಾಜಧಾನಿಯಾಗಿ ಮಾಡಿಕೊಂಡು ಗಂಗರು ಆಳತೊಡಗಿದರು. ಬಾದಾಮಿ ಚಾಲುಕ್ಯರು ಪ್ರಬಲರಾಗುವವರೆಗೂ (ಕ್ರಿ.ಶ.೬೦೦) ಇವರ ಆಳ್ವಿಕೆ ಪ್ರಮುಖವಾಗಿತ್ತು. ಇವರಲ್ಲಿ ಕ್ರಿ.ಶ. ೫ನೇ ಶತಮಾನದಲ್ಲಿ ಆಳಿದ ದುರ್ವಿನೀತನು ಕಲಾ ಪ್ರೇಮಿಯಾಗಿದ್ದನಲ್ಲದೆ ಸ್ವತಹ ಅನೇಕ ಗ್ರಂಥಗಳನ್ನು ಪ್ರಾಕೃತ, ಸಂಸ್ಕೃತದಲ್ಲಿ ರಚಿಸಿದ್ದಾನೆಂದು[೨೮] ಶಾಸನಗಳು ತಿಳಿಸುತ್ತವೆ.

ಈ ರೀತಿ ಪ್ರಾರಂಭಿಕ ಹಂತದ ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಅಸ್ಪಷ್ಟ ಹೆಜ್ಜೆಗಳನ್ನು ಗುರುತಿಸಬಹುದಾದರೂ ಚಾಲುಕ್ಯರ ಕಾಲದಿಂದ ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಇತಿಹಾಸವನ್ನು ರೂಪಿಸುವಲ್ಲಿ ಹೆಚ್ಚಿನ ಆಕರಗಳು ಲಭ್ಯವಾಗುತ್ತವೆ. ಶಿಲ್ಪಕಲಾವಿದರು ಮತ್ತು ಚಿತ್ರಕಲಾವಿದರ ಹೆಸರುಗಳಲ್ಲದೆ ನಾಟ್ಯಕಲೆ, ಶಿಲ್ಪಕಲೆ, ಚಿತ್ರಕಲೆ, ವಾಸ್ತುಕಲೆ, ಸಂಗೀತಕಲೆ ಮುಂತಾದ ಕಲಾಪ್ರಕಾರಗಳ ಬಗ್ಗೆ ಶಾಸನಗಳಲ್ಲಿ ಸಾಂದರ್ಭಿಕವಾಗಿ ಉಲ್ಲೇಖಗಳು ಕಂಡುಬರುತ್ತವೆ. ಅಲ್ಲದೆ ಬಾದಾಮಿ ಗುಹೆಗಳಲ್ಲಿ ಶ್ರೇಷ್ಠಮಟ್ಟದ ಭಿತ್ತಿಚಿತ್ರಗಳು ಇವರ ಕಾಲದಲ್ಲಿ ರಚನೆಯಾಗಿವೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಕ್ರಮಾನುಗತ ಇತಿಹಾಸವನ್ನು ಕಟ್ಟಿಕೊಡುವ ನಿಟ್ಟಿನಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ಆರು ಹಂತಗಳಲ್ಲಿ ವಿಂಗಡಿಸಿ ವಿವೇಚಿಸಬಹುದಾಗಿದೆ.

೧. ಚಾಲುಕ್ಯರ ಕಾಲದಿಂದ ಕವಿರಾಜಮಾರ್ಗದ ವರೆಗಿನ ಚಿತ್ರಕಲಾ ಸಾಹಿತ್ಯ.
೨. ಕವಿರಾಜಮಾರ್ಗದಿಂದ ವಚನಸಾಹಿತ್ಯದ ವರೆಗಿನ ಚಿತ್ರಕಲಾ ಸಾಹಿತ್ಯ.
೩. ವಚನಸಾಹಿತ್ಯದಿಂದ ವಿಜಯನಗರದ ವರೆಗಿನ ಚಿತ್ರಕಲಾ ಸಾಹಿತ್ಯ.
೪. ವಿಜಯನಗರದಿಂದ ಮೈಸೂರು ಅರಸರ ವರೆಗಿನ ಚಿತ್ರಕಲಾ ಸಾಹಿತ್ಯ.
೫. ಮೈಸೂರು ಅರಸರಿಂದ ಸ್ವಾತಂತ್ರ್ಯದ ವರೆಗಿನ ಚಿತ್ರಕಲಾ ಸಾಹಿತ್ಯ.
೬. ಸ್ವಾತಂತ್ರ್ಯೋತ್ತರ ಕಾಲದಿಂದ ಕ್ರಿ. ಶ. ೨೦೦೦ ವರೆಗಿನ ಚಿತ್ರಕಲಾ ಸಾಹಿತ್ಯ.

**೧. ಚಾಲುಕ್ಯರ ಕಾಲದಿಂದ ಕವಿರಾಜಮಾರ್ಗದ ವರೆಗಿನ ಚಿತ್ರಕಲಾ ಸಾಹಿತ್ಯ :**

ಕ್ರಿ.ಶ. ೬ನೇ ಶತಮಾನದ ಹೊತ್ತಿಗೆ ಕರ್ನಾಟಕದಲ್ಲಿ ಚಾಲುಕ್ಯರು ಪ್ರಬಲರಾಗುತ್ತ ಬಂದಂತೆ ಶಿಲ್ಪ ಚಿತ್ರ ಮತ್ತು ವಾಸ್ತುಕಲೆಗಳಿಗೆ ಹೆಚ್ಚಿನ ಪ್ರೋತ್ಸಾಹ ದೊರಕಿತು. ಹಾಗಾಗಿಯೆ ಇವರ ಕಾಲದ

೨೭. ಡಾ.ಎಚ್.ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ : ಪುಟ–೮೫

೨೮. ಡಾ.ಎಚ್.ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ : ಪುಟ–೯೧

ಶಾಸನಗಳಲ್ಲಿನ ಬರಹಗಳಲ್ಲಿ ಕಲಾ ಅಂಶಗಳು ಸಹಜವಾಗಿ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಚಾಲುಕ್ಯರ ಕಾಲದ ಗ್ರಂಥಸ್ತ ಸಾಹಿತ್ಯದ ಬಗೆಗೆ ಒಂದು ಉದಾಹರಣೆಯು ಇದುವರೆಗೆ ಲಭ್ಯವಾಗಿದೆ.[೨೯] ಎರಡನೆಯ ಪುಲಿಕೇಶಿಯ ಸೊಸೆ ವಿಜಯಭಟ್ಟಾರಿಕೆಯು 'ಕೌಮುದಿ ಮಹೋತ್ಸವ' ಎಂಬ ನಾಟಕ ರಚಿಸಿದ್ದು, ಇದರಲ್ಲಿ ಸಾಂದರ್ಭಿಕವಾಗಿ ಕಲೆಯ ಉಲ್ಲೇಖಗಳು ಬಂದಿವೆ. ವರ್ಣನೆ, ಹೋಲಿಕೆ ಮತ್ತು ಸೌಂದರ್ಯ ಕುರಿತು ವಿವರಿಸುವಾಗ ಕಲೆಯ ಅನೇಕ ಸಂಗತಿಗಳು ಕಂಡುಬರುತ್ತವೆ. ಉದಾಹರಣೆಗಾಗಿ ಒಂದು ಶ್ಲೋಕ ಗಮನಿಸಬಹುದು.

'ನೀಲೋತ್ಪಲದಲ ಶ್ಯಾಮಮ್ ವಿಜ್ಜಿಕಾಮ್ ಮಾಮ ಜಾನತಾ
ವೃಥೈವ ದಂಡಿನಾ ಪ್ರೋಕ್ತಾ ಸರ್ವಶುಕ್ಲಾ ಸರಸ್ವತೀ'

ನೀಲವರ್ಣದ ದ್ರವದಲ್ಲಿ ಮಿಂದೆದ್ದು ಶ್ಯಾಮ ವರ್ಣದಿಂದ ಕಂಗೊಳಿಸುತ್ತಿರುವ ಈ ವಿಜ್ಜಿಕೆಯನ್ನು ನೋಡಿದ್ದರೆ, ದಂಡಿಯು ಸರಸ್ವತಿಯನ್ನು ಗೌರವರ್ಣ (ತೆಳುಕಂಪು) ದವಳೆಂದು ವರ್ಣಿಸುವ ಪ್ರಯತ್ನ ಮಾಡುತ್ತಿರಲಿಲ್ಲ ಎಂದು ವಿಜ್ಜಿಕೆಯು ದಂಡಿಗೇ ಸವಾಲು ಹಾಕುತ್ತಾಳೆ. ಈ ಬಗೆಯ ಕಲಾ ವಿಚಾರಗಳು ಈ ಕೃತಿಯಲ್ಲಿ ಅಲ್ಲಲ್ಲಿ ಕಂಡುಬರುತ್ತವೆ.

ಕ್ರಿ.ಶ.೬ನೇ ಶತಮಾನದಲ್ಲಿ ರಚನೆಯಾದ ಚಾಲುಕ್ಯರ ಶಾಸನ ಬರಹಗಳಲ್ಲಿ ಅನೇಕ ಕಲಾ ಉಲ್ಲೇಖಗಳು ಸಾಂದರ್ಭಿಕವಾಗಿ ಬಂದಿವೆ. ಬಾದಾಮಿಯ ಮೂರನೆಯ ಗುಹೆಯ ಪಶ್ಚಿಮ ಗೋಡೆಯಲ್ಲಿರುವ ಶಾಸನವು ಮಂಗಳೇಶನದು. ಗುಹಾಲಯ ನಿರ್ಮಿಸಿದ ಶಿಲ್ಪಿಗಳಿಗೆ ದೇವರ ಹೂಮಾಲೆ ನಿರ್ಮಾಪಕರಿಗೆ ರಾಜನು ದಾನ ಮತ್ತು ಕಾಣಿಕೆ ನೀಡಿದ ವಿಷಯ ತಿಳಿಸುತ್ತದೆ.[೩೦] ಇಲ್ಲಿ ಪೂರಕಾಗಿ ಅನೇಕ ಕಲಾ ಸಂಗತಿಗಳು ಉಲ್ಲೇಖಗೊಂಡಿರುವುದನ್ನು ಆ ಶಾಸನದಿಂದ ತಿಳಿಯಬಹುದು.

'ಸ್ವಸ್ತಿ ಶ್ರೀಮತ್ ಪ್ರಿಥಿವೀ ವಲ್ಲಭ ಮಂಗಲೀಸನಾ
ಕಲ್ಮನೆಗೆ ಇತ್ತೊಂದು ಲಂಜಿಗೇಸರಂ ದೇವರ್ಕೆ ಪೂನಿಕುವ
ಮಾಲಕಾರರ್ಗ್ಗೆ ಅರ್ಧವಿಸದಿ ಇತ್ತೋದಾನರೆವೋನ್'

ಇಲ್ಲಿ ಏಕಶಿಲೆಯಲ್ಲಿ ಕೊರೆದು ನಿರ್ಮಿಸಿದ ವೈಷ್ಣವ ಗುಹಾ ವಾಸ್ತು ರಚನೆಯನ್ನು ಕಲ್ಮನೆ ಎಂಬುದಾಗಿ ಹೇಳಿದೆ. ಹಾಗೆ ಗರ್ಭಗೃಹದ ವಿಷ್ಣುಶಿಲ್ಪವನ್ನು ದೇವರ್ಕೆ (ದೇವರು) ಎಂದು ಸಾಂಕೇತಿಕವಾಗಿ ಕರೆಯಲಾಗಿದೆ. ಈ ಹಿನ್ನೆಲೆಯಲ್ಲಿ ವಾಸ್ತುಕಲೆ ಮತ್ತು ಶಿಲ್ಪಕಲೆಯ ಸಂಗತಿಗಳು ಸಾಂದರ್ಭಿಕವಾಗಿ ಇಲ್ಲಿ ಹೇಳಿದಂತಾಗಿದೆ.

ಇದೇ ವಿಷ್ಣುಗುಹೆಯಲ್ಲಿರುವ ಮತ್ತೊಂದು ಶಾಸನದಲ್ಲಿ (ಕ್ರಿ.ಶ. ೫೭೮) ಮಂಗಳೇಶನನ್ನು ವರ್ಣಿಸುವಾಗ ಕಲೆಯ ವಿಚಾರಗಳ ಸಾಂದರ್ಭಿಕ ಪ್ರಸ್ತಾಪವಿದೆ.[೩೧] ಸೂರ್ಯ, ಚಂದ್ರ, ಬೆಳಕು, ಬಣ್ಣ, ರೇಖೆ, ಆಕಾರ, ಸಕಲ ಕಲಾವಲ್ಲಭ, ಆಭರಣಗಳ ಸೌಂದರ್ಯ, ಕಿರೀಟದ ಕಲಾತ್ಮಕತೆ ಮುಂತಾದ ಸಂಗತಿಗಳು ಹೇಳಲ್ಪಟ್ಟಿವೆ.

ಮಹಾಕೂಟದ ಸ್ತಂಭ ಶಾಸನವು ಸಹಿತ ಮಂಗಳೇಶನ ಕಾಲದಲ್ಲಿ (ಕ್ರಿ.ಶ-೫೯೫) ರಚನೆಯಾಗಿದ್ದು, ಈ ವಿಸ್ತಾರವಾದ ಶಾಸನ ಬರಹದಲ್ಲಿ ಮಂಗಳೇಶನನ್ನು ವರ್ಣಿಸಲಾಗಿದೆ.[೩೨] ಇಲ್ಲಿ ಸಾಂದರ್ಭಿಕವಾಗಿ ಕಲಾ ವಿಷಯಗಳು ಉಲ್ಲೇಖಿಸಲ್ಪಟ್ಟಿವೆ. ವಾಸ್ತುಕಲೆ, ಶಿಲ್ಪಕಲೆ ಒಳಗೊಂಡಂತೆ

---

೨೯. ಡಾ.ಶೀಲಾಕಾಂತ ಪತ್ತಾರ : ಬಾದಾಮಿ,. ಸಾಂಸ್ಕೃತಿಕ ಅಧ್ಯಯನ : ಪುಟ-೩೧೦
೩೦. ಡಾ.ಶೀಲಾಕಾಂತ ಪತ್ತಾರ : ಬಾದಾಮಿ ಸಾಂಸ್ಕೃತಿಕ ಅಧ್ಯಯನ : ಪುಟ-೩೦೫
೩೧. ಡಾ.ಶೀಲಾಕಾಂತ ಪತ್ತಾರ : ಬಾದಾಮಿ ಸಾಂಸ್ಕೃತಿಕ ಅಧ್ಯಯನ : ಪುಟ-೩೦೬
೩೨. ಡಾ.ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯ : ಪುಟ-೩೮೪

ವಿವಿಧ ಕಲೆಗಳು, ಲಲಿತಗುಣ, ರೂಪ. ಆಕಾರ, ರಸ ಮುಂತಾದ ಸಂಗತಿಗಳು ಇಲ್ಲಿ ಹೇಳಲ್ಪಟ್ಟಿವೆ. ಇಂತಹ ಸಂಗತಿಗಳಲ್ಲದೆ ಕ್ರಿ.ಶ. ೬ನೇ ಶತಮಾನದಲ್ಲಿ ರಚನೆಯಾದ ಇನ್ನು ಕೆಲವು ಶಾಸನಗಳಲ್ಲಿ ಕಲೆಯ ಅಂಶಗಳು ಸಾಂದರ್ಭಿಕವಾಗಿ, ಪೂರಕವಾಗಿ ಇಲ್ಲವೆ ಉಪಮೆ ರೀತಿಯಲ್ಲಿ ಕಂಡುಬರುತ್ತವೆ. ಆದರೆ ಇವುಗಳ ಜೊತೆಗೆ ಕೆಲವು ಕಲಾವಿದರ ಹೆಸರುಗಳು ಶಾಸನ ಬರಹಗಳಲ್ಲಿ ಕಂಡು ಬಂದಿರುವುದು ಕಲೆ ಮತ್ತು ಕಲಾಸಾಹಿತ್ಯದ ದೃಷ್ಟಿಯಿಂದ ಗಮನಾರ್ಹ ಸಂಗತಿಯಾಗಿದೆ.

ಈ ಕಲಾವಿದರು ಶಿಲ್ಪಕಲಾವಿದರಾಗಿದ್ದಂತೆ ಚಿತ್ರಕಲಾವಿದರೂ ಆಗಿದ್ದರೆಂಬುದನ್ನು ಬೇರೆ ಹೇಳಬೇಕಿಲ್ಲ. ಏಕೆಂದರೆ ರೇಖಾಚಿತ್ರ ರಚನೆಯಲ್ಲಿ ಪರಿಣಿತನಾದವನು ಮಾತ್ರ ಶಿಲ್ಪಕಲಾವಿದನಾಗಲು ಸಾಧ್ಯ. ಹಾಗಾಗಿ ಪ್ರಾಚೀನ ಶಿಲ್ಪಕಲಾವಿದರ ಇತಿಹಾಸವು ಒಂದು ದೃಷ್ಟಿಯಲ್ಲಿ ಚಿತ್ರಕಲಾವಿದರ ಇತಿಹಾಸವೂ ಆಗುತ್ತದೆ ಎಂಬುದು ಅಷ್ಟೇ ಸತ್ಯವಾದ ವಿಚಾರವಾಗಿದೆ.

ಚಾಲುಕ್ಯರ ಕಾಲದಲ್ಲಿ ಕ್ರಿ.ಶ. ೬ನೇ ಶತಮಾನದಿಂದ ೮ನೇ ಶತಮಾನದವರೆಗೂ ಅನೇಕ ಕಲಾವಿದರ ಹೆಸರುಗಳು ಕಂಡುಬಂದಿವೆ. ಈ ಕಲಾವಿದರ ಹೆಸರುಗಳು ಬಾದಾಮಿಯ ಪರಿಸರದಲ್ಲಿ ಚದುರಿದಂತೆ ಬೇರೆ ಬೇರೆ ನೆಲೆಗಳಲ್ಲಿ ಕೆತ್ತಲ್ಪಟ್ಟಿವೆ. ಬಾದಾಮಿಯ ಗುಹಾಲಯಗಳು, ಉತ್ತರ ಕೋಟೆಯ ಪ್ರದೇಶ, ದೇವಾಲಯಗಳು, ಐಹೊಳೆ, ಪಟ್ಟದಕಲ್ಲುಗಳ ಗುಹಾದೇವಾಲಯಗಳು ಮತ್ತು ರಾಚನಿಕ ದೇವಾಲಯಗಳಲ್ಲಿ ಅಲ್ಲಲ್ಲಿ ಕಲಾವಿದರ ಹೆಸರುಗಳು ಶಾಸನ ಬರಹಗಳಲ್ಲಿ ಕಂಡುಬರುತ್ತವೆ. ದೇವಾಲಯವನ್ನು ಕಟ್ಟಿದವರು, ಶಿಲ್ಪಗಳನ್ನು ನಿರ್ಮಿಸಿದವರು, ಗುಹಾಲಯಗಳನ್ನು ಕೊರೆದವರು, ಚಿತ್ರ ಬರೆದವರು, ತಮ್ಮ ಹೆಸರುಗಳನ್ನು ದಾಖಲಿಸಿದ್ದಾರೆ. ಕಾಲಮಾನಕ್ಕೆ ಅನುಸಾರವಾಗಿ ಬಾದಾಮಿ ಪರಿಸರದಲ್ಲಿ ಉಲ್ಲೇಖಿಸಲ್ಪಟ್ಟ ಕಲಾವಿದರ ಹೆಸರುಗಳನ್ನು ಕ್ರಮಾನುಗತವಾಗಿ ನೋಡಬಹುದು.

ಕ್ರಿ.ಶ. ೬ನೇ ಶತಮಾನದ ಕಲಾವಿದರ ಹೆಸರುಗಳು ಬಾದಾಮಿಯ ೩ನೇ ಗುಹೆಯಲ್ಲಿ ಕಂಡುಬರುತ್ತವೆ. ಈ ಗುಹೆಯು ಕಲಾ ದೃಷ್ಟಿಯಿಂದ ಉಳಿದವುಗಳಿಗಿಂತ ಸುಂದರವಾಗಿರುವುದು ಮಾತ್ರವಲ್ಲದೆ ಇದರಲ್ಲಿ ಆ ಕಾಲದ ವರ್ಣಚಿತ್ರಗಳೂ ರಚನೆಯಾಗಿವೆ ಎಂಬುದು ಗಮನಾರ್ಹ ಸಂಗತಿಯಾಗಿದೆ.[೩೩] ಈ ಗುಹೆಯಲ್ಲಿನ ಶಾಸನಗಳಲ್ಲಿ ಕಂಡುಬರುವ ಕಲಾವಿದರ ಹೆಸರುಗಳಲ್ಲಿ ದುರ್ವಿಟನ್, ಶಿವಚಂದ್ರ, ಕೇಸವ, ಅಳೆಗೆರನ್, ನೆಲವರ್ಕಿ, ಆರಿರ್ಕೆ, ಸುವರ್ಣತೇಜ, ಕೊಟ್ಟಲನ್, ಸಿಂಗಿಮಂಚಿ, ಸ್ವಾಮಿವರ್ಧನ್, ಬಾದುಕೆ, ಚಾಳುಗೇಸಿ, ಶ್ರೀಪಾಲ, ಕದ್ರೆಸ್ವಾಮಿ, ದಿವ್ಯನ್, ಧನದೇವನ್ ಎಂಬುವು ಸೇರಿವೆ.

ಇವುಗಳಲ್ಲಿ ಹೆಚ್ಚಿನವರು ಕೇವಲ ತಮ್ಮ ಹೆಸರನ್ನು ದಾಖಲಿಸಿದ್ದರೆ, ಮತ್ತೆ ಕೆಲವು ಪ್ರಮುಖ ಕಲಾವಿದರು ತಮ್ಮ ಹೆಸರುಗಳೊಂದಿಗೆ ತಮಗಿದ್ದ ಬಿರುದು ಬಾವಲಿ, ಪ್ರಶಸ್ತಿ, ಪುರಸ್ಕಾರಗಳನ್ನು ಬರೆದಿದ್ದಾರೆ.

ಶಾಸನ ಬರಹಗಳಲ್ಲದೆ ಆ ಕಾಲದ ಸಾಹಿತ್ಯ ಕೃತಿಗಳಿಂದಲೂ ಚಿತ್ರಕಲಾ ಸಾಹಿತ್ಯದ ಸ್ವರೂಪ ತಿಳಿದುಕೊಳ್ಳಬಹುದು. ಅದಕ್ಕನುಸಾರವಾಗಿ ಕ್ರಿ.ಶ. ೬ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಚಾಲುಕ್ಯರ ರಾಣಿ ವಿಜಯಭಟ್ಟಾರಿಕೆಯನ್ನು ಹೊರತುಪಡಿಸಿ ಇನ್ನಿಬ್ಬರು ಕವಿಗಳು ತಮ್ಮ ಕೃತಿಗಳನ್ನು ರಚಿಸಿದ್ದು ತಿಳಿದುಬರುತ್ತದೆ. ಕವಿರಾಜಮಾರ್ಗದ ಪೂರ್ವದ ಕವಿಗಳಾದ ಇವರ ಉಲ್ಲೇಖ ಕವಿರಾಜ ಮಾರ್ಗದಲ್ಲಿ ಕಂಡುಬರುವುದಿಲ್ಲ.

೩೩. ಡಾ. ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯ : ಪುಟ-೨೪೮

ಕವಿಪರಮೇಷ್ಠಿ ಎಂಬವನು (ಕ್ರಿ.ಶ ೫೫೦) 'ತ್ರಿಷಷ್ಠಿ ಶಲಕಾಪುರುಷರ ಪುರಾಣ'ವನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ. ನಂತರ ಪೂಜ್ಯಪಾದರು (ಕ್ರಿ.ಶ.-೬೦೦) ಜೈನೇಂದ್ರ ವ್ಯಾಕರಣ ಸರ್ವಾರ್ಥಸಿದ್ಧಿ ಸಮಾಧಿಶತಕ, ಸುರಸಂಗ್ರಹ ಎಂಬ ಕೃತಿಗಳನ್ನು ರಚಿಸಿದ್ದು,[೩೪] ಇವುಗಳಲ್ಲಿ ಕಲಾ ವಿವರಗಳು ಸಾಂದರ್ಭಿಕವಾಗಿ ಇಲ್ಲವೆ ಉಪಮೆ ರೀತಿಯ ವರ್ಣನೆಗಳಲ್ಲಿ ಇರಬಹುದೆಂಬುದನ್ನು ಅಲ್ಲಗಳೆಯುವಂತಿಲ್ಲ. ಯಾಕೆಂದರೆ ಅದಕ್ಕಿಂತ ಹಿಂದಿನ ಕಾಲದ ಶಾಸನ ಬರಹಗಳು ಮತ್ತು ಸಾಹಿತ್ಯ ಕೃತಿಗಳು ಕಲಾ ಅಂಶಗಳನ್ನು ಸಾಂದರ್ಭಿಕವಾಗಿ ಹೊಂದಿರುವಾಗ ಇವುಗಳಲ್ಲಿ ಅಂತಹ ಅಂಶಗಳಿರುವುದು ಸಾಮಾನ್ಯವಾಗಿದೆ ಎನ್ನಬಹುದು.

ಕ್ರಿ.ಶ. ೬ನೇ ಶತಮಾನದಲ್ಲಿ ಬಾದಾಮಿ ಪರಿಸರದಲ್ಲಿ ರಚನೆಯಾಗಿರುವ ಪ್ರಾಚೀನ ಭಿತ್ತಿಚಿತ್ರಗಳಿಂದಲೂ ಆ ಕಾಲದ ಚಿತ್ರಕಲಾ ಸಾಹಿತ್ಯವನ್ನು ತೌಲನಿಕವಾಗಿ ವಿವೇಚಿಸಬಹುದಾಗಿದೆ. ಬಾದಾಮಿಯ ವೈಷ್ಣವ ಗುಹೆಯ ಚಿತ್ರಗಳು ಜಗತ್ಪ್ರಸಿದ್ಧವಾಗಿದ್ದು, ಇವುಗಳಿಗಿಂತ ಮುಂಚಿನ ಚಿತ್ರಗಳು ಐಹೊಳೆಯ ರಾವಣಫಡಿ ಗುಹಾಲಯ ಮತ್ತು ಬಾದಾಮಿಯ ಉತ್ತರ ಕೋಟೆಯ ಶಿಲಾಶ್ರಯ ತಾಣಗಳಲ್ಲಿ ಕಂಡುಬಂದಿವೆ.[೩೫] ಶ್ರೇಷ್ಠಮಟ್ಟದ ಈ ಚಿತ್ರಗಳು ಸಮಕಾಲೀನ ಶಾಸನ ಬರಹಗಳಲ್ಲಿನ ಕಲಾವಿದರ ಹೆಸರುಗಳು, ಕಲೆಯ ಬಗೆಗಿನ ಸಾಂದರ್ಭಿಕ ವಿವರಗಳನ್ನು ನೋಡಿದಾಗ ಈ ಕಾಲದಲ್ಲಿ ಚಿತ್ರಕಲಾ ಸಾಹಿತ್ಯವು ಇನ್ನಿತರ ಬರವಣಿಗೆಗಳಲ್ಲಿ ಸಾಂದರ್ಭಿಕವಾಗಿ ಉಲ್ಲೇಖಗೊಂಡಿರುವುದು ತಿಳಿದುಬರುತ್ತದೆ.

ಬಾಗಲಕೊಟೆಯಲ್ಲಿ ದೊರೆತ ಕ್ರಿ.ಶ ೬ನೇ ಶತಮಾನದ ತಾಮ್ರ ಶಾಸನವು ರಣವಿಕ್ರಮನ ಮಗ ಕತ್ತಿಯರಸನನ್ನು ವರ್ಣಿಸುವುದು.[೩೬] ಹತ್ತು ಫಲಕಗಳಲ್ಲಿರುವ ಈ ವಿಶಾಲವಾದ ಬರಹದಲ್ಲಿ ಬಣ್ಣ, ಆಕಾರ, ಚಿತ್ರ, ರೂಪ, ರೇಖೆ, ಶಾಸ್ತ್ರ, ಲಲಿತ, ಭಿತ್ತಿ ಮುಂತಾದ ಕಲೆಗೆ ಪೂರಕವಾದ ಶಬ್ದಗಳು ಸಾಂದರ್ಭಿಕವಾಗಿ ಬಂದಿದೆ.

ಕ್ರಿ.ಶ. ೭ನೇ ಶತಮಾನದ ಚಿತ್ರಕಲಾ ಸಾಹಿತ್ಯದ ಬಗೆಗೆ ವಿವೇಚಿಸಿದಾಗ ಕರ್ನಾಟಕದಲ್ಲಿ ಮತ್ತೆ ಬಾದಾಮಿ ಚಾಲುಕ್ಯರ ಕಾಲದ ಶಾಸನ ಬರಹಗಳ ಪ್ರಮುಖ ಆಕರಗಳಾಗಿ ನಿಲ್ಲುತ್ತವೆ. ಇವುಗಳ ಜೊತೆಗೆ ಇನ್ನಿತರ ಸಮಕಾಲೀನ ಶಾಸನ ಮತ್ತು ಸಾಹಿತ್ಯ ಕೃತಿಗಳು ಪೂರಕ ಮಾಹಿತಿ ನೀಡುತ್ತವೆ.

ಕ್ರಿ.ಶ. ೭ನೇ ಶತಮಾನದಲ್ಲಿ ಶ್ಯಾಮಕುಂದಾಚಾರ್ಯ ಎಂಬ ಕವಿ ಇಂದ್ರನಂದಿಯ ಪ್ರಾಭೃತವನ್ನು ಕನ್ನಡದಲ್ಲಿ ಬರೆದನು.[೩೭] ಇದರಲ್ಲಿ ಉಪಮೆ ರೀತಿಯ ವರ್ಣನಾ ಹಿನ್ನೆಲೆಯ ಕಲಾ ಸಂಗತಿಗಳು ಉಲ್ಲೇಖಗೊಂಡಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಕಾರಣ ಈ ಕಾಲಮಾನದಲ್ಲಿ ಶಾಸನ ಬರಹಗಳು, ಇನ್ನಿತರ ಬರವಣಿಗೆಗಳಲ್ಲಿ ಇಂತಹ ಅಂಶಗಳು ಕಂಡುಬಂದಿರುವುದನ್ನು ಮತ್ತು ಸಮಕಾಲೀನ ಕಲಾವಿದರ ಅನೇಕ ಹೆಸರುಗಳು ಶಾಸನಗಳಲ್ಲಿ ಇರುವುದನ್ನು ಪೂರಕ ಅಂಶವಾಗಿ ಪರಿಗಣಿಸಬಹುದು. ಚಾಲುಕ್ಯರ ಅವಧಿಯ ಕ್ರಿ.ಶ. ೬೩೪ ರಲ್ಲಿ ರಚನೆಯಾದ ಒಂದು ಶಾಸನವು ಐಹೊಳೆಯ ಮೇಗುಡಿಯಲ್ಲಿದ್ದು ಇದನ್ನ ಮಂಗಳೇಶನು ಕೊರೆಸಿದ್ದಾನೆ.[೩೮] ಈ ಶಾಸನವು ಬೃಹತ್ತಾಗಿದ್ದು

೩೪. ಡಾ.ಎಂ.ಎಂ.ಕಲಬುರ್ಗಿ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : (ಸಂಪುಟ-೧): ಪುಟ_೧೧೮

೩೫. ಡಾ.ಯಾದವಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಪುಟ-೧೯೮

೩೬. ಡಾ.ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯ : ಪುಟ-೩೪೦

೩೭. ಡಾ.ಎಂ.ಎಂ.ಕಲಬುರ್ಗಿ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೧ : ಪುಟ-೧೧೦

೩೮. ಡಾ.ದೇವರಕೊಂಡರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯ : ಪುಟ-೩೮೪

ಅಲ್ಲಲ್ಲಿ ಕಲೆಗೆ ಪೂರಕವಾಗಿರುವ ಅಂಶಗಳು ಸಾಂದರ್ಭಿಕವಾಗಿ ಬಂದಿವೆ. ಈ ಶಾಸನ ಬರಹವು ಚಾಲುಕ್ಯರ ವೈಭವ, ವಂಶಾವಳಿ, ದಿಗ್ವಿಜಯಗಳನ್ನು ತಿಳಿಸುವದಾಗಿದ್ದು, ವರ್ಣನೆಯ ಹಿನ್ನೆಲೆಯಲ್ಲಿ ರೂಪ, ಪ್ರಕಾಶ, ಕಲಾ, ಲಕ್ಷಣ, ಬಣ್ಣ, ರೇಖೆ, ಆಕಾರ, ಚಿತ್ರ ಮುಂತಾದ ಸಂಗತಿಗಳು ಹೇಳಲ್ಪಟ್ಟಿರುವುದು ಕಲಾ ಸಾಹಿತ್ಯದ ದೃಷ್ಟಿಯಿಂದ ಗಮನಾರ್ಹವಾಗಿದೆ. ಬಾದಾಮಿಯ ಸಾಬರಘಡಿ ಎಂಬ ಸ್ಥಳದಲ್ಲಿರುವ ನೈಸರ್ಗಿಕ ಗುಹೆಯೊಂದರ ಶಾಸನವು ಈ ಕಾಲಕ್ಕೆ ಸೇರುತ್ತಿದ್ದು, ಇದರಲ್ಲಿ ಸತ್ಯಾಶ್ರಯ ಮಹಾರಾಜನು ಕಲಾತ್ಮಕ ದೇವಾಲಯವನ್ನು ನಿರ್ಮಿಸಿದ ಉಲ್ಲೇಖ ಕಂಡುಬರುತ್ತದೆ.[೩೯] ಅದು ಹೀಗಿದೆ,

'ಸ್ವಸ್ತೀ ಶ್ರೀ ಸತ್ಯಾಶ್ರಯ ಮಹಾರಾಜಾ ಪ್ರಾಸಾದಂ ಕೆಯ್ದೊರ್,
ಮಹಾಜನಮುಮೀ ಬಿಲಮಾನ್ ರಣಕೇಸರಿಯರ್ಕೆ'

ಕ್ರಿ.ಶ. ೭ನೇ ಶತಮಾನದ ಮತ್ತೊಂದು ಶಾಸನವು ಪಟ್ಟದಕಲ್ಲಿನ ವಿರುಪಾಕ್ಷ ದೇವಾಲಯದಲ್ಲಿದೆ.[೪೦] ಇದರಲ್ಲಿ ಈ ದೇವಾಲಯದ ದಕ್ಷಿಣ ಭಾಗವನ್ನು ನಿರ್ಮಿಸಿದ ಕಲಾವಿದ ಶಿಲ್ಪಿ ಸರ್ವಸಿದ್ಧಿಆಚಾರಿಯನ್ನು ಹೊಗಳಿ ಪ್ರಶಸ್ತಿ ಕೊಟ್ಟಿದ್ದನ್ನು ತಿಳಿಸುತ್ತದೆ. ಇದರಲ್ಲಿ ಈ ಕಲಾವಿದನನ್ನು ಪ್ರಾಸಾದ, ಯಾಭಾಸನ, ಶಯನ, ಮಣಿಮುಕುಟ, ರತ್ನಚೂಡಾಮಣಿ ಎಂದು ವರ್ಣಿಸಿದೆ.

ಈ ಅವಧಿಯ ಕೆಲವು ಶಿಲ್ಪಕಲಾವಿದರ ಹೆಸರುಗಳು ಮಹಾಕೂಟ ಕ್ಷೇತ್ರದಲ್ಲಿರುವ ಶಾಸನಗಳಲ್ಲಿ ಉಲ್ಲೇಖಗೊಂಡಿವೆ.[೪೧] ನಾಳ್ವಿಯನ್, ಸಂಕಡಿ, ಬಹುಗುಣ ಎಂಬ ಕಲಾವಿದರ ಹೆಸರುಗಳಲ್ಲದೆ ವ್ಯಾಳಸಿಂಹನೆಂಬ ಕಲಾಗುರುವಿನ ಹೆಸರೂ ಇಲ್ಲಿದೆ.

ಬಾದಾಮಿ ಪರಿಸರದಲ್ಲಿ ಶಿಲ್ಪ ಮತ್ತು ಚಿತ್ರ ಈ ಎರಡೂ ಕಲಾ ಪ್ರಕಾರಗಳು ಉತ್ಕೃಷ್ಟವಾಗಿ ಬೆಳೆದುಬಂದಿರುವುದನ್ನು ನೋಡಿದಾಗ ಸಾಮಾನ್ಯವಾಗಿ ಇಲ್ಲಿನ ಕಲಾವಿದರು ಶಿಲ್ಪಕಲೆ ಮತ್ತು ಚಿತ್ರಕಲೆ ಹೀಗೆ ಉಭಯ ಕಲಾ ಪ್ರವೀಣರಾಗಿದ್ದರು ಎಂದು ಊಹಿಸಬಹುದು.

ಕ್ರಿ.ಶ. ೭ನೇ ಶತಮಾನದ ಕಲಾವಿದರ ಹೆಸರುಗಳು ಬಾದಾಮಿ ಪರಿಸರದಲ್ಲಿ ಬಾದಾಮಿ ಒಳಗೊಂಡಂತೆ ಐಹೊಳೆ ಮತ್ತು ಪಟ್ಟದಕಲ್ಲುಗಳಲ್ಲಿಯೂ ಕಂಡುಬಂದಿವೆ. ಐಹೊಳೆಯ ಮೇಗುಡಿಯ ಜೈನಗುಹೆಯಲ್ಲಿನ ಶಾಸನದಲ್ಲಿ ನರಸೊಬ್ಬನೆಂಬ ಕಲಾವಿದನ ಹೆಸರು ಇದೆ.[೪೨] ಈ ನರಸೊಬ್ಬನು ಬಿಜ್ಜಡಿ ವಿದರ್ಧನ ಶಿಷ್ಯನಾಗಿದ್ದು ದೇವಾಲಯದ ವಿಮಾನ ನಿರ್ಮಿಸುವಲ್ಲಿ ಕೌಶಲನು, ಕಲಾ ಶಾಸ್ತ್ರಗಳಲ್ಲಿ ಪರಿಣಿತನು, ರೂಪ ನಿರ್ಮಾಪಕನು, ಪ್ರಮಾಣ ಬದ್ಧವಾಗಿ ಶಿಲ್ಪ ಚಿತ್ರಗಳನ್ನು ರಚಿಸುವಲ್ಲಿ ಸಿದ್ಧಹಸ್ತನೂ ಆಗಿದ್ದನೆಂದು ಶಾಸನದಲ್ಲಿ ಹೇಳಲಾಗಿದೆ. ಅದು ಹೀಗಿದೆ.

'ಶ್ರೀ ಬಿಜ್ಜಡಿ ವಿದರ್ಧಕ ಚಟ್ಟನ್ ವಿಮಾನರ ಇ್ಯತನ್‌ಶಾಸ್ತ್ರಮಹೇಶ್ವರನ್,
ಗುಣರವಿರೂಪಸಂಘಾತನ್, ಪ್ರಮಾಣ ಭರನ್ ನರಸೊಬ್ಬನ್'

ಇದಲ್ಲದೆ ಈ ಜೈನ ಗುಹಾಲಯಗಳ ಹಿಂದಿನ ಬಂಡೆಯಲ್ಲಿನ ಶಾಸನದಲ್ಲಿ ಗುಹಾಲಯಗಳನ್ನು ನಿರ್ಮಿಸುವಲ್ಲಿ ಕೈಜೊಡಿಸಿದ ಅನೇಕ ಕಲಾವಿದರ ಹೆಸರುಗಳು ಉಲ್ಲೇಖಗೊಂಡಿವೆ. ಶ್ರೀಯನ್, ಮನವಶನ್, ಮುರಿಗುಂತಿ, ಸಿದ್ಧಮ, ಮಾರ್ಗನ್, ಸಾನ್ತಿಉಗ, ಸುರತರನ್, ನಂದೀಶ್ವರನ್, ಸವಗುಮಿ, ಕಾಂತೇಪುತ್ರ, ಕಲ್ಕಿಬುರಾಸಿ, ಬಲೋಬಮಸು, ವಿಕ್ರಪುತ್ರ, ಕಜರತಿ, ಚಿತ್ರನ್, ಪದ್ಮಸ್ವಾಮಿ ಎಂಬ

---

೩೯. ಡಾ.ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯: ಪುಟ-೩೮೩
೪೦. ಡಾ.ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯: ಪುಟ-೩೧೦
೪೧. ಡಾ.ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯: ಪುಟ-೩೧೨
೪೨. ಡಾ.ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯: ಪುಟ-೩೭೦

ಹೆಸರು ಇಲ್ಲಿವೆ. ಇವುಗಳಲ್ಲಿ ಚಿತ್ರನ್ ಎಂಬ ಹೆಸರು ರಾಮಲಿಂಗೇಶ್ವರ ದೇವಾಲಯದಲ್ಲೂ ಕೆತ್ತಲ್ಪಟ್ಟಿದೆ. ಹುಚ್ಚಪ್ಪಯ್ಯ ಗುಡಿಯು ಐಹೊಳೆಯ ಸುಂದರ ದೇವಾಲಯಗಳಲ್ಲಿ ಒಂದಾಗಿದ್ದು, ಇಲ್ಲಿರುವ ೭ನೇ ಶತಮಾನದ ಶಾಸನದಲ್ಲಿಯೂ ನರಸೊಬ್ಬನ ಬಗ್ಗೆ ಉಲ್ಲೇಖವಿದೆ.[೪೩]

'ಸ್ವಸ್ತೀ ಜಮ್ಬುದ್ವೀ ಪಾನ್ತರೇ ಕಶ್ಚಿ
ವಾಸ್ತುಪ್ರಾಸಾದ ತದ್ಗತಃ
ನರಸೊಬ್ಬ ಸಮೋ ವಿದ್ವಾನ್
ನಭೂತೋ ನ ಭವಿಷ್ಯತೆ'

ಇದೆ ಶಾಸನವು ಈ ದೇವಾಲಯದ ಇನ್ನೆರಡು ಕಡೆಗಳಲ್ಲಿದೆ. ಸಮಸ್ತ ಲೋಕದಲ್ಲಿ ಜಂಬೂದ್ವೀಪದಲ್ಲಿ ದೇವಾಲಯ ನಿರ್ಮಾಣ, ಶಿಲ್ಪ ರಚನಾ ಕಾರ್ಯದಲ್ಲಿ ನರಸೊಬ್ಬನಿಗೆ ಸಮನಾದವರು ಹಿಂದೆ ಹುಟ್ಟಿಲ್ಲ, ಮುಂದೆ ಹುಟ್ಟುವುದಿಲ್ಲ ಎಂದು ಈ ಶಾಸನ ತಿಳಿಸುತ್ತದೆ. ಇದೆ ಗುಡಿಯಲ್ಲಿ ಗನಸೊಬ್ಬನೆಂಬ ಶಿಲ್ಪಿಯ ಹೆಸರೂ ಇದೆ.

ಐಹೊಳೆಯ ಇನ್ನೂ ಕೆಲವು ಸ್ಥಳಗಳಲ್ಲಿ ಕ್ರಿ.ಶ. ೭ನೇ ಶತಮಾನದ ಕಲಾವಿದರ ಹೆಸರುಗಳು ಶಾಸನಗಳಲ್ಲಿ ಕಂಡು ಬಂದಿವೆ.[೪೪] ದುರ್ಗಾದೇವಾಲಯದಲ್ಲಿ ಸುರೇಂದ್ರಪಾದ, ಬಸಮಯ್ಯ, ಮೂದ್ದಸಿಲಿ, ಕೊಮರಸಿಂಗ, ಸವಿತರನ್ ಎಂಬ ಹೆಸರುಗಳಿದ್ದರೆ, ರಾವಣಫಡಿ ಗುಹೆಯಲ್ಲಿ ಕಣಮಿಂಚಿ ಎನ್ನುವ ಕಲಾವಿದನ ಹೆಸರಿದೆ.

ಬಾದಾಮಿಯ ಅನೇಕ ಶಾಸನಗಳಲ್ಲಿಯು ಕ್ರಿ.ಶ. ೭ನೇ ಶತಮಾನದ ಕಲಾವಿದರ ಹೆಸರುಗಳು ಕಂಡು ಬಂದಿವೆ. ಶೈವ ಗುಹಾಲಯದ ಪರಿಸರದಲ್ಲಿ ಅಯ್ಚಸ್ವಾಮಿ, ಕಲ್ಕುಟಿದೋಣಸ್ವಾಮಿ, ಮಾರುತಿಸ್ವಾಮಿ, ಶೋಪಕಾರಿ, ಉಮಾಭಟಿ, ಅಜ್ಜಕ, ಗಣಸ್ವಾಮಿ, ಮಲ್ಲಿಸ್ವಾಮಿ, ಭರತಚಂದ್ರ, ಶರಣಚಂದ್ರ, ಭಮಚಂದ್ರ ಸಿವಪೂತ, ಯಸದೇವ, ದೇವದಾಸ, ಗಂಗೋಸ್ವಾಮಿ, ಮಹಾರಾಚಿ, ಕೊಟ್ಟಮಂಚ, ಅಜನ್, ಶ್ರೀಕಾರಿ, ಮಲ್ಲೆಮರಸತನ್, ಸಿವೆದಾಸ, ಶ್ರೀವುಕ್ಕೆ, ಮರಿಕೆ, ನಿದ್ದೆಗ, ವಸಂತಜೋಳಿ ಎಂಬ ಹೆಸರುಗಳಿವೆ. ಇವುಗಳಲ್ಲದೆ ಸೇತುದುವ, ದುಟ್ಟಜನ್, ಶಾಂತಿಮೂರ್ತಿ, ಗೊಟ್ಟೆಮಾರ್ಕನ್, ನಿಚ್ಚನ್, ಬರನ್, ಎಂಬ ಕಲಾವಿದರ ಹೆಸರುಗಳೂ ಇಲ್ಲಿವೆ,

ಬಾದಾಮಿಯ ಮೇಣಬಸದಿಯ ಎರಡು ಮತ್ತು ಮೂರನೆಯ ಗುಹೆಗಳಲ್ಲೂ ಕ್ರಿ.ಶ. ೭ನೇ ಶತಮಾನದ ಕಲಾವಿದರ ಹೆಸರುಗಳಿವೆ. ಎರಡನೇ ಗುಹೆಯಲ್ಲಿ ಪ್ರಮುಸಿನ್, ವಚ್ಚನ್, ಅನಂತ ಆದರ್ಶನ್, ಛಾಗನ್, ಅದಮರಿ, ವಾಸುದೇವನ್, ಯಶೋಮನ್ತ, ವಕುಲಕೆಳಗನ್, ದ್ವಿತನ್,

ಬಿಟಮಾರ್ಗನ್, ಕೃತಿಮ, ದುಟ್ಟಜನ, ಶ್ರೀತನ್, ಪ್ರತಿವಿಕ್ರಮ, ಅಪ್ಪರಪ್ಪ, ಕೇಶವ, ಅಜಕ್ರತಿ, ಮೂರ್ತಿಮಾನನ್, ನಾಚಿಗ ಎಂಬ ಹೆಸರುಗಳಲ್ಲದೆ ಒಂದನೆ ಗುಹೆಯಲ್ಲಿರುವ ಕೆಲವು ಹೆಸರುಗಳು ಇಲ್ಲಿಯೂ ಇವೆ. ಅಂತಹವುಗಳಲ್ಲಿ ದುಟ್ಟಜನ್, ಗೊಟ್ಟೆಮಾರ್ಕನ್, ಶಾಂತಿಮೂರ್ತಿ, ನಿಚ್ಚನ್, ಬರನ್ ಪ್ರಮುಖವಾಗಿವೆ. ಮೂರನೇ ಗುಹೆಯಲ್ಲಿನ ಕಲಾವಿದರ ಕೆಲವು ಹೆಸರುಗಳು ಒಂದು ಮತ್ತು ಎರಡನೇ ಗುಹೆಯಲ್ಲಿನ ಹೆಸರುಗಳೇ ಆಗಿವೆ. ಇದರಿಂದ ಅದೇ ಕಲಾವಿದರು ಇಲ್ಲಿನ ಬೇರೆ ಬೇರೆ ಗುಹಾಲಯ ಮತ್ತು ರಾಚನಿಕ ದೇವಾಲಯಗಳ ನಿರ್ಮಾಣದಲ್ಲಿ ತೊಡಗಿಕೊಂಡಿರುವುದು ತಿಳಿದುಬರುತ್ತದೆ.

---

೪೩. ಡಾ.ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯: ಪುಟ-೩೭೧
೪೪. ಡಾ.ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯: ಪುಟ-೩೪೦

ಮೂರನೆಯ ಗುಹೆಯ ಕಲಾವಿದರಲ್ಲಿ ಈ ಕಾಲಕ್ಕೆ ಸೇರಿದ ಕಲಾವಿದರೆಂದರೆ, ಪಂಚನ್, ಕೋಳಿಮಂಚಿ, ಸಿಂಗಿಮಂಚಿ, ಜಯಸೇನ, ಚಾದುಗೇಸಿ, ವಸುದೇವ, ಬರ್ತಾಯ ರಾವಾದುಗೇಸಿ, ಕೊಂಡಿಮಂಚಿ, ಶಕುಲ ಆಯನ್, ಯಶವನ್ತನ್, ವಿಕ್ರಾಂತರಾಶಿ ಮರುಳನ್, ಕೊಟ್ಟಲನ್, ಪಂಚರಾನ್, ಜಯಕೀರ್ತಿ, ಸ್ವಾಮಿಚಂದನ್, ಕಣ್ಣನ್, ಗಣಕೀರ್ತಿ, ವಿಜಯ, ಓವಜನ್, ಪೊಲಮಂಚ, ವಿಮಲನ್, ಸುದಕೀರ್ತಿ, ಗುಣಪಾಲ, ಕುಳುಂಕೆಣ, ಅಜುಆಚಾರಿಸಿದ್ಧಿ, ರೂಪಶೇಖರ, ರವಲ್ಲ, ಪೊಲಮಂಚ, ವಿಮಲನ್, ಕೇವಲಿ, ದೋಣನ್, ಆರ್ಯಚಟ್ಟಸ್ಯರಾಗಿದ್ದಾರೆ. ನಾಲ್ಕನೆಯ ಗುಹೆಯಲ್ಲಿ ಕ್ರಿ.ಶ. ೭ನೇ ಶತಮಾನದ ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಕಲಾವಿದರ ಹೆಸರುಗಳು ಈ ಕೆಳಗಿನಂತಿವೆ. ಭವಸ್ವಾಮಿ, ಉದಗ್ರನ್, ಕೇಸವನ್, ನಿತ್ಯನ್, ಅನ್ರಿಮುವಕ್ಷ, ಪಂಚಣ, ಚರ್ಪೇರಿಯನ್, ರಣತಲಕಿ, ವಿಜಾಮ್ಮನ್, ಪ್ರಸನ್ನಬುದ್ಧಿ, ಕಣ್ಣ, ಗೆರೆಯನ್, ಮಾರ್ಗಜ, ಶ್ರೀನಿಧಿದೇವ, ಅಣತ್ತಮಂಚಿನ್, ಶಿಬಿ ಆಶ್ರಯನ್ ಎಂಬುವುಗಳಾಗಿವೆ. ಅದೇ ರೀತಿ ಉತ್ತರ ಕೋಟೆಯಲ್ಲಿ ಪಚಣರಿಯನ್, ಪದವಿರಸನ್, ಶ್ರೀಕರ, ಗಣಸ್ವಾಮಿ ಎಂಬ ಕಲಾವಿದರ ಹೆಸರುಗಳು ಮತ್ತು ಜಂಬುಲಿಂಗ ದೇವಾಲಯದಲ್ಲಿ ಬರಿಣಪಾಲ ಎಂಬ ಶಿಲ್ಪಿಯ ಹೆಸರುಗಳು ಕ್ರಿ.ಶ.೭ನೇ ಶತಮಾನಕ್ಕೆ ಸೇರುತ್ತವೆ. ಹಾಗೆ ಪಂಚಲಿಂಗಫಡಿಯ ಬಳಿಯಲ್ಲಿನ ಈ ಕಾಲಾವಧಿಯ ಶಾಸನದಲ್ಲಿ ದುರ್ಗಾಶಿಲ್ಪ ಮಾಡಿದವನು ಚಂದ್ರಕೀರ್ತಿ, ಶಿವಶಿಲ್ಪ ಕಡೆದವನು ಎರಂಡರ ಗಣಚ ಎಂದು ಕೆತ್ತಲಾಗಿದೆ. ಕ್ರಿ.ಶ. ೭ನೇ ಶತಮಾನದ ಶ್ರವಣಬೆಳಗೊಳದ ಶಾಸನ ಒಂದರಲ್ಲಿಯೂ ಕಲೆಯ ಅಂಶಗಳಿವೆ.[೪೫]

'ಪ್ರಾಸಾದಾನ್ತರ ಮಾನ್ವಿ ಚಿತ್ರಕನಕ ಪ್ರಜ್ವಲ್ಯದಿನ್ಮಿಕ್ಕುದಾನ್,
ಸಾಸಿರ್ವರ ಪೂಜೆದನ್ದುಯೆ ಆವರ್ಸ್ವರ್ಗ್ವಾಗ್ರಮಾನೇರುದಾರ್'

ಮಾಸೇನ ಋಷಿ ತಪಸ್ಸಿನ ಪ್ರಭಾವದಿಂದ ಸ್ವರ್ಗಕ್ಕೆ ತೆರಳಿದ ಸಂದರ್ಭವನ್ನು ಇಲ್ಲಿ ಚಿತ್ರಿಸಲಾಗಿದೆ. ಚಿತ್ರಕನಕ ಎಂಬಲ್ಲಿ ಚಿತ್ರಕಲೆಯ ಉಪಮೆ ರೀತಿಯ ವರ್ಣನೆ ಕಂಡುಬರುತ್ತದೆ.ಹೀಗೆ ಕ್ರಿ.ಶ. ೭ನೇ ಶತಮಾನದ ವರೆಗಿನ ಚಿತ್ರಕಲಾ ಸಾಹಿತ್ಯದ ಹೆಚ್ಚಿನ ವಿವರಗಳು ಶಾಸನ ಬರಹಗಳಿಂದಲೆ ತಿಳಿದುಬರುತ್ತವೆ. ಅಲ್ಲಲ್ಲಿ ಚಿತ್ರ ಶಿಲ್ಪ ಮತ್ತು ವಾಸ್ತಕಲೆಯ ಶ್ರೇಷ್ಠ ಉದಾಹರಣೆಗಳು ಈ ಕಾಲದಲ್ಲಿ ಕಂಡು ಬಂದರೂ ಸಾಹಿತ್ಯ ಕೃತಿಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂದಿಲ್ಲ.

ಕ್ರಿ.ಶ. ೮ನೇ ಶತಮಾನದ ಚಿತ್ರಕಲಾ ಸಾಹಿತ್ಯವೂ ಸಹಿತ ಶಾಸನ ರೂಪದಲ್ಲಿಯೆ ಇದ್ದು, ಬಾದಾಮಿ ಚಾಲುಕ್ಯರ ಕಾಲದ ಶಾಸನಗಳಿಂದ ಹೆಚ್ಚಿನ ಅಂಶ ತಿಳಿದುಬರುತ್ತದೆ. ಈ ಕಾಲಮಾನದ ಶಾಸನಗಳು ಬಾದಾಮಿ, ಐಹೊಳೆ, ಪಟ್ಟದಕಲ್ಲು ಪ್ರದೇಶಗಳಲ್ಲಿ ಚದುರಿದಂತೆ ರಚನೆಯಾಗಿವೆ. ಪಟ್ಟದಕಲ್ಲಿನ ಪಾಪನಾಥ ಗುಡಿಯಲ್ಲಿ ದೇವಾಲಯ ನಿರ್ಮಿಸಿದ ಮತ್ತು ಶಿಲ್ಪ ರಚನೆ ಮಾಡಿದ ಅನೇಕ ಕಲಾವಿದರ ಹೆಸರುಗಳಿದ್ದು, ಇವು ಕ್ರಿ.ಶ. ೮ನೇ ಶತಮಾನಕ್ಕೆ ಸೇರುತ್ತವೆ. ಈ ಗುಡಿಯಲ್ಲಿ ಮುಖ್ಯವಾಗಿ ಬಲದೇವ, ಅಚಪ, ದೇವಾರ್ಯ, ಬಿಮಲಗುಣ, ನೆನಕುಟ್ಟಿ, ದಾಮೋದರ, ಪುಲ್ಲಪ್ಪ, ಪುಲಿಯಳಿಮಿಂಚಿ ಎಂಬ ಕಲಾವಿದರ ಹೆಸರುಗಳಿವೆ. ಅದರ ಜೊತೆಗೆ ಈ ದೇವಾಲಯ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸಿದ್ದ 'ರೆವಡಿಓವಜ್ಜ' ಮತ್ತು 'ಅನಿವಾರಿತಾಚಾರಿಗುಂಡ' ರೆಂಬ ಇಬ್ಬರು ಶ್ರೇಷ್ಠ ಕಲಾವಿದರ ಬಗೆಗೆ ಶಾಸನ ಬರಹಗಳು ಉಲ್ಲೇಖಿಸುತ್ತವೆ. ಪಾಪನಾಥ ಗುಡಿಯ ಆಗ್ನೇಯ ದಿಕ್ಕಿನಲ್ಲಿರುವ ಈ ಕಾಲಮಾನದ ಶಾಸನದಲ್ಲಿ[೪೬] ಈ ಕೆಳಗಿನಂತಿದೆ.

೪೫. ಡಾ.ಹಾ.ಮಾ.ನಾಯಕ ; ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೧ : ಪುಟ-೫೨೪.
೪೬. ಡಾ.ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯: ಪುಟ-೧೮೮.

'ಸ್ವಸ್ತಿ ಶ್ರೀ ಶಿಲೆಮುದ್ದರ
ಮರ್ಮನ್ ಸರ್ವಸಿದ್ಧಿ ಆ
ಚಾರ್ಯರ ಚಟ್ಟರ್ ರೇವ
ಡಿ ಓವಜ್ಜರ್'

ಶಿಲೆಮುದ್ದರನ ಮೊಮ್ಮಗನಾದ ಸರ್ವಸಿದ್ಧಿ ಆಚಾರ್ಯನ ಶಿಷ್ಯನಾದ ರೇವಡಿಓವಜ್ಜನು ಶ್ರೇಷ್ಠ ಕಲಾವಿದನಾಗಿದ್ದಾನೆಂದು ಇದು ತಿಳಿಸುತ್ತದೆ. ಇದೇ ದೇವಾಲಯದಲ್ಲಿ ಮತ್ತೊಂದು ಕಡೆಗೆ ಅನಿವಾರಿತಾಚಾರಿಗುಂಡನ್ ಎಂಬ ಶಿಲ್ಪಿಯನ್ನು ಆತನ ಕಲಾವಂತಿಕೆಗಾಗಿ ಮೂರು ಬಾರಿ ಸನ್ಮಾನಿಸಿ ತ್ರಿಭುವನಚಾರಿ ಎಂದು ಬಿರುದುಕೊಟ್ಟ ಬಗ್ಗೆ ತಿಳಿಸುತ್ತದೆ. ಇನ್ನೊಂದು ಶಾಸನವು 'ಸೇನಾಚಾರ್ಯ' ಎಂಬ ಕಲಾಗುರುವನ್ನು ಹೆಸರಿಸುತ್ತದೆ.

ಚಾಲುಕ್ಯರ ಕಾಲದಲ್ಲಿ ಪ್ರಸಿದ್ಧ ಕಲಾವಿದರಾಗಿದ್ದ ನಟಸೇವ್ಯ ಮತ್ತು ಅವನ ಮಗನಾದ ಅಚಲನ್ ಇವರ ಬಗ್ಗೆ ಕ್ರಿ.ಶ. ೮ನೇ ಶತಮಾನದ ಶಾಸನಗಳು ತಿಳಿಸುತ್ತವೆ. ಪಟ್ಟದಕಲ್ಲಿನ ವಿರುಪಾಕ್ಷ ದೇವಾಲಯದಲ್ಲಿರುವ ಈ ಕಾಲದ ಎರಡು ಶಾಸನಗಳು[೪೭] ಹೀಗಿವೆ.

'ಖ್ಯಾತ ಮಹಾಪ್ರಭಾವ ಭರತಾಗಮ ಯುಕ್ತಿ ಬಹುಪ್ರಕಾ
ರದಾ ಮಾತಿನೊಳೆಲ್ಲಮನೋ ನಟಸೇವ್ಯನ ಮುನ್ತೆಯಥೋ
ಕ್ತ ಮಾರ್ಗ್ಗದಿನ್ದೀ ತೆರೆದಿದ್ದುದಗ್ರತಲ ಸಞ್ಚರಮೆಯ್ಬು
ದಿದೆನ್ನು ಪೇಳ್ದೊಡಿನ್ನಾತನೆ ನರ್ತಕಂ ನಟ
ರೊಳಗ್ಗಳಮೀ ಭುವನಾನ್ತರಾದೊಳ್ ದೇವಯ್ಯ
ಗಳಾ ಮಗಂ ಅಚಲನ್'

ಭರತನ ಆಗಮ ಶಾಸ್ತ್ರದ ಪ್ರಕಾರ ನರ್ತನ ಕಲೆಯಲ್ಲಿ, ನಟನಾ ಸಾಮರ್ಥ್ಯದಲ್ಲಿ ಮತ್ತು ಇನ್ನಿತರ ಕಲಾ ಪ್ರಕಾರಗಳಲ್ಲಿ ನಟಸೇವ್ಯನು ಪ್ರವೀಣನಾಗಿದ್ದು ಈತನನ್ನು ಸರಿಗಟ್ಟುವವರು ಸಮಸ್ತ ಭೂಮಂಡಲದಲ್ಲಿ ಯಾರೂ ಇಲ್ಲ ಎಂದು ಈ ಶಾಸನ ತಿಳಿಸುತ್ತದೆ. ಇದೆ ದೇವಾಲಯದ ಮತ್ತೊಂದು ಮಂಟಪದಲ್ಲಿರುವ ಶಾಸನ ಹೀಗಿದೆ.

'ಭರತನುತ ವಚನ ರಚನಾ ವಿರಚಿತ ನಟಸೇವ್ಯ
ಸಿಂಘನಾದೇನ ಪರನಟ ಮದಾನ್ಧಹಸ್ತೀ ಪರಿಹೀನಮದೋ
ಭವತ್ಯೇವ ನಟಸೇವ್ಯ ಭರತ ಮತಯಿತ ಪಟುತ
ರ ವಚನಾ ಶನಿ ಪ್ರಪಾತೇನ ಕುತಿಲೋನನತ ನಟಶೈಲ
ಸ್ಫುಟಿತಾನತ ಮಸ್ತಿಕಟ್ಟತಂತಿ ಅಚಲನ್'

ಭರತಮುನಿಯ ನಾಟ್ಯಶಾಸ್ತ್ರದಲ್ಲಿ ಬಲ್ಲಿದನಾದ ನಟಸೇವ್ಯನು ನಾಟ್ಯಕ್ಕೆ ನಿಂತರೆ ಉಳಿದವರಾರು ಆತನೆದುರಿಗೆ ಸರಿಸಮನಾಗಿ ನಿಲ್ಲಲಾರರು. ಆತನು ಸಿಂಹನಾದ ಮಾಡಿದರೆ ಉಳಿದ ನಟರು ಬೆದರಿದ ಆನೆಯಂತೆ ಸೋತು ಓಡಿ ಹೋಗುವರು ಎಂಬುದಾಗಿ ಇಲ್ಲಿ ಹೇಳಲಾಗಿದೆ. ಇವುಗಳಿಂದ ಆ ಕಾಲದ ಕಲಾವಿದರ ಸ್ಥಾನಮಾನಗಳು ಮತ್ತು ಅವರ ಪ್ರತಿಭೆ ಕಲಾವಂತಿಕೆಗಳು ತಿಳಿದಬರುತ್ತವೆ.

ಇವುಗಳಲ್ಲದೆ ಪಟ್ಟದಕಲ್ಲಿನಲ್ಲಿ ಇನ್ನೂ ಕೆಲವು ಕಲಾವಿದರ ಹೆಸರುಗಳು ಈ ಕಾಲಕ್ಕೆ ಸೇರುತ್ತವೆ.

೪೭. ಡಾ.ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯: ಪುಟ-೨೦೩.

ಅವುಗಳಲ್ಲಿ ಮುಖ್ಯವಾಗಿ ದುಗ್ಗಿಆಚಾರಿ ಮತ್ತು ಆತನ ಮಗ ಬಲದೇವ, ಚೆಂಗಮ್ಮ, ಶ್ರೀಬಾದಿ, ಶಿವವರ್ಧನ, ಆತನ ಮಗ ಶಿವರೂಪ, ಶಿವರೂಪನ ಮಗ ಶುಭದೇವ, ಪಾಕ, ಮತಿರಗನ್, ವೀರವಿದ್ಯಾಧರನ್, ಚರುಚರನ್, ಎಂಬ ಕಲಾವಿದರ ಹೆಸರುಗಳನ್ನು ಉಲ್ಲೇಖಿಸಬಹುದು.

ಬಾದಾಮಿ ಪರಿಸರದಲ್ಲಿನ ಕ್ರಿ.ಶ.೮ನೇ ಶತಮಾನದ ಶಾಸನಗಳಲ್ಲಿ ಕಂಡುಬರುವ ಸಾಹಿತ್ಯವನ್ನು ಸ್ಥೂಲವಾಗಿ ಗಮನಿಸಬಹುದು. ಕರ್ನಾಟಕದ ಶ್ರೇಷ್ಠ ಶಾಸನಗಳಲ್ಲಿ ಒಂದಾದ ಕಪ್ಪೆ ಅರಭಟ್ಟನ ಶಾಸನವು ಬಾದಾಮಿಯ ಬೆಟ್ಟದಲ್ಲಿದೆ. ಸಾಹಿತ್ಯ ಮೌಲ್ಯದಿಂದ ಕೂಡಿದ ಈ ಶಾಸನವು ೧೦ ಸಾಲುಗಳಲ್ಲಿ ಕಂಡರಿಸಲಾಗಿದೆ.[೪೮]

'ಕಪ್ಪೆ ಅರಭಟ್ಟನ್ ಶಿಷ್ಟಜನ ಪ್ರಿಯನ್,
ಕಷ್ಟಜನ ವರ್ಜಿತನ್, ಕಲಿಯುಗ ವಿಪರೀತನ್'

ಎಂಬುದಾಗಿ ಆರಂಭವಾಗುವ ಇದರಲ್ಲಿ ಕನ್ನಡ ಜನರ ಗುಣಲಕ್ಷಣಗಳನ್ನು ಕಪ್ಪೆ ಅರಭಟ್ಟನ ಮೂಲಕ ಹೇಳಲಾಗಿದೆ. ಈ ಶಾಸನವನ್ನು ಕಡೆದ ರೀತಿಯೆ ಒಂದು ಕಲಾತ್ಮಕ ವಿನ್ಯಾಸದಲ್ಲಿದೆ. ಶಾಸನದ ಕೆಳಭಾಗದಲ್ಲಿ ಒಂದು ವೃತ್ತಾಕಾರವನ್ನು ರಚಿಸಲಾಗಿದೆ. ಅದರೊಳಗೆ ಹತ್ತು ದಳದ ಕಮಲವನ್ನು ಚಿತ್ರಿಸಲಾಗಿದ್ದು, ವೃತ್ತದ ಕೆಳಗೆ ಮತ್ತೊಂದು ಅರಳಿದ ಕಮಲವನ್ನು ಚಿತ್ರಿಸಲಾಗಿದೆ. ಇದರಿಂದಾಗಿ ಕಮಲ ಪುಷ್ಪವನ್ನು ಹೊಂದಿದ ವೃತ್ತ ಮತ್ತು ಶಾಸನ ಪಾಠವು ಅರಳಿದ ಕಮಲದ ಮೇಲೆ ರಚಿಸಿದಂತೆ ತೋರುತ್ತದೆ. ಬಾದಾಮಿಯ ಶಿಬಾರ ಬಂಡೆಯ ಸಮೀಪ ಇರುವ ಈ ಕಾಲದ ಮತ್ತೊಂದು ಶಾಸನದಲ್ಲಿ[೪೯] ಈ ಸ್ಥಳವು ಎಷ್ಟು ಸುಂದರವಾಗಿದೆ ಎಂದು ಕಲಾತ್ಮಕವಾಗಿ ಹೇಳಲಾಗಿದೆ.

'ಮೇಲ್ತರುಗಳಿನ್ತಿನೆ ಪೂತುಸೂತಲು
ನಲಿವ ಮೋರಂ ಮುಖರ್ವ್ವನೀರ್ಗ್ಗುಳುಮ್,
(ದಿ)ತಿಯರು ವೃತದಿನ್ತು ನೋಣ್ಬೆರಿನ್
ಕೀರ್ತನಂ ಮೊಪ್ಪಿನಿನ್ದೊದು'

ಗುಡ್ಡ ಬೆಟ್ಟಗಳಿಂದ ಕೂಡಿದ ಈ ಸ್ಥಳವು ಹೂಬಿಟ್ಟ ಮರಗಳಿಂದ, ನಲಿಯುವ ನವಿಲುಗಳಿಂದ, ಹರಿವ ನೀರಿನಿಂದ ಕೂಡಿತ್ತೆಂದು ಇಲ್ಲಿ ವರ್ಣಿಸಲಾಗಿದೆ.

ಬಾದಾಮಿಯಲ್ಲಿ ಈ ಕಾಲಕ್ಕೆ ಸೇರುವ ಕಲಾವಿದರ ಹೆಸರುಗಳಲ್ಲಿ ನಂದೋವಜಾ ಕಜ್ಜಳೆ, ಚಿತ್ತರಾಗನ್, ಗೊಗ್ಗು, ಗೊರಕೇಶನ, ಕೋಳಿಗ, ಕುಮದಲಾ, ಸೆಲಿಚಿತ್ತನ್, ವನಿಗನ್, ಗುಣಪ್ರಿಯನ್, ಧರ್ಮಣ್ಣ ಎಂಬ ಹೆಸರುಗಳು ಮುಖ್ಯವಾಗಿವೆ. ಇದಲ್ಲದೆ ಕಪ್ಪೆ ಅರಭಟ್ಟನ ಶಾಸನದ ಎಡಭಾಗದ ಬೆಟ್ಟದಲ್ಲಿ ಒಂದು ಕಡೆಗೆ ಕೆಂಪುಬಣ್ಣದಲ್ಲಿ ಹುಲಿಯ ಚಿತ್ರರಚನೆ ಮಾಡಲಾಗಿದ್ದು, ಅದರ ಕೆಳಗೆ ಅಕ್ಷರಮೇರು ಮತ್ತು ದಾಮೋದರನ್ ಎಂಬ ಕಲಾವಿದರ ಹೆಸರುಗಳನ್ನು ಅದೇ ವರ್ಣದಲ್ಲಿ ಬರೆಯಲಾಗಿದೆ.[೫೦] ಬಾದಾಮಿಯ ಗುಹೆ, ದೇವಾಲಯಗಳಲ್ಲೂ ಈ ಇಬ್ಬರು ಕಲಾವಿದರ ಹೆಸರುಗಳು ಮೂರನಾಲ್ಕು ಕಡೆಗಳಲ್ಲಿ ಕಂಡುಬಂದಿರುವುದು ಗಮನಾರ್ಹವಾಗಿದೆ. ಹಾಗಾಗಿ ಶಿಲ್ಪಕಲಾವಿದರು ಚಿತ್ರಕಲಾವಿದರೂ ಆಗಿದ್ದರೆಂಬುದನ್ನು ಮತ್ತೊಮ್ಮೆ ಸ್ಪಷ್ಟಪಡಿಸಬಹುದಾಗಿದೆ.

---

೪೮. ಡಾ.ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯: ಪುಟ-೩೦೧
೪೯. ಡಾ.ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯: ಪುಟ-೩೦೨.
೫೦. ಡಾ.ದೇವರಕೊಂಡಾರೆಡ್ಡಿ : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯: ಪುಟ-೩೦೫.

ಬಾದಾಮಿಯ ಮಾಲಗಿತ್ತಿ ಶಿವಾಲಯ, ಮೇಗುಡಿಗಳಲ್ಲಿಯೂ ಕ್ರಿ.ಶ.೮ನೇ ಶತಮಾನದ ಶಾಸನಗಳಿದ್ದು ಅಲ್ಲಿ ಕೆಲವು ಕಲಾವಿದರ ಹೆಸರುಗಳಿವೆ. ಆರ್ಯಮಿಂಚಿ, ಗೋವಿಂದ, ವಿದ್ಯಾಧರ, ಬಿಸಾಟನ್, ಕೊಕಿಲ್, ಬಿಣ, ಮಹೇಂದ್ರ, ಆನಂದ, ಮಾರಪ್ಪ, ಬಿಜ್ಜಡಿ ಓವಜನ್, ಭಾಗ್ಯಮಂತನ್, ಚಿತ್ರಾಧಿಪ, ರಜಕೊಮರ ಎಂಬ ಕಲಾವಿದರ ಉಲ್ಲೇಖಗಳು ಇಲ್ಲಿವೆ. ಐಹೊಳೆಯ ಗಳಗನಾಥ ಗುಡಿಯಲ್ಲಿನ ಶಾಸನದಲ್ಲಿ 'ವಂಶಿಗ' ಎಂಬ ಕೊಳಲುವಾದಕ, ಪರಶುರಾಮ ಗುಡಿಯ ಶಾಸನದಲ್ಲಿ 'ಚಿತ್ರನ್' ಎಂಬ ಚಿತ್ರಕಲಾವಿದನನ್ನು ಹೆಸರಿಸಿದ್ದು ಇದೆ ಕಾಲಮಾನಕ್ಕೆ ಸೇರುತ್ತದೆ.

**೨. ಕವಿರಾಜಮಾರ್ಗದಿಂದ ವಚನ ಸಾಹಿತ್ಯದ ವರೆಗಿನ ಚಿತ್ರಕಲಾ ಸಾಹಿತ್ಯ :**

ಕ್ರಿ.ಶ. ೯ನೇ ಶತಮಾನದಿಂದ ಚಿತ್ರಕಲಾ ಸಾಹಿತ್ಯವು ಕರ್ನಾಟಕದಲ್ಲಿ ವಿಶಿಷ್ಟವಾಗಿ ಬೆಳೆಯಲು ಆರಂಭಿಸಿತೆನ್ನಬಹುದು. ಈ ಕಾಲದಲ್ಲಿ ಕನ್ನಡದ ಪ್ರಥಮ ಸಾಹಿತ್ಯ ಕೃತಿ ಎಂದು ಗುರುತಿಸಲಾಗುವ ಕವಿರಾಜಮಾರ್ಗವು ರಚನೆಗೊಂಡಿದ್ದು ಮಾತ್ರವಲ್ಲದೆ ಅದರಲ್ಲಿ ಅನೇಕ ಕಲಾತ್ಮಕ ಅಂಶಗಳಿರುವುದು ಗಮನಾರ್ಹ ಅಂಶವಾಗಿದೆ. ಈ ದೃಷ್ಟಿಯಿಂದ ಕನ್ನಡದಲ್ಲಿ ಕವಿರಾಜಮಾರ್ಗದಿಂದಲೇ ಚಿತ್ರಕಲಾ ಸಾಹಿತ್ಯವು ಪರೋಕ್ಷವಾಗಿ ಆರಂಭಗೊಂಡಿತೆಂದು ಹೇಳಬಹುದು. ಈ ಮುಂಚಿನ ದಿನಗಳಲ್ಲಿ ಶಾಸನ ಬರಹಗಳಿಂದ ಚಿತ್ರಕಲಾ ಸಾಹಿತ್ಯದ ಘಟ್ಟಗಳನ್ನು ಗುರುತಿಸುತ್ತ ಬಂದಿದ್ದರೆ, ಈ ಶತಮಾನದಿಂದ ಸಾಹಿತ್ಯ ಕೃತಿಗಳ ಮೂಲಕ ಚಿತ್ರಕಲಾ ಸಾಹಿತ್ಯದ ಬೆಳವಣಿಗೆಯನ್ನು ಗುರುತಿಸಬಹುದಾಗಿದೆ. ಆದರೂ ಪೂರಕವಾಗಿ ಸಮಕಾಲೀನ ಶಾಸನಗಳು ಮತ್ತು ಚಿತ್ರಕಲಾ ಕೃತಿಗಳನ್ನು ಬಳಸಿಕೊಂಡು ಅಧಿಕೃತತೆಯನ್ನು ನೀಡಬಹುದು.

ಕ್ರಿ.ಶ. ೯ನೇ ಶತಮಾನದಿಂದ ಚಿತ್ರಕಲಾ ಸಾಹಿತ್ಯವವನ್ನು ಕವಿರಾಜಮಾರ್ಗದಿಂದಲೆ ವಿವೇಚಿಸಬಹುದು. ಈ ಸಾಹಿತ್ಯ ಕೃತಿಯನ್ನು ರಚಿಸಿದ ಕವಿಗಳ ಬಗ್ಗೆ ದ್ವಂದ ನಿಲುವುಗಳಿವೆ. ನೃಪತುಂಗ ಎಂಬುದಾಗಿ ಮೊದಲು ಭಾವಿಸಲಾಗಿತ್ತಾದರೂ ಇತ್ತೀಚೆಗೆ ಆತನ ಆಸ್ಥಾನ ಕವಿ ಶ್ರೀವಿಜಯನು ಇದರ ರಚನಾಕಾರ ಎಂಬುದನ್ನು ಹೆಚ್ಚಿನವರು ಒಪ್ಪಿಕೊಂಡಿದ್ದಾರೆ. ಅದೇನೆ ಇದ್ದರೂ ಕ್ರಿ.ಶ.೮೫೦ ರಲ್ಲಿ ರಚನೆಯಾದ ಈ ಕೃತಿಯಲ್ಲಿ ಕಂಡುಬರುವ ಕಲಾಸಾಹಿತ್ಯದ ಅಂಶಗಳನ್ನು ಗಮನಿಸುವುದು ಇಲ್ಲಿ ಮುಖ್ಯವಾಗಿದೆ.

ಕವಿರಾಜಮಾರ್ಗದಲ್ಲಿ ಅನೇಕ ಕಡೆಗಳಲ್ಲಿ ಉಪಮೆ ರೀತಿಯ ಕಲಾ ವರ್ಣನೆಗಳು ಮತ್ತು ಸಾಂದರ್ಭಿಕ ಕಲಾ ವಿಚಾರಗಳು ಕಂಡುಬರುತ್ತವೆ. ಅಂತಹ ಸಂಗತಿಗಳಲ್ಲಿ ಕೆಲವು ಈ ಕೆಳಗಿನಂತಿವೆ. ಕವಿರಾಜಮಾರ್ಗ ಗ್ರಂಥವು ಒಂದು ಅಲಂಕಾರ ಗ್ರಂಥವಾಗಿದ್ದು ಈ ಬಗೆಯ ಅಲಂಕಾರ ಗ್ರಂಥಗಳನ್ನು ಬರೆಯಬೇಕಾದರೆ ಅವರು ಎಲ್ಲ ಬಗೆಯ ವಿದ್ಯೆ ಮತ್ತು ಕಲೆಗಳಲ್ಲಿ ಪಾರಂಗತರಾಗಿರಬೇಕೆಂದು (ಪದ್ಯ-೨೮)ಹೇಳಲಾಗಿದೆ.[೫೧] ಅಂಥಹ ಸಕಲ ವಿದ್ಯೆ ಮತ್ತು ಕಲೆಗಳಲ್ಲಿ ಶಕ್ತಿಪಡೆದ ವ್ಯಕ್ತಿಗಳು ಕನ್ನಡದಲ್ಲಿ ವಿಮಳೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತ ಮುಂತಾದವರಾಗಿದ್ದಾರೆಂದು ಮುಂದಿನ ಪದ್ಯದಲ್ಲಿ ಹೇಳಿದೆ. (ಪದ್ಯ-೨೯) ಮತ್ತೊಂದು ಕಡೆಗೆ ಶ್ರೀವಿಜಯ, ಚಂದ್ರ, ಲೋಕಪಾಲ ಇವರು ಸಕಲ ಕಲಾ ಪಾರಂಗತರಾಗಿದ್ದು, ಇವರನ್ನು ಮೀರಿಸುವ ಪದ್ಯಕಾವ್ಯಗಳನ್ನು ಕನ್ನಡದಲ್ಲಿ ಇದುವರೆಗೆ ರಚನೆ ಮಾಡಿಲ್ಲ ಎಂದು ಹೇಳಿದೆ (ಪದ್ಯ-೨೧೮). ಸಾಹಿತ್ಯ ವಿದ್ಯೆಯೊಳು ಪಾರಂಗತನಾಗಬೇಕಾದರೆ

---

೫೧. ಡಾ.ಹಾ.ಮಾ.ನಾಯಕ : ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೧ : ಪುಟ-೫೨೪

ಲೌಕಿಕ ಮತ್ತು ಪಾರಮಾರ್ಥಿಕ ಸಂಗತಿಗಳೊಡನೆ ಸಕಲ ಕಲಾ ವಿದ್ಯೆಗಳನ್ನು ಅರಿತಿರಬೇಕೆಂದು ಇನ್ನೊಂದು ಕಡೆಗೆ ಹೇಳಿದೆ (ಪದ್ಯ-೨೧೮).

'ಸಕಳ ಲೌಕಿಕ ಸಾಮಯಿಕೋರುವೈ
ದಿಕ ವಿಶೇಷ ವಿವೇಕ ಪರಾಯಣಂ
ಪ್ರಕಟಿತೋಕ್ತಿ ವಿವಿಕ್ತ ಕಳಾಕಳಾ
ಪಕ(ನು) ಪಾಹಿತ ಸಾಹಿತ್ಯ ವಿದ್ಯೆಯೊಳ್'

ಪೂರಕವಾಗಿರುವ ಇಲ್ಲವೆ ಉಪಮೆ ರೀತಿಯ ಕಲಾ ವರ್ಣನೆಗಳಿಗೆ ಈ ಕೆಳಗಿನ ಪದ್ಯವು ಉದಾಹರಣೆಯಾಗಿದೆ. (ಪದ್ಯ-೯೬).

'ಪೊಳೆವ ಮಿಂಚುಗಳಂತಿರೆ ಕೇತುಗಳ್
ಜಳದ ವೃಂದದ ವೋಲಿರೆ ಹಸ್ತಿಗಳ್
ಗಳಿತ ಧಾರೆಗಳಂತಿರೆ ಪತ್ತಿಗಳ್
ಬಳಸಿ ಕಾರ್ಗೆಣೆಯಾಯ್ತು ಮಹಾಹವಂ'

ಈ ಮೇಲಿನ ಪದ್ಯದಲ್ಲಿ ಹೊಳೆಯುವ ಮಿಂಚಿನಂತೆ ಧ್ವಜಗಳು, ಮೋಡದ ಸಮೂಹದಂತೆ ಆನೆಗಳು, ಧಾರಾವರ್ಷದಂತೆ ಕಾಲಾಳುಗಳು, ಕಾಣಿಸಿಕೊಂಡವೆಂದು ಯುದ್ಧ ಚಿತ್ರವನ್ನು ಕವಿರಾಜಮಾರ್ಗಕಾರನು ಬಣ್ಣಿಸುತ್ತಾನೆ. ಇನ್ನೊಂದು ಪದ್ಯದಲ್ಲಿ ನಗರವು ಹೇಗೆ ವಿವಿಧ ವಿದ್ಯೆಗಳಲ್ಲಿ ಪಾರಂಗತರಾದವರಿಂದ ತುಂಬಿಕೊಂಡಿತ್ತೆಂದು ಹೇಳಲಾಗಿದೆ. (ಪದ್ಯ-೬).

'ವ್ಯಾಕರಣ ಕಾವ್ಯನಾಟಕ
ಲೋಕಕಳಾ ಸಮಯ ಮಾದಳಂ ಕೃತಿಗಳೊಳಂ
ವ್ಯಾಕುಳನಲ್ಲದ ನೇಕೇವಿ
ವೇಕ ಬೃಹಸ್ಪತಿಯ ನಗರಮಂ ಪುಗುತರ್ಪಂ'

ವ್ಯಾಕರಣ ಪಂಡಿತರು, ಕಾವ್ಯ ನಾಟಕಾದಿ ಲೋಕಕಲೆಗಳಲ್ಲಿ ಬಲ್ಲಿದರು ಮತ್ತು ಇನ್ನಿತರ ವಿದ್ಯೆಗಳಲ್ಲಿ ಪಾರಂಗತರಾದ ವಿವೇಕವಂತರಿಂದ ನಗರವು ತುಂಬಿಕೊಂಡಿತ್ತೆಂದು ತಿಳಿಸುತ್ತದೆ. ಮತ್ತೊಂದು ಕಡೆಗೆ ಅಂದಿನ ಜನತೆ, ವ್ಯಾಕರಣ, ಛಂದಸ್ಸು, ಅಲಂಕಾರ, ಕಾವ್ಯ, ನಾಟಕ, ಸಂಗೀತ, ಚಿತ್ರಾದಿ ಅನೇಕ ಕಲೆಗಳಲ್ಲಿ ಪ್ರಸಿದ್ಧರಾಗಿದ್ದರೆಂಬ ವಿವರ ದೊರೆಯುತ್ತದೆ (ಪದ್ಯ-೧೦೭).

ಕವಿರಾಜಮಾರ್ಗದ ೩ನೇ ಭಾಗದ ೧೯೩ನೇ ಪದ್ಯದಲ್ಲಿ ಕವಿ ಹೀಗೆ ಹೇಳಿದ್ದಾನೆ. ಚಿತ್ರಕಾರನು ಹೇಗೆ ವಿವಿಧ ಬಣ್ಣಗಳ ಬೆರಕೆಯಿಂದ ಚಿತ್ರ ಸುಂದರವಾಗಿ ಕಂಗೊಳಿಸುವಂತೆ ಮಾಡುತ್ತಾನೋ ಹಾಗೆ ವರ್ಣಕ್ರಮಾ ವೃತ್ತಿಯಿಂದ ಎಂದರೆ ಅಕ್ಷರ ವಿನ್ಯಾಸ ಕ್ರಮದಿಂದ ಕವಿರಾಜಮಾರ್ಗ ಗ್ರಂಥವನ್ನು ರಚಿಸಲಾಗಿದೆ[೫೨] ಎಂದು ಹೇಳಿಕೊಂಡಿದ್ದಾನೆ.

ಕ್ರಿ.ಶ. ೯ನೇ ಶತಮಾನದಲ್ಲಿ ಗುಣವರ್ಮ(೧) ಎಂಬ ಕವಿ ಆಗಿ ಹೋಗಿದ್ದು, ಇವನ ಬರ್ಹಗಳು ಕೆಲವು ಲಕ್ಷಣ ಗ್ರಂಥಗಳಲ್ಲಿ ಮತ್ತು ಸಂಕಲನ ಗ್ರಂಥಗಳಲ್ಲಿ ಉಳಿದುಕೊಂಡಿವೆ.[೫೩] ಅವುಗಳಲ್ಲಿ ಕಲಾತ್ಮಕ ವಿಚಾರಗಳು ವ್ಯಕ್ತವಾಗಿದ್ದು, ಚಿತ್ರಕಲಾ ಸಾಹಿತ್ಯದ ಪರಿಯನ್ನು ತಿಳಿಸಿಕೊಡುತ್ತವೆ. ಹೆಣ್ಣನ್ನು ಬಣ್ಣಿಸುವ ಆತನ ಒಂದು ಪದ್ಯ ಹೀಗಿದೆ.

೫೨. ಎಂ.ವಿ.ಸೀತಾರಾಮಯ್ಯ : (ಸಂ) : ಕವಿರಾಜಮಾರ್ಗ : ಪುಟ-೩೯೮.
೫೩. ಡಾ. ಹಂಪಾ ನಾಗರಾಜಯ್ಯ : ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ(೩) : ಪುಟ-೫೭೫

'ಸಣ್ಣಂ ನಡು ತಿಣ್ಣಂ ಮೊಲೆ
ಬಣ್ಣಂ ಪಸುರ್ವೆಸರಿ ಬಣ್ಣವಧರಂ ಮಧುರಂ'

ಹೆಣ್ಣಿನ ತುಟಿಗಳನ್ನು ವರ್ಣಿಸುವಾಗ ಬಣ್ಣದ ಪ್ರಸ್ತಾಪ ಇಲ್ಲಿ ಬಂದಿದೆ. ಕವಿರಾಜಮಾರ್ಗಕಾರನ ಸಮಕಾಲೀನ (ಕ್ರಿ.ಶ.೮೫೦) ಕವಿಯಾದ 'ಅಸಗ'ನು ವರ್ಧಮಾನಪುರಾಣ ಮತ್ತು ಶಾಂತಿಪುರಾಣಗಳೆಂಬ ಸಾಹಿತ್ಯ ಕೃತಿಗಳನ್ನು ರಚನೆ ಮಾಡಿದ್ದು[೫೪] ಇವುಗಳಲ್ಲಿ ಚಿತ್ರಕಲೆಯ ಸಂಗತಿಗಳು ಸಾಂದರ್ಭಿಕವಾಗಿ ಉಲ್ಲೇಖಗೊಂಡಿವೆ. ಚಿತ್ರ, ಚಿತ್ರಪಟ, ಚಿತ್ರಕಲೆ, ಬಣ್ಣ. ಆಕಾರ, ಭಿತ್ತಿ, ರೂಪದರ್ಶಿ ಮುಂತಾದ ವಿಷಯಗಳು ಇಲ್ಲಿ ಹೇಳಲ್ಪಟ್ಟಿವೆ. ಈ ಕಾಲದ ಇನ್ನೊಬ್ಬ ಕವಿಯಾದ 'ಕುಮುದೇಂದು' ಎಂಬವನು 'ಸಿರಿಭೂವಲಯ' ಎನ್ನುವ ಗಣಿತ ಪದ್ಧತಿಯ ಸಾಹಿತ್ಯ ಕೃತಿಯನ್ನು ರಚನೆ ಮಾಡಿದ್ದಾನೆ.[೫೫] ಗಣಿತ ಪದ್ಧತಿಯ ಪ್ರಮೇಯಗಳನ್ನು ಬಿಡಿಸುವಲ್ಲಿ ಬಳಸಲಾಗಿರುವ ಕೆಲವು ಉದಾಹರಣೆಗಳಲ್ಲಿ ಚಿತ್ರಕಲೆಯ ಸಂಗತಿಗಳಾದ ಬಣ್ಣ, ರೇಖೆ, ಆಕಾರ, ಅವಕಾಶ, ಚಿತ್ರ ಎನ್ನುವಂತಹ ಶಬ್ದಗಳು ಬಳಕೆಗೊಂಡಿವೆ.

ಕ್ರಿ.ಶ.೧೦ನೇ ಶತಮಾನದಲ್ಲಿ ರಚನೆಯಾದ ಸಾಹಿತ್ಯ ಕೃತಿಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಲಾವಿಚಾರಗಳು ವ್ಯಕ್ತವಾಗಿವೆ. ವರ್ಣನೆಯ ಸಂದರ್ಭದಲ್ಲಿ ಉಪಮೆ ರೀತಿಯಲ್ಲಿ ಚಿತ್ರಕಲೆಗೆ ಸಂಬಂಧಿಸಿದ ಸಂಗತಿಗಳು ಹೇಳಲ್ಪಟ್ಟಿವೆ. ಕನ್ನಡದ ಶ್ರೇಷ್ಠ ಕವಿಗಳಾದ ಪಂಪ, ಪೊನ್ನ, ರನ್ನ, ನಯಸೇನ, ನಾಗಚಂದ್ರರಂತವರು ಈ ಶತಮಾನದಲ್ಲಿ ಬಾಳಿದವರಾಗಿದ್ದಾರೆ. ಕನ್ನಡದ ಶ್ರೇಷ್ಠ ಕವಿಗಳಲ್ಲೊಬ್ಬನಾದ ಪಂಪನು (ಕ್ರಿ.ಶ.೯೪೦) ಚಾಲುಕ್ಯ ದೊರೆ ಅರಿಕೇಸರಿಯ ಆಸ್ಥಾನದಲ್ಲಿದ್ದವನು. ಕನ್ನಡ ಸಾಹಿತ್ಯ ಲೋಕಕ್ಕೆ ಮಹೋನ್ನತ ಕೃತಿಗಳನ್ನು ನೀಡಿದ ಪಂಪನು ತನ್ನ ಕೃತಿಗಳಲ್ಲಿ ಅನೇಕ ಕಲಾವಿಚಾರಗಳನ್ನು ಬಳಸಿಕೊಂಡಿದ್ದಾನೆ. ಪಂಪನು ಆದಿಪುರಾಣದಲ್ಲಿ ಆದಿತೀರ್ಥಂಕರ ಚರಿತೆ, ವಿಕ್ರಮಾರ್ಜುನ ವಿಜಯ ಎಂಬ ಸಾಹಿತ್ಯ ಕೃತಿಗಳನ್ನು ರಚನೆ ಮಾಡಿದ್ದು, ಅವೆಲ್ಲವುಗಳಲ್ಲಿ ಸಾಂಧರ್ಭಿಕವಾಗಿ ಚಿತ್ರಕಲೆಯ ಸಂಗತಿಗಳು ಉಲ್ಲೇಖಗೊಂಡಿವೆ.

'ವಿಕ್ರಮಾರ್ಜುನ ವಿಜಯ' ಕೃತಿಯಲ್ಲಿ ಅರ್ಜುನ ಇಂದ್ರಕೀಲ ಪರ್ವತಕ್ಕೆ ಬಂದಾಗ ಅಲ್ಲಿನ ಶರತ್ಕಾಲದ ವರ್ಣನೆ ಮಾಡುವಾಗ ಕಲೆಯ ಬಗೆಗಿನ ಸಂಗತಿಗಳು ವ್ಯಕ್ತವಾಗಿವೆ.[೫೬]

'ಪುಳಿಯೊಳ್ ಕರ್ಚಿದ ಬಾಳಬಣ್ಣಮನೆ ಪೋಲ್ತಾಕಾಶ ಮಾಕಾಶಮಂ
ಡಳಯಂ ಪರ್ವಿದ ಬೆಳ್ಮುಗಿಲ್ ಮುಗಿಲ ಬೆಳ್ಪೊಳ್ಪೊಕ್ಕು ತಳ್ಪೊಯ್ಯೆ'

ಮೇಲಿನ ಪದ್ಯದಲ್ಲಿ ನೀಲಿಬಣ್ಣ, ಬಿಳಿಬಣ್ಣ, ಆಕಾರ ಎಂಬಂತಹ ಸಂಗತಿಗಳು ಬಳಕೆಯಾಗಿವೆ. ಮತ್ತೊಂದು ಕಡೆಗೆ ಪಾಂಡವರು ಕಾಮ್ಯಕವನಕ್ಕೆ ಬಂದಾಗ ಅಲ್ಲಿನ ಮಳೆಗಾಲದ ವರ್ಣನೆ ಮಾಡುವಾಗ ಪಂಪನು ಬಣ್ಣದ ಉಪಮೆಯನ್ನು ಬಳಸಿಕೊಂಡಿದ್ದು ಕೆಳಗಿನ ಸಾಲಿನಿಂದ ತಿಳಿದುಬರುತ್ತದೆ. 'ಕರಿಯ ಮುಗಿಲ್ಗಳಿಂ ಗಗನ ಮಂಡಳ ಮೊಪ್ಪಿರೆ ಸೋಗೆಯಿಂ ವನಾಂ' ಎಂಬುದಾಗಿ ವಿವರಣೆಯು ಮುಂದುವರೆಯುತ್ತದೆ. ಮುಂದಿನ ಸಾಲುಗಳಲ್ಲಿ ಕೆಂಪು, ಹಸಿರು, ಬಿಳುಪು, ನೀಲಿ ಮತ್ತು ಕಪ್ಪುವರ್ಣಗಳ ಸಂಗಮಕಾಲ ಮಳೆಗಾಲವಾಗಿದೆ ಎಂದು ಪಂಪ ಹೇಳುತ್ತಾನೆ. ಬಣ್ಣಗಳ ವಿಷಯದಲ್ಲಿ ಪಂಪ ತುಂಬಾ ಕುತೂಹಲಕಾರಿಯಾಗಿ ವರ್ಣಿಸುತ್ತಾನೆ.[೫೭] ಸೂರ್ಯಾಸ್ತದ ಒಂದು ವರ್ಣನೆಯಲ್ಲಿ ಹೀಗೆ ಹೇಳಿದ್ದಾನೆ :

೫೪. ಡಾ.ಎಂ.ಎಂ.ಕಲಬುರ್ಗಿ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ(೧) : ಪುಟ-೧೧೫
೫೫. ಡಾ.ಎಂ.ಎಂ.ಕಲಬುರ್ಗಿ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ(೧) : ಪುಟ-೧೧೪
೫೬. ಡಾ.ಹಾ.ಮಾ.ನಾಯಕ : ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-(೧) : ಪುಟ-೬೧೦.
೫೭. ಡಾ.ಹಾ.ಮಾ.ನಾಯಕ : ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-(೧) : ಪುಟ-೬೨೧.

‘ಪಗೆಸುಗಿವನ್ನೆಗಂ ಮಸೇನ ವೀರಭಟರ್ಕಳ ರೌದ್ರಮಪ್ಪಕೆ
ಯ್ಯು ಗಳಿನಗುರ್ವಿನದ್ಭುತ ದಿನುರ್ವಿದ ಕೆಂಗಿಡಿಗಳ್ ಪಳಂಚಿ ತೊ
ಟ್ಟಿಗೆ ಕೊಳೆಪಾಯ್ದು ವೊಲ್ ಪೊಳೆವ ಸಂಜೆಯ ಕೆಂಪದು ಸಾಣೆಗೊಡ್ಡಿದಿ
ಟ್ಟಿಗೆಯ ರಜಂಬೊಲೆಂಬನಗಮಸ್ತ ಮಯಕ್ಕಿರಿಂದಂ ದಿವಾಕರಂ’

ಇಲ್ಲಿ ಕೆಂಪು, ಬಿಳಿ, ನಸುಗೆಂಪು ಬಣ್ಣಗಳ ಉಲ್ಲೇಖವಿದೆ. ಇದರಂತೆ ವಿಕ್ರಮಾರ್ಜುನ ವಿಜಯದಲ್ಲಿ ಪದ್ಯ ೮, ೧೨, ೧೫೬ ಗಳಲ್ಲಿ ಕೆಂಪು, ಬಿಳಿ, ಹಸಿರು, ಕಪ್ಪು, ಹಳದಿ ಬಣ್ಣಗಳ ಪ್ರಸ್ತಾಪ ಬರುತ್ತದೆ.

ಪಂಪನ ಮತ್ತೊಂದು ಕೃತಿ ಆದಿ ಪುರಾಣದಲ್ಲೂ[೫೮] ಕಲಾಸಾಹಿತ್ಯಕ್ಕೆ ಪೂರಕವಾಗಿರುವ ಅಂಶಗಳಿವೆ. ಚಿತ್ರ ರಚನೆಯ ವಿಧಾನ, ಚಿತ್ರಶೈಲಿ, ಚಿತ್ರಪಟ, ಬಣ್ಣಗಳು, ಹೀಗೆ ಚಿತ್ರಕಲೆಯ ಹಲವು ಸಂಗತಿಗಳು ಇಲ್ಲಿ ಹೇಳಲ್ಪಟ್ಟಿವೆ. ಉದಾಹರಣೆಗಾಗಿ ಒಂದೆರಡು ಸಾಲುಗಳನ್ನು ಗಮನಸಬಹುದು. ವಜ್ರಜಂಘನೆಂಬವನು ಶ್ರೀಮತಿ ಬರೆದ ಚಿತ್ರಪಟವನ್ನು ನೋಡಿ ಹೀಗೆ ಹೇಳುವನು.

‘ಇದು ಎಮ್ಮಯಪಟಂ, ಎಮ್ಮಯ ಕೂಸಿನ ಚಿತ್ರಂ’ ಮತ್ತೊಂದು ಕಡೆಗೆ ಚಿತ್ರಪಟವನ್ನು ನೋಡಿ ‘ತಿಳಿದ ಮರ್ದಪ್ಪಿದಂದ ಮಣಮಿಲ್ಲದಲೀಪಟದೊಳ್’ ಎನ್ನುತ್ತಾನೆ. ಪಂಪನು ಚಿತ್ರಕಲೆಯ ಅನೇಕ ವಿಷಯಗಳನ್ನು ಪರಿಣಾಮಕಾರಿಯಾಗಿ ತನ್ನ ಕೃತಿಗಳಲ್ಲಿ ತಂದಿದ್ದು, ನೋಡಿದರೆ ಪಂಪನು ಸಂಗೀತ, ಚಿತ್ರ, ಶಿಲ್ಪ, ನೃತ್ಯ, ವೈದ್ಯ. ರಾಜನೀತಿ, ಅರ್ಥಶಾಸ್ತ್ರ, ಕಾಮಶಾಸ್ತ್ರ ಮುಂತಾದ ವಿದ್ಯೆಗಳಲ್ಲಿ ಬಲ್ಲಿದನಾಗಿದ್ದನೆಂಬ ವಿದ್ವಾಂಸರ ಅಭಿಪ್ರಾಯಕ್ಕೆ[೫೯] ಸಹಮತ ವ್ಯಕ್ತಪಡಿಸಬಹುದಾಗಿದೆ.

ಕ್ರಿ.ಶ. ೧೦ನೇ ಶತಮಾನದ ಮತ್ತೊಬ್ಬ ಕವಿಯಾದ ಶಿವಕೋಟಾಚಾರ್ಯನು ವಡ್ಡಾರಾಧನೆ ಎಂಬ ಸಾಹಿತ್ಯ ಕೃತಿ ರಚಿಸಿದ್ದಾನೆ.[೬೦] ಇದರಲ್ಲಿ ಹತ್ತೊಂಭತ್ತು ಕಥಾಪ್ರಸಂಗಗಳಿವೆ. ಪ್ರತಿಯೊಂದರಲ್ಲೂ ಚಿತ್ರಕಲಾ ವಿಷಯಗಳು ಬಂದಿವೆ. ಸನತ್ಕುಮಾರ ಕಥೆಯಲ್ಲಿರುವ ಉಲ್ಲೇಖ ಹೀಗಿದೆ :

‘ಶರತ್ ಕಾಲದ ಮುಗಿಲೊಳೋರಂತಪುರ ನಾದಮಾನುಂವಿ
ಚಿತ್ರಮಪ್ಪುದುಂ, ಸಹಸ್ರಕೂಟವೆಂಬ ಜಿನಾಲಯಮಂ ಮಾಡಿಸಿ’

ಇಲ್ಲಿ ಸಹಸ್ರಕೂಟವೆಂಬ ಜಿನಾಲಯವನ್ನು ಕಟ್ಟಿಸಿ ಅದನ್ನು ಚಿತ್ರಕಲಾ ಕೃತಿಗಳಿಂದ ಅಲಂಕರಿಸಿದ ಬಗೆಗೆ ಹೇಳಲಾಗಿದೆ.

ಕ್ರಿ.ಶ. ೧೦ನೇ ಶತಮಾನದ ಮತ್ತೊಬ್ಬ ಪ್ರಸಿದ್ಧ ಕವಿಯಾದ ರನ್ನನು ಸಾಹಸಭೀಮ ವಿಜಯ (ಗಧಾಯುದ್ಧ) ಪರಶುರಾಮ ಚರಿತೆ, ಅಜಿತಪುರಾಣ, ಚಕ್ರೇಶ್ವರ ಚರಿತೆ, ರನ್ನಕಂದ ಎಂಬ ಕೃತಿಗಳನ್ನು ಬರೆದಿದ್ದಾನೆ. ಇವುಗಳೆಲ್ಲವೂ ಸಾಂದರ್ಭಿಕವಾಗಿ ಚಿತ್ರಕಲೆಯ ಉಲ್ಲೇಖಗಳನ್ನು ಹೊಂದಿವೆ. ಅಜಿತನಾಥ ಪುರಾಣದಲ್ಲಿ ಅನೇಕ ಬಗೆಯ ವರ್ಣಗಳ ಪ್ರಸ್ತಾಪವಿದೆ.[೬೧] ಆರನೆಯ ಅಧ್ಯಾಯದಲ್ಲಿ ಬಿಳಿ, ಕೆಂಪು, ಕೇಸರಿ, ಕಪ್ಪು, ಹಳದಿ, ಇತ್ಯಾದಿ ವರ್ಣಗಳ ಬಗ್ಗೆ ಹೇಳಲಾಗಿದೆ. ಅದೇ ರೀತಿ ಗಧಾಯುದ್ಧ ಕೃತಿಯ ೯ನೇ ಅಧ್ಯಾಯದ ೩೩ನೇ ಶ್ಲೋಕದಲ್ಲಿ ಅಶ್ವತ್ಥಾಮನು ಉಪಪಾಂಡವರ ತಲೆಗಳನ್ನು ತಂದಾಗ ‘ಆಮನೆ ಕೆಮ್ಮನೆಯಾಯ್ತು ರಕ್ತದಿಂದ’ ಎಂದು ಹೇಳುವಲ್ಲಿ ಕೆಂಪು ಬಣ್ಣದ ಪ್ರಸ್ತಾಪವಿದೆ.

---

೫೮. ಡಾ.ಜಿ.ಎಸ್.ಶಿವರುದ್ರಪ್ಪ: (ಸಂ) ; ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೧) : ಪುಟ-೩೨೫
೫೯. ಡಿ.ಎಲ್.ನರಸಿಂಹಾಚಾರ್ : ಓಲ್ಡ ಕನ್ನಡ ಲಿಟರೇಚರ್ : ಪುಟ-೯೨
೬೦. ಡಾ.ಜಿ.ಎಸ್.ಶಿವರುದ್ರಪ್ಪ: (ಸಂ) ; ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೧) : ಪುಟ-೩೨೦
೬೧. ಡಾ.ಜಿ. ಎಸ್. ಶಿವರುದ್ರಪ್ಪ : (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೧) : ಪುಟ-೨೦೩

ಇವುಗಳಲ್ಲದೆ ಈ ಶತಮಾನದಲ್ಲಿ ಇನ್ನೂ ಕೆಲವರು ತಮ್ಮ ಕೃತಿಗಳನ್ನು ರಚನೆ ಮಾಡಿದ್ದು, ಅವುಗಳಲ್ಲಿ ಕಲಾ ವಿಚಾರಗಳು ಉಲ್ಲೇಖಗೊಂಡಿವೆ. ಚಾವುಂಡರಾಯ (೯೭೮) ಚಾವುಂಡರಾಯ ಪುರಾಣ, ಪೊನ್ನನು (೯೫೦) ಶಾಂತಿಪುರಾಣ, ಭುವನೈಕ್ಯ ರಾಮಾಭ್ಯುದಯ, ಜಿನಾಕ್ಷರ ಮಾಲೆ, ಸೋಮದೇವಸೂರಿ (೯೫೯) ಯಶಸ್ತಿತಿಲಕ ಎಂಬ ಗ್ರಂಥಗಳನ್ನು ಬರೆದಿದ್ದು ಇವುಗಳಲ್ಲಿ ಸಾಂದರ್ಭಿಕ ಕಲಾಸಂಗತಿಗಳಿವೆ.

ಈ ಕಾಲದ ಮತ್ತೊಬ್ಬ ಕವಿಯಾದ ೧ನೇ ನಾಗವರ್ಮನು (೯೯೦) ಕರ್ನಾಟಕ ಕಾದಂಬರಿ ಮತ್ತು ಛಂದೋಂಬುಧಿ ಎಂಬ ಕಾವ್ಯಗಳನ್ನು ರಚಿಸಿದ್ದಾನೆ.[೭೨] ಇವುಗಳಲ್ಲಿ ಕರ್ನಾಟಕ ಕಾದಂಬರಿಯು ಪ್ರಸಿದ್ಧ ಕೃತಿಯಾಗಿದೆ. ಬಾಣಭಟ್ಟನ ಕಾದಂಬರಿಯ ಕಥಾಹಂದರವೆ ಇದಾಗಿದೆ. ಬಾಣನ ಕಾದಂಬರಿಯಲ್ಲಿ ಕಥೆಗಿಂತ ವರ್ಣನೆ ಹೆಚ್ಚು. ಒಬ್ಬ ಚಿತ್ರಕಾರ ವಿವಿಧ ಬಣ್ಣಗಳಿಂದ ಆಕರ್ಷಕ ಚಿತ್ರರಚಿಸಿ ನಮ್ಮೆದುರಿಗೆ ಇರಿಸುವಹಾಗೆ ಬಾಣಭಟ್ಟನು ತನ್ನ ಪದವಿನ್ಯಾಸ, ಚಮತ್ಕಾರದಿಂದಲೆ ಚಿತ್ರಿಸಿ ತೋರಿಸಿದ್ದಾನೆ. ಹಾಗಾಗಿ ಈ ಕಾದಂಬರಿಯು ಒಂದು ಸಮಗ್ರ ಚಿತ್ರಶಾಲೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಇದರಲ್ಲಿ ಒಂದು ಚಿತ್ರ ಪರಂಪರೆಯೇ ಇದೆ. ಅಚ್ಛೋದ ಸರೋವರ, ತಾರಾಚಲಪರ್ವತ, ಸಿದ್ಧಾಶ್ರಮ, ಕಾದಂಬರಿಯ ಅಂತಪುರ, ಜಾಬಾಲಿ ಋಷಿಗಳ ಆಶ್ರಮ, ಚಂದ್ರಾಪೀಡನ ಅರಮನೆ ಇಲ್ಲೆಲ್ಲ ಚಿತ್ರಕಲೆಯ ಸುಂದರ ವರ್ಣನೆಗಳಿವೆ. ಹಾಗಾಗಿ ಇದೊಂದು ರೀತಿಯಲ್ಲಿ ಚಿತ್ರಕಲೆಯ ಪೂರಕ ಸಾಹಿತ್ಯ ಕೃತಿ ಎನ್ನಬಹುದು.

ಈ ಶತಮಾನದ ಇನ್ನೊಬ್ಬ ಕವಿಯಾದ ಜನ್ನನು ತನ್ನ ಕೃತಿಗಳಲ್ಲಿ ಸಾಂದರ್ಭಿಕವಾಗಿ ಕಲಾ ವಿಚಾರಗಳನ್ನು ಪ್ರಸ್ತುತಪಡಿಸುವ ಮೂಲಕ ಕಲಾಸಾಹಿತ್ಯದ ಬೆಳವಣಿಗೆಗೆ ಪರೋಕ್ಷವಾಗಿ ಸಹಕಾರಿಯಾಗಿದ್ದಾನೆ. ಈತನ ಯಶೋಧರ ಚರಿತವು ಕಲೆಯ ಬಗೆಗಿರುವ ರೇಖೆ, ಚಿತ್ರ, ಆಕಾರ, ಬಣ್ಣ, ರೂಪ, ಮುಂತಾದ ಸಂಗತಿಗಳ ಕುರಿತಾಗಿ ಹೇಳುತ್ತದೆ. ಈ ಕಾವ್ಯದ ನಾಲ್ಕನೆಯ ಅಧ್ಯಾಯ, ಎಂಭತ್ತೈದನೆಯ ಶ್ಲೋಕದಲ್ಲಿ ಎರಡು ಸಾಲು ಹೀಗಿವೆ

'ಕೆಲಕೊತ್ತು ಚಿತ್ರಿಕೇಪರಿಯಣಮಂ
ನೃಪೇಶ್ವರಿಯನಾ ರೋಗಿಸಲ್'

ಕ್ರಿ.ಶ. ೧೦ನೇ ಶತಮಾನದ ಕೆಲವು ಶಾಸನ ಬರಹಗಳು ಸಹಿತ ಚಿತ್ರಕಲೆಯ ಸಂಗತಿಗಳನ್ನು ತಿಳಿಸುವ ಮೂಲಕ ಚಿತ್ರಕಲಾ ಸಾಹಿತ್ಯದ ಅಂದಿನ ಸ್ಥಿತಿಗತಿಗಳನ್ನು ಸ್ಥೂಲವಾಗಿ ತಿಳಿಸಿಕೊಡುತ್ತವೆ. ಇಲ್ಲಿ ಚಿತ್ರಕಲೆ, ಬಣ್ಣ, ಆಕಾರ, ರೂಪ, ಸೌಂದರ್ಯ, ಭಿತ್ತಿ, ಕುಂಚ ಮುಂತಾದ ವಿಚಾರಗಳಲ್ಲದೆ ಕಲಾವಿದರ ಹೆಸರು ತಿಳಿದುಬರುತ್ತವೆ. ಶಾಸನಗಳನ್ನು ಕೊರೆಯುವ ವ್ಯಕ್ತಿಗಳು ಸಾಮಾನ್ಯವಾಗಿ ಶಿಲ್ಪ ಮತ್ತು ಚಿತ್ರಕಲಾ ಪ್ರಕಾರಗಳನ್ನು ಬಲ್ಲಿದವರಾಗಿರುತ್ತಾರೆ ಎಂಬುದು ಇಂದಿಗೂ ಸತ್ಯವಾದ ಸಂಗತಿಯಾಗಿದೆ. ಕಲಾವಿದರ ಹೆಸರುಗಳನ್ನು ಮತ್ತು ಕಲಾ ವಿಷಯಗಳನ್ನು ಹೊಂದಿದ ಕೆಲವು ಶಾಸನ ಬರಹಗಳು ಈ ಕೆಳಗಿನಂತಿವೆ.

ಗದಗ ಜಿಲ್ಲೆಯ ನರಗುಂದ ತಾಲೂಕಿನ ದಂಡಾಪುರದ ಶಾಸನವು ಕ್ರಿ.ಶ.೯೧೯ರಲ್ಲಿ ರಾಷ್ಟ್ರಕೂಟ ಅರಸ ನಾಲ್ಕನೇ ಗೋವಿಂದನ ಕಾಲಕ್ಕೆ ರಚನೆಯಾಗಿದೆ. ಇದನ್ನು ಶ್ರೀವಿಜಯ ಎಂಬ ಕಲಾವಿದ ಕೆತ್ತಿದ್ದಾನೆ.

೭೨. ಡಾ.ಹಾ.ಮಾ.ನಾಯಕ : ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೧ : ಪುಟ-೩೯೫.

ಹಾವೇರಿ ಜಿಲ್ಲೆ ಶಿಗ್ಗಾಂವ ತಾಲೂಕಿನ ಕಳಸದಲ್ಲಿರುವ ಶಾಸನವು ಕವಿರಾಜ ಎಂಬವನಿಂದ ಕೆತ್ತಲ್ಪಟ್ಟಿದೆ. ಅದೇ ರೀತಿ ಚಿತ್ರದುರ್ಗ ಜಿಲ್ಲೆ ಭರಮಸಾಗರ ಕಲ್ಲೇಶ್ವರ ದೇವಾಲಯದಲ್ಲಿನ ಶಾಸನವನ್ನು ಕಲಾವಿದ ಕಾಚಯ್ಯನೆಂಬವನು ಕೆತ್ತಿದ್ದಾನೆ. ಹಾಸನ ಜಿಲ್ಲೆ ಹೊಳೆನರಸೀಪುರ ತಾಲೂಕಿನ ಅಂಕನಾಥಪುರದ ಸುಬ್ರಹ್ಮಣ್ಯ ದೇವಾಲಯದ ಶಾಸನವು (೯೫೦) ಇದೆ ಶತಮಾನದಲ್ಲಿ ರಚನೆಯಾಗಿದೆ. ೧೬ ಸಾಲುಗಳುಳ್ಳ ಈ ಶಾಸನದ ಕೊನೆಯಲ್ಲಿ ಬಲದೇವಂ ಬರೆದಂ ಎಂದು ಹೇಳಿದೆ. ಹಳೇಬೀಡಿನ ಬಸ್ತಿಹಳ್ಳಿಯ ವೀರಣ್ಣ ದೇವಸ್ಥಾನದ ಶಾಸನವನ್ನು (೯೫೩) ಕಲಾವಿದ ಶ್ರೀಧರಯ್ಯ ಎಂಬವನು ರಚಿಸಿದ್ದರೆ, ಕೋಲಾರ ಜಿಲ್ಲೆ ಚಿಂತಾಮಣಿ ತಾಲೂಕಿನ ಕುರುಬೂರು ಸೋಮೇಶ್ವರ ದೇವಾಲಯದ ಶಾಸನವನ್ನು (೯೬೦) ಕಬ್ಬದ ನಾಗಮಯ್ಯನು ಕೆತ್ತಿದ್ದಾನೆ. ತುರುವನೂರಿನ ಬೇವಿನಹಳ್ಳಿ ಆಂಜನೇಯ ದೇವಾಲಯದ ಶಾಸನವನ್ನು (೯೬೮) ಸುಬಗ ಎಂಬವನು ಕೆತ್ತಿದ್ದರೆ, ಗದಗ ತಾಲೂಕಿನ ನಾಗಾವಿ ಗ್ರಾಮದ ನಾಗಾರ್ಜುನ ದೇವಾಲಯದ ಶಾಸನದಲ್ಲಿ ಅದನ್ನು ರಚಿಸಿದ ಸಾಮಿಯಣ್ಣನು ಮಾಧುರ್ಯ, ಸಕಲ ಕಲಾಚಾತುರ್ಯಗಳಲ್ಲಿ ತನ್ನನ್ನು ಮೀರಿಸುವವರು ಬೇರಾರಿಲ್ಲವೆಂದು ಹೇಳಿಕೊಂಡಿದ್ದಾನೆ.

ಗದಗ ಜಿಲ್ಲೆ ರೋಣ ತಾಲೂಕಿನ ಸವಡಿ ಗ್ರಾಮದಲ್ಲಿರುವ ರಾಷ್ಟ್ರಕೂಟ ಖೊಟ್ಟಿಗದೇವನ ಕಾಲದ (೯೭೧) ಶಾಸನವನ್ನು ನಾಗನಾರ್ಯ ಎಂಬವನು ಕಡೆದಿದ್ದರೆ, ಕಡೂರಿನ ಕೋಟೆಬಾಗಿಲಲ್ಲಿರುವ ಇದೇ ಕಾಲದ ಶಾಸನವನ್ನು (೯೭೧) ಅರ್ಹದ್ಭಕ್ತನು ಕೆತ್ತಿದ್ದಾನೆ. ಅದೆ ರೀತಿ ಬೆಳಗಾವಿ ಜಿಲ್ಲೆ ಸೊಗಲ ಶಾಸನವನ್ನು ಕಮಳಾದಿತ್ಯ, ಆಂಧ್ರಪ್ರದೇಶದ ಗಂಗಾಧರಂನಲ್ಲಿರುವ ಶಾಸನವನ್ನು ಎರೆಯುಮ್ಮ, ಹಾವೇರಿ ಜಿಲ್ಲೆ ಕಳ್ಳಿಹಾಳದ ಶಾಸನವನ್ನು ಕಂದರ್ಪ ಎಂಬವರು ಕೆತ್ತುವ ಮೂಲಕ ಅವುಗಳಿಗೆ ಕಲಾತ್ಮಕ ರೂಪು ಕೊಟ್ಟಿದ್ದಾರೆ.

ಕ್ರಿ.ಶ.೧೦ನೇ ಶತಮಾನದಲ್ಲಿ ಸಾಹಿತ್ಯ ಕೃತಿಗಳಲ್ಲಿನ ಚಿತ್ರಕಲಾ ಉಲ್ಲೇಖಗಳು, ಶಾಸನ ಬರಹಗಳಲ್ಲಿನ ಚಿತ್ರಕಲಾ ಸಂಗತಿಗಳ ಜೊತೆಗೆ ಈ ಕಾಲದಲ್ಲಿ ರಚನೆಯಾದ ಭಿತ್ತಿಚಿತ್ರಗಳು ಅಂದಿನ ಚಿತ್ರಕಲಾ ಸಾಹಿತ್ಯದ ಮೇಲೆ ಬೆಳಕು ಬೀರುತ್ತವೆ.[೬೩] ಈ ಶತಮಾನದಲ್ಲಿ ರಾಷ್ಟ್ರಕೂಟ ದೊರೆಗಳು ಎಲ್ಲೋರಾ ಗುಹಾಲಯಗಳಲ್ಲಿ ಭಿತ್ತಿಚಿತ್ರಗಳನ್ನು ರಚನೆ ಮಾಡಿದ್ದು, ಪೌರಾಣಿಕ ಘಟನೆಗಳನ್ನಾಧರಿಸಿದ ವಸ್ತುವಿಷಯಗಳನ್ನು ಇವು ಹೊಂದಿವೆ. ಕ್ರಿ.ಶ.೧೧ನೇ ಶತಮಾನದಲ್ಲಿ ರಚನೆಗೊಂಡ ಸಾಹಿತ್ಯವನ್ನು ಕರ್ನಾಟಕದ ಸಂದರ್ಭದಲ್ಲಿ ಗಮನಿಸಿದಾಗ ಮುಂದಿನ ೧೨ನೇ ಶತಮಾನದ ವಿಪುಲವಾದ ಮತ್ತು ವೈವಿಧ್ಯಮಯವಾದ ಸಾಹಿತ್ಯಕ್ಕಿಂತ ಕಡಿಮೆ ಎನ್ನಬಹುದು. ಈ ಕಾಲದಲ್ಲಿ ರಚನೆಯಾದ (೧೧ನೇ ಶತಮಾನ) ಕೆಲವು ಪ್ರಮುಖ ಸಾಹಿತ್ಯ ಕೃತಿಗಳಲ್ಲಿನ ಚಿತ್ರಕಲಾ ವಿಷಯಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದಾಗಿದೆ.

ಚಾಲುಕ್ಯ ಜಯಸಿಂಹನ ಆಸ್ಥಾನದಲ್ಲಿದ್ದಂತಹ ಕವಿಯಾದ ಚಂದ್ರರಾಜನು 'ಮದನತಿಲಕ'ವೆಂಬ ಕಾಮಶಾಸ್ತ್ರ ಬರೆದಿದ್ದಾನೆ.[೬೪] ವಾತ್ಸಾಯನನ ಕಾಮಶಾಸ್ತ್ರ ಮಾದರಿಯಲ್ಲಿ ಬರೆದ ಇದು ಅದನ್ನೆ ಅನುಕರಿಸಿದೆ. ಲಲಿತಕಲೆಗಳ ಬಗ್ಗೆ ಹೇಳುವಾಗ ಚಿತ್ರಕಲೆಯ ಪ್ರಸ್ತಾಪ ಇಲ್ಲಿ ಬರುತ್ತದೆ. ಅಲ್ಲದೆ ತಾನು ಸಕಲ ವ್ಯಾಕರಣಾರ್ಥಶಾಸ್ತ್ರ, ಗಣಿತಾಲಂಕಾರ, ಸತ್ಕಾವ್ಯ, ನಾಟಕ, ನೃತ್ಯ, ಗೀತ, ಚಿತ್ರ ಮುಂತಾದವುಗಳಲ್ಲಿ ವಾತ್ಸಾಯನನಂತೆ ಬಲ್ಲಿದನು ಎಂದು ಹೇಳಿಕೊಂಡಿದ್ದಾನೆ.

---

೬೩. ಡಾ.ಯಾದವಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ : ಪುಟ-೩೯೦

೬೪. ಜಿ.ಎಸ್.ಶಿವರುದ್ರಪ್ಪ (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೨) : ಪುಟ-೧೯೬

೧೧ನೇ ಶತಮಾನದ ಮತ್ತೊಬ್ಬ ಕವಿ ಚಾವುಂಡರಾಯ ಈತನೂ ಚಾಲುಕ್ಯ ಜಯಸಿಂಹನ ಆಶ್ರಯದಲ್ಲಿದ್ದವನು. ಇವನು ಬರೆದ ಲೋಕೋಪಕಾರ ಎಂಬ ಗ್ರಂಥವು ವಿಶ್ವಕೋಶ ಮಾದರಿಯಲ್ಲಿದೆ. ಇದು ಹನ್ನೆರಡು ಆಶ್ವಾಸ (ಅಧ್ಯಾಯ) ಗಳನ್ನು ಹೊಂದಿದ್ದು, ಪ್ರತಿಯೊಂದು ಆಶ್ವಾಸ ಪ್ರತ್ಯೇಕ ವಿಷಯದ ಬಗ್ಗೆ ತಿಳಿಸುತ್ತವೆ.

ಒಟ್ಟು ಹನ್ನೆಡರು ಅಧ್ಯಾಯಗಳಲ್ಲಿ ಹತ್ತು ಮತ್ತು ಹನ್ನೊಂದನೆಯ ಅಧ್ಯಾಯಗಳಲ್ಲಿ ಚಿತ್ರಕಲೆಯ ವಿವರಗಳು ಹೇಳಲ್ಪಟ್ಟಿವೆ. ಶಿಲ್ಪಶಾಸ್ತ್ರ ಹೇಳುವಲ್ಲಿ ಸಾಂದರ್ಭಿಕವಾಗಿ ಚಿತ್ರಕಲೆ ಅದರ ಪ್ರಕಾರ, ಅಳತೆ, ವಿಧಾನಗಳು, ಭಾವ-ಭಂಗಿಗಳಂತಹ ಸಂಗತಿಗಳ ಜೊತೆಗೆ ಕಲಾವಿದರ ಬಗ್ಗೆ ತಿಳಿಸಲಾಗಿದೆ. ಹನ್ನೊಂದನೆಯ ಅಧ್ಯಾಯದಲ್ಲಿ ನಗರ ನಿರ್ಮಾಣ ಹಾಗೂ ವಾಸ್ತು ವಿದ್ಯೆಗಳ ಬಗ್ಗೆ ವಿವರವಿದ್ದು, ಇಲ್ಲಿ ಚಿತ್ರಕಲೆಯ ಹಲವಾರು ವಿಷಯಗಳು ಹೇಳಲ್ಪಟ್ಟಿವೆ. ನಗರದಲ್ಲಿ ಮತ್ತು ಅರಮನೆಯಲ್ಲಿ ಯಾವ ಸ್ಥಳಗಳಲ್ಲಿ ಚಿತ್ರಕಲಾ ಪ್ರದರ್ಶನವನ್ನು ಏರ್ಪಡಿಸಬೇಕು, ಅವುಗಳ ಸ್ವರೂಪ, ಗುಣಲಕ್ಷಣಗಳು ಹೇಗಿರಬೇಕು, ಭಿತ್ತಿತಯಾರಿಸುವ ವಿಧಾನಗಳಾವವು, ಚಿತ್ರಪರಿಕರಗಳನ್ನು ಹೇಗೆ ತಯಾರಿಸಿಕೊಳ್ಳಬೇಕು ಮತ್ತು ಚಿತ್ರಗಳನ್ನು ಹೇಗೆ ರಚಿಸಬೇಕು ಎನ್ನುವಂತಹ ಸಂಗತಿಗಳನ್ನು ಇಲ್ಲಿ ವಿವೇಚಿಸಲಾಗಿದೆ.

ಈ ಕಾಲದ ಇನ್ನೊಬ್ಬ ಕವಿ ನಯಸೇನನು ಧರ್ಮಾಮೃತ ಎಂಬ ಕೃತಿ ರಚಿಸಿದ್ದು,[೬೫] ಇದರಲ್ಲಿ ಸಾಂದರ್ಭಿಕವಾಗಿ ಕಲೆಯ ಉಲ್ಲೇಖಗಳಿವೆ. 'ಪಚ್ಚೊತ್ತಿಯಂತೆ ಪಲವು ಬಣ್ಣಂ' ಎಂದು ಹೇಳುವಲ್ಲಿ ಬಣ್ಣಗಳ ಪ್ರಸ್ತಾಪ ಕಂಡುಬರುತ್ತದೆ. ಅದೇ ರೀತಿ ಪಟಚಿತ್ರಗಳ ವಿಚಾರವಾಗಿಯೂ ಈತ ಹೇಳುತ್ತಾನೆ. ಶಾಂತಿನಾಥನೆಂಬ ಕವಿ 'ಸುಕುಮಾರ ಚರಿತೆ' ಎಂಬ ಕಾವ್ಯವನ್ನು ಬರೆದಿದ್ದಾನೆ. ಇದರಲ್ಲಿನ ಅಗ್ನಿಭೂತಿ, ವಾಯುಭೂತಿ ಮತ್ತು ಸೂರ್ಯಮಿತ್ರರ ಕಥೆಗಳಲ್ಲಿ ಚಿತ್ರಕಲೆಯ ವಿವರಗಳು ದೊರಕುತ್ತವೆ.[೬೬] ಸುಕುಮಾರ ಚರಿತೆಯ ಮೂರನೆಯ ಅಧ್ಯಾಯ ನಲವತ್ತೆರಡನೆಯ ಶ್ಲೋಕ ಒಂದರಲ್ಲಿ ಹೀಗಿದೆ

'ಜ್ಞಾನಪಿಂಗಿ ಸುತತ್ವಮಂ
ತಿಳಿವುದೆತ್ತಾರಯ್ವೊಡೆಂ ಚಿತ್ರಮೋ'

ಇಲ್ಲಿ ಚಿತ್ರದ ಬಗೆಗಿನ ಸಂಗತಿಯು ಪರೋಕ್ಷವಾಗಿ ಹೇಳಲ್ಪಟ್ಟಿದೆ.

ನಾಗಚಂದ್ರನೆಂಬ ಕವಿಯು ಹೊಯ್ಸಳ ಒಂದನೆ ಬಲ್ಲಾಳನ ಆಶ್ರಯದಲ್ಲಿದ್ದವನು. ಅಭಿನವಪಂಪ ಎಂಬ ಬಿರುದಾಂಕಿತನಾದ ಈತನು ಮಲ್ಲಿನಾಥ ಪುರಾಣ, ರಾಮಚಂದ್ರ ಚರಿತ ಪುರಾಣ (ಪಂಪರಾಮಾಯಣ) ಗಳನ್ನು ಬರೆದಿದ್ದಾನೆ.[೬೭] ಇವುಗಳಲ್ಲಿ ಕಲೆಯ ಅಂಶಗಳು ಪರೋಕ್ಷವಾಗಿ ಬಿಂಬಿತವಾಗಿವೆ. ಮಲ್ಲಿನಾಥ ಪುರಾಣದ ಎರಡನೆಯ ಅಧ್ಯಾಯ ಐವತ್ತೆಂಟನೆಯ ಶ್ಲೋಕದಲ್ಲಿ

'ಚಂದ್ರಕಾಂತೋಪಲ ಭಿತ್ತಿ,
ಭಾಗಭಾಸುರ ಪ್ರಭಾಚಂದ್ರ'

ಎಂದು ಹೇಳಿದ್ದರೆ, ಒಂಭತ್ತನೆಯ ಅಧ್ಯಾಯದ ಮೂವತ್ತಾರನೆಯ ಶ್ಲೋಕದಲ್ಲಿ,

'ಗಂಧಗಜದಾನಾ ಮೋದದಿಂ ಕೇತು ಪಲ್ಲವಿದಿಂ
ಚಿತ್ರಿತ ಮಾದುದಂಬರತಳಂ'

---

೬೫. ಜಿ.ಎಸ್.ಶಿವರುದ್ರಪ್ಪ (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೨) : ಪುಟ-೨೦೩.
೬೬. ಜಿ.ಎಸ್.ಶಿವರುದ್ರಪ್ಪ (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೨ :ಪುಟ-೨೦೪.
೬೭. ಜಿ.ಎಸ್.ಶಿವರುದ್ರಪ್ಪ (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೨ :ಪುಟ-೨೦೫.

ಎಂದು ಹೇಳುವ ಮೂಲಕ ಚಿತ್ರ ಮತ್ತು ಚಿತ್ರರಚಿಸುವ ಭಿತ್ತಿಯ ಬಗ್ಗೆ ಪ್ರಸ್ತಾಪಿಸಿರುವುದು ಕಂಡು ಬರುತ್ತದೆ. ಇವುಗಳಲ್ಲದೆ ಈ ಕಾಲಮಾನದಲ್ಲಿ ಜೀವಿಸಿದ್ದ ಶ್ರೀಧರಾಚಾರ್ಯ ಬರೆದ 'ಜಾತಕ ತಿಲಕ', ಕೀರ್ತಿವರ್ಮ ಬರೆದ 'ಗೋವೈದ್ಯ' ಕೃತಿಗಳಲ್ಲಿ ಚಿತ್ರಕಲೆಯ ಸಂಗತಿಗಳು ಪ್ರಾಸಂಗಿಕವಾಗಿ ಹೇಳಲ್ಪಟ್ಟಿವೆ. ಕ್ರಿ.ಶ.೧೧ನೇ ಶತಮಾನದಲ್ಲಿ ರಚನೆಯಾದ ಕೆಲವು ಅಲಂಕಾರ ಗ್ರಂಥಗಳಲ್ಲಿಯೂ ಕಲೆಯ ಅಂಶಗಳು ಚರ್ಚಿತಗೊಂಡಿವೆ. ಚಾಲುಕ್ಯ ಜಗದೇಕಮಲ್ಲನ ಆಶ್ರಯದಲ್ಲಿದ್ದ ಎರಡನೆಯ ನಾಗವರ್ಮನು ಭಾಷಾಭೂಷಣ, ಕಾವ್ಯಾವಲೋಕನ, ವಸ್ತುಕೋಶ ಮತ್ತು ವರ್ಧಮಾನ ಪುರಾಣ ಎಂಬ ಕೃತಿಗಳನ್ನು ಬರೆದಿದ್ದು[೬೮] ಇವೆಲ್ಲವುಗಳಲ್ಲಿ ಪರೋಕ್ಷವಾಗಿ ಕಲಾವಿಷಯಗಳು ಬಿಂಬಿತವಾಗಿವೆ. ಈತನ ಕಾವ್ಯಾವಲೋಕನವು ಒಂದು ಮಹತ್ವದ ಅಲಂಕಾರ ಗ್ರಂಥವಾಗಿದ್ದು, ಹಿಂದಿನ ಲಕ್ಷಣ ಗ್ರಂಥಗಳಲ್ಲಿನ ಎಲ್ಲ ಅಂಶಗಳನ್ನು ಬಳಸಿಕೊಂಡು ನವೀನವಾಗಿ ಮತ್ತು ಖಚಿತವಾಗಿ ವಿಷಯಗಳನ್ನು ನಿರೂಪಿಸಲಾಗಿದೆ ಎಂದು ಸ್ವತಹಃ ಕವಿಯೇ ಹೇಳಿಕೊಂಡಿದ್ದಾನೆ.

'ವಾಮನನುಂ, ರುದ್ರಟನುಂ
ಭಾಮಹನುಂ. ದಂಡಿಯುಂ ಮನಂಗೊಳೆ ಪೇಳ್ದಂ
ತೀಮಹಿಗೆ ನೆಗಳ ಪೇಳ್ದಂ
ದಾಮೋದರ ತನಯನೀ ವಚೋಲಂಕೃತಿಯಂ' (ಪದ್ಯ-೯೬೧)

ಎಂಬುದಾಗಿ ಆರಂಭದಲ್ಲಿ ಹೇಳಿಕೊಂಡಿರುವ ಈ ಕೃತಿಯಲ್ಲಿ ಅಲಂಕಾರ, ಗುಣ, ಪ್ರಕ್ರಿಯೆ, ಮಾರ್ಗ, ರೀತಿ, ರಸ, ಭಾವ, ಧ್ವನಿ, ವಕ್ರೋಕ್ತಿ, ಔಚಿತ್ಯ, ಕವಿಸಮಯಗಳು, ಕಾವ್ಯಾಲಂಕಾರ, ಕಾವ್ಯಗುಣಗಳು, ದೋಷಗಳು, ರೀತಿಬೇಧಗಳು, ರಸಬೇಧಗಳು, ಹೀಗೆ ಕಲಾ ವಿಮರ್ಶೆಯ ಹಲವಾರು ಸಂಗತಿಗಳು ಚರ್ಚಿಸಲ್ಪಟ್ಟಿವೆ. ಈ ಕಾಲಾವಧಿಯಲ್ಲಿ ಉದಯಾದಿತ್ಯನೆಂಬವನು 'ಉದಯಾದಿತ್ಯಾಲಂಕಾರ' ಎಂಬ ಲಕ್ಷಣ ಗ್ರಂಥವನ್ನು ಬರೆದಿದ್ದು,[೬೯] ಇದರಲ್ಲಿ ದಂಡಿಯು ತನ್ನ ಕಾವ್ಯಾದರ್ಶದಲ್ಲಿ ಹೇಳಿದ ಅರ್ಥಾಲಂಕಾರಗಳ ಬಗ್ಗೆ ವಿಶೇಷವಾಗಿ ಚರ್ಚಿಸಲಾಗಿದೆ. ಉಳಿದಂತೆ ರೀತಿ, ಗುಣಲಕ್ಷಣಗಳು, ಔಚಿತ್ಯ ಮತ್ತು ನವರಸಗಳ ಬಗ್ಗೆ ಈ ಕೃತಿ ವಿವೇಚಿಸುತ್ತದೆ. ಕನ್ನಡದಲ್ಲಿ ಕವಿರಾಜಮಾರ್ಗದ ನಂತರ ಬಂದ ಗಮನಾರ್ಹ ಲಕ್ಷಣಗ್ರಂಥ ಇದಾಗಿದ್ದು, ೯೯ ಕಂದ ಮತ್ತು ೭ ವೃತ್ತಗಳನ್ನು ಹೊಂದಿದೆ.

ಕ್ರಿ.ಶ. ೧೧ನೇ ಶತಮಾನದ ಸಾಹಿತ್ಯ ಕೃತಿಗಳಲ್ಲದೆ ಕೆಲವು ಶಾಸನ ಬರಹಗಳಿಂದಲೂ ಕಲೆಯ ಬಗೆಗಿನ ವಿಚಾರಗಳು ತಿಳಿದು ಬರುತ್ತವೆ.[೭೦] ಹೆಚ್ಚಾಗಿ ಕಲಾವಿದರ ಹೆಸರುಗಳು ಈ ಸಂದರ್ಭದಲ್ಲಿ ಉಲ್ಲೇಖಗೊಂಡಿವೆ. ಕ್ರಿ.ಶ. ೧೦೩೭ರ ಶಿವಮೊಗ್ಗ ಜಿಲ್ಲೆ ಸೊರಬ ತಾಲೂಕಿನ ಕುಪ್ಪಗುಡ್ಡದ ನರಸಿಂಹ ದೇವಾಲಯದಲ್ಲಿನ ಶಾಸನವನ್ನು ಕಲಾವಿದ ಚಾಮುಂಡೋಜ ಎಂಬವನು ಕೆತ್ತಿದ್ದು, ಈ ದೇವಾಲಯವನ್ನು 'ಬಮ್ಮೋಜ' ಎಂಬ ಶಿಲ್ಪಿಯು ನಿರ್ಮಿಸಿದ್ದಾಗಿ ತಿಳಿದು ಬರುತ್ತದೆ. ಬಳ್ಳಾರಿ ಜಿಲ್ಲೆ ಹಡಗಲಿ ತಾಲೂಕಿನ ಮೋರಿಗೇರಿಯ ಬಸವಣ್ಣ ದೇವಾಲಯದಲ್ಲಿನ ಶಾಸನವನ್ನು (ಕ್ರಿ.ಶ-೧೦೪೫) ನಾಗಮಯ್ಯ ಎಂಬವನು ಕಡೆದಿದ್ದು, ಇದರಲ್ಲಿ ಈತನ ತಂದೆ ಅಣ್ಣಿಗೇರಿಯ 'ವಿದ್ಯಾಭರಣಜೀಯ' ಎಂಬ ಕಲಾವಿದನ ಹೆಸರು ಉಲ್ಲೇಖಿಸಲಾಗಿದೆ. ಶಿವಮೊಗ್ಗ ಜಿಲ್ಲೆ ಹೊಸನಗರ ತಾಲೂಕು ಹೆಬ್ಬಯಲು ಗ್ರಾಮದಲ್ಲಿರುವ ಶಾಸನವನ್ನು (೧೦೫೩) ಬಡಗಿ ಅಯ್ವೋಜ ಎಂಬವನು ಕೆತ್ತಿದ್ದಾನೆ. ಮೈಸೂರು

೬೮. ಜಿ.ಎಸ್.ಶಿವರುದ್ರಪ್ಪ (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೨ :ಪುಟ-೨೧೮.
೬೯. ಎಂ.ವಿ.ಸೀತಾರಾಮಯ್ಯ (ಸಂ) : ಉದಯಾದಿತ್ಯಾಲಂಕಾರ :ಪುಟ-೨೧೦.
೭೦. ಈ ಕಾಲದ ಶಾಸನದ ಬಗೆಗಿನ ಹೆಚ್ಚಿನ ವಿವರಗಳಿಗೆ ನೋಡಿರಿ : ಡಾ:ಹಾ.ಮಾ.ನಾಯಕ್ (ಸಂ) :ಕನ್ನಡ ಸಾಹಿತ್ಯ ಚರಿತ್ರೆ : (ಸಂಪುಟ-೩) : ಪುಟ-೨೦೦-೨೩೫.

ಜಿಲ್ಲೆ ಹೆಗ್ಗಡದೇವನಕೋಟೆ ತಾಲೂಕಿನ ಬಳತೂರು ಗ್ರಾಮದ ಶಾಸನವನ್ನು (೧೦೫೭) ಸಿಂಗಾಚಾರಿ ಎಂಬವನು ಕಟೆದಿದ್ದರೆ, ಗದಗ ಜಿಲ್ಲೆ ಮುಳಗುಂದದ ನಗರೇಶ್ವರ ದೇವಾಲಯದ ಶಾಸನವನ್ನು (೧೦೬೨) ನಾಗವರ್ಮನೆಂಬವನು ಕೆತ್ತಿದ್ದಾನೆ.

ಅದೇ ರೀತಿ ಹಾವೇರಿ ಜಿಲ್ಲೆ ಶಿಗ್ಗಾವ ತಾಲೂಕಿನ ಹೊಟ್ಟೂರು ಗ್ರಾಮದ ಶಾಸನವನ್ನು ದಾಸೋಜ (೧೦೬೭), ಗದಗ ಜಿಲ್ಲೆ ಸೊರಟೂರು ಜಿನಾಲಯದ ಶಾಸನವನ್ನು (೧೦೭೧) ಕನ್ನಪ್ಪಯ್ಯ ಎಂಬವರು ಕಟೆದಿದ್ದಾರೆ. ಕೆಲವು ಶಾಸನಗಳು ಕಲಾವಿದರ ಹೆಸರುಗಳನ್ನು ಮಾತ್ರವಲ್ಲದೆ ಕಲಾ ವಿಚಾರಗಳನ್ನು ತಿಳಿಸುತ್ತವೆ. ಆ ಪ್ರದೇಶದ ಜನರ ಕಲಾಸಕ್ತಿ, ಕಲಾಪ್ರಕಾರ, ಬಣ್ಣ, ಆಕಾರ, ರೇಖೆ, ಮುಂತಾದ ಸಂಗತಿಗಳು ಇವುಗಳಲ್ಲಿ ಸೇರಿವೆ.

ಗದಗ ಜಿಲ್ಲೆ ನರಗುಂದದಲ್ಲಿರುವ ಶಾಸನವನ್ನು (೧೦೭೪) ರುದ್ರಭಟ್ಟನೆಂಬವನು ರಚನೆ ಮಾಡಿದ್ದು, ಇದರಲ್ಲಿ ಊರಿನ ಜನರ ಕಲಾಭಿಜ್ಞತೆಯನ್ನು ಶಾಸನದ ಕೊನೆಯ ಎರಡು ಸಾಲುಗಳಲ್ಲಿ ಹೇಳಲಾಗಿದೆ.

'ಜಿ ಕರುಚಿತ ಪ್ರಸಂಗರಭಿಮಾನಿಗಳಪ್ಪ ವಿಶಿಷ್ಟ ದಾನಿಗಳ್
ಸಕಳ ಕಳಾಗಮಜ್ಞರತಿ ಧರ್ಮರತರ್ನರು ಗುಂದದ ದ್ವಿಜರ್'

ಇಲ್ಲಿನ ಪುರಜನರು ಪ್ರಸಂಗವನರಿತು ವರ್ತಿಸುವ ಚಾಣಾಕ್ಷರು, ಅಭಿಮಾನಿಗಳು, ವಿಶಿಷ್ಟ ಗುಣವುಳ್ಳ ದಾನಿಗಳಾಗಿದ್ದಾರೆ. ಜೊತೆಗೆ ಧರ್ಮಬೀರುಗಳು, ಆಗಮಗಳನ್ನು ತಿಳಿದವರು ಮತ್ತು ಸಕಲ ಕಲೆಗಳಲ್ಲಿ ಬಲ್ಲಿದರಾಗಿದ್ದಾರೆ ಎಂದು ಶಾಸನಕಾರ ಹೇಳುತ್ತಾನೆ.

ಶಿವಮೊಗ್ಗ ಜಿಲ್ಲೆ ಸೊರಬ ತಾಲೂಕಿನ ಕುಪ್ಪಟೂರು ಜೈನಬಸದಿಯಲ್ಲಿರುವ ಶಾಸನವನ್ನು (೧೦೭೫) ಹರಿಯಣ್ಣ ಎಂಬವನು ರಚಿಸಿದ್ದಾನೆ. ಇದರಲ್ಲಿ ಬನವಾಸಿ ನಾಡಿನ ವರ್ಣನೆಯನ್ನು ಕಲಾತ್ಮಕವಾಗಿ ಬಿಂಬಿಸಲಾಗಿರುವ ಸಂಗತಿಯು ಕೊನೆಯ ಎರಡು ಸಾಲುಗಳಿಂದ ತಿಳಿದು ಬರುತ್ತದೆ.

'ಏಳಯಿತಮಾಗಿ ವಿಪ್ರಸುರ ಚಿತ್ರಾನಿಕೇತನ ಮಾಳಿಯಿಂದೆಕ
ಣ್ಣೊಳಿಪುದು ಕುಪ್ಪಟೂರ್ಸ್ಸ ಕಳವಿದ್ಯೆಗೆ ತಾನೆನೆ ಕನ್ಮಭೂತಳಂ'

ಈ ವಿವರಣೆಯಲ್ಲಿ ಚಿತ್ರಕಲೆಯವಿದ್ಯೆ, ಚಿತ್ರಕಲಾಶಾಲೆ, ಚಿತ್ರಸೌಂದರ್ಯದಂತಹ ವಿಚಾರಗಳು ಪರೋಕ್ಷವಾಗಿ ಬಿಂಬಿತಗೊಂಡಿವೆ.

ಇವುಗಳಲ್ಲದೆ ಈ ಕಾಲದ ಇನ್ನೂ ಕೆಲವು ಶಾಸನಗಳಲ್ಲಿ ಕಲಾವಿದರ ಹೆಸರುಗಳು ಕಂಡುಬರುತ್ತವೆ. ಬಾಗಲಕೋಟ ಜಿಲ್ಲೆಯ ಕೊಪ್ಪ ಗ್ರಾಮದ ದುರಗವ್ವ ಗುಡಿಯ ಶಾಸನವನ್ನು (೧೦೭೫) ವೈಜನಾಥ, ಗದಗ ಜಿಲ್ಲೆ ನರಗುಂದದ ಶಾಸನ (೧೦೭೮) ನಾಗದೇವ, ಕುರ್ತಕೋಟಿಯ ಶಾಸನವನ್ನು (೧೦೮೨) ಮಾಬಳಾರ್ಯ, ನರಗುಂದದ ಹದಳಿ ಶಾಸನ (೧೦೮೪) ಕರ್ಪರಸ, ಶಿವಮೊಗ್ಗದ ಶಾಸನ (೧೦೮೫) ದಾಮರಾಜ, ಧಾರವಾಡ ಜಿಲ್ಲೆ ಕೋಳೂರು ಶಾಸನ (೧೦೮೫) ಕಾಳೋಜ, ಗದಗ ಜಿಲ್ಲೆ ಸೊರಟೂರು ಶಾಸನ (೧೦೯೧) ಮಾಧವಭಟ್ಟ ಇವರು ಕಡೆದಿದ್ದಾರೆ. ಅದೆ ರೀತಿ ಗುಲಬರ್ಗಾ ಜಿಲ್ಲೆ ಇಂಗಳಗಿ ಗ್ರಾಮದ ಜೈನ ಬಸದಿಯ ಶಾಸನ (೧೦೯೪) ನಾಗಾರ್ಜುನ, ಗದಗ ಜಿಲ್ಲೆಯ ಹಂದಿಗೋಳದ ಶಾಸನ (೧೦೯೯) ಮಲ್ಲಯ್ಯ, ಕೋಟಮುಚಗಿಯ ಶಾಸನ ಚಂದ್ರಭಟ್ಟ ಮತ್ತು ಬಳ್ಳಾರಿ ಜಿಲ್ಲೆಯ ಕುರುವತ್ತಿ ಗ್ರಾಮದ ಶಾಸನವನ್ನು ಶ್ರೀಕಂಠಸೂರಿ ಎಂಬ ಕಲಾವಿದನು ರಚಿಸಿದ ವಿವರಗಳು ತಿಳಿದು ಬರುತ್ತವೆ.

**೩. ವಚನ ಸಾಹಿತ್ಯದಿಂದ ವಿಜಯನಗರದ ವರೆಗಿನ ಚಿತ್ರಕಲಾ ಸಾಹಿತ್ಯ :**

ಕ್ರಿ.ಶ. ೧೨ನೇ ಶತಮಾನವು ಕರ್ನಾಟಕದ ಧಾರ್ಮಿಕ, ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಮಹತ್ತರ ಪರಿಣಾಮ ಬೀರಿದಂತೆ ಸಾಹಿತ್ಯ ರಂಗದಲ್ಲಿಯೂ ವೈವಿಧ್ಯತೆಯೊಂದಿಗೆ ವಿಫುಲವಾಗಿ ಬೆಳೆಯಿತು. ವೀರಶೈವ ವಚನ ಸಾಹಿತ್ಯವು ಈ ನಿಟ್ಟಿನಲ್ಲಿ ಗಮನಾರ್ಹ ಪಾತ್ರ ವಹಿಸಿತು. ಇವುಗಳನ್ನೊಳಗೊಂಡಂತೆ ಈ ಕಾಲದಲ್ಲಿ ರಚನೆಯಾದ ಇನ್ನುಳಿದ ಸಾಹಿತ್ಯ ಕೃತಿಳಲ್ಲಿಯೂ ಸಾಂದರ್ಭಿಕವಾಗಿ ಮತ್ತು ಪರೋಕ್ಷವಾಗಿ ಚಿತ್ರಕಲೆಯ ಸಂಗತಿಗಳು ಬಿಂಬಿತಗೊಂಡಿವೆ.

ಕರ್ನಾಟಕದ ಶ್ರೇಷ್ಠ ಕವಿಗಳಲ್ಲೊಬ್ಬನಾದ ಜನ್ನನು ಕ್ರಿ.ಶ. ೧೨ನೇ ಶತಮಾನದಲ್ಲಿದ್ದವನು. ಈತನ ಯಶೋಧರ ಚರಿತೆ, ಅನಂತನಾಥ ಪುರಾಣ, ಅನುಭವ ಮುಕುರ ಎಂಬ ಕೃತಿಗಳನ್ನು ಬರೆದಿದ್ದಾನೆ.[೭೧] ಇವುಗಳಲ್ಲಿ ಕಲೆಯ ಅಂಶಗಳು ಪರೋಕ್ಷವಾಗಿ ಒಡಮೂಡಿವೆ. ಅನಂತನಾಥ ಪುರಾಣದ ಅನೇಕ ಕಡೆಗಳಲ್ಲಿ ಕಲಾವಿಚಾರಗಳಿವೆ. ಅಧ್ಯಾಯ ೪, ಪದ್ಯ ೧೯, ಅದರಂತೆ (೬-೯), (೬-೧೭), (೬-೫೬), (೭-೧೦೦), (೧೦-೪೦) ಗಳಲ್ಲಿ ಕಲೆಯ ಅಂಶಗಳಿವೆ. ಉದಾಹರಣೆಗೆ ಒಂದೆರಡು ನೋಡಬಹುದು.

'ಗಗನೀ ಚಿತ್ರಕೆ, ಬಾಲಭಾನು
ಮಕರ ಮಂಕಣ್ಣಿಟ್ಟು ತೊಯ್ದಿಟ್ಟ! (ಅ-೯, ಪದ್ಯ-೧೭)
ಪಳಕಿನ ಭಿತ್ತಿಗಳೊಳ್ ಮಾ
ರ್ಪೆಳೆಪಂ ತಾನೆಂದು ತೆಗೆದು ನಗುವ ಕುಮಾರಂ' (ಅ-೭, ಪದ್ಯ-೭೨)

ಮೇಲಿನ ಉದಾಹರಣೆಗಳಲ್ಲಿ ಚಿತ್ರ ಮತ್ತು ಚಿತ್ರರಚನೆಯ ಭಿತ್ತಿಯ ರೂಪಕಗಳು ಕಂಡುಬರುತ್ತವೆ. ಅದರಂತೆ 'ಯಶೋಧರ ಚರಿತ' ಕೃತಿಯಲ್ಲಿ

'ಕೆಲಕೊತ್ತು ಚಿತ್ರಿಕೇ ಪರಿಯಣಮಂ
ನೃಪೇಶ್ವರಿಯ ನಾ ರೋಗಿಸಲ್' (ಅ-೪, ಪದ್ಯ-೮೫)

ಎಂಬುದಾಗಿ ಹೇಳಲಾಗಿದೆ. ಇದಲ್ಲದೆ ಈತನ ಅನುಭವ ಮುಕುರ ಕೃತಿಯಲ್ಲಿ ಪದ್ಯ-೧೩, ೧೫, ೨೦, ೭೦, ೧೦೯ ಗಳಲ್ಲಿ ಕಲೆಯ ಸಂಗತಿಗಳಿವೆ. ಈ ಶತಮಾನದಲ್ಲಿ ಕೃತಿ ರಚಿಸಿದವರಲ್ಲಿ ರುದ್ರಭಟ್ಟನು ಸೇರಿದ್ದಾನೆ. ಈತ 'ಜಗನ್ನಾಥ ವಿಜಯ ಮತ್ತು ರಸಕಲಿಕೆ' ಎಂಬ ಎರಡು ಕೃತಿ ರಚಿಸಿದ್ದಾನೆ.[೭೨] ಜಗನ್ನಾಥ ವಿಜಯ ಕೃತಿಯಲ್ಲಿ ಮೂರನೆಯ ಅಧ್ಯಾಯದ ೨೮, ೪೨, ೫೨, ೫೩, ೫೫, ೫೯ ಶ್ಲೋಕಗಳಲ್ಲಿಹಾಗೂ ನಾಲ್ಕನೆಯ ಅಧ್ಯಾಯದ ೯೫, ೯೯, ೧೩೭, ೧೬೬ ಶ್ಲೋಕಗಳು ಚಿತ್ರಕಲೆಯ ವಿವರ ಹೊಂದಿವೆ. ಜಗನ್ನಾಥ ವಿಜಯದಲ್ಲಿ ಕಲಾ ವಿಚಾರಗಳು ಹೀಗೆ ಬಂದಿವೆ :

'ದೂರ್ವಾಂಕುರದ, ಎಳೆವಿದಿರ ಬಣ್ಣದ ಅಬಲಾನಿಕಂ,
ಈರಿಪು ಭಿನ್ನನಾದರಿ ಇದು ಚಿತ್ರಂ! ಪದ್ಮಪತ್ರಾಂಬಕ'
'ಒಂದದ ಪಗಲಿರುಳೆರಡರ
ಸಂದುಗಳಂ ವರುಣಶಿಲ್ಪಿ ರಕ್ತಾಂಬರದಿಂ
ಸಂದಿಸಿ ಪೊಲ್ದವೊಲೆಸೆದುದು
ಮುಂದ್ಯೆಸಿದ ಸಂಜೆಗೆಂಪು ಪಡುವಣದೆಸೆಯೊಳ್'

೭೧. ಡಾ.ಹಾ.ಮಾ.ನಾಯಕ : ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೧) : ಪುಟ-೧೩೦೨.
೭೨. ಡಾ.ಹಾ.ಮಾ.ನಾಯಕ : ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೧) : ಪುಟ-೧೩೨೦.

ಇದರಲ್ಲಿ ಚಿತ್ರಕಲಾವಿದನನ್ನು ವರುಣಶಿಲ್ಪಿ ಎಂದು ಕರೆಯಲಾಗಿದ್ದು, ಆಕಾಶದ ಬಣ್ಣವನ್ನು ರಕ್ತದ ಕೆಂಪಿಗೆ ಹೋಲಿಸಲಾಗಿದೆ. ಈತನ 'ರಸಕಲಿಕೆ' ಒಂದು ಪುಟ್ಟ ಕೃತಿಯಾಗಿದ್ದು, ಇದರಲ್ಲಿ ಎಲ್ಲ ಕಲೆಗಳ ಬಗೆಗಿನ ಸಂಕ್ಷಿಪ್ತ ವಿವರ ಕೊಟ್ಟಿದ್ದಾನೆ. ಮಾತ್ರವಲ್ಲದೆ ತಾನು ಎಲ್ಲ ಕಲೆಗಳಲ್ಲಿ ಪ್ರವೀಣನು ಎಂದು ಹೇಳಿಕೊಂಡಿದ್ದಾನೆ. ತನ್ನನ್ನು 'ಭಾಳಲೋಚನಂ ವರ್ಣಕವಿ' ಎಂದು ಕರೆದುಕೊಂಡಿದ್ದು, ಚಿತ್ರ ಶಿಲ್ಪ, ಸಂಗೀತ, ನಾಟಕ, ಸಾಹಿತ್ಯ, ವೇದಾಗಮ ಹೀಗೆ ಹಲವು ಕಲೆಗಳಲ್ಲಿ ಪ್ರವೀಣತೆಯನ್ನು ಪಡೆಯಬೇಕಾದರೆ ರಸಕಲಿಕೆ ಮುಖ್ಯವಾದುದು ಎನ್ನುತ್ತಾನೆ.

ಬಂಧುವರ್ಮನೆಂಬ ಕವಿ 'ಜೀವಸಂಬೋಧನ' ಮತ್ತು 'ಹರಿವಂಶಾಭ್ಯುದಯ' ಎಂಬ ಕೃತಿಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಕಲೆಯ ಅಂಶಗಳಿವೆ. ಜೀವ ಸಂಬೋಧನ ಕೃತಿಯಲ್ಲಿ

'ಪುತ್ರ ಮುಖಾಖ್ಯಾಲೋಕನ
ಮಾತ್ರದೊಳಂ ಪಿತೃತಾಪಕ್ಕೆ ಪೋಕುಂ ಚಿತ್ರ'

ಎಂದು ಹೇಳುವ ಮೂಲಕ ಚಿತ್ರಕಲೆಯ ಉದಾಹರಣೆಯನ್ನು ಕೊಡಲಾಗಿದೆ. ಕವಿಕಾಮನೆಂಬ ಕವಿಯು 'ಶೃಂಗಾರ ರತ್ನಾಕರ' ಮತ್ತು 'ಸ್ತನಶತಕ'ಗಳನ್ನು ಬರೆದಿದ್ದಾನೆ. ಶೃಂಗಾರ ರತ್ನಾಕರದಲ್ಲಿ

'ಭಾವಂವಿಭಾವ ಮೆಸೆವೆನು ಭಾವಮೆಂದಿಂತಿವರುದಾವಿಷ್ಕೃತ ಮಕ್ಕುಂ
ರಸಮಾವುದು ಮೆಂದರಿಗೆ ಭರತಶಾಸ್ತ್ರ ಕ್ರಮದಿಂ'

ಶೃಂಗಾರ ರತ್ನಾಕರವು ಲಕ್ಷಣ ಗ್ರಂಥವಾಗಿದ್ದು, ಇದರಲ್ಲಿ ರಸೋತ್ಪತ್ತಿ, ರಸಗಳ ವರ್ಣನೆ, ರಸಗಳ ಅಧಿದೇವತೆ, ನವರಸಗಳ, ಶೃಂಗಾರದ ಸ್ವರೂಪ ಮುಂತಾದವುಗಳನ್ನು ಹೇಳಲಾಗಿದೆ. ಇದೆ ಕಾಲದಲ್ಲಿ ಕೆರೆಯ ಪದ್ಮರಸನು ದೀಕ್ಷಾಬೋಧೆ ಕೃತಿ ರಚಿಸಿದ್ದು ಅದರಲ್ಲಿ ಸಾಂಧರ್ಭಿಕವಾಗಿ ಕಲೆಯ ಸಂಗತಿಗಳು ಉಲ್ಲೇಖಗೊಂಡಿವೆ.

ದೇವಕವಿ ಎಂಬವನು ಇದೇ ಕಾಲದವನಾಗಿದ್ದು, 'ಕುಸುಮಾವಳಿ' ಎಂಬ ಕೃತಿ ರಚಿಸಿದ್ದಾನೆ. ಇದರಲ್ಲಿ ಚಿತ್ರಕಲೆಯ ಅನೇಕ ಅಂಶಗಳಿವೆ. ಇದು ಕುಸುಮಾವಳಿ ಮತ್ತು ಕಂದರ್ಪದೇವನ ಪ್ರಣಯದ ಕಥೆಯಾಗಿದೆ. ಇದರಲ್ಲಿ ಕುಸುಮಾವಳಿ ಮೊದಲಿಗೆ ಕಂದರ್ಪದೇವನ ಚಿತ್ರಪಟವನ್ನು ನೋಡಿ, ಆತನಲ್ಲಿ ಅನುರಕ್ತಳಾಗುತ್ತಾಳೆ. ವಿರಹದಿಂದ ನೊಂದ ಕುಸುಮಾವಳಿ ಕಾತ್ಯಾಯಿನಿಯನ್ನು ಪ್ರಾರ್ಥಿಸಿದಾಗ ದೇವಿಯು ಸದ್ಯದ ಮಟ್ಟಿಗೆ ಈ ಚಿತ್ರದಲ್ಲಿರುವ ಕಂದರ್ಪ ದೇವನನ್ನೆ ಆರಾಧಿಸುತ್ತಿರು ಎನ್ನುತ್ತಾಳೆ. ಹೀಗೆ ಅನೇಕ ಸಂದರ್ಭಗಳಲ್ಲಿ ಚಿತ್ರಕಲೆಯ ವಿಚಾರ ಇದರಲ್ಲಿ ಬರುತ್ತದೆ.

ಹನ್ನೆರಡನೆಯ ಶತಮಾನದ ಮತ್ತೊಬ್ಬ ಪ್ರಖ್ಯಾತ ಕವಿ ಹರಿಹರನಾಗಿದ್ದಾನೆ. ಈತ ಗಿರಿಜಾಕಲ್ಯಾಣ, ಪಂಪಾಶತಕ, ರಕ್ಷಾಶತಕ, ಮುಡಿಗೆಯಅಷ್ಟಕ ಮತ್ತು ಶಿವಗಣರಗಳೆಗಳನ್ನು ಬರೆದಿದ್ದಾನೆ. ಇವೆಲ್ಲ ಸಾಂದರ್ಭಿಕವಾದ ಕಲಾ ಸಂಗತಿಗಳನ್ನು ಒಳಗೊಂಡಿವೆ. ಗಿರಿಜಾಕಲ್ಯಾಣವು ವರ್ಣನೆಯಲ್ಲಿ ಕಣ್ಣಿಗೆ ಕಟ್ಟುವ ವರ್ಣಕಾವ್ಯದಂತೆ ಇದ್ದು, ಅಧ್ಯಾಯ ೧, ೨, ೫, ೮, ೯ ರಲ್ಲಿ ಕಲಾ ಅಂಶಗಳು ಹೆಚ್ಚಾಗಿವೆ. ಅದರಂತೆ ಪಂಪಾಶತಕದ ೧೮, ೪೬, ೮೦, ೮೫ ಅಧ್ಯಾಯಗಳಲ್ಲಿ ಚಿತ್ರಕಲೆಗೆ ಸಂಬಂಧಿಸಿದ ಸಂಗತಿಗಳಿದ್ದರೆ, ರಕ್ಷಾಶತಕದಲ್ಲಿ ౩೧ ಮತ್ತು ೪೫ನೇ ಪದ್ಯಗಳಲ್ಲಿ ಕಲಾ ಅಂಶಗಳು ಕಂಡುಬರುತ್ತವೆ.

ಹರಿಹರನ ರಗಳೆಗಳು ಖ್ಯಾತವಾಗಿದ್ದು, ಅವುಗಳಲ್ಲಿಯೂ ಸಾಂದರ್ಭಿಕವಾಗಿ ಕಲೆಯ ಸಂಗತಿಗಳಿವೆ. ಅವುಗಳಲ್ಲಿ ಕೆಲವು ಗಮನಿಸಬಹುದು. ನಂಬಿಯಣ್ಣನ ರಗಳೆಯಲ್ಲಿ 'ದೇವ ಕಪ್ಪಿನ ಕಾಂತಿಯಿಂ ಕುರುಳ್ಗೊಂಡು ದಟ್ಟೈಸಿ' ಎಂದು ಹೇಳುವಲ್ಲಿ ಕಪ್ಪುಬಣ್ಣದ ಪ್ರಸ್ತಾಪ ಕಂಡುಬರುತ್ತದೆ.

ಪುಷ್ಪ ರಗಳೆಯಲ್ಲಿ 'ಮೂರನೆಯ ವರ್ಣದೊಳ್ ಮರೆದು ಪುಳಕಂ ನೆಗೆದು' ಎಂಬ ಸಾಲಿನಲ್ಲಿ ಬಣ್ಣಗಳ ಸಂಗತಿ ಇದೆ. ವಿಭೂತಿ ರಗಳೆಯಲ್ಲಿ ಅದರ ಮಹಿಮೆಯನ್ನು ಹೇಳುವಾಗ ಚಿತ್ರಕಲೆಯ ರೂಪಕವನ್ನು ಬಳಸಿಕೊಳ್ಳಲಾಗಿದೆ.[೨೩]

'ಇಟ್ಟ ಭಕ್ತಿಸುಕೃತ ಫಲವನೆಯ್ದೆ ಬಣ್ಣವಿಡುವಿಭೂತಿ
ಶಶಿಯ ಬೊಳಗನಾಯ್ದುಕೊಂಡು ರವಿಯ ರುಚಿಯನಾಳಿಗೊಂಡು
ಮಿಸುಪ ಮಿಂಚಿನೊಳಗೆ ಪೊಳೆವ ಬಣ್ಣಮಂ ಬಳಲ್ಚಿಕೊಂಡು
ಚಿತ್ರಕಾಶ ರಾಶಿಯೆನಿಪುದಭವ ನೀಡುವುದೀ ವಿಭೂತಿ
ರಜತಗಿರಿ ಸುಧಾಪಯೋದಿಗಳ್ಗೆ ಬಣ್ಣವಿಡುವ ವಿಭೂತಿ
ನಿಜದ ಬೆಳಗಿನೊರೆಗೆ ದೊರೆಗೆ ಬರ್ಪ ಬಣ್ಣವೀ ವಿಭೂತಿ' (ಪದ್ಯ-೭೦)

ಪೊಯ್ಯಡಿ ರಗಳೆಯಲ್ಲಿ ವಿವಿಧ ರಸಗಳ ಚಿತ್ರ, ಸಾಂದರ್ಭಿಕ ಚಿತ್ರ, ಮೂರು ಬಗೆಯ ಚಿತ್ರ ಶೈಲಿಗಳ ಬಗ್ಗೆ ಹೇಳಲಾಗಿದೆ.

'ಖ್ಯಾತ ನಾನಾರಸದ ವೃತ್ತದ ವಿಭಾಗದಿಂ
ಆಶುಚಿತ್ರಂ ಮಧುರವೆಂಬಾ ತ್ರಿಭೇದದಿಂ' (ಪದ್ಯ-೩೦)

ಬೃಂಗೀಶ್ವರ ರಗಳೆಯಲ್ಲಿ ಎಳೆ ಬಿಸಿಲು ಮತ್ತು ಬೆಳದಿಂಗಳ ಬಣ್ಣಗಳನ್ನು ಕುರಿತು ಹೇಳಿದೆ.

'ಎಳೆ ವಿಸಿಲಂತಿರೆ ಬಣ್ಣಂದೋರುತೆ
ಬೆಳದಿಂಗಳ ವೊಲ್ತಂಪಂ ಬೀರುತೆ' (ಪದ್ಯ-೧೩೦)

ದಕ್ಷಾಸ್ವರ ರಗಳೆಯಲ್ಲಿ ಭಿತ್ತಿಚಿತ್ರ ಮತ್ತು ಮೂರ್ತಿಶಿಲ್ಪ ಕಲೆಯ ಪ್ರಸ್ತಾಪ ಕಂಡುಬರುತ್ತದೆ.

'ಅಲ್ಲಿ ಭಿತ್ತಿಯು ಚಿತ್ರದತಿಕಾಂತಿ ಕುಂದಿರ್ದ
ವಲ್ಲಿ ಪುತ್ಥಳಿಗಳೆಲ್ಲಂ ಸೊಂಪುಗೆಟ್ಟಿರ್ದ' (ಪದ್ಯ-೩೨೦)

ಹೀಗೆ ಹರಿಹರನ ಕೃತಿಗಳಲ್ಲಿ ಹೆಚ್ಚಿನ ಕಲಾಅಂಶಗಳು ಕಂಡು ಬರುವ ಮೂಲಕ ಕಲಾ ಸಾಹಿತ್ಯದ ಇತಿಹಾಸಕ್ಕೆ ಪುಷ್ಟಿಯನ್ನು ಒದಗಿಸುತ್ತವೆ. ಜಗದ್ದಳ ಸೋಮನಾಥನು (೧೧೭೫) ಕಲ್ಯಾಣಕಾರಕವೆಂಬ ವೈದ್ಯಗ್ರಂಥ ಬರೆದಿದ್ದು[೨೪] ಇದರಲ್ಲಿಯೂ ಸಾಂದರ್ಭಿಕವಾದ ಚಿತ್ರಕಲಾ ಸಂಗತಿಗಳಿವೆ. ಒಂದು ಪದ್ಯದ ಕೊನೆಯ ಎರಡು ಸಾಲುಗಳು ಹೀಗೆವೆ.

'ಧಿಕಮಂ ವರ್ಜಿತ ಮಧ್ಯಮಾಸ ಮಧುವಂ ಕರ್ನಾಟಕದಿಂ ಲೋಕರ
ಕ್ಷಕಂ, ಚಿತ್ರಕ್ರಮದಾಗೆ ಚಿತ್ರಕವಿಸೋಮಮಂ ಪೇಳ್ದನಿಮದುರ್ತಿಯಿಂ'

ಪಾರ್ಶ್ವಪಂಡಿತನೆಂಬ ಕವಿ ಈ ಕಾಲಮಾನದವನಾಗಿದ್ದು, 'ಪಾರ್ಶ್ವನಾಥ ಪುರಾಣ' ಎಂಬ ಕೃತಿ ರಚನೆ ಮಾಡಿದ್ದಾನೆ. ಇದರಲ್ಲಿ ಹಲವು ಕಡೆಗಳಲ್ಲಿ ಚಿತ್ರಕಲೆಯ ವಿಚಾರಗಳು ಪ್ರಸ್ತಾಪಗೊಂಡಿವೆ.

'ಕಳಮಕಣಿಶಂಗಳಂ ಬ
ಲ್ಗಿಳಿಗಳ್ ನಲಿಗರ್ಚಿ ಓಡಿಯೆ ಪಾಮರಿಯರ್ಮಾಂ
ಡಳಸಿನಭದಲ್ಲಿ ತಳೆದವು
ವಳಯಾಕೃತಿವೆತ್ತು ಶಕ್ರಚಾಪದ ಚೆಲ್ವಂ'

---

೨೩. ಹೆಚ್ಚಿನ ವಿವರಗಳಿಗೆ ನೋಡಿರಿ: ಎಂ.ಎಂ.ಕಲಬುರ್ಗಿ : (ಸಂ) : ಹರಿಹರನ ರಗಳೆಗಳು : ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ-೧೯೯೯

೨೪. ಡಾ.ಹಾ.ಮಾ.ನಾಯಕ : ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೧) : ಪುಟ-೯೧೦.

ಹಸಿರು ಬಣ್ಣದ ಗಿಳಿಗಳು ತಮ್ಮ ಕೆಂಪಾದ ಚುಂಚುಗಳಲ್ಲಿ ಹಳದಿ ಬಣ್ಣದ ತೆನೆಗಳನ್ನು ಹೊತ್ತುಕೊಂಡು ವೃತ್ತಾಕಾರವಾಗಿ ಆಕಾಶದಲ್ಲಿ ಚಲಿಸುತ್ತಿರುವುದು ಕಾಮನ ಬಿಲ್ಲನ್ನು ಹೋಲುತ್ತದೆ ಎಂದು ಹೇಳುವಲ್ಲಿ ರೇಖೆ, ಆಕಾರ, ಬಣ್ಣಗಳ ಪ್ರಸ್ತಾಪ ಕಂಡುಬರುತ್ತದೆ. ಇವುಗಳಲ್ಲದೆ ಅಗ್ಗಳನ ಚಂದ್ರಪ್ರಭಪುರಾಣ, ನಯಸೇನನ ಧರ್ಮಾಮೃತ, ನೇಮಿಚಂದ್ರನ ನೇಮಿನಾಥ ಪುರಾಣಗಳಲ್ಲಿ ಬರುವ ಚಿತ್ರಕಲಾ ಸಂಗತಿಗಳು ಕ್ರಿ.ಶ. ಹನ್ನೆರಡನೆಯ ಶತಮಾನಕ್ಕೆ ಸೇರುತ್ತವೆ.

ಕ್ರಿ.ಶ. ೧೨ನೇ ಶತಮಾನದಲ್ಲಿ ವೀರಶೈವ ಕವಿಗಳು, ಶರಣ-ಶರಣೆಯರು, ರಚಿಸಿದ ಸಾಹಿತ್ಯವು ಬಹುಮುಖ್ಯವಾಗಿದ್ದು, ಅವುಗಳಲ್ಲಿಯೂ ಚಿತ್ರಕಲಾ ಸಂಗತಿಗಳು ಸಾಂದರ್ಭಿಕವಾಗಿ ಮೂಡಿ ಬಂದಿವೆ. ಈ ಕಾಲದಲ್ಲಿ ಹರಿಹರನ ಶಿಷ್ಯ ರಾಘವಾಂಕನು ಹರಿಶ್ಚಂದ್ರಕಾವ್ಯ, ಸಿದ್ದರಾಮಚರಿತೆ. ಸೋಮನಾಥ ಚರಿತೆ ಮತ್ತು ವೀರೇಶ ಚರಿತೆಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಸಾಂದರ್ಭಿಕವಾದ ಕಲಾ ವಿಚಾರಗಳಿವೆ.

ಎರಡನೆಯ ಗುಣವರ್ಮನು 'ಪುಷ್ಪದಂತಪುರಾಣ' ಮತ್ತು 'ಚಂದ್ರನಾಥಅಷ್ಟಕ' ಎಂಬ ಕೃತಿಗಳನ್ನು ಬರೆದಿದ್ದಾನೆ. ಪುಷ್ಪದಂತ ಪುರಾಣದಲ್ಲಿ ಸ್ತ್ರೀವರ್ಣನೆ ಮಾಡುವಲ್ಲಿ 'ಬೆಳತಿಗೆ ಗಣ್ಣ ಬೆಳ್ಪುನಗೆಗಣ್ಣೆ ಮುಗುಳ್ನಗೆ ಚೆಲ್ಲಗಣ್ಣ' ಎಂದು ಹೇಳಿದ್ದು ಬಿಳಿಬಣ್ಣದ ಉಲ್ಲೇಖವಿದೆ. ಮತ್ತೊಂದು ಕಡೆಗೆ ಬಿಳಿ, ಕೆಂಪು, ಬಂಗಾರದ ಹಳದಿ ಬಣ್ಣಗಳನ್ನು ಪ್ರಸ್ತಾಪಿಸಿದ ಪದ್ಯದ ಸಾಲುಗಳು ಹೀಗಿವೆ.

'ಅಸುಗೆಯ ಕೆಂಪು, ಬಾಳೆಯ ಪಸುರ್ಪು, ತಮಾಳದ ಕರ್ಪು ಚಂಪಕ
ಪ್ರಸರದ ಪೊನ್ನ ಬಣ್ಣವರೆಗುಂದದ ಕುಂದದ ಬೆಳ್ಪು ಸುತ್ತಲುಂ'

ಪೋಲ್ವಾಳ ದಂಡನಾಥನೆಂಬ ಕವಿ 'ಹರಿಚಾರಿತ್ರ' ಎಂಬ ಷಟ್ಪದಿ ಕಾವ್ಯ ಬರೆದಿದ್ದಾನೆ. ಇದರಲ್ಲಿ ಅನೇಕ ಕಡೆಗಳಲ್ಲಿ ಚಿತ್ರಕಲೆಯ ಸಂಗತಿಗಳು ಹೇಳಲ್ಪಟ್ಟಿವೆ. ಒಂದು ಕಡೆಗೆ ಕರುವಿಟ್ಟ ಸತ್ಯದಿಂ ಕಣ್ದೆರೆದನಸಮ ಸಾಹಿತ್ಯದಿಂ ಬಣ್ಣವಿಟ್ಟಂ ಎಂದು ಹೇಳುವಲ್ಲಿ ಬಣ್ಣದ ಪರೋಕ್ಷ ಉಲ್ಲೇಖವಿದೆ. ಈ ಕಾಲದ ಕುಮಾರ ಪದ್ಮರಸನು 'ಸಾನಂದ ಚರಿತೆ' ಬರೆದಿದ್ದು, ಇದರಲ್ಲಿ 'ನಳನಳಿಪೆ ರೋಮೋದ್ಗಮಾಳಿಗ, ಳೊಳಗೊಳಗೆಥಳಥಳಿಪ ಸೌಧಮ' ಎಂಬುವಲ್ಲಿ ವಾಸ್ತುಶಿಲ್ಪದ ವರ್ಣನೆ ಇದೆ.

ಕ್ರಿ.ಶ.೧೨ನೇ ಶತಮಾನದ ಬಸವಾದಿ ಪ್ರಮಥರ ವಚನ ಸಾಹಿತ್ಯವು ಸಾಮಾಜಿಕ ಪರಿಣಾಮವನ್ನು ಬೀರುವಲ್ಲಿ ಮಹತ್ತರ ಪಾತ್ರವಹಿಸಿದೆ. ಈ ಕಾಲದ ಅನೇಕ ವಚನಕಾರರ ಕೃತಿಗಳಲ್ಲಿ ಸಾಂದರ್ಭಿಕವಾಗಿ ಕಲೆಯ ಸಂಗತಿಗಳು ಉಲ್ಲೇಖಗೊಂಡಿವೆ. ಬಸವಣ್ಣನವರ ಹಲವು ವಚನಗಳಲ್ಲಿ ಕಲೆಯ ಕುರಿತಾದ ಸಾಂದರ್ಭಿಕ ವಿವರಗಳು ಬಂದಿರುವುದನ್ನು ಗಮನಿಸಬಹುದು.

'ಅರ್ಥರೇಖೆಯಿದ್ದಲ್ಲಿ ಫಲವೇನು?
ಆಯುಷ್ಯ ರೇಖೆಯಿಲ್ಲದನ್ನಕ್ಕ'
'ಭಿತ್ತಿಯಿಲ್ಲದೆ ಬರೆಯಬಹುದೆ ಚಿತ್ತಾರವ
ಭಿತ್ತಿ ಬೆಳೆಯಬಹುದೇ ಧರೆ ಇಲ್ಲದೆ'
'ಮಡಿಕೆಯ ಮಾಡುವರೆ ಮಣ್ಣೆ ಮೊದಲು
ತೊಡುಗೆಯ ಮಾಡುವರೆ ಹೊನ್ನೆ ಮೊದಲು'

ಮೇಲಿನ ಮೂರು ವಚನಗಳಲ್ಲಿ ರೇಖೆ, ಆಕಾರ, ಚಿತ್ರ ಬರೆಯುವ ಭಿತ್ತಿ ಮತ್ತು ಮಡಿಕೆಯ ಮಾಡುವ ಕಲಾತ್ಮಕ ಅಂಶಗಳನ್ನು ಹೇಳಲಾಗಿದೆ. ಅಲ್ಲಮಪ್ರಭುವಿನ ಒಂದು ವಚನದಲ್ಲಿ ಹೀಗಿದೆ.

'ಘನತರವಾದ ಚಿತ್ರದ ರೂಪ ಬರೆಯಬಹುದಲ್ಲದೆ
ಪ್ರಾಣವ ಬರೆಯಬಹುದೇ ಅಯ್ಯ'

ಇದರಲ್ಲಿ ಕಲಾವಿದನಾದವನು ಎಷ್ಟೆ ಸುಂದರವಾದ ಚಿತ್ರಗಳನ್ನು ಬರೆದರೂ ಅದಕ್ಕೆ ಜೀವವನ್ನು ಕೊಡಲು ಸಾಧ್ಯವಿಲ್ಲ ಎಂದು ಹೇಳಲಾಗಿದೆ. ಚನ್ನಬಸವಣ್ಣನವರು ತಮ್ಮೊಂದು ವಚನದಲ್ಲಿ ಕೆಳಗಿನಂತೆ ಚಿತ್ರಕಲೆಯ ಪ್ರಸ್ತಾಪ ಮಾಡಿದ್ದಾರೆ.

'ಮರೀಚಿಯೊಳಡಗಿದ ಬಿಸಿಲಿನಂತಿದ್ದಿತು
ಕ್ಷೀರದೊಳಡಗಿದ ತುಪ್ಪದಂತಿದ್ದಿತು
ಚಿತ್ರಕನೊಳಡಗಿದ ಚಿತ್ರದಂತಿದ್ದಿತು'

ಎಂದು ಹೇಳುವಲ್ಲಿ ಆತ್ಮಜ್ಞಾನವು ಚಿತ್ರಕಲಾವಿದನಲ್ಲಿ ಅಡಗಿದ ಚಿತ್ರದಂತೆ ಎಂದು ಹೋಲಿಕೆ ಮಾಡಲಾಗಿದೆ. ಶರಣೆಯರಲ್ಲಿ ಪ್ರಖ್ಯಾತಳಾದ ಮಹಾದೇವಿಯಕ್ಕ ಚಿತ್ರಕಲೆಯ ಸಂಗತಿಗಳನ್ನು ತನ್ನ ವಚನಗಳಲ್ಲಿ ಅನೇಕ ಕಡೆಗಳಲ್ಲಿ ಉಲ್ಲೇಖಿಸಿದ್ದಾಳೆ.

'ನಡೆಯದ ನುಡಿಗಡಣ ಮಾಡದ ಕಲಿತನ
ಚಿತ್ರದ ಸತಿಯ ಶೃಂಗಾರವದೇತಕ್ಕೆ ಪ್ರಯೋಜನ'
'ನನ್ನ ಗಂಡ ಚನ್ನಮಲ್ಲಿಕಾರ್ಜುನನಲ್ಲದೆ
ಮಿಕ್ಕಗಂಡರೆಲ್ಲ ಮುಗಿಲಮರೆಯ ಬಣ್ಣದ ಬೊಂಬೆಯಂತೆ'

ಈ ಮೇಲಿನ ವಚನಗಳಲ್ಲಿ ಚಿತ್ರಕಲೆ, ಶೃಂಗಾರ, ಶಿಲ್ಪಕಲೆ ಮತ್ತು ಬಣ್ಣಗಳ ಬಗೆಗೆ ಪ್ರಸ್ತಾಪಿಸಲಾಗಿದೆ. ಉರಿಲಿಂಗದೇವನ ಶಿಷ್ಯನಾದ ಉರಿಲಿಂಗಪೆದ್ದಿಯ ಒಂದು ವಚನದಲ್ಲಿ ಮೂರ್ತಿಶಿಲ್ಪ ಮತ್ತು ವಾಸ್ತುಕಲೆಗಳ ಉದಾಹರಣೆಗಳಿವೆ.

'ದೇಹವೆಂಬ ಅರಮನೆಯಲ್ಲಿ ಮಹಾಲಿಂಗವೆಂಬರಸು
ಮನವೆಂಬ ಪೀಠದ ಮೇಲೆ ಮೂರ್ತಿಗೊಂಡು' ಎಂದು ಹೇಳಲಾಗಿದೆ.

ಉರಿಲಿಂಗಪೆದ್ದಿಯ ಹೆಂಡತಿಯಾದ ಕಾಳವ್ವೆಯ ವಚನದಲ್ಲಿ ಒಂದು ಕಡೆಗೆ 'ವ್ರತವೆಂಬುದು ಜೀವನಕಲೆ, ವ್ರತವೆಂಬುದು ಸುಯಿಧಾನ' ಎಂದು ಹೇಳುವಲ್ಲಿ ಕಲೆಯ ಹೋಲಿಕೆ ಕಂಡುಬರುತ್ತದೆ.[೭೫] ಆಯ್ದಕ್ಕಿ ಮಾರಯ್ಯನ ಒಂದು ವಚನದಲ್ಲಿ ಮೂರ್ತಿ ಶಿಲ್ಪಕಲೆಯ ಪ್ರಸ್ತಾಪವಿದೆ.

'ಚಂದ್ರಕಾಂತದ ಶಿಲೆಯಲ್ಲಿ ಬಿಂದುವಡಗಿದಂತೆ
ಶಿಲೆಕಾಷ್ಠಂಗಳಲ್ಲಿ ಅನಲನಡಗಿಪ್ಪಂತೆ'

ಎಂದು ಹೇಳಲಾಗಿದ್ದು, ಶಿಲೆ ಮತ್ತು ಮರಗಳಲ್ಲಿ ಮೂರ್ತಿಗಳಡಗಿದ್ದು, ಕಲಾವಿದನ ಕೆತ್ತುವಿಕೆಯಿಂದ ಅವು ಅಭಿವ್ಯಕ್ತಗೊಳ್ಳುತ್ತವೆ ಎಂದು ಹೇಳಿದ್ದಾರೆ. ಕಂಭದಮಾರಿತಂದೆ ಬಣ್ಣಗಳ ಸಂಗತಿಯನ್ನು ತನ್ನ ವಚನದಲ್ಲಿ ಕೊಟ್ಟಿದ್ದಾನೆ.

'ಆ ಕಟ್ಟೆಯೊಳಗಣ ನೀರ ತಡಿಯಲ್ಲಿ ಕಪೋತ ಕಂಡೆ
ಮಧ್ಯದಲ್ಲಿ ಪೀತ, ಕಡೆಯಲ್ಲಿ ಶ್ವೇತವಾಗಿತ್ತು
ಈ ತ್ರಿವಿಧ ನೀರ ಹೊಳೆದು ನೋಡಲಾಗಿ'

ಮ್ಯೇಲಿನ ವಚನದಲ್ಲಿ ಹಳದಿ, ಬಿಳಿ ಬಣ್ಣಗಳ ಪ್ರಸ್ತಾಪವಿದೆ. ಅದೇ ರೀತಿ ತೆಲುಗೇಶಮಸಣಯ್ಯ ಎಂಬವನ ವಚನದಲ್ಲಿ 'ಹಳದಿ ಸೀರೆಯನುಟ್ಟು, ಬಳಹದ ವಾಲೆಯ ಕಿವಿಯಲಿಟ್ಟು' ಎಂದು ಹೇಳಲಾಗಿದೆ. ಬಹೂರ ಬೊಮ್ಮಣ್ಣ ಎಂಬ ವಚನಕಾರನು ಚಿತ್ರಕಲೆಯ ಹೋಲಿಕೆ ಕೊಡುತ್ತಾನೆ.

---

೭೫. ಡಾ.ಜಿ.ಎಸ್.ಶಿವರುದ್ರಪ್ಪ: (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : (ಸಂಪುಟ-೩) : ಪುಟ-೩೪೫

'ಕೊರಡು ಕೊನವೋ್ೞದಲ್ಲಿಬರಡು ಹಯನಾದಲ್ಲಿ
ಚಿತ್ರದ ಗೊಂಬೆ ನಿಜ ಕರ್ತೃರೂಪವಾಗಿ ಬಂದಲ್ಲಿ'

ಇದರಲ್ಲಿ ಕೊರಡು ಚಿಗುರಿದಾಗ, ಬರಡು ಹಯನದಾಗ ಹೇಗಾಗುವುದೋ ಕಲಾವಿದನು ಬರೆದ ಚಿತ್ರದ ಗೊಂಬೆಗೆ ಜೀವ ಬಂದು ನಿಜ ಆಕಾರ ಪಡೆದರೆ, ಅಂತಹ ಪರಿಸ್ಥಿತಿ ಉಂಟಾಗುವುದು ಎನ್ನುತ್ತಾನೆ. ವಚನಭಾಂಡಾರಿ ಶಾಂತರಸನು ತನ್ನೊಂದು ವಚನದಲ್ಲಿ 'ಒಳಹೊರಗಾಯಿತ್ತು, ಆಲೇಖ ಲೇಖವಾಯಿತ್ತು, ಆಲೇಖನಾದ ಶೂನ್ಯಶಿಲೆಯ ಹೊರಹೊಮ್ಮಿ ಕಂಡೆ ನಿನ್ನನು' ಎಂದು ಹೇಳಿದ್ದಾನೆ. ಇದರಲ್ಲಿ ರೇಖೆ ಮತ್ತು ಆಕಾರಗಳ ಸಂಗತಿ ಕಂಡುಬರುತ್ತದೆ. ಜನಸಾಮಾನ್ಯರ ಸಾಮಾಜಿಕ ಪರಿಸ್ಥಿತಿಗಳಿಗೆ ಕನ್ನಡಿ ಹಿಡಿಯುವಂತೆ ವಚನಗಳನ್ನು ಬರೆದ ಸರ್ವಜ್ಞನು ಹಲವಾರು ಕಡೆಗಳಲ್ಲಿ ಕಲೆಯ ಅಂಶಗಳನ್ನು ಪೂರಕವಾಗಿ ಬಳಸಿಕೊಂಡಿದ್ದಾನೆ.[೭೬]

'ಸಣ್ಣನೆಯ ಮಳಲೊಳಗೆ, ನುಣ್ಣನೆಯ ಶಿಲೆಯೊಳಗೆ
ಬಣ್ಣಿಸುತ್ತ ಬರೆದ ಪಟದೊಳಗೆ ಇರುವಾತ,
ತನ್ನೊಳಗೆ ಇರನೇ ಸರ್ವಜ್ಞ'

ಉಸುಕಿನ ಸಣ್ಣಕಣದಲ್ಲಿ, ನುಣುಪಾದ ಕಲ್ಲಿನಲ್ಲಿ ಮತ್ತು ಸುಂದರವಾಗಿ ಬರೆದ ಚಿತ್ರದಲ್ಲಿ ಇರುವಂತಹ ಪರಮಾತ್ಮ ಪ್ರತಿಯೊಬ್ಬ ಮನುಷ್ಯನಲ್ಲಿಯೂ ಇರಲಾರನೆ ಎಂಬುದಾಗಿ ಕಲೆಯ ಉದಾಹರಣೆ ಕೊಟ್ಟು ಸರ್ವಜ್ಞ ಇಲ್ಲಿ ಕೇಳುತ್ತಾನೆ.

'ಗಾನವಿದ್ಯೆಯು ಲೇಸು : ಮಾನವತಿ ಸತಿಲೇಸು
ಸ್ವಾನುಭವಿಗಳ ಕಲೆ ಲೇಸು : ಎಲ್ಲಕ್ಕೂ
ದಾನಿಯೇ ಲೇಸು ಸರ್ವಜ್ಞ'

ಗಾನವಿದ್ಯೆಯು ಒಳ್ಳೆಯದು, ಅದರಂತೆ ಮಾನವತಿಯಾದ ಹೆಂಡತಿ ಇರುವುದು ಒಳ್ಳೆಯದು ಮತ್ತು ಕೇವಲ ಉಪದೇಶಕ್ಕಿಂತ ಸ್ವಾನುಭವಿಗಳು ತಿಳಿಸುವ ಕಲೆ ಲೇಸು ಜಗದಲ್ಲಿ ದಾನಯಾದವನು ಬಲು ಲೇಸೆಂದು ದಾನ ಗುಣವನ್ನು ಕಲೆಯ ಉಪಮೆಯ ಮೂಲಕ ಹೇಳಿದ್ದಾನೆ.

ಕ್ರಿ.ಶ.೧೨ನೇ ಶತಮಾನದ ಶಾಸನ ಬರಹಗಳಿಂದಲೂ ಆ ಕಾಲದ ಚಿತ್ರಕಲಾ ಸಾಹಿತ್ಯದ ಸ್ವರೂಪವನ್ನು ನಿರ್ಧರಿಸುವಲ್ಲಿ ಪುಷ್ಟಿ ದೊರಕುವುದು. ಕೆಲವು ಶಾಸನಗಳು ಕೇವಲ ಶಾಸನಗಳನ್ನು ಕಂಡರಿಸಿ ಕಲಾವಿದರು ಅಥವಾ ಶಿಲ್ಪಿಗಳ ಕುರಿತು ತಿಳಿಸಿದರೆ ಮತ್ತೆ ಕೆಲವು ಶಾಸನಗಳು ಕಲಾ ಸಂಗತಿಗಳ ಉಲ್ಲೇಖಗಳನ್ನು ಹೊಂದಿವೆ.[೭೭] ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯದಲ್ಲಿರುವ ಶಾಸನ(೧೧೦೨) ವನ್ನು ಮಲ್ಲಿಕಾರ್ಜುನ, ಅಬ್ಬಲೂರಿನ ಶಾಸನವನ್ನು (೧೧೦೪) ಅಚರಾಜ ಮತ್ತು ಮಲ್ಲಿದೇವ, ಬೆಳಗಾವಿ ಜಿಲ್ಲೆಯ ಪರಸಗಡದ ಬಸವಣ್ಣ ದೇವಾಲಯದಲ್ಲಿರುವ ಶಾಸನವನ್ನು (೧೧೦೭) ಲಕ್ಷ್ಮಣ ಎಂಬ ಶಿಲ್ಪಿಗಳು ಕೆತ್ತಿದ್ದಾರೆ. ಹಾವೇರಿಯ ಸಿದ್ದೇಶ್ವರ ದೇವಸ್ಥಾನದ ಶಾಸನವನ್ನು (೧೧೦೯) ನಾರಣದೇವನೆಂದ ಕಲಾವಿದ ರಚಿಸಿದ. ಇದರಲ್ಲಿ ಕಲೆಯ ಸಂಗತಿ ಹೀಗಿದೆ.

'ಸಕಳಕಳಾ ಪ್ರವೀಣತೆಯ ನೆಂಬಿನ ಮುನ್ನತಿ ವೆತ್ತಕಾಳಿಕ
ಬ್ಬರಸಿಯ ರೂಪನಾನ್ನೆರಿಯೆ ಬಣ್ಣಿಪನೆಂಬವನೆಗ್ಗನಲ್ಲನೆ'

---

೭೬. ಭೀಮಭಟ್ಟ ಶಂ.ಪೂಜಾರ : ಸಟೀಕಾ ಸರ್ವಜ್ಞ ಮೂರ್ತಿ ವಚನಗಳು : ಪುಟ-೩೪, ೭೨

೭೭. ಶಾಸನಗಳ ಬಗೆಗಿನ ಹೆಚ್ಚಿನ ವಿವರಗಳಿಗೆ ನೋಡಿರಿ: ಡಾ.ಹಾ.ಮಾ.ನಾಯಕ : (ಸಂ) : ಕನ್ನಡ ಸಾಹಿತ್ಯ ಚರಿತ್ರೆ : (ಸಂಪುಟ-೩) : ಪುಟ:೨೪೦-೨೬೦

ಸಕಲ ಕಲೆಗಳಲ್ಲಿ ಪ್ರವೀಣತೆಯನ್ನು ಪಡೆದ ಕಾಳಿಕಬ್ಬರಸಿಯ ರೂಪಲಾವಣ್ಯವನ್ನು ಬಣ್ಣಿಸಲು ಸಾಮಾನ್ಯರಿಗೆ ಆಗದ ಕೆಲಸ ಎಂದು ಇಲ್ಲಿ ಹೇಳಲಾಗಿದೆ.

ಚಟ್ಟಪಾರ್ಯ ಎಂಬವನು ಗದಗ ಜಿಲ್ಲೆ ಲಕ್ಷ್ಮೇಶ್ವರದ ಶಾಸನ, ಗದಗ ತಾಲೂಕು ಹೊಂಬಳದ ಶಾಸನಗಳನ್ನು ಒಂದೇ ವರ್ಷದಲ್ಲಿ (೧೧೧೨) ಕೆತ್ತಿದ್ದಾನೆ. ಅದರಂತೆ ರೋಣ ತಾಲೂಕು ಅಬ್ಬಿಗೇರಿಯ ಶಾಸನವನ್ನು (೧೧೧೩) ಅಯ್ಚರಾಜನು ರಚಿಸಿದ್ದಾಗಿ ತಿಳಿದುಬರುತ್ತದೆ. ಶ್ರವಣಬೆಳಗೊಳದ ಎರಡು ಕಟ್ಟೆ ಬಸದಿಯಲ್ಲಿರುವ ಶಾಸನವನ್ನು (೧೧೧೫) ಚಾವರಾಜ ಎಂಬವನು ಕೆತ್ತಿದ್ದು, ಇದರಲ್ಲಿ ಆತ ತನ್ನನ್ನು 'ಮೃದು ರೇಖಾ ವಿಳಾಸ' ಎಂಬುದಾಗಿ ಕರೆದುಕೊಂಡಿದ್ದಾನೆ.

ಈ ಕಾಲಮಾನದ ಇನ್ನೂ ಕೆಲವು ಶಾಸನ ಶಿಲ್ಪಿಗಳ ಹೆಸರನ್ನು ಉಲ್ಲೇಖಿಸಬಹುದು. ಶ್ರವಣಬೆಳಗೊಳದ ಚಿಕ್ಕಬೆಟ್ಟದ ಮೇಲಿರುವ ಚಾವುಂಡರಾಯ ಬಸದಿಯಲ್ಲಿನ ಶಾಸನವನ್ನು (೧೧೨೩) ಮರ್ದಿಮಯ್ಯ, ಡಾವಣಗೆರೆಯ ಶಾಸನವನ್ನು (೧೧೨೩) ಕಡಬಾಚಾರಿ ಎಂಬವರು ಕೆತ್ತಿದ್ದಾರೆ. ಅದರಂತೆ ಧಾರವಾಡ ಜಿಲ್ಲೆಯ ಆಲೂರು ನಾಗೇಶ್ವರ ದೇವಾಲಯದ ಶಾಸನವನ್ನು (೧೧೨೪) ಸಂಕಣ, ಹಾನಗಲ್ ತಾಲೂಕಿನ ಬಾಳೂರು ಶಾಸನವನ್ನು (೧೧೨೫) ಚಂದ್ರಭಟ್ಟ, ಹಿರೇಕೆರೂರ ಬಳಿಯ ಮದಗಮಾಸೂರ ಗ್ರಾಮದ ಶಾಸನವನ್ನು (೧೧೨೫) ನಾಗಾರ್ಜುನ, ಹಾವೇರಿಯ ಗಣೇಶ ದೇವಾಲಯದ ಶಾಸನವನ್ನು (೧೧೩೪)  ಮೂಕಣ ಪಂಡಿತ ಕೆತ್ತಿದ್ದಾರೆ. ಶ್ರವಣಬೆಳಗೊಳದ ಶಾಸನ ಒಂದರಲ್ಲಿ (೧೧೩೫) 'ಮಾಡಿಸಿದಂ ಜಿನೇಂದ್ರ ಭವನಗಳನಾ ಕೊಪಣ ತೀರ್ಥದೊಲು ಬಹುಚಿತ್ರ ಭಿತ್ತಿಯಂ' ಎಂದು ಹೇಳಲಾಗಿದೆ.[೨೮] ಧಾರವಾಡ ಜಿಲ್ಲೆಯ ಮಂಟೂರಿನ ಶಾಸನವನ್ನು (೧೧೩೮) ಬಲದೇವ ಕಂಡರಿಸಿದ್ದು ತಾನು ಚಾವುಂಡನೆಂಬ ಕಲಾವಿದನ ಮಗನೆಂದು ಹೇಳಿಕೊಂಡಿದ್ದಾನೆ.

ನವಲೆ ಗ್ರಾಮದ ಲಕ್ಷ್ಮೀಕಾಂತ ದೇವಾಲಯದ ಶಾಸನವನ್ನು (೧೧೩೯) ನಾಗಣ್ಣ ಕೆತ್ತಿದ್ದರೆ, ಅಬ್ಬಲೂರಿನ ಶಾಸನವನ್ನು (೧೧೪೪) ಮಹದೇವ ಮತ್ತು ನರಗುಂದದ ಜೋಡು ಮಾರುತಿ ದೇವಾಲಯದಲ್ಲಿನ ಶಾಸನವನ್ನು (೧೧೪೭) ಸಾತೋಜನ ಮಗನಾದ ಬಿನ್ನೋಜನು ಕಂಡರಿಸಿದ್ದಾನೆ. ಅದರಂತೆ ಗದಗ ಜಿಲ್ಲೆ ಲಕ್ಷ್ಮೇಶ್ವರದ ಶಾಸನವನ್ನು (೧೧೪೭) ಜಿನೋಜನ ಹಿರಿಯ ಮಗನಾದ ಚಾವೋಜ, ಸೌದತ್ತಿ ತಾಲೂಕಿನ ಶಿರಸಂಗಿಯ ಕಲ್ಮೇಶ್ವರ ದೇವಾಲಯದ ಶಾಸನವನ್ನು ರೂವಾರಿ ಚಕ್ರವರ್ತಿ ಬಿರುದಾಂಕಿತ ಸುಮತೋಜ ಎಂಬವನು ಕಡೆದಿರುವುದು ತಿಳಿದುಬರುತ್ತದೆ. ಹೀಗೆ ಆ ಕಾಲದ ಅನೇಕ ಕಲಾವಿದರ ಹೆಸರುಗಳು ತಿಳಿದುಬರುವ ಮೂಲಕ ಕಲಾ ಸಾಹಿತ್ಯದ ಮೌಲ್ಯವನ್ನು ಹೆಚ್ಚಿಸಿವೆ.

ಕ್ರಿ.ಶ. ೧೨ನೇ ಶತಮಾನದಲ್ಲಿ ಕರ್ನಾಟಕದಲ್ಲಿ ರಚನೆಯಾದ ಕೆಲವು ಭಿತ್ತಿಚಿತ್ರಗಳು ಸಹಿತ ಅಂದಿನ ಕಲಾ ಸಾಹಿತ್ಯದ ಸ್ಥಿತಿಗತಿಗಳ ಬಗ್ಗೆ ಬೆಳಕು ಚೆಲ್ಲುತ್ತವೆ.[೨೯] ಮೂಡಬಿದಿರೆಯ ಬಸದಿ (೧೧೧೩), ಶ್ರವಣ ಬೆಳಗೊಳದ ಚಿಕ್ಕಬೆಟ್ಟದ ಮೇಲಿನ ಪೋಚವ್ವೆಯ ಬಸದಿ (೧೧೧೮) ಗಳಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನನ ಕಾಲದ ಭಿತ್ತಿಚಿತ್ರಗಳಿದ್ದರೆ, ಜಕ್ಕನಹಳ್ಳಿಯ ಕಲ್ಲೇಶ್ವರ ದೇವಾಲಯದಲ್ಲಿ (೧೧೨೦) ಒಂದನೇ ನರಸಿಂಹನ ಕಾಲದ ಚಿತ್ರಗಳಿವೆ. ಇದಲ್ಲದೆ ಜೈನರ ಧವಳತ್ರಯಗಳಲ್ಲಿನ ಹಸ್ತಪ್ರತಿ ಚಿತ್ರಗಳು ಇದೇ ಅವಧಿಯಲ್ಲಿ(೧೧೧೩) ರಚನೆಯಾಗಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

೨೮. ಡಾ.ಯಾದವ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ : ಪುಟ-೪೯

೨೯. ಡಾ.ಯಾದವ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ : ಪುಟ-೨೦.

ಕ್ರಿ.ಶ. ೧೩ನೇ ಶತಮಾನವು ಚಿತ್ರಕಲಾ ಸಾಹಿತ್ಯದ ಮತ್ತೊಂದು ಘಟ್ಟವನ್ನು ಪ್ರತಿನಿಧಿಸುತ್ತದೆ. ಈ ಕಾಲಮಾನದಲ್ಲಿ ರಚನೆಗೊಂಡ ಅನೇಕ ಸಾಹಿತ್ಯ ಕೃತಿಗಳಲ್ಲೂ ಕಲೆಯ ಸಂಗತಿಗಳು ಪೂರಕವಾಗಿ ಬಳಕೆಗೊಂಡು ಅಂದಿನ ಕಲಾ ಸಾಹಿತ್ಯದ ವ್ಯಾಪ್ತಿಯನ್ನು ವಿಸ್ತರಿಸಿವೆ. ಕ್ರಿ.ಶ. ೧೩ನೇ ಶತಮಾನದಲ್ಲಿ ಜೀವಿಸಿದ್ದ ಅಂಡಯ್ಯ ಕವಿಯು 'ಕಬ್ಬಿಗರಕಾವ' ಎಂಬ ಕೃತಿ ರಚಿಸಿದ್ದಾನೆ. ಇದರಲ್ಲಿ ಚಿತ್ರರೂಪ, ಭಿತ್ತಿ, ಬಣ್ಣ, ಚಿತ್ರಸೌಂದರ್ಯಗಳ ಬಗ್ಗೆ ವಿವರಳಿವೆ.

'ಎನ್ನೊಡೆಯನ ಬಲ್ವಂ ನೀ
ಎನ್ನುಂ ಕಂಡರಿದುದಿಲ್ಲ ಬಿದಿಯೆಂ ಬಣ್ಣಂ
ಬನ್ನಂ ಬಟ್ಟುದನರಿಯನೆ' (ಪದ್ಯ-೧೪೬)

ಈ ಪದ್ಯದಲ್ಲಿ ಮೇಲೆ ಹೇಳಲಾದ ಸಂಗತಿಗಳು ಪರೋಕ್ಷವಾಗಿ ಮೂಡಿ ಬಂದಿವೆ.

ಈ ಕಾಲದ ಕಮಲಭವ ಎಂಬ ಕವಿಯು 'ಶಾಂತಿನಾಥ ಪುರಾಣ' ವನ್ನು ಬರೆದಿದ್ದು, ಇದರಲ್ಲಿ ಚಿತ್ರಕಲೆಯ ಅನೇಕ ಉದಾಹರಣೆಗಳಿವೆ.[೮೦] ಪುರವರ್ಣನೆ, ವಡ್ಡೋಲಗ ವರ್ಣನೆ, ಸ್ತ್ರೀವರ್ಣನೆ, ಋತುಗಳ ವರ್ಣನೆಗಳಲ್ಲಿ ಚಿತ್ರಕಲೆಯ ಪ್ರಸ್ತಾಪ ಬರುತ್ತದೆ. ರಥನೂಪುರ ಚಕ್ರವಾಳದ ವರ್ಣನೆಯಲ್ಲಿ ಈ ಕೆಳಗಿನಂತಿದೆ.

'ಪುದಿದು ಪೊದರ್ದಿ ಸಾಮಜ ಪದಾಂಕ ಚತುರ್ಮುಖ ಗೋಪುರಗಳಿಂ
ವಿದಿತ ಮಹುತ್ತುವರ್ಣ ರುಚಿ ವಿಭ್ರಮದಿಂ ವಿಬುಧಾವಳೀ ವಿಳಾ
ಸದಿನುರುರಾಜ ಹಂಸ ಯುತದಿಂ ರಥನೂಪುರ ಚಕ್ರವಾಳಮಿರ್ಪುದು'

ಇಲ್ಲಿ ಕಲಾ ವಿಷಯಗಳಾದ ಆಕಾರ, ಬಣ್ಣ, ವಾಸ್ತುಶಿಲ್ಪ, ರೇಖೆ, ರಥಶಿಲ್ಪಗಳ ಉಲ್ಲೇಖಗಳು ಬಂದಿವೆ.

'ಸುತಿರ್ಪುದ್ಧತವಾದಿವೃಂದ ವೃತದಿಂ ವ್ಯಾಖ್ಯಾನಮಂ ಚಿತ್ರಮಾ
ಗಿಸುತಿರ್ಪುನ್ನತವಾಗ್ಮಿ ಸುಕುಳದಿ ನಿಂತೊಪ್ಪಿರ್ಪುದೊಡ್ಡೋಲಗಂ'

ಇಲ್ಲಿ ಒಡ್ಡೋಲಗ ವರ್ಣನೆ ಇದ್ದು, ಚಿತ್ರ ಮತ್ತು ಆಕಾರಗಳ ಪ್ರಸ್ತಾಪವಿದೆ.

ಮಲ್ಲಿಕಾರ್ಜುನನೆಂಬ ಕವಿಯು ಸಂಗ್ರಹಿಸಿದ 'ಸೂಕ್ತಿಸುಧಾರ್ಣವ' ಎಂಬ ಕೃತಿಯಲ್ಲಿ ಕಲೆಯ ಉಲ್ಲೇಖಗಳಿವೆ.

'ಪದವಿನ್ಯಾಸದ ದೆಸೆ ಮಾರ್ಗದ ವಿಲಾಸಂರೂಢಿ ವೆತ್ತಂಗಹಾ
ರದಲಂಕಾರದ ಬಂಧಭಾವದೆಸಕಂ ಮೆಲ್ಪಾಡಿನೊಳ್ಪಂತೆ ಕೂ
ಡಿದ ನಾನಾರಸಸಾರದ ನಮೆಸೆದತ್ತೆದೊಲ್ದು'

ಇದರಲ್ಲಿ ಚಿತ್ರಶೈಲಿ, ಅಲಂಕಾರ, ಭಾವ, ಲಾವಣ್ಯಯೋಜನೆ, ಔಚಿತ್ಯ ಮತ್ತು ರಸದ ಪರಿಕಲ್ಪನೆಗಳ ವಿಚಾರ ಕಂಡು ಬರುತ್ತದೆ. ಮಹಾಬಲನೆಂಬ ಕವಿ 'ನೇಮಿನಾಥ ಪುರಾಣ' ಬರೆದಿದ್ದಾನೆ. ಇದರಲ್ಲಿ ಸಂಗೀತ, ನೃತ್ಯ, ಶಿಲ್ಪ ಮತ್ತು ಚಿತ್ರಕಲೆಗಳ ಉಲ್ಲೇಖಗಳು ಅಲ್ಲಲ್ಲಿ ಬಳಕೆಯಾಗಿವೆ.

'ಕರುವಿಟ್ಟೊಂದಂದದಿಂ ಸ್ಪಂದಮನುರುದಿರೆ ಕಾಯಂ
ಕರದ್ವಂದ ಮಂಕಾಂ, ತರದೊಳ್ ಚೆಲ್ವಾಗೆ ನಾಸಾಗ್ರದೊಳಿಗೆ ನಯನಂ'

ಮೇಲಿನ ಪದ್ಯದಲ್ಲಿ ದೀಕ್ಷಾಬದ್ಧವಾದ ರಾಜನ ರೂಪವು ಹೇಗೆ ಕಾಣುತ್ತಿತ್ತು ಎಂಬುವುದನ್ನು ಕಲೆಯ ಉಪಮೆಗಳಿಂದ ಹೇಳಲಾಗಿದೆ.

---

೮೦. ಡಾ.ಹಾ.ಮಾ.ನಾಯಕ : ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೩) : ಪುಟ-೧೪೯.

'ತಾಳಲಯಕ್ಕೆ ಗೀತದಲಯಂ ಸಮನಾಗಿರೆ ಸ

ಮ್ಮೇಳಿಸಿ ವಾದ್ಯನಾದ ಮಳವಟ್ಟರೆ ವಾದ್ಯ ನಿನಾದ ದಿಂಪಿನೊಳ್'

ಇದರಲ್ಲಿ ಸಂಗೀತದ ಪ್ರಸ್ತಾಪವಿದ್ದು, ತಾಳ, ಲಯ, ಗೀತ, ವಾದ್ಯಗಳು, ರಸನಿಷ್ಪತ್ತಿಯಂತಹ ಸಂಗತಿಗಳು ಹೇಳಲ್ಪಟ್ಟಿವೆ. ಇದಲ್ಲದೆ ಈ ಕಾಲದ ಮತ್ತೊಬ್ಬ ಕವಿ ಮಾಘನಂದಿ ಶ್ರಾಕಸಾರ, ಪದಾರ್ಥಸಾರ, ಸಿದ್ಧಾಂತಸಾರ ಎಂಬ ಕೃತಿಗಳನ್ನು ಬರೆದಿದ್ದು ಇವುಗಳಲ್ಲಿ ಸಾಂದರ್ಭಿಕವಾಗಿ ಕಲೆಯ ಸಂಗತಿಗಳು ಹೇಳಲ್ಪಟ್ಟಿವೆ. ಕ್ರಿ.ಶ. ೧೩ನೇ ಶತಮಾನದ ಮತ್ತೊಬ್ಬ ಪ್ರಸಿದ್ಧ ಕವಿಯಾದ ಕೇಶಿರಾಜನು 'ಶಬ್ದಮಣಿ ದರ್ಪಣ' ಎಂಬ ಕೃತಿಯನ್ನು ರಚಿಸಿದ್ದಾನೆ. ಇದರಲ್ಲಿ ಚಿತ್ರ, ಚಿತ್ರರಚನೆ, ಬಣ್ಣ, ಕಲಾಕೃತಿ, ರಸಚಿತ್ರ ಮುಂತಾದ ಸಂಗತಿಗಳು ಹೇಳಲ್ಪಟ್ಟಿವೆ.

'ದೊರೆವಡೆದ ಚೋಳಪಾಲಕ

ಚರಿತಂ ಶ್ರೀ ಚಿತ್ರಮಾಲೆಯಂತೆ' (ಪದ್ಯ-೩೩೯)

'ಸಿರಿಗೀಕ್ಷಿಪ ರಸಚಿತ್ರಂ

ಸರಸತಿಗೆರಡನೆಯ ಬೀಣೆಯೆನೆ ಸೌಭಾಗ್ಯಂ' (ಪದ್ಯ-೩೪೦)

ಮೇಲಿನ ಪದ್ಯಗಳಲ್ಲಿ ಚಿತ್ರ, ಚಿತ್ರಮಾಲೆ, ರಸಚಿತ್ರ, ವೀಣೆ ಮುಂತಾದ ಕಲಾ ವಿಷಯಗಳು ಉಲ್ಲೇಖಿಸಲ್ಪಟ್ಟಿವೆ. ಈ ಕಾಲದ ಮತ್ತೊಬ್ಬ ಕವಿ ಚೌಂಡರಸನು 'ನಳಚಂಪೂ ಮತ್ತು ಅಭಿನವ ದಶಕುಮಾರ ಚರಿತೆ'ಗಳನ್ನು ಬರೆದಿದ್ದಾನೆ. ಅದರಲ್ಲಿನ ಕೆಲವು ಕಲಾ ಸಂಬಂಧಿ ಸಂಗತಿಗಳು ಹೀಗಿವೆ.

'ಸಲ್ಲಲಿತ ಪ್ರಸಂಗ ಮೆಸೆದಿರ್ಪುದು

ಚಿತ್ರಮಿದಲ್ತೆ ಧಾತ್ರಿಯೊಳ್'

ಈ ಪದ್ಯವು ಅಭಿನವ ದಶಕುಮಾರ ಚರಿತೆಯಿಂದ ತೆಗೆದುಕೊಳ್ಳಲಾಗಿದ್ದು, ಇದರಲ್ಲಿ ಚಿತ್ರ ಮತ್ತು ಕಲಾ ಪ್ರಸಂಗಗಳ ಉಲ್ಲೇಖವಿದೆ. ನಳಚಂಪೂ ಕೃತಿಯಲ್ಲಿ ಮತ್ತೊಂದು ಕಡೆಗೆ ಅನೇಕ ಕಲಾ ಸಂಗತಿಗಳು ಹೇಳಿವೆ.

'ಬೆಳಗುತ್ತಿರ್ಪ ಮೇತಾಂಶು ಬಿಂಬಕಳೆಗಳ್'

'ಸೊರಕೆಯ್ಯೊಳಮುಳಿಪ ಸೆಂಡಂ ಚಿತ್ರಬಂಧಂಗಳೊಳ್'

'ವೆದೆಲೆ ಬೇರ್ಬರಿಲ್ದ ಪರಿವಲ್ ಕಲೆಗಳ್ ತುರುಗಿರ್ದಮೆಯ್ಯಗ'

ಮೇಲಿನ ಮೂರು ಸಾಲುಗಳು ನಳಚಂಪೂವಿನ ಬೇರೆ ಬೇರೆ ಪದ್ಯಗಳಿಂದ ಆಯ್ದುಕೊಳ್ಳಲಾಗಿದ್ದು, ಇದರಲ್ಲಿ ಕಲೆ, ಚಿತ್ರ, ಚಿತ್ರಶೈಲಿ, ಪ್ರತಿಬಿಂಬ, ನೆರಳು-ಬೆಳಕು ಮುಂತಾದ ವಿಷಯಗಳು ಪ್ರಸ್ತಾಪಿಸಲ್ಪಟ್ಟಿವೆ. ಇವುಗಳಲ್ಲದೆ ಇನ್ನೂ ಹಲವು ಕಡೆಗಳಲ್ಲಿ ಕಲಾ ವಿಚಾರಗಳು ನಳಚಂಪೂ ಕೃತಿಯಲ್ಲಿ ಉಲ್ಲೇಖಗೊಂಡಿವೆ. ಹಂಸದ ವರ್ಣನೆ ಇರುವ ಪದ್ಯದಲ್ಲಿ ಹೀಗಿದೆ.

'ಸುಖನಿದ್ರೆಯಂ ಬಯಸುವಾನನ ಮೊಪ್ಪುವ ಪೊನ್ನ ಹಂಸೆ ದಿ

ಟ್ಟಿಗೆ ಪೊಸಭಿತ್ತಿಯೊಳ್ ಬರೆದ ಚಿತ್ರದ ಹಂಸೆ ಪೊಲಿರ್ದುದಾಕ್ಷಣಂ'

ಇದರಲ್ಲಿ ಗೋಡೆಯ ಮೇಲೆ ಬರೆದ ವರ್ಣ ಭಿತ್ತಿಚಿತ್ರಕಲೆಯ ವಿಚಾರವಿದೆ. ಮತ್ತೊಂದು ಪದ್ಯದಲ್ಲಿ ವಿವಿಧ ರೀತಿಯ ಉಪ್ಪಿನ ಕಾಯಿಗಳನ್ನು ಚೌಂಡರಸನು ಕಲಾತ್ಮಕವಾಗಿ ವರ್ಣಿಸಿದ್ದಾನೆ. ಉಪ್ಪಿನಕಾಯಿಗಳು ಕಲಾಕೋವಿದೆಯರ ವರ್ಣದ ಪ್ಯಾಲೆಟ್ ಹಾಗೆ ಕಂಡುಬರುತ್ತಿದ್ದವು ಎಂದು ಕವಿ ತಿಳಿಸುತ್ತಾನೆ.

'ಕಂಪು ಪೊಂಪುರುಸುವುಪ್ಪಿನ ಕಾಯ್ಗಳನೇಕವಂ ಕಳಾ

ಕೋವಿದೆಯರ್ ಕೆಲಂಬಿಡಿಯ ಲಕ್ಕಿದರಿಕ್ಕು ಮಗುರ್ದ್ದೊನುತ್ತಿರಲ್'

ಉಪ್ಪಿನಕಾಯಿಗಳು ಕಲಾಕೋವಿದೆಯರ ವರ್ಣದ ಪ್ಯಾಲೆಟ್ ಹಾಗೆ ಕಂಡುಬರುತ್ತಿದ್ದವು ಎಂದು ಕವಿ ತಿಳಿಸುತ್ತಾನೆ. ಈ ಕಾಲದ ಪಾಲ್ಕುರಿಕೆ ಸೋಮನಾಥನು ತೆಲುಗು, ಕನ್ನಡ ಮತ್ತು ಸಂಸ್ಕೃತಗಳಲ್ಲಿ ಗ್ರಂಥ ರಚಿಸಿದ್ದಾನೆ. ಈತನ ಮುಖ್ಯ ಕೃತಿಗಳಲ್ಲಿ ಗಣಸಹಸ್ರನಾಮ, ಹಗರಣಮಾಲೆ, ದಶವಿದ ಪಾದೋದಕ ವಿವರ, ಶೀಲ ಸಂಪಾದನೆ ಸೇರಿವೆ. ಇವುಗಳಲ್ಲಿ ಸಾಂದರ್ಭಿಕವಾಗಿ ಕಲೆಯ ಸಂಗತಿಗಳಿವೆ.

'ಳಳಿತ ಕಳಾ ವಿಳಾಸ'

'ಭರಣ ಕನತ್ಕಳಾನಿಧಿ'

'ಶ್ರೀಮದನಾದಿ ವಿಮುಕ್ತಭಕ್ತಂ'

ಪ್ರೇಮಕಳಾ ಸಂಯುಕ್ತ ಭಕ್ತಂ'

ಈ ಮೇಲಿನ ಸಾಲುಗಳು ಪಾಲ್ಕುರಿಕೆ ಸೋಮನಾಥನ ಬೇರೆ ಬೇರೆ ರಗಳೆಗಳಿಂದ ಆಯ್ದುಕೊಳ್ಳಲಾಗಿದ್ದು, ಇಲ್ಲಿ ಲಲಿತಕಲೆ, ಕಲಾನಿಧಿ, ಪ್ರೇಮಕಲಾ ಎಂಬಂತಹ ಶಬ್ದಗಳು ಬಳಕೆಗೊಂಡಿವೆ. ಕುಮುದೆಂದು ಎಂಬ ಕವಿಯು ಕುಮುದೇಂದು ರಾಮಾಯಣ ಮತ್ತು 'ಪ್ರತಿಷ್ಠಾಕಲ್ಪ ಟಿಪ್ಪಣ' ಎಂಬ ಕೃತಿಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಕಲೆಯ ಸಂಗತಿಗಳು ಉಲ್ಲೇಖಿಸಲ್ಪಟ್ಟಿವೆ. ಕುವಲದೇಂದು ರಾಮಾಯಣದಲ್ಲಿ ಚಿತ್ರಕಲೆಯ ಹೇರಳ ಅಂಶಗಳಿವೆ. ಚಿತ್ರಕಾರರಿಂದ ದಶರಥನ ಚಿತ್ರ ಬರೆಸುವುದು, ಅದನ್ನೆ ನಿಜದಶರಥನೆಂದು ಭ್ರಮಿಸಿದ ವಿಭೀಷಣ ಅದರ ತಲೆ ಕಡಿಯುವ ಪ್ರಸಂಗವಿದೆ.

'ತಡೆಯೆ ತಾನಟ್ಟಿದ ಭಟಿರ್ತಾಂ

ತಡೆಯದಾಗಸದಿಂದಲೆಯ್ತಂ

ದಡಿಸಿ ಪೊಡೆದಂ ಬಂದಯೋಧ್ಯೆಯ ಚಿತ್ರದಶರಥನ'

ಇದರಲ್ಲಿ ವಿಭೀಷಣನು ದಶರಥನನ್ನು ಹುಡುಕಿಕೊಂಡು ಅಯೋಧ್ಯಗೆ ಬಂದಾಗ ಆತನಿಗೆ ದಶರಥನ ಚಿತ್ರವನ್ನು ತೋರಿಸಲಾಗುತ್ತದೆ. ಆತ ಈ ಚಿತ್ರವೇ ನಿಜದಶರಥನೆಂದು ಭ್ರಮಿಸಿ ಅದರ ತಲೆ ಕಡಿಯುತ್ತಾನೆ. ಚಿತ್ರಕಾರನ ನೈಪುಣ್ಯತೆ, ಅದರ ನೈಜ ಶೈಲಿ, ಚಿತ್ರದ ಜೀವಂತಿಕೆ ಮತ್ತು ಸಾದೃಶ್ಯತೆಯ ಅಂಶಗಳು ಇಲ್ಲಿ ಬಿಂಬಿತಗೊಂಡಿವೆ. ಇದೆ ಸಂದರ್ಭವನ್ನು ಕವಿ ನಾಗಚಂದ್ರನು ತನ್ನ ಪಂಪರಾಮಾಯಣದಲ್ಲಿ ಭಿನ್ನವಾಗಿ ಹೇಳಿದ್ದಾನೆ. 'ಆರು ಕೊಲಲಾರ್ಪರೆ ಸಾಯದರಂ ಲಲಾಟದೊಳ್ ಬರೆದ ಚಿತ್ರ ಲಿಪಿಯದೇಂ ಜಳಲಿಪಿಯೆ' ಎಂದು ಕಲೆಯ ಉಪಮೆಯನ್ನು ಕೊಟ್ಟಿದ್ದಾನೆ.

ಕ್ರಿ.ಶ.೧೩ನೇ ಶತಮಾನದ ಮತ್ತೊಬ್ಬ ಕವಿಯಾದ ಪುಲಿಗೆರೆಯ ಸೋಮನಾಥ ಎಂಬವನು ಸೋಮೇಶ್ವರ ಶತಕ ಬರೆದಿದ್ದಾನೆ. ಇದರಲ್ಲಿ ಅನೇಕ ಕಡೆಗಳಲ್ಲಿ ಪರೋಕ್ಷವಾಗಿ ಚಿತ್ರಕಲೆಯ ಉಲ್ಲೇಖಗಳಿವೆ.

'ಸರಿಯೇ ಸೂರ್ಯಗೆ ಕೋಟಿ ಮಿಂಚುಬುಳುಗಳ್

ನಕ್ಷತ್ರವೆಷ್ಟಾದೊಡಂ ದೊರೆಯೇ ಚಂದ್ರಂಗೆ'

ಕೋಟಿ ಮಿಂಚುಹುಳುಗಳು ಕೂಡಿದರೂ ಸೂರ್ಯನಿಗೆ ಹೇಗೆ ಸಾಟಿಯಾಗಲಾರವೋ ಹಾಗೆ ನಕ್ಷತ್ರವೆಲ್ಲ ಕೂಡಿದರೂ ಚಂದ್ರನ ಚಲುವಿಗೆ, ಬೆಳದಿಂಗಳ ಹೊಳಪಿಗೆ ಸಮವಿರದು ಎಂದು ಹೇಳುತ್ತಾನೆ. ಈ ಕಾಲದ ಹಸ್ತಿಮಲ್ಲನೆಂಬ ಕವಿ 'ಪೂರ್ವಪುರಾಣ' ಎಂಬ ಕೃತಿ ರಚಿಸಿದ್ದಾನೆ. ಇದರಲ್ಲಿ ಶ್ರೀಮತಿ ವಜ್ರಜಂಘರ ಸೆಜ್ಜೆಮನೆ ವರ್ಣನೆಯಲ್ಲಿ ಮತ್ತು ಬಾಹುಬಲಿ ಭರತರ ಯುದ್ಧ ಸಂದರ್ಭಗಳಲ್ಲಿ

ಹಾಗೂ ಆಸ್ಥಾನ ಅರಮನೆ ವರ್ಣಿಸುವಾಗ ಕಲೆಯ ಉಲ್ಲೇಖಗಳಿವೆ.[೮೧] ಇದರಂತೆ ರಟ್ಟಕವಿಯು 'ರಟ್ಟಮತ' ಎಂಬ ಕೃತಿ ರಚಿಸಿದ್ದು ಇದೊಂದು ಶಕುನ. ಭವಿಷ್ಯ, ನಕ್ಷತ್ರ, ಶುಭಾಶುಭ ಫಲಗಳು ಮತ್ತು ಮಳೆ ವಿಚಾರ ಮುಂತಾದವುಗಳನ್ನು ಕುರಿತ ಗ್ರಂಥವಾಗಿದೆ. ಇದರಲ್ಲಿ ಸಾಂದರ್ಭಿಕವಾಗಿ ಕಲೆಯ ಪ್ರಸ್ತಾಪಗಳಿವೆ. ಭಿತ್ತಿ ಚಿತ್ರ, ಬಣ್ಣ, ಗಾರೆಲೇಪ ಇವುಗಳ ಸಂಗತಿಗಳು ಇದರಲ್ಲಿವೆ.

ಈ ಕೃತಿಗಳಲ್ಲದೆ ಕ್ರಿ.ಶ. ೧೩ನೇ ಶತಮಾನದಲ್ಲಿ ರಚನಾಕಾರರು ಯಾರೆಂದು ತಿಳಿಯದ ಕೆಲವು ಸಾಹಿತ್ಯ ಕೃತಿಗಳೂ ಲಭ್ಯವಾಗಿದ್ದು,[೮೨] ಅವುಗಳಲ್ಲಿಯೂ ಕಲಾ ವಿಚಾರಗಳು ಸಾಂದರ್ಭಿಕವಾಗಿ ಹೇಳಲ್ಪಟ್ಟಿವೆ. 'ಗುಮ್ಮಟಸ್ತುತಿ' ಎಂಬ ಕೃತಿಯನ್ನು ಬರೆದ ಕವಿ ಯಾರೆಂದು ತಿಳಿದಿಲ್ಲ. ಇದರಲ್ಲಿ ಗೊಮ್ಮಟನ ಮೂರ್ತಿ ನೋಡಿದಾಗ ಉಂಟಾದ ಸೌಂದರ್ಯಾತ್ಮಕ ಭಾವನೆಗಳನ್ನು ಕವಿ ಕಟ್ಟಿಕೊಟ್ಟಿದ್ದಾನೆ.

'ಕಂಡೆ ಭವ್ಯಜನ ಪ್ರಮೋದಕರನಂ ಕಂಡೆ ಜಗತ್ಪೂಜ್ಯನಂ,
ಕಂಡೆ ಕಣ್ದಣಿವಂತು ಸಂತಸದೊಳಾಂ ಶ್ರೀಗೊಮ್ಮಠಾಧೀಶನಂ'

ಇಡೀ ಕೃತಿಯು ಗೊಮ್ಮಟನ ಮೂರ್ತಿ ಶಿಲ್ಪದ ವೈಭವವನ್ನು ಹೊಗಳುವದಾಗಿದ್ದು, ಇಲ್ಲಿ ವಿಶೇಷವಾಗಿ ಮೂರ್ತಿಶಿಲ್ಪ ಮತ್ತು ಚಿತ್ರಕಲೆಯ ಸಂಗತಿಗಳಿವೆ. 'ಜ್ವಾಲಿನಿಕಲ್ಪಾದಿಸಂಗ್ರಹ' ಎಂಬುದು ಇದೆ ಕಾಲದ ಕೃತಿಯಾಗಿದ್ದು, ಇದರ ಕವಿ ಯಾರೆಂದು ತಿಳಿದಿಲ್ಲ. ಇದು ವೈದ್ಯಕೀಯ ವಿಷಯಗಳನ್ನು ಕುರಿತಾದ ಗ್ರಂಥವಾಗಿದ್ದು, ಸಾಂದರ್ಭಿಕವಾಗಿ ಬಣ್ಣಗಳ ವಿವರ ಬಂದಿದೆ. ಅದೆ ರೀತಿ ಕ್ರಿ. ಶ. ೧೩೦೦ ಸುಮಾರಿನ ಜಿನಸ್ತುತಿ, ಜಿನೇಶ್ವರಾಷ್ಟಕ ಶತಕ, ತ್ರೈಲೋಕ್ಯ ರಕ್ಷಾಮಣಿ ಸ್ತೋತ್ರ, ವೈದ್ಯಶಾಸ್ತ್ರ, ಧಾನ್ಯಲಕ್ಷಣ, ಪಂಚಪದಾಷ್ಟಕ, ಯೋಗಾಮೃತ, ಇವುಗಳ ಕವಿಗಳಾರೆಂದು ತಿಳಿದಿಲ್ಲ. ಇವುಗಳಲ್ಲಿಯೂ ಸಾಂದರ್ಭಿಕ ಕಲಾ ವಿಚಾರಗಳು ಉಪಮೆ ರೀತಿಯಲ್ಲಿವೆ.

ಕ್ರಿಶ. ೧೩ನೇ ಶತಮಾನದಲ್ಲಿ ಕರ್ನಾಟಕದಲ್ಲಿ ರಚನೆಗೊಂಡ ಹೆಚ್ಚಿನ ಭಿತ್ತಿ ಚಿತ್ರಗಳು ಇದುವರೆಗೆ ಕಂಡುಬಂದಿಲ್ಲ. ಆದರೆ ಶ್ರವಣಬೆಳಗೊಳದ ಶಾಂತಿನಾಥ ಬಸದಿಯಲ್ಲಿನ ಚಿತ್ರಗಳು ಈ ಕಾಲಕ್ಕೆ ಸೇರುತ್ತಿದ್ದು, ಜೈನ ಸಾಹಿತ್ಯ ಮತ್ತು ಧಾರ್ಮಿಕ ವಿಚಾರಗಳಿಗೆ ಸಂಬಂಧಿಸಿದ ಚಿತ್ರಗಳಾಗಿವೆ. ಇದರಿಂದಲೂ ಆ ಕಾಲದ ಕಲಾಸಾಹಿತ್ಯ ಸ್ವರೂಪ ತಿಳಿದುಕೊಳ್ಳ ಬಹುದಾಗಿದೆ.

**೪. ವಿಜಯನಗರದಿಂದ ಮೈಸೂರು ಅರಸರ ವರೆಗಿನ ಚಿತ್ರಕಲಾ ಸಾಹಿತ್ಯ :**

ಕ್ರಿ. ಶ. ೧೪ನೇ ಶತಮಾನದಿಂದ ಕರ್ನಾಟಕದಲ್ಲಿ ವಿಜಯನಗರ ಸಾಮ್ರಾಟರ ಆಳ್ವಿಕೆ ಆರಂಭಗೊಂಡದ್ದು ಒಂದು ಪ್ರಮುಖ ಘಟ್ಟ ಎಂದು ಹೇಳಬಹುದು. ಈ ಹಂತದಲ್ಲಿ ನಾಡಿನ ಸಾಹಿತ್ಯ, ಕಲೆ, ಸಾಂಸ್ಕೃತಿಕ ಬದುಕುಗಳು ಪ್ರಬುದ್ಧಗೊಂಡವು. ವಿಜಯನಗರ ಕಾಲದಲ್ಲಿ ಶಿಲ್ಪ, ಚಿತ್ರ, ವಾಸ್ತುಕಲೆ, ಸಂಗೀತ, ಸಾಹಿತ್ಯಗಳಲ್ಲಿ ಅನೇಕ ಪ್ರಯೋಗಗಳು ನಡೆದವು. ಶ್ರೇಷ್ಠ ಚಿತ್ರ, ಶಿಲ್ಪ, ವಾಸ್ತುಕಲಾಕೃತಿಗಳು ರಚನೆಗೊಂಡಂತೆ ಮೌಲಿಕವಾದ ಸಾಹಿತ್ಯಕೃತಿಗಳು ಬರೆಯಲ್ಪಟ್ಟವು. ಈ ಕಾಲಮಾನದಲ್ಲಿ ರಚನೆಯಾದ ಕೆಲವು ಸಾಹಿತ್ಯಕೃತಿಗಳಲ್ಲಿ ಚಿತ್ರಕಲೆಯ ಸಾಂದರ್ಭಿಕ ಉಲ್ಲೇಖಗಳು ಕಂಡುಬಂದಿದ್ದು ಚಿತ್ರಕಲಾ ಸಾಹಿತ್ಯದ ಇತಿಹಾಸ ಕಟ್ಟಿಕೊಡುವಲ್ಲಿ ಮಹತ್ತರ ಪಾತ್ರವಹಿಸುತ್ತವೆ.

ವಿಜನಗರ ಕಾಲವಾದ ಕ್ರಿಶ. ೧೪ನೇ ಶತಮಾನದ ಸಾಹಿತ್ಯ ಕೃತಿಗಳಲ್ಲಿ ಕಂಡುಬರುವ ಚಿತ್ರಕಲಾ ಸಂಗತಿಗಳಿಂದ ಆ ಕಾಲದ ಚಿತ್ರಕಲಾ ಸಾಹಿತ್ಯವನ್ನು ಕೆಳಗಿನಂತೆ ರೂಪಿಸಬಹುದಾಗಿದೆ.

---

೮೧. ಡಾ.ಹಾ.ಮಾ.ನಾಯಕ :ಸಂ; ಕನ್ನಡ ಸಾಹಿತ್ಯ ಚರಿತ್ರೆ : (ಸಂಪುಟ–೩) : ಪುಟ–೪೧೨.

೮೨. ಡಾ.ಹಾ.ಮಾ.ನಾಯಕ :ಸಂ; ಕನ್ನಡ ಸಾಹಿತ್ಯ ಚರಿತ್ರೆ : (ಸಂಪುಟ–೩) : ಪುಟ–೩೭೫.

ನಾಗರಾಜನೆಂಬ ಕವಿಯು 'ಪುಣ್ಯಸ್ರವ' ಎಂಬ ಕೃತಿಯನ್ನು ರಚಿಸಿದ್ದು, ಇದರಲ್ಲಿ ಅನೇಕ ಉಪಮೆ ರೀತಿಯ ಕಲಾ ವಿಚಾರಗಳು ಬಂದಿವೆ.[೮೩]

'ಇಂದ್ರಂ ಯತೀಂದರಂ ವೃಷಭಂ
ಗಿಂದಭಿಷೇಕಮನೆ ಮಾಡಲೆತ್ತಿದ ಕೆಂಬೊ
ನ್ನಿಂದಳವಡಿಸಿದ ಕಳಶದ
ಛಂದಮನಾಂತಂ ದಿನೇಶನುದಯಪಂ ಪದದೊಳ್'



ಇದು ಸೂರ್ಯೋದಯದ ವರ್ಣನಾ ಪದ್ಯವಾಗಿದೆ. ಕೆಂಪುಬಣ್ಣದ ಕಳಶದ ತೆರದಲಿ ಉದಯಿಸುವ ಸೂರ್ಯನು ಕವಿಗೆ ಕಂಡು ಬರುತ್ತಾನೆ.

'ಸೂರ್ಯಂ ಪಡುವಣ ಕಡಲೊಳ್
ಭೋರನೆ ಬೀಳ್ತರಲು ಸಿಡಿದ ಸೀರ್ಪನಿಗಳೆನಲ್
ತಾರಗೆ ತಳ್ತುವು ನಭದೊಳ್
ಘೋರತರಂ ಮರ್ಜನಾಡೆ ಪರ್ಬದುದಾಗಳ್'

ಈ ಪದ್ಯವು ಸೂರ್ಯಾಸ್ತದ ವಿವರಣೆಯನ್ನು ಕೊಡುತ್ತಿದ್ದು, ದಿಗಂತದ ನೀರು ಕಾದ ಕಬ್ಬಿಣದ ರಸದಂತೆ ಕೆಂಪಾಗಿರುವುದೆಂದು ಹೇಳಲಾಗಿದೆ. ಈ ಮೇಲಿನ ಎರಡೂ ಪದ್ಯಗಳಲ್ಲಿ ಕೆಂಪು ಬಣ್ಣದ ವಿವಿಧ ಛಾಯೆಗಳ ಬಗ್ಗೆ ಉಲ್ಲೇಖಿಸಲಾಗಿದೆ.

ಈ ಕಾಲದಲ್ಲಿ ಮಲ್ಲಯ್ಯ ಎಂಬುವನು ವಚನ, ಹಾಡು ಮತ್ತು ರಗಳೆಗಳನ್ನು ಬರೆದಿದ್ದಾನೆ. ಈತನ ವಚನಗಳಲ್ಲಿ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಕಲೆಯ ಪರೋಕ್ಷ ವಿವರಗಳಿವೆ. ಎನ್ನ ಪಾದವೆ ಶಿಲೆಯಾಗಿ, ಕಾಲೆ ಕಡಹದ ಕಂಬಗಳಾಗಿ, ತೋಳೆ ನಾಗವೇದಿಕೆಯಾಗಿ, ಅಸ್ತಿಯೇ ಜಂತಿಯಾಗಿ, ಅಧರವೇ ಬಾಗಿಲಾಗಿ, ಅಂಗವೇ ರಂಗಮಧ್ಯವಾಗಿ, ಶಿರವೇ ಸುವರ್ಣ ಕಳಶವಾಗಿದೆ ಎಂದು ಹೇಳುವ ಮೂಲಕ ಕಲೆಯ ಉದಾಹರಣೆಯನ್ನು ಕೊಡುತ್ತಾನೆ.

ಪುಷ್ಪದಂತನೆಂಬ ಕವಿ 'ಕರ್ಮಪ್ರಕೃತಿ' ಎಂಬ ಗದ್ಯಕೃತಿ ರಚಿಸಿದ್ದಾನೆ. ಇದರಲ್ಲಿ ಉಲ್ಲೇಖಿಸಲಾದ ಕಲಾ ಸಂಗತಿಗಳ ಕೆಲವು ಉದಾಹರಣೆಗಳು ಹೀಗಿವೆ : ಆಯುಷ್ಯ ಕರ್ಮಂ, ಶರೀರಮಂ ಪಿಡಿದಿರ್ಪುದು ಸಂಕಲೆಯಂತೆ, ನಾಮಕರ್ಮಂ ಪೆಸರ್ಗಳಂ ಮಾಳ್ಪುದು ಚಿತ್ರಕನಂತೆ, ಗೋತ್ರಕರ್ಮಂ ಕುಲಂಗಳಂ ಮಾಳ್ಪುದು ಕುಂಭಕಾರನಂತೆ. ಇದರಲ್ಲಿ ಸಾಂದರ್ಭಿಕವಾಗಿ ಚಿತ್ರಕಲಾವಿದ, ಚಿತ್ರಕಲೆ, ಶಿಲ್ಪಕಲಾವಿದ, ಶಿಲ್ಪಕಲೆ, ಬಣ್ಣ ಮುಂತಾದ ಸಂಗತಿಗಳು ಹೇಳಲ್ಪಟ್ಟಿವೆ. ಈ ಕಾಲದ ಮತ್ತೊಬ್ಬ ಖ್ಯಾತ ಕವಿ ಚಾಮರಸನು ಪ್ರಭುಲಿಂಗಲೀಲೆ' ಎಂಬ ಕೃತಿ ರಚಿಸಿದ್ದಾನೆ.[೮೪] ಇದರಲ್ಲಿರುವ ಕಲಾ ಅಂಶಗಳನ್ನು ಕೆಳಗಿನಂತೆ ಹೇಳಬಹುದು.



'ಸಕಲ ಕಲ್ಲನು ಕಡಿದು ಕಲ್ಲಿಗೆ'
ಶಿಖರ ದೇಗುಲವೆಂದು ಮಾಡಿಸಿ'
'ಮಣ್ಣಿನ ಮಾಟದ ಪುತ್ಥಳಿಗಳ
ದೇವಾಲಯಕ್ಕೆ ಕೆತ್ತಿಸಿದರೆಂಬಂತೆ'

---

೮೩. ಈ ಕಾಲದ ಸಾಹಿತ್ಯ ಕೃತಿಗಳ ಹೆಚ್ಚಿನ ಮಾಹಿತಿಗೆ ನೋಡಿರಿ : ಡಾ:ಹಾ.ಮಾ.ನಾಯಕ : (ಸಂ) :ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪) : ಪುಟ : ೩೮೦-೪೨೫.

೮೪. ಡಾ.ಜಿ.ಎಸ್.ಶಿವರುದ್ರಪ್ಪ. (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪) : ಪುಟ-೨೦೧

'ಚಿತ್ತಜಗ್ರಹ ಸೋಂಕಿದಂತೆ
ಮೃತ್ತಿಕೆಯ ಮಾಟಕದ ರೂಹಿನ'
'ಮತ್ಥಳಿಗಳನ್ನು ದೇಗುಲಕ್ಕೆ
ನೆರೆತೆತ್ತಿಸಿದ ರೆಂಬಂತೆ'
'ಥರಥರಂಗಳ ಮುಗಿಲ ಬಣ್ಣಗಳ
ಪರಿಯ ಲೊಪ್ಪುವ ಭಕ್ಷರಾಶಿಯು'

ಮೇಲಿನ ಸಾಲುಗಳನ್ನು ಪ್ರಭುಲಿಂಗ ಲೀಲೆಯ ಬೇರೆ ಬೇರೆ ಪದ್ಯಗಳಿಂದ ಆಯ್ದುಕೊಳ್ಳಲಾಗಿದೆ. ಇಲ್ಲಿ ವಾಸ್ತುಶಿಲ್ಪ, ಶಿಲ್ಪಕಲೆ, ಮಣ್ಣಿನ ಮೂರ್ತಿತಯಾರಿಕೆ, ಚಿತ್ರಕಲೆ, ಆಕಾರ, ವಿವಿಧ ರೀತಿಯ ಬಣ್ಣಗಳ ಪ್ರಸ್ತಾಪವಿದೆ. ಪದ್ಮಣಾಂಕನೆಂಬ ಕವಿ 'ಪದ್ಮರಾಜ ಪುರಾಣ'ವನ್ನು ಬರೆದಿದ್ದಾನೆ. ತನ್ನ ಕೃತಿಯ ಬಗ್ಗೆ ಹೇಳಿಕೊಳ್ಳುವಾಗ 'ಸಕಲ ಕಲಾಸ್ಫುರಣದಿಂದೊಪ್ಪುವೀಕೃತಿ' ಎನ್ನುತ್ತಾನೆ. ಮುಂದೆ ಚಿತ್ರ ಮತ್ತು ಬಣ್ಣಗಳ ಹಲವಾರು ಉಲ್ಲೇಖಗಳು ಗೋಚರಿಸುತ್ತವೆ.

'ಮದನಾಗ ಮಂಗೇಳ್ವ ಭರತಂ ಪರಿಕಿಸುವ
ಜದುರನುರು ಕಲ್ಪಸಂಗೀತಮಂ ಸಂಗಳಿಪ
ಮೃದುವಮರೆ ವೀಣೆಗಳ ಬಾಜಿಸುವ ಸೂಳೆವಿಣ್ಣನದ
ಪಡೆದು ಶೃಂಗಾರ ಕಾವ್ಯ ಮನೋದಿಸುವ ನಾಟ
ಕದ ರಸವನನುಭವಿಪ ಸದಲಂಕೃತಿಯ ಲಕ್ಷಣ'

ಇದರಲ್ಲಿ ಭರತನ ನಾಟ್ಯಶಾಸ್ತ್ರ, ನಾಟಕಕಲೆ, ಸಂಗೀತ, ಸಾಹಿತ್ಯ, ವೀಣಾವಾದನ ಬಣ್ಣಗಳು, ರಸಭಾವ, ಅಲಂಕಾರ, ಲಕ್ಷಣ ಮುಂತಾದ ಕಲಾ ಸಂಬಂಧಿ ವಿಚಾರಗಳು ಉಲ್ಲೇಖಗೊಂಡಿವೆ. ಇದರಂತೆ ಈ ಕಾಲದ ಲಕ್ಕಣ್ಣ ದಂಡೇಶನು ಬರೆದ 'ಶಿವತತ್ವ ಚಿಂತಾಮಣಿ' ಕೃತಿಯಲ್ಲೂ ಅನೇಕ ಚಿತ್ರಕಲಾ ವಿವರಗಳು ಉಪಮೆ ರೀತಿಯಲ್ಲಿರುವುದು ತಿಳಿದು ಬರುತ್ತದೆ.[೮೫] ಒಂದನೇ ಮಂಗರಾಜನೆಂಬ ಕವಿ : 'ಖಗೇಂದ್ರಮಣಿ ದರ್ಪಣ' ಎಂಬ ವಿಷ ವೈದ್ಯಶಾಸ್ತ್ರ ಬರೆದಿದ್ದಾನೆ. ಇದರಲ್ಲಿ ಬಣ್ಣಗಳ ಬಗ್ಗೆ ಹೆಚ್ಚಿನ ಉಲ್ಲೇಖ ಕಂಡುಬರುತ್ತದೆ. ಬೇರೆ ಬೇರೆ ವಿಷಯಗಳನ್ನು ಹೇಳುವಾಗ ಆಯಾ ಬಣ್ಣಗಳ ಪ್ರಸ್ತಾಪವಿದೆ. ಉದಾಹರಣೆಗಾಗಿ ಕೆಳಗಿನ ಸಾಲು ನೋಡಬಹುದು.

'ಸಾಲದ ಫಣಿಯ ವಿಷಕ್ಕಂ
ನೀಲಿಯ ಬೇರೊಂದೆ ಪುಳಿಯೊಳರೆಂದಿಟುಗಡಂ'

ಈ ಪದ್ಯದಲ್ಲಿ ನೀಲಿ ಬಣ್ಣದ ಸಂಗತಿ ಇದೆ. ಹೀಗೆ ಹಲವಾರು ವರ್ಣಗಳ ವಿವರ ಅಲ್ಲಲ್ಲಿ ಕೊಡಲಾಗಿದೆ. ವೃತ್ತವಿಲಾಸ ಎಂಬವನು ಧರ್ಮಪರೀಕ್ಷೆ ಮತ್ತು ಶಾಸ್ತ್ರಸಾರ ಎಂಬ ಕೃತಿಗಳನ್ನು ಬರೆದಿದ್ದಾನೆ. ಇದರಲ್ಲಿ ಧರ್ಮಪರೀಕ್ಷೆಯು ಅನೇಕ ಕಲಾವಿಷಯಗಳಿಂದ ಕೂಡಿದೆ. ಇದರ ಒಂದು ಪದ್ಯದಲ್ಲಿ,

'ನಿಲುವಿನ ರೇಖೆ ರೇಖೆಗಳ ವಟ್ಟ,
ಶರೀರದ ಲಾಗುಲಾಗಿನೊಳ್'

---

೮೫. ಡಾ.ಜಿ.ಎಸ್.ಶಿವರುದ್ರಪ್ಪ. (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪) : ಪುಟ-೨೧೫

ಎಂದು ಹೇಳುವಲ್ಲಿ ರೇಖೆ ಮತ್ತು ಚಿತ್ರದ ಭಂಗಿಗಳು ಉಲ್ಲೇಖಿಸಲ್ಪಟ್ಟಿವೆ. ಅದೇ ರೀತಿ ಅಭಿನವ ಶ್ರುತಮುನಿ ಬರೆದ ಸಜ್ಜನ ಚಿತ್ರವಲ್ಲಭ ಎಂಬ ಟೀಕಾಗ್ರಂಥದಲ್ಲಿಯೂ ಕಲೆಯ ಅಂಶಗಳು ಪರೋಕ್ಷವಾಗಿ ಮೂಡಿಬಂದಿವೆ. ಈ ಕಾಲದ ಭೀಮಕವಿಯು ಬಸವ ಪುರಾಣ ಮತ್ತು ಷಡಕ್ಷರರಗಳೆ ಎಂಬ ಕೃತಿಗಳನ್ನು ಬರೆದಿದ್ದು, ಇದರಲ್ಲಿ ಕಲೆಯ ವಿಚಾರಗಳು ಪರೋಕ್ಷವಾಗಿ ಹೇಳಲ್ಪಟ್ಟಿವೆ.

'ಯಸಗೊಂಬವು ನುತಿಸಲಾರದೆ
ಈ ಸಮರ್ಥ ಗಣಂಗಳಿರವತಿ ಚಿತ್ರವಂತಾಗಿ'

ಇದು ಬಸವ ಪುರಾಣದಿಂದ ಆಯ್ದ ಪದ್ಯವಾಗಿದ್ದು, ಇದರಲ್ಲಿ ಚಿತ್ರಕಲೆಯ ಸಂಗತಿ ಕಂಡುಬರುತ್ತದೆ. ಈ ಕಾಲದ ಕವಿಗಳಾದ ಎರಡನೆಯ ಮಂಗರಾಜ ಮತ್ತು ಚಂದ್ರಕೀರ್ತಿ ಇವರು ಅನುಕ್ರಮವಾಗಿ ಅಭಿನವಾಭಿದಾನಂ ಪರಮಾಗಮಸಾರ ಎಂಬ ಕೃತಿಗಳನ್ನು ಬರೆದಿದ್ದು,[೮೬] ಇವುಗಳಲ್ಲೂ ಸಾಂದರ್ಭಿಕ ಚಿತ್ರಕಲಾ ಸಂಗತಿಗಳಿವೆ.

ಆಯತವರ್ಮನೆಂಬ ಕವಿಯ 'ರತ್ನಕರಂಡಕ' ಗ್ರಂಥದಲ್ಲಿ 'ಧ್ವನನ್‌ಶಿಲ್ಪಿ ಕರಸ್ಪರ್ಶಾನ್ಮುರಜ, ಕಿಮ್‌ಪೇಕ್ಷತೆ' ಎನ್ನುವ ಸಾಲು ಶಿಲ್ಪಕಲೆ ಮತ್ತು ಶಿಲ್ಪಕಲಾವಿದನ ಬಗೆಗೆ ತಿಳಿಸಿದರೆ, ಕವಿಮಲ್ಲನ 'ಮನ್ಮಥವಿಜಯ' ದಲ್ಲಿನ 'ಪರ್ಣಾಕಾರಗುಹ್ಯಂ ಚಕಿತ ಮೃಗದದೃಶ್ಯಂ ಲಜ್ಜೆ ಮೇಣ್ ಶ್ಯಾಮ ವರ್ಣಂ' ಎಂಬುದು ಪ್ರಾಣಿಚಿತ್ರ ಮತ್ತು ನೀಲವರ್ಣಗಳ ಬಗೆಗೆ ತಿಳಿಸಿಕೊಡುತ್ತದೆ. ಇದರಂತೆ ಅಭಿನವ ಚಂದ್ರನ 'ಅಶ್ವಶಾಸ್ತ್ರ' ಕೃತಿಯಲ್ಲಿ 'ಆರ್ಯಜನ ಪ್ರಭರೇಖಾ' ಎಂಬುದು ರೇಖೆಯ ಬಗ್ಗೆ ಹೇಳುತ್ತದೆ.

ಕ್ರಿ.ಶ. ೧೫ನೇ ಶತಮಾನದ ಪ್ರಾತಿನಿಧಿಕ ಕವಿಗಳಲ್ಲಿ ಗದುಗಿನ ನಾರಣಪ್ಪ ಅಥವಾ ಕುಮಾರವ್ಯಾಸನು ಒಬ್ಬನಾಗಿದ್ದಾನೆ. ಈತನು 'ಕರ್ನಾಟಕ ಭಾರತ ಕಥಾಮಂಜರಿ' ಬರೆದಿದ್ದಾನೆ. ಇದರಲ್ಲಿಯೂ ಹಲವು ಕಡೆಗಳಲ್ಲಿ ಕಲೆಯ ಉಲ್ಲೇಖಗಳು ಪ್ರಾಸಂಗಿಕವಾಗಿ ಬಂದಿವೆ.

'ಎರೆಯ ಮಣ್ಣಿಲಿ ಮಾಡಿ ನೋಂತರೆ
ಸುರಪನೈರಾವತವ ತರಿಸಿದೆ'

ಇಲ್ಲಿ ಪಾಂಡವರು ಎರೆಯ ಮಣ್ಣಿನಲ್ಲಿ ಆನೆಯ ಗೊಂಬೆಯನ್ನು ಮಾಡುವ ಬದಲಾಗಿ ಪೂಜೆಗಾಗಿ ಇಂದ್ರನ ಐರಾವತವನ್ನು ತರಿಸಿದ ಸಂದರ್ಭವಿದೆ. ಇದರಲ್ಲಿ ಮೂರ್ತಿಶಿಲ್ಪದ ಸಂಗತಿ ಹೇಳಲ್ಪಟ್ಟಿದೆ. ಇನ್ನೊಂದು ಕಡೆಗೆ 'ಬೆದರಿದವು ವೈವರ್ಣದಲಿ ತನು' ಎಂದು ಹೇಳಲಾಗಿದ್ದು, ಪರೋಕ್ಷವಾಗಿ ಬಣ್ಣಗಳ ಪ್ರಸ್ತಾಪವಿದೆ.

'ಏಕೆ ನುಡಿದನೋ ಚಿತ್ರಸೇನನ
ದೇಶೆನಾ ಕೈಕೊಂಡೆನೆತ್ತಣ
ಚಿತ್ತಾನಂದ ಚಿತ್ರಕೆ ಧೂಮದರ್ಶನ'

ಇದರಲ್ಲಿ ಚಿತ್ರಕಲೆ ಮತ್ತು ಅದರಿಂದುಂಟಾಗುವ ರಸಾನಂದದ ಬಗ್ಗೆ ಹೇಳಲಾಗಿದೆ. ಇದಲ್ಲದೆ ಪಾಂಡವರ ಇಂದ್ರಪ್ರಸ್ಥದ ಅರಮನೆಯ ವರ್ಣನೆಯ ಸಂದರ್ಭದಲ್ಲಿ ಕುಮಾರವ್ಯಾಸನು ಕಲೆಯ ಸಂಗತಿಗಳನ್ನು ಹೇಳಿದ್ದಾನೆ. ಈ ಕಾಲದ 'ಮಧುರಕವಿ' ಎಂಬಾತನು 'ಧರ್ಮನಾಥಪುರಾಣ' ಮತ್ತು 'ಗುಮ್ಮಟಸ್ತುತಿ' ಎಂಬ ಕೃತಿಗಳನ್ನು ರಚಿಸಿದ್ದಾನೆ. ಧರ್ಮನಾಥ ಪುರಾಣದಲ್ಲಿ ಚಿತ್ರಕಲೆಯ ಪ್ರಸ್ತಾಪ ಇರುವ ಪದ್ಯ ಹೀಗಿದೆ.

---

೮೬. ಡಾ.ಹಾ.ಮಾ.ನಾಯಕ : (ಸಂ) ; ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೩) : ಪುಟ-೩೫೦.

'ಚಿತ್ರದೊಳಾದೊಡಂ ಪುತ್ರವತಿಯೆಂಬ

ಬರಪಕ್ಕೆ ಬಾರನ್'

ಚಿತ್ರದಲ್ಲಿಯ ಮಗುವಿನ ಗೊಂಬೆಯನ್ನು ನಿಜ ಮಗುವೆಂದು ಪರಿಗಣಿಸಲಾದೀತೆ ಎಂದು ಕವಿ ಕೇಳುತ್ತಾನೆ. ಕ್ರಿ.ಶ. ೧೫ನೇ ಶತಮಾನದ ಚಿತ್ರಕಲಾ ಸಾಹಿತ್ಯವನ್ನು ಕರ್ನಾಟಕದ ಸಂದರ್ಭದಲ್ಲಿ ರೂಪಿಸುವಾಗಲೂ ಬೇರೆ ಬೇರೆ ಸಾಹಿತ್ಯ ಕೃತಿಗಳಲ್ಲಿನ ಉಲ್ಲೇಖಗಳು ಶಾಸನ ಬರಹಗಳು ಮತ್ತು ಹಸ್ತಪ್ರತಿ ಚಿತ್ರಗಳಂತಹ ಆಕರಗಳು ಸಹಕಾರಿಯಾಗಿವೆ. ಈ ಹಿನ್ನೆಲೆಯಲ್ಲಿ ಕ್ರಿ.ಶ. ೧೫ನೇ ಶತಮಾನದ ಚಿತ್ರಕಲಾ ಸಾಹಿತ್ಯವನ್ನು ಸ್ಥೂಲವಾಗಿ ಈ ಕೆಳಗಿನಂತೆ ಸಮೀಕ್ಷಿಸಬಹುದು.

ದೇವರಾಜನು 'ಸೊಬಗಿನ ಸೋನೆ' ಮತ್ತು 'ಅಮರುಕ' ಎಂಬ ಕೃತಿಗಳನ್ನು ರಚಿಸಿದ್ದಾನೆ. ಇವುಗಳಲ್ಲಿ ಕಲೆಯ ಪ್ರಸ್ತಾಪಗಳಿವೆ.[೮೭] ಸೊಬಗಿನ ಸೋನೆಯಲ್ಲಿ 'ತೆಗೆದ ಬಗೆಗೆ ಬಪ್ಪೊಲು ಚಿತ್ರಮೇಲೆಮೆ' ಎಂದು ಹೇಳಿದೆ. ಇದಲ್ಲದೆ ಚಿತ್ರ ಮತ್ತು ಬಣ್ಣದ ಅನೇಕ ಉದಾಹರಣೆಗಳು ಈ ಗ್ರಂಥದಲ್ಲಿವೆ.

ಶಿವಗಣ ಪ್ರಸಾದಿ ಮಹಾದೇವಯ್ಯನು ೧೫ನೇ ಶತಮಾನದಲ್ಲಿ ರಚನೆಯಾಗಿರುವ ೪ ಶೂನ್ಯ ಸಂಪಾದನೆಗಳಲ್ಲಿ, ಮೊದಲನೆಯದ್ದನ್ನು ಈತ ಬರೆದಿದ್ದಾನೆ. ಇದರಲ್ಲಿ ಪರೋಕ್ಷವಾಗಿ ಬಣ್ಣ, ಮೂರ್ತಿಶಿಲ್ಪ, ಚಿತ್ರಕಲೆಗಳ ಉಲ್ಲೇಖಗಳಿವೆ. ಮಲ್ಲಣ್ಣನೆಂಬ ಕವಿಯು 'ರೇವಣಸಿದ್ದೇಶ್ವರ ಕಾವ್ಯ' ಎಂಬ ಕೃತಿಯನ್ನು ಬರೆದಿದ್ದಾನೆ. ಈ ಕಾವ್ಯದ ಪ್ರಾರಂಭದಲ್ಲಿ ಕವಿಯು ಹೀಗೆ ಹೇಳಿಕೊಂಡಿದ್ದಾನೆ. 'ರೇವಣ ಕಾವ್ಯವ ನಿರ್ಮಿಸಿದನ್ಯೆ ಪೂರ್ವಭಿತ್ತಿಯ ಮೇಲೆ ಚಿತ್ರವನು' ಮೊದಲಿನ ಕವಿಗಳು ರಚಿಸಿದ ಗ್ರಂಥದ ಆಧಾರದಲ್ಲಿ ತನ್ನ ಕೃತಿ ಇದೆ ಎಂದು ಹೇಳುವಲ್ಲಿ ಭಿತ್ತಿ ಚಿತ್ರಕಲೆಯ ಉಪಮೆಯನ್ನು ಕವಿ ಇಲ್ಲಿ ಬಳಸಿಕೊಂಡಿದ್ದಾನೆ. ಗುರುಬಸವನೆಂಬ ಕವಿಯು ತನ್ನ 'ಅವಧೂತಗೀತ' ಕೃತಿಯಲ್ಲಿ ಕಲೆಯ ಸಂಗತಿಗಳನ್ನು ಪರೋಕ್ಷವಾಗಿ ಕೆಳಗಿನಂತೆ ಹೇಳಿದ್ದಾನೆ.[೮೮]

'ರಸಭಾವಲಂಕಾರ

ದೆಸಕವಿಲ್ಲಂದು ಬಾ

ವಿಸಬೇಡ ಭಾವುಕರ್ ಭಾವಿಸುವೊಡೆ

ರಸವೇ ಚಿದ್ರಸಭಾವ

ದೆಸೆಪೂರ್ಣ ನಿಜಭಾವ

ವೆಸೆವಲಂಕಾರ ವಾನಂದದಿರವು'

ಇದರಲ್ಲಿ ಆಧ್ಯಾತ್ಮ ತತ್ವಗಳನ್ನು ಕಲೆ ಮತ್ತು ರಸಭಾವಗಳ ಉದಾಹರಣೆಗಳೊಂದಿಗೆ ಹೇಳಲಾಗಿದೆ. ಚಿತ್ರಕಲೆ, ಕಲಾಕೃತಿ, ಸಹೃದಯ, ಭಾವ, ಅಲಂಕಾರ, ರಸಾನಂದ ಮುಂತಾದ ಸಂಗತಿಗಳು ಇಲ್ಲಿ ಹೇಳಲ್ಪಟ್ಟಿವೆ.

ಕ್ರಿ.ಶ. ೧೫ನೇ ಶತಮಾನದ ಮತ್ತೊಬ್ಬ ಕವಿಯಾದ ಚಂದ್ರಕವಿ ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿದ್ದವನು. ಗುರುಮೂರ್ತಿ ಶಂಕರಶತಕ, ವಿರೂಪಾಕ್ಷಸ್ಥಾನ ಎಂಬ ಕೃತಿಗಳನ್ನು ಈತ್ರ ಬರೆದಿದ್ದಾನೆ. ಈ ಕಾಲವು ವಿಜಯನಗರ ಅವಧಿಯ ಸುಭಿಕ್ಷ ಕಾಲವಾಗಿತ್ತು. ಇಟಲಿಯ ನಿಕೋಲೋಕೊಂತಿ, ಪರ್ಶಿಯಾದ ಅಬ್ದುಲ್‌ರಜಾಕ ಇವರು ಹಂಪೆಗೆ ಭೇಟಿ ನೀಡಿ ಅಲ್ಲಿನ ಕಲಾವೈಭವವನ್ನು ವರ್ಣಿಸಿರುವುದು ಈತನ ಕಾಲದಲ್ಲೆ ಎಂಬುದನ್ನು ಸ್ಮರಿಸಿಕೊಳ್ಳಬಹುದು.

೮೭. ಡಾ.ಹಾ.ಮಾ.ನಾಯಕ : (ಸಂ) : ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೫) : ಪುಟ-೪೫೦

೮೮. ಡಾ.ಜಿ.ಎಸ್.ಶಿವರುದ್ರಪ್ಪ : (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪) : ಪುಟ-೨೦೧

ಚಂದ್ರಕವಿಯು ಕೂಡಾ ತನ್ನ ಕೃತಿಗಳಲ್ಲಿ ಅನೇಕ ಕಲಾ ಅಂಶಗಳನ್ನು ತಂದಿದ್ದಾನೆ. ತನ್ನ ದೊರೆಯಾದ ಪ್ರೌಢದೇವರಾಯನನ್ನು ವರ್ಣಿಸುವಾಗ 'ಚಾಗವಾನನ ಕಲಾವಳಿಯಾವನ' ಎಂದು ಹೇಳುವ ಮೂಲಕ ಆತನೊಬ್ಬ ಕಲಾಪ್ರೇಮಿ ಅರಸು ಎಂದು ಕೊಂಡಾಡುತ್ತಾನೆ. ಕ್ರಿ.ಶ. ೧೫ನೇ ಶತಮಾನದ ಮತ್ತೊಬ್ಬ ಕವಿ ಕಲ್ಯಾಣಕೀರ್ತಿ 'ಚಿನ್ಮಯ ಚಿಂತಾಮಣಿ' ಕೃತಿಯನ್ನು ರಚನೆ ಮಾಡಿದ್ದಾನೆ.[೮೯] ಇದರಲ್ಲಿರುವ ಕಲೆಯ ಅಂಶಗಳು ಕಲಾ ಸಾಹಿತ್ಯವನ್ನು ಕಟ್ಟಿಕೊಡುವಲ್ಲಿ ಸಹಕಾರಿಯಾಗಿವೆ.

'ಪಳುಕಿನ ಶಿಲೊಯೊಳು ನಿರ್ಮಿಸಿದ
ಸಲೆ ಜಿನರಾಕೃತಿಯಂತೆ'
'ಶಿಲೆಯೊಳ್ಪಿದ್ರಿಸಿ ತೋಡಿದ
ವಿಲಸಜ್ಜಿನ ಚಾರುಬಿಂಬದಂತೆ'

ಮೇಲಿನ ಎರಡೂ ಪದ್ಯಗಳಲ್ಲಿ ಶಿಲ್ಪಕಲೆಯ ಉಲ್ಲೇಖ ಕಂಡುಬರುತ್ತದೆ. ಈ ಕಾಲದ ಬೊಮ್ಮರಸನೆಂಬ ಕವಿ ಸೌಂದರಪುರಾಣ ಬರೆದಿದ್ದಾನೆ. ಇದರಲ್ಲಿ ಸೌಂದರ ಪರವೆಯರ ವನವಿಹಾರ ವರ್ಣನೆ, ಮಳೆಗಾಲ ಶರತ್ಕಾಲಗಳ ವರ್ಣನೆ, ಪರವೆಯ ನೃತ್ಯವರ್ಣನೆ ಮುಂತಾದ ಸಂದರ್ಭಗಳಲ್ಲಿ ಕಲೆಯ ಅಂಶಗಳು ಬಿಂಬಿಸಲ್ಪಟ್ಟಿವೆ. 'ಪೊಗೆಸುತ್ತಿದಮಳ ಚಿತ್ರದೊಲು' ಎಂಬಲ್ಲಿ ಚಿತ್ರಕಲೆಯ ಸಂಗತಿ ಕಂಡುಬರುತ್ತದೆ. ಇನ್ನೊಬ್ಬ ಕವಿಯಾದ ಚತುರ್ಮುಖ ಬೊಮ್ಮರಸನು 'ಚತುರಾಸ್ಯ ನಿಘಂಟು' ರಚಿಸಿದ್ದಾನೆ. ಇದರಲ್ಲೂ ಸಹಿತ ಕಲೆಯ ಸಂಗತಿಗಳಿವೆ.

'ಸಲ್ಲಲಿತ ಸಂಗೀತ ರಸಕೆ ಸಾಹಿತ್ಯಮಂ
ಬಲ್ಲನೋರ್ವನ ಪೂರ್ವವೀ ಧರಿತ್ರೀವಳಯ
ದಲ್ಲಿ ರಸಭಾವಾರ್ಥ ಚಿತ್ರವರಿವುದು ಸುಲಭವಲ್ಲ ಸಕಲರ್ಗದಾಗಿ'

ಇದರಲ್ಲಿ ಸಂಗೀತ, ಸಾಹಿತ್ಯ, ಕಲಾವಿದ, ಚಿತ್ರಕಲೆ ಇವುಗಳ ಜೊತೆಗೆ ಭಾವ ಮತ್ತು ರಸಗಳ ಕುರಿತಾಗಿಯೂ ಉಲ್ಲೇಖ ಕಂಡುಬರುತ್ತದೆ. ಇದರ ಜೊತೆಗೆ ಕುಮಾರ ವಾಲ್ಮೀಕಿ ಬರೆದ 'ತೊರವೆ ರಾಮಾಯಣ' ಗ್ರಂಥದಲ್ಲಿನ ಕಲೆಯ ಅಂಶಗಳು ಇದೆ ಕಾಲಮಾನಕ್ಕೆ ಸೇರುತ್ತವೆ. ಈ ಶತಮಾನದ ಮತ್ತೊಬ್ಬ ಕವಿಯಾದ ೩ನೇ ಮಂಗರಸನು ಜಯನೃಪಕಾವ್ಯ, ಸಮ್ಯಕ್ತಕೌಮುದಿ, ಸೂಪಶಾಸ್ತ್ರ, ಶ್ರೀಪಾಲಚರಿತೆ, ಪ್ರಭಂಜನ ಚರಿತೆ ಎಂಬ ಕೃತಿಗಳನ್ನು ಬರೆದಿದ್ದಾನೆ.[೯೦] ಇವುಗಳೆಲ್ಲ ಕಲೆಯ ಅಂಶಗಳನ್ನು ಪ್ರಾಸಂಗಿಕವಾಗಿ ಒಳಗೊಂಡಿವೆ. ಈ ಎಲ್ಲ ಕೃತಿಗಳಲ್ಲಿ ಜಯನೃಪಕಾವ್ಯವು ಕಲೆಯ ಹೆಚ್ಚಿನ ವಿವರಗಳನ್ನು ಹೊಂದಿದೆ. ಇದರಲ್ಲಿ ಚಿತ್ರಕಲೆಯ ಅನೇಕ ವಿಷಯಗಳು ಬರುತ್ತವೆ.

ಜಯಕುಮಾರನು ಚಿತ್ರಪಟದಲ್ಲಿನ ರಾಜಕುಮಾರಿಯನ್ನು ನೋಡಿ ಮೋಹಿಸುವುದು, ಚಿತ್ರಕಾರನು ಜಯಕುಮಾರ ಮತ್ತು ಸುಲೋಚನೆಯರ ಚಿತ್ರಪಟಗಳನ್ನು ಬರೆದು ಪರಸ್ಪರರಿಗೆ ತಲುಪಿಸುವುದು, ಸುಲೋಚನೆಯು ಜಯಕುಮಾರನ ಚಿತ್ರಪಟ ನೋಡಿ ಸ್ವಯಂವರದಲ್ಲಿ ಆತನನ್ನೆ ವರಿಸುವ ಸಂದರ್ಭಗಳಿವೆ. ಅದರಂತೆ ಕಾಶಿಯರಾಜ ತನ್ನ ಮಗಳು ಸುಲೋಚನೆಯ ಸ್ವಯಂವರಕ್ಕಾಗಿ ರಾಜ್ಯದಲ್ಲಿನ ಚಿತ್ರಕಾರರನ್ನು ಕರೆಯಿಸಿ ಅವರಿಂದ ಸುಲೋಚನೆಯ ಚಿತ್ರಪಟಗಳನ್ನು ಬರೆಯಿಸಿ ಬೇರೆ ಬೇರೆ ದೇಶದ ರಾಜಕುಮಾರರಿಗೆ ಕಳುಹಿಸುವುದು. ಹೀಗೆ ಕಥೆಯ ಬಹುಭಾಗ ಚಿತ್ರಕಲೆಯ ಸುತ್ತ ಆವರಿಸಿಕೊಂಡಿದೆ. ಇದರಲ್ಲಿರುವ ಅಂತಹ ಒಂದು ಉದಾಹರಣೆಯನ್ನು ನೋಡಬಹುದು.

೮೯. ಡಾ.ಜಿ.ಎಸ್.ಶಿವರುದ್ರಪ್ಪ : (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪) : ಪುಟ-೩೧೨
೯೦. ಡಾ.ಜಿ.ಎಸ್.ಶಿವರುದ್ರಪ್ಪ : (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪) : ಪುಟ-೪೨೫.

'ಈ ಮಾನಿತ ಚಿತ್ರಕೆ ಪಾಸಟಿಯಹ ಭಾಮೆಯರುಂಟಾದೊಡೆ
ಭೂಚಕ್ರಾಧೀಶ್ವರ ನಂದನರೊಳಗೀ ಚಿತ್ರದ ಪಡಿರೂಪಂ
ಧರಿಯಿಸಿದಾ ಚನ್ನಿಗನಲ್ಲದೆ ಯುರುಳಿದವರು ಸೋದರರು'

ಈ ಮೇಲಿನ ಎರಡು ಉದಾಹರಣೆಗಳಲ್ಲಿ ಚಿತ್ರರಚನೆ, ಚಿತ್ರಪಟ, ಪ್ರತಿರೂಪ, ಚಿತ್ರರೂಪ. ಹೊಸಚಿತ್ರ ಮುಂತಾದ ಅಂಶಗಳು ಬಿಂಬಿತಗೊಂಡಿವೆ. ಕ್ರಿ.ಶ. ೧೫ನೇ ಶತಮಾನದಲ್ಲಿ ಕೆಲವು ವೀರಶೈವ ಸಾಧಕರು ಸಹಿತ ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದು, ಅವರು ಬರೆದ ಕೃತಿಗಳಲ್ಲಿ ಸಾಂದರ್ಭಿಕವಾಗಿ ಕಲೆಯ ಸಂಗತಿಗಳಿವೆ.[೯೧] ತೋಂಟದ ಸಿದ್ದೇಶ್ವರ ಎಂಬವನು 'ಷಟಸ್ಥಲ ಜ್ಞಾನಸಾರಾಮೃತ' ಎಂಬ ಕೃತಿ ಬರೆದಿದ್ದು ಇದೊಂದು ವಚನಗಳ ಸಂಗ್ರಹವಾಗಿದೆ.

'ಸತ್ತವನೆದ್ದು ಕೂಗುತ್ತಿದ್ದಾನೆ
ಈ ಚಿತ್ರವನೇನೆಂಬೆನೋ'

ಇದರಲ್ಲಿ ಬದುಕಿನ ವಿಪರ್ಯಾಸದ ನೋಟವನ್ನು ಚಿತ್ರಕಲೆಯ ಉದಾಹರಣೆಯೊಂದಿಗೆ ಹೇಳಲು ಪ್ರಯತ್ನಿಸಲಾಗಿದೆ. ಈ ಕಾಲದ 'ಘನಲಿಂಗಿದೇವ' ಬರೆದ ವಚನಗಳಲ್ಲಿ ಚಿತ್ರಕಲೆಯ ವಿಚಾರಗಳಿವೆ.

'ಅರುಹೆಂಬ ಬಣ್ಣವ ನಿರಿವಿಡಿದುಡಿಸಿ,
ಕುಂದಣಕ್ಕೆ ಒಪ್ಪುವ ಒರೆ-ಬಣ್ಣದ ಮಿಶ್ರವಂ
ಚಿನ್ನವರದ ಬಲ್ಲನಲ್ಲದೆ, ಗೆಯ್ದುಂಬ ಒಕ್ಕಲಮಗನೆಂತು ಬಲ್ಲನಯ್ಯಾ'

ಮೇಲಿನ ವಚನದ ಸಾಲುಗಳಲ್ಲಿ ಆಧ್ಯಾತ್ಮದ ಅರಿವನ್ನು ಬಣ್ಣಕ್ಕೆ ಹೋಲಿಸಲಾಗಿದೆ. ಅದರಂತೆ ಮುಂದಿನ ಸಾಲುಗಳಲ್ಲಿ ಚಿನ್ನದ ಬಣ್ಣ ಲೇಪನಕ್ಕಾಗಿ ಯಾವ ಯಾವ ವರ್ಣಗಳನ್ನು ಮಿಶ್ರಣ ಮಾಡಬೇಕೆಂಬುದು ಚಿನ್ನದ ಕೆಲಸ ಮಾಡುವ ಕಲಾಕಾರನಿಗೆ ತಿಳಿದಿರುವುದು ಎಂಬುದಾಗಿ ಹೇಳಲಾಗಿದೆ. ಕಲ್ಲುಮಠದ ಪ್ರಭುದೇವನು 'ಲಿಂಗಲೀಲಾವಿಲಾಸ ಚಾರಿತ್ರ್ಯ' ವನ್ನು ಬರೆದಿದ್ದಾನೆ. ಇದರಲ್ಲಿನ ಒಂದುವಚನ ಹೀಗಿದೆ.

'ಏನೂ ಇಲ್ಲದ ಬಯಲೊಳಗೊಂದು
ಬಗೆಗೋಳಗಾದ ಬಣ್ಣ ತಲೆದೋರಿತ್ತು
ಆ ಬಣ್ಣವನಾ ಬಯಲು ಶೃಂಗರಿಸಲು
ಬಯಲು ಸ್ವರೂಪುಗೊಂಡಿತ್ತು ಅಂತಪ್ಪ
ಸ್ವರೂಪಿ ಬೆಡಗು ನಮ್ಮ ಗುಹೇಶ್ವರ ಲಿಂಗದ ಪ್ರಥಮ ಭಿತ್ತಿ'

ಈ ವಚನದಲ್ಲಿ ಕಲೆಯ ಕುರಿತಂತೆ ಬಣ್ಣ, ಆಕಾರ, ಚಿತ್ರ, ಶೃಂಗಾರ, ಚಿತ್ರಭಿತ್ತಿ ಮುಂತಾದ ಸಂಗತಿಗಳು ಉಲ್ಲೇಖಗೊಂಡಿವೆ. ಬಾಹುಬಲಿ ಪಂಡಿತನೆಂಬ ಕವಿಯು 'ಧರ್ಮನಾಥ ಪುರಾಣ' ಮತ್ತು 'ಗುಮ್ಮಟನಾಥ ಚರಿತೆ' ಎಂಬ ಕೃತಿಗಳನ್ನು ಬರೆದಿದ್ದಾನೆ. ಧರ್ಮನಾಥ ಪುರಾಣದಲ್ಲಿ ಕಲೆಯ ಅಂಶಗಳು ಹೀಗಿವೆ

---

೯೧. ಡಾ.ಜಿ.ಎಸ್.ಶಿವರುದ್ರಪ್ಪ : (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪) : ಪುಟ-೩೧೫.

'ಸ್ವೀಕೃತ ವಿಲೋಮಮಾದೊಡೆ
ಮೇಕಂ ಸದ್ವೃತ್ತಮಾದುದಿಂತಿದುಚಿತ್ರಂ
ಬೊಬ್ಬಿರಿದಾರ್ದು ಮುಂದೆನಡೆಯಲ್ ಮುದದಿಂದಮೆ ಬಂದು ಪೊಕ್ಕಳಾ
ಸರ್ವನುತ ಸ್ವಯಂವರದ ಚಿತ್ರಿತಗೋಪುರದಂತರಾಳಮಂ'

ಇದಲ್ಲದೆ ಈತ ತನ್ನನ್ನು ಹೊಗಳಿಕೊಂಡಿರುವಲ್ಲಿಯೂ ಕಲೆಯ ಅಂಶಗಳು ಬಿಂಬಿತಗೊಂಡಿವೆ.

'ಅರಿಯದ ವಿದ್ಯೆಯಿಲ್ಲ ಬಿಡದೋದದ ಕೊಳದ ಶಾಸ್ತ್ರವಿಲ್ಲ,
ನಯಕೀರ್ತಿ ಮೃತಿನಂದನಂ ಸಕಳವಿದ್ಯಾಚಕ್ರವರ್ತ್ಯಾಹ್ವಯಂ
ಆರುತರ್ಕ ವ್ಯಾಕರಣದೊಳ್, ಕಾವ್ಯದೊಳ್, ನಾಟಕಾ ಖ್ಯಾನದೊಳ್,
ವಿಮಳಾಳಂಕಾರ ಭೇದಗಳೊಳತಿ ಚತುರಂ'

ಎಂಬುದಾಗಿ ಹೇಳಿಕೊಂಡಿದ್ದಾನೆ. ಇದರಲ್ಲಿ ತಾನು ಸಕಲಕಲಾ ವಲ್ಲಭನೆಂದು ತಿಳಿಸುತ್ತಾನೆ. ಇದರಂತೆ ಈ ಶತಮಾನದಲ್ಲಿ ಇನ್ನೂ ಅನೇಕ ಸಾಹಿತ್ಯ ಕೃತಿಗಳು ರಚನೆಯಾಗಿದ್ದು, ಅವುಗಳಲ್ಲಿಯೂ ಕಲಾ ಸಂಗತಿಗಳು ಸಾಂದರ್ಭಿಕವಾಗಿ ಉಲ್ಲೇಖಗೊಂಡಿವೆ. ಶಿಶುಮಾಯಣನೆಂಬ ಕವಿ ತ್ರಿಪುರದಹನ, ಅಂಜನಾಚರಿತ್ರೆ ಎಂಬ ಎರಡು ಸಾಂಗತ್ಯಗಳನ್ನು ಬರೆದಿದ್ದಾನೆ. ತ್ರಿಪುರ ದಹನದಲ್ಲಿ ಶಿವನ ರಥದ ವರ್ಣನೆ ಮಾಡುವಾಗ ಚಿತ್ರಕಲೆಯ ಹೆಚ್ಚಿನ ವಿವರಗಳು ಕಂಡುಬರುತ್ತವೆ. ಅದರಂತೆ ಅಂಜನಾಚರಿತ್ರೆಯಲ್ಲಿ ಮಂದಾರ ಪರ್ವತದ ವರ್ಣನೆ, ಜಂಬೂದ್ವೀಪದ ವರ್ಣನೆ, ಆರ್ಯಖಂಡ ವರ್ಣನೆ, ಮಹೇಂದ್ರಪುರದ ವರ್ಣನೆ ಮುಂತಾದ ಕಡೆಗಳಲ್ಲಿ ಕಲೆಯ ಸಂಗತಿಗಳು ಕಂಡುಬರುತ್ತವೆ.

ಕ್ರಿ.ಶ. ೧೫ನೇ ಶತಮಾನವನ್ನು ಟೀಕೆ ವ್ಯಾಖ್ಯಾನಗಳ ಕಾಲವೆಂತಲೂ ಪರಿಗಣಿಸಬಹುದಾಗಿದೆ. ಮಹಾಲಿಂಗದೇವನ ಪ್ರಭುದೇವರ ಷಟಸ್ಥಲ ಜ್ಞಾನಚಾರಿತ್ರ್ಯ, ಕಲ್ಲುಮಠದ ಪ್ರಭುದೇವನ ಲಿಂಗಲೀಲಾ ವಿಲಾಸ ಚಾರಿತ್ರ್ಯ, ಸಾಸಲ ಜಕ್ಕಣಾರ್ಯನ ಪಂಚಬ್ರಹ್ಮೋದಯ ಭಾಷ್ಯ, ಗುಬ್ಬಿಯ ಮಲ್ಲಣಾರ್ಯನ ಗಣಭಾಷ್ಯ ರತ್ನಮಾಲೆ, ವಿರಕ್ತ ತೋಂಟದಾರ್ಯನ ಮನೋವಿಜಯ ತಾತ್ಪರ್ಯ, ಹೀಗೆ ಹಲವಾರು ಕೃತಿಗಳು ರಚನೆಗೊಂಡಿದ್ದು, ಇವುಗಳಲ್ಲಿಯೂ ಸಾಂದರ್ಭಿಕವಾಗಿ ಕಲೆಯ ಅಂಶಗಳು ಕಂಡುಬರುತ್ತವೆ.

ಕುಮಾರಬಂಕನಾಥನು ಪ್ರಭುದೇವರ ೬೯೮ ವಚನಗಳಿಗೆ 'ಷಟಸ್ಥಲೋಪದೇಶ' ಎಂಬ ಹೆಸರಿನ ಟೀಕೆ ಬರೆದಿದ್ದಾನೆ. ಇದರಲ್ಲಿ ಪ್ರಭುದೇವರ ವಚನ 'ನೆಲದ ಗೊಂಬೆಗೆ ಜಲದ ಬಣ್ಣವೆಯನುಡಿಸಿ' ಎಂಬುದಕ್ಕೆ ಈತನು ಬರೆದ ಟೀಕೆಯಲ್ಲಿ ''ಪೃಥ್ವಿಯಂಶದ ತನುವೆಂಬುದೀಗ ನೆಲದ ಗೊಂಬೆ, ಅಪ್ಪುವಿನ ರಸ ಅಂಶ ರಸದಿಂದ ಬದ್ಧಮಾಡಿ ಎಂಬುದೀಗ ಜಲದ ಬಣ್ಣವನುಡಿಸಿ' ಎಂದು ಅರ್ಥ ಹೇಳಿದ್ದಾನೆ.

ಕ್ರಿ.ಶ. ೧೫ನೇ ಶತಮಾನದ ಶಾಸನ ಬರಹಗಳಲ್ಲಿಯೂ ಕಲೆಯ ಅಂಶಗಳು ವ್ಯಕ್ತಗೊಂಡಿವೆ. ಬಣ್ಣ, ರೇಖೆ, ಆಕಾರ, ಚಿತ್ರ, ಸೌಂದರ್ಯ, ಭಿತ್ತಿರಚನೆ, ಮುಂತಾದ ಅಂಶಗಳ ಜೊತೆಗೆ ಆಗಿನ ಕಾಲದ ಶಿಲ್ಪ ಮತ್ತು ಚಿತ್ರಕಲಾವಿದರ ಹೆಸರುಗಳು ಕಂಡುಬರುತ್ತವೆ. ಈ ಸಂಗತಿಗಳು ಈ ಶತಮಾನದ ಚಿತ್ರಕಲಾ ಸಾಹಿತ್ಯವನ್ನು ರೂಪಿಸುವಲ್ಲಿ ಸಹಕಾರಿಯಾಗಿವೆ.

ಹರಹರದಲ್ಲಿನ ಹರಿಹರೇಶ್ವರ ದೇವಾಲಯದಲ್ಲಿನ ಶಾಸನವನ್ನು ಬಾಯಣಾಚಾರ್ಯ ಎಂಬ ಕಲಾವಿದ ಕೆತ್ತಿದ್ದು, ಈ ದೇವಾಲಯದ ದಕ್ಷಿಣ ಭಾಗದ ಇನ್ನೊಂದು ಶಾಸನವನ್ನು ಮಾಚಿದೇವನ ಮಗ ಧರಣೋಜನೆಂಬುವನು[೬೨] ಕಂಡರಿಸಿದ ಬಗ್ಗೆ ತಿಳಿದುಬರುತ್ತದೆ.

೬೨. ಡಾ.ಜಿ.ಎಸ್.ಶಿವರುದ್ರಪ್ಪ : (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪) : ಪುಟ-೨೭೪.

ಭಟ್ಕಳ ತಾಲೂಕಿನ ಹಾಡುವಳ್ಳಿಯಲ್ಲಿರುವ ಶಾಸನವನ್ನು ಶಂಕರಾರ್ಯ ಎಂಬುವನು ರಚಿಸಿದ್ದು, ಇದರಲ್ಲಿ ಚಿತ್ರಕಲೆಯಿಂದ ಅಲಂಕೃತಗೊಂಡಂತಹ ಜಿನಗೃಹದ ವಿವರ ಬರುತ್ತದೆ. 'ಶೋಭಾರಮ್ಯವಾಯ್ತೀ ಜಿನಗೃಹವಿದನಾಂ ನೋಳ್ಪೆವೆಂದಳ್ತಿಯಿಂ' ಎನ್ನುವ ಮೂಲಕ ಅದರ ಅಂದವನ್ನು ಹೊಗಳಲಾಗಿದೆ. ಮತ್ತೊಂದು ಸಾಲಿನಲ್ಲಿ ಭೂಮಿಯನ್ನು ಪದ್ಮಕ್ಕೆ ಹೋಲಿಸಲಾಗಿದೆ. 'ಜಲನಿಧಿ ರೇಖೆ ಪತ್ರವಲಯಂ ವನವೇಲೆ ಸುಕೇಶರಾಳಿಭೂತಳಿಂ' ಎಂದು ಹೇಳುವಲ್ಲಿ ರೇಖೆಯ ಪ್ರಸ್ತಾಪವಿದೆ. ಮೂಡಬಿದಿರೆಯ ಈ ಕಾಲದ ಶಾಸನವೊಂದು ಚಿತ್ರಗಳಿಂದ ಅಲಂಕೃತಗೊಂಡ ಜಿನಾಲಯವನ್ನು ವರ್ಣಿಸುತ್ತದೆ.

'ಲಲಿತಸ್ತಂಭ ಕದಂಬಮಂ ಮದನಕಯ್ಯಂ ಲೋವೆಯಂ ದ್ವಾರಚಿ
ತ್ರಲತಾ ಬಂಧಮನುದ್ಧ ಭಿತ್ತಿಯನದಿಷ್ಠಾನಾದಿಯಂ ಬೇರೆ ಬೇ
ರೊಲವಿಂ ಬಣ್ಣಿಸಿ ಪೇಳಲಾನರಿಯೆನೊಂದಂ ಬಲ್ಲೆಲಾ ಚೈತ್ಯ ಕೌ
ಶಲಂ ಭಾವಿಸಿ ವಿಶ್ವಕರ್ಮನಣುಗಿಂ ಶಿರ್ಷಮಂ ತೂಗುವಂ'

ಮೇಲಿನ ಶಾಸನ ಪದ್ಯಗಳಲ್ಲಿ ತ್ರಿಭುವನ ಚೂಡಾಮಣಿ ಎಂಬ ಚೈತ್ಯಾಲಯವನ್ನು ಜಗದಾಶ್ಚರ್ಯವಾಗುವ ರೀತಿಯಲ್ಲಿ ವಿಶ್ವಕರ್ಮನೇ ಸ್ವತಹ ನಿರ್ಮಿಸಿದನೇನೋ ಎಂದು ವರ್ಣಿಸಲಾಗಿದೆ. ಇದರಲ್ಲಿ ಕಲಾತ್ಮಕ ಕಂಬಗಳು, ಮದನಿಕೆಯರ ವಿಗ್ರಹಗಳು, ಲತಾಚಿತ್ರ, ಭಿತ್ತಿ, ವಿವಿಧ ಶಿಲ್ಪಗಳು ಹೀಗೆ ಹಲವು ಸಂಗತಿಗಳು ಉಲ್ಲೇಖಿಸಲ್ಪಟ್ಟಿವೆ.

ಎಡೆಯೂರಿನ ಸಿದ್ಧಲಿಂಗೇಶ್ವರ ದೇವಾಲಯದಲ್ಲಿನ ಈ ಕಾಲದ ಶಾಸನವೊಂದು ಗದ್ಯರೂಪದಲ್ಲಿದೆ. ದೊಡ್ಡದಾದ ಈ ಶಾಸನದ ತುಂಬ ಉಪಮೆ, ರೂಪಕಗಳ ರೀತಿಯಲ್ಲಿ ಚಿತ್ರ, ಶಿಲ್ಪ, ಬಣ್ಣ, ಆಕಾರ, ರೇಖೆ ಹೀಗೆ ಕಲೆಗೆ ಸಂಬಂಧಿಸಿದ ಅಂಶಗಳಿವೆ. ಸಿದ್ಧಲಿಂಗೇಶ್ವರನ ಮೂರ್ತಿ, ಅದರ ಅನುಪಮ ಸೌಂದರ್ಯ ಮತ್ತು ದೇವಾಲಯವನ್ನು ವರ್ಣಿಸುವಾಗ ಈ ಸಂಗತಿಗಳು ಕಂಡುಬರುತ್ತವೆ. ವಿಜಯನಗರದ ಹರಿಹರ ದೇವನ ಕಾಲದಲ್ಲಿ ವಿಠ್ಠಣವೊಡೆಯನೆಂಬ ಸಾಮಂತನು ಅಗ್ರಹಾರವನ್ನು ದತ್ತಿ ಬಿಡುವಾಗ ದೊಡ್ಡ ಶಾಸನವನ್ನು ಬರೆಸಿದ್ದಾನೆ. ಇದರಲ್ಲಿ ಚಿತ್ರಕಲೆಯ ಉಲ್ಲೇಖವಿದೆ. ಸ್ತುತಿ ಯುವತಿ ಕರಕಮಲ ವಿಚಿತ್ರ ಚಿತ್ರರಚನ ದೀಪ್ತ ದಿಗ್ಭಿತ್ತಿ ಕೀರ್ತಿ ಸ್ಫೂರ್ತರಾದ ಸಕಳ ಸಾಗರ ಎಂದು ಹೇಳಲಾಗಿದೆ.

ಕ್ರಿ.ಶ. ೧೬ನೇ ಶತಮಾನದ ಚಿತ್ರಕಲಾ ಸಾಹಿತ್ಯವನ್ನು ರೂಪಿಸುವಲ್ಲಿ ಕರ್ನಾಟಕ ಸಂದರ್ಭದಲ್ಲಿ ಮತ್ತೆ ಸಮಕಾಲೀನ ಸಾಹಿತ್ಯ ಕೃತಿಗಳಲ್ಲಿನ ಕಲೆಯ ಅಂಶಗಳು ಸಹಕಾರಿಯಾಗಿವೆ. ಅವುಗಳ ಸ್ವರೂಪ, ಸಂಕ್ಷಿಪ್ತ ವಿವೇಚನೆಯನ್ನು ಈ ಕೆಳಗಿನಂತೆ ಹೇಳಬಹುದು. ಚಾಟುವಿಠಲನಾಥ ಎಂಬ ಕವಿ ಭಾಗವತ, ಭಾರತ ಮತ್ತು ಹಾಡುಗಳನ್ನು ಬರೆದಿದ್ದಾನೆ.[೯೩] ಇವುಗಳಲ್ಲಿ ಕಲೆಯ ಅಂಶಗಳಿವೆ. ಈತ ಬರೆದ ಭಾರತ ಕೃತಿಯಲ್ಲಿ ಒಂದು ಕಡೆಗೆ ಹೀಗಿದೆ :

'ಕಲಿಸಿದನು ಚೌಷಷ್ಟಿ ವಿದ್ಯಾ
ವಳಿಗಳನು ಗುರು ಸಕಲ ವಿದ್ಯಾ
ಜಲನಿಧಿಗಳಿಗೆ ಸಕಲ ಸುರನರಲೋಕ ಗುರುಗಳಿಗೆ'

ಇದರಲ್ಲಿ ೬೪ ಕಲೆಗಳ ಪ್ರಸ್ತಾಪವಿದ್ದು, ಚಿತ್ರಕಲೆಯ ಬಗ್ಗೆಯೂ ಹೇಳಲಾಗಿದೆ.

೯೩. ಡಾ.ಜಿ.ಎಸ್.ಶಿವರುದ್ರಪ್ಪ : ( ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪) : ಪುಟ-೪೪೦.

ಇದೇ ಶತಮಾನದಲ್ಲಿ ಸಾಳ್ವ ನೆಂಬ ಕವಿಯು 'ಸಾಳ್ವಭಾರತ, ರಸರತ್ನಾಕರ, ವೈದ್ಯಸಾಂಗತ್ಯ, 'ಶಾರದಾ ವಿಲಾಸ' ಎಂಬ ಕೃತಿಗಳನ್ನು ಬರೆದಿದ್ದಾನೆ. ಇವುಗಳೆಲ್ಲ ಸಾಂದರ್ಭಿಕ ಕಲೆಯ ಅಂಶಗಳನ್ನು ಒಳಗೊಂಡಿವೆ.

'ಚೆಲುವಿನಿಂ ಬರೆ ಮೇಲೆ ಹೀಲಿಯ
ತಳವಿಡಿದವೊಲು
ರಂಭೆಯಿಕೆಯ ಮುಂದೆ ಕಾಷ್ಟದ
ಗೊಂಬೆಯಾದಳು'

ಈ ಮೇಲಿನ ಸಾಲುಗಳನ್ನು ಸಾಳ್ವಭಾರತದಿಂದ ಆಯ್ದುಕೊಳ್ಳಲಾಗಿದೆ. ಇದರಲ್ಲಿ ಕಲೆಯ ಕುರಿತಂತೆ ಚೆಲುವು, ಚಿತ್ರ, ಚಿತ್ರರಚನೆ, ಶಿಲ್ಪಕಲೆ, ಕಾಷ್ಟಶಿಲ್ಪರಚನೆ, ಬೊಂಬೆಯ ಸುಂದರತೆ ಮುಂತಾದ ಸಂಗತಿಗಳು ಉಲ್ಲೇಖಗೊಂಡಿವೆ. ಈ ಕಾಲದ ಮತ್ತೊಬ್ಬ ಕವಿಯಾದ ಲಕ್ಷ್ಮೀಶನು ಜೈಮಿನಿಭಾರತ, ಪುರುಷ ಮೃಗಪ್ರಸಂಗ ಮತ್ತು ಕೀರ್ತನೆಗಳನ್ನು ಬರೆದಿದ್ದಾನೆ. ಇವುಗಳಲ್ಲಿರುವ ಕಲೆಯ ಅಂಶಗಳು ಈ ಕಾಲದ ಚಿತ್ರಕಲಾ ಸಾಹಿತ್ಯವನ್ನು ರೂಪಿಸುವಲ್ಲಿ ಸಹಕಾರಿಯಾಗಿವೆ.

'ಲಕ್ಷ್ಮೀವರಂ ತಾನೆ ಸಂಗೀತ ಸುಕಲಾ ನಿಪುಣ,
ವರವರ್ಣದಿಂದೆ ಸುಶೋಭಿತಮಾಗಿರೂಪವಿ'

ಈ ಮೇಲಿನ ಸಾಲುಗಳು ಜೈಮಿನಿ ಭಾರತದಿಂದ ಆಯ್ದುಕೊಳ್ಳಲಾಗಿದ್ದು, ಇದರಲ್ಲಿ ಸಕಲ ಕಲೆಗಳು, ಸಂಗೀತಕಲೆ, ವರ್ಣ, ರೂಪ, ಆಕಾರ, ಸೌಂದರ್ಯ ಮುಂತಾದ ಸಂಗತಿಗಳು ಉಲ್ಲೇಖಿಸಲ್ಪಟ್ಟಿವೆ. ರತ್ನಾಕರವರ್ಣಿಯು ಈ ಕಾಲದ ಮತ್ತೊಬ್ಬ ಪ್ರಖ್ಯಾತ ಕವಿಯಾಗಿದ್ದಾನೆ. ಭರತೇಶ ವೈಭವ, ತ್ರಿಲೋಕಶತಕ, ಕೆಲವು ಹಾಡುಗಳು ಈತನಿಂದ ರಚನೆಯಾಗಿವೆ.[೯೪] ಇವುಗಳು ಸಾಂದರ್ಭಿಕ ಕಲೆಯ ಅಂಶಗಳಿಂದ ಕೂಡಿವೆ. ಈತನ ಭರತೇಶ ವೈಭವವು ವಿಪುಲವಾದ ಕಲೆಯ ಅಂಶಗಳನ್ನು ಹೊಂದಿದ್ದು, ಕಲಾ ಸಾಹಿತ್ಯ ಕೃತಿಯಂತೆ ಕಂಡುಬರುತ್ತದೆ.

'ಕಲೆಯ ನರಿವ ಪುರುಷನ ಪಡೆವುದು
ನಾರಿಮಾಡಿದ ಪುಣ್ಯ, ಕಲೆಗನುಕೂಲೆಯ
ಪಡೆವುದು ಆ ಪುರುಷನ ಬಲುಪುಣ್ಯ'

ರತ್ನಾಕರನ ದೃಷ್ಟಿಯಲ್ಲಿ ಕಲೆಯಸವಿಯನ್ನರಿಯದ ಬಾಳು ನಿರ್ಭಾಗ್ಯಬಾಳು, ಹಾಗಾಗಿ ಕಲೆಯನ್ನು ತಿಳಿದುಕೊಂಡ ಗಂಡನನ್ನು ಪಡೆವುದು ನಾರಿ ಮಾಡಿದ ಪುಣ್ಯ ಮತ್ತು ಕಲೆಗೆ ಅನುಕೂಲೆಯಾದ ಸತಿಯನ್ನು ಪಡೆವುದು ಗಂಡನ ಬಲುಪುಣ್ಯ ಎನ್ನುತ್ತಾನೆ. ಈ ಅರ್ಥದಲ್ಲಿ ಗಂಡು ಹೆಣ್ಣುಗಳಿಬ್ಬರೂ ಕಲೆಯನ್ನು ಬಲ್ಲವರಾಗಿರಬೇಕೆಂಬುದು ಈತನ ಅಭಿಪ್ರಾಯವಾಗಿದೆ.

'ರಂಜಿತ ನಳಿ ತೋಳ್ಗಳೆತ್ತಿ,
ಸುವರ್ಣ ಪುಷ್ಪಾಂಜಲಿ ಮಾಡಿದರೊಡನೆ,
ಸುಳಿದು ಸುತ್ತುವಳು ನಾಟ್ಯದೊಳು ಸಮ್ಮೋಹನ'

ಇದರಲ್ಲಿ ವರ್ಣಲೇಪನ, ನಾಟ್ಯಕಲೆ, ಚಿತ್ರ, ಆಕಾರ ಮುಂತಾದ ಸಂಗತಿಗಳು ಹೇಳಲ್ಪಟ್ಟಿವೆ. ಇದರಂತೆ ಇನ್ನೂ ಹಲವು ವಿಚಾರಗಳು ಕಲೆಯ ಬಗೆಗೆ ಭರತೇಶ ವೈಭವ ಕೃತಿಯಲ್ಲಿವೆ.

---

೯೪. ಡಾ.ಜಿ.ಎಸ್.ಶಿವರುದ್ರಪ್ಪ : (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪) : ಪುಟ-೪೬೦

'ಮಾನವಾತ್ಮ ಕಲೆಯ ನೆಮ್ಮಿರ್ದು ದಿನ್ನವನ'
'ಹಲವುಬಣ್ಣದ ಮುಗಿಲಿದ್ದರೇನವರೊಳು'
'ಭೋಗದಂಗವ ತೋರುತಿದೆ ನಾಟ್ಯ'
'ರಾಗರಂಗವ ತೋರುತಿದೆ ರಾಗಗಳುವೀತ'
'ರಾಗದೊಳಿಟ್ಟಾಕೆ ತೂಗಿದ ಸಾಲವ ತೂಗಿತಿದ್ದುವನೋ'
'ಪರಮಾತ್ಮ ಕಲೆಯನವಲಂಬಿಸಿ ಹಾಡಿದಳೊಲಿದು'
'ಸಂಗೀತ ಸುಳಿಯೊಳು ತೇಲಾಡುವಂತೆ'
'ಎಳೆಯ ಮಿಂಚಿನಂದದ ಬೊಂಬೆಯೊ'
'ಪಳಕಿನ ಪುತ್ತಳಿಯೋ'

ಮೇಲಿನ ಎಲ್ಲ ಸಾಲುಗಳನ್ನು ಭರತೇಶ ವೈಭವದ ಬೇರೆ ಬೇರೆ ಪದ್ಯಗಳಿಂದ ಆಯ್ದುಕೊಳ್ಳಲಾಗಿದೆ. ಇಲ್ಲೆಲ್ಲ ಕಲೆಯ ಅಂಶಗಳಿವೆ. ಕಲೆ, ಬಣ್ಣ, ನಾಟ್ಯಕಲೆ, ಚಿತ್ರಕಲೆ, ರಾಗತಾಳ, ಸಂಗೀತಕಲೆ, ಶಿಲ್ಪಕಲೆ, ಹೀಗೆ ಹಲವಾರು ಸಂಗತಿಗಳು ಪರೋಕ್ಷವಾಗಿ ಬಿಂಬಿತವಾಗಿವೆ.

'ಬೆಳಗಿನ ಬೊಂಬೆ ಬೆಳ್ದಿಂಗಳ ಬೊಂಬೆ ತಿಂ
ಗಳ ಬೊಂಬೆ, ಜೊನ್ನದ ಬೊಂಬೆ,
ತಿಳಿವಿನ ಬೊಂಬೆ, ಬೋಧದ ಬೊಂಬೆಯಂದಾತ್ಮ
ಕಲೆಯ ಕನ್ನಡಿಸಿ ಹಾಡಿದರು'

ಈ ಹಾಡುಗಳನ್ನು ಬರೆದ ರತ್ನಾಕರ ವರ್ಣಿಯು ಅದರಲ್ಲಿಕಲೆಯ ಅಂಶಗಳನ್ನು ಮೇಲಿನಂತೆ ಬಿಂಬಿಸಿದ್ದಾನೆ. ಇಲ್ಲಿ ಬೊಂಬೆಯನ್ನು ತಯಾರಿಸುವ ಮೂರ್ತಿ ಶಿಲ್ಪಕಲೆಯ ಪ್ರಸ್ತಾಪವಿದ್ದು, ಹಲವು ರೀತಿಯ ಗೊಂಬೆಗಳನ್ನು ಕುರಿತು ಇಲ್ಲಿ ಹೇಳಲಾಗಿದೆ. ಇದರಂತೆ ವಿರುಪಾಕ್ಷ ಪಂಡಿತನ ಚನ್ನಬಸವ ಪುರಾಣ, ಗೋವಿಂದ ಕವಿಯ 'ಚಿತ್ರಭಾರತ', ನಂಜುಂಡ ಕವಿಯ 'ಕುಮಾರ ರಾಮಕಥೆ', ಪದ್ಮಕವಿಯ 'ವರ್ಧಮಾನ ಚರಿತೆ', ವೀರಭದ್ರರಾಜನ 'ವೀರಭದ್ರ ವಿಜಯ' ಮುಂತಾದ ಈ ಕಾಲದ ಕೃತಿಗಳಲ್ಲಿ ಸಾಂದರ್ಭಿಕವಾಗಿ ಕಲೆಯ ಅಂಶಗಳು ಪ್ರಸ್ತಾಪಿತವಾಗಿವೆ.

ಕ್ರಿ.ಶ. ೧೬ನೇ ಶತಮಾನದಲ್ಲಿ ಪುರಂದರದಾಸರು, ಕನಕದಾಸರು ಮತ್ತು ವಾದಿರಾಜ ರಂತಹ ದಾಸ ಶ್ರೇಷ್ಠರು ಕೀರ್ತನೆಗಳನ್ನು ರಚಿಸಿದ್ದು, ಅವುಗಳಲ್ಲಿಯೂ ಕಲೆಯ ಅಂಶಗಳು ಕಂಡುಬರುತ್ತವೆ. ಕನಕದಾಸರು ವಿಜಯನಗರ ಸಾಮ್ರಾಜ್ಯದಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ಇದ್ದವರು. ಹಾಗಾಗಿ ಅವರ 'ಮೋಹನ ತರಂಗಿಣಿ'ಯಲ್ಲಿ ವಿಜಯ ನಗರದ ಅಂದಿನ ಚಿತ್ರಕಲಾ ವೈಭವ ಕಣ್ಮುಂದೆ ಕಟ್ಟಿದಂತೆ ವರ್ಣಿತಗೊಂಡಿದೆ. ವಿಜಯ ನಗರದ ರಾಜಧಾನಿ, ಅಲ್ಲಿಯ ವಸಂತೋತ್ಸವ, ಸೂಳೆಕೇರಿ, ಅಲ್ಲಿನ ಮನೆಗಳ ಹೊರಭಾಗ ಮತ್ತು ಒಳಭಾಗದಲ್ಲಿರುವ ಚಿತ್ರಗಳು, ಅರಮನೆಗಳು, ದೇವಾಲಯಗಳು, ಅಲ್ಲಿನ ಭಿತ್ತಿಚಿತ್ರ ಮತ್ತು ಶಿಲ್ಪಗಳು ಹೀಗೆ ಕಲೆಯ ಹಂದರವೆ ಇಲ್ಲಿನ ವರ್ಣನೆಯಲ್ಲಿ ಕಂಡುಬರುತ್ತದೆ.

'ಬೊಂಬೊಯಾಟವ ನಾಡಿಸಿದೆ,
ಬೊಂಬೆಯಾಟವಯ್ಯಾ ಬ್ರಹ್ಮಾಂಡವೆ
ಡಿಂಬದಲ್ಲಿರುವ ಜೀವ, ಕಂಬ ಸೂತ್ರ ಗೊಂಬೆಯಂತೆ'

ಈ ಮೇಲಿನ ಸಾಲುಗಳು ಕನಕದಾಸರ ಕೀರ್ತನೆಗಳಿಂದ ಆಯ್ದುಕೊಂಡ ಸಾಲುಗಳಾಗಿವೆ. ಇಲ್ಲಿ ಪಾರಮಾರ್ಥಿಕ ಅಂಶವನ್ನು ಶಿಲ್ಪಕಲೆಯ ಮೂಲಕ ಬಿಂಬಿಸಲಾಗಿದೆ. ಅದರಂತೆ ಈ ಕಾಲದ

ವಾದಿರಾಜರು ಬರೆದಿರುವ ಕೀರ್ತನೆಗಳು, ವೈಕುಂಠ ವರ್ಣನೆ, ಸ್ವಪ್ನಗದ್ಯ, ಭಾರತತಾತ್ಪರ್ಯನಿರ್ಣಯ, ಕೃತಿಗಳಲ್ಲಿ ಕಲೆಯ ಅಂಶಗಳಿವೆ. ಇವರ ಕೀರ್ತನೆಯಲ್ಲಿ 'ಚಿತ್ರದರ್‍ಯಾಗತೆ ಉತ್ತಮ ಕ್ಯಾದಿಗೆ' ಎಂದು ಚಿತ್ರಕಲೆಯ ಉಲ್ಲೇಖ ಕಂಡುಬರುವುದು. ವ್ಯಾಸರಾಯರ ಕೀರ್ತನೆಯಲ್ಲಿ 'ಯನ್ನಬಿಂಬ ಮೂರುತಿಯ ಪೂಜಿಪೆ ನಾನು, ವಾದಿರಾಜರ ಆರೋಗಣೆ ಮಾಡೊ ಆನಂದ ಮೂರುತಿ' ಎಂಬ ಸಾಲುಗಳಲ್ಲಿ ಮೂರ್ತಿ ಶಿಲ್ಪಕಲೆಯು ಕಂಡುಬಂದರೆ, ಪುರಂದರದಾಸರ 'ಚೆಲುವ ರಂಗಯ್ಯ', 'ಪಿಳ್ಳಂಗೋವಿ ಚೆಲ್ವಕೃಷ್ಣ' ವಾದಿರಾಜರ 'ಕುದುರೆ ಬಂದಿದೆ ಚೆಲುವ ಕುದುರೆ' ಎನ್ನುವ ಸಾಲುಗಳು ಕಲೆಯಲ್ಲಿ ಬರುವ ಸೌಂದರ್ಯ ಮತ್ತು ಚಲುವಿನ ಬಗೆಗೆ ಸೂಚನೆ ಕೊಡುತ್ತವೆ.[೯೫]

ಕ್ರಿ.ಶ. ೧೬ನೇ ಶತಮಾನದಲ್ಲಿ ಕರ್ನಾಟಕ ಭಾಗದಲ್ಲಿ ಮುಸ್ಲಿಮರ ಆಳ್ವಿಕೆಯು ಅದಾಗಲೆ ಆರಂಭಗೊಂಡು ಪ್ರಖ್ಯಾತಿಯನ್ನು ಪಡೆದಿತ್ತು. ಗುಲಬರ್ಗಾ, ಬೀದರ್ ಮತ್ತು ಬಿಜಾಪುರಗಳನ್ನು ರಾಜಧಾನಿಯಾಗಿ ಮಾಡಿಕೊಂಡ ಮುಸ್ಲಿಮರು ತಮ್ಮ ಕಾಲಾವಧಿಯಲ್ಲಿ ಕಲೆ ಸಾಹಿತ್ಯಗಳಿಗೆ ಪ್ರೋತ್ಸಾಹ ನೀಡುತ್ತ ಬಂದಿದ್ದಾರೆ. ಪ್ರಬುದ್ಧವಾದ ಸಾಹಿತ್ಯ ಕೃತಿಗಳು ರಚನೆಯಾದಂತೆ, ಹಸ್ತಪ್ರತಿ ಚಿತ್ರಗಳು, ಕಿರುರೂಪ ಕಲಾಕೃತಿಗಳು ಮತ್ತು ಭಿತ್ತಿಚಿತ್ರಗಳನ್ನು ಸಹಿತ ಇವರು ರಚನೆ ಮಾಡಿದ್ದಾರೆ. ಹಾಗಾಗಿ ಕ್ರಿ.ಶ. ೧೬ನೇ ಶತಮಾನದ ಚಿತ್ರಕಲಾ ಸಾಹಿತ್ಯವನ್ನು ವ್ಯವಸ್ಥಿತವಾಗಿ ಕಟ್ಟುವಲ್ಲಿ ಇವರ ಕಾಲದ ಸಾಹಿತ್ಯ ಕೃತಿಗಳು, ಹಸ್ತಪ್ರತಿ ಚಿತ್ರಗಳು ಮತ್ತು ಭಿತ್ತಿಚಿತ್ರಗಳಂತಹ ಆಕರಗಳನ್ನು ಪ್ರಮುಖವಾಗಿ ಬಳಸಿಕೊಳ್ಳಬೇಕಾಗುತ್ತದೆ.

ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ಮುಸ್ಲಿಮ್ ಸುಲ್ತಾನರಲ್ಲಿ ಬಿಜಾಪುರದ ಅರಸರು ಚಿತ್ರಕಲಾ ಸಾಹಿತ್ಯ ಕ್ಷೇತ್ರಕ್ಕೆ ಹೆಚ್ಚಿನ ಕೊಡುಗೆ ನೀಡಿದ್ದಾರೆ ಎಂದು ಹೇಳಬಹುದಾಗಿದೆ. ಬಿಜಾಪುರದ ಆದಿಲ್ ಶಾಹಿ ದೊರೆಗಳ ಆಳ್ವಿಕೆಯಲ್ಲಿ ರಚನೆಯಾದ ಕೆಲವು ಸಾಹಿತ್ಯ ಕೃತಿಗಳಲ್ಲಿ ಕಲೆಯ ಅಂಶಗಳು ಸಾಂದರ್ಭಿಕವಾಗಿ ಬಂದಿದ್ದರೆ, ಮತ್ತೆ ಕೆಲವು ಸಾಹಿತ್ಯ ಕೃತಿಗಳಲ್ಲಿ ಹಸ್ತಪ್ರತಿ ಚಿತ್ರಗಳು ಕಂಡುಬರುತ್ತವೆ. ಈ ಕಾಲದ ಚಿತ್ರಕಲಾ ಸಾಹಿತ್ಯವನ್ನು ರೂಪಿಸಲು ಇವು ಪೂರಕ ಅಂಶಗಳಾಗಿವೆ.

ಒಂದನೆಯ ಅಲಿಆದಿಲ್‌ಷಾಹ್‌ನ ಕಾಲದಲ್ಲಿ 'ನಜುಮ್-ಉಲ್-ಉಲೂಮ್' ಎಂಬ ಕೃತಿಯನ್ನು ರಚಿಸಲಾಗಿದೆ. ಇದು ಖಗೋಳ, ಜೋತಿಷ್ಯಶಾಸ್ತ್ರಕ್ಕೆ ಸಂಬಂಧಿಸಿದ್ದಾಗಿದೆ. ಇದರಲ್ಲಿ ಸಾಂದರ್ಭಿಕವಾಗಿ ಚಿತ್ರಕಲೆಯ ಸಂಗತಿಗಳು ಉಲ್ಲೇಖಗೊಂಡಿವೆಯಲ್ಲದೆ, ೮೭೬ ಹಸ್ತಪ್ರತಿ ಚಿತ್ರಗಳನ್ನು ರಚನೆ ಮಾಡಲಾಗಿದೆ. ಈ ಚಿತ್ರಗಳಲ್ಲಿ ಹಿಂದೂ ವೇಷ-ಭೂಷಣಗಳಿದ್ದು, ವಿಜಯನಗರ ಶೈಲಿಯ ಪ್ರಭಾವದಿಂದ ಪ್ರೇರಣೆಗೊಂಡಂತೆ ಕಂಡುಬರುತ್ತವೆ.

ಎರಡನೆಯ ಇಬ್ರಾಹಿಂ ಆದಿಲ್‌ಶಾಹನ ಕಾಲದಲ್ಲಿ 'ರತನ್‌ಕಲಿಯಾ' ಎಂಬ ಕೃತಿ ರಚಿಸಲಾಗಿದ್ದು, ಸಮಕಾಲೀನ ಬದುಕು, ಸಾಮಾಜಿಕ ರೀತಿ-ನೀತಿಗಳು ಮತ್ತು ಹಬ್ಬಗಳ ಆಚರಣೆ ಬಗೆಗೆ ಇದರಲ್ಲಿ ವಿವರಿಸಲಾಗಿದೆ. ಇದರಲ್ಲಿ ಒಟ್ಟು ೩೬ ವರ್ಣಚಿತ್ರಗಳನ್ನು ರಚಿಸಲಾಗಿದೆ. 'ನಿಮತ್‌ನಾಮಾ' ಎಂಬ ಮತ್ತೊಂದು ಕೃತಿಯು ಸಹಿತ ಎರಡನೇ ಇಬ್ರಾಹಿಂನ ಕಾಲದಲ್ಲಿಯೆ ರಚನೆ ಮಾಡಲಾಗಿದೆ. ಇದು ರಾಜವಂಶದವರ ಇತಿಹಾಸ ಕುರಿತಾಗಿದ್ದು, ರಾಜವಂಶದವರು ಸಮಕಾಲೀನ ಅಂತಪುರದ ಸ್ತ್ರೀಯರ, ರಾಜಕುಮಾರರ ಚಿತ್ರಗಳನ್ನು ರಚಿಸಲಾಗಿದೆ. ಇಬ್ರಾಹಿಂ ಒಂಭತ್ತು ವರ್ಷದವನಿದ್ದಾಗಿನ ಚಿತ್ರವೂ ಇದರಲ್ಲಿ ರಚಿಸಲ್ಪಟ್ಟಿದೆ.

---

೯೫. ಎಚ್.ಎನ್.ಚಿತ್ರಗಾರ : ಕರ್ನಾಟಕ ಹಸ್ತಪ್ರತಿ ಚಿತ್ರಕಲೆ : ಪುಟ-೬೧

ಇಮ್ಮಡಿ ಇಬ್ರಾಹಿಂ ಕಾಲದಲ್ಲಿ ರಚನೆಗೊಂಡ ಮತ್ತೊಂದು ಸಾಹಿತ್ಯ ಕೃತಿ 'ಕಿತಾಬ್-ಇ-ನವರಸ್' ಇದರಲ್ಲಿ ಧಾರ್ಮಿಕ ಹಿನ್ನೆಲೆಯ ಜೊತೆಗೆ ಕಲೆ ಮತ್ತು ಸಾಹಿತ್ಯಗಳಲ್ಲಿ ಬರುವ ನವರಸಗಳ ವಿವೇಚನೆ ಇದೆ. ಸಂಗೀತ ಕ್ಷೇತ್ರಕ್ಕೆ ಸಂಬಂಧಿಸಿದಂತೆ ರಾಗಮಾಲಾ ಚಿತ್ರಗಳು ಇದರಲ್ಲಿರುವುದು ವಿಶೇಷವಾಗಿದೆ. ಇದರೊಂದಿಗೆ ಹಿಂದೂ ದೇವತೆಗಳ ಸ್ತುತಿ, ಸಂಗೀತ ವಾದ್ಯಗಳ ವಿವರಣೆ, ರಾಣಿಯರ ಸೌಂದರ್ಯ ವರ್ಣನೆ ಮಾಡುವ ಸಂದರ್ಭದಲ್ಲಿ ಚಿತ್ರಕಲೆಯ ಅಂಶಗಳು ಕಂಡುಬರುತ್ತವೆ. ಮಹಮ್ಮದ್ ಆದಿಲ್‌ಷಾಹ ಕಾಲದಲ್ಲಿರಚನೆಗೊಂಡ 'ಖವ್ವರನಾಮಾ' ಕೃತಿಯಲ್ಲಿ ಪರ್ಷಿಯನ್ ಶೈಲಿಯ ಚಿತ್ರಗಳಿವೆ. ಇದಲ್ಲದೆ ಇದೆ ಕಾಲಾವಧಿಯಲ್ಲಿ ರಚನೆಗೊಂಡ 'ದಿವಾನ-ಇ-ಊರ್ಫ್' ಪುಸ್ತಕದಲ್ಲಿ ಮಹಮ್ಮದ್ ಆದಿಲ್‌ಶಾಹ, ಸಂತರು, ತತ್ವಜ್ಞಾನಿಗಳ ಚಿತ್ರಗಳಿವೆ.

'ಸಂಗೀತ ರತ್ನಾಕರ'ವು ಅಲಿಆದಿಲ್‌ಷಹಾನ ಕಾಲದಲ್ಲಿ ರಚನೆಗೊಂಡಿದ್ದು,[೯] ಹೆಸರೇ ಸೂಚಿಸುವಂತೆ ಸಂಗೀತ ಕಲೆಗೆ ಸಂಬಂಧಪಟ್ಟಿದೆ. ಇದರಲ್ಲಿ ಆಸ್ಥಾನದ ನೃತ್ಯಗಾರರು, ಸಭಾಸದರು, ಸರದಾರರು ವಿವಿಧ ಪೋಷಾಕುಗಳಲ್ಲಿರುವಂತೆ ಚಿತ್ರಿಸಲಾಗಿದೆ. 'ಜವಹೀರ್-ಅಲ್-ಮುಶಿಕತ್-ಇ-ಮಹಮ್ಮದಿ' ಎಂಬುದು ಈ ಕಾಲದ ಸಂಗೀತ ಕ್ಷೇತ್ರಕ್ಕೆ ಸಂಬಂಧಿಸಿದ ಮತ್ತೊಂದು ಗ್ರಂಥವಾಗಿದೆ. ಇದರಲ್ಲಿ ರಾಗಮಾಲಾ ಚಿತ್ರಗಳು, ರಾಗ ರಾಗಿಣಿಯರ ಚಿತ್ರಗಳು ಮತ್ತು ಭರತನ ನಾಟ್ಯಶಾಸ್ತ್ರಕ್ಕೆ ಸಂಬಂಧಿಸಿದ ಚಿತ್ರಗಳನ್ನು ರಚನೆ ಮಾಡಲಾಗಿದೆ.

ಬಿಜಾಪುರ ಆದಿಲ್‌ಶಾಹಿಗಳ ಕಾಲದ ಮತ್ತೊಂದು ಸಾಹಿತ್ಯ ಕೃತಿಯಾದ 'ಮತನವಿ' ಎಂಬುದು ಶೃಂಗಾರ ಭರಿತ ಹಾಡುಗಳಿಂದ ತುಂಬಿದೆ. ಇದರಲ್ಲಿ ಸಂಬಂಧಿಸಿದ ಹಾಡಿನ ಚಿತ್ರಗಳಲ್ಲದೆ ಕುರಾನ್ ವಾಕ್ಯಗಳನ್ನು ವರ್ಣಗಳಿಂದ ಅಲಂಕಾರಿಕವಾಗಿ ಬರೆಯಲಾಗಿದೆ. ಎರಡನೆಯ ಇಬ್ರಾಹಿಂ ಆದಿಲ್‌ಶಾಹಿ ಕಾಲದಲ್ಲಿ ಹಿಂದೂ ವಿದ್ವಾಂಸರಿಂದ ಸಂಸ್ಕೃತ ಹಾಗೂ ಮರಾಠಿ ಭಾಷೆಯಲ್ಲಿ ಜೋತಿಷ್ಯ ಶಾಸ್ತ್ರವು ರಚನೆಗೊಂಡಿದೆ. ಇದು ಆದಿಲ್‌ಶಾಹಿ ಅರಸು ಮನೆತನದ ಭವಿಷ್ಯವಾಣಿಯನ್ನು ಒಳಗೊಂಡಿದೆ. ಈ ಗ್ರಂಥದಲ್ಲಿ ಆನೆಗಳು, ಒಂಟೆಗಳು, ಕುದುರೆಗಳು, ಪಲ್ಲಕ್ಕಿ ಮತ್ತು ಜೋತಿಷ್ಯ ಶಾಸ್ತ್ರ ನಕ್ಷಾಮಾದರಿಗಳ ಚಿತ್ರಗಳನ್ನು ರಚಿಸಲಾಗಿದೆ.

ಕ್ರಿ.ಶ. ೧೬ನೇ ಶತಮಾನದಲ್ಲಿ ರಚನೆಗೊಂಡ ಮತ್ತೊಂದು ಕೃತಿ 'ಮಧುಮಾಲತಿ' ಉರ್ದು ಭಾಷೆಯಲ್ಲಿ ರಚನೆಯಾಗಿದೆ. ಇದರಲ್ಲಿ ರಾಜರಾಣಿಯರು, ಅವರ ಸೇವಕ ವರ್ಗದವರು, ಹೂದೋಟ ಮುಂತಾದ ಚಿತ್ರಗಳನ್ನು ರಚಿಸಲಾಗಿದೆ: ಇದಲ್ಲದ 'ಅಜಾಇಬೂಲ್-ಮುಖಾಲಕತ್' ಎಂಬ ಗ್ರಂಥವು ಇದೆ ಸಂದರ್ಭದಲ್ಲಿ ರಚನೆಗೊಂಡಿದ್ದು, ಇದರಲ್ಲಿಯೂ ಆದಿಲ್‌ಶಾಹಿ ದೊರೆಗಳು, ರಾಣಿಯರು, ರಾಜಪರಿವಾರದವರು, ಅರಮನೆಗಳು, ಹೂದೋಟ, ನಿಸರ್ಗದ ಪ್ರಾಣಿ-ಪಕ್ಷಿಗಳು ರಚನೆಗೊಂಡಿವೆ.

ಹೀಗೆ ಹಲವಾರು ಸಾಹಿತ್ಯಕೃತಿಗಳು ಕ್ರಿ.ಶ. ೧೬ನೇ ಶತಮಾನದಲ್ಲಿ ಬಿಜಾಪುರ ಸುಲ್ತಾನರ ಕಾಲದಲ್ಲಿ ರಚನೆಗೊಂಡಿವೆ. ಅವುಗಳಲ್ಲಿ ಹಸ್ತಪ್ರತಿ ಚಿತ್ರಗಳನ್ನು ರಚಿಸುವದರ ಜೊತೆಗೆ ಸಾಂದರ್ಭಿಕವಾಗಿ ಚಿತ್ರಕಲೆಯ ಉಲ್ಲೇಖಗಳನ್ನು ಬಳಸಿಕೊಂಡಿರುವುದು ಈ ಕಾಲ ಘಟ್ಟದ ಚಿತ್ರಕಲಾ ಸಾಹಿತ್ಯವನ್ನು ರೂಪಿಸುವಲ್ಲಿ ಸಹಾಯಕವಾಗಿದೆ.

ಕ್ರಿ.ಶ. ೧೬ನೇ ಶತಮಾನದಲ್ಲಿ ಕರ್ನಾಟಕದ ಹಲವು ಭಾಗಗಳಲ್ಲಿ ಭಿತ್ತಿಚಿತ್ರಗಳು ರಚನೆಯಾಗಿದ್ದು, ಇವು ಸಮಕಾಲೀನ ಚಿತ್ರಕಲಾ ಸಾಹಿತ್ಯದ ಬಗ್ಗೆ ಬೆಳಕು ಚಲ್ಲುತ್ತವೆ. ಕಾರಣ ಭಿತ್ತಿಚಿತ್ರ ರಚನೆಯ

೯. ಎಚ್.ಎನ್.ಚಿತ್ರಗಾರ : ಕರ್ನಾಟಕ ಹಸ್ತಪ್ರತಿ ಚಿತ್ರಕಲೆ : ಪುಟ-೬೪

ಪ್ರಕ್ರಿಯೆಯಲ್ಲಿ ಭಿತ್ತಿ ತಯಾರಿಸುವ ಪರಿಕರಗಳು ಮತ್ತು ವಿಧಾನ, ಜೊತೆಗೆ ಚಿತ್ರರಚನಾ ಹಂತಗಳು ಮತ್ತು ಬಣ್ಣ ಕುಂಚಗಳಂತಹ ಸಾಮಗ್ರಿಗಳ ಕುರಿತಾಗಿ ಸಮಕಾಲೀನ ಕಲಾ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖ ಕಂಡುಬರುತ್ತದೆ. ಅದನ್ನು ಆಧರಿಸಿಯೇ ಈ ಚಿತ್ರಗಳನ್ನು ರಚಿಸಿರುವುದು ಬಹುಮಟ್ಟಿಗೆ ಒಪ್ಪಿತವಾದ ವಿಚಾರವಾಗಿದೆ.[೯೭] ಹಾಗಾಗಿ ಸಮಕಾಲೀನ ಭಿತ್ತಿಚಿತ್ರ ಹಾಗೂ ಹಸ್ತಪ್ರತಿ ಚಿತ್ರಗಳಿಂದಲೂ ಈ ಕಾಲದ ಕಲಾಸಾಹಿತ್ಯವನ್ನು ರೂಪಿಸಬಹುದಾಗಿದೆ.

ಕ್ರಿ.ಶ. ೧೬ನೇ ಶತಮಾನದಲ್ಲಿ ರಚನೆಗೊಂಡ ಭಿತ್ತಿಚಿತ್ರಗಳಲ್ಲಿ ಹಂಪೆಯ ವಿರೂಪಾಕ್ಷ ದೇವಾಲಯದ ಚಿತ್ರಗಳು, ಕನಕಗಿರಿಯ ಕನಕಾಚಲಪತಿ ದೇವಾಲಯದ ಚಿತ್ರಗಳು, ಆನೆಗೊಂದಿಯ ಹುಚ್ಚಪ್ಪಯ್ಯಮಠದ ಚಿತ್ರಗಳು, ಗುಲಬರ್ಗಾದ ಬಂದೇನವಾಜ್ ದರ್ಗಾದ ಚಿತ್ರಗಳು, ಬೀದರ್ ಸಮೀಪದ ಅಸ್ಟೂರಿನಲ್ಲಿರುವ ಸಮಾಧಿ ಚಿತ್ರಗಳು, ಬಿಜಾಪುರದ ಅಸರ್‌ಮಹಲ್ ಮತ್ತು ಸಮೀಪದ ಕುಮಟಗಿಯಲ್ಲಿನ ಭಿತ್ತಿಚಿತ್ರಗಳು ಮುಖ್ಯವಾಗಿವೆ. ಈ ಎಲ್ಲ ಭಿತ್ತಿ ಚಿತ್ರಗಳು ಬೇರೆ ಬೇರೆ ಶೈಲಿ, ಬೇರೆ ಬೇರೆ ವರ್ಣದ್ರವ್ಯಗಳು ಮತ್ತು ರಚನಾ ವಿಧಾನಗಳನ್ನು ಹೊಂದಿವೆ. ಅದೆ ರೀತಿ ಭಿತ್ತಿ ನಿರ್ಮಾಣ ಪ್ರಕ್ರಿಯೆಯಲ್ಲೂ ಭಿನ್ನತೆ ಕಂಡುಬರುತ್ತದೆ. ಈ ಎಲ್ಲ ವಿಷಯಗಳೂ ಸಮಕಾಲೀನ ಕಲಾ ಸಾಹಿತ್ಯ ಕೃತಿಗಳಲ್ಲಿ ಇಲ್ಲವೆ ಪೂರಕ ಸಾಹಿತ್ಯಗಳಲ್ಲಿ ಕಂಡು ಬರುವುದು ಕುತೂಹಲಕರವಾದ ಸಂಗತಿಯಾಗಿದೆ.

**೫. ಮೈಸೂರು ಅರಸರಿಂದ ಸ್ವಾತಂತ್ರ್ಯದ ವರೆಗಿನ ಚಿತ್ರಕಲಾ ಸಾಹಿತ್ಯ :**

ಮೈಸೂರು ಅರಸರ ಆಳ್ವಿಕೆಯು ಕ್ರಿ. ಶ. ೧೭ನೇ ಶತಮಾನದ ಉತ್ತರಾರ್ಧದಿಂದ ಆರಂಭಗೊಂಡು ಕ್ರಿ. ಶ. ೧೮ನೇ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದಿತು. ವಿಜಯನಗರ ಸಾಮ್ರಾಟರ ಸಾಮಂತರಾಗಿದ್ದ ಇವರು ಅವರಂತೆ ಕಲೆ, ಸಾಹಿತ್ಯಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಟ್ಟಿದ್ದಾರೆ. ಇವರ ಕಾಲದಲ್ಲಿ ವಾಸ್ತುಕಲೆ, ಶಿಲ್ಪಕಲೆ, ಚಿತ್ರಕಲೆಗಳು ಪ್ರಬುದ್ಧವಾಗಿ ಬೆಳೆದಂತೆ ಶ್ರೇಷ್ಠಸಾಹಿತ್ಯ ಕೃತಿಗಳು ರಚನೆಗೊಂಡಿವೆ. ಅವುಗಳಲ್ಲಿ ಕೆಲವು ಚಿತ್ರಕಲೆಯ ಹೆಚ್ಚಿನ ಅಂಶಗಳನ್ನು ಒಳಗೊಂಡಿರುವುದು ಗಮನಾರ್ಹವಾಗಿದೆ. ಈ ಅಂಶಗಳು ಆ ಕಾಲದ ಚಿತ್ರಕಲಾ ಸಾಹಿತ್ಯದ ಇತಿಹಾಸ ಕಟ್ಟಿಕೊಡುವಲ್ಲಿ ಸಹಕಾರಿಯಾಗಿವೆ. ಮೈಸೂರು ಅರಸರಿಂದ ಸ್ವಾತಂತ್ರ್ಯದ ವರೆಗಿನ ಚಿತ್ರಕಲಾ ಸಾಹಿತ್ಯದ ಅವಧಿಯನ್ನು ಇಲ್ಲಿ ಕ್ರಿ. ಶ. ೧೭ನೇ ಶತಮಾನದಿಂದ ೧೯ನೇ ಶತಮಾನದ ವರೆಗೆ ನಿರ್ಧಿಷ್ಟಪಡಿಸಿಕೊಳ್ಳಲಾಗಿದೆ. ಈ ಅವಧಿಯಲ್ಲಿ ಒಳಗೊಳ್ಳುವ ಕೃತಿಗಳು ಕೆಳಗಿನಂತಿವೆ.

ಕ್ರಿ.ಶ. ೧೭ನೇ ಶತಮಾನದ ಕೆಲವು ಸಾಹಿತ್ಯ ಕೃತಿಗಳಿಂದ ಆ ಕಾಲದ ಚಿತ್ರಕಲಾ ಸಾಹಿತ್ಯದ ಐತಿಹಾಸಿಕ ಹಂತಗಳನ್ನು ಕ್ರಮಾನುಗತವಾಗಿ ಗುರುತಿಸಬಹುದಾಗಿದೆ. ಮೈಸೂರು ಮಹಾರಾಜರು ಶ್ರೀರಂಗಪಟ್ಟಣದಿಂದ ಆಳ್ವಿಕೆ ಮಾಡುವಾಗ ಕಂಠೀರವ ನರಸರಾಜರು ಶ್ರೇಷ್ಠ ಆಡಳಿತವನ್ನು ಕೊಟ್ಟವರಾಗಿದ್ದಾರೆ. ಇವರ ಆಸ್ಥಾನದಲ್ಲಿದ್ದ ಗೋವಿಂದವೈದ್ಯನೆಂಬ ಕವಿ 'ಕಂಠೀರವ ನರಸರಾಜ ವಿಜಯ' ಎಂಬ ಕೃತಿ ರಚನೆ ಮಾಡಿದ್ದಾನೆ. ಇದು ಚಿತ್ರಕಲೆಯ ಬಗೆಗಿನ ಹೆಚ್ಚಿನ ವಿವರಗಳನ್ನು ಹೊಂದಿದೆ. ಈ ಎಲ್ಲ ಕಲಾ ಸಂಗತಿಗಳು ಸಾಂದರ್ಭಿಕ ಹಿನ್ನೆಲೆಯಲ್ಲಿ ಮೂಡಿಬಂದಿವೆ. ಈ ಗ್ರಂಥದಲ್ಲಿ ವಿವಿಧ ದೇಶ ಕ್ಷೇತ್ರಗಳ ವಿವಿಧ ಪ್ರದೇಶಗಳ ಜನರ ವರ್ಣನೆ, ಕೋಟೆ ಕೊತ್ತಲಗಳು, ಉದ್ಯಾನಗಳ ವರ್ಣನೆ, ಮೈಸೂರು ದಸರಾ ವರ್ಣನೆ, ರಾಜನ ಒಡ್ಡೋಲಗದ ವರ್ಣನೆ, ಊರಿನ ಕೇರಿಗಳು, ದೇವಸ್ಥಾನಗಳು, ಸೂಳೆಕೇರಿಗಳು ಮತ್ತು ಅರಮನೆಗಳನ್ನು ವರ್ಣನೆ ಮಾಡುವಾಗ ಚಿತ್ರಕಲೆಯ ಸಂಗತಿಗಳು ಸಾಂದರ್ಭಿಕವಾಗಿ ಬಂದಿವೆ.[೯೮]

೯೭. ಡಾ.ಯಾದಪ್ಪ ಪರದೇಶಿ: ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಪುಟ-೫೦
೯೮. ಡಾ.ಜಿ.ಎಸ್.ಶಿವರುದ್ರಪ್ಪ : (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪) : ಪುಟ-೧೬೬.

ಈ ಕಾಲದ ಮತ್ತೊಬ್ಬ ಕವಿ ಗೋಪಕವಿಯಾಗಿದ್ದಾನೆ. ಈತನು ಚಿತ್ರಭಾರತ ಮತ್ತು ನಂದಿಮಾಹತ್ಮೆ ಎಂಬಕೃತಿಗಳನ್ನು ರಚಿಸಿದ್ದಾನೆ. ಇದರಲ್ಲಿ ಚಿತ್ರಭಾರತವು ಹೆಚ್ಚಿನ ಚಿತ್ರಕಲಾ ಸಂಗತಿಗಳನ್ನು ಸಾಂದರ್ಭಿಕವಾಗಿ ಒಳಗೊಂಡ ಗ್ರಂಥವಾಗಿದೆ.

'ತನುವಿಲ್ಲದಲ್ಲಿ ಪ್ರಾಣಪ್ರತಿಷ್ಠೆಯ ಕಟ್ಟೆ
ಯನುಗೊಳಿಸದಾರು ರಸ ಸ್ಥಾಪನೆಯ ಭಿತ್ತಿಯೊ
ದಿನಿಸಿಲ್ಲದತಿ ಚಿತ್ರಮಂ ರೂಪುದೋರಿದೆಡೆಯೊಳ್ ಪಲವಲಂಕಾರಮಂ'

ಇದರಲ್ಲಿ ಕಟ್ಟೆಯನು ಕಟ್ಟುವಲ್ಲಿಂದ, ಅಂದರೆ ಗೋಡೆಯನ್ನು ಕಟ್ಟುವಲ್ಲಿಂದ ಅದಕ್ಕೆ ಭಿತ್ತಿಲೇಪನ ಮಾಡುವುದು, ಅದನ್ನು ರಸಲೇಪನ ಮಾಡಿ ನುಣುಪುಗೊಳಿಸುವುದು, ಹಿನ್ನೆಲೆ ಲೇಪನ ಮಾಡಿ ಚಿತ್ರ ಬರೆಯುವುದು, ಚಿತ್ರದ ರೂಪಕ್ಕೆ ತಕ್ಕ ಹಾಗೆ ಹಲವು ಅಲಂಕಾರಗಳನ್ನು ಮಾಡುವ ಹಂತಗಳನ್ನು ವಿಶೇಷವಾಗಿ ಹೇಳಲಾಗಿದೆ. ಮತ್ತೊಂದು ಪದ್ಯದಲ್ಲಿ ಕೆಳಗಿನಂತೆ ಹೇಳಿದೆ.

'ವ್ಯಕ್ತಿಯಂ ಲಾವಣ್ಯನವರ ಸಮಲಂಕಾರ
ಯುಕ್ತಿಯಿಂ ಗುಣ ಗಣಕಲಾ ಪ್ರೌಢಿಮೆಯಿಂದಸ
ದ್ದುಕ್ತಿಯಿಂ ಲಲಿತಾನ್ವಯ ಕ್ರಿಯೆಗಳಿಂದ ಯತಿಗತಿಯಮಕ ಚಿತ್ರಾರ್ಥ'

ಈ ಪದ್ಯದಲ್ಲಿ ಕಲಾ ವಿಮರ್ಶೆಯ ಸೂಚ್ಯ ವಿಧಾನವು ಕಂಡುಬರುತ್ತದೆ. ಲಾವಣ್ಯ, ಗುಣ, ಧ್ವನಿ, ಅಲಂಕಾರ, ಪ್ರತಿಭೆ, ಚತುರೋಕ್ತಿ ಮುಂತಾದ ಸಂಗತಿಗಳ ಬಗ್ಗೆ ವ್ಯಕ್ತಿ ತಿಳಿದುಕೊಂಡಾಗ ಚಿತ್ರವು ಅರ್ಥವಾಗುವುದು ಮಾತ್ರವಲ್ಲದೆ ಅದರಿಂದ ರಸಾನುಭವ ಉಂಟಾಗುವುದೆಂದು ಸೂಚ್ಯವಾಗಿ ಹೇಳಲಾಗಿದೆ.

'ಜಗದೊಳಂತೆನ್ನ ಹೃದಯಾಬ್ಜದೊಳ್
ತಿರನಿಂದು ಶ್ರೀವಿಷ್ಣು ಮದನಗೋಪಾಲ
ಲೀಲಾಮಾತ್ರದಿಂ ಚಿತ್ರದಿಂ'

ಈ ಮೇಲಿನ ಪದ್ಯವನ್ನು ಚಿತ್ರಭಾರತ ಗ್ರಂಥದಿಂದಲೆ ಆಯ್ದುಕೊಳ್ಳಲಾಗಿದೆ. ಇಲ್ಲಿ ಹರಿಭಕ್ತಿಯನ್ನು ಕೊಂಡಾಡುವಲ್ಲಿ ಚಿತ್ರಕಲೆಯನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ. ಈ ಕಾಲದ ಇನ್ನೊಬ್ಬ ಕವಿಯಾದ ಷಡಕ್ಷರ ದೇವನು ಗುರುರಗಳೆ, ಬಸವರಾಜ ವಿಜಯ, ರಾಜಶೇಖರ ವಿಳಾಸ, ಶಬರಶಂಕರ ವಿಳಾಸ ಮತ್ತು ಸ್ವರವಚನಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಸಾಂದರ್ಭಿಕವಾಗಿ ಚಿತ್ರಕಲೆಯ ಸಂಗತಿಗಳು ಕಂಡುಬಂದಿವೆ.[೯೯] ಅದರಲ್ಲಿ ರಾಜಶೇಖರ ವಿಳಾಸವು ಹೆಚ್ಚಿನ ಚಿತ್ರಕಲಾ ಅಂಶಗಳನ್ನು ಒಳಗೊಂಡಿದೆ. ಇದರಲ್ಲಿ ಬಣ್ಣ. ಆಕಾರ, ಚಿತ್ರಭಿತ್ತಿ, ಚಿತ್ರಪಟ, ಕುಂಚಗಳು, ಸೌಂದರ್ಯ, ಅಲಂಕಾರ, ರಸ ಮುಂತಾದ ಸಂಗತಿಗಳು ಉಲ್ಲೇಖಿತಗೊಂಡಿವೆ. ಈ ಶತಮಾನದ ಕವಿಯಾದ ದೇವಚಂದ್ರನು 'ರಾಜಾವಳಿ ಕಥೆ' ಎಂಬ ಕೃತಿ ರಚನೆ ಮಾಡಿದ್ದಾನೆ. ಇದರಲ್ಲಿಯೂ ಕಲೆಯ ಅಂಶಗಳಿವೆ :

'ಕೊಲಲೆಂದು ಬಂದು ಲೆಪ್ಪದ
ತಲೆಯಿಂ ಕೊಂಡೊಯ್ದನಾ ವಿಭೀಷಣರಾಯಂ'

ಇಲ್ಲಿ ವಿಭೀಷಣನು ದಶರಥನನ್ನು ಕೊಲ್ಲಲು ಬಂದು ಚಿತ್ರದಲ್ಲಿನ ದಶರಥನನ್ನೆ ನಿಜವಾದ ದಶರಥನೆಂದು ಬ್ರಮಿಸಿ ಅದರ ತಲೆಯನ್ನು ಕಡಿದುಕೊಂಡು ಹೋಗುತ್ತಾನೆ.

---

೯೯. ಡಾ.ಯಾದಪ್ಪ ಪರದೇಶಿ: ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಪುಟ-೪೫

ಕ್ರಿ.ಶ. ೧೭ನೇ ಶತಮಾನದಲ್ಲಿ ಸಂಚಿಹೊನ್ನಮ್ಮ 'ಹದಿಬದೆಯ ಧರ್ಮ' ಎಂಬ ಸಾಂಗತ್ಯ ಕೃತಿಯನ್ನು ರಚಿಸಿದ್ದಾಳೆ, ಇದರಲ್ಲಿಯೂ ಅನೇಕ ಚಿತ್ರಕಲಾ ಅಂಶಗಳು ಸಾಂದರ್ಭಿಕವಾಗಿ ಉಲ್ಲೇಖಗೊಂಡಿವೆ.

'ಬಲುಮೆಗೈಯದ ಬಾಲೆಯ ಬಣ್ಣವಾತಿನಿಂ,
ಜೀವಿತೇಶ್ವರನ ವಿಗ್ರಹದೊಳು ಸೆಜ್ಜೆಯ
ಭಾವಿಸಿ ಬಣ್ಣಗುಂದುವಳು'

ಈ ಪದ್ಯದಲ್ಲಿ ಬಣ್ಣ, ಆಕಾರ, ಶಿಲ್ಪಕಲೆ, ಚಿತ್ರಕಲೆಯಂತಹ ಸಂಗತಿಗಳು ಸಾಂದರ್ಭಿಕವಾಗಿ ಹೇಳಲ್ಪಟ್ಟಿವೆ. ಈ ಕಾಲದ ಕವಿ ಮತ್ತು ತತ್ವಜ್ಞಾನಿಯಾಗಿದ್ದ 'ಚಿದಾನಂದಾವಧೂತ' ಸುಮಾರು ಹದಿಮೂರು ಕೃತಿಗಳನ್ನು ಬರೆದಿದ್ದಾನೆ.[೧೦೦] ಈತನ ಕೃತಿಗಳಲ್ಲಿ 'ಜ್ಞಾನಸಿಂಧು' ಮಹತ್ವದ ಕೃತಿಯಾಗಿದೆ. ಇದರಲ್ಲಿ ಆತ್ಮಜ್ಞಾನದ ಬಗ್ಗೆ ಪ್ರಮುಖವಾಗಿ ಚರ್ಚಿಸಲಾಗಿದೆ. ಆತ್ಮ, ಪರಮಾತ್ಮ, ಜಗತ್ತು ಇವುಗಳ ಸಂಬಂಧಗಳನ್ನು ಭಿನ್ನ ರೀತಿಯಲ್ಲಿ ಹೇಳಿದೆ. ಈ ನಿಟ್ಟಿನಲ್ಲಿ ದೇಹದ ಪ್ರತಿಯೊಂದು ಅಂಗಗಳು ಯಾವ ಕೆಲಸ ಮಾಡುತ್ತವೆ ಎಂಬುದನ್ನು ಹೇಳಿ, ಪ್ರತಿಯೊಂದು ಅಂಗ ಮತ್ತು ಅದು ನಿರ್ವಹಿಸುವ ಕ್ರಿಯೆಗಳಿಗೆ ಪ್ರತ್ಯೇಕ ಬಣ್ಣಗಳನ್ನು ಸೂಚಿಸಲಾಗಿದೆ. ಅದರ ಸ್ಥೂಲರೂಪ ಕೆಳಗಿನಂತಿದೆ.

| | |
|---|---|
| ಹೊಕ್ಕಳು | : **ಕಪ್ಪುಬಣ್ಣ** – ತಿಂದದ್ದನ್ನು ಸಮನಾಗಿ ಹಂಚುವುದು. |
| ಅನ್ನಾಂಗ | : **ಬಿಳಿಬಣ್ಣ** – ಅರಗಿದುದನ್ನು ರೋಮಗಳಿಗೆ ತಲುಪಿಸುವುದು |
| ಕಂಠ | : **ಎಳೆಮಿಂಚು** – ಸೀನು, ಕೆಮ್ಮು, ಮುಂತಾದ ಕ್ರಿಯೆ |
| ಅಧೋದ್ವಾರ | : **ಕಾಮನ ಬಿಲ್ಲಿನ ಬಣ್ಣ** – ಮಲವಿಸರ್ಜನೆ |
| ಹೃದಯ | : **ಇಂದ್ರನೀಲ** – ಉಸಿರಾಟ |
| ರೋಮಗಳು | : **ಹಳದಿ** – ಚೇಷ್ಟೆ, ತುಂಟತನ |
| ಹೊಟ್ಟೆ | : **ಬಿಳಿ** – ಮುದುಡುವಿಕೆ, ವಿಕಾಸ, ಕಣ್ಣು, ಬಾಯಿ ತೆರೆಯುವುದು |
| ಮೂಗಿನತುದಿ | : **ಕಪ್ಪು** – ಹಸಿವು, ಬಾಯಾರಿಕೆ, ಇತ್ಯಾದಿ |
| ಸೊಂಟ, ಗುಹ್ಯ | : **ಸ್ಫಟಿಕ** – ಮಲಗುವುದು, ಕೂಡುವುದು |
| ಬ್ರಹ್ಮ ರಂಧ್ರ | : **ನೀಲ** – ಕಿವಿಯಲ್ಲಿ ಶಬ್ದ ಬರುವುದು |

ಈ ರೀತಿ ಪ್ರತಿಯೊಂದು ಅಂಗಗಳಿಗೆ ಬಣ್ಣಗಳನ್ನು ಸೂಚಿಸಿರುವುದು ವಿಭಿನ್ನ ಕಲ್ಪನೆಯಾಗಿದ್ದು ಕಲಾ ಸಾಹಿತ್ಯದ ದೃಷ್ಟಿಯಿಂದ ಮಹತ್ವದ್ದಾಗಿದೆ.

ಕ್ರಿ.ಶ. ೧೭ನೇ ಶತಮಾನದಲ್ಲಿ ಕೆಳದಿಯ ಬಸವ ಭೂಪಾಲನಿಂದ ವಿರಚಿತವಾದ 'ಶಿವತತ್ವ ರತ್ನಾಕರ'ವು ಒಂದು ವಿಶ್ವಕೋಶ ಮಾದರಿಯ ಗ್ರಂಥವಾಗಿದೆ.[೧೦೧] ಇದರಲ್ಲಿ ಹಲವಾರು ವಿಷಯಗಳನ್ನು ಹೇಳುವುದರ ಜೊತೆಗೆ ಚಿತ್ರಕಲೆಯ ಕುರಿತು ವಿವೇಚಿಸಲಾಗಿದೆ. ನಾಟ್ಯಶಾಲೆಯ ಗೋಡೆಗಳ ಮೇಲೆ ಭಿತ್ತಿಚಿತ್ರ ರಚಿಸುವುದು, ಅದರಲ್ಲಿ ಭಿತ್ತಿ ತಯಾರಿಕೆ ವಿಧಾನ, ಪರಿಕರಗಳು, ಚಿತ್ರರಚನಾ ಕ್ರಮ ಹಾಗೂ ಅದರ ಪರಿಕರಗಳಾದ ಕುಂಚ, ಬಣ್ಣ, ಅಂಟುದ್ರಾವಕ ಇವುಗಳ ತಯಾರಿಕೆ, ಕಲಾವಿದ ಮತ್ತು ಆತನ ಕಲಾಶೈಲಿ ಇವುಗಳ ಬಗ್ಗೆ ಪ್ರತ್ಯೇಕ ಅಧ್ಯಾಯದಲ್ಲಿ ಹೇಳಲಾಗಿದೆ. ಇಂತಹ ಅಂಶಗಳಿಂದಾಗಿ ಚಿತ್ರಕಲಾ ಸಾಹಿತ್ಯದ ಐತಿಹಾಸಿಕ ನೆಲೆಯಲ್ಲಿ ಶಿವತತ್ವರತ್ನಾಕರವು ಮಹತ್ವದ ಸಾಹಿತ್ಯ ಕೃತಿಯಾಗಿ ಕಂಡುಬರುತ್ತದೆ.

---

೧೦೦. ಡಾ.ಜಿ.ಎಸ್.ಶಿವರುದ್ರಪ್ಪ : (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪) : ಪುಟ-೧೭೭.
೧೦೧. ಪ್ರೊ.ಮಲ್ಲೇಶ್ವರಂ.ಜಿ.ವೆಂಕಟೇಶ (ಅನು) : ಶಿವತತ್ವ ರತ್ನಾಕರ : ಕನ್ನಡ ವಿಶ್ವವಿದ್ಯಾಲಯ ಹಂಪಿ-೧೯೯೯

ಈ ಶತಮಾನದಲ್ಲಿ ಕರ್ನಾಟಕದಲ್ಲಿ ರಚನೆಯಾದ ಅನೇಕ ಭಿತ್ತಿಚಿತ್ರಗಳು ಶಿವತತ್ವರತ್ನಾಕರ ಗ್ರಂಥದಲ್ಲಿ ಕೊಡಲಾದ ಪ್ರಾಯೋಗಿಕ ವಿವರಗಳಿಗೆ ಹೆಚ್ಚು ಸಮೀಪವಾಗಿವೆ[೧೦೨] ಎಂಬುದು ಇಲ್ಲಿ ಗಮನಿಸಬೇಕಾದ ಅಂಶವಾಗಿದೆ. ಈ ಕಾಲಾವಧಿಯಲ್ಲಿ ಕರ್ನಾಟಕದಲ್ಲಿ ಶ್ರವಣಬೆಳಗೊಳದ ಚಾರುಕೀರ್ತಿ ಪಂಡಿತಾಚಾರ್ಯರ ಮಠ, ಶಿಬಿಯ ನರಸಿಂಹಸ್ವಾಮಿ ದೇವಾಲಯ, ಶ್ರೀರಂಗಪಟ್ಟಣದ ದರಿಯಾದೌಲತ್, ಚನ್ನಪಟ್ಟಣ ತಾಲೂಕಿನ ತಿಪ್ಪೋಜಿ ಅರಮನೆ, ಮಾಗಡಿಯ ಸೋಮೇಶ್ವರ ದೇವಾಲಯ, ಬೆಟ್ಟದಪುರ ಸಿಡ್ಲುಮಲ್ಲಿಕಾರ್ಜುನ ದೇವಾಲಯ, ಕೊಡಗಿನ ನಾಲ್ಕುನಾಡು ಅರಮನೆ, ನರಗುಂದ ಬಾಬಾಸಾಹೇಬನ ಅರಮನೆ, ಗುಳೇದಗುಡ್ಡದ ಗೌಡರಮನೆ, ಅಮ್ಮಿನಭಾವಿಯ ವೀರಶೈವಮಠ, ಮಹಾಲಿಂಗಪುರ ಮಠ, ಜಮಖಂಡಿಯ ಅರಮನೆ, ಯಡೆಯೂರು ರೇವಣ ಸಿದ್ದೇಶ್ವರ ದೇವಾಲಯ, ಹೀಗೆ ಇನ್ನೂ ಹಲವಾರು ಸ್ಥಳಗಳಲ್ಲಿ ಭಿತ್ತಿಚಿತ್ರಗಳು ರಚನೆಯಾಗಿದ್ದು ಕಂಡುಬರುತ್ತವೆ. ಇವುಗಳಿಂದ ಆ ಕಾಲದ ಕಲಾಸಾಹಿತ್ಯದ ಬಗೆಗೆ ತಿಳಿದುಕೊಳ್ಳಬಹುದಾಗಿದೆ.

ಕ್ರಿ.ಶ. ೧೮ನೇ ಶತಮಾನದಲ್ಲಿ ಹೆಚ್ಚಿನ ಸಾಹಿತ್ಯ ಕೃಷಿ ನಡೆದಿದೆ ಎಂದು ಹೇಳಬಹುದು. ರಾಯಣ್ಣ, ಕೆಳದಿ ವೆಂಕಣ್ಣ, ಕೋಳೂರು ಶಂಕರಕವಿ, ವೆಂಕಾಮಾತ್ಯ, ಪರಮದೇವ, ಅನಂತಕವಿ, ವಾಸುದೇವಪ್ರಭು, ಶಂಕರ, ಮಾನಮಧುರೆದಾಸ, ಸರ್ಪಭೂಷಣ ಶಿವಯೋಗಿ, ಗುರುಪಾದದೇಶಿಕ, ಅಮೃತೇಶ್ವರ, ಕುಂದಗೋಳ ಬಸವಲಿಂಗ, ಪ್ರಾಣೇಶವಿಠ್ಠಲ, ಮನೋಹರವಿಠ್ಠಲ ಮುಂತಾದ ಅನೇಕ ಕವಿಗಳು, ಅನುಭಾವಿಗಳು, ಈ ಶತಮಾನದಲ್ಲಿ ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಂಡಿದ್ದು, ಅವರೆಲ್ಲರ ಕೃತಿಗಳಲ್ಲಿ ಸಾಂದರ್ಭಿಕವಾಗಿ ಚಿತ್ರಕಲೆಯ ಸಂಗತಿಗಳು ಉಲ್ಲೇಖಗೊಂಡಿವೆ.

ಈ ಕಾಲಮಾನದಲ್ಲಿ ಹಲವಾರು ಜನ ಸಾಹಿತ್ಯ ರಚನೆ ಮಾಡಿದ್ದರೂ ಮುಮ್ಮಡಿ ಕೃಷ್ಣರಾಜ ಒಡೆಯರು ರಚಿಸಿದ ಸಾಹಿತ್ಯ ಮತ್ತು ಅವರ ಆಸ್ಥಾನದ ಕವಿಗಳು ರಚಿಸಿದ ಸಾಹಿತ್ಯ ಕೃತಿಗಳಲ್ಲಿ ಹೆಚ್ಚಿನ ಚಿತ್ರಕಲಾ ಸಂಗತಿಗಳು ಉಲ್ಲೇಖಗೊಂಡಿವೆ. ಅಲ್ಲದೆ ಕೆಲವು ಸಾಹಿತ್ಯ ಕೃತಿಗಳಲ್ಲಿ ಹಸ್ತಪ್ರತಿ ಚಿತ್ರಗಳನ್ನು ಪ್ರತಿಯೊಂದು ಪುಟಕ್ಕೂ ರಚಿಸುವ ಮೂಲಕ ಅವುಗಳನ್ನು ಕಲಾತ್ಮಕವಾಗಿಸಲು ಪ್ರಯತ್ನಿಸಿದ್ದಾರೆ. ಇದು ಅಂದಿನ ಚಿತ್ರಕಲಾ ಸಾಹಿತ್ಯವನ್ನು ಕಟ್ಟುವಲ್ಲಿ ಮೌಲಿಕವಾದ ಅಂಶವಾಗಿದೆ.

ಮುಮ್ಮಡಿ ಕೃಷ್ಣರಾಜ ಒಡೆಯರು ಒಬ್ಬ ಮಹಾನ್ ವಿದ್ವಾಂಸರಾಗಿದ್ದರಲ್ಲದೆ ಸುಮಾರು ಐವತ್ತು ಕೃತಿಗಳನ್ನು ಸ್ವತಹ ರಚಿಸಿದ್ದಾರೆ.[೧೦೩] ಸಾಹಿತ್ಯ, ಸಂಗೀತ, ಚಿತ್ರಕಲೆ, ಹೀಗೆ ಹಲವು ಪ್ರಕಾರಗಳಲ್ಲಿ ಪಾಂಡಿತ್ಯ ಪಡೆದುಕೊಂಡಿದ್ದ ಇವರು ಕವಿಗಳು, ಸಾಹಿತಿಗಳು, ಶಿಲ್ಪಿಗಳು, ಚಿತ್ರಕಾರರು, ಸಂಗೀತ ಕಲಾವಿದರು ಹೀಗೆ ವಿವಿಧ ತಜ್ಞರಿಗೆ ಆಶ್ರಯ ನೀಡಿದ್ದರು. ವೀಣೆವೆಂಕಟಸುಬ್ಬಯ್ಯ, ಕುಣಿಗಲ್ ರಾಮಾಶಾಸ್ತ್ರಿ, ಅಳಿಯಲಿಂಗರಾಜ, ಕೆಂಪುನಾರಾಯಣ, ದೇವಲಾಪುರ ನಂಜುಂಡ, ಮೊದಲಾದ ಪಂಡಿತರಿಗೆ ಆಶ್ರಯವಿತ್ತು ಕನ್ನಡದ ಭೋಜನೆಂದು ಹೆಸರುವಾಸಿಯಾಗಿದ್ದರು. ಚಿತ್ರಕಲೆಯ ಬಗೆಗೆ ವಿಶೇಷ ಆಸಕ್ತಿ ಹೊಂದಿದ ಮುಮ್ಮಡಿ ಕೃಷ್ಣರಾಜರು ಸಾಹಿತ್ಯ ಕೃತಿಗಳಲ್ಲಿ ಹಸ್ತಪ್ರತಿ ಚಿತ್ರಗಳನ್ನು ಬರೆಸಿದ್ದಾರೆ.

ಮುಮ್ಮಡಿ ಕೃಷ್ಣರಾಜ ಒಡೆಯರು ರಚಿಸಿದ ಸಾಹಿತ್ಯವನ್ನು ಸ್ಥೂಲವಾಗಿ ಐದು ಭಾಗಗಳಲ್ಲಿ ವಿಂಗಡಿಸಬಹುದು. ೧. ಗದ್ಯಸಾಹಿತ್ಯ ೨. ಇತಿಹಾಸ ಹಾಗೂ ಪುರಾಣ ಸಾಹಿತ್ಯ ೩. ಮಹಾತ್ಮೆಗಳು ೪. ಶಾಸ್ತ್ರೀಯ ಕೃತಿಗಳು ೫. ಹಾಡುಗಳು ಈ ಎಲ್ಲ ಪ್ರಕಾರದ ಸಾಹಿತ್ಯ ಕೃತಿಗಳಲ್ಲಿ ಸಾಂದರ್ಭಿಕವಾಗಿ

೧೦೨. ಡಾ.ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಪುಟ-೧೨೫

೧೦೩. ಡಾ.ಜಿ.ಎಸ್.ಶಿವರುದ್ರಪ್ಪ : (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೪) : ಪುಟ-೨೧೫.

ಚಿತ್ರಕಲೆಯ ಉಲ್ಲೇಖಗಳು ಕಂಡುಬಂದಿವೆ. ಈ ಮೇಲಿನ ಐದು ವಿಭಾಗಗಳಲ್ಲಿ ನಾಲ್ಕನೆಯದಾದ ಶಾಸ್ತ್ರೀಯ ಕೃತಿಗಳಲ್ಲಿ ನಿಘಂಟುಗಳು, ಸಂಗೀತ, ಮಂತ್ರಶಾಸ್ತ್ರ, ಸಾಮುದ್ರಿಕಶಾಸ್ತ್ರ, ಚಿತ್ರಕಲೆ, ಶಿಲ್ಪಕಲೆ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಕೃತಿಗಳು ಒಳಗೊಳ್ಳುತ್ತವೆ.

ಮುಮ್ಮಡಿಯವರ ಗದ್ಯಕೃತಿಗಳಲ್ಲಿ ಕೆಲವನ್ನು ಈ ಕೆಳಗಿನಂತೆ ಹೆಸರಿಸಬಹುದು. 'ಸೌಗಂಧಿಕಾ ಪರಿಣಯ' ಇದು ೩೬ ಅಧ್ಯಾಯಗಳುಳ್ಳ ಬೃಹತ್ ಗ್ರಂಥವಾಗಿದೆ. ದೂರ್ವಾಸರ ಶಾಪದಿಂದ ದೇವೇಂದ್ರನೆ ಈ ಕಥೆಯ ನಾಯಕನಾದ ಸುಗಂಧರಾಯನಾಗಿ ಹುಟ್ಟುತ್ತಾನೆ. ಶಚಿದೇವಿಯೇ ಸೌಗಂಧಿಕೆಯಾಗಿ ಹುಟ್ಟುತ್ತಾಳೆ. ಇವರಿಬ್ಬರ ಪರಿಣಯವೇ ಕಥಾವಸ್ತು ಹಸ್ತಪ್ರತಿ ಚಿತ್ರಗಳನ್ನು ಪ್ರತಿ ಪುಟದಲ್ಲಿಯೂ ಹೊಂದಿದ ಈ ಗ್ರಂಥ ಚಿತ್ರಕಲಾ ಇತಿಹಾಸದ ದೃಷ್ಟಿಯಿಂದ ಮಹತ್ವದ್ದಾಗಿದೆ. ಇದರಲ್ಲಿನ ಚಿತ್ರಗಳು, ಕಲಾಶೈಲಿ, ವಸ್ತುವಿಷಯ, ತಂತ್ರಗಾರಿಕೆ ಮುಂತಾದ ಹಲವಾರು ಸಂಗತಿಗಳ ಬಗ್ಗೆ ಇದೆ ಪ್ರಬಂಧದ ಮೂರನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ಚರ್ಚಿಸಲಾಗಿದೆ.

'ವತ್ಸರಾಜನ ಕಥೆ' ಎಂಬ ಗ್ರಂಥವು ೭೦ ಭಾಗಗಳನ್ನು ಹೊಂದಿದ ಬೃಹತ್ ಕೃತಿಯಾಗಿದೆ. ಇದಕ್ಕೆ ಶ್ರೀಕೃಷ್ಣರಾಜ ಸೂಕ್ತ ಮುಕ್ತಾವಳಿ ಎಂಬುದಾಗಿಯೂ ಕರೆಯಲಾಗುತ್ತದೆ.[೧೦೪] ಸೂರ್ಯಾಸ್ತ, ಸೂರ್ಯೋದಯ, ಚಂದ್ರೋದಯ, ಅಷ್ಟಾದಶ ವರ್ಣನೆ, ಹಿಮವತ್ ಪರ್ವತ, ಉದ್ಯಾನ, ಅರಮನೆ, ದೇವಾಲಯ ಮುಂತಾದವುಗಳನ್ನು ವರ್ಣಿಸುವಾಗ ಚಿತ್ರಕಲೆಯ ಉಲ್ಲೇಖಗಳು ಈ ಗ್ರಂಥದಲ್ಲಿ ಕಂಡುಬರುತ್ತವೆ. ಶಾಕುಂತಲಾ ನಾಟಕ ನವೀನ ಟೀಕೆ ಎಂಬ ಕೃತಿಗೆ 'ಕೃಷ್ಣವಿಲಾಸ ರತ್ನಾಕರ' ಎಂಬ ಹೆಸರೂ ಉಂಟು. ಕಾಳಿದಾಸನ ಶಾಕುಂತಲ ನಾಟಕವನ್ನು ಗದ್ಯರೂಪದಲ್ಲಿ ಅನುವಾದಿಸಿದ ಕೃತಿ ಇದಾಗಿದೆ. ಒಟ್ಟು ನಾಲ್ಕು ಕಲ್ಲೋಲ ಮತ್ತು ಪ್ರತಿಯೊಂದು ಕಲ್ಲೋಲದಲ್ಲಿ ನಾಲ್ಕರಂತೆ ಹದಿನಾರು ತರಂಗಗಳಿವೆ. ಕಣ್ವಾಶ್ರಮ ವರ್ಣನೆ, ಅರಣ್ಯ ಸೌಂದರ್ಯ, ಶಕುಂತಲೆಯ ರೂಪಲಾವಣ್ಯ, ಲತಾಮಂಟಪದ ವರ್ಣನೆ, ವಿರಹದಿಂದ ಬಳಲುವ ದುಶ್ಯಂತನ ಪ್ರಲಾಪ ಸಂದರ್ಭಗಳಲ್ಲಿ ಚಿತ್ರಕಲೆಯ ಉಲ್ಲೇಖಗಳು ಈ ಗ್ರಂಥದಲ್ಲಿ ಕಂಡುಬರುತ್ತವೆ. ಈ ಕೃತಿಯ ನಾಲ್ಕನೆಯ ಕಲ್ಲೋಲವು ದುಶ್ಯಂತರಾಜನು ಶಾಕುಂತಲೆಯನ್ನು ತಿರಸ್ಕರಿಸಿದ ಸಂದರ್ಭದಿಂದ ಆರಂಭಗೊಳ್ಳುತ್ತದೆ. ಶಾಕುಂತಲೆಯನ್ನು ತಿರಸ್ಕರಿಸಿದ ದುಶ್ಯಂತನು ವಿರಹದ ಉನ್ಮಾದದಿಂದ ಪರಿತಪಿಸುತ್ತಿರಲು ಸೇವಕಿಯೊಬ್ಬಳು ಇದನ್ನು ನೋಡಲಾರದೆ ಶಾಕುಂತಲೆ ಭಾವಚಿತ್ರ ಇರುವ ಚಿತ್ರಪಟವನ್ನು ತಂದುಕೊಡುತ್ತಾಳೆ. ಇದನ್ನು ನೋಡಿ ದುಶ್ಯಂತನ ವಿರಹತಾಪ ತಣಿಯಿತೆಂದು ಹೇಳಲಾಗಿದೆ.

'ಪಂಚತಂತ್ರ' ಕೃತಿಯನ್ನು ಬಾಲರ ಹಿತಾರ್ಥದ ಸಲುವಾಗಿ ಬರೆದಿದ್ದೇನೆ ಎಂದು ಮುಮ್ಮಡಿಯವರು ಹೇಳಿಕೊಂಡಿದ್ದಾರೆ. ಇವರ ಪಂಚತಂತ್ರಕ್ಕೆ ವಿಷ್ಣುಶರ್ಮನ ಪಂಚತಂತ್ರ ಕಥೆಗಳೇ ಆಧಾರವಾಗಿವೆ. ಗದ್ಯರೂಪದಲ್ಲಿರುವ ಈ ಕಥಾಗುಚ್ಛದಲ್ಲಿ ಹಲವಾರು ಕಡೆಗಳಲ್ಲಿ ಕಲೆಯ ಉಲ್ಲೇಖಗಳು ದೊರಕುತ್ತವೆ. ಇವುಗಳಲ್ಲದೆ ವಿಕ್ರಮೋರ್ವಶೀಯ, ಮಾಳವಿಕಾಗ್ನಿಮಿತ್ರ, ಹರಿಶ್ಚಂದ್ರೋಪಾಖ್ಯಾನ, ಮುಂತಾದ ಕೃತಿಗಳ ಗದ್ಯಾನುವಾದವನ್ನು ಮಾಡಿರುವ ಮುಮ್ಮಡಿಯವರು ಅವುಗಳಲ್ಲಿ ಸಾಂದರ್ಭಿಕವಾಗಿ ಚಿತ್ರಕಲೆಯ ಉಲ್ಲೇಖಗಳನ್ನು ಬಳಸಿಕೊಂಡಿದ್ದಾರೆ. ಹಾಗಾಗಿ ಈ ಕೃತಿಗಳೂ ಸಹಿತ ಚಿತ್ರಕಲಾ ಸಾಹಿತ್ಯದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ ಎನ್ನಬಹುದು.

---

೧೦೪. ಡಾ.ಜಿ.ಎಸ್.ಶಿವರುದ್ರಪ್ಪ : (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : (ಸಂಪುಟ-೫) : ಪುಟ-೨೧೭

ಮುಮ್ಮಡಿಯವರ ಪುರಾಣ ಇತಿಹಾಸಗಳ ಸಾಹಿತ್ಯ ವಿಭಾಗದಲ್ಲಿ ರಾಮಕಥಾ ಕಲ್ಪವೃಕ್ಷ, ಶ್ರೀಕೃಷ್ಣ ಕಥಾರತ್ನಾಕರ, ಅಧ್ಯಾತ್ಮ ರಾಮಾಯಣ, ಭಾರತ, ರಾಮಾಯಣ ತಾತ್ಪರ್ಯ ದೀಪಿಕಾ ಟೀಕೆ, ಶ್ರೀಮದ್ಭಾಗವತ ಕನ್ನಡ ಟೀಕು ಮುಂತಾದ ಕೃತಿಗಳನ್ನು ಹೆಸರಿಸಬಹುದು. ರಾಮಕಥಾ ಕಲ್ಪವೃಕ್ಷವು ಗದ್ಯರೂಪದ ಕೃತಿಯಾಗಿದೆ. ಇದರಲ್ಲಿ 'ಸ್ತಬಕ' ಗಳೆಂಬ ವಿಭಾಗಗಳನ್ನು ಮಾಡಿಕೊಂಡು ವಿಷಯ ನಿರೂಪಣೆ ಮಾಡಲಾಗಿದೆ. ಈ ಗ್ರಂಥದಲ್ಲಿ ವಂಶಾವತರಣ, ಶ್ರೀರಾಮಜನನ, ವಿಶ್ವಾಮಿತ್ರ ಯಜ್ಞಸಂರಕ್ಷಣ, ಸೀತಾಕಲ್ಯಾಣ, ದಂಡಕಾರಣ್ಯ ವರ್ಣನೆ, ಲಂಕಾಪಟ್ಟಣದ ವರ್ಣನೆ ಹೀಗೆ ಹಲವು ಸಂದರ್ಭಗಳಲ್ಲಿ ಚಿತ್ರಕಲೆಯ ಉಲ್ಲೇಖಗಳು ಸಾಂದರ್ಭಿಕವಾಗಿ ಬರುತ್ತವೆ.

'ಶ್ರೀಕೃಷ್ಣ ಕಥಾರತ್ನಾಕರ' ಗ್ರಂಥವು ಎರಡು ಕಲ್ಲೋಲಗಳನ್ನು ಹೊಂದಿದೆ. ಪ್ರತಿಯೊಂದು ಕಲ್ಲೋಲಗಳಲ್ಲಿ ಆರು ತರಂಗಗಳಿವೆ. ಈ ಕೃತಿಯಲ್ಲಿ ಅನೇಕ ಕಡೆಗಳಲ್ಲಿ ಕಲೆಯ ಸಾಂದರ್ಭಿಕ ಉಲ್ಲೇಖಗಳು ಕಂಡುಬರುತ್ತವೆ. ಕೃಷ್ಣನ ವಂಶಾವತರಣ, ಶ್ರೀಕೃಷ್ಣನ ಬಾಲಲೀಲೆ, ಗೋಪಿಕಾ ಸ್ತ್ರೀಯರ ವಸ್ತ್ರಾಪಹರಣ, ಗೋವರ್ಧನ ಗಿರಿಧಾರಣ, ವಿಶ್ವಕರ್ಮನಿಂದ ದ್ವಾರಕೆಯ ನಿರ್ಮಾಣ, ದ್ವಾರಕಾಪುರದಲ್ಲಿ ಯಜ್ಞ ಮಾಡಿದ್ದು ಹೀಗೆ ಹಲವು ಸಂದರ್ಭಗಳಲ್ಲಿ ಕಲೆಯ ಅಂಶಗಳು ಈ ಗ್ರಂಥದಲ್ಲಿ ಉಲ್ಲೇಖಿಸಲ್ಪಟ್ಟಿವೆ.

'ಅಧ್ಯಾತ್ಮ ರಾಮಾಯಣವು' ಬ್ರಹ್ಮಾಂಡ ಪುರಾಣದಿಂದ ಆಯ್ದ ಭಾಗವಾಗಿದೆ. ಇದು ಉಮಾಮಹೇಶ್ವರರ ಸಂವಾದ ರೂಪದಲ್ಲಿದ್ದು, ಆರಂಭದಲ್ಲಿ ಮೈಸೂರು ರಾಜರ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಹೇಳಲಾಗಿದೆ. ಈ ಗ್ರಂಥವು ಸರ್ವರಿಗೂ ಆನಂದ ಮತ್ತು ಸಕಲ ಫಲಗಳನ್ನು ಕೊಡುವುದಾಗಿದೆ. ಅಲ್ಲದೆ ನವರಸಗಳ ಪೂರಣದಂತಿರುವ ಇದು ವಿದ್ವಜ್ಜನರಿಗೆ ಕಲಾವಂತರಿಗೆ ಪ್ರಿಯವಾದ ಕೃತಿಯಾಗಿದೆ ಎಂದು ಆರಂಭದಲ್ಲಿ ಹೇಳಲಾಗಿದೆ.

ಮುಮ್ಮಡಿಯವರ ಮಹಾತ್ಮೆಗಳು ಕುರಿತ ಗ್ರಂಥಗಳಲ್ಲಿಯೂ ಕಲಾ ಅಂಶಗಳಿವೆ. ಅಖಂಡ ಕಾವೇರಿ ಮಹಾತ್ಮೆ ಎಂಬ ಕೃತಿಯಲ್ಲಿ ಸಹ್ಯಪರ್ವತ, ಬ್ರಹ್ಮಗಿರಿಯ ಬೆಟ್ಟ, ಅಗಸ್ತ್ಯನ ಆಶ್ರಮ ವರ್ಣನೆಗಳಲ್ಲಿ ಚಿತ್ರಕಲೆಯ ಸಾಂದರ್ಭಿಕವಾದ ಉಲ್ಲೇಖವು ಕಂಡುಬರುತ್ತದೆ. ಇದರಂತೆ ಇವರು ಬರೆದ ದೇವಿಮಹಾತ್ಮೆ, ಅರ್ಕಪುಷ್ಕರಣಿ ಮಹಾತ್ಮೆ, ಪಶ್ಚಿಮ ರಂಗನಾಥ ಮಹಾತ್ಮೆ, ಚುಂಚನಕಟ್ಟೆ ಮಹಾತ್ಮೆ, ಕಾಶೀ ಮಹಿಮಾರ್ಥ ದರ್ಪಣ, ಗಯಚರಿತ್ರೆ ಟೀಕು, ಸಿರಿನಂಜುಂಡ ಶತಕ ಮುಂತಾದ ಕೃತಿಗಳಲ್ಲಿ ಕಲೆಯ ಅಂಶಗಳು ಸಾಂದರ್ಭಿಕವಾಗಿ ಕಂಡುಬರುತ್ತವೆ.

ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಗದ್ಯಕಾವ್ಯ ಸಾಹಿತ್ಯಗಳಲ್ಲಿ ಅಭಿರುಚಿ ಇದ್ದ ಹಾಗೆ ಶಾಸ್ತ್ರೀಯ ಕೃತಿಗಳನ್ನು ರಚಿಸುವಲ್ಲಿಯೂ ಸಮಾನ ಆಸಕ್ತಿ ಕಂಡುಬರುತ್ತದೆ. ಸಂಗೀತ, ಶಿಲ್ಪ, ವಾಸ್ತು ಮತ್ತು ಚಿತ್ರಕಲೆಗಳಂತಹ ಶಾಸ್ತ್ರೀಯ ಕೃತಿಗಳನ್ನು ಇವರು ರಚಿಸಿದ್ದಾರೆ. ಶ್ರೀತತ್ವನಿಧಿ, ಸಂಖ್ಯಾರತ್ನಮಾಲಾ, ಸಾಮುದ್ರಿಕಾ ಶಾಸ್ತ್ರ, ಭರತಸಾರ ಸಂಗ್ರಹ ಟೀಕೆ, ಚಾಮುಂಡಿಕಾ ನಿಘಂಟು, ಮೊದಲಾದ ಈ ಪ್ರಕಾರದ ಕೃತಿಗಳು ಇವರಿಂದ ರಚಿಸಲ್ಪಟ್ಟಿವೆ.

'ಶ್ರೀತತ್ವನಿಧಿ'ಯು ಮುಮ್ಮಡಿಯವರ ಕಲಾ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಇದರಲ್ಲಿ ಶಕ್ತಿನಿಧಿ, ವಿಷ್ಣುನಿಧಿ, ಶಿವನಿಧಿ, ಗ್ರಹನಿಧಿ, ವೈಷ್ಣವನಿಧಿ, ಶೈವನಿಧಿ, ಆಗಮನಿಧಿ, ಹೀಗೆ ಒಂಭತ್ತು ನಿಧಿಗಳಾಗಿ ವಿಂಗಡಿಸಿಕೊಂಡು ವಿಷಯ ಪ್ರಸ್ತುತ ಪಡಿಸಲಾಗಿದೆ. ಈ ಗ್ರಂಥವು ಚಿತ್ರಕಲೆ ಮಾತ್ರವಲ್ಲದೆ ಸಂಗೀತ ಕ್ಷೇತ್ರಕ್ಕೂ ಮಹತ್ವದ್ದಾಗಿದೆ. ಇದರಲ್ಲಿ ಸುಮಾರು ನಾಲ್ಕು ಸಾವಿರ ವರ್ಣಚಿತ್ರಗಳನ್ನು ರಚಿಸಲಾಗಿದೆ. ರಾಗಮಾಲಾ ಸರಣಿ ಚಿತ್ರಗಳಾಗಿ ಇಲ್ಲಿನ ಚಿತ್ರಗಳನ್ನು ರೂಪಿಸಲಾಗಿದೆ. ಪ್ರತಿಯೊಂದು

ರಾಗಕ್ಕೂ ಒಂದೊಂದು ಪ್ರತ್ಯೇಕ ಕಲಾಕೃತಿಗಳನ್ನು ಬಿಡಿಸಲಾಗಿದೆ. ರಾಗದ ಭಾವವು ಪ್ರೇಕ್ಷಕನ ಮೇಲೆ ಉಂಟುಮಾಡುವ ಪರಿಣಾಮಗಳ ಹಿನ್ನೆಲೆಯಲ್ಲಿ ವರ್ಣಲೇಪನ ಮಾಡಲಾಗಿದೆ. ಅಲ್ಲದೆ ಆಯಾ ರಾಗಕ್ಕೆ ಅನುಸಾರವಾಗಿ ನಾಯಕ ನಾಯಕಿಯರನ್ನು ಚಿತ್ರಿಸುವ ಮೂಲಕ ತೀವ್ರ ಪರಿಣಾಮ ಉಂಟು ಮಾಡಲಾಗಿದೆ. ಈ ಪುಸ್ತಕದ ಕುರಿತು ಮೂರನೆಯ ಅಧ್ಯಾಯದಲ್ಲಿ ಹೆಚ್ಚಿನ ವಿವರ ಕೊಡಲಾಗಿದೆ.

ಸಂಖ್ಯಾರತ್ನಮಾಲಾ ಎಂಬ ಕೃತಿಯು ವೇದಶಾಸ್ತ್ರ, ಪುರಾಣ, ಜೋತಿಷ್ಯ, ವೈದ್ಯ, ಮಂತ್ರಶಾಸ್ತ್ರ, ಧರ್ಮಶಾಸ್ತ್ರ, ಮುಂತಾದ ಪ್ರಕಾರಗಳನ್ನು ಶೋಧಿಸಿ ಬರೆದ ಗ್ರಂಥವಾಗಿದೆ. ಸಪ್ತಸಾಗರಗಳ ವರ್ಣನೆ, ಅಷ್ಟದಿಗ್ಗಜ ವರ್ಣನೆ, ದಶದಿಕ್ಕುಗಳ ವರ್ಣನೆ ಹೀಗೆ ಹಲವು ಸಂದರ್ಭಗಳಲ್ಲಿ ಚಿತ್ರಕಲೆಯ ಅಂಶಗಳು ಸಾಂದರ್ಭಿಕವಾಗಿ ಬಂದಿವೆ. 'ಭರತಸಾರಸಂಗ್ರಹ ಟೀಕೆ' ಇದರಲ್ಲಿ ಸಂಗೀತ, ನಾಟ್ಯ, ಚಿತ್ರ ಮೊದಲಾದ ವಿಷಯಗಳನ್ನು ಹೇಳಲಾಗಿದೆ. ಅನೇಕ ಪೂರ್ವಗ್ರಂಥಗಳಲ್ಲಿರುವ ಸಾರಸಂಗ್ರಹಗಳನ್ನು ಆಯ್ದುಕೊಂಡು ಇದನ್ನು ಬರೆಯಲಾಗಿದೆ ಎಂದು ಕವಿ ತಿಳಿಸುತ್ತಾನೆ. ಇದರಲ್ಲಿ ಚಿತ್ರಕಲೆಯ ಜೊತೆಗೆ ಇನ್ನುಳಿದ ಕಲೆಯ ಬಗ್ಗೆ ಹೇಳುವಾಗಲೂ ಸಾಂದರ್ಭಿಕವಾಗಿ ಚಿತ್ರಕಲೆಯ ಸಂಗತಿಗಳು ಉಲ್ಲೇಖಿಸಲ್ಪಟ್ಟಿವೆ.

'ಚಾಮುಂಡಿಕಾ ನಿಘಂಟು' ಎಂಬ ಕೃತಿಯಲ್ಲಿ ಮೂರು ಪ್ರಕರಣಗಳಿದ್ದು, ೧೨೩೬ ಪದಾರ್ಥಗಳ ಅರ್ಥಗಳನ್ನು ೧೪೭ ಶ್ಲೋಕಗಳಲ್ಲಿ ಹೇಳಲಾಗಿದೆ. ಇದರಲ್ಲಿ ದೇವತಾಯುಧಗಳು, ಪಶುಮೃಗ ಜಾತಿ-ಭೇದಗಳು, ಪಕ್ಷಿಜಾತಿಗಳು, ಜಲಜಂತು ಕೀಟಪ್ರಭೇದಗಳು, ವೃಕ್ಷ ಪ್ರಭೇದ, ಲತಾ-ಬಳ್ಳಿಗಳು, ಪುಷ್ಪಗಳ ರೀತಿಗಳನ್ನು ಹೇಳುವಾಗ ಚಿತ್ರಕಲೆಯ ಉಲ್ಲೇಖ ಸಾಂದರ್ಭಿಕವಾಗಿ ಬಂದಿದೆ. ಇವುಗಳಲ್ಲದೆ ಅವರ ಹಾಡುಗಳಲ್ಲೂ ಕಲೆಯ ಅಂಶಗಳು ಕಂಡುಬರುತ್ತವೆ. ಇವರು ರಚಿಸಿದ ಕೆಲವು ಸಾಹಿತ್ಯ ಕೃತಿಗಳು ಸಾಹಿತ್ಯ ಗುಣಕ್ಕಿಂತ ಅದರಲ್ಲಿನ ಚಿತ್ರಕಲಾ ಕೃತಿಗಳಿಂದಾಗಿಯೇ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಶ್ರೀತತ್ವನಿಧಿ, ಸೌಗಂಧಿಕಾ ಪರಿಣಯಗಳಂತೆ ಕಾಮರತ್ನಾಕರ ಮತ್ತು ಚಿತ್ರಭಾಗವತ ಕೃತಿಗಳೂ ಸಾಂದರ್ಭಿಕವಾಗಿ ಚಿತ್ರಗಳನ್ನು ಹೊಂದಿವೆ. ಇದರಂತೆ ಸ್ವರಶಾಸ್ತ್ರ, ಸೌಗಂಧಿಕಾ ಪರಿಣಯ, ಪದ್ಯಕಾವ್ಯ, ಶ್ರೀಕೃಷ್ಣ ಕಥಾರತ್ನಾಕರ ಮುಂತಾದ ಕೃತಿಗಳು ಸಾಂದರ್ಭಿಕವಾಗಿ ಚಿತ್ರಗಳನ್ನು ಒಳಗೊಂಡಿವೆ. ಹೀಗೆ ಹದಿನೆಂಟನೆ ಶತಮಾನದ ಕರ್ನಾಟಕ ಚಿತ್ರಕಲಾ ಸಾಹಿತ್ಯದಲ್ಲಿ ದೇವಾಂಗ ಮತಕ್ಕೆ ಸೇರಿದ ಮುದ್ದುಸಂಗಸ್ವಾಮಿ 'ಕೊಲ್ಲಿಪಾಕೀ ಮಹಾತ್ಮೆ' ಎಂಬ ಯಕ್ಷಗಾನ ಮತ್ತು 'ದೇವಾಂಗ ಮತ ಪ್ರಕಾಶಿಕೆ' ಎಂಬ ಗ್ರಂಥವನ್ನು ಬರೆದಿದ್ದಾನೆ.[೧೦೫] ಇದರಲ್ಲಿ ದೇವಾಂಗ ಮತ ಪ್ರಕಾಶಿಕೆ ಎಂಬುದು ಚಿತ್ರಕಲೆಯ ದೃಷ್ಟಿಯಿಂದ ಪ್ರಮುಖವಾಗಿದೆ. ಇದರಲ್ಲಿ ಬಣ್ಣಗಳ ಹುಟ್ಟು, ಮೂಲಬಣ್ಣಗಳು, ಮಿಶ್ರಬಣ್ಣಗಳು, ಬಣ್ಣಗಳ ತಯಾರಿಕೆ, ಅವುಗಳ ಅರ್ಥ, ಚಿತ್ರರಚನೆ, ತಾಂತ್ರಿಕತೆ ಮುಂತಾದ ಅಂಶಗಳನ್ನು ಆಧ್ಯಾತ್ಮ ಹಿನ್ನೆಲೆಯಲ್ಲಿ ಹೇಳಲಾಗಿದೆ.

ಇದೆ ಶತಮಾನದಲ್ಲಿ ದೇವಾಂಗ ಮತದ ಮತ್ತೊಬ್ಬ ಅನುಭಾವಿ ರುದ್ರಮುನಿ ಎಂಬವನು ಕಾಲಜ್ಞಾನ ಸಾಹಿತ್ಯವನ್ನು ಪದ್ಯರೂಪದಲ್ಲಿ ಬರೆದಿದ್ದಾನೆ. ಅದರಲ್ಲಿ ಕಲೆಯ ಅಂಶಗಳು ಸಾಂದರ್ಭಿಕವಾಗಿ ಗೋಚರಿಸುತ್ತವೆ. ಶಿಲ್ಪ, ವಾಸ್ತು. ಚಿತ್ರ, ಆಕಾರ, ಬಣ್ಣ, ಸೌಂದರ್ಯ, ರಸ, ಅಲಂಕಾರ, ಔಚಿತ್ಯ ಮುಂತಾದ ಶಬ್ದಗಳು ಈ ಕೃತಿಯಲ್ಲಿ ಕಲೆಯ ಕುರಿತಂತೆ ಬಳಸಲ್ಪಟ್ಟಿವೆ.

---

೧೦೫. ಡಾ.ಜಿ.ಎಸ್.ಶಿವರುದ್ರಪ್ಪ : (ಸಂ) : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ-೫) : ಪುಟ-೪೮೫.

ಕ್ರಿ.ಶ ೧೯ನೇ ಶತಮಾನದಲ್ಲಿ ಅನೇಕರು ಕೃತಿರಚನೆ ಮಾಡಿದ್ದು, ಅವುಗಳಲ್ಲಿಯೂ ಸಾಂದರ್ಭಿಕವಾಗಿ ಕಲೆಯ ಅಂಶಗಳು ವ್ಯಕ್ತಗೊಂಡಿವೆ.[೧೦೬] ಈ ಶತಮಾನದಲ್ಲಿ ಅಳಿಯ ಲಿಂಗರಾಜ, ಹರಪನಹಳ್ಳಿ ಭೀಮವ್ವ, ಗೇರುಸೊಪ್ಪೆ ಶಾಂತಯ್ಯ, ಚಂದ್ರಸಾಗರ ವರ್ಣಿ, ದೇವಲಾಪುರ ನಂಜುಂಡ ಹೀಗೆ ಹಲವರು ಒಬ್ಬೊಬ್ಬರೆ ಹತ್ತಕ್ಕಿಂತ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಅಳಿಯ ಲಿಂಗರಾಜ ಸುಮಾರು ೫೫, ಹರಪನಹಳ್ಳಿ ಭೀಮವ್ವ ೩೦, ದೇವಲಾಪುರ ನಂಜುಂಡ ೧೫ ಕೃತಿಗಳನ್ನು ರಚಿಸಿದ್ದಾರೆ.

ಅಳಿಯ ಲಿಂಗರಾಜನ ಹಲವಾರು ಕೃತಿಗಳಲ್ಲಿ ಸಾಂದರ್ಭಿಕವಾಗಿ ಚಿತ್ರಕಲೆಯ ವಿಪುಲ ಉಲ್ಲೇಖಗಳಿವೆ. 'ಅಂಗದ ಸಂಧಾನ' ಕೃತಿಯಲ್ಲಿ ಅಂಗದನು ರಾವಣನ ಅರಮನೆಗೆ ಬಂದಾಗ ಅವನಿಗೆ ಅರಮನೆ ಹೇಗೆ ಕಲಾತ್ಮಕವಾಗಿ ಕಂಡಿತು ಎಂದು ಹೇಳುವಾಗ ಚಿತ್ರ ಮತ್ತು ಶಿಲ್ಪಕಲೆಯ ಉಲ್ಲೇಖಗಳಿವೆ. 'ದ್ರೌಪದಿ ವಸ್ತ್ರಾಪಹರಣ' ಕೃತಿಯಲ್ಲಿ ಪಾಂಡವರ ಹಸ್ತಿನಾವತಿಯ ಅರಮನೆಯನ್ನು ವರ್ಣಿಸುವಾಗ ಕಲೆಯ ಪ್ರಸ್ತಾಪವಿದೆ, 'ಗಿರಿಜಾಕಲ್ಯಾಣ' ಕೃತಿಯಲ್ಲಿ ಹೇಮಕೂಟ ವರ್ಣಿಸುವಾಗ, 'ರುಕ್ಮಿಣಿ ಸ್ವಯಂವರ' ಕೃತಿಯಲ್ಲಿ ಸ್ವಯಂವರ ಮಂಟಪ ವರ್ಣಿಸುವಾಗ ಕಲೆಯ ಅಂಶಗಳು ಕಂಡುಬರುತ್ತವೆ.

ಹರಪನಹಳ್ಳಿ ಭೀಮವ್ವ ಬರೆದ ಎಲ್ಲ ಕೃತಿಗಳು ಹಾಡುಗಳ ಸಂಗ್ರಹವಾಗಿವೆ. ಇವುಗಳಲ್ಲಿ ಕಲೆಯ ಅಂಶಗಳಿವೆ. ಕೃಷ್ಣಲೀಲಾ, ರತಿಕಲ್ಯಾಣ, ಶಕುಂತಲಾ ಚರಿತ್ರೆ, ಗೌರಿಹಾಡು, ಸುಭದ್ರಾಕಲ್ಯಾಣ ಮುಂತಾದ ಹಾಡುಗಳಲ್ಲಿ ಕಲೆಯ ಉಲ್ಲೇಖಗಳಿವೆ. ಗೇರುಸೊಪ್ಪ ಶಾಂತಯ್ಯನವರ ಕೃತಿಗಳಲ್ಲಿ ಗಿರಿಜಾಕಲ್ಯಾಣ, ದ್ರೋಣಪರ್ವ, ಪುತ್ರಕಾಮೇಷ್ಟಿ, ಭೀಷ್ಮಪರ್ವ, ಸೀತಾಕಲ್ಯಾಣ, ಸುಧನ್ವಕಾಳಗ ಮುಂತಾದ ಕೃತಿಗಳಲ್ಲಿ ಕಲೆಯ ಅಂಶಗಳು ಹೇಳಲ್ಪಟ್ಟಿವೆ. ಈ ಕಾಲದಲ್ಲಿ ಸೋಮನಕಟ್ಟೆ ವೃಷಬೇಂದ್ರಸ್ವಾಮಿ ಎಂಬುವರು ಕೈವಲ್ಯ ಪದಗಳು, ಅಷ್ಟಾವರಣ ತ್ರಿವಿಧ ಕೃತಿಗಳನ್ನು ರಚಿಸಿದ್ದು, ಅದರಲ್ಲೂ ಕಲೆಯ ಅಂಶಗಳಿವೆ.

ಕ್ರಿ.ಶ ೧೯ನೇ ಶತಮಾನದಲ್ಲಿ ಇನ್ನೂ ಹಲವಾರು ಜನ ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದು, ಅವರ ಕೃತಿಗಳಲ್ಲಿ ಕಲಾ ಅಂಶಗಳು ಸಾಂದರ್ಭಿಕವಾಗಿ ಪ್ರಕಟಗೊಂಡಿರುವುದನ್ನು ನೋಡಬಹುದು. 'ನೀರಲಕೇರಿ ಬಸವಲಿಂಗ ಶಿವಯೋಗಿ' ಎಂಬವರು ಹುನಗುಂದ ತಾಲೂಕು ಗುಡೂರಿನವರು. ಇವರು 'ಜ್ಞಾನಗೀತೆ' ಎಂಬ ತತ್ವಪದಗಳನ್ನು ಬರೆದಿದ್ದಾರೆ. ಇದರಲ್ಲಿ ತತ್ವಜ್ಞಾನವನ್ನು ಕುರಿತು ಹೇಳುವಾಗ ಬಣ್ಣ, ಆಕಾರ, ಚಿತ್ರ, ಭಿತ್ತಿ, ಸೌಂದರ್ಯ, ಧ್ವನಿ ಎಂಬಂತಹ ಸಂಗತಿಗಳು ಉಲ್ಲೇಖಿಸಲ್ಪಟ್ಟಿವೆ.

ಶಿಗ್ಗಾಂವ ತಾಲೂಕು ಶಿಶುನಾಳ ಶರೀಫ ಸಾಹೇಬರು ಮುಸ್ಲಿಂ ಧರ್ಮೀಯರಾಗಿದ್ದರೂ ಹಿಂದೂ ತತ್ವಜ್ಞಾನದ ಕುರಿತು ಹಲವಾರು ತತ್ವಪದಗಳನ್ನು ರಚಿಸಿದ್ದಾರೆ. ಅವರ ಅನೇಕ ಹಾಡುಗಳಲ್ಲಿ ಕಲೆಯ ಅಂಶಗಳು ಸಾಂದರ್ಭಿಕವಾಗಿ ಬಂದಿವೆ. ತರವಲ್ಲತಗಿ ನಿನ್ನ ತಂಬೂರಿಸ್ವರ ಬರಿದೆ ಬಾರಿಸದಿರೋ ತಂಬೂರಿ, ಹಾವು ತುಳಿದೇನೆ ಮಾನಿನಿ ಹಾವು ತುಳಿದೇನೆ, ಕೋಡಗನ್ನ ಕೋಳಿನುಂಗಿತ್ತ, ಮೋಹದ ಹೆಂಡ್ತಿ ತೀರಿದ ಮ್ಯಾಲೆ, ಕುಕ್ಕೂ ಎನುತಿದೆ ಬೆಳವ, ಸೋರುತಿಹುದು ಮನೆಯ ಮಾಳಿಗೆ, ಎಂಬಂತಹ ಹಲವಾರು ಹಾಡುಗಳಲ್ಲಿ ವಾಸ್ತು, ಶಿಲ್ಪ, ಚಿತ್ರ, ಬಣ್ಣ, ಸೌಂದರ್ಯ, ಆಕಾರ, ಭಿತ್ತಿ, ಧ್ವನಿ, ಸಂಯೋಜನೆ ಮುಂತಾದ ಸಂಗತಿಗಳು ಹೇಳಲ್ಪಟ್ಟಿವೆ. ಇದರಂತೆ ನವಲಗುಂದದ ನಾಗಲಿಂಗಪ್ಪನವರ ಅನುಭಾವ ಗೀತೆಗಳಲ್ಲೂ ಕಲಾ ಅಂಶಗಳಿವೆ.

೧೦೬.ಹೆಚ್ಚಿನ ವಿವರಗಳಿಗೆ ನೋಡಿರಿ:ಡಾ:ಜಿ.ಎಸ್.ಶಿವರುದ್ರಪ್ಪ:(ಸಂ):ಸಮಗ್ರ ಕನ್ನಡಸಾಹಿತ್ಯ ಚರಿತ್ರೆ (ಸಂಪುಟ-೫):ಪುಟ-೪೯೦-೫೧೦

ಈ ಕಾಲದಲ್ಲಿ ಹಾನಗಲ್ಲು ವಿರಕ್ತಮಠದ ಸ್ವಾಮಿಯಾಗಿದ್ದ ಕುಮಾರವಿಭು ಎಂಬವರು ಕುಮಾರೇಶ್ವರ ಪುರಾಣ, ಭಿಕ್ಷುಕ ಮಹೇಶ ವಿಲಾಸಗಳನ್ನು ಬರೆದಿದ್ದಾರೆ. ಬಿಜಾಪುರ ಬಳಿಯ ಮನಗೂಳಿಯ ಯರನಾಳದಲ್ಲಿ ಹುಟ್ಟಿದ ಬಾಲಲೀಲಾ ಮಹಾಂತ ಶಿವಯೋಗಿಗಳು ಕೈವಲ್ಯದರ್ಪಣ ಬರೆದಿದ್ದಾರೆ. ಬೆಳಗಾವಿಯ ಹೈಸ್ಕೂಲಿನಲ್ಲಿ ಮುಖ್ಯಾಧ್ಯಾಪಕರಾಗಿದ್ದ ಗಂಗಾಧರ ಮಡಿವಾಳೇಶ್ವರ ತುರಮುರಿಯವರು ರಾಜಶೇಖರ ವಿಳಾಸ, ಕೈವಲ್ಯ ಪದ್ಧತಿ ಟೀಕೆಗಳನ್ನು ರಚಿಸಿದ್ದಾರೆ. ಈ ಎಲ್ಲ ಕೃತಿಗಳಲ್ಲಿ ಸಾಂದರ್ಭಿಕ ಕಲಾ ಅಂಶಗಳಿವೆ.

ಹುಬ್ಬಳ್ಳಿಯಲ್ಲಿ ಸಿದ್ಧಾರೂಢ ಮಠವನ್ನು ಸ್ಥಾಪಿಸಿದ ಸಿದ್ಧಾರೂಢ ಸ್ವಾಮಿಗಳು ಇದೆ ಕಾಲಮಾನವರಾಗಿದ್ದು, ಇವರು ಸಹಿತ ಸಾಹಿತ್ಯ ಕೃಷಿ ಮಾಡಿದ್ದಾರೆ. ನಿಜಗುಣ ಶಿವಯೋಗಿಗಳ ಪರಮಾನುಭವ ಬೋಧೆಯನ್ನು ಪರೀಷ್ಕರಿಸಿದ್ದು ಮಾತ್ರವಲ್ಲದೆ ಭಜನೆ ಪದಗಳನ್ನು ರಚಿಸಿದ್ದಾರೆ. ಅತ್ಯಂತ ಸರಳವಾದ ಇವರ ಭಜನಾ ಪದಗಳು ಗೂಢಾರ್ಥಗಳಿಂದ ಸಮೃದ್ಧಗೊಂಡಿವೆ. ಇವುಗಳಲ್ಲಿ ಕೆಲವು ಕಡೆಗೆ ಸಾಂದರ್ಭಿಕವಾಗಿ ಕಲೆಯ ಅಂಶಗಳು ಬಂದಿವೆ. ಸಿದ್ಧಾರೂಢರ ಅಂಗಾರ ದೇಶಕ್ಕೆಲ್ಲ ಬಂಗಾರ, ಸಿದ್ಧಾರೂಢರ ಮೂರ್ತಿ, ದೇಶಕ್ಕೆಲ್ಲ ಕೀರ್ತಿ, ಹೀಗೆ ಪ್ರಾಸವಾಗಿ ಸಾಗುವ ಇವರ ಪದಗಳಲ್ಲಿ ಬಣ್ಣ, ಮೂರ್ತಿಶಿಲ್ಪ, ಚಿತ್ರ, ಆಕಾರ, ಹೀಗೆ ಹಲವಾರು ಸಂಗತಿಗಳು ವ್ಯಕ್ತಗೊಂಡಿವೆ.

ತುಮಕೂರು ಜಿಲ್ಲೆ ಕೈದಾಳದವರಾದ ನಂಜುಂಡ ಶಿವಯೋಗಿಗಳು ಇದೇ ಶತಮಾನದವರಾಗಿದ್ದು, ಬಹುಮುಖ ಪ್ರತಿಭಾವಂತರಾಗಿದ್ದರು. ಸಾಹಿತ್ಯ, ಸಂಗೀತ, ನಾಟಕ ಮಾತ್ರವಲ್ಲದೆ ಚಿತ್ರಕಲಾವಿದರೂ ಆಗಿದ್ದರು. ಕನ್ನಡ, ಸಂಸ್ಕೃತ ಮತ್ತು ತೆಲುಗುಭಾಷೆಯಲ್ಲಿ ಪ್ರಾವೀಣ್ಯತೆ ಪಡೆದವರಾಗಿದ್ದರು. ಅಟವೀಶ್ವರ ಗೀತಮಂಜರಿ, ಶ್ರೀಮದಟವೀಶ ಗುರುಭಕ್ತಿಸಾರ, ಸುರಭಾಂಡೇಶ್ವರೋಪಾಖ್ಯಾನ, ಮಾರ್ಕಂಡೇಯ ವಿಳಾಸ ಕೃತಿಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಕಲೆಯ ಅಂಶಗಳನ್ನು ಹೆಚ್ಚಾಗಿ ಬಳಸಿಕೊಂಡಿದ್ದಾರೆ. ಇದಲ್ಲದೆ ಚಿತ್ರಕಲಾವಿದರಾದ ಇವರು ಸರ್ವಸಿದ್ಧಿ ಗಣಪತಿ, ಗಿರಿಜಾಕಲ್ಯಾಣ ಮಹೋತ್ಸವ, ನಂದಿಶವಾಹನ ಶಿವ, ಚಂದ್ರಶೇಖರ ಶಿವ, ಅಂಧಕಾಸುವ ಸಂಹಾರ, ಮೊದಲಾದ ಚಿತ್ರಕಲಾ ಕೃತಿಗಳನ್ನು ಬಹುವರ್ಣದಿಂದ ರಚನೆ ಮಾಡಿದ್ದು ಅಲ್ಲದೆ ತಮ್ಮ ಸಾಹಿತ್ಯ ಕೃತಿಗಳಲ್ಲಿ ಸಾಂದರ್ಭಿಕವಾಗಿ ತಾವೇ ಚಿತ್ರಗಳನ್ನು ರಚಿಸಿದ್ದಾರೆ.

ಕ್ರಿ.ಶ. ೧೯ನೇ ಶತಮಾನದಲ್ಲಿ ಬಾಳಿದ ಘನಮಠ ಶಿವಯೋಗಿ, ಕಡಕೋಳ ಮಡಿವಾಳಪ್ಪ, ಇಡಗೂರು ರುದ್ರಕವಿ, ಬಸವಕವಿ, ಗುಬ್ಬಿವೀರೇಶ ಶಾಸ್ತ್ರಿ, ಹಾನಗಲ್ಲು ಕುಮಾರಸ್ವಾಮಿ, ನರೇಗಲ್ಲ ಶಿವಬಸಪ್ಪಶಾಸ್ತ್ರಿ, ಮಾಗಡಿ ವೀರಪ್ಪಶಾಸ್ತ್ರಿ, ಚನ್ನಕವಿ ದ್ಯಾಂಪುರ, ಹರ್ಡೇಕರ ಮಂಜಪ್ಪ ಮುಂತಾದವರ ಕೃತಿಗಳಲ್ಲಿ ಸಾಂದರ್ಭಿಕವಾಗಿ ಚಿತ್ರಕಲೆಯ ಸಂಗತಿಗಳು ಉಲ್ಲೇಖಗೊಂಡಿವೆ.

**೬. ಸ್ವಾತಂತ್ರ್ಯೋತ್ತರ ಕಾಲದಿಂದ ಕ್ರಿ. ಶ. ೨೦೦೦ ವರೆಗಿನ ಚಿತ್ರಕಲಾ ಸಾಹಿತ್ಯ :**

ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಪರ್ವಕಾಲವೆಂದು ಈ ಅವಧಿಯನ್ನು ಪರಿಗಣಿಸಬಹುದು. ಪ್ರತ್ಯೇಕ ಚಿತ್ರಕಲಾ ಸಾಹಿತ್ಯ ಕೃತಿಗಳು ಈ ಹಂತದಲ್ಲಿ ರಚನೆಗೊಳ್ಳ ತೊಡಗಿದ್ದು ಮಾತ್ರವಲ್ಲದೆ ವೈವಿಧ್ಯತೆಯನ್ನು ತಂದಿವೆ. ಪ್ರಾರಂಭಿಕ ಹಂತದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ವ್ಯಕ್ತಿಪರಿಚಯಗಳು ರಚನೆಯಾಗಿದ್ದರೂ ಎಪ್ಪತ್ತರ ದಶಕದಿಂದೀಚೆಗೆ ಬೇರೆ ಬೇರೆ ಕಲಾಪ್ರಕಾರಗಳು, ಕಲಾ ವಿಮರ್ಶೆ, ವೈಚಾರಿಕಬರಹ, ತೌಲನಿಕಬರಹ, ಸಂಶೋಧನಾ ಬರಹಗಳು ಆರಂಭಗೊಂಡವು. ವೈವಿಧ್ಯಮಯವಾಗಿ ಬೆಳೆದ ಮತ್ತು ಹೆಚ್ಚಿನ ಪ್ರಮಾಣದಲ್ಲಿ ಬೆಳೆದ ಈ ಕಾಲಾವಧಿಯ ಚಿತ್ರಕಲಾ ಸಾಹಿತ್ಯಕ್ಕೆ ಬುನಾದಿಯಾಗಿ ಸ್ವಾತಂತ್ರ್ಯಪೂರ್ವ ದಿನಗಳಲ್ಲಿ ಕೆಲವು ಕಲಾಸಾಹಿತ್ಯಕೃತಿಗಳು ಪ್ರಕಟಗೊಂಡವು. ಅವು ಈ ಕೆಳಗಿನಂತಿವೆ.

ಕ್ರಿ.ಶ. ೨೦ನೇ ಶತಮಾನದ ಚಿತ್ರಕಲಾ ಸಾಹಿತ್ಯದ ರೂಪು ರೇಷೆಗಳನ್ನು ಗಮನಿಸಿದಾಗ ಅದರ ವೈಶಾಲ್ಯತೆ, ವೈವಿಧ್ಯತೆಗಳು ಒಮ್ಮಿಂದೊಮ್ಮೆಗೆಚದುರಿ ಸ್ಫೋಟಿಸಿದಂತೆ ಕಂಡುಬರುವವು. ಕಾರಣ ಹಿಂದಿನ ಶತಮಾನಗಳಲ್ಲಿ ಕನ್ನಡದಲ್ಲಿ ಪ್ರತ್ಯೇಕ ಕಲಾ ಸಾಹಿತ್ಯ ಕೃತಿಗಳು ಹೆಚ್ಚಿನ ಪ್ರಮಾಣದಲ್ಲಿ ದೊರಕದೆ ಹೋದರೂ ಈ ಕಾಲಘಟ್ಟದಲ್ಲಿ ಅದು ಬೆಳೆದ ರೀತಿಯನ್ನು ಗಮನದಲ್ಲಿರಿಸಿ ಈ ಮಾತು ಹೇಳಬಹುದಾಗಿದೆ. ಕ್ರಿ.ಶ. ೨೦ನೇ ಶತಮಾನದ ಕರ್ನಾಟಕದ ಚಿತ್ರಕಲಾ ಸಾಹಿತ್ಯವನ್ನು ಸ್ಥೂಲವಾಗಿ ವಿವೇಚನೆಗೆ ಎತ್ತಿಕೊಂಡಾಗ ಅದರ ಅಡಿಪಾಯವನ್ನು ಹಾಕಿದ್ದು ಪಾಶ್ಚಾತ್ಯ ಕಲಾಬರಹಗಾರರು ಎನ್ನಬಹುದು. ಕ್ರಿ.ಶ. ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಸುರಪುರ ಸಂಸ್ಥಾನದಲ್ಲಿ ಬ್ರಿಟಿಷ್ ಆಡಳಿತಾಧಿಕಾರಿಯಾಗಿದ್ದ ಮೆಡೋಸ್ ಟೇಲರ್ ಎಂಬಾತನು 'ಆರ್ಕಿಟೆಕ್ಚರ್ ಆಫ್ ಬಿಜಾಪೂರ' ಎಂಬ ಗ್ರಂಥವನ್ನು ಇಂಗ್ಲೀಷ್‌ನಲ್ಲಿ ರಚನೆ ಮಾಡಿದ್ದು,[೧೦೭] ಇದರಲ್ಲಿ ಅಸರ್ ಮಹಲ್ ಬಗೆಗೆ ಹೇಳುವಾಗ ಅಲ್ಲಿರುವ ಭಿತ್ತಿಚಿತ್ರಗಳ ವಿವರ ಬರುತ್ತದೆ.

ಕ್ರಿ.ಶ. ೨೦ನೇ ಶತಮಾನದ ಪ್ರಾರಂಭಕ್ಕೆ ಜಿ.ಲಿಂಗಣ್ಣಯ್ಯ ಕನ್ನಡದಲ್ಲಿ 'ನೀರುಬಣ್ಣದಿಂದ ಚಿತ್ರಬರೆಯುವ, ತಸಬೀರು ತೆಗೆಯುವ ಕ್ರಮ' ಎಂಬಪುಸ್ತಕ ರಚನೆಮಾಡಿದ್ದು,[೧೦೮]ಇದು ಜಲವರ್ಣದಿಂದ ಚಿತ್ರರಚನೆ ಮಾಡುವ ರೀತಿ, ಹಂತಗಳು, ವೈವಿಧ್ಯತೆ, ಮಾಧ್ಯಮ ಮುಂತಾದ ತಾಂತ್ರಿಕ ಅಂಶಗಳ ಬಗ್ಗೆ ಮುಖ್ಯವಾಗಿ ತಿಳಿಸಿಕೊಡುತ್ತದೆ. ಮುಂದೆ ೧೯೩೦ರ ವೇಳೆಗೆ ಶಿವರಾಮ ಕಾರಂತರು 'ಭಾರತೀಯ ಚಿತ್ರಕಲೆ' ಕೃತಿರಚನೆ ಮಾಡಿದ್ದು[೧೦೯]ಅದರಲ್ಲಿ ಭಾರತದ ಚಿತ್ರ ಕಲಾಪರಂಪರೆಯನ್ನು ಸ್ಥೂಲವಾಗಿ ಹೇಳಲಾಗಿದೆ. ಇದರಲ್ಲಿ ಕರ್ನಾಟಕದ ಕಲಾ ಪರಂಪರೆಯು ಸಮನಾಗಿ ಬಿಂಬಿತಗೊಂಡಿದೆ.

ಇದೇ ಕಾಲಾವಧಿಯಲ್ಲಿ ಆರ್.ಎನ್.ಸಾಲೇತ್ತೊರೆ 'ವಿಜಯನಗರ ಆರ್ಟ' ಕೃತಿಯನ್ನು ಇಂಗ್ಲೀಷ್‌ನಲ್ಲಿ ರಚಿಸಿದ್ದು,[೧೧೦] ಇದರಲ್ಲಿ ವಿಜಯನಗರದ ವಾಸ್ತುಶಿಲ್ಪ, ಶಿಲ್ಪಕಲೆ ಮತ್ತು ಚಿತ್ರಕಲೆಯ ಬಗ್ಗೆ ವಿವೇಚನೆ ಇದೆ. ೧೯೩೦ ರಲ್ಲಿಯೆ ಗೆಳೆಯರ ಗುಂಪಿನ ; ರಸಯೋಗಿ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯ ಎಪ್ರಿಲ್ ಸಂಚಿಕೆಯಲ್ಲಿ ಕನ್ನಡ ಸಾಹಿತ್ಯದಲ್ಲಿ 'ಕರ್ನಾಟಕದ ಚಿತ್ರಕಲೆ' ಲೇಖನ ಬರೆದಿದ್ದಾರೆ.[೧೧೧] ಇದರಲ್ಲಿ ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಸಾಂದರ್ಭಿಕವಾಗಿ ಉಲ್ಲೇಖಗೊಂಡಿರುವ ಚಿತ್ರಕಲೆಯ ಸಂಗತಿಗಳ ಬಗ್ಗೆ ವಿವೇಚಿಸಲಾಗಿದೆ.

ಈ ಬಗೆಯ ಉದಾಹರಣೆಗಳಲ್ಲದೆ ೧೯೩೧ರಲ್ಲಿ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ನಡೆದ ವಿಚಾರ ಸಂಕಿರಣ ಒಂದರಲ್ಲಿ ಎಂ.ವಿ.ಸೀತಾರಾಮಯ್ಯ ಅವರು 'ಸಾಹಿತ್ಯ ಮತ್ತು ಚಿತ್ರಕಲೆ' ಎಂಬ ವಿಷಯದ ಬಗ್ಗೆ ಪ್ರಬಂಧ ಮಂಡಿಸಿದ್ದು, ನಂತರ ಅದು ಪ್ರಕಟಗೊಂಡಿದೆ. ಇದರಲ್ಲಿ ಕರ್ನಾಟಕದ ಸಾಹಿತ್ಯ ಕೃತಿಗಳಲ್ಲಿನ ಚಿತ್ರಕಲಾ ಸಂಗತಿಗಳನ್ನು ಸ್ಥೂಲವಾಗಿ ಬಿಂಬಿಸಲಾಗಿದೆ. ಕ್ರಿ.ಶ. ೧೯೩೨ರಲ್ಲಿ ಅ.ನ.ಕೃಷ್ಣರಾಯರು 'ಭಾರತೀಯ ಚಿತ್ರಕಲೆಯಲ್ಲಿ ರಾಜಾರವಿವರ್ಮ ಸ್ಥಾನ' ಕೃತಿ ರಚಿಸಿದ್ದು,[೧೧೨] ಇದು ದ್ವಂದ ನಿಲುವುಗಳನ್ನು ಹೊಂದಿದೆ. ರವಿವರ್ಮನು ಭಾರತೀಯ ಕಲೆಯ ಪರವಾಗಿ ಕೆಲಸ ಮಾಡಿದನೋ? ಅಥವಾ ಪಾಶ್ಚಾತ್ಯ ಪದ್ಧತಿಯನ್ನು ವೈಭವೀಕರಿಸಿದನೊ? ಎನ್ನುವಂತಹ ತೀರ್ಮಾನ ಮತ್ತು ನಿಲುವುಗಳನ್ನು ತೆಗೆದುಕೊಳ್ಳುವಲ್ಲಿ ದ್ವಂದತೆ ಉಂಟಾಗಿರುವಂತೆ ಕಂಡುಬರುತ್ತದೆ.

೧೦೭. ಮೆಡೋಸ್ ಟೇಲರ್ : ಆರ್ಕಿಟೆಕ್ಚರ್ ಆಫ್ ಬಿಜಾಪೂರ : ಕ್ಯಾಂಬ್ರಿಜ್ ಯುನಿವರ್ಸಿಟಿ ಪ್ರೆಸ್, ಕ್ಯಾಂಬ್ರಿಜ್ : ೧೮೮೬
೧೦೮. ಜಿ.ಲಿಂಗಣ್ಣಯ್ಯ : ನೀರುಬಣ್ಣದಿಂದ ಚಿತ್ರ ಬರೆಯುವ ಕ್ರಮ, ತಸಬೀರು ತೆಗೆಯುವ ಕ್ರಮ : ಕೆಳದಿ ಪ್ರಕಾಶನ, ಕೆಳದಿ-೧೯೨೫
೧೦೯. ಶಿವರಾಮ ಕಾರಂತ : ಭಾರತೀಯ ಚಿತ್ರಕಲೆ : ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು - ೧೯೩೦
೧೧೦. ಆರ್.ಎನ್.ಸಾಲೇತ್ತೊರೆ: ವಿಜಯನಗರ ಆರ್ಟ : ಬಾಂಬೆ ಯುನಿವರ್ಸಿಟಿ, ಬಾಂಬೆ : ೧೯೩೦
೧೧೧. ರಸಯೋಗಿ : ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ : ಎಪ್ರಿಲ್ ೧೯೩೦ : ಪುಟ-೭೫ ರಿಂದ ೮೫
೧೧೨. ಅ.ನ.ಕೃಷ್ಣರಾಯ : ಭಾರತೀಯ ಚಿತ್ರಕಲೆಯಲ್ಲಿ ರಾಜಾರವಿವರ್ಮನ ಸ್ಥಾನ : ಡಿ.ಜಿ.ಟಿ.ಜನರಲ್ ಏಜೆನ್ಸಿ, ಬೆಂಗಳೂರು, ೧೯೩೨

೧೯೩೭ರ ಹೊತ್ತಿಗೆ ಪಾಶ್ಚಾತ್ಯ ಮಹಿಳೆ ಸ್ಟೆಲ್ಲಾ ಕಾಮ್ರಿಶ್ಚ್ 'ಎ ಸರ್ವೆ ಆಫ್ ಪೇಂಟಿಂಗ್ಸ ಇನ್ ದಿ ಡೆಕ್ಕನ್' ಕೃತಿಯನ್ನು ರಚನೆ ಮಾಡಿದ್ದಾಳೆ.[೧೧೩] ಇದರಲ್ಲಿ ಡೆಕ್ಕನ್ ಚಿತ್ರಗಳನ್ನು ಕುರಿತು ಹೇಳುವಾಗ ಕರ್ನಾಟಕದ ಬಾದಾಮಿ, ಬಿಜಾಪುರ ಚಿತ್ರಗಳ ಬಗ್ಗೆಯೂ ಹೇಳಲಾಗಿದೆ. ಎಂ.ಎಚ್.ಕೃಷ್ಣ ೧೯೪೧ರಲ್ಲಿ 'ಅಜಂತಾ ಮತ್ತು ಎಲ್ಲೋರಾ' ಪುಸ್ತಕವನ್ನು ರಚನೆ ಮಾಡಿದ್ದು,[೧೧೪] ಇದು ಮೈಸೂರು ವಿಶ್ವವಿದ್ಯಾಲಯದಿಂದ ಪ್ರಕಟಗೊಂಡಿದೆ. ಇದರಲ್ಲಿ ಅಜಂತಾ ಎಲ್ಲೋರಾ ಗುಹಾಲಯಗಳ ವಾಸ್ತುಕಲೆ ಮತ್ತು ಶಿಲ್ಪಕಲೆಗಳನ್ನು ಹೇಳುವುದರ ಜೊತೆಗೆ ಅಲ್ಲಿ ರಚನೆಯಾಗಿರುವ ಚಿತ್ರಕಲಾ ಕೃತಿಗಳ ಬಗ್ಗೆಯೂ ವಿವೇಚಿಸಲಾಗಿದೆ. ಇಲ್ಲಿನ ಚಿತ್ರಗಳ ವಸ್ತುವಿಷಯ, ರಚನಾಕ್ರಮ, ವರ್ಣವಿನ್ಯಾಸ ಮತ್ತು ರೇಖಾ ಲಾಲಿತ್ಯಗಳ ಬಗ್ಗೆ ತಿಳಿಸಲಾಗಿದೆ. ೧೯೪೬ರಲ್ಲಿ ರುಮಾಲೆ ಚನ್ನಬಸವಯ್ಯ 'ನಮ್ಮ ಲಲಿತ ಕಲಾವಿದರು' ಪುಸ್ತಕ ಬರೆದಿದ್ದು,[೧೧೫] ಇದರಲ್ಲಿ ಕರ್ನಾಟಕದ ಕೆಲವು ಚಿತ್ರಕಲಾವಿದರ ಸಂಕ್ಷಿಪ್ತ ಜೀವನ ಮತ್ತು ಕಲೆಯನ್ನು ಕುರಿತು ಹೇಳಲಾಗಿದೆ.

೧೯೪೭ರಲ್ಲಿ ಕ್ಯಾಡೆಲ್ ಮೆಡೋಸ್ ಟೇಲರನು ಹೆನ್ರಿರೀವ್ ಅವರಿಗೆ ಬರೆದ ಪತ್ರಗಳನ್ನು ಒಟ್ಟು ಗೂಡಿಸಿ ಪ್ರಕಟಿಸಿದ್ದಾನೆ.[೧೧೬] ಮೆಡೋಸ್ ಟೇಲರನು ಸುರಪುರದಲ್ಲಿ ಬ್ರಿಟಿಷ್ ಆಡಳಿತಾಧಿಕಾರಿಯಾಗಿದ್ದು, ಸ್ವತಹ ಕಲಾವಿದ ಮತ್ತು ಕಲಾ ಪ್ರೇಮಿಯಾಗಿದ್ದನು. ಇವನು ಹೆನ್ರಿರೀವ್‌ನಿಗೆ ಬರೆದ ಪತ್ರಗಳಲ್ಲಿ ಕರ್ನಾಟಕದ ವಾಸ್ತುಕಲೆ, ಶಿಲ್ಪಕಲೆ ಮತ್ತು ಚಿತ್ರಕಲೆ ಇವುಗಳ ಕುರಿತು ವಿವರಿಸಿದ್ದಾನೆ. ಸುರಪುರವು ಈತನ ಕಾಲದಲ್ಲಿ ಗರುಡಾದ್ರಿ ಚಿತ್ರಕಲಾ ಶೈಲಿಯಿಂದ ನಾಡಿನಲ್ಲಿ ಪ್ರಖ್ಯಾತಗೊಂಡಿದ್ದನ್ನು ಇಲ್ಲಿ ಸ್ಮರಿಸಬಹುದು. ಇದನ್ನು ಕುರಿತಾಗಿಯೂ ಆತನ ಪತ್ರಗಳಲ್ಲಿ ವಿವರ ಲಭ್ಯವಾಗುತ್ತದೆ. ಹಾಗಾಗಿ ಮೆಡೋಸ್ ಟೇಲರನ ಪತ್ರಗಳು ಕರ್ನಾಟಕದ ಚಿತ್ರಕಲಾ ಸಾಹಿತ್ಯದ ದೃಷ್ಟಿಯಿಂದ ಪ್ರಮುಖವಾಗಿವೆ ಎಂದು ಹೇಳಬಹುದು.

ಕಮಲದಾನಿ ಗುರುರಾಯರು 'ಪಾಶ್ಚಾತ್ಯ ಕಲಾವಿದರು' ಕೃತಿಯನ್ನು ೧೯೫೦ರಲ್ಲಿ ರಚನೆ ಮಾಡಿದ್ದಾರೆ.[೧೧೭] ಇದರಲ್ಲಿ ಪಾಶ್ಚಾತ್ಯ ಪ್ರಸಿದ್ಧ ಕಲಾವಿದರ ಕುರಿತು ಸ್ಥೂಲ ಮಾಹಿತಿ ಕೊಡಲಾಗಿದೆ. ಈ ಮಾಹಿತಿಯು ಅವರ ಜನನ, ಕಲೆ, ಕಲಾ ಬದುಕುಗಳನ್ನು ಕುರಿತಾಗಿದೆ. ಇದೇ ವರ್ಷ ಶಿವರಾಮ ಕಾರಂತರು 'ಕಲೆಯ ದರ್ಶನ' ಕೃತಿ ರಚನೆ ಮಾಡಿದ್ದು[೧೧೮] ಇದರಲ್ಲಿ ಭಾರತೀಯ ಕಲೆಯ ಮೌಲ್ಯಗಳನ್ನು ಸೌಂದರ್ಯ ಮತ್ತು ತತ್ವ ಶಾಸ್ತ್ರೀಯ ಹಿನ್ನೆಲೆಯಲ್ಲಿ ಬಿಂಬಿಸಲಾಗಿದೆ. ಕ್ರಿ.ಶ. ೧೯೫೨ರಲ್ಲಿ ಜಿ.ಯಜದಾನಿ 'ದಿ ಅರ್ಲಿ ಹಿಸ್ಟರಿ ಆಫ್ ದಿ ಡೆಕ್ಕನ್ ಫೈನ್ ಆರ್ಟ್ಸ' ಗ್ರಂಥವನ್ನು ಇಂಗ್ಲೀಷನಲ್ಲಿ ಬರೆದಿದ್ದಾರೆ.[೧೧೯] ಈ ಕೃತಿಯಲ್ಲಿ ದಕ್ಷಿಣ ಭಾರತದ ಲಲಿತ ಕಲೆಯ ಬಗ್ಗೆ ವಿವೇಚಿಸಲಾಗಿದೆ. ಅದರಲ್ಲಿ ಕರ್ನಾಟಕದ ಲಲಿತ ಕಲೆಗಳು ಬೆಳಕುಕಂಡಿವೆ. ಕರ್ನಾಟಕದ ವಾಸ್ತುಕಲೆ, ಶಿಲ್ಪಕಲೆ, ಚಿತ್ರಕಲೆ ಇಲ್ಲಿ ವಿಶೇಷವಾಗಿ ಚರ್ಚಿತಗೊಂಡಿವೆ.

---

೧೧೩. ಸ್ಟೆಲ್ಲಾ ಕಾಮ್ರಿಶ್ಚ್ : ಎಸರ್ವೆ ಆಫ್ ಪೇಂಟಿಂಗ್ಸ ಇನ್ ದಿ ಡೆಕ್ಕನ್ : ಕೆಂಬ್ರಿಜ್ ಯುನಿವರ್ಸಿಟಿ ಲಂಡನ್, ೧೯೩೭
೧೧೪. ಎಂ.ಎಚ್.ಕೃಷ್ಣ : ಅಜಂತಾ ಮತ್ತು ಎಲ್ಲೋರಾ :ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ ಮೈಸೂರು, ೧೯೪೧
೧೧೫. ರುಮಾಲೆ ಚನ್ನಬಸವಯ್ಯ : ನಮ್ಮ ಲಲಿತ ಕಲಾವಿದರು : ಬೆಂಗಳೂರು : ೧೯೪೬
೧೧೬. ಕ್ಯಾಡೆಲ್ : ದಿ ಲೆಟರ್ಸ ಆಫ್ ಫಿಲಿಪ್ ಮೆಡೋಸ್ ಟೇಲರ್ ಟು ಹೆನ್ರಿರೀವ್ : ಆಕ್ಸಫೋರ್ಡ ಯುನಿವರ್ಸಿಟಿ ಪ್ರೆಸ್, ಲಂಡನ್-೧೯೪೭
೧೧೭. ಕಮಲದಾನಿ ಗುರುರಾಯರು : ಪಾಶ್ಚಾತ್ಯ ಕಲಾವಿದರು : ಹುಬ್ಬಳ್ಳಿ – ೧೯೫೦
೧೧೮. ಶಿವರಾಮ ಕಾರಂತ : ಕಲೆಯದರ್ಶನ : ರಾಜಲಕ್ಷ್ಮೀ ಪ್ರಕಾಶನ, ಬೆಂಗಳೂರು –೧೯೫೦
೧೧೯. ಜಿ.ಯಜದಾನಿ : ದಿ ಅರ್ಲಿ ಹಿಸ್ಟರಿ ಆಫ್ ದಿ ಡೆಕ್ಕನ್ ಫೈನ್ ಆರ್ಟ್ಸ : ಆಕ್ಸಫೋರ್ಡ ಯುನಿವರ್ಸಿಟಿ –೧೯೫೨

ಸಂಕೀಘಟ್ಟ ವೆಂಕಟಾಚಾರ್ಯ ೧೯೫೩ರಲ್ಲಿ 'ವಿಷ್ಣುಧರ್ಮೋತ್ತರ ಪುರಾಣ'ವನ್ನು ಕನ್ನಡಕ್ಕೆ ಅನುವಾದಿಸಿದರು.[೧೨೦] ಇದರಿಂದಾಗಿ ಚಿತ್ರಕಲೆಯ ಬಗೆಗೆ ಪ್ರಾತಿನಿಧಿಕ ಮಾಹಿತಿ ಹೊಂದಿದ ಅತ್ಯಂತ ಮೌಲಿಕವಾದ ಪ್ರಾಚೀನ ಗ್ರಂಥವೊಂದು ಕನ್ನಡದ ಚಿತ್ರಕಲಾ ಸಾಹಿತ್ಯದಲ್ಲಿ ಬೆಳಕು ಕಂಡಂತಾಯಿತು. ಪ್ರಾಚೀನ ಭಾರತೀಯ ಭಿತ್ತಿಚಿತ್ರ ರಚನಾ ಪರಂಪರೆಯ ಬಹುದೊಡ್ಡ ಮಾಹಿತಿ ಖಣಜವನ್ನು ಇದು ಒಳಗೊಂಡಿದೆ. ಭಿತ್ತಿತಯಾರಿಕಾ ವಿಧಾನ, ಅದರ ಪರಿಕರಗಳು, ಚಿತ್ರರಚನಾಕ್ರಮ, ಬಣ್ಣ, ಕುಂಚ, ಅಂಟುದ್ರಾವಕ, ಅಳತೆ, ಸಂಯೋಜನಾ ವಿಧಾನ ಮುಂತಾದ ಹತ್ತು ಹಲವು ತಾಂತ್ರಿಕ ಅಂಶಗಳು ಇಲ್ಲಿ ಬಿಂಬಿತಗೊಂಡಿವೆ.

ಮುಂದಿನ ವರ್ಷ ಅಂದರೆ ೧೯೫೪ರಲ್ಲಿ ಎರಡು ಕೃತಿಗಳು ಇಂಗ್ಲೀಷನಲ್ಲಿ ಹೊರಬಂದವು. ಮೊದಲನೆಯದು ಪಾಶ್ಚಾತ್ಯ ಸಂಶೋಧಕರಾದ ಎಫ್.ಆರ್.ಅಲಚಿನ್ ಅವರು ಮಂಡಿಸಿದ 'ಎ ಡೆವಲಪ್‌ಮೆಂಟ್ ಆಫ್ ಅರ್ಲಿಕಲ್ಚರ್ ಇನ್ ರಾಯಚೂರು ದೋ ಆಬ್' ಎಂಬುದು ಪಿಎಚ್.ಡಿ. ಪ್ರಬಂಧವಾಗಿದ್ದರೆ,[೧೨೧] ಎರಡನೆಯದು ಎಮ್.ಹಿರಿಯಣ್ಣ ಅವರ 'ಆರ್ಟ ಎಕ್ಸಪೀರಿಯನ್ಸ' ಕೃತಿಯಾಗಿದೆ.[೧೨೨]

'ರಾಯಚೂರು ದೋ ಆಬ್ ಪ್ರದೇಶದಲ್ಲಿ ಪ್ರಾಚೀನ ಸಂಸ್ಕೃತಿಯ ಬೆಳವಣಿಗೆ' ತಮ್ಮ ಸಂಶೋಧನಾ ಕೃತಿಯಲ್ಲಿ ಅಲಚಿನ್ ಅವರು ಈ ಪ್ರದೇಶದಲ್ಲಿ ಪ್ರಾಚೀನ ಸಂಸ್ಕೃತಿ ಹೇಗೆ ಬೆಳವಣಿಗೆ ಹೊಂದಿತು ಎಂಬುದನ್ನು ಕ್ಷೇತ್ರಕಾರ್ಯದ ಮೂಲಕ ಕಟ್ಟಿಕೊಟ್ಟಿದ್ದಾರೆ. ಇದರಲ್ಲಿ ಅಂದಿನ ಕಾಲದ ಜನಜೀವನ, ಸಾಂಸ್ಕೃತಿಕ ಬದುಕನ್ನು ರೂಪಿಸುವಲ್ಲಿ ಅವರ ಕಲೆಯನ್ನು ಚರ್ಚೆಗೆ ಒಳಪಡಿಸಲಾಗಿದೆ. ಪ್ರಾಗಿತಿಹಾಸ ಕಾಲದಲ್ಲಿ ರಾಯಚೂರು ದೋ ಆಬ್ ಪ್ರದೇಶದಲ್ಲಿ ಜನರು ಯಾವ ರೀತಿಯ ಕಲಾತ್ಮಕ ಬದುಕನ್ನು ರೂಪಿಸಿಕೊಂಡಿದ್ದರು ಎಂಬುದನ್ನು ವಿವರವಾಗಿ ಹೇಳಲಾಗಿದೆ. ಅವರ ಕಲಾತ್ಮಕ ಮಡಿಕೆಯ ಚೂರುಗಳು, ಆಯುಧಗಳು, ಕಲ್ಮನೆಗಳು, ವಾಸದ ನೆಲೆಗಳು ಇವುಗಳ ಜೊತೆಗೆ ಅವರು ವಾಸಿಸಿದ ಶಿಲಾಗುಹೆಗಳಲ್ಲಿ ಮತ್ತು ಸಮೀಪದ ಬಯಲು ಬಂಡೆಗಳಲ್ಲಿ ರಚನೆಗೊಂಡ ಚಿತ್ರಗಳನ್ನು ಕುರಿತು ಈ ಗ್ರಂಥದಲ್ಲಿ ವಿವೇಚಿಸಲಾಗಿದೆ. ಹಾಗಾಗಿ ಕರ್ನಾಟಕದ ಚಿತ್ರಕಲಾ ಇತಿಹಾಸದ ದೃಷ್ಟಿಯಿಂದ ಇದೊಂದು ಗಮನಾರ್ಹ ಕೃತಿ ಎಂದು ಹೇಳಬಹುದು. ಎರಡನೆಯದಾದ ಹಿರಿಯಣ್ಣನವರ ಆರ್ಟ ಎಕ್ಸಪೀರಿಯನ್ಸ ಕೃತಿಯಲ್ಲಿ ಕಲೆ, ಕಲಾವಿದ ಮತ್ತು ಕಲಾನುಭವ, ಸೌಂದರ್ಯಕಲ್ಪನೆಗಳನ್ನು ವಿವೇಚಿಸಲಾಗಿದೆ. ಸಿ. ಶಿವರಾಮಮೂರ್ತಿಯವರು ಬಾದಾಮಿ ಚಾಲುಕ್ಯರ ಕಾಲದ ಪ್ರಾಚೀನ ಚಿತ್ರಕಲೆ ಬಗ್ಗೆ ೧೯೫೫ರಲ್ಲಿ ಪುಸ್ತಕ ರಚನೆ ಮಾಡಿದ್ದಾರೆ.[೧೨೩] ಇಂಗ್ಲೀಷಿನಲ್ಲಿರುವ ಇದರಲ್ಲಿ ಬಾದಾಮಿ ವೈಷ್ಣವ ಗುಹೆಯಲ್ಲಿರುವ ಚಿತ್ರಗಳು, ಅದರ ರಚನಾಕ್ರಮ, ಭಿತ್ತಿತಯಾರಿಕೆ, ವರ್ಣವಿನ್ಯಾಸ, ವಸ್ತುವಿಷಯಗಳಂತಹ ಸಂಗತಿಗಳನ್ನು ಕುರಿತು ಚರ್ಚಿಸಲಾಗಿದೆ. 'ಬೆಳೆದುಬಂದ ಭಾರತದ ಚಿತ್ರಕಲೆ' ಕೃತಿಯನ್ನು ಪಿ. ಆರ್. ತಿಪ್ಪೇಸ್ವಾಮಿಯವರು ೧೯೭೨ರಲ್ಲಿ ರಚಿಸಿದ್ದಾರೆ.[೧೨೪] ಇದರಲ್ಲಿ ಸಿಂಧೂ ನಾಗರೀಕತೆಯ ಕಲೆ, ಶಾತವಾಹನರ ಕಲೆ, ಅಜಂತಾ ಎಲ್ಲೋರಾ, ಹಂಪಿ, ಲೇಪಾಕ್ಷಿ, ಬಾದಾಮಿ ಚಾಲುಕ್ಯರ ಚಿತ್ರಕಲೆಗಳನ್ನು ಸ್ಥೂಲವಾಗಿ ತಿಳಿಸಲಾಗಿದೆ.

---

೧೨೦. ಸಂಕೀಘಟ್ಟ ವೆಂಟಾಚಾರ್ಯ : ವಿಷ್ಣುಧರ್ಮೋತ್ತರ ಪುರಾಣ : ಓರಿಯಂಟಲ್ ಲೈಬ್ರರಿ ಪಬ್ಲಿಕೇಷನ್ಸ, ಮೈಸೂರು-೧೯೫೩

೧೨೧. ಎಫ್. ಆರ್. ಅಲಚಿನ್ : ದಿ ಡೆವಲೆಪಮೆಂಟ್ ಆಫ್ ಅರ್ಲಿಕಲ್ಚರ್ ಇನ್ ರಾಯಚೂರು ದೋ ಆಬ್ : ಲಂಡನ್ ಯುನಿವರ್ಸಿಟಿ, ಲಂಡನ್-೧೯೫೪

೧೨೨. ಎಂ. ಹಿರಿಯಣ್ಣ : ಆರ್ಟ ಎಕ್ಸಪೀರಿಯನ್ಸ್ : ಕಾವ್ಯಾಲಯ ಪಬ್ಲಿಕೇಶನ್ಸ, ಮೈಸೂರು-೧೯೫೪

೧೨೩. ಸಿ. ಶಿವರಾಮಮೂರ್ತಿ : ಅರ್ಲಿವೆಷ್ಟರ್ನ ಚಾಲುಕ್ಯ ಪೇಂಟಿಂಗ್ಸ ಫ್ರಾಮ್ ಬಾದಾಮಿ : ಲಲಿತಕಲಾ ಅಕಾಡೆಮಿ, ನ್ಯೂದೆಹಲಿ-೧೯೫೫

೧೨೪. ಪಿ. ಆರ್. ತಿಪ್ಪೇಸ್ವಾಮಿ : ಬೆಳೆದುಬಂದ ಭಾರತದ ಚಿತ್ರಕಲೆ : ಕಲಾಕ್ಷೇತ್ರ, ಮೈಸೂರು-೧೯೭೨

ಜಿ. ಎಸ್. ಶಿವರುದ್ರಪ್ಪ ಸೌಂದರ್ಯ ಸಮೀಕ್ಷೆ ಗ್ರಂಥವನ್ನು ೧೯೬೫ರಲ್ಲಿ ರಚಿಸಿದ್ದಾರೆ. ಕಲಾವಿಮರ್ಶೆಯ ದೃಷ್ಟಿಯಿಂದ ಈ ಕೃತಿ ಮೌಲಿಕವಾಗಿದೆ.[೧೨೫] ಕಲೆ, ಕಲಾವಿದ, ಕಲಾಕೃತಿ, ಸಹೃದಯ ಇವುಗಳ ಸಂಬಂಧಗಳ ಜೊತೆಗೆ ರಸ, ರೀತಿ, ಸೌಂದರ್ಯ, ಧ್ವನಿ, ಔಚಿತ್ಯ, ಮಾನಸಿಕ ದೂರ, ಮುಂತಾದ ಸಂಗತಿಗಳು ಇಲ್ಲಿ ಬಿಂಬಿತಗೊಂಡಿವೆ. ಸಿ. ಶಿವರಾಮಮೂರ್ತಿ ೧೯೬೮ರಲ್ಲಿ ಸೌಥ್ ಇಂಡಿಯನ್ ಪೇಂಟಿಂಗ್ಸ್ ಕೃತಿ ರಚಿಸಿದ್ದಾರೆ.[೧೨೬] ಇದರಲ್ಲಿ ಬಾದಾಮಿ, ಬಿಜಾಪೂರ, ಬೀದರ ಮುಂತಾದ ಸ್ಥಳಗಳ, ಚಿತ್ರಗಳ ವಿವೇಚನೆ ಕಂಡುಬರುತ್ತದೆ. ಅರವತ್ತರ ದಶಕದ ಕೊನೆಯ ವೇಳೆಗೆ ಚಿತ್ರಕಲಾ ಕ್ಷೇತ್ರದಲ್ಲೂ ಸಂಭಾವನೆ ಗ್ರಂಥಗಳು, ಸ್ಮರಣ ಸಂಚಿಕೆಗಳು, ಅಭಿನಂದನಾ ಗ್ರಂಥಗಳು ಪ್ರಕಟಗೊಳ್ಳ ತೊಡಗಿದವು. ಇವುಗಳಲ್ಲಿ ಆಯಾ ವ್ಯಕ್ತಿಗಳ ಸಾಧನೆ, ಸಿದ್ಧಿಗಳು, ಜೀವನದ ಪ್ರಮುಖ ಘಟನಾವಳಿಗಳನ್ನು ಕುರಿತು ವಿದ್ವಾಂಸರಿಂದ ಲೇಖನಗಳನ್ನು ಬರೆಸುವುದರ ಜೊತೆಗೆ ವಿವಿಧ ಕಲಾ ಪ್ರಕಾರಗಳ ಬಗ್ಗೆಯೂ ಲೇಖನಗಳನ್ನು ಬರೆಯಿಸಿ ಪ್ರಕಟಿಸಲಾಗಿದೆ. ಇವುಗಳ ವಿವರಗಳು ಇದೇ ಅಧ್ಯಯನದ 'ಸಂಪಾದನಾ ಸಾಹಿತ್ಯ' ಎಂಬ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ.

ಕ್ರಿ. ಶ. ೧೯೬೯ ರಲ್ಲಿ ಎರಡು ಸಂಭಾವನಾ ಗ್ರಂಥಗಳು ಪ್ರಕಟಗೊಂಡಿವೆ. ಟಿ.ಪಿ.ಅಕ್ಕಿಯವರ ಕುರಿತು ಸಂಭಾವನೆ ಎಂಬ ಕೃತಿಯನ್ನು ಸಿ.ಎನ್.ಪಾಟೀಲ ಸಂಪಾದನೆ ಮಾಡಿದ್ದರೆ,[೧೨೭] 'ಕಲಾನಿವೇದನ'ವನ್ನು ಅ.ನ.ಸುಬ್ಬರಾವ್ ಸಂಪಾದಿಸಿದ್ದಾರೆ.[೧೨೮] ಇವುಗಳಲ್ಲಿ ಆಯಾ ವ್ಯಕ್ತಿಗಳ ಜೀವನದ ಜೊತೆಗೆ ಕಲಾ ಪ್ರಕಾರಕ್ಕೆ ಸಂಬಂಧಿಸಿದ ಲೇಖನಗಳೂ ಕಂಡುಬರುತ್ತವೆ.

ಇದೇ ವರ್ಷದಲ್ಲಿ ಶಿವರಾಮ ಕಾರಂತರು ನಾಗರಿಕತೆಯ ಹೊಸ್ತಿಲಲ್ಲಿ ಚಿಕ್ಕ ಕೃತಿ ರಚನೆ ಮಾಡಿದ್ದು,[೧೨೯] ಇದರಲ್ಲಿ ಭಾರತೀಯ ಪ್ರಾಚೀನ ಚಿತ್ರಕಲೆಯನ್ನು ಸ್ಥೂಲವಾಗಿ ಬಿಂಬಿಸಲಾಗಿದೆ. ಸಿಂಧೂನಾಗರಿಕತೆಯ ಕಲೆ, ವೇದಗಳ ಕಾಲದ ಕಲೆ, ರಾಮಾಯಣ ಮಹಾಭಾರತಗಳ ಕಾಲದ ಚಿತ್ರಕಲೆ, ಅಜಂತಾ ಚಿತ್ರಕಲೆಗಳ ಜೊತೆಗೆ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಗೊಂಡ ಚಿತ್ರಕಲಾ ಸಂಗತಿಗಳನ್ನು ಕುರಿತು ಇದರಲ್ಲಿ ವಿವೇಚಿಸಲಾಗಿದೆ. ಇದಲ್ಲದೆ ಬಿ.ಪಿ.ಬಾಯಿರಿಯವರು ಇದೆ ವರ್ಷದಲ್ಲಿ (೧೯೬೯) ಚಿಕ್ಕಮಕ್ಕಳ ಚಿತ್ರಕಲೆ ಪುಸ್ತಕ ಬರೆದಿದ್ದು,[೧೩೦] ಅದರಲ್ಲಿ ಮಕ್ಕಳ ಚಿತ್ರಕಲೆಯ ಸ್ವರೂಪ, ಲಕ್ಷಣಗಳು, ಹಂತಗಳು ಮತ್ತು ಮನೋವೈಜ್ಞಾನಿಕ ವಿಶ್ಲೇಷಣೆಗಳನ್ನು ಕೊಡಲಾಗಿದೆ.

ಕ್ರಿ.ಶ. ೧೯೭೦ ರಲ್ಲಿ ಎರಡು ಪುಸ್ತಕಗಳು ಪ್ರಕಟಗೊಂಡಿವೆ. ಮೊದಲನೆಯದು ಶಿವರಾಮ ಮೂರ್ತಿಯವರು ಇಂಗ್ಲೀಷಿನಲ್ಲಿ ಬರೆದ 'ಇಂಡಿಯನ್ ಪೇಂಟಿಂಗ್ಸ್' ಎಂಬುದಾಗಿದ್ದರೆ,[೧೩೧] ಎರಡನೆಯದು ಅ.ನ.ಕೃ. ಅವರ ಚಿತ್ರಕಲೆ ಕೃತಿಯಾಗಿದೆ.[೧೩೨] ಸಿ.ಶಿವರಾಮಮೂರ್ತಿಯವರ 'ಇಂಡಿಯನ್ ಪೇಂಟಿಂಗ್ಸ್' ಕೃತಿಯು ಭಾರತೀಯ ಚಿತ್ರಕಲೆಗೆ ಸಂಬಂಧಿಸಿದ್ದರೂ ಅದರಲ್ಲಿ ಕರ್ನಾಟಕದ ಚಿತ್ರಕಲೆಯ ಬಗ್ಗೆ ಸಾಂದರ್ಭಿಕವಾಗಿ ವಿವೇಚಿಸಲಾಗಿದೆ. ಅದೇ ರೀತಿ ಅ.ನ.ಕೃ. ಅವರ ಚಿತ್ರಕಲೆ ಸಹಿತ ಭಾರತೀಯ ಚಿತ್ರಕಲಾ ಪರಂಪರೆಯನ್ನು ಸ್ಥೂಲವಾಗಿ ಬಿಂಬಿಸುವ ಕೃತಿಯಾಗಿದ್ದು, ಎರಡು ಭಾಗಗಳು ಕರ್ನಾಟಕದ

೧೨೫. ಜಿ. ಎಸ್. ಶಿವರುದ್ರಪ್ಪ : ಸೌಂದರ್ಯ ಸಮೀಕ್ಷೆ : ಶಾರದಾ ಪ್ರಕಾಶನ, ಗಾಂಧಿನಗರ, ಬೆಂಗಳೂರು-೧೯೬೫

೧೨೬. ಸಿ. ಶಿವರಾಮಮೂರ್ತಿ : ಸೌಥ್ ಇಂಡಿಯನ್ ಪೇಂಟಿಂಗ್ಸ್ : ಕೇಂದ್ರ ಲಲಿತಕಲಾ ಅಕಾಡೆಮಿ, ನ್ಯೂದೆಹಲಿ-೧೯೬೮

೧೨೭. ಸಿ.ಎನ್.ಪಾಟೀಲ : (ಸಂ) : ಸಂಭಾವನೆ : ಸಂಭಾವನಾ ಗ್ರಂಥ ಪ್ರಕಾಶನ ಸಮಿತಿ, ಗದಗ-೧೯೬೯

೧೨೮. ಅ.ನ.ಸುಬ್ಬರಾವ್ : (ಸಂ) : ಕಲಾನಿವೇದನ : ಕಲಾಮಂದಿರ ಪ್ರಕಾಶನ ಬಸವನಗುಡಿ, ಬೆಂಗಳೂರು-೧೯೬೯

೧೨೯. ಶಿವರಾಮ ಕಾರಂತ : ನಾಗರಿಕತೆಯ ಹೊಸ್ತಿಲಲ್ಲಿ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ-೧೯೬೯

೧೩೦. ಬಿ.ಪಿ.ಬಾಯಿರಿ : ಚಿಕ್ಕಮಕ್ಕಳ ಚಿತ್ರಕಲೆ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ-೧೯೬೯

೧೩೧. ಸಿ.ಶಿವರಾಮಮೂರ್ತಿ : ಇಂಡಿಯನ್ ಪೇಂಟಿರ್ಸ್ : ನ್ಯಾಷನಲ್ ಬುಕ್‌ಟ್ರಸ್ಟ ಆಫ್ ಇಂಡಿಯಾ ದೆಹಲಿ-೧೯೭೦

೧೩೨. ಅ.ನ.ಕೃ : ಚಿತ್ರಕಲೆ : ವಿದ್ಯಾನಿಧಿ ಪ್ರಕಾಶನ, ಮೈಸೂರು -೧೯೭೦

ಚಿತ್ರಕಲೆಯ ಕುರಿತಾಗಿವೆ. ಬಿ.ಪಿ.ಬಾಯಿರಿಯವರ[೧೩೩] ಚಿಕ್ಕಮಕ್ಕಳ ಚಿತ್ರಕಲೆ ೧೯೭೧ ರಲ್ಲಿ ಪ್ರಕಟಗೊಂಡಿದೆ. ಇದರಲ್ಲಿ ಮನೋವಿಜ್ಞಾನಕ್ಕೆ ಸಂಬಂಧಿಸಿದ ಮಕ್ಕಳ ಕಲೆ ಹೇಳಿದೆ. ಸೌಂದರ್ಯ ಮತ್ತು ಕಲೆ ಕೃತಿಯನ್ನು ೧೯೭೧ ರಲ್ಲಿ ಕೆ.ಬಿ.ರಾಮಕೃಷ್ಣರಾವ್ ರಚನೆ ಮಾಡಿದ್ದು,[೧೩೪] ಇದರಲ್ಲಿ ಕಲೆ, ಕಲಾವಿದ, ಕಲಾಕೃತಿ, ಸಹೃದಯ, ಕಲೆಯಲ್ಲಿ ಸೌಂದರ್ಯ, ರಸಗಳು, ಅಲಂಕಾರ, ಮಾನಸಿಕ ದೂರ ಮುಂತಾದ ಸಂಗತಿಗಳು ಚರ್ಚಿತಗೊಂಡಿವೆ.

ಕ್ರಿ.ಶ. ೧೯೭೨ರಲ್ಲಿ ಎರಡು ಪುಸ್ತಕಗಳು ಪ್ರಕಟಗೊಂಡಿವೆ. ಮೊದಲನೆಯದು ವಿ.ಎಸ್.ವಾಕಣಕರ್ ಅವರ ಪೇಂಟೆಡ್ ರಾಕ್‌ಶೆಲ್ಟರ್ಸ್ ಆಫ್ ಇಂಡಿಯಾ,[೧೩೫] ಎರಡನೆಯದು ಸ.ಮ.ಶಿರಹಟ್ಟಿಯವರ ಭಾರತೀಯ ಚಿತ್ರಕಲೆ.[೧೩೬] ವಾಕಣಕರ್ ಅವರ ಪೇಂಟೆಡ್ ರಾಕ್‌ಶೆಲ್ಟರ್ ಆಫ್ ಇಂಡಿಯಾ ಕೃತಿಯು ಭಾರತೀಯ ಪ್ರಾಗಿತಿಹಾಸ ಕಾಲದ ಬಂಡೆ ಚಿತ್ರಕಲೆಯ ಬಗ್ಗೆ ವಿಶೇಷವಾಗಿ ರಚನೆಯಾಗಿದ್ದು ಅದರಲ್ಲಿ ಕರ್ನಾಟಕದ ಬಾದಾಮಿ, ಹಂಪಿ, ಪಿಕ್ಕಿಹಾಳ, ಬೆನಕಲ್ಲು, ಬೆಳಗಲ್ಲು, ಕುಪ್ಪಗಲ್ಲು, ಮುಂತಾದ ನೆಲೆಗಳ ಪ್ರಾಗಿತಿಹಾಸ ಚಿತ್ರಗಳ ಬಗ್ಗೆ ವಿವೇಚನೆ ಮಾಡಲಾಗಿದೆ.

೧೯೭೩ರಲ್ಲಿ ಚಿತ್ರಕಲೆಯ ಬಗ್ಗೆ ೫ ಪುಸ್ತಕಗಳು ಪ್ರಕಟಗೊಂಡಿರುವುದು ತಿಳಿದು ಬರುತ್ತದೆ. ಮೊದಲನೆಯದು ಎಸ್.ಕೆ.ರಾಮಚಂದ್ರರಾವ್‌ರ 'ಕೆ.ವೆಂಕಟಪ್ಪ' ಇದರಲ್ಲಿ ವೆಂಕಟಪ್ಪನವರ ಸಂಕ್ಷಿಪ್ತ ಜೀವನ. ಕಲೆ, ಕಲಾಕೃತಿಗಳ ಬಗ್ಗೆ ಬಿಂಬಿಸಲಾಗಿದೆ.[೧೩೭] ಎರಡನೆಯ ಕೃತಿ ಶಿವರಾಮ ಕಾರಂತರವರು ಇಂಗ್ಲೀಷಿನಲ್ಲಿ ರಚಿಸಿದ ಕರ್ನಾಟಕ ಪೇಂಟಿಂಗ್ಸ್. ಇದರಲ್ಲಿ ಕರ್ನಾಟಕದ ಪ್ರಾಚೀನ ಭಿತ್ತಿಚಿತ್ರ ನೆಲೆಗಳಾದ ಬಾದಾಮಿ, ನಿಪ್ಪಾಣಿ, ನರಗುಂದ, ಶಿಬಿ, ಸಿರಾ ಹೀಗೆ ಹಲವಾರು ನೆಲೆಗಳ ಬಗ್ಗೆ ವಿವೇಚಿಸಲಾಗಿದೆ.[೧೩೮] ಮೂರನೆಯದು ಜಿ.ಎಸ್.ಶ್ರೀನಿವಾಸನ್ ಬರೆದ ಸೌಂದರ್ಯ ಮೀಮಾಂಸೆ.[೧೩೯] ಇದು ಸಾಹಿತ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ರಚನೆ ಮಾಡಿದ ಕೃತಿಯಾದರೂ ಇದರಲ್ಲಿನ ಅಂಶಗಳು ಕಲೆಗೂ ಸಂಬಂಧಪಟ್ಟಿವೆ. ರೀತಿ, ಶೈಲಿ, ಧ್ವನಿ, ಅಲಂಕಾರ, ರಸಸಿದ್ಧಾಂತ, ಔಚಿತ್ಯ, ಮಾನಸಿಕದೂರ ಮುಂತಾದ ಸಂಗತಿಗಳು ಹೇಳಲ್ಪಟ್ಟಿವೆ.

ನಾಲ್ಕನೆಯ ಕೃತಿಯನ್ನು ಜಿ.ಎಸ್.ಶಿವರುದ್ರಪ್ಪ ರಚಿಸಿದ್ದಾರೆ. 'ಮಾಸ್ಕೋದಲ್ಲಿ ೨೨ ದಿನಗಳು'[೧೪೦] ಎಂಬ ಪ್ರವಾಸ ಕಥನವು ಕಲೆಯ ದೃಷ್ಟಿಯಿಂದಲೂ ಬಹಳ ಪ್ರಮುಖವಾದುದಾಗಿದೆ. ಮಾಸ್ಕೋದಲ್ಲಿನ ಕಲಾಗ್ಯಾಲರಿಗಳು, ಅಲ್ಲಿನ ವೈವಿಧ್ಯಮಯ ಚಿತ್ರಕಲಾ ಕೃತಿಗಳು, ಅಲ್ಲಿನ ಚಿತ್ರಕಲೆಯ ಸ್ಥಿತಿಗತಿಗಳು, ಕಲಾವಿದರು, ಕಲಾ ಪರಂಪರೆ ಇವುಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಇದರಲ್ಲಿ ಉಲ್ಲೇಖಿಸಿರುವುದರಿಂದ ಇದೊಂದು ಕಲಾ ಪ್ರವಾಸ ಕಥನ ಎಂದೂ ಹೇಳಬಹುದಾಗಿದೆ. ಐದನೆಯ ಕೃತಿ ಬಿ.ಪಿ.ಬಾಯಿರಿಯವರ 'ಕಲೆಗಾರರ ಕಥೆಗಳು.[೧೪೧] ಇದರಲ್ಲಿ ಭಾರತೀಯ ಮತ್ತು ಪಾಶ್ಚಾತ್ಯ ಕಲಾವಿದರ ಸಂಕ್ಷಿಪ್ತ ಕಲಾಬದುಕನ್ನು ರೋಚಕ ಘಟ್ಟಗಳೊಂದಿಗೆ ಕಟ್ಟಿಕೊಡಲಾಗಿದೆ.

---

೧೩೩. ಬಿ.ಪಿ.ಬಾಯಿರಿ : ಚಿಕ್ಕಮಕ್ಕಳ ಚಿತ್ರಕಲೆ : ಪ್ರಸದಾರಾಂಗ, ಮೈಸೂರು ವಿಶ್ವವಿದ್ಯಾಲಯ-೧೯೭೧
೧೩೪. ಕೆ.ಬಿ.ರಾಮಕೃಷ್ಣರಾವ್ : ಸೌಂದರ್ಯ ಮತ್ತು ಕಲೆ : ಶಾರದಾ ಪ್ರಕಾಶನ, ಬೆಂಗಳೂರು-೧೯೭೧
೧೩೫. ವಿ.ಎಸ್.ವಾಕಣಕರ್ : ಪೇಂಟೆಡ್ ರಾಕ್‌ಶೆಲ್ಟರ್ಸ್ ಆಫ್ ಇಂಡಿಯಾ : ಪುನಾ ಯುನಿವರ್ಸಿಟಿ, ಪೂನಾ-೧೯೭೨
೧೩೬. ಸ.ಮ.ಶಿರಹಟ್ಟಿ : ಭಾರತೀಯ ಚಿತ್ರಕಲೆ : ವಿಜಯ ಕಲಾಮಂದಿರ, ಗದಗ-೧೯೭೨
೧೩೭. ಎಸ್.ಕೆ.ರಾಮಚಂದ್ರರಾವ್ : ಕೆ.ವೆಂಕಟಪ್ಪ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು-೧೯೭೩
೧೩೮. ಶಿವರಾಮಕಾರಂತ : ಕರ್ನಾಟಕ ಪೇಂಟಿಂಗ್ಸ್ : ಮೈಸೂರು ವಿಶ್ವವಿದ್ಯಾಲಯ, ಮೈಸೂರು-೧೯೭೩
೧೩೯. ಜಿ.ಎಸ್.ಶ್ರೀನಿವಾಸನ್ : ಸೌಂದರ್ಯ ಮೀಮಾಂಸೆ : ಡಿ.ವಿ.ಕೆ. ಮೂರ್ತಿ ಪ್ರಕಾಶನ; ಮೈಸೂರು-೧೯೭೩
೧೪೦. ಜಿ.ಎಸ್.ಶಿವರುದ್ರಪ್ಪ : ಮಾಸ್ಕೋದಲ್ಲಿ ೨೨ ದಿನಗಳು : ಶಾರದಾ ಪ್ರಕಾಶನ, ಬೆಂಗಳೂರು-೧೯೭೩
೧೪೧. ಬಿ.ಪಿಬಾಯಿರಿ : ಕಲೆಗಾರರ ಕಥೆಗಳು : ಸಮಾಜ ಪುಸ್ತಕಾಲಯ, ಧಾರವಾಡ-೧೯೭೩

ಕ್ರಿ.ಶ. ೧೯೭೪ ರಲ್ಲಿ ಎರಡು ಕಲಾಪುಸ್ತಕಗಳು ಪ್ರಕಟಗೊಂಡಿವೆ. ಮೊದಲನೆಯದು ವಿ.ಎಸ್.ವಾಕಣಕರ್ ಅವರ 'ಇಂಡಿಯನ್ ರಾಕ್ ಪೇಂಟಿಂಗ್ಸ್.'[೧೪೨] ಇದು ಭಾರತದ ಪ್ರಾಗಿತಿಹಾಸ ಕಾಲದ ಬಂಡೆ ಚಿತ್ರಗಳ ಬಗ್ಗೆ ಇಂಗ್ಲೀಷನಲ್ಲಿ ಬರೆಯಲ್ಪಟ್ಟ ಕೃತಿಯಾದರೂ ಇದರಲ್ಲಿ ಕರ್ನಾಟಕದಲ್ಲಿ ಕಂಡುಬರುವ ಪ್ರಾಗಿತಿಹಾಸ ಕಾಲದ ಬಂಡೆ ಚಿತ್ರಗಳ ಬಗ್ಗೆಯೂ ವಿವೇಚನೆ ಮಾಡಲಾಗಿದೆ. ಈ ವರ್ಷದಲ್ಲಿ ಪ್ರಕಟಗೊಂಡ ಮತ್ತೊಂದು ಕೃತಿ ಬಾಲಕೃಷ್ಣ ವಾಮನ್‌ಜೋಗ ಸಂಪಾದನೆ ಮಾಡಿರುವ ಶಂಕರರಾವ್ ಆಳಂದಕರ್ ಸಂಭಾವನಾ ಗ್ರಂಥವಾಗಿದೆ.[೧೪೩] ಇದರಲ್ಲಿ ಆಳಂದಕರರ ಕಲಾಬದುಕಿಗೆ ಸಂಬಂಧ ಪಟ್ಟಂತೆ ಲೇಖನಗಳನ್ನು ವಿವಿಧ ವಿದ್ವಾಂಸರು ಬರೆದಿದ್ದಾರೆ. ಮತ್ತು ಕಲಾ ಪ್ರಕಾರಗಳ ಬಗ್ಗೆಯೂ ಲೇಖನಗಳನ್ನು ಬರೆಯಿಸಿ ಪ್ರಕಟಿಸಲಾಗಿದೆ. ಇದೆ ವರ್ಷದಲ್ಲಿ ಮ.ಶ್ರೀಧರಮೂರ್ತಿಯವರ ೬೪ ಕಲೆಗಳು ಚಿಕ್ಕ ಪುಸ್ತಕವೂ[೧೪೪] ಪ್ರಕಟಗೊಂಡಿದೆ.

ಕ್ರಿ.ಶ. ೧೯೭೫ ರಲ್ಲಿಯೂ ೨ ಪುಸ್ತಕಗಳು ಪ್ರಕಟಗೊಂಡಿವೆ. ಶಿವರಾಮ ಕಾರಂತರ ಶಿಲ್ಪ, ಚಿತ್ರ, ವಾಸ್ತುಕಲೆಗಳು,[೧೪೫] ಮತ್ತು 'ಕರ್ನಾಟಕದ ಚಿತ್ರಕಲೆ'[೧೪೬] ಕೃತಿಗಳು ಚಿತ್ರಕಲೆಗೆ ಸಂಬಂಧಿಸಿವೆ. ಇವುಗಳಲ್ಲಿ ಶಿಲ್ಪ, ಚಿತ್ರ, ವಾಸ್ತುಕಲೆಗಳು ಕೃತಿಯಲ್ಲಿ ಭಾರತದ ಮತ್ತು ಕರ್ನಾಟಕದ ಶಿಲ್ಪ, ಚಿತ್ರ, ವಾಸ್ತುಕಲೆಗಳನ್ನು ಕುರಿತು ಹೇಳಲಾಗಿದ್ದರೆ, 'ಕರ್ನಾಟಕದ ಚಿತ್ರಕಲೆ' ಕೃತಿಯಲ್ಲಿ ಆದಿಮಾನವ ಕಲೆ, ಹಂಪಿ, ಲೇಪಾಕ್ಷಿ, ಶಿಬಿ, ನರಗುಂದ, ನಿಪ್ಪಾಣಿ, ಸಿರಾ ಮುಂತಾದ ಭಿತ್ತಿಚಿತ್ರಗಳ ಬಗ್ಗೆ ಹೇಳಲಾಗಿದೆ.

ಕ್ರಿ.ಶ. ೧೯೭೬ರಲ್ಲಿ ನಾಲ್ಕು ಪುಸ್ತಕಗಳು ಪ್ರಕಟಗೊಂಡಿವೆ. ವಿ.ಸೀತಾರಾಮಯ್ಯನವರ 'ಕಲಾನುಭವ'[೧೪೭] ಕೃತಿಯಲ್ಲಿ ಕಲೆ ಮತ್ತು ಸೌಂದರ್ಯ, ಕಲೆ ಮತ್ತು ಕಲಾವಿದ, ಸಹೃದಯ, ಕಲಾಕೃತಿ ಇವುಗಳ ನಡುವಿನ ಸಂಬಂಧಗಳು, ರಸಾನುಭವ ಮತ್ತು ಕಲಾನುಭವದ ಪರಿಕಲ್ಪನೆಗಳ ಕುರಿತು ಚರ್ಚಿಸಲಾಗಿದೆ. 'ಕಲಾತತ್ವ' ಕೃತಿಯನ್ನು[೧೪೮] ಸಿ.ಪಿ.ಕೃಷ್ಣಕುಮಾರ ಇಂಗ್ಲೀಷನಿಂದ ಅನುವಾದ ಮಾಡಿದ್ದಾರೆ. ಇದರಲ್ಲಿ ಕಲೆ ಎಂದರೇನು? ಕಲೆ ಮತ್ತು ಸಹೃದಯರ ಸಂಬಂಧಗಳು, ಕಲಾಕೃತಿಯ ನಿಲುವೇನು? ಕೃತಿ ರಚನೆಯ ನಂತರ ಕಲಾಕೃತಿ ಮತ್ತು ಕಲಾವಿದನ ಸಂಬಂಧಗಳೇನು? ಮುಂತಾದ ಹಲವಾರು ಸಂಗತಿಗಳ ಬಗ್ಗೆ ವಿವೇಚಿಸಲಾಗಿದೆ.

ಈ ವರ್ಷದಲ್ಲಿ ಪ್ರಕಟಗೊಂಡ ಮತ್ತೊಂದು ಪುಸ್ತಕ ಹರಿಪ್ರಿಯ ಅವರ 'ರಸರೇಖೆ.'[೧೪೯] ಇದು ಕೂಡಾ ಅನುವಾದ ಗ್ರಂಥವಾಗಿದ್ದು, ಇದರಲ್ಲಿ ರೇಖೆಯ ಮಹತ್ವ, ಚಿತ್ರಕಲೆಯಲ್ಲಿ ರೇಖೆಯ ವೈವಿಧ್ಯತೆ ಪ್ರಕಾರಗಳು ಮತ್ತು ರೇಖಾಚಿತ್ರ ಬೆಳೆದುಬಂದ ಹಿನ್ನೆಲೆ ಮುಂತಾದ ಅಂಶಗಳನ್ನು ಕುರಿತಂತೆ ಸಂಕ್ಷಿಪ್ತವಾಗಿ ಹೇಳಲಾಗಿದೆ. ಭಾರತೀಯ ಚಿತ್ರಕಲೆಯ ರೇಖಾವಿನ್ಯಾಸಕ್ಕಿಂತಲೂ ಪಾಶ್ಚಾತ್ಯ ಚಿತ್ರಕಲಾ ರೇಖಾ ಲಾಲಿತ್ಯದ ಬಗ್ಗೆ ಹೆಚ್ಚಿನ ಮಾಹಿತಿ ಇದೆ. ಈ ಅವಧಿಯಲ್ಲಿ ಪ್ರಕಟಗೊಂಡ ಇನ್ನೊಂದು ಕೃತಿಯನ್ನು ಎನ್.ಬಾಲಸುಬ್ರಹ್ಮಣ್ಯ[೧೫೦] ಕನ್ನಡಕ್ಕೆ ಅನುವಾದ ಮಾಡಿದ್ದಾರೆ.

---

೧೪೨. ವಿ.ಎಸ್.ವಾಕಣಕರ್ : ಇಂಡಿಉನ್ ರಾಕ್ ಪೇಂಟಿಂಗ್ಸ : ಸ್ಮಿತ್‌ಸೋನಿಯನ್ ಇನ್‌ಸ್ಟಿಟ್ಯೂಟ್ ವಾಸಿಂಗ್‌ಟನ್-೧೯೭೪

೧೪೩. ಬಾಲಕೃಷ್ಣ ವಾಮನಜೋಗ :(ಸಂ): ಶಂಕರರಾವ್ ಆಳಂದಕರ್: ನೂತನ ವಿದ್ಯಾಲಯ ಸಮಿತಿ,ಗುಲಬರ್ಗಾ-೧೯೭೪

೧೪೪. ಮ.ಶ್ರೀಧರಮೂರ್ತಿ : ೬೪ ಕಲೆಗಳು : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ-೧೯೭೪

೧೪೫. ಶಿವರಾಮಕಾರಂತ : ಶಿಲ್ಪ ಚಿತ್ರ, ವಾಸ್ತುಕಲೆಗಳು : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೭೫

೧೪೬. ಶಿವರಾಮಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ : ಐ.ಬಿ.ಹೆಚ್.ಪ್ರಕಾಶನ, ಬೆಂಗಳೂರು-೧೯೭೫

೧೪೭. ವಿ.ಸಿತಾರಾಮಯ್ಯ : ಕಲಾನುಭವ : ಬೆಂಗಳೂರು ವಿಶ್ವವಿದ್ಯಾಲಯ-೧೯೭೬

೧೪೮. ಸಿ.ಪಿ.ಕೃಷ್ಣಕುಮಾರ : ಕಲಾತತ್ವ : ಸಹ್ಯಾದ್ರಿ ಪ್ರಕಾಶನ, ಮೈಸೂರು-೧೯೭೬

೧೪೯. ಹರಿಪ್ರಿಯ : ರಸರೇಖೆ : ಮಯೂರ ಪ್ರಕಾಶನ, ಬೆಂಗಳೂರು-೧೯೭೬

೧೫೦. ಎನ್.ಬಾಲಸುಬ್ರಹ್ಮಣ್ಯ : ಕಲೆಗಳು ಮತ್ತು ಮಾನವ : ಕಾವ್ಯಾಲಯ ಪ್ರಕಾಶನ, ಮೈಸೂರು-೧೯೭೬

ಇದು ಇಂಗ್ಲೀಷನಲ್ಲಿ ಇರ್ವಿನ್ ಎಡ್ಮನ್‌ರಿಂದ ರಚಿತಗೊಂಡಿದ್ದರೆ, ಕನ್ನಡದಲ್ಲಿ ಕಲೆಗಳು ಮತ್ತು ಮಾನವ ಎಂದು ಹೆಸರಿಸಲಾಗಿದೆ. ಮಾನವನಲ್ಲಿ ಕಲೆಗಳು ಹೇಗೆ ಬೆಳೆದಿವೆ ಎಂದು ತಿಳಿಸಲಾಗಿದೆ. ಕ್ರಿ.ಶ. ೧೯೭೭ರಲ್ಲಿ ೩ ಕೃತಿಗಳು ಕರ್ನಾಟಕದ ಚಿತ್ರಕಲಾ ಸಾಹಿತ್ಯದಲ್ಲಿ ಪ್ರಕಟಗೊಂಡಿವೆ. ಎಸ್.ಕೆ.ಹೂಗಾರ್‌ರ 'ಕಲೆ ಮತ್ತು ಹಬ್ಬ' ಕೃತಿಯಲ್ಲಿ[೧೫೧] ಭಾರತೀಯ ಹಬ್ಬಗಳಲ್ಲಿ ಧರ್ಮಾಧಾರಿತವಾಗಿ ರಚನೆಗೊಳ್ಳುವ ಚಿತ್ರಕಲೆಯನ್ನು ಸಂಕ್ಷಿಪ್ತವಾಗಿ ಬಿಂಬಿಸಲಾಗಿದೆ. 'ಅಪೂರ್ವ ಪಶ್ಚಿಮ' ಶಿವರಾಮ ಕಾರಂತರ ಪ್ರವಾಸ ಸಾಹಿತ್ಯವಾಗಿದೆ.[೧೫೨] ಪಶ್ಚಿಮದೇಶಗಳನ್ನು ಸುತ್ತಾಡಿದ ಕಾರಂತರು ತಾವು ಆಯಾ ದೇಶಗಳಲ್ಲಿ ಕಂಡಂತಹ ಕಲೆಯ ವಿವರಗಳನ್ನು ಮುಖ್ಯವಾಗಿ ಈ ಕೃತಿಯಲ್ಲಿ ಕೊಟ್ಟಿದ್ದಾರೆ. ಪಾಶ್ಚಾತ್ಯ ದೇಶಗಳ ಕಲಾಗ್ಯಾಲರಿಗಳು, ಕಲಾಪ್ರಕಾರಗಳು, ಕಲಾವಿದರು, ಕಲಾ ಉತ್ಸವಗಳು, ಕಲಾ ಅಕಾಡಮಿಗಳು, ಕಲಾಬರಹಗಳು, ಹೀಗೆ ಹಲವಾರು ಸಂಗತಿಗಳನ್ನು ಅವರು ಚರ್ಚೆಗೊಳಪಡಿಸಿದ್ದಾರೆ. ೧೯೭೭ರಲ್ಲಿ ಪ್ರಕಟಗೊಂಡ ಮತ್ತೊಂದು ಕೃತಿ ಜೆ.ಸಿ.ನಾಗಪಾಲರ 'ಮ್ಯೂರಲ್ ಪೇಂಟಿಂಗ್ಸ ಇನ್ ಇಂಡಿಯಾ' ಎಂಬ ಆಂಗ್ಲ ಪುಸ್ತಕ.[೧೫೩] 'ಭಾರತದ ಭಿತ್ತಿಚಿತ್ರಗಳು' ಎಂಬ ತಲೆ ಬರಹ ಹೊಂದಿದ್ದರೂ ಅದರಲ್ಲಿ ಕರ್ನಾಟಕದ ಬಾದಾಮಿ, ಶಿಬಿ, ಸಿರಾ, ಶ್ರೀರಂಗಪಟ್ಟಣ, ಹಂಪಿ, ಆನೆಗುಂದಿ ಮುಂತಾದ ಸ್ಥಳಗಳಲ್ಲಿನ ಭಿತ್ತಿಚಿತ್ರಗಳ ವಿವರಗಳಿವೆ.

ಮುಂದಿನ ವರ್ಷ ಕ್ರಿ.ಶ. ೧೯೭೮ರಲ್ಲಿ ೪ ಪುಸ್ತಕಗಳು ಪ್ರಕಟಗೊಂಡಿವೆ. ಮೊದಲನೆಯದು ಸಿ.ಪಿ.ಕೆ. ಅವರ ಕಲೆ ಎಂದರೇನು?, ಲಿಯೋಟಾಲ್‌ಸ್ಟಾಯ್ ಅವರ ವಾಟ್ ಈಜ್ ಆರ್ಟ? ಮೂಲ ಇಂಗ್ಲೀಷ ಕೃತಿಯನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ.[೧೫೪] ಇದರಲ್ಲಿ ಟಾಲ್‌ಸ್ಟಾಯ್ ಕಲೆ, ಕಲಾತತ್ವಗಳ ಬಗ್ಗೆ ಕೊಡುವ ವ್ಯಾಖ್ಯಾನಗಳು ಇತರರಿಗಿಂತ ಭಿನ್ನವಾಗಿವೆ. ಕಲೆ ಮತ್ತು ಅದರ ತತ್ವಗಳು ಮಾನವನ ಬದುಕಿನೊಂದಿಗೆ ಹೇಗೆ ಸಮ್ಮಿಳಿತ ಗೊಂಡಿವೆ ಎನ್ನುವಂತಹ ಅಂಶಗಳನ್ನು ವಿಭಿನ್ನ ದೃಷ್ಟಿಕೋನದಿಂದ ಇಲ್ಲಿ ಪ್ರಸ್ತುತ ಪಡಿಸಲಾಗಿದೆ. ೧೯೭೮ರಲ್ಲಿ ಪ್ರಕಟಗೊಂಡ ಮತ್ತೊಂದು ಕೃತಿ ಇಂಗ್ಲೀಷನಲ್ಲಿದೆ. ಇದನ್ನು ಆರ್.ಸಿ.ಅಗರವಾಲ್ ಬರೆದಿದ್ದು[೧೫೫] ಆದಿಲ್‌ಶಾಹಿ ಕಾಲದ ಚಿತ್ರಗಳ ವಿಶ್ಲೇಷಣೆಯನ್ನು ಒಳಗೊಂಡಿದೆ. 'ಎ ನೋಟ್ಸ ಆನ್ ದಿ ಆದಿಲ್‌ಶಾಹಿ ಪೇಂಟಿಂಗ್ಸ' ಹೆಸರಿನ ಪುಸ್ತಕದಲ್ಲಿ ಬಿಜಾಪುರ ಆದಿಲ್‌ಶಾಹಿ ಸುಲ್ತಾನರ ಕಾಲದ ಭಿತ್ತಿಚಿತ್ರ, ಹಸ್ತಪ್ರತಿ ಚಿತ್ರ ಮತ್ತು ಕಿರುರೂಪ ಚಿತ್ರಗಳ ಬಗ್ಗೆ ವಿವೇಚಿಸಲಾಗಿದೆ. ಇದೆ ವರ್ಷದಲ್ಲಿ ವಿ.ಕೃ.ಗೋಕಾಕ 'ಕಲೆಯ ನೆಲೆ' ಕೃತಿಯನ್ನು ರಚಿಸಿದ್ದಾರೆ.[೧೫೬] ಇದು ಸಾಹಿತ್ಯಕ್ಕೆ ಸಂಬಂಧಿಸಿದ್ದರೂ ಸೌಂದರ್ಯದ ಪರಿಕಲ್ಪನೆ, ರಸಾನುಭವದಂತಹ ಅಂಶಗಳಿಂದಾಗಿ ಚಿತ್ರಕಲಾ ಕ್ಷೇತ್ರಕ್ಕೂ ಅನ್ವಯಿಸುತ್ತದೆ. ಅಲ್ಲದೆ ಸಾಹಿತ್ಯ ಮತ್ತು ಚಿತ್ರಕಲೆಯ ಅಭಿವ್ಯಕ್ತಿಗಳು ಒಂದೆ ಆಗಿದ್ದು, ಹೊರಹಾಕುವ ಮಾಧ್ಯಮಗಳು ಮಾತ್ರ ಬೇರೆಯಾಗಿವೆ ಎಂಬುದನ್ನು ಇಲ್ಲಿ ಸ್ಮರಿಸಬಹುದು. ಈ ವರ್ಷದಲ್ಲಿ ಪ್ರಕಟಗೊಂಡ ನಾಲ್ಕನೆಯ ಕೃತಿ. ಎಸ್.ಕೆ.ರಾಮಚಂದ್ರರಾವ್‌ರ ಕೆ.ವೆಂಕಟಪ್ಪ, ಇದರಲ್ಲಿ[೧೫೭] ವೆಂಕಟಪ್ಪನವರ ಸಂಕ್ಷಿಪ್ತ ಜೀವನ, ಕಲೆ ಮತ್ತು ಕಲಾಕೃತಿಗಳು, ಕಲಾಶೈಲಿ, ಚಿತ್ರಗಳ ವಸ್ತುವಿಷಯ ಮುಂತಾದ ಸಂಗತಿಗಳು ಬಿಂಬಿತಗೊಂಡಿವೆ.

---

೧೫೧. ಎಸ್.ಕೆ.ಹೂಗಾರ : ಕಲೆ ಮತ್ತು ಹಬ್ಬ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೭೭
೧೫೨. ಶಿವರಾಮಕಾರಂತ : ಅಪೂರ್ವ ಪಶ್ಚಿಮ : ರಾಜಲಕ್ಷ್ಮೀ ಪ್ರಕಾಶನ, ಬೆಂಗಳೂರು-೧೯೭೭
೧೫೩. ಜೆ.ಸಿ.ನಾಗಪಾಲ : ಮೂರಲ್ ಪೇಂಟಿಂಗ್ಸ ಇನ್ ಇಂಡಿಯಾ : ಗೇನ್ ಪಬ್ಲಿಕೇಷನ್ಸ, ದೆಹಲಿ-೧೯೭೭
೧೫೪. ಸಿ.ಪಿ.ಕೃಷ್ಣಕುಮಾರ : ಕಲೆ ಎಂದರೇನು? ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೭೮
೧೫೫. ಆರ್.ಸಿ.ಅಗರವಾಲ್ : ಎ ನೋಟ್ಸ ಆನ್ ಆದಿಲ್‌ಶಾಹಿ ಪೇಂಟಿಂಗ್ಸ : ಆರ್ಕಿಯಾಲಜಿ ಡಿಪಾರ್ಟಮೆಂಟ ಮೈಸೂರು-೧೯೭೮
೧೫೬. ವಿ.ಕೃ.ಗೋಕಾಕ : ಕಲೆಯ ನೆಲೆ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ-೧೯೭೮
೧೫೭. ಎಸ್.ಕೆ.ರಾಮಚಂದ್ರರಾವ್ : ಕೆ.ವೆಂಕಟಪ್ಪ : ಭಾರತ-ಭಾರತಿ ಪ್ರಕಾಶನ, ಬೆಂಗಳೂರು-೧೯೭೮

ಕ್ರಿ.ಶ.೧೯೭೯ರಲ್ಲಿ ಹೆಚ್ಚಿನ ಕಲಾಪುಸ್ತಕಗಳು ಪ್ರಕಟಗೊಂಡಿಲ್ಲ. ಎಚ್.ಕೆ.ರಾಮಚಂದ್ರಮೂರ್ತಿ ಕನ್ನಡಕ್ಕೆ ಅನುವಾದಿಸಿದ 'ಕಲೆ ಮತ್ತು ಸಾಮಾಜಿಕ ಜೀವನ' ಪುಸ್ತಕವು[೧೫೮] ಈ ವರ್ಷದಲ್ಲಿ ಪ್ರಮುಖವಾದ ಒಂದೇ ಕೃತಿಯಾಗಿದೆ. ಪ್ಲಖನೋವ್ ಅವರ ಮೂಲ ಇಂಗ್ಲೀಷ್ ಕೃತಿಯ ಅನುವಾದದ ಈ ಪುಸ್ತಕದಲ್ಲಿ ಕಲೆ ಮತ್ತು ಸಮಾಜಗಳ ನಡುವಿನ ಸಂಬಂಧ, ಸಮಾಜದಲ್ಲಿ ಕಲೆಯ ಸ್ಥಾನಮಾನಗಳು, ಸಾಮಾಜಿಕ ಜೀವನದಲ್ಲಿ ಕಲೆಯ ಅನಿವಾರ್ಯತೆ ಮತ್ತು ಅವಜ್ಞೆಗಳ ತೌಲನಿಕ ವಿವೇಚನೆ ಕಂಡುಬರುತ್ತದೆ.

ಕ್ರಿ.ಶ. ೧೯೮೦ರಲ್ಲಿ ಮತ್ತೆ ಹೆಚ್ಚಿನ ಚಿತ್ರಕಲಾ ಪುಸ್ತಕಗಳು ಪ್ರಕಟಗೊಂಡಿವೆ. ಹೋ.ಶ್ರೀ.ಹುದ್ದಾರರ "ಚಿತ್ರಕಲಾ ಪ್ರವೇಶ" ಕಲಾಶಿಕ್ಷಣ ಪಡೆಯುವ ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚನೆ ಮಾಡಲಾಗಿದೆ.[೧೫೯] ಇದರಲ್ಲಿ ಚಿತ್ರಕಲೆಯನ್ನು ಹೇಗೆ ಕಲಿಯಬೇಕೆಂಬ ಮಾಹಿತಿಯನ್ನು ಕೊಡಲಾಗಿದೆಯಲ್ಲದೆ ಸಂಬಂಧಿಸಿದ ಹಲವಾರು ಚಿತ್ರಗಳನ್ನು ಅಳವಡಿಸಲಾಗಿದೆ. ಬಿ.ಪಿ.ಬಾಯಿರಿಯವರು ಚಿತ್ರಕಲೆಗೆ ಸಂಬಂಧಿಸಿದ ಚಿಕ್ಕ ಕಥೆಗಳನ್ನು ಬರೆದು ಪ್ರಕಟಿಸಿದ್ದಾರೆ.[೧೬೦] ಇದರಲ್ಲಿ ಕಲಾವಿದರ ಸ್ಥೂಲ ಪರಿಚಯ ಕಥೆಯ ಮೂಲಕ ಬಿಂಬಿತವಾಗಿದೆ.

'ವಿಮರ್ಶಾ ತತ್ವಗಳು ಮತ್ತು ಪ್ರಾಯೋಗಿಕ ವಿಮರ್ಶೆ' ಪುಸ್ತಕವನ್ನು ವಿ.ಕೃ.ಗೋಕಾಕರು ರಚಿಸಿದ್ದಾರೆ.[೧೬೧] ಸಾಹಿತ್ಯಕ ಹಿನ್ನೆಲೆಯ ಈ ಕೃತಿ ಪರೋಕ್ಷವಾಗಿ ಕಲಾವಿಮರ್ಶೆಗೂ ಸಹಕಾರಿಯಾಗಿದೆ. ರಸಾನುಭವ, ಲೋಕಾನುಭವ, ಕೃತಿರಚನೆ, ಮಾನಸಿಕ ದೂರ, ಔಚಿತ್ಯ, ಧ್ವನಿಸಿದ್ಧಾಂತ, ಅಲಂಕಾರ ಮುಂತಾದ ಸಂಗತಿಗಳು ಇಲ್ಲಿ ಬಿಂಬಿತಗೊಂಡಿವೆ. ಪಿ.ಆರ್.ತಿಪ್ಪೇಸ್ವಾಮಿ ಕಲಾವಿದ ಎಂ.ವೀರಪ್ಪ ಬಗ್ಗೆ ವ್ಯಕ್ತಿ ಪರಿಚಯವನ್ನು ಬರೆದಿದ್ದಾರೆ.[೧೬೨] ಇದರಲ್ಲಿ ವೀರಪ್ಪನವರ ಸಂಕ್ಷಿಪ್ತ ಜೀವನ, ಕಲಾಬದುಕು, ಕಲಾಕೃತಿಗಳು, ಕಲಾಶೈಲಿ, ಪ್ರಶಸ್ತಿ ಸನ್ಮಾನಗಳನ್ನು ಕುರಿತು ಹೇಳಲಾಗಿದೆ. ೧೯೮೦ರಲ್ಲಿ ಬಿ.ವಿ.ಕೆ. ಶಾಸ್ತ್ರಿ ಮತ್ತು ಎಸ್.ಆರ್.ರಾವ್ ಕೂಡಿಕೊಂಡು 'ಟ್ರೆಡಿಷನಲ್ ಪೇಂಟಿಂಗ್ಸ ಆಫ್ ಕರ್ನಾಟಕ' ಕೃತಿಯನ್ನು ಇಂಗ್ಲೀಷನಲ್ಲಿ ರಚಿಸಿದ್ದಾರೆ.[೧೬೩] ಇದರಲ್ಲಿ ಕರ್ನಾಟಕದ ಸಾಂಪ್ರದಾಯಿಕ ಚಿತ್ರಕಲೆಯ ಬಗ್ಗೆ ತಿಳಿಸಲಾಗಿದೆ. ಕರ್ನಾಟಕ ಸಾಂಪ್ರದಾಯಿಕ ಕಲೆಯ ಬೆಳವಣಿಗೆ, ಪ್ರಕಾರಗಳು, ವಸ್ತುವಿಷಯಗಳು, ಪ್ರಾದೇಶಿಕ ಭಿನ್ನತೆಗಳು, ತಂತ್ರಗಾರಿಕೆ, ರಚನಾಕ್ರಮ, ಬಣ್ಣತಯಾರಿಕೆ, ಶೈಲಿ, ಪ್ರಭಾವ ಮುಂತಾದ ಅಂಶಗಳನ್ನು ಬಿಂಬಿಸಲಾಗಿದೆ. ರಾಮಚಂದ್ರೆಗೌಡ 'ಗೊಂಬೆಯಾಟ' ಕೃತಿಯನ್ನು ರಚನೆಮಾಡಿದ್ದಾರೆ. ಇದರಲ್ಲಿ ಗೊಂಬೆಗಳ ಕಲಾವಂತಿಕೆಯನ್ನು ಬಿಂಬಿಸಲಾಗಿದೆ.[೧೬೪] ಗೊಂಬೆಗಳ ತಯಾರಿಕೆ, ಪರಿಕರಗಳು, ಆಟದ ಪ್ರಸಂಗಗಳು, ಆಟದ ವಿಧಾನ ಮುಂತಾದ ಅಂಶಗಳನ್ನು ಇಲ್ಲಿ ಹೇಳಿದೆ.

'ಭಾರತೀಯ ಚಿತ್ರಕಲೆ' ಪುಸ್ತಕವನ್ನು ಬಿ.ಪಿ.ಬಾಯಿರಿಯವರು ರಚನೆ ಮಾಡಿದ್ದು,[೧೬೫] ಇದರಲ್ಲಿ ಭಾರತೀಯ ಚಿತ್ರಕಲೆಯ ಸಂಕ್ಷಿಪ್ತ ಪರಿಚಯ ಕೊಡಲಾಗಿದೆ. ಆದಿಮಾನವಕಲೆ, ಸಿಂಧೂನಾಗರಿಕತೆ ಕಲೆ, ವೇದಗಳ ಕಾಲದ ಕಲೆ, ಶಾತವಾಹನರ ಕಲೆ, ಅಜಂತಾ ಎಲ್ಲೋರಾ ಕಲೆ, ಬಾದಾಮಿ, ದಖನಿ ಚಿತ್ರಕಲೆ, ಸುರಪುರ ಚಿತ್ರಕಲೆ, ಮೊಗಲ್ ಕಲೆ, ರಜಪೂತಕಲೆ, ಕಾಂಗ್ರಾಚಿತ್ರಕಲೆ ಮುಂತಾದ ಹಲವಾರು ವಿಷಯಗಳನ್ನು ಸ್ಥೂಲವಾಗಿ ಈ ಕೃತಿಯಲ್ಲಿ ಹೇಳಲಾಗಿದೆ.

---

೧೫೮. ಎಸ್.ಕೆ.ರಾಮಚಂದ್ರಮೂರ್ತಿ : ಕಲೆ ಮತ್ತು ಸಾಮಾಜಿಕ ಜೀವನ : ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು-೧೯೭೯
೧೫೯. ಹೊ.ಶ್ರೀ.ಹುದ್ದಾರ : ಚಿತ್ರಕಲಾ ಪ್ರವೇಶ : ಸಮಾಜ ಪುಸ್ತಕಾಲಯ, ಧಾರವಾಡ-೧೯೮೦
೧೬೦. ಬಿ.ಪಿ.ಬಾಯಿರಿ : ಚಿತ್ರಕಲೆಯ ಚಿಕ್ಕ ಕಥೆಗಳು : ಸಮಾಜ ಪುಸ್ತಕಾಲಯ, ಧಾರವಾಡ-೧೯೮೦
೧೬೧. ವಿ.ಕೃ.ಗೋಕಾಕ : ವಿಮರ್ಶಾ ತತ್ವಗಳು ಮತ್ತು ಪ್ರಾಯೋಗಿಕ ವಿಮರ್ಶೆ : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ-೧೯೮೦
೧೬೨. ಪಿ.ಆರ್.ತಿಪ್ಪೇಸ್ವಾಮಿ : ಎಂ.ವೀರಪ್ಪ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೦
೧೬೩. ಬಿ.ವಿ.ಕೆ.ಶಾಸ್ತ್ರಿ ಮತ್ತು ಎಸ್.ಆರ್.ರಾವ್:ಟ್ರೆಡಿಷನಲ್ ಪೇಂಟಿಂಗ್ಸ ಆಫ್ ಕರ್ನಾಟಕ: ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೦
೧೬೪. ರಾಮಚಂದ್ರೆಗೌಡ : ಗೊಂಬೆಯಾಟ : ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು-೧೯೮೦
೧೬೫. ಬಿ.ಪಿ.ಬಾಯಿರಿ : ಭಾರತೀಯ ಚಿತ್ರಕಲೆ : ಸಮಾಜ ಪುಸ್ತಕಾಲಯ, ಧಾರವಾಡ-೧೯೮೦

'ಕಳೆ-ಕಲೆ' ಎನ್ನುವ ಸಾಹಿತ್ಯ ಕೃತಿಯನ್ನು ಡಾ.ಜ.ಚ.ನಿ. ರಚನೆ ಮಾಡಿದ್ದಾರೆ.[೧೬೬] ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಯಾಗಿದ್ದು ಕಲಾಪ್ರಕ್ರಿಯೆ ಹೇಗೆ ನಡೆಯುತ್ತದೆ?, ಕಲೆ ಎಂದರೇನು? ಕಳೆ ಮತ್ತು ಕಲೆಯ ಭಿನ್ನತೆಗಳೇನು? ಕಲೆಯಲ್ಲಿ ಯಾವ ಪ್ರಮುಖ ಅಂಶಗಳಿರಬೇಕು ಎಂಬುದನ್ನು ಇದರಲ್ಲಿ ಚರ್ಚಿಸಲಾಗಿದೆ. ೧೯೮೦ರಲ್ಲಿ ರಜನಿಪ್ರಸನ್ನರು 'ಕಲಾವಿದ ರೆಂಬ್ರಾಂಟ'ನ ಬಗ್ಗೆ ಚಿಕ್ಕ ಪುಸ್ತಕ ರಚನೆ ಮಾಡಿದ್ದಾರೆ.[೧೬೭] ಇದರಲ್ಲಿ ಆತನ ಸಂಕ್ಷಿಪ್ತ ಜೀವನ, ಕಲೆ, ಕಲಾಕೃತಿ, ಕಲಾಶೈಲಿ, ಚಿತ್ರರಚನಾ ತಂತ್ರಗಳು, ವಸ್ತುವಿಷಯಗಳನ್ನು ಕುರಿತು ಸಂಕ್ಷಿಪ್ತವಾಗಿ ಹೇಳಿದೆ. ಸಂಯೋಜಿತ ಎಂಬ ಚಿಕ್ಕ ಕೃತಿಯನ್ನು ಎನ್. ವಿಶ್ವರೂಪಾಚಾರ್ ಸಂಪಾದನೆ ಮಾಡಿದ್ದು,[೧೬೮] ಇದರಲ್ಲಿ ಕಲೆಯ ಬಗೆಗೆ ಲೇಖನಗಳಿವೆ. ಕಲಾಪ್ರಕಾರ, ಕಲಾಸಾಹಿತ್ಯ, ಕಲಾಶೈಲಿ, ತಂತ್ರಗಾರಿಕೆಯಂತಹ ವಿಷಯಗಳಿಗೆ ಸಂಬಂಧಿಸಿವೆ.

ಕ್ರಿ.ಶ. ೧೯೮೧ರಲ್ಲಿ ಸುರೇಶ ಕುಲಕರ್ಣಿ ಪಿಕಾಸೊ ಎಂಬ ಚಿಕ್ಕ ಕೃತಿಯನ್ನು ರಚನೆ ಮಾಡಿದ್ದಾರೆ.[೧೬೯] ಇದರಲ್ಲಿ ಪಿಕಾಸೋನ ಸಂಕ್ಷಿಪ್ತ ಕಲಾಬದುಕು, ಕಲಾಶೈಲಿ, ಕೃತಿಗಳು, ವಸ್ತುವಿಷಯಗಳು ಮತ್ತು ಕ್ಯೂಬಿಜಂ ಶೈಲಿಯ ಗುಣಲಕ್ಷಣಗಳನ್ನು ತಿಳಿಸಲಾಗಿದೆ. ಕ್ರಿ.ಶ. ೧೯೮೨ರಲ್ಲಿ ಅನೇಕ ಪುಸ್ತಕಗಳು ಕಲಾಕ್ಷೇತ್ರದಲ್ಲಿ ಪ್ರಕಟಗೊಂಡಿವೆ. ಶಕುಂತಲಾ ಬಾಬು ಅವರ 'ಬೆಡಗಿನ ಬಾಟಿಕ್' ಕೃತಿಯು ಬಾಟಿಕ್ ಕಲಾಪ್ರಕಾರಕ್ಕೆ ಸಂಬಂಧಿಸಿದ್ದರೆ,[೧೭೦] ಜಿ.ಶಂ.ಪರಮಶಿವಯ್ಯನವರ 'ಕಲಾಸಾಧಕ' ಕಲಾವಿದ ವೆಂಕಟಪ್ಪನವರ ಕುರಿತು ತಿಳಿಸುತ್ತದೆ.[೧೭೧] ಸಿ.ಪಿ.ಕೃಷ್ಣಕುಮಾರರ 'ಕಲಾಮೀಮಾಂಸೆ' ಟಾಲ್‌ಸ್ಟಾಯ್ ಅವರ ಇಂಗ್ಲೀಷ ಗ್ರಂಥದ ಅನುವಾದವಾಗಿದೆ.[೧೭೨] ಇದರಲ್ಲಿ ಕಲಾ ಮೀಮಾಂಸೆಯನ್ನು ವಿಭಿನ್ನವಾಗಿ ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ಕಲೆ ಎಂದರೇನು? ಅದು ಎಲ್ಲಿಂದ ಹುಟ್ಟುತ್ತದೆ? ಸೌಂದರ್ಯದ ಪರಿಕಲ್ಪನೆಗಳಾವುವು? ಸಾಮಾಜಿಕವಾಗಿ ಕಲೆಯ ಸ್ಥಾನವೇನು? ಮುಂತಾದ ಹಲವು ಸಂಗತಿಗಳ ಬಗ್ಗೆ ಚರ್ಚಿಸಲಾಗಿದೆ.

ಕರ್ನಾಟಕ ಕಂಡ ಶ್ರೇಷ್ಠ ಕಲಾವಿದರಲ್ಲಿ ದಂಡಾವತಿಮಠರು ಪ್ರಮುಖರಾಗಿದ್ದಾರೆ. ೧೯೮೨ರಲ್ಲಿ ವಿ.ಸಿ.ಮಾಲಗತ್ತಿಯವರು ಜಿ.ಎಸ್.ದಂಡಾವತಿಮಠರ ಕುರಿತಾಗಿ ಪುಸ್ತಕವನ್ನು ರಚಿಸಿದ್ದಾರೆ.[೧೭೩] ದಂಡಾವತಿಮಠರ ಸಂಕ್ಷಿಪ್ತ ಜೀವನ, ಬಾಂಬೆಯಲ್ಲಿನ ಜೀವನ, ಅಲ್ಲಿನ ನೂತನ ಕಲಾಶಾಲೆ, ಅವರ ಕಲಾಕೃತಿಗಳು, ಕಲಾಶೈಲಿ ಮುಂತಾದ ಸಂಗತಿಗಳನ್ನು ಬಿಂಬಿಸಲಾಗಿದೆ. ಡಿ.ಗಣೇಶ 'ಕುಶಲಕಲೆಗಳು' ಕೃತಿ ರಚನೆ ಮಾಡಿದ್ದು,[೧೭೪] ವಿವಿಧ ಕುಶಲ ಕಲೆಗಳನ್ನು ಹೇಳುವಾಗ ಚಿತ್ರಕಲೆಯ ಬಗ್ಗೆಯೂ ಇಲ್ಲಿ ಹೇಳಲಾಗಿದೆ. 'ಸಮಕಾಲೀನ ಕಲೆ' ಎಂಬ ಗ್ರಂಥವನ್ನು ಎನ್.ಮರಿಶಾಮಾಚಾರರು ರಚಿಸಿದ್ದಾರೆ.[೧೭೫] ಇದರಲ್ಲಿ ಭಾರತೀಯ ಸಮಕಾಲೀನ ಕಲೆಯ ಸ್ಥಿತಿಗತಿಗಳು, ರಚನಾ ಮಾಧ್ಯಮಗಳು, ವಸ್ತುವಿಷಯಗಳು, ವಿಭಿನ್ನ ಶೈಲಿಗಳು, ಕಲಾವಿದರು, ಅವರು ಅನುಸರಿಸುವ ತಂತ್ರಗಾರಿಕೆಗಳು ಹೀಗೆ ಹಲವಾರು ಸಂಗತಿಗಳು ಬಿಂಬಿತವಾಗಿವೆ.

---

೧೬೬. ಡಾ.ಜ.ಚ.ನಿ. : ಕಳೆ-ಕಲೆ : ಜಗದ್ಗುರು ನಿಡುಮಾಮಿಡಿ ಪುಸ್ತಕ ಭಂಡಾರ, ಬೆಂಗಳೂರು-೧೯೮೦

೧೬೭ ರಜನಿಪ್ರಸನ್ನ : ರೆಂಬ್ರಾಂಟ್ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೮೦

೧೬೮. ಎನ್.ವಿಶ್ವರೂಪಾಚಾರ್ : ಸಂಯೋಜಿತ : ಹರೀಶ ಪ್ರಕಾಶನ, ಬೆಂಗಳೂರು-೧೯೮೦

೧೬೯. ಸುರೇಶ ಕುಲಕರ್ಣಿ : ಪಿಕಾಸೋ : ತಾರಾ ಪ್ರಕಾಶನ, ಭಾರತೀನಗರ, ಧಾರವಾಡ-೧೯೮೧

೧೭೦. ಶಕುಂತಲಾ ಬಾಬು : ಬೆಡಗಿನ ಬಾಟಿಕ್ : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ-೧೯೮೨

೧೭೧. ಜಿ. ಶಂ. ಪರಮಶಿವಯ್ಯ : ಕಲಾಸಾಧಕ : ಮೈಸೂರು ವಿಶ್ವವಿದ್ಯಾಲಯ-೧೯೮೨

೧೭೨. ಸಿ.ಪಿ.ಕೆ: ಕಲಾಮೀಮಾಂಸೆ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ-೧೯೮೨

೧೭೩. ವಿ.ಸಿ.ಮಾಲಗತ್ತಿ : ಜಿ.ಎಸ್.ದಂಡಾವತಿಮಠ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೨

೧೭೪. ಡಿ.ಗಣೇಶ : ಕುಶಲ ಕಲೆಗಳು : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ-೧೯೮೨

೧೭೫. ಎನ್.ಮರಿಶಾಮಾಚಾರ್ : ಸಮಕಾಲೀನ ಕಲೆ: ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೮೨

ಬಿ.ಪಿ.ಬಾಯಿರಿಯವರು ಅನೇಕ ಕಲಾ ಪುಸ್ತಕಗಳನ್ನು ಬರೆದಿದ್ದು, 'ನವ್ಯಕಲೆ ಹಾಗೂ ಕಲೆಗಾರರು' ೧೯೮೨ರಲ್ಲಿ ಪ್ರಕಟಗೊಂಡಿದೆ.[೧೭೬] ಇದರಲ್ಲಿ ಆಧುನಿಕ ಕಲೆಯ ಶೈಲಿಗಳಾದ ಇಂಪ್ರೆಸ್‌ನಿಜಮ್, ಎಕ್ಸಪ್ರೆಸ್‌ನಿಜಮ್, ಸರಿಯಲಿಜಮ್, ಹೀಗೆ ಎಲ್ಲ ಶೈಲಿಗಳು ಮತ್ತು ಆಯಾ ಶೈಲಿಗಳಲ್ಲಿ ಪ್ರಖ್ಯಾತರಾದ ಕಲಾವಿದರ ಬಗ್ಗೆ ತಿಳಿಸಿಕೊಡಲಾಗಿದೆ. ಗದುಗಿನ ಸ.ಮ.ಶಿರಹಟ್ಟಿಯವರು 'ಚಿತ್ರಕಲಾ ಕೈದೀಪ' ಚಿಕ್ಕ ಕೃತಿಯನ್ನು ರಚಿಸಿದ್ದಾರೆ.[೧೭೭] ಇದು ಸಂಕ್ಷಿಪ್ತ ಸ್ವರೂಪದಲ್ಲಿ ಭಾರತೀಯ ಚಿತ್ರಕಲೆಯನ್ನು ಕುರಿತು ಹೇಳುತ್ತದೆ. ಸಿಂಧೂ ನಾಗರಿಕತೆ ಕಲೆ, ವೇದಕಾಲದ ಕಲೆ, ಜನಪದಕಲೆ, ಭಿತ್ತಿಚಿತ್ರಕಲೆ, ಅಜಂತಾ-ಎಲ್ಲೋರಾ, ಬಾದಾಮಿ, ಜೈನಕಲೆ, ಮೈಸೂರು ಚಿತ್ರಶೈಲಿ ಹೀಗೆ ಹಲವಾರು ಸಂಗತಿಗಳನ್ನು ಇಲ್ಲಿ ಹೇಳಲಾಗಿದೆ.

ಕ್ರಿ.ಶ. ೧೯೮೩ರಲ್ಲಿ ಚಿತ್ರಕಲೆಯ ಹಲವು ಕೃತಿಗಳು ಪ್ರಕಟಗೊಂಡಿವೆ. 'ಸಂಶೋಧನೆಯ ಹಾದಿಯಲ್ಲಿ' ಕಿರುಹೊತ್ತಿಗೆಯನ್ನು ಶ್ರೀಶೈಲ ಆರಾಧ್ಯ ಬರೆದಿದ್ದಾರೆ.[೧೭೮] ಇದರಲ್ಲಿ ಚಿತ್ರದುರ್ಗ ಪ್ರದೇಶದ ಪ್ರಾಗಿತಿಹಾಸ ಕಾಲದ ಚಿತ್ರಗಳ ಬಗ್ಗೆ ಸ್ಥೂಲ ಮಾಹಿತಿ ಕೊಡಲಾಗಿದೆ. 'ಕಲಾವಿದರು ನಡೆದುಬಂದ ದಾರಿ' ಪುಸ್ತಕವನ್ನು ಗವೀಶ ಹಿರೇಮಠ ಬರೆದಿದ್ದು,[೧೭೯] ಇದರಲ್ಲಿ ಕರ್ನಾಟಕದ ಕೆಲವು ಚಿತ್ರಕಲಾವಿದರ ಪರಿಚಯ ಕೊಡಲಾಗಿದೆ. ಆಯಾ ಕಲಾವಿದರ ಕಲಾಬದುಕು, ಕಲೆ, ಕಲಾಕೃತಿಗಳು, ಪ್ರಶಸ್ತಿ ಗೌರವಗಳನ್ನು ಕುರಿತಂತೆ ಮಾಹಿತಿ ಕೊಡಲಾಗಿದೆ. ಬೆಂಗಳೂರಿನ ಎನ್.ಮರಿಶಾಮಾಚಾರ್ ೧೯೮೩ರಲ್ಲಿ ಎರಡು ಪುಸ್ತಕಗಳನ್ನು ಹೊರತಂದಿದ್ದಾರೆ. ಮೊದಲನೆಯದು ಕಲಾವಿದ ಹೆಬ್ಬಾರ ಕುರಿತಾಗಿದ್ದು, ಅವರ ಕಲಾಬದುಕು, ಕಲೆ, ಕಲಾಕೃತಿಗಳ ವಿಮರ್ಶೆ, ಕಲೆಯ ಬಗ್ಗೆ ಒಳನೋಟಗಳನ್ನು ಹೇಳಲಾಗಿದೆ.[೧೮೦] ಮತ್ತೊಂದು ಕೃತಿಯು ಸೃಜನಶೀಲರು. ಇದರಲ್ಲಿ ಕೆಲವು ಪಾಶ್ಚಾತ್ಯ ಮತ್ತು ಭಾರತೀಯ ಕಲಾವಿದರ ಕಲಾಬದುಕನ್ನು ಸಂಕ್ಷಿಪ್ತವಾಗಿ ಕಟ್ಟಿಕೊಡಲಾಗಿದೆ.[೧೮೧] ಪಾಶ್ಚಾತ್ಯ ವಿದ್ವಾಂಸರಾದ ಮಾರ್ಕ ಜಬ್ರೊವಿಸ್ಕಿ 'ಡೆಕ್ಕನೀ ಪೇಂಟಿಂಗ್ಸ' ಕೃತಿಯನ್ನು ಇಂಗ್ಲೀಷನಲ್ಲಿ ರಚಿಸಿದ್ದಾರೆ.[೧೮೨] ಇದರಲ್ಲಿ ಕರ್ನಾಟಕದ ಬಿಜಾಪುರ, ಬೀದರ್, ಗುಲಬರ್ಗಾಗಳಲ್ಲಿ ಆಳಿದ ಮುಸ್ಲಿಮ್ ಅರಸರ ಕಾಲದ ಚಿತ್ರಕಲೆಯ ಬಗ್ಗೆ ವಿವೇಚಿಸಲಾಗಿದೆ.

ಇದೆ ಅವಧಿಯಲ್ಲಿ ಎಸ್.ರಾಜಶೇಖರ ಇಂಗ್ಲೀಷನಲ್ಲಿ 'ಮಾಸ್ಟರ್ ಪೀಸಿಸ್ ಆಫ್ ವಿಜಯನಗರ ಆರ್ಟ' ಕೃತಿಯನ್ನು ರಚಿಸಿದ್ದಾರೆ.[೧೮೩] ಇದರಲ್ಲಿ ವಿಜಯನಗರ ಕಾಲದ ಚಿತ್ರಕಲೆಯ ಶ್ರೇಷ್ಠ ಕೃತಿಗಳನ್ನು ಆಯ್ಕೆಮಾಡಿ ಅವುಗಳ ಬಗ್ಗೆ ವಿಶ್ಲೇಷಣೆಯನ್ನು ಮಾಡಿದ್ದಾರೆ. ಇದೊಂದು ಗಮನಾರ್ಹ ಕೃತಿಯಾಗಿದೆ. ೧೯೮೩ರಲ್ಲಿ 'ಕಲಾ ಅರ್ಪಣ' ಪುಸ್ತಕವನ್ನು ಶ್ರೀಮತಿ.ಪ್ರಭಾಶಂಕರ ಬರೆದಿದ್ದು,[೧೮೪] ಮಹಿಳೆಯರು ಹವ್ಯಾಸಕ್ಕಾಗಿ ರೂಪಿಸಿಕೊಳ್ಳುವ, ಕಸೂತಿ, ಹಚ್ಚೆ, ಮದರಂಗಿ, ಚಿತ್ರಕಲೆ, ಹೊಲಿಗೆ, ಹೆಣಿಗೆ, ಅಲಂಕಾರಿಕ ವಸ್ತುಗಳ ತಯಾರಿಕೆ ಹೀಗೆ ಹಲವಾರು ವಿಷಯಗಳ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

---

೧೭೬. ಬಿ.ಪಿ.ಬಾಯಿರಿ : ನವ್ಯಕಲೆ ಹಾಗೂ ಕಲೆಗಾರರು : ಸಮಾಜ ಪುಸ್ತಕಾಲಯ, ಧಾರವಾಡ-೧೯೮೨

೧೭೭. ಸ. ಮ. ಶಿರಹಟ್ಟಿ : ಚಿತ್ರಕಲಾ ಕೈದೀಪ : ಶಿಹಾಮಿ ಪಬ್ಲಿಕೇಷನ್, ಗದಗ-೧೯೮೨

೧೭೮. ಶ್ರೀಶೈಲ ಆರಾಧ್ಯ : ಸಂಶೋಧನೆಯ ಹಾದಿಯಲ್ಲಿ : ಆರೋಹನ ಪ್ರಕಾಶನ, ಚಿತ್ರದುರ್ಗ-೧೯೮೩

೧೭೯. ಗವೀಶ ಹಿರೇಮಠ : ಕಲಾವಿದರು ನಡೆದುಬಂದ ದಾರಿ : ಗುಲಬರ್ಗಾ ವಿಶ್ವವಿದ್ಯಾಲಯ-೧೯೮೩

೧೮೦. ಎನ್.ಮರಿಶಾಮಾಚಾರ್ : ಹೆಬ್ಬಾರ್ : ಸಿ.ಎಮ್.ಎನ್.ಪ್ರಕಾಶನ, ಬೆಂಗಳೂರು-೧೯೮೩

೧೮೧. ಎನ್.ಮರಿಶಾಮಾಚಾರ್ : ಸೃಜನಶೀಲರು : ಹರೀಶ ಪ್ರಕಾಶನ, ಬೆಂಗಳೂರು-೧೯೮೩

೧೮೨. ಮಾರ್ಕ ಜಬ್ರೊವಿಸ್ಕಿ : ಡೆಕ್ಕನೀ ಪೇಂಟಿಂಗ್ಸ : ರೋಲಿಬುಕ್ ಇಂಟರ್‌ನ್ಯಾಷನಲ್ ನ್ಯೂದೆಹಲಿ-೧೯೮೩

೧೮೩. ಎಸ್.ರಾಜಶೇಖರ : ಮಾಸ್ಟರ್ ಪೀಸಿಸ್ ಆಫ್ ವಿಜಯನಗರ ಆರ್ಟ : ತಾರಾಪೋರವಾಲಾ ಪಬ್ಲಿಕೇಷನ್ಸ, ಮುಂಬೈ-೧೯೮೩

೧೮೪. ಶ್ರೀಮತಿ.ಪ್ರಭಾಶಂಕರ : ಕಲಾಅರ್ಪಣ : ಪ್ರಭಾಶಂಕರ ಪ್ರಕಾಶನ, ಬೆಂಗಳೂರು-೧೯೮೩

'ಕಲಾಶಿಕ್ಷಣ ವಿಚಾರ ಸಂಕಿರಣ' ಸಂಪಾದನಾ ಕೃತಿಯನ್ನು ಟಿ.ಪಿ.ಅಕ್ಕಿಯವರ ಸಂಪಾದಕತ್ವದಲ್ಲಿ ಹೊರತರಲಾಗಿದೆ.[೧೮೫] ಇದರಲ್ಲಿ ಕಲಾಶಿಕ್ಷಣದ ರೂಪುರೇಷೆಗಳು, ಅವಶ್ಯಕತೆ, ಸ್ಥಿತಿಗತಿಗಳು, ಕೈಗೊಳ್ಳ ಬೇಕಾದ ಸುಧಾರಣಾ ಕ್ರಮಗಳ ಬಗ್ಗೆ ಲೇಖನಗಳನ್ನು ವಿದ್ವಾಂಸರು ಬರೆದಿದ್ದಾರೆ. ಇದಲ್ಲದೆ ಲಲಿತಕಲಾ ಅಕಾಡೆಮಿಯು ಮೂವರು ಕಲಾವಿದರ ಬಗೆಗಿನ ವ್ಯಕ್ತಿ ಪರಿಚಯಗಳನ್ನು ಪ್ರಕಟಿಸಿದೆ. ಮೊದಲನೆಯದು ಡಿ.ಜಿ.ಬಡಿಗೇರ್ ಅವರನ್ನು ಕುರಿತಾಗಿದ್ದು,[೧೮೬] ಅನ್ನದಾನಿ ಹಿರೇಮಠ ಬರೆದಿದ್ದಾರೆ. ಎರಡನೆಯದು ಎಂ.ವಿ.ಮಿಣಜಗಿಯವರ ಬಗ್ಗೆ ಗವೀಶ ಹಿರೇಮಠ[೧೮೭] ಮತ್ತು ಮೂರನೆಯ ಕೃತಿ 'ಕಲಾಗುರು ದಂಡಾವತಿಮಠ' ಎಂಬುದನ್ನು ಬಿ.ಕೆ.ಹಿರೇಮಠ ಬರೆದಿದ್ದಾರೆ.[೧೮೮] ಇವುಗಳೆಲ್ಲ ಒಂದೇ ಮಾದರಿಯಲ್ಲಿದ್ದು ಆಯಾ ಕಲಾವಿದರ ಸಂಕ್ಷಿಪ್ತ ಜೀವನ, ಕಲೆ, ಕಲಾಕೃತಿ, ಪ್ರಶಸ್ತಿ ಸನ್ಮಾನಗಳು, ಕಲಾ ಪ್ರದರ್ಶನಗಳ ಬಗ್ಗೆ ವಿವೇಚಿಸುತ್ತವೆ.

ಕ್ರಿ.ಶ. ೧೯೮೪ರಲ್ಲಿ ಪ್ರಕಟಗೊಂಡ ಚಿತ್ರಕಲಾ ಸಾಹಿತ್ಯ ಕೃತಿಗಳು ಈ ಕೆಳಗಿನಂತಿವೆ. ಜಿ.ಜಿ.ಮಹಾಲೆ 'ಸ್ಮೃತಿಚಿತ್ರಗಳು' ಪುಸ್ತಕ ರಚನೆ ಮಾಡಿದ್ದಾರೆ.[೧೮೯] ಇದರಲ್ಲಿ ವಿವಿಧ ವಿಷಯಗಳಿಗೆ ಸಂಬಂಧಿಸಿದ ಸ್ಮರಣ ಚಿತ್ರಗಳನ್ನು ಚಿತ್ರಿಸಿದ್ದಾರೆ. ಪ್ರಾರಂಭಿಕ ಹಂತದ ಚಿತ್ರಕಲಾ ಶಿಕ್ಷಣ ಪಡೆಯುವವರಿಗೆ ಉಪಯುಕ್ತ ಕೃತಿಯಾಗಿದೆ. ಎಸ್.ಕೆ.ರಾಮಚಂದ್ರರಾವ್ ಆನಂದ ಕುಮಾರಸ್ವಾಮಿಯವರ ಬಗ್ಗೆ ಬರೆದ ಪುಸ್ತಕ ಈ ವರ್ಷದಲ್ಲಿ ಪ್ರಕಟಗೊಂಡಿದೆ.[೧೯೦] ಇದರಲ್ಲಿ ಅವರ ಕಲಾಸಾಹಿತ್ಯ, ಭಾರತೀಯ ಕಲೆಯ ಬಗೆಗಿನ ಆದರಗಳು ಮತ್ತು ಅವರ ಒಟ್ಟು ಸಾಹಿತ್ಯ ಕೃತಿಗಳ ಸಂಕ್ಷಿಪ್ತ ವಿವರಣೆ ಇದೆ. ಕಲಾಮಂದಿರದ 'ಅ.ನ.ಸುಬ್ಬರಾಯ' ಪುಸ್ತಕವನ್ನು ವಿಜಯಾ ಬರೆದಿದ್ದು,[೧೯೧] ಇದರಲ್ಲಿ ಅ.ನ.ಸುಬ್ಬರಾಯರ ಜೀವನ ಚರಿತ್ರೆ, ಕಲಾಬದುಕು, ಕಲೆಯ ಕೊಡುಗೆಗಳು, ಕಲಾಮಂದಿರದ ಒಡನಾಟಗಳು ಹೀಗೆ ಹಲವಾರು ಸಂಗತಿಗಳು ವ್ಯಕ್ತಗೊಂಡಿವೆ. ೧೯೮೪ರಲ್ಲಿ ಲಲಿತಕಲಾ ಅಕಾಡೆಮಿಯು ಕಲಾವಿದರ ವ್ಯಕ್ತಿ ಪರಿಚಯಗಳನ್ನು ಪ್ರಕಟಿಸಿದೆ. ಇದರಲ್ಲಿ ಡಿ.ಜಿ.ಬಡಿಗೇರ್ ಬಗ್ಗೆ ಶೋಭಾ ಬಡಿಗೇರ್ ಬರೆದಿದ್ದರೆ,[೧೯೨] ಅಮೀನಸಾಹೇಬ ಕಮಡೊಳ್ಳಿ ಕುರಿತು ಬಿ.ಕೆ.ಹಿರೇಮಠ ಬರೆದಿದ್ದಾರೆ.[೧೯೩] 'ಕರ್ನಾಟಕ ಕಲಾಯಾತ್ರೆ' ಕೃತಿಯನ್ನು ಸಿ.ಚಂದ್ರಶೇಖರ ಬರೆದಿದ್ದಾರೆ.[೧೯೪] ಇದು ಕೆಲವು ಪ್ರಮುಖ ಕಲಾವಿದರು ತಮ್ಮ ಕೃತಿಗಳನ್ನು ರಾಜ್ಯದ ತುಂಬೆಲ್ಲ ಪ್ರದರ್ಶನ ಮಾಡಿದ ವಿವರವನ್ನು ಒಳಗೊಂಡಿದೆ.

ಕ್ರಿ.ಶ. ೧೯೮೫ರಲ್ಲಿ ಪ್ರಕಟಗೊಂಡ ಚಿತ್ರಕಲಾ ಸಾಹಿತ್ಯ ಕೃತಿಗಳಲ್ಲಿ ಈ ಕೆಳಗಿನವು ಮುಖ್ಯವಾಗಿವೆ. 'ಸಾಹಿತ್ಯ ಮತ್ತು ಚಿತ್ರಕಲೆ' ಪುಸ್ತಕವನ್ನು ಏಂ.ವಿ.ಸೀತಾರಾಮಯ್ಯ ಬರೆದಿದ್ದಾರೆ.[೧೯೫] ಇದರಲ್ಲಿ ಸಾಹಿತ್ಯ ಮತ್ತು ಚಿತ್ರಕಲೆಗಳ ಸ್ವರೂಪ. ಗುಣಲಕ್ಷಣಗಳು, ಹೋಲಿಕೆ ವ್ಯತ್ಯಾಸಗಳನ್ನು ತಿಳಿಸುವುದರ ಜೊತೆಗೆ ಸಾಹಿತ್ಯದಲ್ಲಿ ಚಿತ್ರಕಲೆ ಹೇಗೆ ಬೆಳೆದುಬಂದಿದೆ ಎಂಬುದನ್ನು ಚರ್ಚಿಸಲಾಗಿದೆ.

---

೧೮೫. ಟಿ.ಪಿ.ಅಕ್ಕಿ : (ಸಂ) : ಕಲಾಶಿಕ್ಷಣ ವಿಚಾರ ಸಂಕಿರಣ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೩

೧೮೬. ಅನ್ನದಾನಿ ಹಿರೇಮಠ : ಡಿ.ಜಿ.ಬಡಿಗೇರ್ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೩

೧೮೭ ಗವಿಶ.ಹಿರೇಮಠ : ಎಂ.ವಿ.ಮಿಣಜಗಿ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೩

೧೮೮. ಬಿ.ಕೆ.ಹಿರೇಮಠ : ಕಲಾಗುರು ದಂಡಾವತಿಮಠ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೩

೧೮೯. ಜಿ.ಜಿ.ಮಹಾಲೆ : ಸ್ಮೃತಿ ಚಿತ್ರಗಳು : ಸಮಾಜ ಪುಸ್ತಕಾಲಯ, ಧಾರವಾಡ-೧೯೭೪

೧೯೦. ಏಸ್.ಕೆ.ರಾಮಚಂದ್ರರಾವ್ : ಆನಂದ ಕುಮಾರಸ್ವಾಮಿ : ಬೆಂಗಳೂರು-೧೯೭೪

೧೯೧. ವಿಜಯಾ : ಕಲಾಮಂದಿರದ ಅ.ನ.ಸುಬ್ಬಾರಾಯರು : ಐ.ಬಿ.ಎಚ್.ಪ್ರಕಾಶನ, ಬೆಂಗಳೂರು-೧೯೮೪

೧೯೨. ಶೋಭಾ ಬಡಿಗೇರ್ : ಡಿ.ಜಿ.ಬಡಿಗೇರ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೪

೧೯೩. ಬಿ.ಕೆ.ಹಿರೇಮಠ : ಅಮೀನಸಾಹೇಬ ಕಮಡೊಳ್ಳಿ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೪

೧೯೪. ಸಿ.ಚಂದ್ರಶೇಖರ್ : ಕರ್ನಾಟಕ ಕಲಾಯಾತ್ರೆ; ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೪

೧೯೫. ಎಂ.ವಿ.ಸೀತಾರಾಮಯ್ಯ : ಸಾಹಿತ್ಯ ಮತ್ತು ಚಿತ್ರಕಲೆ : ಕಾವ್ಯಾಲಯ ಪ್ರಕಾಶನ, ಮೈಸೂರು-೧೯೮೫

ಎಂ.ಟಿ.ವಿ.ಆಚಾರ್ಯ 'ಕಲೆ ಮತ್ತು ನಾನು' ಎಂಬ ಆತ್ಮ ಚರಿತ್ರೆಯನ್ನು ಬರೆದಿದ್ದು,[೧೯೬] ೧೯೮೫ರಲ್ಲಿ ಪ್ರಕಟಗೊಂಡಿದೆ. ಇದರಲ್ಲಿ ತಮ್ಮ ಜೀವನ ಮತ್ತು ಕಲೆಯನ್ನು ಒಟ್ಟೊಟ್ಟಾಗಿ ಬಿಂಬಿಸಲು ಪ್ರಯತ್ನಿಸಿದ್ದಾರೆ. ಕಲೆಯ ಬಗೆಗಿನ ಆಸಕ್ತಿ, ಕಲಿಕೆ, ಕಲಿಸುವಿಕೆ, ಅಂಚೆ ಮೂಲಕ ಮೊದಲ ಬಾರಿಗೆ ಚಿತ್ರಕಲಾ ಶಿಕ್ಷಣ ನೀಡುವ ಕ್ರಮ, ಆಚಾರ್ಯ ಚಿತ್ರಕಲಾ ಭವನ ಸ್ಥಾಪನೆ ಮಾಡಿದ್ದು, ಹೀಗೆ ಹತ್ತು ಹಲವು ಸಂಗತಿಗಳನ್ನು ಹೇಳಿದ್ದಾರೆ. ವ್ಹಿ.ಟಿ.ಕಾಳೆಯವರು 'ಚಿತ್ರಕಲಾ ಪರಿಚಯ' ಕೃತಿಯನ್ನು ಈ ಸಂದರ್ಭದಲ್ಲಿ ರಚನೆ ಮಾಡಿದ್ದು,[೧೯೭] ಕಲಾ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಿದೆ. ಈ ಕೃತಿಯಲ್ಲಿ ಚಿತ್ರಕಲೆಯನ್ನು ಕಲಿಯಲು ಸೂತ್ರಗಳು, ಸಂಬಂಧಿಸಿದ ಚಿತ್ರಕಲಾ ಕೃತಿಗಳು, ಪೂರಕ ಮಾಹಿತಿಗಳನ್ನು ಕೊಡಲಾಗಿದೆ.

'ಕಲಾಕೋಶ' ಕೃತಿಯನ್ನು ಮರಿಶಾಮಾಚಾರ್ ರಚಿಸಿದ್ದಾರೆ.[೧೯೮] ಇದರಲ್ಲಿ ವಿಶ್ವಕೋಶದ ಮಾದರಿಯಂತೆ ಕಲೆಯ ಬಗೆಗಿನ ಹಲವಾರು ವಿಷಯಗಳನ್ನು ಸಂಕ್ಷಿಪ್ತ ಮಾಹಿತಿಯೊಂದಿಗೆ ಕೊಡಲಾಗಿದೆ. ಜಾಗತಿಕ ಕಲೆ, ಭಾರತೀಯ ಕಲೆ, ಕರ್ನಾಟಕದ ಕಲೆ ಇವುಗಳ ಬಗ್ಗೆ ವಿಷಯಗಳನ್ನು ಕೊಡಲಾಗಿದೆ. ಕಲೋಪಾಸಕ ಎಂ.ಜಿ.ವಾಚದಮಠರ[೧೯೯] ಬಗ್ಗೆ ಸುರೇಶ ಕುಲಕರ್ಣಿ, ಡಿ.ವಿ.ಹಾಲಭಾವಿಯವರ ಬಗ್ಗೆ ಎಸ್.ಕೆ.ಹೂಗಾರ[೨೦೦] ಮತ್ತು ಎಂ.ಎ.ಚಟ್ಟಿಯವರ ಕುರಿತು ಅನ್ನದಾನಿ ಹಿರೇಮಠ[೨೦೧] ವ್ಯಕ್ತಿಪರಿಚಯ ಕೃತಿಗಳನ್ನು ಬರೆದಿದ್ದಾರೆ. ಇವೆಲ್ಲ ಒಂದೇ ಮಾದರಿಯಲ್ಲಿದ್ದು, ಆಯಾ ಕಲಾವಿದರ ಜೀವನ, ಕಲೆ, ಕಲಾಕೃತಿಗಳು, ಪ್ರದರ್ಶನ ಮತ್ತು ಪ್ರಶಸ್ತಿ ಬಹುಮಾನಗಳ ಕುರಿತು ತಿಳಿಸುತ್ತವೆ.

ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪಗಳ ಬಗ್ಗೆ ಇಂಗ್ಲೀಷನಲ್ಲಿ ಸಿ. ಎಸ್. ಪಾಟೀಲ ಮತ್ತು ಡಿ.ವಿ.ದೇವರಾಜ್ ಸಂಯುಕ್ತವಾಗಿ ಕೃತಿ ಪ್ರಕಟಿಸಿದ್ದಾರೆ.[೨೦೨] ಇದರಲ್ಲಿ ಕರ್ನಾಟಕದ ಚಾಲುಕ್ಯ, ಕದಂಬ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಮುಂತಾದ ಅರಸರ ಕಾಲದ ವಾಸ್ತುಶಿಲ್ಪ ಮತ್ತು ಚಿತ್ರಕಲೆಯನ್ನು ಮುಖ್ಯವಾಗಿ ಪರಿಗಣಿಸಲಾಗಿದೆ. ಎಂ.ಎಸ್.ಚೂಡಾಮಣಿಯವರು ಇಂಗ್ಲೀಷನಲ್ಲಿ 'ಡ್ಯಾನ್ಸ ಆ್ಯಂಡ್ ಅದರ್ ಫೈನ್ ಆರ್ಟ್ಸ್ ಇನ್ ಕರ್ನಾಟಕ ಸ್ಕಲ್ಪಚರ್ ಆ್ಯಂಡ್ ಪೇಂಟಿಂಗ್' ಪುಸ್ತಕ ಬರೆದಿದ್ದಾರೆ.[೨೦೩] ಕರ್ನಾಟಕದ ಮೂರ್ತಿಶಿಲ್ಪ ಮತ್ತು ಚಿತ್ರಕಲಾ ಕೃತಿಗಳಲ್ಲಿ ಕಂಡುಬಂದಿರುವ ವಿವಿದ ನೃತ್ಯ ಭಂಗಿಗಳನ್ನು ಕುರಿತಾದ ಅಧ್ಯಯನ ಈ ಕೃತಿಯಲ್ಲಿ ಕಂಡು ಬರುತ್ತದೆ. ಬಿ.ಪಿ.ಬಾಯಿರಿಯವರು 'ಜಾಗತಿಕ ಚಿತ್ರಕಲೆ' ಕೃತಿಯನ್ನು ರಚಿಸಿದ್ದಾರೆ.[೨೦೪] ಇದರಲ್ಲಿ ಈಜಿಪ್ತ, ಗ್ರೀಕ್, ಅಮೇರಿಕಾ, ಜಪಾನ್, ಚೀನಾ ಹೀಗೆ ಜಗತ್ತಿನ ಹಲವು ರಾಷ್ಟ್ರಗಳ ಕಲೆಯನ್ನು ಸಂಕ್ಷಿಪ್ತವಾಗಿ ಹೇಳಲಾಗಿದ್ದು, ಜೊತೆಗೆ ಕೆಲವು ಪ್ರಮುಖ ಕಲಾವಿದರ ಸಂಕ್ಷಿಪ್ತ ಪರಿಚಯವನ್ನು ಕೊಡಲಾಗಿದೆ.

---

೧೯೬. ಎಂ.ಟಿ.ವಿ.ಆಚಾರ್ಯ : ಕಲೆ ಮತ್ತು ನಾನು : ಆಚಾರ್ಯ ಚಿತ್ರಕಲಾ ಭವನ, ಬೆಂಗಳೂರು-೧೯೮೫

೧೯೭. ವಿ.ಟಿ.ಕಾಳೆ : ಚಿತ್ರಕಲಾ ಪರಿಚಯ : ಶಾಬಾದಿಮಠ ಬುಕ್‌ಡಿಪೊ, ಗದಗ-೧೯೮೫

೧೯೮. ಎಸ್.ಮರಿಶಾಮಾಚಾರ್ : ಕಲಾಕೋಶ : ಸಿ.ಎಂ.ಎಸ್.ಪ್ರಕಾಶನ, ಬೆಂಗಳೂರು-೧೯೮೫

೧೯೯. ಸುರೇಶ ಕುಲಕರ್ಣಿ : ಎಂ.ಜಿ.ವಾಚೇದಮಠ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೫

೨೦೦. ಎಸ್.ಕೆ.ಹೂಗಾರ : ಡಿ.ವಿ.ಹಾಲಭಾವಿ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೫

೨೦೧. ಅನ್ನದಾನಿ ಹಿರೇಮಠ : ಎಂ.ಎ.ಚಟ್ಟಿ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೫

೨೦೨. ಸಿ.ಎಸ್.ಪಾಟೀಲ ಮತ್ತು ಡಿ.ವಿ.ದೇವರಾಜ್ : ಆರ್ಟ ಆ್ಯಂಡ್ ಆರ್ಕಿಟಕ್ಚರ್ ಇನ್ ಕರ್ನಾಟಕ : ಬೆಂಗಳೂರು ವಿ.ವಿ-೧೯೮೫

೨೦೩. ಎಂ.ಎಸ್.ಚೂಡಾಮಣಿ : ಡ್ಯಾನ್ಸ ಆ್ಯಂಡ್ ಅದರ್ ಫೈನ್ ಆರ್ಟ್ಸ್ ಇನ್ ಕರ್ನಾಟಕ ಸ್ಕಲ್ಪಚರ್ ಆ್ಯಂಡ್ ಪೇಂಟಿಂಗ್ : ಬೆಂಗಳೂರು-೧೯೮೫

೨೦೪. ಬಿ.ಪಿ.ಬಾಯಿರಿ : ಜಾಗತಿಕ ಚಿತ್ರಕಲೆ : ಸಮಾಜ ಪುಸ್ತಕಾಲಯ, ಧಾರವಾಡ-೧೯೮೫

ಕಲಾವಿದ ಡಿ.ವಿ.ಹಾಲಭಾವಿಯವರು ಶ್ರೀಲಂಕಾ ಪ್ರವಾಸ ಮುಗಿಸಿಕೊಂಡು ಬಂದು 'ನನ್ನ ಸಿಲೋನ್ ದರ್ಶನ' ಪುಸ್ತಕವನ್ನು ಬರೆದಿದ್ದಾರೆ.[೨೦೫] ಇದರಲ್ಲಿ ಶ್ರೀಲಂಕಾದ ಪ್ರಾಚೀನ ಚಿತ್ರಕಲಾ ಪರಂಪರೆ, ಮಧ್ಯಯುಗೀನ ಕಲಾವೈಭವ ಮತ್ತು ಆಧುನಿಕ ಕಲಾಸ್ವರೂಪಗಳನ್ನು ಸ್ಥೂಲವಾಗಿ ಬಿಂಬಿಸಲಾಗಿದೆ. ಧಾರವಾಡದ ಹಾಲಭಾವಿ ಕಲಾಶಾಲೆಯ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆಯು ಎಚ್.ಜೆ.ಮುಲ್ಲಾ ಸಂಪಾದಕತ್ವದಲ್ಲಿ ಪ್ರಕಟಗೊಂಡಿದ್ದು[೨೦೬] ಅದರಲ್ಲಿ ಕಲೆಯ ಕುರಿತು ವಿವಿಧ ಲೇಖನಗಳಿವೆ. ಕ್ರಿ.ಶ. ೧೯೮೬ರಲ್ಲಿ ಪ್ರಕಟವಾದ ಕಲಾಸಾಹಿತ್ಯ ಕೃತಿಗಳು ಕೆಳಗಿನಂತಿವೆ. ಎನ್.ಮರಿಶಾಮಾಚಾರ್ 'ಕಲಾಭಿವ್ಯಕ್ತಿ' ಕೃತಿಯನ್ನು ಪ್ರಕಟಿಸಿದ್ದಾರೆ.[೨೦೭] ಇದರಲ್ಲಿ ಕಲಾಭಿವ್ಯಕ್ತಿಯ ಪರಿಕಲ್ಪನೆಗಳನ್ನು ಸ್ಥೂಲವಾಗಿ ಬಿಂಬಿಸಲಾಗಿದೆ. ಕಲೆ, ಕಲಾವಿದ, ಅಭಿವ್ಯಕ್ತಿ, ಪ್ರತಿಭೆ, ಕಲಾಕೃತಿ ಹೀಗೆ ಹಲವು ಸಂಗತಿಗಳು ವಿವೇಚಿಸಲ್ಪಟ್ಟಿವೆ.

ಮರಿಶಾಮಾಚಾರ್ ತಮ್ಮ ಕಲಾಗುರು ಕೆ.ಜಿ.ಸುಬ್ರಹ್ಮಣ್ಯ ಬಗ್ಗೆ ಪುಸ್ತಕವನ್ನು ಹೊರ ತಂದಿದ್ದಾರೆ.[೨೦೮] ಸುಬ್ರಹ್ಮಣ್ಯನ್ ಅವರ ಸಂಕ್ಷಿಪ್ತ ಕಲಾಬದುಕು, ಕಲಾಶೈಲಿ, ಕಲಾಕೃತಿಗಳು, ಕಲೆ ಬಗೆಗಿನ ಅವರ ನಿಲುವುಗಳು ಮತ್ತು ಅವರ ಕಲಾಸಾಹಿತ್ಯವನ್ನು ಒಳಗೊಂಡಿದೆ. ಗುಲಬರ್ಗಾದ ಖ್ಯಾತ ಕಲಾವಿದರಾಗಿದ್ದ ಶಂಕರರಾವ್ ಆಳಂದಕರ್ ಬಗ್ಗೆ ವ್ಯಕ್ತಿ ಅಧ್ಯಯನವನ್ನು ಎಂ.ಜಿ.ಬಿರಾದಾರ ಬರೆದಿದ್ದಾರೆ.[೨೦೯] ಇದು ಲಲಿತಕಲಾ ಅಕಾಡೆಮಿಯ ಸಿದ್ಧ ಮಾದರಿಯಲ್ಲಿದ್ದು, ಆಳಂದಕರರ ಕಲಾಬದುಕು, ಕಲಾಕೃತಿ, ಪ್ರದರ್ಶನಗಳು ಮತ್ತು ಪ್ರಶಸ್ತಿ ಬಹುಮಾನಗಳ ಬಗೆಗಿನ ಸಂಕ್ಷಿಪ್ತ ನೋಟ ಕೊಡುತ್ತದೆ. 'ಕರ್ನಾಟಕದ ಕಲೆಗಳು' ಕೃತಿಯನ್ನು ಬೆನಕನಹಳ್ಳಿ ಜಿ.ನಾಯಕ್ ಬರೆದಿದ್ದು,[೨೧೦] ಕರ್ನಾಟಕದ ಕಲಾ ಪ್ರಕಾರಗಳ ಸಂಕ್ಷಿಪ್ತ ಮಾಹಿತಿ ಕೊಡಲಾಗಿದೆ. ಶಿಲ್ಪಕಲೆ, ಚಿತ್ರಕಲೆ, ವಾಸ್ತುಕಲೆ, ಸಂಗೀತ, ನಾಟ್ಯ ಹೀಗೆ ಹಲವು ಕಲಾಪರಂಪರೆಗಳ ಸ್ಥೂಲ ಮಾಹಿತಿ ಇದರಲ್ಲಿದೆ. ಪಿ.ಆರ್.ತಿಪ್ಪೇಸ್ವಾಮಿ 'ಕರ್ನಾಟಕದ ಕಲೆಗಳು' ಪುಸ್ತಕ ಬರೆದಿದ್ದು,[೨೧೧] ಅದು ಬಿನಕನಹಳ್ಳಿ ನಾಯಕರ ಕೃತಿಗಿಂತ ಭಿನ್ನವಾಗಿದೆ. ಅದರಲ್ಲಿ ಹಲವು ಕಲಾ ಪ್ರಕಾರಗಳ ಸ್ಥೂಲ ಮಾಹಿತಿ ಇದ್ದರೆ, ಇದರಲ್ಲಿ ಚಿತ್ರ, ಶಿಲ್ಪಕಲೆಗಳನ್ನು ಮಾತ್ರ ಪ್ರಮುಖವಾಗಿ ಪರಿಗಣಿಸಲಾಗಿದೆ.

'ವಿಜಯನಗರದ ಕಲೆ ಮತ್ತು ಸಾಹಿತ್ಯ' ಪುಸ್ತಕವನ್ನು ಶಾಮಲಾಲ್ ಪುಲುಮತಿ ೧೯೮೬ ರಲ್ಲಿ ಹೊರತಂದಿದ್ದು[೨೧೨] ಇದರಲ್ಲಿ ವಿಜಯನಗರ ಕಾಲದ ವಾಸ್ತು, ಶಿಲ್ಪಕಲೆ, ಚಿತ್ರಕಲೆ ಮತ್ತು ಸಾಹಿತ್ಯಗಳನ್ನು ಮುಖ್ಯವಾಗಿ ಪರಿಗಣಿಸಲಾಗಿದೆ. ಕ್ರಿ.ಶ.೧೯೮೭ರಲ್ಲಿ ಹಲವು ಕಲಾಪುಸ್ತಕಗಳು ಪ್ರಕಟಗೊಂಡಿವೆ. ಎಸ್.ಸಿ.ಪಾಟೀಲರ ಬಾರೋಕ್ ಕಲೆಯು ಪ್ರಕಟಗೊಂಡಿದ್ದು,[೨೧೩] ಇದರಲ್ಲಿ ಪಾಶ್ಚಾತ್ಯ ಕಲಾ ಜಗತ್ತಿನಲ್ಲಿ ಕ್ರಾಂತಿ ಉಂಟುಮಾಡಿದ ಬಾರೋಕ್ ಕಲಾಶೈಲಿಯ ಬಗ್ಗೆ ವಿವೇಚಿಸಲಾಗಿದೆ. ಬಾರೋಕ್ ಕಲೆಯ ಹುಟ್ಟು, ಬೆಳವಣಿಗೆ, ವ್ಯಾಪ್ತಿ, ಚಿತ್ರ, ಶಿಲ್ಪ ಮತ್ತು ವಾಸ್ತುಕಲೆಗಳು, ಬಾರೋಕ್ ಕಲೆಯ ಪ್ರಮುಖ ಕಲಾವಿದರು ಮತ್ತು ಕಲಾನೆಲೆಗಳನ್ನು ಕುರಿತು ಈ ಕೃತಿಯು ತಿಳಿಸುತ್ತದೆ.

೨೦೫. ಡಿ.ವಿ.ಹಾಲಭಾವಿ : ನನ್ನ ಸಿಲೋನ್ ಸಂದರ್ಶನ : ಸುರೇಶ ಹಾಲಭಾವಿ ಪ್ರಕಾಶನ ಧಾರವಾಡ-೧೯೮೫
೨೦೬. ಎಚ್.ಜೆ.ಮುಲ್ಲಾ : ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ : ಸುವರ್ಣ ಮಹೋತ್ಸವ ಸಮಿತಿ, ಧಾರವಾಡ-೧೯೮೫
೨೦೭. ಎನ್.ಮರಿಶಾಮಾಚಾರ್ : ಕಲಾಭಿವ್ಯಕ್ತಿ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೮೬
೨೦೮. ಎನ್. ಮರಿಶಾಮಾಚಾರ್ : ಕೆ.ಜಿ.ಸುಬ್ರಹ್ಮಣ್ಯನ್ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೮೬
೨೦೯. ಎಂ.ಜಿ.ಬಿರಾದಾರ್ : ಶಂಕರರಾವ್ ಆಳಂದಕರ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೬
೨೧೦. ಬೆನಕನಹಳ್ಳಿ.ಜಿ.ನಾಯಕ್ : ಕರ್ನಾಟಕದ ಕಲೆಗಳು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೮೬
೨೧೧. ಪಿ.ಆರ್.ತಿಪ್ಪೇಸ್ವಾಮಿ : ಕರ್ನಾಟಕದ ಕಲೆಗಳು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೮೬
೨೧೨. ಶಾಮಲಾಲ್ ಪುಲುಮತಿ : ವಿಜಯನಗರದ ಕಲೆ ಮತ್ತು ಸಾಹಿತ್ಯ : ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು-೧೯೮೬
೨೧೩. ಎಸ್.ಸಿ.ಪಾಟೀಲ : ಬಾರೋಕ್ ಕಲೆ : ಸಮಾಜ ಪುಸ್ತಕಾಲಯ, ಧಾರವಾಡ-೧೯೮೭

ಶಂಕರ ಪಾಟೀಲರು ಕಲಾತಪಸ್ವಿ ಎಂ. ವ್ಹಿ. ಮಿಣಜಗಿ ಕೃತಿಯನ್ನು ರಚಿಸಿದ್ದು, ಇದರಲ್ಲಿ ಮಿಣಜಗಿಯವರ ಬಾಲ್ಯಜಿವನ, ಕಲಾಶಿಕ್ಷಣ, ಕಲಾಬದುಕು ಮತ್ತು ಕಲಾಕೃತಿಗಳ ವಿಶ್ಲೇಷಣೆಯನ್ನು ಕೊಡಲಾಗಿದೆ.[೨೧೪] 'ಭಾರತೀಯ ಶಿಲ್ಪಶಾಸ್ತ್ರಸಾರ' ಕೃತಿಯನ್ನು ಟಿ.ವಿ.ಮುತ್ತಾಚಾರ್ಯ ಬರೆದಿದ್ದು,[೨೧೫] ಶಿಲ್ಪಕಲೆಗೆ ಸಂಬಂಧಿಸಿದ ಗ್ರಂಥವಾಗಿದೆ. ಇದರಲ್ಲಿ ಅಲ್ಲಲ್ಲಿ ಸಾಂದರ್ಭಿಕವಾಗಿ ಚಿತ್ರಕಲೆಯ ಉಲ್ಲೇಖಗಳು ಕಂಡುಬರುವುದು ಕೃತಿಯ ವೈಶಿಷ್ಟ್ಯವಾಗಿದೆ. 'ಭಾರತದಲ್ಲಿ ಸಮಕಾಲೀನ ಕಲೆ' ಕೃತಿಯನ್ನು ೧೯೮೭ರಲ್ಲಿ ಎನ್.ಮರಿಶಾಮಾಚಾರರು ಬರೆದಿದ್ದಾರೆ.[೨೧೬] ಇದರಲ್ಲಿ ಭಾರತೀಯ ಸಮಕಾಲೀನ ಕಲೆಯ ಸ್ಥಿತಿಗತಿಗಳು, ಕಲಾವಿದರು, ಕಲಾಪ್ರಕಾರಗಳು, ರಚನಾ ಮಾಧ್ಯಮಗಳು, ಪ್ರಭಾವ ಪ್ರೇರಣೆಗಳು, ರಚನಾ ವಿಧಾನಗಳನ್ನು ಹೇಳುವುದರ ಜೊತೆಗೆ ಕೆಲವು ಪ್ರಮುಖ ಸಮಕಾಲೀನ ಕಲಾವಿದರ ಸಂಕ್ಷಿಪ್ತ ಪರಿಚಯವನ್ನು ಕೊಡಲಾಗಿದೆ. 'ತೊಗಲುಗೊಂಬೆಯಾಟ' ಕೃತಿಯು ಜಯಲಕ್ಷ್ಮೀ ಆರ್.ಗೌಡ ಇವರಿಂದ ರಚನೆಗೊಂಡಿದೆ.[೨೧೭] ಇದರಲ್ಲಿ ತೊಗಲುಗೊಂಬೆಯ ರಚನಾವಿಧಾನ, ವಸ್ತುವಿಷಯಗಳು, ವರ್ಣಗಾರಿಕೆ, ಪ್ರಾದೇಶಿಕ ಭಿನ್ನತೆಗಳು, ಪರಿಕರಗಳು ಮತ್ತು ತೊಗಲುಗೊಂಬೆಯಾಟದ ಪ್ರದರ್ಶನ ಪ್ರಸಂಗಗಳ ಬಗ್ಗೆ ವಿವೇಚಿಸಲಾಗಿದೆ. 'ಕಲಾಚರಿತ್ರೆ' ಪುಸ್ತಕವನ್ನು ಅಶೋಕ ಅಕ್ಕಿಯವರು ರಚಿಸಿದ್ದಾರೆ.[೨೧೮] ಇದರಲ್ಲಿ ಭಾರತೀಯ ಕಲೆ, ಪಾಶ್ಚಾತ್ಯಕಲೆ, ಕಲಾಶಿಕ್ಷಣ, ಕಲಾವಿದರು, ಕಲಾ ನೆಲೆಗಳು ಹೀಗೆ ಬೇರೆ ಬೇರೆ ಭಾಗಗಳನ್ನು ಮಾಡಿಕೊಂಡು ವಿಷಯ ನಿರೂಪಣೆ ಮಾಡಲಾಗಿದೆ. ಭಾರತೀಯ ಕಲೆಯಲ್ಲಿ ಪ್ರಾಚೀನ, ಆಧುನಿಕ ಕಲೆ ಎಂದು ವಿಂಗಡಿಸಿಕೊಂಡಂತೆ ಪಾಶ್ಚಾತ್ಯ ಕಲೆಯಲ್ಲಿಯೂ ಈ ವಿಂಗಡಣೆ ಕಂಡುಬರುತ್ತದೆ. ಅದರಂತೆ ಕಲಾವಿದರ ಸಂಕ್ಷಿಪ್ತ ಪರಿಚಯ ಕೊಡುವಾಗಲೂ ಭಾರತೀಯ ಮತ್ತು ಪಾಶ್ಚಾತ್ಯ ಎಂದು ವಿಂಗಡಣೆ ಮಾಡಿಕೊಳ್ಳಲಾಗಿದೆ.

ಸಂಯೋಜಿತ ಸಂಸ್ಥೆಯವರು 'ಸಂಯೋಜನೆ' ಎಂಬ ಸಂಪಾದನಾ ಗ್ರಂಥವನ್ನು ಹೊರ ತಂದಿದ್ದು,[೨೧೯] ಇದರಲ್ಲಿ ವಿವಿಧ ಲೇಖಕರು ಬರೆದ ಕಲೆಯ ಕುರಿತ ಲೇಖನಗಳಿವೆ. ಕಲಾಪ್ರಕಾರಗಳು, ಕಲೆ ಮತ್ತು ಸಮಾಜ, ಕಲಾವಿದರ ವ್ಯಕ್ತಿತ್ವ, ಕಲಾ ಬೆಳವಣಿಗೆಯ ಸ್ವರೂಪ, ಆಧುನಿಕ ಕಲೆ ಮುಂತಾದ ಹಲವು ವಿಷಯಗಳಿಗೆ ಸಂಬಂಧಿಸಿದ ಲೇಖನಗಳಿವೆ. 'ಪ್ರಶಸ್ತಿ ಪಡೆದ ಕಲಾವಿದರು' ಪುಸ್ತಕವನ್ನು ಪಿ.ಆರ್.ತಿಪ್ಪೇಸ್ವಾಮಿಯವರು ಬರೆದಿದ್ದಾರೆ.[೨೨೦] ರಾಜ್ಯದ ಶ್ರೇಷ್ಠ ಕಲಾವಿದರನ್ನು ಆಯ್ದುಕೊಂಡು ಅವರ ಕಲಾಸಾಧನೆ, ಕಲಾಶೈಲಿ, ಕಲಾಕೃತಿಗಳು ಮತ್ತು ಅವರಿಗೆ ಸಂದ ಪ್ರಶಸ್ತಿ ಗೌರವಗಳನ್ನು ಈ ಕೃತಿಯಲ್ಲಿ ಕೊಡಲಾಗಿದೆ. ಕೆ.ವೆಂಕಟಪ್ಪನವರ ಬಗೆಗೆ ಹಲವಾರು ಕೃತಿಗಳು ಹೊರಬಂದಿದ್ದು, ೧೯೮೭ರಲ್ಲಿಯೂ ಒಂದು ಪುಸ್ತಕ ಬಿಡುಗಡೆಯಾಗಿದೆ. ಇದನ್ನು ಎಸ್.ಎನ್.ಚಂದ್ರಶೇಖರ ಬರೆದಿದ್ದು,[೨೨೧] ವೆಂಕಟಪ್ಪನವರ ಸಂಕ್ಷಿಪ್ತ ಕಲಾಬದುಕು, ಕಲಾಶೈಲಿ, ಕೃತಿಗಳ ವಿಮರ್ಶೆಯ ಜೊತೆಗೆ ಅವರ ಕಲಾಕೃತಿಗಳ ವರ್ಣಮಯ ಛಾಯಾಚಿತ್ರಗಳನ್ನು ಅಳವಡಿಸಲಾಗಿದೆ.

---

೨೧೪. ಶಂಕರ ಪಾಟೀಲ : ಕಲಾತಪಸ್ವಿ ಎಂ.ವಿ.ಮಿಣಜಗಿ : ಜಗದ್ಗುರು ಮೂರುಸಾವಿರ ಮಠ, ಹುಬ್ಬಳ್ಳಿ-೧೯೮೭

೨೧೫. ಟಿ.ವಿ.ಮುತ್ತಾಚಾರ್ಯ : ಭಾರತೀಯ ಶಿಲ್ಪಶಾಸ್ತ್ರಸಾರ : ಶಿಲ್ಪಕಲಾ ಪರಿಷತ್ತು, ಬೆಂಗಳೂರು-೧೯೮೭

೨೧೬ ಎನ್.ಮರಿಶಾಮಾಚಾರ್ : ಭಾರತದಲ್ಲಿ ಸಮಕಾಲೀನ ಕಲೆ : ಸಿ.ಎಂ.ಎಸ್.ಪ್ರಕಾಶನ, ಬೆಂಗಳೂರು-೧೯೮೭

೨೧೭. ವಿಜಯಲಕ್ಷ್ಮೀ ಆರ್. ಗೌಡ : ತೊಗಲುಗೊಂಬೆಯಾಟ : ಗಿರಿದರ್ಶಿನಿ ಪ್ರಕಾಶನ ಮೈಸೂರು-೧೯೮೭

೨೧೮. ಅಶೋಕ.ಟಿ.ಅಕ್ಕಿ : ಕಲಾಚರಿತ್ರೆ : ಶಾಬಾದಿಮಠ ಬುಕ್‌ಡಿಪೊ, ಗದಗ-೧೯೮೭

೨೧೯. ಅ.ಲ.ನರಸಿಂಹನ್ : (ಸಂ) : ಸಂಯೋಜಿತ : ಸಂಯೋಜಿತ ಪ್ರಕಾಶನ, ಬೆಂಗಳೂರು-೧೯೮೭

೨೨೦. ಪಿ.ಆರ್.ತಿಪ್ಪೇಸ್ವಾಮಿ : ಪ್ರಶಸ್ತಿ ಪಡೆದ ಕಲಾವಿದರು: ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೭

೨೨೧. ಎಸ್.ಎನ್.ಚಂದ್ರಶೇಖರ : ಕೆ.ವೆಂಕಟಪ್ಪ ಸವಿನೆನಪು : ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು-೧೯೮೭

ಕ್ರಿ.ಶ.೧೯೮೮ರಲ್ಲಿ ಪ್ರಕಟಗೊಂಡ ಕೃತಿಗಳು ಕೆಳಗಿನಂತಿವೆ. ಎಸ್.ಕೆ.ರಾಮಚಂದ್ರರಾವ್ ಕೆ.ವೆಂಕಟಪ್ಪನವರ ಬಗ್ಗೆ ಪುಸ್ತಕ ಬರೆದಿದ್ದು,[೨೨೨] ಇದು ವೆಂಕಟಪ್ಪನವರ ಇತರ ಕೃತಿಗಳಿಗಿಂತ ಭಿನ್ನವಾಗಿದೆ. ವೆಂಕಟಪ್ಪನವರ ಬಾಲ್ಯ, ಶಿಕ್ಷಣ, ಕಲ್ಕತ್ತಾ ಕಲಾಶಾಲೆಯ ದಿನಗಳು, ಅಲ್ಲಿಯ ಗುರುವೃಂದದೊಂದಿಗಿನ ಸಂಬಂಧಗಳು, ಶೈಕ್ಷಣಿಕ ಮಹತ್ವದ ಘಟ್ಟಗಳು, ಮೈಸೂರಿಗೆ ಆಗಮನ, ಅವರ ಕಲೆ, ಕಲಾಕೃತಿ ಮತ್ತು ಕಲೆಯ ಬಗೆಗಿನ ಅನಿಸಿಕೆಗಳನ್ನು ವಿಶಿಷ್ಟ ರೀತಿಯಲ್ಲಿ ಕಟ್ಟಿಕೊಡಲಾಗಿದೆ. ಕೆ.ಕೆ.ಹೆಬ್ಬಾರರ ಬಗ್ಗೆ ಅವರ ನಿಕಟವರ್ತಿಗಳಲ್ಲಿ ಒಬ್ಬರಾದ ಕು.ಶಿ.ಹರಿದಾಸಭಟ್ಟರು ಕೃತಿರಚಿಸಿದ್ದು,[೨೨೩] ಕಲಾಬದುಕು ಮತ್ತು ವ್ಯಕ್ತಿತ್ವಗಳನ್ನು ಮುಖ್ಯವಾಗಿ ಹೇಳಲಾಗಿದೆ. ಬಾಲ್ಯದ ದಿನಗಳು, ಕಲಾ ಪ್ರೇರಣೆಗಳಿಂದ ತೊಡಗಿ ಮುಂಬೈನಲ್ಲಿ ಕಲಾಶಿಕ್ಷಣ, ಆಧುನಿಕ ಕಲೆಯ ಬಗೆಗಿನ ಆಕರ್ಷಣೆ, ಕೃತಿರಚನೆ, ಪ್ರದರ್ಶನಗಳು, ಕಲೆಯ ವಿಶ್ಲೇಷಣೆಗಳು ಇದರಲ್ಲಿವೆ.

'ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ' ಕುರಿತು ಸಿಂದಗಿ ರಾಜಶೇಖರ ಪುಸ್ತಕವನ್ನು ರಚಿಸಿದ್ದಾರೆ.[೨೨೪] ಕರ್ನಾಟಕವನ್ನಾಳಿದ ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಮತ್ತು ರಾಷ್ಟ್ರಕೂಟರ ಕಾಲದ ವಾಸ್ತುಶಿಲ್ಪ ಮತ್ತು ಚಿತ್ರಕಲೆಯನ್ನು ಕುರಿತು ಮಾಹಿತಿ ಕೊಡುತ್ತದೆ. 'ಕಲೆಯ ಅರ್ಥ' ಕೃತಿಯನ್ನು ಎಚ್.ಎಸ್.ಶ್ರೀಮತಿ. ಅನುವಾದ ಮಾಡಿದ್ದಾರೆ.[೨೨೫] ರವೀಂದ್ರನಾಥ ಟ್ಯಾಗೋರರ ಮೂಲಕೃತಿಯನ್ನು ಕನ್ನಡದಲ್ಲಿ ಅನುವಾದಿಸಿದ ಇದರಲ್ಲಿ ಕಲೆ, ಕಲಾವಿದ, ಸಹೃದಯ ಕಲೆ ಮತ್ತು ಸಮಾಜ, ಕಲಾ ಅಭಿವ್ಯಕ್ತ, ಸೌಂದರ್ಯ ಮುಂತಾದ ಸಂಗತಿಗಳು ಸಂಕ್ಷಿಪ್ತವಾಗಿ ಹೇಳಲ್ಪಟ್ಟಿವೆ. ಎಸ್.ಕೆ.ರಾಮಚಂದ್ರರಾವ್ 'ಸಂಪ್ರದಾಯ ಶಿಲ್ಪಕಲೆ ಮತ್ತು ಚಿತ್ರಕಲೆ' ಪುಸ್ತಕ ಬರೆದಿದ್ದಾರೆ.[೨೨೬] ಇದರಲ್ಲಿ ಸಂಪ್ರದಾಯ ಶಿಲ್ಪ ಮತ್ತು ಚಿತ್ರಕಲೆಗಳ ಹುಟ್ಟು, ಬೆಳವಣಿಗೆ, ದೈವಿಕ ಹಿನ್ನೆಲೆ, ಧಾರ್ಮಿಕ ಸ್ವರೂಪ, ರಚನಾ ಕ್ರಮಗಳು, ವೈವಿಧ್ಯತೆ, ಪ್ರಾದೇಶಿಕ ಗುಣಲಕ್ಷಣಗಳನ್ನು ಕುರಿತು ತಿಳಿಸಿಕೊಡಲಾಗಿದೆ.

ಅತುಲ್ ಭಾರಧ್ವಾಜ ಕೆ.ಎಸ್.ಕುಲಕರ್ಣಿಯವರ ಬಗ್ಗೆ ವ್ಯಕ್ತಿ ಪರಿಚಯವನ್ನು ಹಿಂದಿಯಲ್ಲಿ ಬರೆದಿದ್ದಾರೆ.[೨೨೭] ಕರ್ನಾಟಕದವರಾದ ಕೆ.ಎಸ್.ಕುಲಕರ್ಣಿ ದೆಹಲಿಯಲ್ಲಿ ನೆಲೆಸಿ ಕಲಾಚಟುವಟಿಕೆಗಳನ್ನು ರೂಪಿಸಿದ ಹೋರಾಟಗಾರರು. ಭಾರತೀಯ ಆಧುನಿಕ ಕಲೆಯ ಸಂದರ್ಭದಲ್ಲಿ ವಿವಿಧ ಪ್ರದೇಶಗಳಲ್ಲಿ ಕಲಾ ಗುಂಪುಗಳು ಕಾರ್ಯನಿರತವಾಗಿದ್ದಾಗ, ದೆಹಲಿಯಲ್ಲಿ 'ಶಿಲ್ಪಿಚಕ್ರ' ಎಂಬ ಕಲಾಗುಂಪನ್ನು ಸ್ಥಾಪಿಸಿ ಅದರ ಮೂಲಕ ಶಿಲ್ಪಕಲೆ ಮತ್ತು ಚಿತ್ರಕಲೆಯ ರಚನೆ, ಪ್ರದರ್ಶನ ಮತ್ತು ಮಾರಾಟದಂತಹ ಚಟುವಟಿಕೆಗಳನ್ನು ಕುಲಕರ್ಣಿಯವರು ಕೈಗೊಂಡರು. ಇಂತಹ ಸಂಕ್ಷಿಪ್ತ ಮಾಹಿತಿಯೊಂದಿಗೆ ಇವರ ಶಿಲ್ಪಕಲಾಕೃತಿ ಮತ್ತು ಚಿತ್ರಕಲಾ ಕೃತಿಗಳ ಬಗ್ಗೆ ಸಚಿತ್ರವಾಗಿ ವಿವರಿಸಲಾಗಿದೆ.

ಈ ಸಂದರ್ಭದಲ್ಲಿ 'ಶಿಬಿ ಮ್ಯೂರಲ್' ಎಂಬ ಮತ್ತೊಂದು ಇಂಗ್ಲೀಷ ಕೃತಿಯನ್ನು ಆರ್.ರಾಮಕೃಷ್ಣ ಎಂಬವರು ಬರೆದಿದ್ದಾರೆ.[೨೨೮] ಇದರಲ್ಲಿ ಶಿಬಿ ನರಸಿಂಹಸ್ವಾಮಿ ದೇವಾಲಯದಲ್ಲಿರುವ ವರ್ಣಭಿತ್ತಿಚಿತ್ರಗಳ ಬಗ್ಗೆ ಮಾಹಿತಿ ಇದೆ. ಈ ಭಿತ್ತಿ ಚಿತ್ರಗಳ ರಚನಾಕ್ರಮ, ಭಿತ್ತಿಸಿದ್ಧತಾ ವಿಧಾನ, ಪರಿಕರಗಳು, ಚಿತ್ರಶೈಲಿ, ವಸ್ತುವಿಷಯಗಳು ವರ್ಣಗಾರಿಕೆ ಹೀಗೆ ಹಲವಾರು ಸಂಗತಿಗಳು ಬಿಂಬಿಸಲ್ಪಟ್ಟಿವೆ.

---

೨೨೨. ಎಸ್.ಕೆ.ರಾಮಚಂದ್ರರಾವ್ : ಕಲಾತಪಸ್ವಿ ವೆಂಕಟಪ್ಪ : ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು-೧೯೮೮

೨೨೩. ಕು.ಶಿ.ಹರಿದಾಸಭಟ್ಟ : ಕಟ್ಟಂಗೇರಿ ಕೃಷ್ಣಹೆಬ್ಬಾರ್ : ಪ್ರಾದೇಶಿಕ ರಂಗಕಲೆಗಳ ಕೇಂದ್ರ, ಉಡುಪಿ-೧೯೮೮

೨೨೪. ಸಿಂದಗಿ ರಾಜಶೇಖರ : ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೮೮

೨೨೫. ಎಚ್.ಎಸ್.ಶ್ರೀಮತಿ : (ಅನು) : ಕಲೆಯ ಅರ್ಥ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೮೮

೨೨೬. ಎಸ್.ಕೆ.ರಾಮಚಂದ್ರರಾವ್ : ಸಂಪ್ರದಾಯ ಶಿಲ್ಪಕಲೆ ಮತ್ತು ಚಿತ್ರಕಲೆ : ಶಿಲ್ಪಕಲಾ ಅಕಾಡೆಮಿ ಬೆಂಗಳೂರು-೧೯೮೮

೨೨೭. ಅತುಲ್ ಭಾರದ್ವಜ : ಕೆ.ಎಸ್.ಕುಲಕರ್ಣಿ : ಲಲಿತಕಲಾ ಅಕಾಡೆಮಿ, ನ್ಯೂದೆಹಲಿ-೧೯೮೮

೨೨೮. ಅರ್.ರಾಮಕೃಷ್ಣ : ಶಿಬಿ ಮ್ಯೂರಲ್ : ಶಿಬಿ ಟೆಂಪಲ್ ಸೆಂಟೇನರಿ ಕಮಿಟಿ, ಶಿಬಿ-೧೯೮೮

ಬಿ.ಪಿ.ಬಾಯಿರಿಯವರು ೧೯೮೮ ರಲ್ಲಿ 'ರಂಗೋಲಿ' ಕಲೆಯ ಬಗ್ಗೆ ಪುಸ್ತಕ ಹೊರತಂದಿದ್ದಾರೆ.[೨೨೯] ಇದರಲ್ಲಿ ರಂಗೋಲಿ ಕಲೆಯ ಪರಂಪರೆ, ನಂಬಿಕೆ, ಆಚರಣೆ, ಪ್ರಕಾರಗಳು, ಮಾಧ್ಯಮಗಳು, ರಚನಾ ಸಂದರ್ಭಗಳು, ನೆಲೆಗಳು, ರಂಗೋಲಿಯ ವೈವಿಧ್ಯತೆ, ರಚನಾಕಾರರು, ರಂಗೋಲಿ ಬಗೆಗಿನ ಹಾಡುಗಳು ಹೀಗೆ ಹಲವಾರು ಸಂಗತಿಗಳು ಹೇಳಲ್ಪಟ್ಟಿವೆ. 'ಬಣ್ಣದ ವೇಷ ಮತ್ತು ಇತರ ಉಪನ್ಯಾಸಗಳು' ಕೃತಿಯನ್ನು ಮಳಿಯ ಮಹಾಬಲಭಟ್ಟರು ಸಂಪಾದಿಸಿದ್ದಾರೆ.[೨೩೦] ಇದರಲ್ಲಿ ಬಣ್ಣದ ವೇಷ ಮತ್ತು ಇನ್ನಿತರ ಉಪನ್ಯಾಸಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಯಕ್ಷಗಾನ ಮುಖವರ್ಣಿಕೆ, ಆಟದ ಸಂದರ್ಭ, ವೇಷಗಾರಿಕೆ, ಕರಾವಳಿ ಭಾಗದ ಬಣ್ಣದ ವೇಷಗಳು, ಆಟಿಕಳಂಜೆ, ಭೂತದಕೋಲ, ನಾಗಾರಾಧನೆ. ಹೀಗೆ ಹಲವಾರು ವಿಷಯಗಳಿಗೆ ಸಂಬಂಧಿಸಿದಂತೆ ಇಲ್ಲಿನ ಲೇಖನಗಳು ಮಾಹಿತಿ ನೀಡುತ್ತವೆ.

'ಪ್ರವಾಸ ಸಾಹಿತ್ಯ' ಕೃತಿಯನ್ನು ವಿ.ಕೃ.ಗೋಕಾಕರವರು ೧೯೮೮ರಲ್ಲಿ ಹೊರತಂದಿದ್ದಾರೆ.[೨೩೧] ಇದು ಬೃಹತ್ ಪುಸ್ತಕವಾಗಿದ್ದು, ಅವರ ಪ್ರವಾಸದ ಅನುಭವಗಳು ಇದರಲ್ಲಿ ಮೂಡಿಬಂದಿವೆ. 'ಸಮುದ್ರದಾಚೆಯಿಂದ ಮತ್ತು ಸಮುದ್ರದೀಚೆಯಿಂದ' ಎಂದು ಎರಡು ಭಾಗ ಮಾಡಿಕೊಂಡು ತಮ್ಮ ಜಾಗತಿಕ ಪ್ರವಾಸದ ಅನುಭವಗಳನ್ನು ತಿಳಿಸಿದ್ದಾರೆ. ಆಯಾ ದೇಶದ ಇತರ ವಿಷಯಗಳ ಜೊತೆಗೆ ಅಲ್ಲಿ ತಾವು ನೋಡಿದ ಕಲಾಗ್ಯಾಲರಿಗಳು, ಕಲಾಕೃತಿಗಳು, ಕಲಾತ್ಮಕ ಸ್ಮಾರಕಗಳು, ಕಲಾವಿದರು ಕಲಾಶಾಲೆಗಳು, ಹೀಗೆ ಹತ್ತು ಹಲವು ಕಲಾವಿಚಾರಗಳು ಈ ಕೃತಿಯಲ್ಲಿ ತುಂಬಿಕೊಂಡಿವೆ.

ಕ್ರಿ.ಶ. ೧೯೮೯ರಲ್ಲಿ ಪ್ರಕಟಗೊಂಡ ಚಿತ್ರಕಲಾ ಸಾಹಿತ್ಯ ಕೃತಿಗಳ ಸಂಕ್ಷಿಪ್ತ ಮಾಹಿತಿ ಕೆಳಗಿನಂತಿದೆ. ರಾಜಾರವಿವರ್ಮನ ಬಗ್ಗೆ ಹಲವಾರು ಪುಸ್ತಕಗಳು ಪ್ರಕಟಗೊಂಡಿದ್ದು, ಈ ವರ್ಷದಲ್ಲಿಯೂ ಆತನ ಬಗ್ಗೆ ಒಂದು ಪುಸ್ತಕ ಹೊರ ಬಂದಿದೆ. 'ರಾಜಾರವಿವರ್ಮ' ಎಂಬ ಹೆಸರಿನ ಈ ಕೃತಿಯನ್ನು ಎಂ.ಎನ್.ಕಮಲ ಬರೆದಿದ್ದಾರೆ.[೨೩೨] ಇದರಲ್ಲಿ ರವಿವರ್ಮನ ಸಂಕ್ಷಿಪ್ತ ಜೀವನ, ಕಲೆ ಮತ್ತು ಕಲಾಕೃತಿಗಳ ಬಗ್ಗೆ ಹೇಳಲಾಗಿದೆ. 'ವಿಕಾಸ ಕಂಡ ಕರ್ನಾಟಕದ ಚಿತ್ರಕಲೆ' ಚಿಕ್ಕ ಪುಸ್ತಕವನ್ನು ಅ.ಲ.ನರಸಿಂಹನ್ ಬರೆದಿದ್ದಾರೆ.[೨೩೩] ಚಿಕ್ಕ ಬಾಲಕನೊಬ್ಬ ಕರ್ನಾಟಕದ ಚಿತ್ರಕಲೆಯ ಬಗ್ಗೆ ಪ್ರಶ್ನೋತ್ತರ ರೂಪದಲ್ಲಿ ತಿಳಿದುಕೊಳ್ಳುವಂತೆ ಈ ಕೃತಿ ರಚನೆಗೊಂಡಿದೆ. ಕರ್ನಾಟಕದ ಚಿತ್ರಕಲೆಯ ಪ್ರಾಚೀನತೆ, ಕಲಾಪ್ರಕಾರಗಳು, ವಸ್ತುವಿಷಯಗಳು, ವೈವಿಧ್ಯತೆ, ಪ್ರಾದೇಶಿಕ ಗುಣಲಕ್ಷಣಗಳು, ಕಲಾವಿದರು, ಹೀಗೆ ಹಲವು ಸಂಗತಿಗಳು ಇಲ್ಲಿ ಬಿಂಬಿತಗೊಂಡಿವೆ.

'ಶೃಂಗಾರ ಲಹರಿ' ಕೃತಿಯನ್ನು ಎಂ.ಎಚ್.ಕೃಷ್ಣ ಬರೆದಿದ್ದಾರೆ.[೨೩೪] ಬೇರೆ ಬೇರೆ ಕಲಾವಿಷಯಗಳ ಬರೆದ ಲೇಖನಗಳು ಇದರಲ್ಲಿವೆ. ಬಾದಾಮಿ ಚಾಲುಕ್ಯರ ಚಿತ್ರಕಲೆ, ಮೈಸೂರು ಚಿತ್ರಕಲೆ, ಶಿಬಿ, ಸಿರಾ, ಭಿತ್ತಿಚಿತ್ರಗಳು, ವಿಜಯನಗರದ ಚಿತ್ರಕಲೆ, ಹೀಗೆ ಹಲವು ಸಂಗತಿಗಳನ್ನು ಬಿಂಬಿಸಲಾಗಿದೆ. ಜೊತೆಗೆ ರಾಗಮಾಲಾ ಚಿತ್ರಕಲೆ, ಕಿರುರೂಪ ಚಿತ್ರಗಳಲ್ಲಿ ಕರ್ನಾಟಕದ ಪಾತ್ರ ಮತ್ತು ಚಿತ್ರಕಲೆಯಲ್ಲಿ ಶೃಂಗಾರ ಲಹರಿ ಎನ್ನುವಂತಹ ಸಂಗತಿಗಳು ಹೇಳಲ್ಪಟ್ಟಿವೆ.

---

೨೨೯. ಬಿ.ಪಿಬಾಯಿರಿ : ರಂಗೋಲಿ : ಚಿತ್ರಕುಟೀರ, ಉಡುಪಿ–೧೯೮೮

೨೩೦. ಮಳಿಯ ಮಹಾಬಲಭಟ್ಟ : (ಸಂ) : ಬಣ್ಣದ ವೇಷ ಮತ್ತು ಇತರ ಉಪನ್ಯಾಸಗಳು : ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ–೧೯೮೮

೨೩೧. ವಿ.ಕೃ.ಗೋಕಾಕ : ಪ್ರವಾಸ ಸಾಹಿತ್ಯ : ಐ.ಬಿ.ಎಚ್.ಪ್ರಕಾಶನ, ಬೆಂಗಳೂರು–೧೯೮೮

೨೩೨. ಎಂ.ಎನ್.ಕಮಲ : ರಾಜಾರವಿವರ್ಮ : ಬೆಂಗಳೂರು–೧೯೮೯

೨೩೩. ಅ.ಲ.ನರಸಿಂಹನ್ : ವಿಕಾಸಕಂಡ ಕರ್ನಾಟಕದ ಚಿತ್ರಕಲೆ : ಐ.ಬಿ.ಎಚ್.ಪ್ರಕಾಶನ, ಬೆಂಗಳೂರು–೧೯೮೯

೨೩೪. ಎಂ.ಎಚ್.ಕೃಷ್ಣ: ಶೃಂಗಾರ ಲಹರಿ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು–೧೯೮೯

ಎನ್.ಮರಿಶಾಮಾಚಾರರು ೧೯೮೮ರಲ್ಲಿ ಎರಡು ಕೃತಿಗಳನ್ನು ಹೊರತಂದಿದ್ದಾರೆ. ಮೊದಲನೆಯದು 'ಕಲಾವಿದರು',[೨೩೫] ಎರಡನೆಯದು 'ಸಾಹಿತ್ಯದಲ್ಲಿ ಚಿತ್ರಕಲೆ.'[೨೩೬] ಮೊದಲ ಕೃತಿಯಲ್ಲಿ ಕೆಲವು ಜನ ಭಾರತೀಯ ಮತ್ತು ಪಾಶ್ಚಾತ್ಯ ಮಾಹಿತಿ ಇದ್ದರೆ, ಎರಡನೆಯ ಕೃತಿಯಲ್ಲಿ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿನ ಚಿತ್ರಕಲೆಯ ಉಲ್ಲೇಖಗಳನ್ನು ಕುರಿತು ಹೇಳಲಾಗಿದೆ. 'ಕಲೆ ಮತ್ತು ರಸಸ್ವಾದನೆ' ಕೃತಿಯನ್ನು ೧೯೮೮ರಲ್ಲಿ ಎಮ್.ಎಚ್.ಕೃಷ್ಣಯ್ಯ ರಚನೆ ಮಾಡಿದ್ದಾರೆ.[೨೩೭] ಇದರಲ್ಲಿ ಕಲೆಯ ಅಭಿವ್ಯಕ್ತಿ ಪ್ರಕ್ರಿಯೆ, ಕಲಾವಸ್ತುಗಳು, ಕಲಾಕೃತಿ, ಶೈಲಿ, ರೀತಿ, ಸಹೃದಯ, ಕಲಾವಿದ ಇವುಗಳ ಜೊತೆಗೆ ಕಲೆಯಿಂದ ರಸಸ್ವಾದನೆ ಹೇಗಾಗುತ್ತದೆ ಎಂಬ ಸಂಗತಿಗಳನ್ನು ಹೇಳಲಾಗಿದೆ. ಆರ್.ಎಮ್.ಹಡಪದ ಅವರು 'ಸಮಕಾಲಿನ ಕಲೆ' ಕೃತಿಯನ್ನು ರಚನೆ ಮಾಡಿದ್ದು,[೨೩೮] ಇದರಲ್ಲಿ ಸಮಕಾಲಿನ ಕಲೆಯ ಪರಿಕಲ್ಪನೆ, ವಿಷಯ ವಸ್ತುಗಳು, ಮಾಧ್ಯಮಗಳು, ಬದಲಾದ ರಚನಾಕ್ರಮಗಳು, ಪ್ರದರ್ಶನ ರೀತಿಗಳು, ಹೀಗೆ ಹಲವಾರು ಸಂಗತಿಗಳಿವೆ. ಜೊತೆಗೆ ಭಾರತ ಮತ್ತು ಕರ್ನಾಟಕದಲ್ಲಿ ಸಮಕಾಲೀನ ಕಲೆಯ ಸಂದರ್ಭಗಳು ಮತ್ತು ಕಲಾವಿದರ ಬಗ್ಗೆ ಸಂಕ್ಷಿಪ್ತವಾಗಿ ವಿವೇಚಿಸಲಾಗಿದೆ.

'ತುಳುವರ ಆಚರಣೆಯಲ್ಲಿ ಕಲಾವಂತಿಕೆ' ಕೃತಿಯನ್ನು ಕ.ವೆಂ.ರಾಜಗೋಪಾಲಚಾರಿಯವರು ಸಂಪಾದನೆ ಮಾಡಿದ್ದಾರೆ.[೨೩೯] ಇದರಲ್ಲಿ ತುಳುವರ ಬೇರೆ ಬೇರೆ ಆಚರಣೆಗಳಲ್ಲಿ ಬರುವ ಕಲಾವಂತಿಕೆಯ ಬಗೆಗೆ ಬೇರೆ ಬೇರೆ ಲೇಖನಗಳಿವೆ. ಆಟಿಕಳಂಜೆ, ಯಕ್ಷಗಾನ, ಬಣ್ಣದ ವೇಷ, ಭೂತದಕೋಲ, ನಾಗಾರಾಧನೆ ಹೀಗೆ ಹಲವಾರು ಸಂದರ್ಭಗಳಲ್ಲಿನ ಕಲಾವಂತಿಕೆಯನ್ನು ಕುರಿತು ವಿವೇಚಿಸಲಾಗಿದೆ. ಕ್ರಿ.ಶ. ೧೯೯೦ರಲ್ಲಿ ಪ್ರಕಟಗೊಂಡ ಚಿತ್ರಕಲೆಯ ಕುರಿತ ಪುಸ್ತಕಗಳು ಕೆಳಗಿನಂತಿವೆ. ಕೆ.ವಿ.ಸುಬ್ರಹ್ಮಣ್ಯ ಬರೆದ 'ವೆಂಕಟಪ್ಪ ಸಮಕಾಲೀನ ಪುನರಾವಲೋಕನ' ಕೃತಿಯಲ್ಲಿ[೨೪೦] ವೆಂಕಟಪ್ಪನವರ ಕಲೆ ಮತ್ತು ಕಲಾಕೃತಿಗಳ ಬಗ್ಗೆ ಹೊಸನೋಟಗಳನ್ನು ಬಿಂಬಿಸಲಾಗಿದೆ. ವೆಂಕಟಪ್ಪನವರ ಇನ್ನಿತರ ಕೃತಿಗಳಿಗಿಂತ ಇದು ಭಿನ್ನವಾಗಿದ್ದು, ಸಮಕಾಲೀನ ಕಲಾ ಸಂದರ್ಭದಲ್ಲಿ ವೆಂಕಟಪ್ಪನವರ ಕಲೆಯ ಪ್ರಸ್ತುತತೆಯನ್ನು ಕುರಿತು ವಿವೇಚಿಸಲಾಗಿದೆ. 'ಕಲೆ, ಅನುಭವ ಮತ್ತು ಅನುಭಾವ' ಕೃತಿಯನ್ನು ಚಂದ್ರಕಾಂತ ಕುಸನೂರ ೧೯೯೦ರಲ್ಲಿ ರಚನೆ ಮಾಡಿದ್ದಾರೆ.[೨೪೧] ಕಲೆಯ ಸ್ವರೂಪ, ಲಕ್ಷಣಗಳು, ಅನುಭವ, ಅನುಭಾವಗಳ ಬಗ್ಗೆ ಇಲ್ಲಿ ಸ್ಥೂಲವಾಗಿ ಹೇಳಲಾಗಿದೆ. ಲೋಕ ಘಟನೆಗಳ ಅನುಭವಗಳ ಪ್ರತಿಫಲನದ ಸ್ವರೂಪವಾಗಿ ಕಲಾಪ್ರತಿಭೆ ಹೊರಹೊಮ್ಮುವ ಮೂಲಕ ಅಭಿವ್ಯಕ್ತಿ ಸ್ವರೂಪದ ಕೃತಿಯಾಗಿ, ಅನುಭವದ ರಸಘಟ್ಟಿಯಾಗಿ ರೂಪುಗೊಳ್ಳುತ್ತದೆ. ಅದು ಮುಂದೆ ಸಹೃಯರಲ್ಲಿ ಅನುಭಾವವಾಗಿ ಕೊನೆಗೊಳ್ಳುತ್ತದೆ ಎಂಬಂತಹ ವಿವರಗಳು ಈ ಕೃತಿಯಲ್ಲಿವೆ. 'ಕಲಾಕ್ವಿಜ್' ಕೃತಿಯನ್ನು ಎನ್.ವಿಶ್ವರೂಪಚಾರ್ ಬರೆದಿದ್ದಾರೆ.[೨೪೨] ಇದು ಚಿಕ್ಕ ಪ್ರಶ್ನೋತ್ತರ ರೂಪದ ಕಲಾ ಮಾಹಿತಿಯನ್ನು ಹೊಂದಿದೆ. ಜಾಗತಿಕ ಕಲೆ, ಭಾರತೀಯ ಕಲೆ, ಕರ್ನಾಟಕ ಕಲೆ, ಕಲಾವಿದರು, ಕಲಾಪ್ರಕಾರಗಳು, ಹೀಗೆ ಹಲವು ವಿಷಯಗಳಿಗೆ ಸಂಬಂಧಿಸಿದ ಪ್ರಶ್ನೋತ್ತರಗಳು ಇದರಲ್ಲಿವೆ.

---

೨೩೫. ಎನ್.ಮರಿಶಾಮಾಚಾರ್ : ಕಲಾವಿದರು : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೮೮

೨೩೬. ಎನ್.ಮರಿಶಾಮಾಚಾರ್ : ಸಾಹಿತ್ಯದಲ್ಲಿ ಚಿತ್ರಕಲೆ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೮೮

೨೩೭. ಎಮ್.ಎಚ್.ಕೃಷ್ಣಯ್ಯ : ಕಲೆ ಮತ್ತು ರಸಸ್ವಾದನೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೮

೨೩೮. ಆರ್.ಎಮ್.ಹಡಪದ : ಸಮಕಾಲೀನ ಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೮

೨೩೯. ಕ.ವೆಂ.ರಾಜಗೋಪಾಲವಾರಿ : (ಸಂ) : ತುಳುವರ ಆಚರಣೆಯಲ್ಲಿ ಕಲಾವಂತಿಕೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೮

೨೪೦. ಕೆ.ವಿ.ಸುಬ್ರಹ್ಮಣ್ಯ : ವೆಂಕಟಪ್ಪ ಸಮಕಾಲೀನ ಮನರಾವಲೋಕನ : ಚಿತ್ರಕಾವ್ಯ ಪ್ರಕಾಶನ, ಬೆಂಗಳೂರು-೧೯೯೦

೨೪೧. ಚಂದ್ರಕಾಂತ ಕುಸನೂರು : ಕಲೆ, ಅನುಭವ ಮತ್ತು ಅನುಭಾವ : ಮಾಲಗಿತ್ತಿ ಪಬ್ಲಿಸಿಂಗ್ ಹೌಸ, ಬೆಳಗಾವಿ-೧೯೯೦

೨೪೨. ಎನ್.ವಿಶ್ವರೂಪಾಚಾರ್ : ಕಲಾಕ್ವಿಜ್ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೯೦

'ದೃಶ್ಯಕಲೆಯ ಆರಾಧಕರು' ಪುಸ್ತಕವನ್ನು ಎಚ್.ಎನ್.ಸುರೇಶ ರಚಿಸಿದ್ದಾರೆ.[೨೪೩] ಇದರಲ್ಲಿ ಕೆಲವು ಪ್ರಸಿದ್ಧ ಕಲಾವಿದರ ಸಂಕ್ಷಿಪ್ತ ಕಲಾಬದುಕು ಕಟ್ಟಿಕೊಡಲಾಗಿದೆ. ದೃಶ್ಯಕಲೆಯನ್ನು ಈ ಕಲಾವಿದರು ಹೇಗೆ ಆರಾಧಿಸಿದರು ಎಂಬುದನ್ನು ಅವರ ಕಲೆಯ ಹಿನ್ನೆಲೆಯಲ್ಲಿ ಬಿಂಬಿಸಲಾಗಿದೆ. 'ಕಲೆ ಮತ್ತು ಮನುಷ್ಯ ಸಂಸ್ಕೃತಿ' ಕೃತಿಯನ್ನು ಜ್ಯೋತಿ ಹೊಸೂರ ಬರೆದಿದ್ದಾರೆ.[೨೪೪] ಇದು ೧೯೯೦ರಲ್ಲಿ ಪ್ರಕಟಗೊಂಡಿದೆ. ಮನುಷ್ಯ ಸಂಸ್ಕೃತಿಯಲ್ಲಿ ಆದಿಕಾಲದಿಂದ ಕಲೆ ಹೇಗೆ ಬೆಳೆದುಬಂದಿತು ಮತ್ತು ಯಾವ ಬಗೆಯ ಬದಲಾದ ಸ್ವರೂಪದಲ್ಲಿ ವ್ಯಕ್ತಗೊಂಡಿದೆ ಎಂಬುದನ್ನು ಇದರಲ್ಲಿ ಸ್ಥೂಲವಾಗಿ ತಿಳಿಸಲಾಗಿದೆ.

ಕ್ರಿ.ಶ. ೧೯೯೧ರಲ್ಲಿ ಪ್ರಕಟಗೊಂಡ ಕಲಾ ಪುಸ್ತಕಗಳ ಸಂಕ್ಷಿಪ್ತ ನೋಟ ಹೀಗಿದೆ. ಗವೀಶ ಹಿರೇಮಠ 'ಸೃಜನಶೀಲ ಕಲಾವಿದರು' ಕೃತಿಯನ್ನು ೧೯೯೧ರಲ್ಲಿ ಹೊರತಂದಿದ್ದು,[೨೪೫] ಇದರಲ್ಲಿ ನಾಡಿನ ಕೆಲವು ಪ್ರಮುಖ ಕಲಾವಿದರ ಸಂಕ್ಷಿಪ್ತ ಪರಿಚಯ ಕೊಡಲಾಗಿದೆ. ಆಯಾ ಕಲಾವಿದರ ಸಂಕ್ಷಿಪ್ತ ಜೀವನ, ಕಲೆ, ಕಲಾಕೃತಿಗಳ ಬಗ್ಗೆ ಮಾಹಿತಿ ಕಂಡುಬರುತ್ತದೆ. 'ಪ್ರತಿಭಾಚೇತನ' ಪುಸ್ತಕವನ್ನು ಎ.ಎಸ್.ಮೂರ್ತಿಯವರು ರಚನೆ ಮಾಡಿದ್ದು,[೨೪೬] ಅ.ನ.ಸುಬ್ಬರಾಯರ ವ್ಯಕ್ತಿಪರಿಚಯ ಕುರಿತ ಕೃತಿ ಇದಾಗಿದೆ. ಅವರ ಕಲಾಬದುಕು, ಕಲೆ, ಕಲಾಸಾಹಿತ್ಯಗಳು ಇಲ್ಲಿ ಬಿಂಬಿತಗೊಂಡಿವೆ. 'ಭಾರತದ ಜನಪದಕಲೆ' ಕೃತಿಯನ್ನು ಎನ್.ಮರಿಶಾಮಾಚಾರ್ ರಚಿಸಿದ್ದಾರೆ.[೨೪೭] ಇದರಲ್ಲಿ ಜನಪದ ಕಲೆಯ ಅರ್ಥವ್ಯಾಪ್ತಿ, ಸ್ವರೂಪ, ಲಕ್ಷಣಗಳು, ಕೆಲವು ಪ್ರಮುಖ ಜನಪದ ಕಲಾ ಪ್ರಕಾರಗಳ ಸ್ಥೂಲ ಮಾಹಿತಿ ಕೊಡಲಾಗಿದೆ. ಕಲಂಕಾರಿ, ವಾರ್ಲಿ, ಪಟವಾ, ಕಾಳಿಘಾಟ್ ಹೀಗೆ ವಿವಿಧ ಪ್ರದೇಶಗಳ ಜನಪದ ಕಲಾಪ್ರಕಾರಗಳು ಇಲ್ಲಿ ಬಿಂಬಿತವಾಗಿವೆ.

'ಆಧುನಿಕ ಕಲೆ' ಗ್ರಂಥವನ್ನು ಶ್ರೀನಿವಾಸಮೂರ್ತಿ ರಚಿಸಿದ್ದಾರೆ.[೨೪೮] ಆಧುನಿಕ ಕಲೆಯ ಅರ್ಥವ್ಯಾಪ್ತಿ, ಜಾಗತಿಕ ಸ್ವರೂಪ, ಗುಣಲಕ್ಷಣಗಳು, ಭಾರತ ಮತ್ತು ಕರ್ನಾಟಕದ ಆಧುನಿಕ ಕಲೆಯ ಸಂದರ್ಭಗಳು ಮತ್ತು ಕೆಲವು ಪ್ರಮುಖ ಕಲಾವಿದರ ಬಗ್ಗೆ ವಿವೇಚಿಸಲಾಗಿದೆ. 'ಕಲಾತಪಸ್ವಿ' ಕೃತಿಯನ್ನು ಮಹಾಲಿಂಗ ಯಾಳಗಿ ಸಂಪಾದಿಸಿದ್ದಾರೆ.[೨೪೯] ಗದುಗಿನ ಎಂ.ಎ.ಚಟ್ಟಿ ಯವರ ಅಭಿನಂದನಾ ಸಮಾರಂಭದ ಸ್ಮರಣಸಂಚಿಕೆಯಾದ ಇದರಲ್ಲಿ ಅವರ ಸಂಕ್ಷಿಪ್ತ ಜೀವನ, ಕಲೆ, ಕಲಾಕೃತಿ ಮತ್ತು ಕಲಾ ಶೈಲಿಗಳ ಪರಿಚಯವಿದೆ.

'ರೇಖಾಚಿತ್ರ' ಕೃತಿಯನ್ನು ಬಿ.ವಿ.ಕೆ.ಶಾಸ್ತ್ರಿಯವರು ಬರೆದಿದ್ದಾರೆ.[೨೫೦] ಈ ಕೃತಿಯಲ್ಲಿ ರೇಖಾಚಿತ್ರದ ಪ್ರಾಚೀನತೆ, ಬೆಳೆದುಬಂದ ಹಿನ್ನೆಲೆ, ವ್ಯಾಪ್ತಿ, ಪ್ರಕಾರಗಳು, ಗುಣಲಕ್ಷಣಗಳು ಮತ್ತು ಚಿತ್ರಕಲೆಯಲ್ಲಿ ರೇಖಾಚಿತ್ರದ ಮಹತ್ವಗಳನ್ನು ಬಿಂಬಿಸಲಾಗಿದೆ. 'ಸಾಹಿತ್ಯ ಕಲೆಗಳಲ್ಲಿ ಪರಿವರ್ತನೆ ಮತ್ತು ಪ್ರಗತಿ' ಕೃತಿಯನ್ನು ಎಂ.ಎಚ್.ಕೃಷ್ಣಯ್ಯ ಬರೆದಿದ್ದಾರೆ.[೨೫೧] ಇದರಲ್ಲಿ ಬೇರೆ ಬೇರೆ ಲೇಖನಗಳಿವೆ. ಕಲೆ ಮತ್ತು

---

೨೪೩. ಎಚ್.ಎನ್.ಸುರೇಶ : ದೃಶ್ಯಕಲೆಯ ಆರಾಧಕರು : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೦

೨೪೪. ಜ್ಯೋತಿ ಹೊಸೂರು : ಕಲೆ ಮತ್ತು ಮನುಷ್ಯ ಸಂಸ್ಕೃತಿ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೦

೨೪೫. ಗವೀಶ ಹಿರೇಮಠ : ಸೃಜನಶೀಲ ಕಲಾವಿದರು : ಜಗದ್ಗುರು ಮೂರುಸಾವಿರಮಠ, ಹುಬ್ಬಳ್ಳಿ-೧೯೯೧

೨೪೬. ಎ.ಎಸ್.ಮೂರ್ತಿ : ಪ್ರತಿಭಾಚೇತನ : ಅ.ನ.ಸು.ಪ್ರಕಾಶನ, ಬೆಂಗಳೂರು-೧೯೯೧

೨೪೭. ಎನ್.ಮರಿಶಾಮಾಚಾರ್ : ಭಾರತದ ಜನಪದಕಲೆ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೯೧

೨೪೮. ಶ್ರೀನಿವಾಸಮೂರ್ತಿ : ಆಧುನಿಕಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೧

೨೪೯. ಮಹಾಲಿಂಗ ಯಾಳಗಿ : ಕಲಾತಪಸ್ವಿ : ಚೆಟ್ಟಿ ಅಭಿನಂದನಾ ಸಮಿತಿ, ಗದಗ-೧೯೯೧

೨೫೦. ಬಿ.ವಿ.ಕೆ.ಶಾಸ್ತ್ರಿ : ರೇಖಾಚಿತ್ರ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೧

೨೫೧. ಎಂ.ಎಚ್.ಕೃಷ್ಣಯ್ಯ : ಸಾಹಿತ್ಯ ಕಲೆಗಳಲ್ಲಿ ಪರಿವರ್ತನೆ ಮತ್ತು ಪ್ರಗತಿ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೧

ಸಮಾಜ, ಕಲೆ ಮತ್ತು ಸಂಸ್ಕೃತಿ, ಕಲೆ ಮತ್ತು ಐತಿಹಾಸಿಕತೆ, ಕಲೆ ಮತ್ತು ಸಾಹಿತ್ಯ, ಸಾಹಿತ್ಯ ಕಲೆಗಳಲ್ಲಿ ಪರಿವರ್ತನೆ ಮತ್ತು ಪ್ರಗತಿ ಎಂಬಂತಹ ವಿಷಯಗಳಿಗೆ ಸಂಬಂಧಿಸಿದ ಲೇಖನಗಳಿವೆ.

ಕ್ರಿ.ಶ. ೧೯೯೨ರಲ್ಲಿ ಕೆಲವು ಕಲಾ ಪುಸ್ತಕಗಳು ಪ್ರಕಟಗೊಂಡಿವೆ. ಈ ವರ್ಷದಲ್ಲಿ ಡಾ.ಬಿ.ಕೆ.ಹಿರೇಮಠರ 'ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ' ಪಿಎಚ್.ಡಿ ಸಂಶೋಧನೆಯ ಕೃತಿ ಪ್ರಕಟವಾಗಿ[೨೫೨] ಕಲಾ ಸಾಹಿತ್ಯ ಕ್ಷೇತ್ರದಲ್ಲಿ ಹೊಸ ಆಯಾಮ ಸೃಷ್ಟಿಯಾಯಿತು. ಇದರಲ್ಲಿ ಹಸ್ತಪ್ರತಿಯಲ್ಲಿನ ಚಿತ್ರಕಲೆಯ ರಚನಾಕ್ರಮವನ್ನು ಮೊದಲ ಬಾರಿಗೆ ಅಧ್ಯಯನಕ್ಕೊಳಪಡಿಸಲಾಗಿದೆ. ಹಸ್ತಪ್ರತಿ ಚಿತ್ರಗಳ ರಚನಾಕ್ರಮ, ಲೇಪನ ಕೊಡುವುದು, ವರ್ಣತಯಾರಿಕೆ, ಅಂಟುಮಾಧ್ಯಮ, ಕುಂಚಗಳ ತಯಾರಿಕೆ, ಚಿತ್ರಗಳಿಗೆ ಹೊಳಪು ಕೊಡುವ ರೀತಿ ಮುಂತಾದವುಗಳ ಜೊತೆಗೆ ಚಿತ್ರಗಳ ವಸ್ತುವಿಷಯಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. 'ಕಿನ್ನಾಳ ಚಿತ್ರಕಲೆ' ಚಿಕ್ಕ ಪುಸ್ತಕವನ್ನು ಆರ್.ಎಚ್.ಕುಲಕರ್ಣಿಯವರು ಬರೆದಿದ್ದಾರೆ.[೨೫೩] ಕಿನ್ನಾಳದ ಅಲಂಕಾರಿಕ ವಸ್ತುಗಳ ತಯಾರಿಕೆ, ಗೊಂಬೆಗಳ ತಯಾರಿಕೆ, ಬಣ್ಣಲೇಪನ, ಫಲಕಗಳ ಮೇಲಿನ ಚಿತ್ರರಚನಾ ಕ್ರಮ, ವರ್ಣತಯಾರಿಕೆ, ಕುಂಚ ಮತ್ತು ಅಂಟು ಮಾಧ್ಯಮಗಳ ಜೊತೆಗೆ ಚಿತ್ರಗಳ ವಸ್ತುವಿಷಯ, ಶೈಲಿ, ಪ್ರಭಾವ, ಪ್ರೇರಣೆಗಳನ್ನು ಸಂಕ್ಷಿಪ್ತವಾಗಿ ತಿಳಿಸಲಾಗಿದೆ. 'ಭಾರತೀಯ ಸಂಸ್ಕೃತಿಯಲ್ಲಿ ರಂಗವಲ್ಲಿ' ಕೃತಿಯು ೧೯೯೨ರಲ್ಲಿ ಪ್ರಕಟಗೊಂಡಿದೆ.[೨೫೪] ಇದರಲ್ಲಿ ರಂಗವಲ್ಲಿಯ ಪರಂಪರೆ, ಮೌಲ್ಯಗಳು, ನಂಬಿಕೆಗಳು, ರಚನಾಕ್ರಮ, ಪ್ರಕಾರಗಳು, ರಂಗವಲ್ಲಿ ಕುರಿತ ಹಾಡುಗಳು, ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಗೊಂಡ ರಂಗವಲ್ಲಿಯ ಬಗೆಗಿನ ವಿವರಗಳನ್ನು ಕೊಡಲಾಗಿದೆ. ಈ ಕೃತಿಯನ್ನು ಬಿ.ಪಿ.ಬಾಯಿರಿಯವರು ಬರೆದಿದ್ದಾರೆ.

'ತಮಿಳು ನಾಡಿನಲ್ಲಿ ಚಿತ್ರಕಲೆ' ಕೃತಿಯನ್ನು ಅ.ಲ.ನರಸಿಂಹನ್ ಬರೆದಿದ್ದಾರೆ.[೨೫೫] ರಾಜ್ಯ ಲಲಿತಕಲಾ ಅಕಾಡಮಿಯ ಪ್ರವಾಸ ಯೋಜನೆಯ ಹಿನ್ನೆಲೆಯಲ್ಲಿ ರಚಿಸಲ್ಪಟ್ಟ ಈ ಕಲಾಪ್ರವಾಸ ಸಾಹಿತ್ಯ ಕುರಿತ ಪುಸ್ತಕದಲ್ಲಿ ತಮಿಳುನಾಡಿನ ಚಿತ್ರಕಲೆಯ ಬಗ್ಗೆ ಹೇಳಲಾಗಿದೆ. ಅಲ್ಲಿನ ಪ್ರಾಚೀನ ಚಿತ್ರಕಲೆ, ಭಿತ್ತಿಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಜನಪದ ಚಿತ್ರಕಲೆ, ಕಲಾಶಾಲೆಗಳು, ಕಲಾ ಅಕಾಡಮಿ, ನವ್ಯಕಲೆ ಮತ್ತು ಕೆಲವು ಕಲಾವಿದರ ಬಗ್ಗೆ ಸ್ಥೂಲ ಮಾಹಿತಿ ಕೊಡಲಾಗಿದೆ. ಬಿ.ವಿ.ಕೆ.ಶಾಸ್ತ್ರಿಯವರ 'ನವ್ಯಕಲೆಯ ನವಮುಖಗಳು'[೨೫೬] ಆಧುನಿಕ ಕಲೆಯ ಪರಿಕಲ್ಪನೆ, ಮಾಧ್ಯಮಗಳು, ಬದಲಾದ ಕಲಾ ಮೌಲ್ಯಗಳು, ರಚನಾ ಕ್ರಮಗಳು, ಒಳನೋಟಗಳು, ಆಯ್ಕೆಯ ವಿವಿಧ ಆಯಾಮಗಳು ಹೀಗೆ ಹಲವಾರು ಸಂಗತಿಗಳನ್ನು ಸ್ಥೂಲವಾಗಿ ತಿಳಿಸಿಕೊಡುತ್ತದೆ.

ಕ್ರಿ.ಶ. ೧೯೯೩ರಲ್ಲಿ ಪ್ರಕಟವಾದ ಕಲಾಸಾಹಿತ್ಯ ಕೃತಿಗಳು ಹೀಗಿವೆ. ಈ ವರ್ಷದಲ್ಲಿಯೂ ಮತ್ತೊಂದು ಪಿಎಚ್.ಡಿ. ಮಹಾಪ್ರಬಂಧವು ಪ್ರಕಟಗೊಂಡು ಚಿತ್ರಕಲಾ ಸಾಹಿತ್ಯದಲ್ಲಿ ಸಂಶೋಧನಾ ಸಾಹಿತ್ಯದ ಮೌಲ್ಯವನ್ನು ಹೆಚ್ಚಿಸಿತೆಂದು ಹೇಳಬಹುದು. ಡಾ.ಎಸ್.ಸಿ.ಪಾಟೀಲರ 'ಕರ್ನಾಟಕದ ಜನಪದ ಚಿತ್ರಕಲೆ' ಪಿಎಚ್.ಡಿ. ಪ್ರಬಂಧವು[೨೫೭] ಕನ್ನಡದ ಚಿತ್ರಕಲಾ ಕ್ಷೇತ್ರಕ್ಕೆ ಸಂಬಂಧಿಸಿದ ಮೊದಲ ಸಂಶೋಧನಾ ಕೃತಿ ಎಂಬುದಾಗಿ ಮಾನ್ಯತೆ ಪಡೆದುಕೊಂಡಿತು.

---

೨೫೨. ಡಾ. ಬಿ.ಕೆ.ಹಿರೇಮಠ : ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ : ವೀರಶೈವ ಅಧ್ಯಯನ ಸಂಸ್ಥೆ ಕಸಬಾ, ಜಂಬಗಿ-೧೯೯೨
೨೫೩. ಆರ್.ಎಚ್.ಕುಲಕರ್ಣಿ : ಕಿನ್ನಾಳ ಚಿತ್ರಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೨
೨೫೪. ಬಿ.ಪಿ.ಬಾಯಿರಿ : ಭಾರತೀಯ ಸಂಸ್ಕೃತಿಯಲ್ಲಿ ರಂಗವಲ್ಲಿ : ಚಿತ್ರಕುಟೀರ, ಉಡುಪಿ-೧೯೯೨
೨೫೫. ಅ.ಲ.ನರಸಿಂಹನ್ : ತಮಿಳುನಾಡಿನಲ್ಲಿ ಚಿತ್ರಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೨
೨೫೬. ಬಿ.ವಿ.ಕೆ.ಶಾಸ್ತ್ರಿ : ನವ್ಯಕಲೆಯ ನವಮುಖಗಳು : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೨
೨೫೭. ಡಾ. ಎಸ್.ಸಿ.ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ: ವೀರಶೈವ ಅಧ್ಯಯನ ಸಂಸ್ಥೆ ತೋಂಟದಾರ್ಯಮಠ, ಗದಗ-೧೯೯೩

'ಕರ್ನಾಟಕದ ಜನಪದ ಚಿತ್ರಕಲೆ' ಕೃತಿಯಲ್ಲಿ ಕರ್ನಾಟಕದ ಬಹುಮಟ್ಟಿನ ಜನಪದ ಚಿತ್ರಕಲಾ ಪ್ರಕಾರಗಳು ಅಧ್ಯಯನಕ್ಕೊಳಪಟ್ಟಿವೆ. ವಿಶೇಷವಾಗಿ ಉತ್ತರ ಕರ್ನಾಟಕವನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿದ ಈ ಕೃತಿಯಲ್ಲಿ ಆಯಾ ಕಲಾಪ್ರಕಾರದ ರಚನಾಕ್ರಮ, ಪರಿಕರಗಳು, ವಸ್ತುವಿಷಯ, ಶೈಲಿ, ನಂಬಿಕೆ. ಆಚರಣೆಗಳನ್ನು ಬಿಂಬಿಸಲಾಗಿದೆ. ರಂಗವಲ್ಲಿ, ಹಚ್ಚೆ, ಹಸೆ, ಮದರಂಗಿ, ಕಿನ್ನಾಳಕಲೆ, ಕೌದಿಕಲೆ, ಹೀಗೆ ಹತ್ತು ಹಲವು ಕಲಾಪ್ರಕಾರಗಳು ಇಲ್ಲಿ ಅಧ್ಯಯನಕ್ಕೊಳಪಟ್ಟಿವೆ. ಈ ಅವಧಿಯಲ್ಲಿ ನೇಮಿಚಂದ್ರ 'ನೋವಿಗದ್ದಿದ ಕುಂಚ' ಕೃತಿಯನ್ನು ರಚನೆ ಮಾಡಿದ್ದಾರೆ.[೨೫೮] ಇದು ಖ್ಯಾತ ಪಾಶ್ಚಾತ್ಯ ಕಲಾವಿದ ವಿನ್ಸೆಂಟ್ ವ್ಯಾನಗಾಗನ ದುರಂತ ಕಲಾಬದುಕನ್ನು ಕುರಿತಾದ ಕೃತಿಯಾಗಿದೆ. ಆತನ ಸಂಕ್ಷಿಪ್ತ ಕಲಾಬದುಕನ್ನು ಕಲಾಕೃತಿಗಳ ರಚನಾ ಹಿನ್ನೆಲೆಯಲ್ಲಿ ಕಟ್ಟಿಕೊಡುವ ಪ್ರಯತ್ನ ಇದರಲ್ಲಿ ಕಂಡುಬರುತ್ತದೆ.

'ಕೇರಳದ ವರ್ಣಚಿತ್ರಲೋಕ' ಕಲಾಪ್ರವಾಸ ಕಥನವನ್ನು ೧೯೯೩ರಲ್ಲಿ ವೆಂಕಟಚಾರ್ ಪುಣಿಚಿತ್ತಾಯ್ ಬರೆದಿದ್ದಾರೆ.[೨೫೯] ಅಕಾಡೆಮಿಯ ಪ್ರವಾಸ ಸಾಹಿತ್ಯ ಯೋಜನೆಯಲ್ಲಿ ಪ್ರಕಟಗೊಂಡ ಈ ಕೃತಿಯಲ್ಲಿ ಕೇರಳದ ಪ್ರಾಚೀನ ಚಿತ್ರಕಲಾ ಪರಂಪರೆ, ಪ್ರಾಚೀನ ಭಿತ್ತಿಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಅಲಂಕಾರಿಕ ಕುಸುರಿ ಕಲೆಯ ವಸ್ತುಗಳು, ಕಲಾಶಾಲೆಗಳು, ಸಮಕಾಲೀನ ಕಲೆ ಮತ್ತು ಕಲಾವಿದರ ಬಗೆಗೆ ಸಂಕ್ಷಿಪ್ತ ಮಾಹಿತಿ ಇದೆ. 'ಮಧ್ಯಪ್ರದೇಶದ ಮಡಿಲಲ್ಲಿ' ಪ್ರವಾಸ ಸಾಹಿತ್ಯ ಕೃತಿಯನ್ನು ಡಾ.ಕೃಷ್ಣಾನಂದ ಕಾಮತ್ ರಚನೆ ಮಾಡಿದ್ದಾರೆ.[೨೬೦] ಮಧ್ಯಪ್ರದೇಶದಲ್ಲಿ ತಾವು ಪ್ರವಾಸ ಮಾಡುವಾಗ ಕಂಡುಂಡ ಅನುಭವಗಳನ್ನು ಮನಮುಟ್ಟುವಂತೆ ಕಟ್ಟಿಕೊಡುವಲ್ಲಿ ಸಫಲರಾಗಿದ್ದಾರೆ. ಅಲ್ಲಿನ ಪ್ರಾಚೀನ ಕಲಾತ್ಮಕ ಸ್ಮಾರಕಗಳು, ಶಿಲ್ಪ ಮತ್ತು ವಾಸ್ತುಕಲೆಗಳ ಸೌಂದರ್ಯ, ವಿಶೇಷವಾಗಿ ಭಿಂಬೇಟ್ಕಾ ಬೆಟ್ಟಪ್ರದೇಶದ ಪ್ರಾಗಿತಿಹಾಸ ಚಿತ್ರಕಲೆಯ ನೆಲೆಗಳು, ಅಲ್ಲಿ ವಾಕಣಕರ್ ಅವರೊಂದಿಗಿನ ಕಲಾಚರ್ಚೆ ಮುಂತಾದ ಅಂಶಗಳು ಈ ಕೃತಿಯಲ್ಲಿ ಮೂಡಿಬಂದಿವೆ.

ಸೋಲಾಪುರದಲ್ಲಿ ನೆಲೆಸಿದ್ದ ಕರ್ನಾಟಕದವರಾದ ಸಂತ ಶುಭರಾಯರ ಬಗ್ಗೆ ೧೯೯೩ರಲ್ಲಿ ಪುಸ್ತಕವೊಂದು ಹೊರಬಂದಿದೆ. ಇದನ್ನು ಅ.ಲ.ನರಸಿಂಹನ್ ಸಂಪಾದನೆ ಮಾಡಿದ್ದಾರೆ.[೨೬೧] ಇದರಲ್ಲಿ ಶುಭರಾಯರ ಸಂಕ್ಷಿಪ್ತ ಜೀವನ, ಕಲೆ, ಕಲಾಕೃತಿಗಳು, ಧಾರ್ಮಿಕ ಹಿನ್ನೆಲೆಯ ಚಿತ್ರಗಳ ವಸ್ತುವಿಷಯಗಳು, ಚಿತ್ರರಚನಾ ಕ್ರಮ, ಬಣ್ಣತಯಾರಿಕೆ ವಿಧಾನ ಮತ್ತು ರಚನಾ ಮಾಧ್ಯಮಗಳು ವಿವಿಧ ಲೇಖನಗಳಲ್ಲಿ ಹೇಳಲ್ಪಟ್ಟಿವೆ. ಈ ಲೇಖನಗಳನ್ನು ಬೇರೆ ಬೇರೆ ವಿದ್ವಾಂಸರು ಬರೆದಿದ್ದಾರೆ. 'ಚಿತ್ರಕಲಾ ಪ್ರಪಂಚ' ಲೇಖನಗಳ ಸಂಗ್ರಹವನ್ನು ಲಲಿತಕಲಾ ಅಕಾಡೆಮಿಯು ೧೯೯೩ರಲ್ಲಿ ಹೊರ ತಂದಿದೆ. ಇದನ್ನು ಅ.ಲ.ನರಸಿಂಹನ್ ಮತ್ತು ಮರಿಶಾಮಾಚಾರ್ ಸಂಪಾದನೆ ಮಾಡಿದ್ದಾರೆ.[೨೬೨] ಹಲವು ಜನ ವಿದ್ವಾಂಸರು ಬರೆದ ಕಲಾ ಲೇಖನಗಳು ಈ ಸಂಗ್ರಹದಲ್ಲಿವೆ. ಪ್ರಾಚೀನ ಚಿತ್ರಕಲೆ, ಜನಪದ ಚಿತ್ರಕಲೆ, ಪ್ರಾಗಿತಿಹಾಸ ಕಾಲದ ಕಲೆ, ಆಧುನಿಕ ಕಲೆ, ಕಲೆ ಮತ್ತು ಸಾಹಿತ್ಯ, ವಿವಿಧ ಕಲಾಪ್ರಕಾರಗಳು ಹೀಗೆ ಸುಮಾರು ಎಪ್ಪತ್ತೈದು ಲೇಖನಗಳು ಇದರಲ್ಲಿವೆ.

---

೨೫೮. ನೇಮಿಚಂದ್ರ : ನೋವಿಗದ್ದಿದ ಕುಂಚ : ನವಕರ್ನಾಟಕ ಪಬ್ಲಿಕೇಷನ್ಸ, ಬೆಂಗಳೂರು-೧೯೯೩

೨೫೯. ವೆಂಕಟರಾಜ್ ಪುಣಿಚಿತ್ತಾಯ್ : ಕೇರಳದ ವರ್ಣಚಿತ್ರಲೋಕ : ಲಲಿತಕಲಾ ಅಕಾಡೆಮಿ, ಬೆಂಗಳೂರು -೧೯೯೩

೨೬೦. ಡಾ. ಕೃಷ್ಣಾನಂದ ಕಾಮತ್ : ಮಧ್ಯಪ್ರದೇಶದ ಮಡಿಲಲ್ಲಿ : ಪುಸ್ತಕಾಲಯ ಪ್ರಕಾಶನ, ಬೆಂಗಳೂರು-೧೯೯೩

೨೬೧. ಅ.ಲ.ನರಸಿಂಹನ್ : ಸಂತಕಲಾವಿದ ಶುಭರಾಯರು : ಲಲಿತಕಲಾ ಅಕಾಡೆಮಿ, ಬೆಂಗಳೂರು -೧೯೯೩

೨೬೨. ಅ.ಲ.ನರಸಿಂಹನ್ ಮತ್ತು ಎನ್. ಮರಿಶಾಮಾಚಾರ್ : ಚಿತ್ರಕಲಾ ಪ್ರಪಂಚ : ಲಲಿತಕಲಾ ಅಕಾಡೆಮಿ ಬೆಂಗಳೂರು-೧೯೯೩

'ಬಾರಾಮಾಸ' ಕೃತಿಯನ್ನು ಶಾಂತರಸರು ಹೊರತಂದಿದ್ದಾರೆ.[೨೬೩] ಹನ್ನೆರಡು ಮಾಸಗಳ ಬಗೆಗಿನ ಕಲಾತ್ಮಕ ವಿವರಣೆಯು ಈ ಕೃತಿಯಲ್ಲಿದ್ದು, ಸಾಂದರ್ಭಿಕವಾಗಿ ಚಿತ್ರಕಲಾ ಕೃತಿಗಳನ್ನು ಅಳವಡಿಸಲಾಗಿದೆ. ಈ ಚಿತ್ರ ಕಲಾಕೃತಿಗಳನ್ನು ಗುಲಬರ್ಗಾದ ವಿಜಯ ಹಾಗರಗುಂಡಿಗಿ ರಚಿಸಿದ್ದಾರೆ. 'ರಾಷ್ಟ್ರಪ್ರಶಸ್ತಿ ಪಡೆದ ಕಲಾವಿದರು' ಚಿಕ್ಕ ಕೃತಿಯನ್ನು ರಚಿಸಿದ್ದಾರೆ.[೨೬೪] ಕರ್ನಾಟಕದ ಕೆಲವು ಚಿತ್ರಕಲಾವಿದರು ರಾಷ್ಟ್ರಪ್ರಶಸ್ತಿ ಪಡೆದವರಾಗಿದ್ದು, ಅವರ ಬಗೆಗೆ ಸಂಕ್ಷಿಪ್ತ ಮಾಹಿತಿಯನ್ನು ಇಲ್ಲಿ ಕೊಡಲಾಗಿದೆ.

ಕ್ರಿ.ಶ. ೧೯೯೪ರಲ್ಲಿ ಕೆಲವು ಕಲಾಸಾಹಿತ್ಯ ಕೃತಿಗಳು ಪ್ರಕಟಗೊಂಡಿವೆ. ಅವು ಕೆಳಗಿನಂತಿವೆ. ಅ.ನ.ಸು.ಕಲಾಚಿಂತನ ಕೃತಿಯನ್ನು ಕಿ.ರಂ.ನಾಗರಾಜ ಸಂಪಾದನೆ ಮಾಡಿದ್ದಾರೆ.[೨೬೫] ಇದರಲ್ಲಿ ಅ.ನ.ಸುಬ್ಬರಾಯರು ಬರೆದ ಕಲೆಯ ಕುರಿತ ವಿವಿಧ ಲೇಖನಗಳಿವೆ. ಕಲೆ ಎಂದರೇನು? ಕಲೆಯ ವಸ್ತು ಯಾವುದು? ಕಲಾಕೃತಿ ರಚನೆ, ಕಲಾವಿದ, ಸಹೃದಯ ಮುಂತಾದ ಸಂಗತಿಗಳ ಬಗ್ಗೆ ಇಲ್ಲಿನ ಲೇಖನಗಳು ತಿಳಿಸಿಕೊಡುತ್ತವೆ. 'ಕಲೆಯ ಗೊಂಚಲು' ಕೃತಿಯನ್ನು ಬಿ.ವಿ.ಕೆ.ಶಾಸ್ತ್ರಿಯವರು ಹೊರತಂದಿದ್ದಾರೆ.[೨೬೬] ಇದರಲ್ಲಿ ಚಿತ್ರಕಲೆಯ ವಿವಿಧ ಪ್ರಕಾರಗಳ ಬಗ್ಗೆ ಸ್ಥೂಲವಾಗಿ ಹೇಳಲಾಗಿದೆ. ಅದರಂತೆ ಪಿ.ಆರ್.ತಿಪ್ಪೇಸ್ವಾಮಿ ಯವರು 'ಕಲಾವಿದ ಕಂಡ ಫ್ರಾನ್ಸ' ಕೃತಿ ಬರೆದಿದ್ದು,[೨೬೭] ಇದರಲ್ಲಿ ಫ್ರಾನ್ಸ ದೇಶದ ತಮ್ಮ ಪ್ರವಾಸದ ಅನುಭವಗಳನ್ನು ಕಟ್ಟಿಕೊಟ್ಟಿದ್ದಾರೆ. ಈ ಪ್ರವಾಸ ಕಥನವು ವಿಶೇಷವಾಗಿ ಕಲಾ ಅನುಭವಗಳನ್ನು ಬಿಂಬಿಸುತ್ತವೆ. ಫ್ರಾನ್ಸ ದೇಶದ ಪ್ರಾಚೀನ ಚಿತ್ರಕಲೆ, ಪ್ರಸಿದ್ಧ ಕಲಾವಿದರು, ಕಲಾಗ್ಯಾಲರಿಗಳು, ಅಲ್ಲಿನ ಕಲಾಕೃತಿಗಳು, ಕಲಾಸಂಸ್ಥೆಗಳು, ಕಲಾಶಾಲೆಗಳು ಹೀಗೆ ಹಲವಾರು ಸಂಗತಿಗಳ ಬಗ್ಗೆ ಈ ಕೃತಿ ಮಾಹಿತಿ ನೀಡುತ್ತದೆ.

ಎನ್.ಮರಿಶಾಮಾಚಾರ್ ೧೯೯೪ರಲ್ಲಿ ಎರಡು ಪುಸ್ತಕಗಳನ್ನು ಬರೆದು ಪ್ರಕಟಿಸಿದ್ದಾರೆ. 'ರಾಜಾರವಿವರ್ಮ' ಕೃತಿಯು[೨೬೮] ರವಿವರ್ಮನ ಸಂಕ್ಷಿಪ್ತ ಕಲಾಬದುಕು, ಕಲೆ, ಕಲಾಕೃತಿಗಳು, ರಚನಾಕ್ರಮ, ಚಿತ್ರದ ವಸ್ತುವಿಷಯಗಳು ಮತ್ತು ಭಾರತೀಯ ಚಿತ್ರಕಲಾ ಕ್ಷೇತ್ರಗಳಲ್ಲಿ ರವಿವರ್ಮನ ಪಾತ್ರವನ್ನು ಬಿಂಬಿಸಲಾಗಿದೆ. ಕಲಾ ಸಂಕಲನದಲ್ಲಿ[೨೬೯] ಇವರೆ ಬರೆದ ಕಲೆಯ ಕುರಿತ ಬೇರೆ ಬೇರೆ ಲೇಖನಗಳಿವೆ. ಈ ಸಂದರ್ಭದಲ್ಲಿ ಓ.ಪಿ.ಅಗರವಾಲ್ ಇಂಗ್ಲೀಷನಲ್ಲಿ 'ಪೇಂಟಿಂಗ್ಸ ಆಫ್ ಸೇಂಟ್ ಅಲಾಯಿಸೆಸ್ ಚರ್ಚ' ಕೃತಿಯನ್ನು ರಚನೆ ಮಾಡಿದ್ದಾರೆ.[೨೭೦] ಇದು ಮಂಗಳೂರಿನಲ್ಲಿರುವ ಪೋರ್ಚುಗೀಸರ ಕಾಲದ ಸೇಂಟ್ ಅಕಲಾಯಿಸೆಸ್ ಚರ್ಚಿನಲ್ಲಿರುವ ಪ್ರಾಚೀನ ಕಾಲದ ಭಿತ್ತಿಚಿತ್ರಗಳ ಬಗ್ಗೆ ತಿಳಿಸುತ್ತದೆ. ಚಿತ್ರಗಳ ರಚನಾಕಾಲ, ವಸ್ತುವಿಷಯಗಳು, ರಚನ್ಕಾಕ್ರಮ, ವರ್ಣವಿನ್ಯಾಸ, ರೇಖಾಲಾಲಿತ್ಯ ಮುಂತಾದ ಸಂಗತಿಗಳ ಮಾಹಿತಿಯನ್ನು ಒಳಗೊಂಡಿದೆ. 'ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ' ಕೃತಿಯನ್ನು ಅ.ಸುಂದರ ರಚನೆ ಮಾಡಿದ್ದಾರೆ.[೨೭೧] ಕರ್ನಾಟಕದಲ್ಲಿ ಯಾವ ಪ್ರದೇಶಗಳಲ್ಲಿ ಪ್ರಾಗಿತಿಹಾಸ ಕಾಲದ ಚಿತ್ರಗಳಿವೆ? ಅವುಗಳ ಸ್ಥಿತಿಗತಿಗಳೇನು? ರಚನಾ ಕ್ರಮಗಳು, ವರ್ಣಲೇಪನ, ರೇಖಾವಿನ್ಯಾಸ, ನಂಬಿಕೆ, ಆಚರಣೆ, ಮುಂತಾದ ಸಂಗತಿಗಳನ್ನು ತಿಳಿಸಿಕೊಡುತ್ತದೆ.

---

೨೬೩. ಶಾಂತರಸ : ಬಾರಾಮಾಸ : ಕನ್ನಡ ವಿಶ್ವವಿದ್ಯಾಲಯ ಹಂಪಿ-೧೯೯೩
೨೬೪. ಡಾ. ಬಿ.ಕೆ.ಹಿರೇಮಠ : ರಾಷ್ಟ್ರಪ್ರಶಸ್ತಿ ಪಡೆದ ಕಲಾವಿದರು : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೩
೨೬೫. ಕಿ.ರಂ.ನಾಗರಾಜ : (ಸಂ) : ಅ.ನ.ಸು.ಕಲಾಚಿಂತನ : ಬೆಂಗಳೂರು ವಿಶ್ವವಿದ್ಯಾಲಯ-೧೯೯೪
೨೬೬. ಬಿ.ವಿ.ಕೆ.ಶಾಸ್ತ್ರಿ : ಕಲೆಯಗೊಂಚಲು : ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೪
೨೬೭. ಪಿ.ಆರ್.ತಿಪ್ಪೇಸ್ವಾಮಿ : ಕಲಾವಿದ ಕಂಡ ಫ್ರಾನ್ಸ : ಮಯೂರ ಪ್ರಕಾಶನ, ಬೆಂಗಳೂರು-೧೯೯೪
೨೬೮. ಎನ್.ಮರಿಶಾಮಾಚಾರ್ : ರಾಜಾ ರವಿವರ್ಮ: ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೯೪
೨೬೯. ಎನ್.ಮರಿಶಾಮಾಚಾರ್ : ಕಲಾಸಂಕಲನ: ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೯೪
೨೭೦. ಓ.ಪಿ.ಅಗರವಾಲ:ಪೇಂಟಿಂಗ್ಸ ಆಫ್ ಸೇಂಟ್ ಅಲಾಯಿಸೆಸ್‌ಚರ್ಚ:ಇಂಡಿಯನ್ ಕನಜರ್‌ವೇಷನ್ ಇನ್‌ಸ್ಟಿಟ್ಯೂಟ,ಲಖನೌ-೧೯೯೪
೨೭೧. ಅ.ಸುಂದರ : ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ : ಲಲಿತಕಲಾ ಅಕಾಡೆಮಿ ಬೆಂಗಳೂರು-೧೯೯೪

‘ಶೀಗಿ ಹಾಡುಗಳು’ ಕೃತಿಯನ್ನು ರಾಜೇಂದ್ರ ಯರನಾಳೆಯವರು ಬರೆದಿದ್ದಾರೆ.[೨೭] ಈ ಕೃತಿಯಲ್ಲಿ ಶೀಗಿ ಹುಣ್ಣಿಮೆಯಲ್ಲಿ ಆಚರಿಸುವ ಏಳು ದಿನಗಳ ಚಿತ್ರರಚನಾ ವಿಧಾನ, ಪರಿಕರಗಳು, ನಂಬಿಕೆ, ಆಚರಣೆ ಮತ್ತು ಸ್ವರೂಪ ವಿನ್ಯಾಸಗಳ ಬಗ್ಗೆ ಹೇಳಲಾಗಿದೆ. ಜೊತೆಗೆ ಚಿತ್ರರಚನೆ ಸಂದರ್ಭದಲ್ಲಿ ಹೇಳುವ ಶೀಗಿ ಹಾಡುಗಳನ್ನು ಇಲ್ಲಿ ಕೊಡಲಾಗಿದೆ. ಇದೆ ವರ್ಷದಲ್ಲಿ ಶಾಂತಿನಾಯಕ್ ‘ರಂಗೋಲಿ’ ಕೃತಿ ರಚನೆಮಾಡಿದ್ದಾರೆ.[೨೭೩] ಇದರಲ್ಲಿ ವಿವಿಧ ಬಗೆಯ ರಂಗೋಲಿಯ ಚಿತ್ರಗಳನ್ನು ಕೊಡಲಾಗಿದೆ. ಜೊತೆಗೆ ಸಂಕ್ಷಿಪ್ತವಾಗಿ ರಂಗೋಲಿಯ ಪರಂಪರೆ, ಪ್ರಕಾರ, ಮಾಧ್ಯಮಗಳು, ವರ್ಣವೈವಿಧ್ಯತೆ, ಮುಂತಾದ ಅಂಶಗಳನ್ನು ತಿಳಿಸಲಾಗಿದೆ. ‘ಕಾವಿಕಲೆ’ ಕೃತಿಯನ್ನು ಕೃಷ್ಣಾನಂದ ಕಾಮತ್ ಬರೆದಿದ್ದಾರೆ.[೨೭೪] ಇದರಲ್ಲಿ ಕರ್ನಾಟಕದ ಕರಾವಳಿ ಭಾಗದಲ್ಲಿ ಮಾತ್ರ ವಿಶೇಷವಾಗಿರುವ ಕಾವಿ ಚಿತ್ರಕಲೆಯನ್ನು ಕುರಿತು ವಿವೇಚಿಸಲಾಗಿದೆ. ಕಾವಿಚಿತ್ರಗಳ ನೆಲೆಗಳು ರಚನಾಕ್ರಮ, ಭಿತ್ತಿಸಿದ್ದತಾ ವಿಧಾನ, ಚಿತ್ರಗಳ ವಸ್ತುವಿಷಯ, ಶೈಲಿ, ಪ್ರಭಾವ, ಮುಂತಾದ ಸಂಗತಿಗಳು ಇಲ್ಲಿ ಬಿಂಬಿತಗೊಂಡಿವೆ.

‘ಗಂಜೀಫಾ ಚಿತ್ರಕಲೆ’ ಕೃತಿಯನ್ನು ಸಂತೋಷಕುಮಾರ ಗುಲ್ವಾಡಿಯವರು ಬರೆದಿದ್ದಾರೆ.[೨೭೫] ಇದರಲ್ಲಿ ಗಂಜೀಫಾ ಕಲೆಯ ಐತಿಹಾಸಿಕ ಹಿನ್ನೆಲೆ, ರಚನಾಕ್ರಮ, ವರ್ಣಗಾರಿಕೆ, ಆಟದಕ್ರಮ, ರೇಖಾಲಾಲಿತ್ಯ, ಗಂಜೀಫಾ ಕಾರ್ಡುಗಳ ಸ್ವರೂಪ. ಮುಂತಾದ ಸಂಗತಿಗಳನ್ನು ಹೇಳಲಾಗಿದೆ. ‘ಚಿತ್ರಕಲಾ ದರ್ಪಣ’ ಕೃತಿಯನ್ನು ೧೯೯೪ರಲ್ಲಿ ವ್ಹಿ.ಟಿ.ಕಾಳೆಯವರು ಬರೆದಿದ್ದಾರೆ.[೨೭೬] ಇದರಲ್ಲಿ ಚಿತ್ರಕಲೆಯ ಹಲವಾರು ಸಂಗತಿಗಳು ಹೇಳಲ್ಪಟ್ಟಿವೆ. ಜಾಗತಿಕ ಚಿತ್ರಕಲೆ, ಭಾರತೀಯ ಚಿತ್ರಕಲೆ, ಮತ್ತು ಕರ್ನಾಟಕದ ಚಿತ್ರಕಲೆಯ ಅಂಶಗಳು ಇದರಲ್ಲಿವೆ. ‘ಇಂಪ್ರೆಷ್‌ನಿಜಮ್’ ಚಿಕ್ಕ ಕೃತಿಯನ್ನು ಅ.ಲ.ನರಸಿಂಹನ್ ಬರೆದಿದ್ದಾರೆ.[೨೭೭] ಪಾಶ್ಚಾತ್ಯ ಕಲಾಕ್ಷೇತ್ರದಲ್ಲಿ ಕ್ರಾಂತಿಯನ್ನು ಉಂಟುಮಾಡಿದ ಇಂಪ್ರೆಷ್‌ನಿಜಮ್ ಕಲಾಶೈಲಿಯ ಬಗ್ಗೆ ಈ ಕೃತಿ ಸ್ಥೂಲವಾಗಿ ತಿಳಿಸುತ್ತದೆ. ಇಂಪ್ರೆಷ್‌ನಿಜಮ್ ಕಲಾ ಪಂಥದ ಅರ್ಥ, ಪ್ರಕಾರ, ವ್ಯಾಪ್ತಿ, ಬೆಳವಣಿಗೆ, ಕಲಾವಿದರು ಮತ್ತು ಕಲಾಕೃತಿಗಳ ಬಗ್ಗೆ ಇದರಲ್ಲಿ ಮಾಹಿತಿ ಇದೆ. ‘ಕಲಾಕೋಶ’ ಕೃತಿಯನ್ನು ಎನ್.ಮರಿಶಾಮಾಚಾರರ ಸಂಪಾದಕತ್ವದಲ್ಲಿ ಲಲಿತಕಲಾ ಅಕಾಡೆಮಿಯು ಹೊರತಂದಿದೆ.[೨೭೮] ಇದರಲ್ಲಿ ಅಕಾರಾದಿಯಾಗಿ ಕಲೆಯ ಸಂಕ್ಷಿಪ್ತ ಮಾಹಿತಿಗಳನ್ನು ಕೊಡಲಾಗಿದೆ. ಜಾಗತಿಕ ಕಲೆ, ಭಾರತೀಯ ಕಲೆ ಮತ್ತು ಕರ್ನಾಟಕದ ಕಲೆಗಳಿಗೆ ಸಂಬಂಧಿಸಿದಂತೆ ಇಲ್ಲಿನ ವಿಷಯಗಳು ನಿರೂಪಣೆಗೊಂಡಿವೆ.

ಕ್ರಿ.ಶ. ೧೯೯೫ರಲ್ಲಿ ಈ ಕೆಳಗಿನ ಕಲಾಸಾಹಿತ್ಯ ಕೃತಿಗಳು ಬಂದಿವೆ. ‘ಚಿತ್ರಕಲೆ ಮತ್ತು ಮನೋವಿಕಾಸ’ ಕೃತಿಯನ್ನು ಸಿ.ಚಂದ್ರಶೇಖರ್ ಬರೆದಿದ್ದು,[೨೭೯] ಮಕ್ಕಳ ಮನೋವಿಜ್ಞಾನದ ಜೊತೆಗೆ ಚಿತ್ರಕಲೆಯ ವಿಚಾರಗಳನ್ನು ಪೂರಕವಾಗಿ ಬಿಂಬಿಸಲಾಗಿದೆ. ಮಕ್ಕಳ ಮನಸ್ಸು ಅವರ ವಯೋಮಾನಕ್ಕೆ ಅನುಸಾರವಾಗಿ ಬದಲಾಗುವಂತೆ ಆಯಾ ಹಂತಗಳಲ್ಲಿ ಅವರು ಚಿತ್ರಿಸುವ ವಿಚಾರಗಳೂ ಸಹ ಭಿನ್ನವಾಗಿರುತ್ತವೆ ಎಂಬ ಸಂಗತಿಗಳನ್ನು ಇಲ್ಲಿ ಹೇಳಲಾಗಿದೆ.

೨೭೨. ರಾಜೇಂದ್ರ ಯರನಾಳೆ : ಶೀಗಿಹಾಡುಗಳು : ಸಿದ್ಧಲಿಂಗೇಶ್ವರ ಸಾಹಿತ್ಯ ಭಂಡಾರ, ವಿರಕ್ತಮಠ, ಕುಶನೂರು-೧೯೯೪

೨೭೩. ಶಾಂತಿನಾಯಕ : ರಂಗೋಲಿ : ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ-೧೯೯೪

೨೭೪. ಕೃಷ್ಣಾನಂದ ಕಾಮತ್ : ಕಾವಿಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೪

೨೭೫. ಸಂತೋಷಕುಮಾರ ಗುಲ್ವಾಡಿ : ಗಂಜೀಫಾ ಚಿತ್ರಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೪

೨೭೬. ವಿ.ಟಿ.ಕಾಳೆ : ಚಿತ್ರಕಲಾ ದರ್ಪಣ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೪

೨೭೭. ಅ.ಲ.ನರಸಿಂಹನ್ : ಇಂಪ್ರೆಷ್‌ನಿಜಮ್ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೪

೨೭೮. ಎನ್.ಮರಿಶಾಮಾಚಾರ್ : ಕಲಾಕೋಶ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೪

೨೭೯. ಡಾ.ಸಿ.ಚಂದ್ರಶೇಖರ್ : ಚಿತ್ರಕಲೆ ಮತ್ತು ಮನೋವಿಕಾಸ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೪

'ಚಿತ್ರಕಲಾ ಚಿಂತನ' ಕೃತಿಯನ್ನು ಶಂಕರ ಪಾಟೀಲ ರಚಿಸಿದ್ದಾರೆ.[೨೮೦] ಕಲೆ, ಕಲಾಕೃತಿ, ಸಹೃದಯ, ರೇಖೆ, ಸಂಯೋಜನೆ, ಬಣ್ಣ. ಮೈವಳಿಕೆ. ಮುಂತಾದ ತಾಂತ್ರಿಕ ಸಂಗತಿಗಳ ವಿವರವಿದೆ. 'ದೃಶ್ಯಕಲೆಗಳ ಗುಣಗ್ರಹಣ' ಕೃತಿಯನ್ನು ಅ.ಲ.ನರಸಿಂಹನ್ ರಚಿಸಿದ್ದಾರೆ.[೨೮೧]ದೃಶ್ಯಕಲೆಗಳಲ್ಲಿ ಪ್ರಮುಖವಾದ ಚಿತ್ರ, ಶಿಲ್ಪಕಲೆಗಳ ಸಮಕಾಲೀನ ಸಂದರ್ಭದ ಬದಲಾದ ನಿಲುವುಗಳು, ಅವುಗಳನ್ನು ನೋಡುವ ಮತ್ತು ತಿಳಿದುಕೊಳ್ಳುವ ಬಗೆ, ಸಹೃದಯರ ಮನೋಸ್ಥಿತಿ, ಸಾಮಾಜಿಕ ಸಂಬಂಧಗಳು ಮುಂತಾದ ಸಂಗತಿಗಳು ಚರ್ಚೆಗೊಂಡಿವೆ. ಆನಂದಕುಮಾರಸ್ವಾಮಿಯವರ ಬಗ್ಗೆ ಕೆ.ಎಸ್.ಶ್ರೀನಿವಾಸಮೂರ್ತಿಯವರು ಬರೆದಿದ್ದಾರೆ.[೨೮೨] ಕುಮಾರಸ್ವಾಮಿಯವರ ಸಂಕ್ಷಿಪ್ತ ಜೀವನ, ಕಲಾವಿಚಾರಗಳು, ಕಲೆಯ ಬಗ್ಗೆ ಅವರು ಬರೆದ ಪುಸ್ತಕಗಳು ಮತ್ತು ಅವರ ವ್ಯಕ್ತಿತ್ವದ ಬಗ್ಗೆ ಹೇಳಲಾಗಿದೆ.

ಜಿ.ಯಜದಾನಿಯವರು ಇಂಗ್ಲೀಷನಲ್ಲಿ 'ಬೀದರ್ ಇಟ್ಸ ಹಿಸ್ಟರಿ ಆ್ಯಂಡ್ ಮಾನ್ಯುಮೆಂಟ್ಸ' ಕೃತಿಯನ್ನು ರಚನೆ ಮಾಡಿದ್ದಾರೆ.[೨೮೩] ಬೀದರ್ ಇತಿಹಾಸ, ಪ್ರಾಚೀನ ಸ್ಮಾರಕಗಳ ಬಗ್ಗೆ ವಿಶೇಷವಾಗಿ ಈ ಕೃತಿ ತಿಳಿಸುತ್ತದೆ. ಪ್ರಾಚೀನ ಸ್ಮಾರಕಗಳ ಬಗ್ಗೆ ಹೇಳುವಾಗ ಬೀದರ್ ರಂಗೀನ್ ಮಹಲ್‌ದಲ್ಲಿರುವ ಭಿತ್ತಿಚಿತ್ರಗಳು, ಅಸ್ತೂರಿನಲ್ಲಿರುವ ಚಿತ್ರಗಳು, ಬಂದೆನವಾಜ ದರ್ಗಾದಲ್ಲಿರುವ ಚಿತ್ರಗಳ ಬಗ್ಗೆ ಹೇಳಲಾಗಿದೆ. ಗಂಜೀಫಾ ಚಿತ್ರಕಲೆಯ ಬಗ್ಗೆ ಮತ್ತೊಂದು ಕೃತಿಯನ್ನು ಸಂತೋಷಕುಮಾರ ಗುಲ್ವಾಡಿಯವರು ಬರೆದಿದ್ದಾರೆ.[೨೮೪] ಇಲ್ಲಿನ ವಿಷಯಗಳು ಸಹಿತ ಹಿಂದಿನ ವರ್ಷದ (೧೯೯೪) ಪುಸ್ತಕದ ಮಾದರಿಯಲ್ಲಿ ಇದ್ದು ಸ್ವಲ್ಪಹೆಚ್ಚಿನ ಸಂಗತಿಗಳನ್ನು ತಿಳಿಸಿಕೊಡುತ್ತವೆ. ಈ ಸಂದರ್ಭದಲ್ಲಿ 'ರಂಗೋಲಿ' ಬಗ್ಗೆ ಮತ್ತೊಂದು ಕೃತಿ ಪ್ರಕಟವಾಗಿದ್ದು, ಅದನ್ನು ರಾಜಲಕ್ಷ್ಮೀ ವಾಸುದೇವ ಬರೆದಿದ್ದಾರೆ.[೨೮೫] ಇದರಲ್ಲಿ ರಂಗೋಲಿಯ ಬೇರೆ ಬೇರೆ ಚಿತ್ರವಿನ್ಯಾಸಗಳು, ರಂಗೋಲಿ ಪರಂಪರೆ, ನಂಬಿಕೆ. ಆಚರಣೆ, ಪ್ರಕಾರಗಳನ್ನು ಕುರಿತು ಹೇಳಲಾಗಿದೆ.

'ಚಿತ್ರಕಲಾ ಶಿಕ್ಷಕರ ಕೈಪಿಡಿ' ಕೃತಿಯು ೧೯೯೫ರಲ್ಲಿ ಪ್ರಕಟಗೊಂಡಿದ್ದು ಇದನ್ನು ಬಿ.ಪಿ.ತಿಪ್ಪಯ್ಯ ರಚಿಸಿದ್ದಾರೆ.[೨೮೬] ಒಂದನೆ ತರಗತಿಯಿಂದ ಏಳನೆಯ ತರಗತಿಯವರೆಗೆ ಮಕ್ಕಳಿಗೆ ಚಿತ್ರಕಲೆಯನ್ನು ಯಾವ ರೀತಿಯಲ್ಲಿ ಕಲಿಸಬೇಕು? ಮತ್ತು ಯಾವ ವಿಷಯಗಳನ್ನು ಕಲಿಸಬೇಕು ಎಂಬಂತಹ ಸಂಗತಿಗಳನ್ನು ಇದರಲ್ಲಿ ತಿಳಿಸಲಾಗಿದೆ. 'ಚಿತ್ರಯಾತ್ರೆ' ಕ್ಯಾಟಲಾಗ್ ಮಾದರಿಯ ಕೃತಿಯನ್ನು ಈ ಸಂದರ್ಭದಲ್ಲಿ ಬಿ.ವಿ.ಕೆ.ಶಾಸ್ತ್ರಿಯವರು ರಚಿಸಿದ್ದಾರೆ.[೨೮೭] ರಾಜ್ಯ ಲಲಿತಕಲಾ ಅಕಾಡೆಮಿಯು ರಾಜ್ಯದಾದ್ಯಂತ ಆಯ್ದ ಕಲಾವಿದರ ಕೃತಿಗಳನ್ನು ಬಸ್ಸಿನಂತಹ ವಾಹನದಲ್ಲಿ ಪ್ರದರ್ಶನ ಮಾಡಿತು. ಇದರ ಬಗ್ಗೆ ಮಾಹಿತಿಯನ್ನು ಪ್ರಸ್ತುತ ಕೃತಿಯು ಒಳಗೊಂಡಿದೆ. ಈ ಸಂಚಾರಿ ಕಲಾ ಪ್ರದರ್ಶನದಲ್ಲಿ ಯಾವ ಕಲಾವಿದರು ಭಾಗವಹಿಸಿದ್ದರು, ಅವರ ಕೃತಿಗಳಾವುವು? ಅವರ ಶೈಲಿಗಳೇನು? ಎಂಬಂತಹ ಸಂಗತಿಗಳನ್ನು ಸ್ಥೂಲವಾಗಿ ಇದರಲ್ಲಿ ಹೇಳಲಾಗಿದೆ.

---

೨೮೦. ಶಂಕರ ಪಾಟೀಲ : ಚಿತ್ರಕಲಾ ಚಿಂತನ : ಪ್ರಗತಿ ಪ್ರಕಾಶನ ದಾವಣಗೆರೆ-೧೯೯೫

೨೮೧. ಅ.ಲ.ನರಸಿಂಹನ್ : ದೃಶ್ಯಕಲೆಗಳ ಗುಣಗ್ರಹಣ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೫

೨೮೨. ಕೆ.ಎಸ್.ಶ್ರೀನಿವಾಸ ಮೂರ್ತಿ : ಆನಂದ ಕುಮಾರಸ್ವಾಮಿ : ಅಕ್ಷರ ಪ್ರಕಾಶನ, ಹೆಗ್ಗೋಡು-೧೯೯೫

೨೮೩. ಜಿ.ಯಜದಾನಿ : ಬೀದರ್ ಇಟ್ಸ ಹಿಸ್ಟರಿ ಆ್ಯಂಡ್ ಮಾನ್ಯುಮೆಂಟ್ಸ : ಟಿ.ಪಿ.ಪಬ್ಲಿಕೇಷನ್ಸ ನವದೆಹಲಿ-೧೯೯೫

೨೮೪. ಸಂತೋಷಕುಮಾರ ಗುಲ್ವಾಡಿ : ಗಂಜೀಫಾ ಚಿತ್ರಕಲೆ : ಲಲಿತಕಲಾ ಅಕಾಡೆಮಿ ಬೆಂಗಳೂರು-೧೯೯೫

೨೮೫. ರಾಜಲಕ್ಷ್ಮೀ ವಾಸುದೇವ : ರಂಗೋಲಿ: ಸಂತೋಷ ಪಬ್ಲಿಕೇಷನ್ಸ, ಬೆಂಗಳೂರು-೧೯೯೫

೨೮೬. ಬಿ.ಪಿ.ತಿಪ್ಪಯ್ಯ : ಚಿತ್ರಕಲಾ ಶಿಕ್ಷಕರ ಕೈಪಿಡಿ : ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು-೧೯೯೫

೨೮೭. ಬಿ.ವಿ.ಕೆ.ಶಾಸ್ತ್ರಿ : ಚಿತ್ರಯಾತ್ರೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೫

೧೯೯೫ರಲ್ಲಿ ಲಲಿತಕಲಾ ಅಕಾಡೆಮಿಯು ಆಧುನಿಕ ಕಲಾಪ್ರಕಾರಗಳಿಗೆ ಸಂಬಂಧಿಸಿದ ಕೆಲವು ಪುಸ್ತಕಗಳನ್ನು ಹೊರತಂದಿದೆ. ಪೋಟ್ರೋರಿಯಲಿಜಂ ಶೈಲಿಯ ಬಗ್ಗೆ ಕೆ.ವಿ.ಸುಬ್ರಹ್ಮಣ್ಯ ಬರೆದಿದ್ದಾರೆ.[೨೮೮] ಅದರಂತೆ ಸರ್ರಿಯಲಿಜಂ ಕುರಿತು ಎನ್.ಮರಿಶಾಮಾಚಾರ್[೨೮೯] ಮತ್ತು ಅಬಸ್ಟ್ರಾಕ್ ಕಲೆಯ ಪುಸ್ತಕವನ್ನು ಆರ್.ಶಾಂತರಾಜ್ ಬರೆದಿದ್ದಾರೆ.[೨೯೦] ಈ ಕೃತಿಗಳಲ್ಲಿ ಆಯಾ ಕಲಾಶೈಲಿಯ ಅರ್ಥವ್ಯಾಪ್ತಿ, ಆರಂಭ, ಬೆಳವಣಿಗೆ, ಕಲಾವಿದರು, ಕಲಾಕೃತಿಗಳು ಹೀಗೆ ಹಲವು ಸಂಗತಿಗಳು ಬಿಂಬಿತವಾಗಿವೆ. 'ಮಧ್ಯಪ್ರದೇಶದ ಚಿತ್ರಕಲೆ' ಕುರಿತು ಪ್ರವಾಸ ಸಾಹಿತ್ಯವನ್ನು ಕೆ.ವಿ.ಸುಬ್ರಹ್ಮಣ್ಯ ರಚಿಸಿದ್ದು,[೨೯೧] ಮಧ್ಯಪ್ರದೇಶದ ಪ್ರಾಚೀನ ಚಿತ್ರ ಪರಂಪರೆ ಭಿತ್ತಿಚಿತ್ರ, ಪ್ರಾಗಿತಿಹಾಸ ಚಿತ್ರಕಲೆ, ಹಸ್ತಪ್ರತಿ ಚಿತ್ರಕಲೆ, ಕಿರುರೂಪ ಚಿತ್ರಕಲೆ, ಆಧುನಿಕ ಕಲೆ, ಕಲಾವಿದರು, ಕಲಾಶಾಲೆಗಳು ಹೀಗೆ ಹಲವು ಸಂಗತಿಗಳು ಸ್ಥೂಲವಾಗಿ ಹೇಳಲ್ಪಟ್ಟಿವೆ. 'ಚಿತ್ರಾಕ್ಷಿ'[೨೯೨] ಹಾಗೂ 'ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು'[೨೯೩] ಎರಡು ಪುಸ್ತಕಗಳನ್ನು ಡಾ.ಎಸ್.ಸಿ. ಪಾಟೀಲ ಸಂಪಾದನೆ ಮಾಡಿದ್ದು, ಇವೆರಡು ಕೃತಿಗಳಲ್ಲಿ ಚಿತ್ರಕಲೆಯ ಬಗೆಗೆ ವಿವಿಧ ಲೇಖನಗಳಿವೆ. ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು ಕೃತಿಯಲ್ಲಿ ಚಿತ್ರಕಲೆ ಮತ್ತು ಪೂರಕವಾಗಿರುವ ಇತರ ಕ್ಷೇತ್ರಗಳ ಬಗ್ಗೆ ಮಾಹಿತಿ ಕೊಡುವಂತಹ ಲೇಖನಗಳಿವೆ.

ಕ್ರಿ.ಶ. ೧೯೯೬ರಲ್ಲಿ ಪ್ರಕಟವಾಗಿರುವ ಚಿತ್ರಕಲಾ ಸಾಹಿತ್ಯ ಕೃತಿಗಳು ಕೆಳಗಿನಂತಿವೆ. 'ಚಿತ್ರಕಲೆ ಮತ್ತು ಸಂವಹನ' ಕೃತಿಯನ್ನು ಜೆ.ಮಲ್ಲಿಕಾರ್ಜುನ ಬರೆದಿದ್ದಾರೆ.[೨೯೪] ಚಿತ್ರಕಲೆ, ಕಲಾವಿದ, ಕಲಾಕೃತಿ, ಸಹೃದಯ ಇಂತಹ ವಿಷಯಗಳ ಜೊತೆಗೆ ಚಿತ್ರಕಲೆಯು ಹೇಗೆ ಸಂವಹನವಾಗುತ್ತದೆ ಎಂಬಂತಹ ಸಂಗತಿಗಳು ಇದರಲ್ಲಿ ಹೇಳಲ್ಪಟ್ಟಿವೆ. 'ದಿ ಲಿವಿಂಗ್‌ಲೈನ್' ಕೃತಿಯನ್ನು ಇಂಗ್ಲೀಷನಲ್ಲಿ ಶಂಕರ ಪಾಟೀಲ ಬರೆದಿದ್ದಾರೆ.[೨೯೫] ಚಿತ್ರಕಲೆಯಲ್ಲಿ ರೇಖೆಗಳ ಮಹತ್ವ, ರೇಖಾಚಿತ್ರಕಲೆಯ ಪರಂಪರೆ, ರೇಖೆಗಳ ಪ್ರಕಾರಗಳು, ಮುಂತಾದ ಸಂಗತಿಗಳು ಇಲ್ಲಿ ಬಿಂಬಿತಗೊಂಡಿವೆ. 'ಗ್ರಾಮೀಣ ಚಿತ್ರಗಳು' ಕೃತಿಯನ್ನು ಎಸ್.ಕೆ.ರಾಮಚಂದ್ರರಾವ್ ಸಂಪಾದನೆ ಮಾಡಿದ್ದಾರೆ.[೨೯೬] ಇದು ಎಸ್.ಎನ್.ಸ್ವಾಮಿಯವರ ಚಿತ್ರಕಲಾಕೃತಿಗಳ ಸಂಪುಟವಾಗಿದೆ. ಸ್ವಾಮಿಯವರ ಗ್ರಾಮೀಣ ಬದುಕಿನ ರೇಖಾಚಿತ್ರಗಳನ್ನು ಸಂಗ್ರಹಿಸಿ ಪ್ರತಿಯೊಂದು ಚಿತ್ರಗಳ ಬಗ್ಗೆ ಸ್ಥೂಲವಾದ ವಿವರಣೆಯನ್ನು ಕೊಟ್ಟಿದ್ದಾರೆ.

ಗಂಜೀಫಾ ಚಿತ್ರಕಲೆಯ ಬಗ್ಗೆ ಎಂ.ಎಲ್.ಶಿವಶಂಕರ್ ಬರೆದಿದ್ದಾರೆ.[೨೯೭] ಈ ಚಿಕ್ಕ ಕೃತಿಯಲ್ಲಿ ಗಂಜೀಫಾ ಕಲೆಯ ಪರಂಪರೆ, ರಚನಾಕ್ರಮ, ಚಿತ್ರಶೈಲಿ, ಗಂಜೀಫಾ ಕಾರ್ಡುಗಳ ತಯಾರಿಕೆ, ಕಲಾವಿದರು, ವರ್ಣತಯಾರಿಕೆ ಮುಂತಾದ ಸಂಗತಿಗಳು ಸ್ಥೂಲವಾಗಿ ಹೇಳಲ್ಪಟ್ಟಿವೆ. 'ಮಹಿಳೆಯರ ಅಲಂಕಾರ' ಕೃತಿಯನ್ನು ಶಾಂತಾದೇವಿ ಮಾಳವಾಡ ಬರೆದಿದ್ದಾರೆ.[೨೯೮]ಇದರಲ್ಲಿ ಮಹಿಳೆಯರ ಅಲಂಕಾರ ಕಲೆಗಳಾದ ಹಚ್ಚೆ, ಮದರಂಗಿ, ಆಭರಣ ಶೃಂಗಾರ, ಕಸೂತಿ ಮುಂತಾದ ಕಲಾ ಅಂಶಗಳನ್ನು ಕುರಿತು ಹೇಳಲಾಗಿದೆ.

---

೨೮೮. ಕೆ.ವಿ.ಸುಬ್ರಹ್ಮಣ್ಯ : ಪೋಟ್ರೋರಿಯಲಿಜಂ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೫
೨೮೯. ಎನ್.ಮರಿಶಾಮಾಚಾರ್ : ಸರ್ರಿಯಲಿಜಂ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೫
೨೯೦. ಆರ್,ಶಾಂತರಾಜ್ : ಅಬಸ್ಟ್ರಾಕ್ಟಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೫
೨೯೧. ಕೆ.ವಿ.ಸುಬ್ರಹ್ಮಣ್ಯ : ಮಧ್ಯಪ್ರದೇಶದ ಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೫
೨೯೨. ಡಾ.ಎಸ್.ಸಿ.ಪಾಟೀಲ : (ಸಂ) : ಚಿತ್ರಾಕ್ಷಿ : ವಜ್ರಮಹೋತ್ಸ ಸಮಿತಿ, ಸ್ಕೂಲ್ ಆಫ್ ಆರ್ಟ ಧಾರವಾಡ-೧೯೯೫
೨೯೩. ಡಾ.ಎಸ್.ಸಿ.ಪಾಟೀಲ : (ಸಂ) : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು : ಸ್ಕೂಲ್ ಆಫ್ ಆರ್ಟ ಧಾರವಾಡ-೧೯೯೫
೨೯೪. ಜೆ.ಮಲ್ಲಿಕಾರ್ಜುನ : ಚಿತ್ರಕಲೆ ಮತ್ತು ಸಂವಹನ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೬
೨೯೫. ಶಂಕರ ಪಾಟೀಲ : ದಿ ಲಿವಿಂಗ್ ಲೈನ್ : ಪ್ರಗತಿ ಪ್ರಕಾಶನ, ದಾವಣಗೆರೆ-೧೯೯೬
೨೯೬. ಎಸ್.ಕೆ.ರಾಮಚಂದ್ರರಾವ್ : ಗ್ರಾಮೀಣ ಚಿತ್ರಗಳು : ಜನಪದ ಅಕಾಡೆಮಿ, ಬೆಂಗಳೂರು-೧೯೯೬
೨೯೭. ಎಂ.ಎಲ್.ಶಿವಶಂಕರ : ಗಂಜೀಫಾಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೬
೨೯೮. ಶಾಂತಾದೇವಿ ಮಾಳವಾಡ : ಮಹಿಳೆಯರ ಅಲಂಕಾರ : ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೬

'ಭಾರತೀಯ ಚಿತ್ರಕಲೆ' ಪುಸ್ತಕವನ್ನು ಆರ್.ಜಿ.ರಾಯ್ಕರ್ ಬರೆದಿದ್ದಾರೆ.[೯೯]ಇದರಲ್ಲಿ ಭಾರತೀಯ ಚಿತ್ರಕಲಾ ಪರಂಪರೆಯನ್ನು ಸ್ಥೂಲವಾಗಿ ಹೇಳಲಾಗಿದೆ. ಸಿಂಧೂ ನಾಗರಿಕತೆಕಲೆ, ವೇದಕಾಲದ ಕಲೆ, ರಜಪೂತಕಲೆ, ಅಜಂತಾ, ಎಲ್ಲೋರಾ, ಜೈನಕಲೆ, ಮೊಗಲ್‌ಕಲೆ, ಮೈಸೂರು ಚಿತ್ರಕಲೆ ಹೀಗೆ ಹಲವಾರು ಸಂಗತಿಗಳು ಬಿಂಬಿತವಾಗಿವೆ. 'ಗ್ರಾಫಿಕ್ ಕಲೆ' ಕೃತಿಯನ್ನು 'ರವಿಕುಮಾರ ಕಾಶಿ' ಬರೆದಿದ್ದಾರೆ.[೧೦೦]ಇದರಲ್ಲಿ ಗ್ರಾಫಿಕ್ ಕಲೆಯ ಪರಂಪರೆ, ಪ್ರಕಾರಗಳು, ತಂತ್ರಶೈಲಿಗಳು, ಪ್ರಭಾವ ಪ್ರೇರಣೆಗಳನ್ನು ಹೇಳಲಾಗಿದೆ. ಲಿನೋಮಾಧ್ಯಮ, ಲಿಥೋಮಾಧ್ಯಮ, ಉಡ್‌ಕಟಿಂಗ್, ಸೇರಿಗ್ರಾಫಿ, ಎಚ್ಚಿಂಗ್, ಸ್ಕ್ರೀನ್‌ಪ್ರಿಂಟಿಂಗ್ ಮುಂತಾದ ಗ್ರಾಫಿಕ್ ಮಾಧ್ಯಮಗಳ ಬಗೆಗೆ ಹೇಳಲಾಗಿದೆ. 'ಪೋಸ್ಟಮಾಡರ್ನಿಜಂ' ಕೃತಿಯನ್ನು ನೇಮಿರಾಜಶೆಟ್ಟಿ ರಚಿಸಿದ್ದಾರೆ.[೧೦೧] ಇದರಲ್ಲಿ ಆಧುನಿಕ ಕಲೆಯ ನಂತರದಲ್ಲಿ ಆಧುನಿಕೋತ್ತರ ಕಲಾ ಪಂಥವು ಹೇಗೆ ಬೆಳೆಯಿತು ಎಂಬ ಅಂಶಗಳನ್ನು ತಿಳಿಸಲಾಗಿದೆ. ಅದರಂತೆ 'ಪಾಪ್‌ಕಲೆ' ಎಂಬ ಚಿಕ್ಕ ಕೃತಿಯನ್ನು ರವಿಕುಮಾರ ಕಾಶಿಯವರು ಬರೆದಿದ್ದಾರೆ.[೧೦೨] ಇದರಲ್ಲಿ ಜನಪ್ರಿಯ ಕಲೆಯ ಅರ್ಥವ್ಯಾಪ್ತಿ, ಬೆಳವಣಿಗೆ, ಕಲಾಶೈಲಿ, ಕಲಾ ಕೃತಿಗಳು ಮತ್ತು ಕಲಾವಿದರ ಕುರಿತು ತಿಳಿಸಲಾಗಿದೆ.

'ಕಲಾವಿದನ ನೆನಪುಗಳು' ಕೃತಿಯನ್ನು ಪಿ.ಆರ್.ತಿಪ್ಪೇಸ್ವಾಮಿ ಬರೆದಿದ್ದಾರೆ.[೧೦೩]ತಮ್ಮ ಜೀವನದಲ್ಲಿಯ ಪ್ರಮುಖ ಘಟನಾವಳಿಗಳನ್ನು ಆಧರಿಸಿ ಬರೆಯಲಾದ ಈ ಕೃತಿಯಲ್ಲಿ ಹಲವಾರು ವೈವಿಧ್ಯ ವಿಷಯಗಳಿವೆ. ಕಲಾ ಪ್ರಕಾರಗಳು, ಕಲಾನೆಲೆಗಳು, ಜನಪದ ಕಲೆಗಳು, ಕಲಾವಿದರು, ಚಿತ್ರಕಲೆಯ ಜೊತೆ ಶಿಲ್ಪಕಲೆ, ಸಂಗೀತಕಲೆ, ನಾಟಕ, ಜಾತ್ರೆಗಳು, ಆಚರಣೆಗಳು ಹೀಗೆ ವೈವಿಧ್ಯತೆ ಕಂಡುಬರುತ್ತದೆ. ಎನ್.ಮರಿಶಾಮಾಚಾರರು ಆರ್.ಎಮ್.ಹಡಪದರ ಬಗ್ಗೆ ಕೃತಿ ರಚಿಸಿದ್ದು,[೧೦೪] ಅಕಾಡಮಿಯ ಸಿದ್ಧ ಮಾದರಿಯಲ್ಲಿ ಕಲಾವಿದರನ್ನು ಪರಿಚಯಿಸಲಾಗಿದೆ.

ಕ್ರಿ.ಶ. ೧೯೯೭ರಲ್ಲಿ ಪ್ರಕಟವಾಗಿರುವ ಚಿತ್ರಕಲಾ ಸಾಹಿತ್ಯ ಕೃತಿಗಳು ಕೆಳಗಿನಂತಿವೆ. 'ಕಲಾಸಂವೇದನೆಯ ಒಳನೋಟಗಳು' ಕೃತಿಯನ್ನು ಕೆ.ವಿ.ಸುಬ್ರಹ್ಮಣ್ಯ ಬರೆದಿದ್ದಾರೆ.[೧೦೫] ಇದರಲ್ಲಿ ಕಲೆಯ ಬಗೆಗೆ ಅವರೆ ಬರೆದ ಲೇಖನಗಳಿವೆ. ಕಲೆ, ಕಲಾವಿದ, ಕಲಾಕೃತಿ, ಸಹೃದಯ, ಸಮಾಜ, ಸಂವೇದನೆ, ಆಸ್ವಾದನೆ ಮುಂತಾದ ಅಂಶಗಳನ್ನು ಲೇಖನಗಳು ಪ್ರತಿಬಿಂಬಿಸುತ್ತವೆ. ಬಿ. ಸುಬ್ರಹ್ಮಣ್ಯ ಕೃಷ್ಣಾ ಮತ್ತು ತುಂಗಭದ್ರಾ ಕೊಳ್ಳ ಪ್ರದೇಶದ ಪ್ರಾಗಿತಿಹಾಸ ಕಾಲದ ಸಂಸ್ಕೃತಿಯ ಬಗ್ಗೆ ಸಂಶೋಧನಾ ಕೃತಿರಚನೆ ಮಾಡಿದ್ದಾರೆ.[೧೦೬] ಇದರಲ್ಲಿ ಈ ಎರಡು ಕೊಳ್ಳ ಪ್ರದೇಶಗಳಲ್ಲಿ ವ್ಯಾಪಿಸಿರುವ ಪ್ರದೇಶಗಳಲ್ಲಿ ಪ್ರಾಗಿತಿಹಾಸ ಕಾಲದ ಸಂಸ್ಕೃತಿ ಹೇಗೆ ಬೆಳೆಯಿತೆಂಬುದನ್ನು ಹೇಳಲಾಗಿದೆ. ಸಂಸ್ಕೃತಿಯ ಬಿಂಬನೆಯಲ್ಲಿ ಆ ಕಾಲದ ಜೀವನಪದ್ಧತಿ, ಮೃತ್‌ಪಾತ್ರೆಗಳು ಅದರಲ್ಲಿನ ಚಿತ್ರಕಲೆ, ಶಿಲಾಯುಧಗಳು, ವಾಸದ ನೆಲೆಗಳು ಅಲ್ಲಿನ ಬಂಡೆ ಚಿತ್ರಗಳು, ಹೀಗೆ ಅಂದಿನ ಕಲಾತ್ಮಕ ಬದುಕನ್ನು ಕುರಿತು ವಿಶ್ಲೇಷಿಸಲಾಗಿದೆ.

---

೯೯. ಆರ್.ಜಿ.ರಾಯ್ಕರ್ : ಭಾರತೀಯ ಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೬
೧೦೦. ರವಿಕುಮಾರ ಕಾಶಿ : ಗ್ರಾಫಿಕ್ ಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೬
೧೦೧. ನೇಮಿರಾಜಶೆಟ್ಟಿ : ಪೋಷ್ಟಮಾಡರ್ನಿಜಂ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೬
೧೦೨. ರವಿಕುಮಾರ ಕಾಶಿ : ಪಾಪ್‌ಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೬
೧೦೩. ಪಿ.ಆರ್.ತಿಪ್ಪೇಸ್ವಾಮಿ : ಕಲಾವಿದನ ನೆನಪುಗಳು : ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಲೆ, ಮೈಸೂರು-೧೯೯೬
೧೦೪. ಎನ್.ಮರಿಶಾಮಾಚಾರ್ : ಆರ್.ಎಮ್.ಹಡಪದ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೬
೧೦೫. ಕೆ.ವಿ.ಸುಬ್ರಹ್ಮಣ್ಯ : ಕಲಾಸಂವೇದನೆಯ ಒಳನೋಟಗಳು : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೭
೧೦೬. ಬಿ.ಸುಬ್ರಹ್ಮಣ್ಯ : ಪ್ರೀ ಘೋಟೋೀ ಆ್ಯಂಡ ಅರ್ಲಿ ಹಿಸ್ಟಾರಿಕ್ ಕಲ್ಚರ್ ಆಫ್ ಕೃಷ್ಣಾ ತುಂಗಭದ್ರಾವ್ಯಾಲಿ : ಭಾರತೀಯ ಕಲಾಪ್ರಕಾಶನ ದೆಹಲಿ-೧೯೯೭

ಬಾಗೂರು ಮಾರ್ಕಂಡೇಯ ಎರಡು ಕೃತಿಗಳನ್ನು ರಚನೆಮಾಡಿದ್ದಾರೆ. ಮೊದಲನೆಯ ಕೃತಿ 'ವಿನ್ಯಾಸ ಜಗತ್ತು,' ಇದರಲ್ಲಿ[೨೦೭]ನಕ್ಷಾಚಿತ್ರಣವನ್ನು ಹೇಗೆ ರಚಿಸಬೇಕೆಂದು ಸರಳ ವಿಧಾನಗಳಿಂದ ತಿಳಿಸಿ, ಕೆಲವು ಮಾದರಿ ನಕ್ಷೆಗಳನ್ನು ಕೊಡಲಾಗಿದೆ. ಎರಡನೆಯ ಕೃತಿ 'ನೀವೂ ಕಲಾವಿದರಾಗಬೇಕೆ? ಚಿತ್ರಕಲೆಯನ್ನು ಹೇಗೆ ಕಲಿಯಬೇಕೆಂದು ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚನೆಮಾಡಿದ ಕೃತಿ ಇದಾಗಿದೆ.[೨೦೮] ಮನುಷ್ಯ, ಪ್ರಾಣಿ, ಪಕ್ಷಿ, ವಸ್ತುಗಳು, ಪ್ರಕೃತಿಯಂತಹ ಮರಗಳು ಹೂ-ಹಣ್ಣುಗಳು ಇಂತಹ ಎಲ್ಲ ಚಿತ್ರಗಳನ್ನು ಸರಳವಾಗಿ ರಚಿಸುವ ಕ್ರಮಗಳನ್ನು ಇದರಲ್ಲಿ ಹೇಳಲಾಗಿದೆ. 'ಹಿಮಾಚಲದ ಹಿನ್ನೆಲೆಯಲ್ಲಿ' ಪ್ರವಾಸ ಸಾಹಿತ್ಯವನ್ನು ಶಂಕರ ಪಾಟೀಲ ರಚನೆಮಾಡಿದ್ದಾರೆ.[೨೦೯] ಚಿತ್ರಕಲಾವಿದರಾದ ಶಂಕರ ಪಾಟೀಲರು ಹಿಮಾಚಲ ಪ್ರದೇಶದ ಪ್ರವಾಸ ಮಾಡಿದ್ದು, ಅಲ್ಲಿ ಕಂಡುಂಡ ಅನುಭವಗಳನ್ನು ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ. ಹಿಮಾಚಲದ ಬೌದ್ಧ ಸನ್ಯಾಸಿ ಮಠಗಳು, ಅಲ್ಲಿನ ಪ್ರಾಚೀನ ಭಿತ್ತಿಚಿತ್ರಗಳು, ಹಿಮಪರ್ವತಗಳ ಸೌಂದರ್ಯ, ಕಲಾಪರಂಪರೆ ಮತ್ತು ಕಲಾವಿದರ ಬಗ್ಗೆ ಸ್ಥೂಲವಾಗಿ ಹೇಳಲಾಗಿದೆ.

'ಚೈತನ್ಯ' ವಿ.ಸಿ.ಮಾಲಗತ್ತಿ ಅವರ ಸಂಭಾವನಾ ಗ್ರಂಥವನ್ನು ರಾಘವೇಂದ್ರ ಜೋಶಿಯವರು ಸಂಪಾದನೆ ಮಾಡಿದ್ದಾರೆ.[೨೧೦] ಇದರಲ್ಲಿ ಅವರ ವ್ಯಕ್ತಿತ್ವ, ಕಲಾಬದುಕು ಮತ್ತು ವಿವಿಧ ಕಲಾಪ್ರಕಾರಗಳಿಗೆ ಸಂಬಂಧಪಟ್ಟ ಲೇಖನಗಳಿವೆ. 'ಸಾಕ್ಷಿ' ಸ್ಮರಣ ಸಂಚಿಕೆಯನ್ನು ಬಸವರಾಜ ಗವಿಮಠ ಸಂಪಾದನೆ ಮಾಡಿದ್ದಾರೆ.[೨೧೧] ವಿಜಯ ಮಹಾಂತೇಶ ಚಿತ್ರಕಲಾ ಮಹಾವಿದ್ಯಾಲಯದ ಐದು ವಸಂತಗಳ ಸ್ಮರಣ ಸಂಚಿಕೆಯಾದ ಇದರಲ್ಲಿ ಕಲಾಶಾಲೆಯ ಕುರಿತು ಮತ್ತು ಅಲ್ಲಿನ ವಿದ್ಯಾರ್ಥಿ ಹಾಗೂ ಅಧ್ಯಾಪಕರ ಕಲಾ ಕೊಡುಗೆಗಳನ್ನು ಸ್ಥೂಲವಾಗಿ ತಿಳಿಸಲಾಗಿದೆ. ಜೊತೆಗೆ ಛಾಯಾಚಿತ್ರಗಳನ್ನು ಹಾಕಲಾಗಿದೆ. 'ಶಿಕ್ಷಣದಲ್ಲಿ ಕಲಾಭಿವ್ಯಕ್ತಿಗೆ ಆಕರಗಳು' ಕೃತಿಯನ್ನು ಎನ್.ಶ್ರೀಪತಿ ಸಂಪಾದನೆ ಮಾಡಿದ್ದಾರೆ.[೨೧೨] ಇದರಲ್ಲಿ ಕಲಾಶಿಕ್ಷಣ, ಕಲೆ, ಸಾಮಾನ್ಯ ಶಿಕ್ಷಣದಲ್ಲಿ ಕಲೆ ಮತ್ತು ಕಲೆಯ ಪಾತ್ರ, ಒಟ್ಟು ಶಿಕ್ಷಣದಲ್ಲಿ ಕಲೆಯ ಪಾತ್ರ ಇಂತಹ ಸಂಗತಿಗಳ ಬಗ್ಗೆ ಇಲ್ಲಿನ ಲೇಖನಗಳು ಬೆಳಕು ಚಲ್ಲುತ್ತವೆ.

'ಚೌಕಟ್ಟು' ಕೃತಿಯು ಎಚ್.ಎ.ಅನಿಲಕುಮಾರ ಅವರಿಂದ ಸಂಪಾದಿತವಾಗಿದೆ.[೨೧೩] ಇದರಲ್ಲಿ ಕಲೆಯ ಕುರಿತ ವಿವಿಧ ಲೇಖನಗಳಿವೆ. ಅದರಂತೆ 'ಸುವರ್ಣವಿಜಯ' ಗದುಗಿನ ವಿಜಯ ಕಲಾಮಂದಿರ ಸಂಸ್ಥೆಯ ಸ್ವರ್ಣ ಮಹೋತ್ಸವದ ಸ್ಮರಣ ಸಂಚಿಕೆಯಾಗಿದ್ದು, ಅನ್ನದಾನಿ ಹಿರೇಮಠರು ಸಂಪಾದನೆ ಮಾಡಿದ್ದಾರೆ.[೨೧೪] ಇದರಲ್ಲಿ ವಿಜಯ ಕಲಾಶಾಲೆ, ಅಧ್ಯಾಪಕರು ಮತ್ತು ವಿದ್ಯಾರ್ಥಿಗಳ ಕಲಾಸಾಧನೆಯ ಬಗ್ಗೆ ಲೇಖನಗಳಿವೆ. ಕಲೆಯ ಬಗ್ಗೆ ಕವಿತೆಗಳು, ಹನಿಗವನಗಳೂ ಇಲ್ಲಿವೆ.

ಕ್ರಿ.ಶ. ೧೯೯೭ರಲ್ಲಿ ಸುಮಾರು ಏಳು ಕಲಾಸಾಹಿತ್ಯ ಪುಸ್ತಕಗಳು ಪ್ರಕಟಗೊಂಡಿವೆ. ನೋಟಪಲ್ಲಟ, ಕೆ.ವೆಂಕಟಪ್ಪ, ಸಮಕಾಲೀನ ಕಲೆ, ಕಲಾಪಯಣಿಗರು, ಮಾನಸೋಲ್ಲಾಸ, ಶ್ರೀತತ್ವನಿಧಿ, ಕಾಶ್ಯಪ ಶಿಲ್ಪಶಾಸ್ತ್ರ ಎಂಬ ಈ ಏಳು ಕೃತಿಗಳು ವಿವಿಧ ವಿದ್ವಾಂಸರಿಂದ ರಚಿಸಲ್ಪಟ್ಟಿವೆ. ಇವುಗಳಲ್ಲಿ ಪ್ರಾಚೀನ ಶಾಸ್ತ್ರ

---

೨೦೭. ಬಾಗೂರು ಮಾರ್ಕಂಡೇಯ : ವಿನ್ಯಾಸ ಜಗತ್ತು: ಸಪ್ನಬುಕ್‌ಸ್ಟಾಲ್, ಬೆಂಗಳೂರು-೧೯೯೭

೨೦೮. ಬಾಗೂರು ಮಾರ್ಕಂಡೇಯ : 'ನೀವೂ ಕಲಾವಿದರಾಗಬೇಕೆ : ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು-೧೯೯೭

೨೦೯. ಶಂಕರ ಪಾಟೀಲ : ಹಿಮಾಚಲದ ಹಿನ್ನೆಲೆಯಲ್ಲಿ : ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೯೭

೨೧೦. ರಾಘವೇಂದ್ರ ಜೋಶಿ : (ಸಂ) : ಚೈತನ್ಯ : ಮಾಲಗತ್ತಿ ಪಬ್ಲಿಕೇಷನ್ಸ, ಬೆಳಗಾವಿ-೧೯೯೭

೨೧೧. ಬಸವರಾಜ ಗವಿಮಠ : ಸಾಕ್ಷಿ : ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯ, ಇಲಕಲ್ಲ-೧೯೯೭

೨೧೨. ಎನ್.ಶ್ರೀಪತಿ : (ಸಂ) : ಶಿಕ್ಷಣದಲ್ಲಿ ಕಲಾಭಿವ್ಯಕ್ತಿಗೆ ಆಕರಗಳು : ಕರ್ನಾಟಕ ರಾಜ್ಯ ಚಿತ್ರಕಲಾ ಶಿಕ್ಷಕರ ಸಂಘ, ಬೆಂಗಳೂರು-೧೯೯೭

೨೧೩. ಎಚ್.ಎ.ಅನಿಲಕುಮಾರ : (ಸಂ) : ಚೌಕಟ್ಟು : ಸಂಚಯ ಪ್ರಕಾಶನ, ಬೆಂಗಳೂರು-೧೯೯೭

೨೧೪. ಅನ್ನದಾನಿ ಹಿರೇಮಠ : (ಸಂ) : ಸುವರ್ಣ ವಿಜಯ : ಸ್ವರ್ಣಮಹೋತ್ಸವ ಸಮಿತಿ:ವಿಜಯ ಕಲಾಮಂದಿರ,ಸಂಸ್ಥೆ ಗದಗ-೧೯೯೭

ಗ್ರಂಥಗಳನ್ನು ಅನುವಾದ ಮಾಡಿ ವಿಮರ್ಶೆ ಬರೆದಿರುವ ಮೂರು ಗ್ರಂಥಗಳಿವೆ. ಒಂದು ವ್ಯಕ್ತಿಚಿತ್ರ, ಒಂದು ಕಲಾವಿಮರ್ಶೆ ಮತ್ತೊಂದು ಸಮಕಾಲೀನ ಕಲೆಯ ಬಗ್ಗೆ ಇದ್ದರೆ ಏಳನೆಯದು ಕೆಲವು ಕಲಾವಿದರ ಸಂಕ್ಷಿಪ್ತ ಪರಿಚಯ ಹೊಂದಿದ ಕೃತಿಯಾಗಿದೆ.

'ನೋಟಪಲ್ಲಟ' ಕೃತಿಯನ್ನು ಎಚ್.ಎ.ಅನಿಲಕುಮಾರ ಬರೆದಿದ್ದು,[೩೧೫] ಕಲಾವಿಮರ್ಶೆಯ ಬಗೆಗೆ ವಿವಿಧ ಲೇಖನಗಳನ್ನು ಹೊಂದಿದೆ. ಕಲೆ, ಕಲಾಕೃತಿ, ಸಹೃದಯ, ರಸಾನುಭವ, ಇವುಗಳ ಜೊತೆಗೆ ಚಿತ್ರಕಲೆಯನ್ನು ನೋಡುವ ರೀತಿ, ಚಿತ್ರಕಲಾ ವಿಮರ್ಶೆಯ ಪರಿಕಲ್ಪನೆಗಳನ್ನು ತಿಳಿಸಲಾಗಿದೆ. ಕೆ.ವೆಂಕಟಪ್ಪ ಬಗೆಗಿನ ಕೃತಿಯನ್ನು ಇಂಗ್ಲೀಷನಲ್ಲಿ ಎಸ್.ಕೆ.ರಾಮಚಂದ್ರರಾವ್ ಬರೆದಿದ್ದಾರೆ.[೩೧೬] ಇದರಲ್ಲಿ ಕೆ.ವೆಂಕಟಪ್ಪನವರ ಕೆಲವು ಉತ್ತಮ ಕಲಾಕೃತಿಗಳನ್ನು ಸಂಗ್ರಹಿಸಿ ಬಣ್ಣದ ಛಾಯಾಚಿತ್ರಗಳನ್ನು ಈ ಸಂಪುಟದಲ್ಲಿ ಮುದ್ರಿಸಲಾಗಿದೆ. ಇದಲ್ಲದೆ ಆ ಕಲಾಕೃತಿಗಳ ಸಂಕ್ಷಿಪ್ತ ವಿಮರ್ಶೆ, ಅವರ ಸಂಕ್ಷಿಪ್ತ ಕಲಾಬದುಕನ್ನು ಕುರಿತು ಹೇಳಲಾಗಿದೆ. 'ಸಮಕಾಲೀನ ಕಲೆ' ಕೃತಿಯನ್ನು ಎಸ್.ಎನ್.ಚಂದ್ರಶೇಖರ ಬರೆದಿದ್ದಾರೆ.[೩೧೭] ಇದರಲ್ಲಿ ಆಧುನಿಕೋತ್ತರ ಕಾಲದಲ್ಲಿ ಕಲೆ ಹೇಗೆ ಬೆಳೆದು ಬಂದಿತು? ಸಮಕಾಲೀನ ಕಲಾಕ್ಷೇತ್ರದಲ್ಲಿ ಅದರ ಪರಿಕಲ್ಪನೆಗಳೇನು? ಎಂಬಂತಹ ಸಂಗತಿಗಳನ್ನು ಹೇಳಲಾಗಿದೆ.

'ಕಲಾಪಯಣಿಗರು' ಕೃತಿಯು ಅಶೋಕಶೆಟ್ಟರರಿಂದ ರಚಿಸಲ್ಪಟ್ಟಿದೆ.[೩೧೮] ಹುಬ್ಬಳ್ಳಿ-ಧಾರವಾಡದ ಕೆಲವು ಕಲಾವಿದರು ರಾಜಾದ್ಯಂತ ಆಯ್ದ ಪ್ರದೇಶಗಳಲ್ಲಿ ತಮ್ಮ ಕಲಾ ಪ್ರದರ್ಶನಗಳನ್ನು ಏರ್ಪಡಿಸಿದ್ದರು. ಅವರ ಬಗ್ಗೆ ಈ ಕೃತಿ ತಿಳಿಸುತ್ತದೆ. ಆಯಾ ಕಲಾವಿದರ ಕಲೆ, ಕಲಾಕೃತಿ ಮತ್ತು ಕಲಾಸಾಧನೆಗಳನ್ನು ಸಂಕ್ಷಿಪ್ತವಾಗಿ ಇದರಲ್ಲಿ ಹೇಳಲಾಗಿದೆ. ಸೋಮೇಶ್ವರನ 'ಮಾನಸೋಲ್ಲಾಸ' ಗ್ರಂಥವನ್ನು ಡಾ. ಎಂ.ಎಂ.ಕಲಬುರ್ಗಿಯವರು ಕನ್ನಡಕ್ಕೆ ಅನುವಾದಿಸಿದ್ದಾರೆ.[೩೧೯] ಇದು ಒಂದು ವಿಶ್ವಕೋಶ ಮಾದರಿಯ ಗ್ರಂಥವಾಗಿದ್ದು, ಒಂದು ಅಧ್ಯಾಯವನ್ನು ಚಿತ್ರಕಲೆಗೆ ಮೀಸಲಿರಿಸಲಾಗಿದೆ. ಇಲ್ಲಿನ ಚಿತ್ರಕಲಾ ವಿಷಯದಲ್ಲಿ ಭಿತ್ತಿತಯಾರಿಕೆ, ಅದರ ಪರಿಕರಗಳು, ಚಿತ್ರರಚನೆ ಅದರ ಪರಿಕರಗಳು, ಚಿತ್ರ ಪ್ರಕಾರಗಳು, ಬಣ್ಣ, ಕುಂಚ, ಅಂಟು ತಯಾರಿಕೆ ಹೀಗೆ ಹಲವಾರು ಸಂಗತಿಗಳು ಹೇಳಲ್ಪಟ್ಟಿವೆ.

ಮುಮ್ಮಡಿಯವರ 'ಶ್ರೀತತ್ವನಿಧಿ' ಗ್ರಂಥವನ್ನು ಸಾ.ಕೃ.ರಾಮಚಂದ್ರರಾವ್ ಕನ್ನಡದಲ್ಲಿ ಅನುವಾದಿಸಿ ವಿಮರ್ಶೆ ಬರೆದಿದ್ದಾರೆ.[೩೨೦] ಮುಮ್ಮಡಿಯವರ ಮಹತ್ವದ ಕೃತಿಗಳಲ್ಲಿ ಒಂದಾದ ಇದರಲ್ಲಿ ಸಾಂದರ್ಭಿಕವಾಗಿ ಕಿರುರೂಪ ಚಿತ್ರಕಲಾ ಕೃತಿಗಳಿವೆ. ರಾಗಮಾಲಾ ಚಿತ್ರಗಳು, ನಾಯಕ ನಾಯಕಿಯರ ಚಿತ್ರಗಳು ಇಲ್ಲಿವೆ. ಪ್ರತಿಯೊಂದು ರಾಗಕ್ಕೂ ಒಂದೊಂದು ಪ್ರತ್ಯೇಕ ಚಿತ್ರಕಲಾ ಕೃತಿಗಳನ್ನು ರಚನೆ ಮಾಡಲಾಗಿದೆ 'ಕಾಶ್ಯಪ ಶಿಲ್ಪಶಾಸ್ತ್ರಂ' ಪ್ರಾಚೀನ ಗ್ರಂಥವನ್ನು ಜಿ.ಜ್ಞಾನಾನಂದ ಕನ್ನಡಕ್ಕೆ ಅನುವಾದಿಸಿ ಟೀಕಾರ್ಥ ಬರೆದಿದ್ದಾರೆ.[೩೨೧] ಇದು ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ ಕೃತಿಯಾಗಿದ್ದರೂ ಎರಡು ಅಧ್ಯಾಯಗಳಲ್ಲಿ ಭಿತ್ತಿ ತಯಾರಿಕೆ ಅದರ ಪರಿಕರಗಳು, ಅಂಟು ಮಾಧ್ಯಮಗಳ ತಯಾರಿಕೆ, ಬಣ್ಣಗಳ ತಯಾರಿಕೆ, ಕುಂಚಗಳ ತಯಾರಿಕೆ ಮತ್ತು ಬಣ್ಣ ಲೇಪನ ವಿಧಾನ ಮುಂತಾದ ಚಿತ್ರಕಲೆಯ ಅಂಶಗಳು ಹೇಳಲ್ಪಟ್ಟಿವೆ..

---

೩೧೫. ಎಚ್.ಎ.ಅನಿಲಕುಮಾರ : ನೋಟಪಲ್ಲಟ : ಅಭಿನವ ಪ್ರಕಾಶನ, ಬೆಂಗಳೂರು-೧೯೯೮

೩೧೬. ಎಸ್.ಕೆ.ರಾಮಚಂದ್ರರಾವ್ : ಕೆ.ವೆಂಕಟಪ್ಪ : ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು-೧೯೯೮

೩೧೭. ಎಸ್.ಎನ್.ಚಂದ್ರಶೇಖರ : ಸಮಕಾಲೀನ ಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೮

೩೧೮. ಅಶೋಕ ಶೆಟ್ಟರ : ಕಲಾಪಯಣಿಗರು : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೮

೩೧೯. ಎಂ.ಎಂ.ಕಲಬುರ್ಗಿ (ಅನು) : ಮಾನಸೋಲ್ಲಾಸ : ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-೧೯೯೮

೩೨೦. ಸಾ.ಕೃ.ರಾಮಚಂದ್ರರಾವ್ : (ಅನು) : ಶ್ರೀತತ್ವನಿಧಿ, : ಕನ್ನಡ ವಿಶ್ವವಿದ್ಯಾಲಯ ಹಂಪಿ-೧೯೯೮

೩೨೧. ಜಿ.ಜ್ಞಾನಾನಂದ : ಕಾಶ್ಯಪ ಶಿಲ್ಪಶಾಸ್ತ್ರಂ : ಶಿಲ್ಪಕಲಾ ಅಕಾಡೆಮಿ, ಬೆಂಗಳೂರು-೧೯೯೮

ಕ್ರಿ.ಶ. ೧೯೯೯ರಲ್ಲಿ ಮೂರು ಕಲಾ ಪುಸ್ತಕಗಳು ಪ್ರಕಟಗೊಂಡಿವೆ. ಆಲೇಖ್ಯ ಕೃತಿಯನ್ನು ಅ.ಲ.ನರಸಿಂಹನ್ ಬರೆದಿದ್ದಾರೆ.[೩೨೨] ಇದರಲ್ಲಿ ಚಿತ್ರಕಲೆಯಬಗ್ಗೆ ವಿವಿಧ ಲೇಖನಗಳಿವೆ. ರೇಖಾಚಿತ್ರಕಲೆ, ಆದಿಮಾನವ ಚಿತ್ರಕಲೆ, ಜನಪದಕಲೆ, ಆಧುನಿಕಕಲೆ, ಚಿತ್ರಕಲಾ ವಿಮರ್ಶೆ, ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಇಲ್ಲಿನ ಲೇಖನಗಳು ಮಾಹಿತಿ ಕೊಡುತ್ತವೆ. ಬಸವ ಭೂಪಾಲ ದೊರೆಯ 'ಶಿವತತ್ವ ರತ್ನಾಕರ' ಗ್ರಂಥವನ್ನು ಮಲ್ಲೇಪುರಂ ವೆಂಕಟೇಶ ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದ್ದಾರೆ.[೩೨೩] ಇದು ಒಂದು ವಿಶ್ವಕೋಶ ಮಾದರಿಯ ಗ್ರಂಥವಾಗಿದ್ದು, ಎರಡು ಅಧ್ಯಾಯಗಳು ಚಿತ್ರಕಲೆಗೆ ಸಂಬಂಧಿಸಿವೆ. ಭಿತ್ತಿತಯಾರಿಕೆ, ಅದರ ಪರಿಕರಗಳು, ಚಿತ್ರರಚನೆ ಕ್ರಮ. ಬಣ್ಣ, ಕುಂಚ, ಅಂಟುದ್ರಾವಕ ತಯಾರಿಕೆ, ಚಿತ್ರಕ್ಕೆ ಹೊಳಪು ಕೊಡುವ ಕ್ರಮ ಹೀಗೆ ಹಲವು ವಿಷಯಗಳು ಹೇಳಲ್ಪಟ್ಟಿವೆ. 'ಮ್ಯೂರಲ್ ಪೇಂಟಿಂಗ್ಸ ಆಫ್ ಶಿಬಿ' ಕೃತಿಯನ್ನು ವೀಣಾಶೇಖರ ಬರೆದಿದ್ದಾರೆ.[೩೨೪] ಶಿಬಿ ನರಸಿಂಹಸ್ವಾಮಿ ದೇವಾಲಯದಲ್ಲಿರುವ ಪ್ರಾಚೀನ ಭಿತ್ತಿಚಿತ್ರಗಳ ಬಗ್ಗೆ ಪುಸ್ತಕ ಮಾಹಿತಿ ಕೊಡುತ್ತದೆ. ಭಿತ್ತಿತಯಾರಿಕೆ, ಚಿತ್ರರಚನಾಕ್ರಮ, ವರ್ಣವಿನ್ಯಾಸ, ರೇಖಾಲಾಲಿತ್ಯ, ಸಂಯೋಜನಾ ರೀತಿ, ಬಣ್ಣಗಳ ತಯಾರಿಕೆ ಮುಂತಾದ ಅಂಶಗಳು ಹೇಳಲ್ಪಟ್ಟಿವೆ.

ಕ್ರಿ.ಶ. ೨೦೦೦ ದಲ್ಲಿ ಹನ್ನೆರಡು ಕಲಾಪುಸ್ತಕಗಳು ಹೊರಬಂದಿವೆ. 'ಚಿತ್ರಚಿತ್ತ' ಕೃತಿಯನ್ನು ಚಿ.ಸು.ಕೃಷ್ಣಶೆಟ್ಟಿ ಬರೆದಿದ್ದಾರೆ.[೩೨೫] ಇದರಲ್ಲಿ ಕಲೆ ಮತ್ತು ಕಲಾ ವಿಮರ್ಶೆಯ ಬಗ್ಗೆ ಲೇಖನಗಳಿವೆ. 'ಸೌಂದರ್ಯಶಾಸ್ತ್ರ' ಕೃತಿಯನ್ನು ಕಾಶಿನಾಥ ಅಂಬಲಗಿಯವರು ಕನ್ನಡಕ್ಕೆ ಅನುವಾದ ಮಾಡಿದ್ದಾರೆ.[೩೨೬] ಇದರಲ್ಲಿ ಸೌಂದರ್ಯ ಶಾಸ್ತ್ರವೆಂದರೇನು? ಅದರ ಪರಿಕಲ್ಪನೆ, ಭಾರತೀಯ ಮತ್ತು ಪಾಶ್ವಾತ್ಯ ಸೌಂದರ್ಯ ಶಾಸ್ತ್ರಜ್ಞರ ಅಭಿಮತಗಳು, ಭರತನ ರಸಸೂತ್ರ, ಔಚಿತ್ಯ, ಧ್ವನಿ, ಅಲಂಕಾರ, ಮಾನಸಿಕದೂರ ಮುಂತಾದ ಅಂಶಗಳು ಹೇಳಲ್ಪಟ್ಟಿವೆ. ಕಲೆ ಎಂದರೇನು? ಕೃತಿಯನ್ನು ಸಿ.ಪಿ.ಕೆ. ರಚಿಸಿದ್ದಾರೆ.[೩೨೭] ಇದು ಲಿಯೋಟಾಲ್‌ಸ್ಟಾಯ್ ಅವರ 'ವಾಟ್ ಈಜ್ ಆರ್ಟ' ಎಂಬುದರ ಭಾವಾನುವಾದವಾಗಿದೆ. ಕಲೆಯ ಪರಿಕಲ್ಪನೆ, ಕಲಾಕೃತಿ, ಕಲಾವಿದ, ಸಹೃದಯ, ಕಲಾವಸ್ತು ಎಂಬಂತಹ ಸಂಗತಿಗಳಿಗೆ ಉತ್ತರ ಹುಡುಕುವ ಪ್ರಯತ್ನ ಇದರಲ್ಲಿದೆ. 'ಜನಪದ ಕಸೂತಿ' ಎಂಬ ಕೃತಿಯನ್ನು ಮಧುವೆಂಕಾರೆಡ್ಡಿಯವರು ರಚಿಸಿದ್ದಾರೆ.[೩೨೮] ಕಸೂತಿ ಕಲೆಯ ಪರಂಪರೆ, ಪ್ರಕಾರಗಳು, ಮಾಧ್ಯಮಗಳು, ವಸ್ತುವಿಷಯಗಳು ಹೀಗೆ ಹಲವು ಸಂಗತಿಗಳು ಹೇಳಲ್ಪಟ್ಟಿವೆ. 'ಚಿತ್ತಾರ' ಕೃತಿಯನ್ನು ನಾ.ಡಿಸೋಜಾ ರಚಿಸಿದ್ದಾರೆ.[೩೨೯] ಮಲೆನಾಡ ಪರಿಸರದಲ್ಲಿ ಪ್ರಖ್ಯಾತವಾಗಿರುವ ಹಸೆ ಚಿತ್ರಕಲೆಯ ಕುರಿತು ಈ ಕೃತಿ ತಿಳಿಸುತ್ತದೆ. ಹಸೆ ಚಿತ್ರಕಲೆಯ ರಚನಾಕ್ರಮ, ಪರಿಕರಗಳು, ವಸ್ತುವಿಷಯಗಳು, ನಂಬಿಕೆ, ಅಚರಣೆ, ಮತ್ತು ಹಾಡುಗಳನ್ನು ಕೊಡಲಾಗಿದೆ. ಅಲ್ಲದೆ ಹಸೆ ಚಿತ್ತಾರದ ಛಾಯಾಚಿತ್ರಗಳನ್ನು ಅಳವಡಿಸಲಾಗಿದೆ.

---

೩೨೨. ಅ.ಲ.ನರಸಿಂಹನ್ : ಆಲೇಖ್ಯ : ಸಂಯೋಜಿತ ಪ್ರಕಾಶನ, ಬೆಂಗಳೂರು-೧೯೯೯
೩೨೩. ಮಲ್ಲೇಪುರಂ ಜಿ.ವೆಂಕಟೇಶ : (ಅನು) : ಶಿವತತ್ವ ರತ್ನಾಕರ : ಕನ್ನಡ ವಿಶ್ವವಿದ್ಯಾಲಯ ಹಂಪಿ-೧೯೯೯
೩೨೪. ವೀಣಾಶೇಖರ : ಮ್ಯೂರಲ್ ಪೇಂಟಿಂಗ್ಸ ಅಫ್ ಶಿಬಿ : ಇತಿಹಾಸ ಸಂಶೋಧನಾ ಸಂಸ್ಥೆ, ಕೆಳದಿ-೧೯೯೯
೩೨೫. ಚಿ.ಸು.ಕೃಷ್ಣಶೆಟ್ಟಿ : ಚಿತ್ರಚಿತ್ತ : ಇಳಾ ಪ್ರಕಾಶನ, ಬೆಂಗಳೂರು-೨೦೦೦
೩೨೬. ಕಾಶಿನಾಥ ಅಂಬಲಗಿ : ಸೌಂದರ್ಯಶಾಸ್ತ್ರ : ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦
೩೨೭. ಸಿ.ಪಿ.ಕೆ. : (ಅನು) : ಕಲೆ ಎಂದರೇನು? ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೦
೩೨೮. ಮಧುವೆಂಕಾರೆಡ್ಡಿ : ಜನಪದ ಕಸೂತಿ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ-೨೦೦೦
೩೨೯. ನಾ.ಡಿಸೋಜಾ : ಚಿತ್ತಾರ : ರವೀಂದ್ರ ಪುಸ್ತಕಾಲಯ, ಶಿವಮೊಗ್ಗ-೨೦೦೦

'ಚಿತ್ರಕಲಾ ಕೃತಿಯನ್ನು ಚೂಡಾಮಣಿ ನಂದಗೋಪಾಲ ಸಂಪಾದನೆ ಮಾಡಿದ್ದಾರೆ.[೩೩೦] ಇದು ನಂಜುಂಡರಾವ್ ಅವರ ಅಭಿನಂದನಾ ಗ್ರಂಥವಾಗಿದ್ದು, ಅವರ ವ್ಯಕ್ತಿತ್ವ, ಚಿತ್ರಕಲಾ ಪರಿಷತ್ತು, ಮತ್ತು ವಿವಿಧ ಕಲಾ ಪ್ರಕಾರದ ಲೇಖನಗಳಿವೆ. 'ಕಲಾಗಂಗೋತ್ರಿ' ಕೃತಿಯನ್ನು ತುಮಕೂರು ಶಿವಕುಮಾರ ಮತ್ತು ಜಿ.ಕೆ.ಶಿವಣ್ಣ ಸಂಪಾದನೆ ಮಾಡಿದ್ದಾರೆ.[೩೩೧] ಇದರಲ್ಲಿ ಕಲಾ ಪ್ರಕಾರಗಳು ಮತ್ತು ಕಲಾವಿದರ ಬಗ್ಗೆ ಲೇಖನಗಳಿವೆ. 'ಕರ್ನಾಟಕ ಚಿತ್ರಕಲೆಯಲ್ಲಿ ಬಣ್ಣದ ಬಳಕೆ' ಕೃತಿಯನ್ನು ಕೆ.ವಿ.ಕಾಳೆ ಬರೆದಿದ್ದಾರೆ.[೩೩೨] ಕರ್ನಾಟಕದ ಸಾಂಪ್ರದಾಯಿಕ ಚಿತ್ರಕಲೆಯಲ್ಲಿ ಬಣ್ಣದ ಬಳಕೆ ಹೇಗೆ ಆಗಿದೆ ಎಂಬುದನ್ನು ಹೇಳಲಾಗಿದೆ. ಭಿತ್ತಿಚಿತ್ರಕಲೆ, ಕಿರುರೂಪಚಿತ್ರ, ಹಸ್ತಪ್ರತಿ ಚಿತ್ರಕಲೆ, ಜನಪದ ಚಿತ್ರಕಲೆ, ಆಧುನಿಕ ಚಿತ್ರಕಲೆ, ಹೀಗೆ ಹಲವಾರು ಕಲಾ ಪ್ರಕಾರಗಳಲ್ಲಿ ಬಣ್ಣದ ಬಳಕೆ ಯಾವ ರೀತಿ ಆಗಿದೆ ಎಂಬುದನ್ನು ಹೇಳಲಾಗಿದೆ.

'ದೃಶ್ಯಕಲಾ ವಿಮರ್ಶೆ' ಕೃತಿಯನ್ನು ವ್ಹಿ.ಜಿ.ಅಂದಾನಿ ಬರೆದಿದ್ದು,[೩೩೩] ಕಲಾ ವಿಮರ್ಶೆಯ ಬಗ್ಗೆ ಅವರೆ ಬರೆದ ಲೇಖನಗಳಿವೆ. 'ಕರ್ನಾಟಕದ ಕಲಾವಿದರ ಪರಿಚಯಾವಳಿ'ಯನ್ನು ಎಸ್.ಎನ್.ಚಂದ್ರಶೇಖರ ರಚನೆ ಮಾಡಿದ್ದು,[೩೩೪] ಇದರಲ್ಲಿ ಕರ್ನಾಟಕದ ಆಯ್ದ ಕಲಾವಿದರ ಛಾಯಾಚಿತ್ರ ಮತ್ತು ಸಂಕ್ಷಿಪ್ತ ಬಯೋಡಾಟಾ ಕೊಡಲಾಗಿದೆ. ಅದರಂತೆ 'ಪರಿಚಯ' ಎಚ್.ಶಂಕರಪ್ಪ ಹೊರತಂದಿದ್ದು[೩೩೫] ಇದು ಅಕಾಡೆಮಿಯ ಕಾರ್ಯಕಲಾಪಗಳ ಮಾಹಿತಿಯನ್ನು ಕೊಡುತ್ತದೆ.

'ಬ್ರಾಹ್ಮೀ ಚಿತ್ರಕರ್ಮ ಶಾಸ್ತ್ರಂ' ಪ್ರಾಚೀನ ಗ್ರಂಥವನ್ನು ಜಿ.ಜ್ಞಾನಾನಂದ ಕನ್ನಡಕ್ಕೆ ಅನುವಾದಿಸಿ ಅದರ ತಾತ್ಪರ್ಯ ಬರೆದಿದ್ದಾರೆ.[೩೩೬] ಒಟ್ಟು ಐದು ಸಂಪುಟಗಳಲ್ಲಿ ಹೊರಬಂದ ಈ ಕೃತಿಯಲ್ಲಿ ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ವಿಷಯಗಳಿವೆ. ಶಿಲ್ಪಗಳ ತಾಳಮಾನಗಳು ಸಾಂಪ್ರದಾಯಿಕ ಚಿತ್ರಕಲೆಗೂ ಅನ್ವಯಿಸುವುದರಿಂದ ಚಿತ್ರಕಲಾ ಸಾಹಿತ್ಯ ಕ್ಷೇತ್ರದಲ್ಲೂ ಇದೊಂದು ಗಮನಾರ್ಹ ಕೊಡುಗೆ ಎನ್ನಬಹುದು.

ಕ್ರಿ.ಶ. ೨೦೦೧ರಲ್ಲಿ ಸುಮಾರು ಆರು ಕಲಾಪುಸ್ತಕಗಳು ಪ್ರಕಟಗೊಂಡಿವೆ. 'ವರ್ಣಾವರಣ' ಕೃತಿಯನ್ನು ಚಿ.ಸು.ಕೃಷ್ಣಶೆಟ್ಟಿ ರಚಿಸಿದ್ದಾರೆ.[೩೩೭] ಇದರಲ್ಲಿ ಚಿತ್ರಕಲೆಯ ಬಗ್ಗೆ ವಿಮರ್ಶಾ ಲೇಖನಗಳಿವೆ. ಎನ್.ಮರಿಶಾಮಾಚಾರ್ ಬರೆದ 'ದೃಶ್ಯಕಲಾ' ಪುಸ್ತಕದಲ್ಲಿ ಕಲೆ, ಕಲಾ ಪ್ರಕಾರಗಳು ಮತ್ತು ಕಲಾ ವಿಮರ್ಶೆಯ ಕುರಿತು ಲೇಖನಗಳಿವೆ.[೩೩೮] ಇವೆರಡು ಕೃತಿಗಳು ಕಲಾವಿಮರ್ಶಾ ದೃಷ್ಟಿಯಿಂದ ಗಮನಾರ್ಹ ಕೃತಿಗಳಾಗಿವೆ. 'ವರ್ಣಸಂಚಯ' ಕೃತಿಯನ್ನು ಡಾ.ಎಸ್.ಸಿ.ಪಾಟೀಲರು ರಚಿಸಿದ್ದಾರೆ.[೩೩೯] ಇದರಲ್ಲಿ ಕಲೆಯ ಕುರಿತು ವಿವಿಧ ಲೇಖನಗಳಿವೆ. ಪ್ರಾಗಿತಿಹಾಸ ಕಾಲದ ಚಿತ್ರಕಲೆ, ಬಾಗಲಕೋಟ ಜಿಲ್ಲೆಯ ಚಿತ್ರಕಲೆ, ಹಸ್ತಪ್ರತಿ ಚಿತ್ರಕಲೆ, ಭಿತ್ತಿಚಿತ್ರಕಲೆ, ಕಲಾವಿಮರ್ಶೆ, ಸಂಶೋಧನೆ ಹೀಗೆ ಹಲವು ಸಂಗತಿಗಳ ಬಗ್ಗೆ ಇಲ್ಲಿನ ಲೇಖನಗಳು ಬೆಳಕು ಚೆಲ್ಲುತ್ತವೆ.

---

೩೩೦. ಚೂಡಾಮಣಿ ನಂದಗೋಪಾಲ್ : ಚಿತ್ರಕಲಾ: ಚಿತ್ರಕಲಾ ಪರಿಷತ್ತು, ಬೆಂಗಳೂರು-೨೦೦೦

೩೩೧. ತುಮಕೂರು ಶಿವಕುಮಾರ ಮತ್ತು ಜಿ.ಕೆ.ಶಿವಣ್ಣ : (ಸಂ) : ಕಲಾಗಂಗೋತ್ರಿ : ಕಲೆ, ಸಾಹಿತ್ಯ, ಸಂಸ್ಕೃತಿ, ರಂಗಭೂಮಿ ಸಂಸ್ಥೆ, ಬೆಂಗಳೂರು-೨೦೦೦

೩೩೨. ಕೆ.ವಿ.ಕಾಳೆ : ಕರ್ನಾಟಕ ಚಿತ್ರಕಲೆಯಲ್ಲಿ ಬಣ್ಣದ ಬಳಕೆ : ಕನ್ನಡ ವಿಶ್ವವಿದ್ಯಾಲಯ ಹಂಪಿ-೨೦೦೦

೩೩೩. ವ್ಹಿ.ಜಿ.ಅಂದಾನಿ : ದೃಶ್ಯಕಲಾವಿಮರ್ಶೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦

೩೩೪. ಎಸ್.ಎನ್.ಚಂದ್ರಶೇಖರ : ಕರ್ನಾಟಕದ ಕಲಾವಿದರ ಪರಿಚಯಾವಳಿ : ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦

೩೩೫. ಎಚ್.ಶಂಕರಪ್ಪ : ಪರಿಚಯ : ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦

೩೩೬. ಜಿ.ಜ್ಞಾನಾನಂದ : (ಅನು) : ಬ್ರಾಹ್ಮೀ ಚಿತ್ರಕರ್ಮಶಾಸ್ತ್ರಂ : ಸಂಸ್ಕೃತ, ಸಾಹಿತ್ಯ ಪ್ರಸಾರ ಸಮಿತಿ, ಕೆ.ಜಿ.ಎಫ್-೨೦೦೦

೩೩೭. ಚಿ.ಸು.ಕೃಷ್ಣಶೆಟ್ಟಿ : ವರ್ಣಾವರಣ : ಚಿತ್ತಾರ ಪ್ರಕಾಶನ, ಬೆಂಗಳೂರು-೨೦೦೧

೩೩೮. ಎನ್.ಮರಿಶಾಮಾಚಾರ್ : ದೃಶ್ಯಕಲಾ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೨೦೦೧

೩೩೯. ಎಸ್.ಸಿ.ಪಾಟೀಲ : ವರ್ಣಸಂಚಯ : ವಿಜಯ ಮಹಾಂತೇಶ ಚಿತ್ರಕಲಾ ವಿದ್ಯಾಲಯ, ಇಲಕಲ್ಲ-೨೦೦೧

'ಭೂತಾರಾಧನೆಯಲ್ಲಿ ಬಣ್ಣಗಾರಿಕೆ' ಕೃತಿಯನ್ನು ಡಾ. ಬಿ.ಎ.ವಿವೇಕರೈ ರಚಿಸಿದ್ದಾರೆ.[೩೪೦] ಮಲೆನಾಡು, ಕರಾವಳಿ ಪ್ರದೇಶಗಳಲ್ಲಿ ವಿಶೇಷವಾಗಿರುವ ಭೂತಾರಾಧನೆಯಲ್ಲಿ ಆಕರ್ಷಕ ಬಣ್ಣಗಾರಿಕೆ ಕಂಡುಬರುತ್ತದೆ. ಅದರ ಕುರಿತು ಈ ಕೃತಿ ಮಾಹಿತಿ ನೀಡುತ್ತದೆ. ಬಣ್ಣಲೇಪನ ವಿನ್ಯಾಸ, ಅವುಗಳ ತಯಾರಿಕೆ ಮತ್ತು ಮೂಲಗಳು, ಲೇಪನ ವಿಧಾನ, ಅಲಂಕಾರಿಕತೆ ಮುಂತಾದ ಅಂಶಗಳು ಇಲ್ಲಿ ಹೇಳಲ್ಪಟ್ಟಿವೆ. 'ಕಲಾಸ್ವರೂಪ ಮತ್ತು ಪ್ರಚಾರಕಲೆ' ಕೃತಿಯನ್ನು ವ್ಹಿ.ಜಿ.ಅಂದಾನಿಯವರು ರಚಿಸಿದ್ದಾರೆ.[೩೪೧] ಇದರಲ್ಲಿ ಚಿತ್ರಕಲೆಯ ವಿವಿಧ ಪ್ರಕಾರಗಳು ಮತ್ತು ವಾಣಿಜ್ಯ ಕಲೆಯ ಕುರಿತು ಲೇಖನಗಳಿವೆ. ಅಲ್ಲದೆ ಲಲಿತಕಲೆ ಮತ್ತು ವಾಣಿಜ್ಯ ಕಲೆಯ ಲಕ್ಷಣಗಳನ್ನು ಇಲ್ಲಿನ ಲೇಖನಗಳಿಂದ ತಿಳಿದುಕೊಳ್ಳಬಹುದಾಗಿದೆ. 'ದಖನಿ ಚಿತ್ರಕಲೆ' ಕೃತಿಯನ್ನು ಎಸ್.ಕೆ.ಅರುಣಿ ರಚಿಸಿದ್ದಾರೆ.[೩೪೨] ಇದರಲ್ಲಿ ದಖನಿ ಕಲೆಯ ಅರ್ಥಸ್ವರೂಪ, ವ್ಯಾಪ್ತಿ, ಲಕ್ಷಣಗಳು, ಪ್ರಕಾರಗಳು, ನೆಲೆಗಳು ಹೇಳಲ್ಪಟ್ಟಿವೆ. ಬಿಜಾಪುರ, ಅಹಮ್ಮದನಗರ, ಗೋಲ್ಕೊಂಡ, ಬೀದರ್, ಸುರಪುರ ಚಿತ್ರಕಲೆಯ ಬಗ್ಗೆ ವಿಶೇಷವಾದ ಮಾಹಿತಿ ಕಂಡುಬರುತ್ತದೆ.

ಕ್ರಿ.ಶ. ೨೦೦೨ರಲ್ಲಿ ಹೊರಬಂದ ಕಲಾಪುಸ್ತಕಗಳು ಕೆಳಗಿನಂತಿವೆ. 'ಆಟ-ಮಾಟ' ಕೃತಿಯನ್ನು ಕೆ.ಎಸ್.ಶ್ರೀನಿವಾಸಮೂರ್ತಿಯವರು ರಚನೆ ಮಾಡಿದ್ದು,[೩೪೩] ಕಲಾವಿಮರ್ಶೆಯ ಬಗೆಗಿನ ಲೇಖನಗಳನ್ನು ಹೊಂದಿದೆ. ಕಲೆ, ಕಲಾಕೃತಿ, ಕಲಾವಿದ, ಸಹೃದಯ, ಸಮಾಜ ಇಂತಹ ಸಂಗತಿಗಳ ಕುರಿತು ಈ ಲೇಖನಗಳು ಬೆಳಕು ಬೀರುತ್ತವೆ. 'ಚುಕ್ಕಿ ಚಿತ್ರ ನೀವು ರಚಿಸಬೇಕೆ? ಪುಸ್ತಕವನ್ನು ಬಾಗೂರು ಮಾರ್ಕಂಡೇಯ ರಚನೆ ಮಾಡಿದ್ದಾರೆ.[೩೪೪] ಚಿತ್ರ ರಚನೆಯಲ್ಲಿ ಚುಕ್ಕಿ ಚಿತ್ರ ರಚನೆಯೂ ಒಂದು ಕ್ರಮವಾಗಿದ್ದು, ರೇಖೆಯ ಬದಲಾಗಿ ಬಿಂದುಗಳ ಮೂಲಕವೆ ಚಿತ್ರವನ್ನು ಪೂರ್ಣಗೊಳಿಸಲಾಗುತ್ತದೆ. ಈ ಚುಕ್ಕಿ ಚಿತ್ರ ರಚನೆಗೆ ರೇಖಾಚಿತ್ರಕ್ಕಿಂತ ಭಿನ್ನವಾದ ರಚನಾ ಕ್ರಮವಿದ್ದು, ಅದನ್ನು ಸುಲಭವಾಗಿ ಹೇಗೆ ಕಲಿಯಬೇಕೆಂಬುದನ್ನು ಈ ಪುಸ್ತಕದಲ್ಲಿ ತಿಳಿಸಲಾಗಿದೆ. ಚಿತ್ರಕಲೆಯನ್ನು ಅಭ್ಯಾಸ ಮಾಡುವವರಿಗೆ ಇದೊಂದು ಉಪಯುಕ್ತ ಕೃತಿಯಾಗಿದ್ದು, ಹಲವಾರು ಚಿತ್ರಮಾದರಿಗಳನ್ನು ಉದಾಹರಣೆಯಾಗಿ ಕೊಡಲಾಗಿದೆ. 'ಕಲಾಚರಿತ್ರೆ' ಪುಸ್ತಕವನ್ನು ಎನ್.ಮರಿಶಾಮಾಚಾರರು ಹೊರತಂದಿದ್ದಾರೆ.[೩೪೫] ವಿಶ್ವದ ಅನೇಕ ದೇಶಗಳ ಕಲಾಪರಂಪರೆಗಳ ಕುರಿತು ಈ ಕೃತಿ ಮಾಹಿತಿ ಕೊಡುತ್ತದೆ. ಇಜಿಪ್ತ, ಮೆಸೊಪೊಟೇಮಿಯ, ಗ್ರೀಕ್, ರೋಮ್, ಶ್ರೀಲಂಕಾ, ಭಾರತ, ಇಂಡೋನೇಷಿಯಾ, ಚೀನಾ, ಜಪಾನ್, ಮುಂತಾದ ದೇಶಗಳ ಕಲಾ ಪರಂಪರೆಗಳನ್ನು ಇಲ್ಲಿ ಮುಖ್ಯವಾಗಿ ಹೇಳಲಾಗಿದೆ.

ಕ್ರಿ.ಶ. ೨೦೦೩ರಲ್ಲಿ ಕೆಲವು ಕಲಾಪುಸ್ತಕಗಳು ಹೊರಬಂದಿವೆ. ಮಲೆನಾಡು ಪ್ರದೇಶದಲ್ಲಿ ವಿಶೇಷವಾಗಿ ರಚನೆ ಮಾಡುವ ಜನಪದ ಚಿತ್ರಕಲೆಯಾದ 'ಹಸೆ' ಚಿತ್ರದ ಬಗ್ಗೆ ಬಂದಗದ್ದೆ ರಾಧಾಕೃಷ್ಣ ಚಿಕ್ಕ ಪುಸ್ತಕವನ್ನು ಬರೆದಿದ್ದಾರೆ.[೩೪೬] ಹಸೆ ಚಿತ್ರದ ಸಂಕ್ಷಿಪ್ತ ಇತಿಹಾಸ, ಚಿತ್ರ ರಚನಾಕ್ರಮ, ಪರಿಕರಗಳು, ಪ್ರಕಾರಗಳು, ಮಾಧ್ಯಮಗಳು, ವಸ್ತು ವಿಷಯಗಳು, ನಂಬಿಕೆ, ಆಚರಣೆಗಳಂತಹ ಸಂಗತಿಗಳು ಸಂಕ್ಷಿಪ್ತವಾಗಿ ಹೇಳಲ್ಪಟ್ಟಿವೆ. ಜೊತೆಗೆ ಹಸೆ ಚಿತ್ರದ ಮಾದರಿಗಳನ್ನು ಕೊಡಲಾಗಿದೆ.

---

೩೪೦. ಬಿ.ಎ.ವಿವೇಕರೈ : ಭೂತಾರಾಧನೆಯಲ್ಲಿ ಬಣ್ಣಗಾರಿಕೆ : ಮಂಗಳೂರು ವಿಶ್ವವಿದ್ಯಾಲಯ-೨೦೦೧
೩೪೧. ವ್ಹಿ.ಜಿ.ಅಂದಾನಿ : ಕಲಾಸ್ವರೂಪ ಮತ್ತು ಪ್ರಚಾರ ಕಲೆ : ಐಡಿಯಲ್ ಫೈನ್ ಆರ್ಟ ಸಂಸ್ಥೆ, ಗುಲಬರ್ಗಾ-೨೦೦೧
೩೪೨. ಎಸ್.ಕೆ.ಅರುಣಿ : ದಖನಿ ಚಿತ್ರಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೧
೩೪೩. ಕೆ.ಎಸ್.ಶ್ರೀನಿವಾಸಮೂರ್ತಿ : ಆಟ-ಮಾಟ : ಅಭಿನವ ಪ್ರಕಾಶನ, ಬೆಂಗಳೂರು-೨೦೦೨
೩೪೪. ಬಾಗೂರು ಮಾರ್ಕಂಡೇಯ : ಚುಕ್ಕಿ ಚಿತ್ರ ನೀವು ರಚಿಸಬೇಕೆ? : ಸ್ವಪ್ನ ಬುಕ್ ಹೌಸ, ಬೆಂಗಳೂರು-೨೦೦೨
೩೪೫. ಎನ್.ಮರಿಶಾಮಾಚಾರ್ : ಕಲಾಚರಿತ್ರೆ : ಶಿಲ್ಪಕಲಾ ಅಕಾಡೆಮಿ, ಬೆಂಗಳೂರು-೨೦೦೨
೩೪೬. ಬಂದಗದ್ದೆ ರಾಧಾಕೃಷ್ಣ : ಹಸೆ : ಹೊಂಬಾಳೆ ಪ್ರಕಾಶನ, ಕೆಳದಿ, ಸಾಗರ-೨೦೦೩

ಕ್ರಿ.ಶ. ೨೦೦೩ರಲ್ಲಿ ಸಂಶೋಧಕರು, ಕಲಾವಿಮರ್ಶಕರು ಆದಂತಹ ಡಾ.ಬಿ.ಕೆ.ಹಿರೇಮಠ ಅವರಿಗೆ ಅಭಿನಂದನಾ ಸಮಾರಂಭವನ್ನು ಏರ್ಪಡಿಸಿ, ಎರಡು ಗ್ರಂಥಗಳನ್ನು ಸವಿನೆನಪಿಗಾಗಿ ಹೊರತರಲಾಗಿದೆ. 'ನಿಜದ ನೆಲೆ' ಕೃತಿಯನ್ನು ಡಾ.ಎಸ್.ಸಿ.ಪಾಟೀಲ ಹಾಗೂ ಸತ್ಯಾನಂದ ಪಾತ್ರೋಟ ಸಂಪಾದನೆ ಮಾಡಿದ್ದಾರೆ.[೩೪೭] 'ಸೃಷ್ಟಿ' ಬಿ.ಕೆ.ಹಿರೇಮಠರು ವಿವಿಧ ಸಂದರ್ಭಗಳಲ್ಲಿ ಬರೆದ ಲೇಖನಗಳ ಸಂಗ್ರಹವಾಗಿದೆ.[೩೪೮] ಇವೆರಡೂ ಚಿತ್ರಕಲಾ ಸಾಹಿತ್ಯಕ್ಕೆ ಮೌಲಿಕವಾದ ಕೃತಿಗಳಾಗಿವೆ ಎನ್ನಬಹುದು.

'ನಿಜದ ನೆಲೆ' ಕೃತಿಯಲ್ಲಿ ಸುಮಾರು ನೂರಕ್ಕಿಂತ ಅಧಿಕ ಕಲಾಲೇಖನಗಳನ್ನು ಸಂಗ್ರಹಿಸಲಾಗಿದೆ. ಕಲೆಯ ವಿವಿಧ ಪ್ರಕಾರಗಳಿಗೆ ಸಂಬಂಧಿಸಿದ ಈ ಲೇಖನಗಳನ್ನು ನಾಡಿನ ಹೆಸರಾಂತ ಲೇಖಕರು, ವಿದ್ವಾಂಸರು, ಸಂಶೋಧಕರು ಬರೆದಿರುವುದು ಗಮನಾರ್ಹ ಅಂಶವಾಗಿದೆ. ಪ್ರಾಗಿತಿಹಾಸ ಕಾಲದ ಚಿತ್ರಕಲೆಯಿಂದ ತೊಡಗಿ ಪ್ರಾಚೀನ ಭಿತ್ತಿಚಿತ್ರಕಲೆ, ಕಿರುರೂಪ ಚಿತ್ರಕಲೆ, ಹಸ್ತಪ್ರತಿ ಚಿತ್ರಕಲೆ, ಗಾಜಿನ ಚಿತ್ರಕಲೆ, ಆಧುನಿಕ ಚಿತ್ರಕಲೆ, ಕಲೆ ಮತ್ತು ಸಮಾಜ, ಕಲೆ ಮತ್ತು ಸಾಹಿತ್ಯ, ಹೀಗೆ ಹಲವಾರು ಸಂಗತಿಗಳ ಬಗ್ಗೆ ಇಲ್ಲಿನ ಲೇಖನಗಳು ಬೆಳಕು ಚೆಲ್ಲುತ್ತವೆ. 'ಸೃಷ್ಟಿ' ಕೃತಿಯಲ್ಲಿ ಸಾಹಿತ್ಯ, ಸಂಗೀತ, ಚಿತ್ರ, ಶಿಲ್ಪ ಮತ್ತು ಶಾಸನಗಳಿಗೆ ಸಂಬಂಧಿಸಿದ ಲೇಖನಗಳಿವೆ. ಚಿತ್ರಕಲೆಯ ಲೇಖನಗಳು, ಹಸ್ತಪ್ರತಿಚಿತ್ರಕಲೆ, ಕಿರುರೂಪಚಿತ್ರಕಲೆ, ಆಧುನಿಕಚಿತ್ರಕಲೆ, ಭಿತ್ತಿಚಿತ್ರಕಲೆ, ಚಿತ್ರಕಲಾಪರಂಪರೆ, ಸಾಹಿತ್ಯದಲ್ಲಿಚಿತ್ರಕಲೆ, ಮುಂತಾದ ಅಂಶಗಳ ಬಗ್ಗೆ ಬೆಳಕು ಬೀರುತ್ತವೆ. 'ನಿಸರ್ಗ' ಕೃತಿಯನ್ನು ಫ.ಗು.ಸಿದ್ದಾಪುರ ಸಂಪಾದಿಸಿದ್ದು,[೩೪೯] ಕಲೆ, ಕಲಾವಿದರು, ಕಲಾಪ್ರಕಾರಗಳ ಬಗ್ಗೆ ಲೇಖನಗಳಿವೆ.

ಕ್ರಿ.ಶ. ೨೦೦೪ರಲ್ಲಿ ಕೆಲವು ಕಲಾಪುಸ್ತಕಗಳು ಪ್ರಕಟಗೊಂಡಿವೆ. 'ಕಲಾ ಮನೋವಿಜ್ಞಾನ' ಕೃತಿಯನ್ನು ಎನ್.ವಿಶ್ವರೂಪಾಚಾರ್ ಬರೆದಿದ್ದಾರೆ.[೩೫೦] ಮಕ್ಕಳ ವಯೋಮಾನಕ್ಕನುಗುಣವಾಗಿ ಅವರ ವಿಚಾರ ಮತ್ತು ಕಲ್ಪನೆಗಳು ಬದಲಾಗುವಂತೆ ಅವರು ಚಿತ್ರಿಸುವ ಚಿತ್ರಗಳೂ ಬದಲಾಗುತ್ತವೆ. ಚಿತ್ರದ ಆಕಾರ, ಸಂಯೋಜನಾ ರೀತಿ, ಬಣ್ಣದ ಲೇಪನಗಳು, ಅವರ ಮಾನಸಿಕ ಸ್ಥಿತಿಯನ್ನು ಪ್ರತಿಬಿಂಬಿಸುತ್ತವೆ ಎಂಬಂತಹ ಸಂಗತಿಗಳು ವ್ಯಕ್ತಗೊಂಡಿವೆ. ಮುಮ್ಮಡಿ ಕೃಷ್ಣರಾಜ ಒಡೆಯರ 'ಸೌಗಂಧಿಕಾ ಪರಿಣಯ' ಪ್ರಾಚೀನ ಗ್ರಂಥವನ್ನು ಎಚ್.ಎಸ್.ಶ್ರೀಮತಿ ಕನ್ನಡಕ್ಕೆ ಅನುವಾದ ಮಾಡಿದ್ದಾರೆ.[೩೫೧] ಒಂದು ಕಥೆಯನ್ನು ಆಧರಿಸಿದ ಬೃಹತ್ ಗ್ರಂಥವಾಗಿದ್ದು, ಇದರಲ್ಲಿ ಸಾಂದರ್ಭಿಕವಾಗಿ ರಚಿಸಲಾದ ಹಸ್ತಪ್ರತಿ ಚಿತ್ರಗಳಿವೆ. ಸುಮಾರು ಮೂರುನೂರಕ್ಕೂ ಹೆಚ್ಚಿನ ಚಿತ್ರಗಳನ್ನು ಹೊಂದಿದ ಈ ಕೃತಿಯಲ್ಲಿ ಸಾಹಿತ್ಯಕ ವಿವರಣೆಗೆ ಅನುಸಾರವಾಗಿ ಚಿತ್ರಗಳನ್ನು ರಚಿಸಲಾಗಿದೆ.

ಈ ಮೇಲಿನ ಕೃತಿಗಳಲ್ಲದೆ ಲಲಿತಕಲಾ ಅಕಾಡೆಮಿಯು ಡಾ.ಎಸ್.ಸಿ.ಪಾಟೀಲರ ಸಂಪಾದಕತ್ವದಲ್ಲಿ ಜನಪದ ಕಲಾಪ್ರಕಾರಗಳಿಗೆ ಸಂಬಂಧಿಸಿದ ಒಂಭತ್ತು ಪುಸ್ತಕಗಳನ್ನು ಪ್ರಕಟಿಸಿದೆ. 'ನಾಗಾರಾಧನೆ ಮತ್ತು ಚಿತ್ರಕಲೆ' ಎಂಬ ಕೃತಿಯನ್ನು ಉಪಾಧ್ಯಾಯ ಮೂಡುಬೆಳ್ಳ ಅವರು ಬರೆದಿದ್ದಾರೆ.[೩೫೨] ಇದರಲ್ಲಿ ನಾಗಾರಾಧನೆಯ ಪರಿಕಲ್ಪನೆ, ಸಂದರ್ಭ, ಆಚರಣೆ, ನಂಬಿಕೆ, ಇವುಗಳ ಜೊತೆಗೆ ಈ ಆಚರಣೆಯಲ್ಲಿ ರಚಿಸಲಾಗುವ ಚಿತ್ರಕಲಾ ವಿನ್ಯಾಸಗಳು ಮತ್ತು ಬಣ್ಣಗಾರಿಕೆಯ ಬಗ್ಗೆ ಇಲ್ಲಿ ತಿಳಿಸಲಾಗಿದೆ.

---

೩೪೭. ಡಾ.ಎಸ್.ಸಿ.ಪಾಟೀಲ, ಸತ್ಯಾನಂದ ಪಾತ್ರೋಟ : ನಿಜದ ನೆಲೆ : ಬಿ.ಕೆ.ಹಿರೇಮಠ : ಅಭಿನಂದನಾ ಸಮಿತಿ, ಬಾಗಲಕೋಟ-೨೦೦೩

೩೪೮. ಡಾ.ಬಿ.ಕೆ.ಹಿರೇಮಠ : ಸೃಷ್ಟಿ : ಬಿ.ಕೆ.ಹಿರೇಮಠ ಅಭಿನಂದನಾ ಸಮಿತಿ, ಬಾಗಲಕೋಟ-೨೦೦೩

೩೪೯. ಫ.ಗು.ಸಿದ್ದಾಪುರ : (ಸಂ) : ನಿಸರ್ಗ : ಚಿತ್ರಕಲಾ ಶಿಕ್ಷಕರ ಸಂಘ, ಬಿಜಾಪುರ-೨೦೦೩

೩೫೦. ಎನ್.ವಿಶ್ವರೂಪಾಚಾರ್ : ಕಲಾ ಮನೋವಿಜ್ಞಾನ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೨೦೦೪

೩೫೧. ಎಚ್.ಎಸ.ಶ್ರೀಮತಿ : (ಅನು) ಸೌಗಂಧಿಕಾ ಪರಿಣಯ : ಸಾಹಿತ್ಯ ಅಕಾಡೆಮಿ, ನವದೆಹಲಿ-೨೦೦೪

೩೫೨. ಉಪಾಧ್ಯಾಯ ಮೂಡುಬೆಳ್ಳ : ನಾಗಾರಾಧನೆ ಮತ್ತು ಚಿತ್ರಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೪

'ಚಿತ್ತಾರದ ಗೊಂಬೆ' ಕೃತಿಯನ್ನು ಡಾ.ಸಿ.ಗೋವಿಂದರಾಜು ಬರೆದಿದ್ದಾರೆ.[೩೫೩] ತೊಗಲುಗೊಂಬೆ ಚಿತ್ರಕಲೆಗೆ ಸಂಬಂಧಿಸಿದ ಈ ಪುಸ್ತಕದಲ್ಲಿ ತೊಗಲು ಗೊಂಬೆಯ ರಚನಾಕ್ರಮ, ಪರಿಕರಗಳು, ಬಣ್ಣಗಾರಿಕೆ, ಆಟದ ವಿಧಾನ ಮುಂತಾದ ಅಂಶಗಳನ್ನು ಸ್ಥೂಲವಾಗಿ ಹೇಳಲಾಗಿದೆ. 'ರಂಗೋಲಿ ಚಿತ್ರಕಲೆ' ಪುಸ್ತಕವನ್ನು ಡಾ.ಎಸ್.ಸಿ.ಪಾಟೀಲ ಬರೆದಿದ್ದಾರೆ.[೩೫೪] ರಂಗೋಲಿ ಕಲೆಯ ಪರಂಪರೆ, ರಚನಾಕ್ರಮ, ಪ್ರಕಾರಗಳು, ನಂಬಿಕೆ, ಆಚರಣೆಗಳು, ಸಂದರ್ಭ ಮತ್ತು ಹಾಡುಗಳನ್ನು ಕುರಿತು ಈ ಕೃತಿಯಲ್ಲಿ ತಿಳಿಸಲಾಗಿದೆ. 'ಕಸೂತಿ ಚಿತ್ರಕಲೆ' ಪುಸ್ತಕವನ್ನು ಮಹಾದೇವ ಜಗತಾಪ ಬರೆದಿದ್ದಾರೆ.[೩೫೫] ಕಸೂತಿಯ ಪ್ರಾಚೀನತೆ, ಐತಿಹಾಸಿಕ ಹಿನ್ನೆಲೆ, ಪ್ರಕಾರಗಳು, ರಚನಾಕ್ರಮ, ಮಾಧ್ಯಮ ಮತ್ತು ವೈವಿಧ್ಯತೆಯನ್ನು ಕುರಿತು ಹೇಳಲಾಗಿದೆ. 'ಶೀಗಿ ಚಿತ್ರಕಲೆ' ಕೃತಿಯನ್ನು ಡಾ.ಯಾದಪ್ಪ ಪರದೇಶಿ ಬರೆದಿದ್ದಾರೆ.[೩೫೬] ಶೀಗಿ ಹುಣ್ಣಿಮೆಯ ಆಚರಣೆ. ಹಾಡುಗಳು, ಚಿತ್ರಬರೆಯುವ ಪರಿಕರಗಳು, ರಚನಾಕ್ರಮ, ಸಂದರ್ಭ, ನಂಬಿಕೆ, ವರ್ಣವಿನ್ಯಾಸ ಮುಂತಾದ ಸಂಗತಿಗಳನ್ನು ಈ ಕೃತಿಯಲ್ಲಿ ವಿವೇಚಿಸಲಾಗಿದೆ.

'ಬೆಳದಿಂಗಳ ಚಿತ್ರಕಲೆ' ಕೃತಿಯನ್ನು ಆನಂದ ಕೆ.ಪೂಜಾರ ಬರೆದಿದ್ದಾರೆ.[೩೫೭] ಬೆಳದಿಂಗಳ ಚಿತ್ರಬಿಡಿಸುವ ಸಂದರ್ಭ, ಪರಿಕರಗಳು, ರಚನಾಕ್ರಮ, ವಸ್ತುವಿಷಯ, ವೈವಿಧ್ಯತೆ, ಹಾಡುಗಳು ಮುಂತಾದ ಸಂಗತಿಗಳು ಇಲ್ಲಿ ಹೇಳಲ್ಪಟ್ಟಿವೆ. ಅದರಂತೆ 'ಹಚ್ಚೆ ಚಿತ್ರಕಲೆ' ಕೃತಿಯನ್ನು ಡಾ.ಎಸ್.ಸಿ.ಪಾಟೀಲರು ಬರೆದಿದ್ದು,[೩೫೮] ಇದರಲ್ಲಿ ಹಚ್ಚೆ ಕಲೆಯ ಪ್ರಕಾರ, ರಚನಾಕ್ರಮ, ಪರಿಕರಗಳು, ವೈವಿಧ್ಯತೆ, ನಂಬಿಕೆ, ಹಾಡುಗಳು, ಪ್ರಾದೇಶಿಕ ಭಿನ್ನತೆ, ವಸ್ತುವಿಷಯ, ಮುಂತಾದ ಅಂಶಗಳು ಹೇಳಲ್ಪಟ್ಟಿವೆ. 'ಬಿದರಿ ಚಿತ್ರಕಲೆ' ಕೃತಿಯನ್ನು ವಿ.ಎಮ್.ಬಾಗಾಯತ್ ಬರೆದಿದ್ದಾರೆ.[೩೫೯] ಬಿದರಿ ಚಿತ್ರಕಲೆಯ ವೈಶಿಷ್ಟ್ಯ, ಲಕ್ಷಣಗಳು, ವ್ಯಾಪ್ತಿ, ನೆಲೆ, ರಚನಾಕ್ರಮ, ಪರಿಕರಗಳು, ವಸ್ತುವಿಷಯ, ಮಾಧ್ಯಮಗಳು, ಕಲಾವಿದರು ಮುಂತಾದ ಸಂಗತಿಗಳು ಈ ಕೃತಿಯಲ್ಲಿ ಹೇಳಲ್ಪಟ್ಟಿವೆ. 'ಯಕ್ಷಗಾನ ಮತ್ತು ಚಿತ್ರಕಲೆ' ಕೃತಿಯನ್ನು ಉಪಾಧ್ಯಾಯ ಮೂಡಬೆಳ್ಳ ಬರೆದಿದ್ದಾರೆ.[೩೬೦] ಯಕ್ಷಗಾನದ ಮುಖವರ್ಣಿಕೆ, ಆಭರಣ, ವೇಷ-ಭೂಷಣ, ರಂಗಸಜ್ಜಿಕೆ, ಇಲ್ಲೆಲ್ಲ ಬರುವ ಚಿತ್ರಕಲಾ ಸಂಗತಿಗಳ ಬಗ್ಗೆ ಈ ಕೃತಿ ತಿಳಿಸಿಕೊಡುತ್ತದೆ.

ಕ್ರಿ.ಶ. ೨೦೦೫ರಲ್ಲಿ ಹೆಚ್ಚಿನ ಕಲಾ ಪುಸ್ತಕಗಳು ಪ್ರಕಟಗೊಂಡಿಲ್ಲ. 'ಹಸೆ ಚಿತ್ತಾರ' ಕೃತಿಯನ್ನು ಶಾಲಿನಿ ರಘುನಾಥ ಬರೆದಿದ್ದಾರೆ.[೩೬೧] ಹಸೆ ಚಿತ್ರಗಳ ರಚನಾಕ್ರಮ, ಪರಿಕರಗಳು, ವಸ್ತುವಿಷಯ, ವೈವಿಧ್ಯತೆ, ಸಂದರ್ಭ, ಹಸೆ ಕಲಾವಿದರು ಮುಂತಾದ ಸಂಗತಿಗಳ ಜೊತೆಗೆ ಕೆಲವು ಹಸೆ ಚಿತ್ರಗಳ ಮಾದರಿಗಳನ್ನು ಕೊಡಲಾಗಿದೆ. ಕ್ರಿ.ಶ. ೨೦೦೬ರಲ್ಲಿ ಎಲ್.ಶಿವಲಿಂಗಪ್ಪನವರ 'ಕರ್ನಾಟಕದಲ್ಲಿ ಚಿತ್ರಕಲಾ ಬೆಳವಣಿಗೆ ಒಂದು ಸಮೀಕ್ಷೆ' ಪ್ರಕಟಗೊಂಡಿದೆ.[೩೬೨] ಪ್ರಾಗಿತಿಹಾಸ ಚಿತ್ರಗಳು, ಭಿತ್ತಿಚಿತ್ರಗಳು, ಕಿರುರೂಪ ಚಿತ್ರಗಳು, ಜನಪದ ಚಿತ್ರಗಳು, ವಿಜಯನಗರ, ಮೈಸೂರು, ಸುರಪುರ ಚಿತ್ರಶೈಲಿಗಳು, ಕಲಾಸಾಹಿತ್ಯ, ಸ್ವಾತಂತ್ರೋತ್ತರ ಕರ್ನಾಟಕದ ಕಲೆ ಮುಂತಾದ ಸಂಗತಿಗಳು ಇಲ್ಲಿ ಹೇಳಲ್ಪಟ್ಟಿವೆ.

---

೩೫೩. ಡಾ.ಸಿ.ಗೋವಿಂದರಾಜು : ಚಿತ್ತಾರದ ಗೊಂಬೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೪

೩೫೪. ಡಾ.ಎಸ್.ಸಿ.ಪಾಟೀಲ : ರಂಗೋಲಿಚಿತ್ರಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೪

೩೫೫. ಮಹಾದೇವ ಜಗತಾಪ : ಕಸೂತಿ ಚಿತ್ರಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೪

೩೫೬. ಡಾ.ಯಾದಪ್ಪ ಪರದೇಶಿ : ಶೀಗಿ ಚಿತ್ರಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೪

೩೫೭. ಆನಂದ ಕೆ.ಪೂಜಾರ: ಬೆಳದಿಂಗಳ ಚಿತ್ರಕಲೆ: ಲಲಿತಕಲಾ ಅಕಾಡೆಮಿ ಬೆಂಗಳೂರು-೨೦೦೪

೩೫೮. ಡಾ.ಎಸ್.ಸಿ.ಪಾಟೀಲ : ಹಚ್ಚೆ ಚಿತ್ರಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೪

೩೫೯. ವ್ಹಿ.ಎಮ್.ಬಾಗಾಯತ್ : ಬಿದರಿ ಚಿತ್ರಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೪

೩೬೦. ಉಪಾಧ್ಯಾಯ ಮೂಡುಬೆಳ್ಳ : ಯಕ್ಷಗಾನ ಮತ್ತು ಚಿತ್ರಕಲೆ : ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೪

೩೬೧. ಶಾಲಿನಿ ರಘುನಾಥ : ಹಸೆಚಿತ್ತಾರ : ವೈದೇಹಿ ಪ್ರಕಾಶನ ಬಸವನಗುಡಿ, ಬೆಂಗಳೂರು-೨೦೦೫

೩೬೨. ಎಲ್.ಶಿವಲಿಂಗಪ್ಪ : ಕರ್ನಾಟಕದಲ್ಲಿ ಚಿತ್ರಕಲಾ ಬೆಳವಣಿಗೆ ಒಂದುಸಮೀಕ್ಷೆ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೨೦೦೬

ಹೀಗೆ ಕ್ರಿ.ಶ. ೨೦೦೬ರ ವರೆಗಿನ ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಐತಿಹಾಸಿಕ ಹಿನ್ನೆಲೆ ಮತ್ತು ಕ್ರಮಾನುಗತ ಇತಿಹಾಸವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಕರ್ನಾಟಕ ಚಿತ್ರಕಲಾ ಸಾಹಿತ್ಯದ ಇತಿಹಾಸವನ್ನು ಗಮನಿಸಿದಾಗ ಕುತೂಹಲ, ವೈವಿಧ್ಯತೆಯ ಅಂಶಗಳು ಕಂಡುಬರುವವು.

ಆರಂಭಿಕ ಹಂತದಲ್ಲಿ ಪ್ರಾಗಿತಿಹಾಸ ಕಾಲದ ಚಿತ್ರಗಳಿಂದ ಆರಂಭಗೊಂಡ ಚಿತ್ರಕಲಾ ಇತಿಹಾಸವು ನಂತರದಲ್ಲಿ ಭಾಷೆಯ ಮೂಲಕ ಲಿಪಿ ಹಂತವನ್ನು ತಲುಪಿದಂತೆ ಕಂಡುಬರುವುದು. ಲಿಪಿ ಉಗಮಿಸಿದ ನಂತರದ ದಿನಗಳಲ್ಲಿ ಶಾಸನ ಬರಹಗಳಿಂದ ಚಿತ್ರಕಲಾ ಸಾಹಿತ್ಯದ ಸ್ವರೂಪವನ್ನು ನಿರ್ಧರಿಸಬೇಕಾಗುತ್ತದೆ. ಕ್ರಿ.ಶ. ೮ನೇ ಶತಮಾನದ ಕವಿರಾಜಮಾರ್ಗದ ವರೆಗೂ ಬಹುಮಟ್ಟಿಗೆ ಇದೆ ಪರಿಸ್ಥಿತಿ ಮುಂದುವರೆದಂತೆ ಕಂಡುಬರುತ್ತದೆ.

'ಕವಿರಾಜಮಾರ್ಗ', ಸಾಹಿತ್ಯ ಕೃತಿಯ ನಂತರದಲ್ಲಿ ಚಿತ್ರಕಲಾ ಸಾಹಿತ್ಯವನ್ನು ಕರ್ನಾಟಕದಲ್ಲಿ ರೂಪಿಸುವ ಕ್ರಮವು ಮತ್ತೊಂದು ಬಗೆಯಲ್ಲಿ ಕವಲೊಡೆದದ್ದು ಕಂಡುಬರುತ್ತದೆ. ಇದುವರೆಗೆ ಶಾಸನ ಬರಹಗಳ ಆಧಾರದ ಮೇಲೆ ಚಿತ್ರಕಲಾ ಸಾಹಿತ್ಯವನ್ನು ರೂಪಿಸುವ ಅನಿವಾರ್ಯತೆ ಇದ್ದರೆ, ಕವಿರಾಜಮಾರ್ಗದ ನಂತರದಿಂದ ಶಾಸನ ಬರಹಗಳ ಜೊತೆಗೆ ಬೇರೆ ಬೇರೆ ಸಾಹಿತ್ಯ ಕೃತಿಗಳಲ್ಲಿ ಸಾಂದರ್ಭಿಕವಾಗಿ ಉಲ್ಲೇಖಗೊಂಡ ಚಿತ್ರಕಲಾ ಸಂಗತಿಗಳು ಚಿತ್ರಕಲಾ ಇತಿಹಾಸ ಕಟ್ಟುವಲ್ಲಿ ಮತ್ತಷ್ಟು ಗಟ್ಟಿತನವನ್ನು ಒದಗಿಸಿದಂತೆ ಗೋಚರಿಸುತ್ತದೆ. ಕಾರಣ ಅಲ್ಲಿಯವರೆಗೂ ಪ್ರತ್ಯೇಕ ಚಿತ್ರಕಲಾ ಸಾಹಿತ್ಯ ಕೃತಿಗಳು ಕನ್ನಡದಲ್ಲಿ ರಚನೆಯಾಗದೆ ಇರುವುದಾಗಿದೆ.

ಕ್ರಿ. ಶ. ೧೨ನೇ ಶತಮಾನದ ವಚನಸಾಹಿತ್ಯದ ಕಾಲದಲ್ಲಿ ಚಿತ್ರಕಲಾ ಸಾಹಿತ್ಯದ ಇತಿಹಾಸ ಕಟ್ಟಿಕೊಡುವಲ್ಲಿ ವಚನಗಳಲ್ಲದೆ ಅನೇಕ ಸಾಹಿತ್ಯ ಕೃತಿಗಳು ಲಭ್ಯವಾಗುತ್ತವೆ. ವಿಜಯನಗರ ಕಾಲದಲ್ಲಿ ಹಿಂದೂ ಸಾಹಿತ್ಯ ಕೃತಿಗಳಲ್ಲದೆ ಸಮಕಾಲೀನ ಮುಸ್ಲಿಂ ದೊರೆಗಳ ಪ್ರೋತ್ಸಾಹದಲ್ಲಿ ರಚನೆಯಾದ ಸಾಹಿತ್ಯ ಕೃತಿಗಳಲ್ಲಿನ ಚಿತ್ರಕಲಾ ಅಂಶಗಳೂ ಸಹಿತ ಈ ಕಾಲದ ಚಿತ್ರಕಲಾ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಸಹಕಾರಿಯಾಗಿವೆ. ಕ್ರಿ.ಶ. ೧೮ನೇ ಶತಮನದವರೆಗೂ ಇದೆ ಪರಿಸ್ಥಿತಿ ಮುಂದುವರೆದಿದ್ದು, ೧೮ನೇ ಶತಮಾನದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಶ್ರೀತತ್ವನಿಧಿ, ಸೌಗಂಧಿಕಾ ಪರಿಣಯ, ಸಚಿತ್ರ ಭಾರತದಂತಹ ಸಾಹಿತ್ಯ ಕೃತಿಗಳು ಹೆಚ್ಚಿನ ಚಿತ್ರರಚನೆಯನ್ನು ಒಳಗೊಳ್ಳುವ ಮೂಲಕ ಪ್ರತ್ಯೇಕ ಚಿತ್ರಕಲಾ ಸಾಹಿತ್ಯಕೃತಿಗಳಂತೆ ಕಂಡುಬರುತ್ತವೆ. ಆದರೂ ಸಹಿತ ಚಿತ್ರಕಲೆಗಾಗಿ ರಚನೆಯಾದ ಸಾಹಿತ್ಯ ಕೃತಿಗಳು ಇವಾಗಿರದೆ ಸಾಂದರ್ಭಿಕ ಚಿತ್ರಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಹೊಂದಿದ ಸಾಹಿತ್ಯ ಕೃತಿಗಳಾಗಿವೆ.

ಕರ್ನಾಟಕದಲ್ಲಿ ಚಿತ್ರಕಲೆ ಅಥವಾ ಕಲಾಪ್ರಕಾರಕ್ಕಾಗಿಯೆ ಪ್ರತ್ಯೇಕ ಸಾಹಿತ್ಯ ಕೃತಿ ರಚನೆಯಾಗಿದ್ದು, ಕ್ರಿ.ಶ. ೧೮ನೇ ಶತಮಾನದ ಕೊನೆಯ ಭಾಗದಲ್ಲಿ ಎನ್ನಬಹುದು. ಈ ಸಂದರ್ಭದಲ್ಲಿ 'ಮೆಡೋಸ್ ಟೇಲರ್' ಎಂಬ ಬ್ರಿಟಿಷ್ ಅಧಿಕಾರಿ 'ಆರ್ಕಿಟೆಕ್ಚರ್ ಆಫ್ ಬಿಜಾಪೂರ್' ಎಂಬ ಇಂಗ್ಲೀಷ್ ಕೃತಿಯನ್ನು ರಚನೆ ಮಾಡಿದ್ದಾರೆ. ಇದರಲ್ಲಿ ಬಿಜಾಪೂರದಲ್ಲಿನ ವಾಸ್ತುಶಿಲ್ಪ ಕಲೆಗಳನ್ನು ಕುರಿತು ಹೇಳುವಾಗ ಅಲ್ಲಿನ ಅಸರ್‌ಮಹಲ್ ಮತ್ತು ಅಲ್ಲಿನ ಭಿತ್ತಿಚಿತ್ರಗಳ ವಿವರ ಬರುತ್ತದೆ.

ನಂತರದ ದಿನಗಳಲ್ಲಿ ಅನೇಕ ವಿದ್ವಾಂಸರು ಇಂಗ್ಲೀಷನಲ್ಲಿ ಭಾರತೀಯ ಚಿತ್ರಕಲೆ ಮತ್ತು ಡೆಕ್ಕನ್ ಚಿತ್ರಕಲೆಯ ಬಗ್ಗೆ ಬರೆಯುವಾಗ ಕರ್ನಾಟಕದ ಚಿತ್ರಕಲಾ ಪರಂಪರೆಯನ್ನು ಪ್ರಸ್ತಾಪಿಸಿರುವುದು ಕಂಡುಬರುತ್ತದೆ. ಕರ್ನಾಟಕದಲ್ಲಿ ಕನ್ನಡದಲ್ಲಿ ಪ್ರತ್ಯೇಕ ಚಿತ್ರಕಲಾ ಸಾಹಿತ್ಯಕೃತಿಗಳು ರಚನೆಗೊಳ್ಳತೊಡಗಿದ್ದು,

ಬಹುಶ ಕ್ರಿ.ಶ.೨೦ನೇ ಶತಮಾನದಿಂದ ಎಂದು ಹೇಳಬಹುದು. ಕ್ರಿ.ಶ.೧೯೨೫ರಲ್ಲಿ ಜಿ.ಲಿಂಗಣ್ಣಯ್ಯ ಎಂಬವರು 'ನೀರುಬಣ್ಣದಿಂದ ಚಿತ್ರ ಬರೆಯುವ ಕ್ರಮ' ಎಂಬ ಪುಸ್ತಕ ಬರೆದಿರುವುದು ಕನ್ನಡದಲ್ಲಿ ಪ್ರಥಮ ಪ್ರಯತ್ನ ಎನ್ನಬಹುದು. ಅಲ್ಲಿಂದ ಮುಂದೆ ಶಿವರಾಮ ಕಾರಂತ, ಸಾಲೆತ್ತೂರೆ, ವಿ.ಸೀತಾರಾಮಯ್ಯ, ಅ.ನ.ಕೃಷ್ಣರಾಯ, ಶಿವರಾಮಮೂರ್ತಿ, ಕಮಲದಾನಿ ಗುರುರಾಯ, ಪಿ.ಆರ್.ತಿಪ್ಪೇಸ್ವಾಮಿ, ಬಿ.ವಿ.ಕೆ.ಶಾಸ್ತ್ರಿ ಮುಂತಾದವರು ಕರ್ನಾಟಕದ ಚಿತ್ರಕಲಾ ಸಾಹಿತ್ಯವನ್ನು ಬೆಳೆಸಿದವರಲ್ಲಿ ಪ್ರಮುಖರಾಗಿದ್ದಾರೆ.

ಸ್ವಾತಂತ್ರ್ಯೋತ್ತರ ಕಾಲದ ಚಿತ್ರಕಲಾ ಸಾಹಿತ್ಯವು ವೈವಿಧ್ಯತೆಯಿಂದ ಬೆಳೆಯಿತು. ಈ ಸಂದರ್ಭದಲ್ಲಿ ಚಿತ್ರಕಲೆಗಾಗಿ ಪ್ರತ್ಯೇಕ ಪುಸ್ತಕಗಳು ಮತ್ತು ಲೇಖನಗಳನ್ನು ಬರೆದು ಪ್ರಕಟಿಸಲಾಯಿತು. ಇದುವರೆಗಿನ ಚಿತ್ರಕಲಾ ಸಾಹಿತ್ಯವನ್ನು ಬೇರೆ ಗ್ರಂಥಗಳಲ್ಲಿನ ಸಾಂದರ್ಭಿಕ ವಿವರಗಳನ್ನು ಬಳಸಿಕೊಂಡು ರೂಪಿಸುವ ಅನಿವಾರ್ಯತೆ ಇದ್ದರೆ ಈ ಹಂತದಲ್ಲಿ ಚಿತ್ರಕಲೆಗೆ ಪ್ರತ್ಯೇಕ ಸಾಹಿತ್ಯ ರಚನೆಗೊಳ್ಳತೊಡಗಿತು.

ಕ್ರಿ.ಶ. ೧೯೬೦ ರಿಂದೀಚೆಗೆ ಕನ್ನಡದಲ್ಲಿ ಹೆಚ್ಚಿನ ಕಲಾಪುಸ್ತಕಗಳು ಬರತೊಡಗಿದವು. ಈ ಹಂತದಲ್ಲಿ ಎನ್.ಮರಿಶಾಮಾಚಾರ್, ಅ.ಲ.ನರಸಿಂಹನ್, ಡಾ.ಎಸ್.ಸಿ.ಪಾಟೀಲ, ಡಿ.ಎ.ಉಪಾಧ್ಯಾಯ ಮುಂತಾದವರು ಕಲೆಯ ಕುರಿತು ಬರೆಯತೊಡಗಿದರು. ಮುಂದೆ ಎಪ್ಪತ್ತರಿಂದ ಎಂಭತ್ತರ ದಶಕದವರೆಗಿನ ಅವಧಿಯಲ್ಲಿ ವಿಮರ್ಶಾತ್ಮಕ ಬರಹಗಳು ಕನ್ನಡದ ಕಲಾವಲಯದಲ್ಲಿ ಕಾಣಿಸಿಕೊಳ್ಳತೊಡಗಿದವು. ಈ ಸಂದರ್ಭದಲ್ಲಿ ಕೆ.ವಿ.ಸುಬ್ರಹ್ಮಣ್ಯ, ಚಿ.ಸು.ಕೃಷ್ಣ ಶೆಟ್ಟಿ, ಎಚ್.ಎ.ಅನಿಲಕುಮಾರ, ರವಿಕುಮಾರ ಕಾಶಿ, ಕೆ.ಎಸ್.ಶ್ರೀನಿವಾಸಮೂರ್ತಿ, ಮುಂತಾದವರು ಪ್ರಮುಖರಾಗಿದ್ದಾರೆ. ತೊಂಭತ್ತರ ದಶಕದ ಹೊತ್ತಿಗೆ ಚಿತ್ರಕಲೆಯಲ್ಲಿಯೂ ಸಂಶೋಧನೆಗಳು ಆರಂಭಗೊಂಡವು. ಇಲ್ಲಿಂದ ಸಂಶೋಧನಾ ಪ್ರಬಂಧಗಳ ಒಂದು ಪರಂಪರೆಯೆ ತೊಡಗಿಕೊಂಡಿತು. ಪಿಎಚ್.ಡಿ.,ಎಂ.ಫಿಲ್. ಡಿಲಿಟ್ ಪದವಿಗಳಲ್ಲದೆ ಸ್ನಾತಕೋತ್ತರ ಮತ್ತು ಸ್ನಾತಕ ತರಗತಿಯಲ್ಲಿಯೂ ಕಿರುಸಂಶೋಧನಾ ಪ್ರಬಂಧಗಳು ರಚನೆಯಾಗತೊಡಗಿದವು.

ಇದರ ಜೊತೆಗೆ ತೊಂಭತ್ತರ ದಶಕದಿಂದೀಚೆಗೆ ಹೊಸ ಪೀಳಿಗೆಯ ಯುವಕರು ಸಂಶೋಧನೆಯ ಹಿನ್ನೆಲೆ ಹೊಂದಿ ಈ ನಿಟ್ಟಿನಲ್ಲಿ ಕೆಲಸ ಮಾಡುತ್ತಿದ್ದಾರೆ. ಇದಲ್ಲದೆ ಪತ್ರಿಕೆಗಳಲ್ಲಿ ಕೆಲವು ವ್ಯಕ್ತಿಗಳು ಚಿತ್ರಕಲೆಯ ಬಗ್ಗೆ ಪರಿಚಯ ಲೇಖನಗಳನ್ನು ಬರೆಯುತ್ತಿರುವುದನ್ನು ಇಲ್ಲಿ ಪ್ರಸ್ತಾಪಿಸಬಹುದು. ಹೀಗೆ ಕರ್ನಾಟಕದ ಚಿತ್ರಕಲಾ ಸಾಹಿತ್ಯವು ಆದಿಮಾನವ ಕಾಲದ ಚಿತ್ರಕೃತಿಗಳಿಂದ ತೊಡಗಿ ಶಾಸನಗಳು, ಸಾಹಿತ್ಯ ಕೃತಿಗಳಲ್ಲಿನ ಕಲಾ ಉಲ್ಲೇಖಗಳು, ಬೇರೆ ಭಾಷೆಯ ಕೃತಿಗಳು, ಅನುವಾದಗಳು, ಪ್ರತ್ಯೇಕ ಕಲಾ ಸಾಹಿತ್ಯ ಕೃತಿಗಳಿಂದ ತುಂಬಿಕೊಂಡು ಅವುಗಳ ಸತ್ವದ ಆಧಾರದ ಮೇಲೆ ಆಧುನಿಕ ಮತ್ತು ಆಧುನಿಕೋತ್ತರ ಹಂತಗಳಲ್ಲಿ ಬೆಳೆಯುತ್ತಿದೆ.

*****

ಚಿತ್ರಕಲಾ ಸಂಪಾದನಾ ಸಾಹಿತ್ಯವು ವೈವಿಧ್ಯಮಯವಾಗಿ ಬೆಳೆದುಬಂದಿದೆ. ಕಲಾಕ್ಷೇತ್ರದಲ್ಲಿ ಸಾಧನೆ ಮಾಡಿದ ವ್ಯಕ್ತಿಗಳ ಅಭಿನಂದನೆ ಹಿನ್ನೆಲೆಯಲ್ಲಿ ಹೊರತಂದ ಕೃತಿಗಳು ಒಂದು ರೀತಿಯ ಸಂಪಾದನೆ ಗ್ರಂಥಗಳಾದರೆ, ಶಾಲೆ-ಕಾಲೇಜುಗಳು, ಸಂಘ-ಸಂಸ್ಥೆಗಳು ತಮ್ಮ ವಾರ್ಷಿಕ ಸಮಾರಂಭಗಳಲ್ಲಿ ಪ್ರಕಟಿಸುವ ಸ್ಮರಣ ಸಂಚಿಕೆಗಳು ಮತ್ತೊಂದು ಬಗೆಯ ಸಂಪಾದನಾ ಸಾಹಿತ್ಯ ಕೃತಿಗಳಾಗಿವೆ. ಇವುಗಳಲ್ಲದೇ ಯಾವುದೇ ವಿಶೇಷ ಸಂದರ್ಭಗಳಲ್ಲದ ಸಂದರ್ಭಗಳಲ್ಲಿಯೂ ಕೆಲವು ವಿದ್ವಾಂಸರು ಕಲಾ ಲೇಖನಗಳನ್ನು ಒಂದೆಡೆಗೆ ತಂದು ಸಂಪಾದನೆ ಮಾಡಿದ್ದಾರೆ. ಈ ರೀತಿಯ ವೈವಿಧ್ಯತೆಯ ಸಂಪಾದನಾ ಗ್ರಂಥಗಳಲ್ಲಿ ಕೆಲವು ಗ್ರಂಥಗಳನ್ನು ಒಬ್ಬರೆ ವಿದ್ವಾಂಸರು ಸಂಪಾದನೆ ಮಾಡಿದ್ದರೆ ಇನ್ನು ಕೆಲವು ಗ್ರಂಥಗಳನ್ನು ಇಬ್ಬರು, ಮೂವರು ಹೀಗೆ ಒಬ್ಬರಿಗಿಂತ ಹೆಚ್ಚಿನ ವ್ಯಕ್ತಿಗಳು ಸಂಪಾದನೆ ಮಾಡಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಚಿತ್ರಕಲಾ ಸಂಪಾದನೆ ಸಾಹಿತ್ಯವನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ೩ ರೀತಿಯಲ್ಲಿ ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಬಹುದಾಗಿದೆ.

೧. ಅಭಿನಂದನೆ ಹಿನ್ನೆಲೆಯ ಸಂಪಾದನಾ ಸಾಹಿತ್ಯ,

೨. ಸ್ಮರಣ ಸಂಚಿಕೆ ಹಿನ್ನೆಲೆಯ ಸಂಪಾದನಾ ಸಾಹಿತ್ಯ,

೩. ಸಂಕೀರ್ಣ ಹಿನ್ನೆಲೆಯ ಸಂಪಾದನಾ ಸಾಹಿತ್ಯ,

೧. ಅಭಿನಂದನೆ ಹಿನ್ನೆಲೆಯ ಸಂಪಾದನಾ ಸಾಹಿತ್ಯ :

ಕಲಾ ಕ್ಷೇತ್ರದಲ್ಲಿ ಸಾಧನೆ ಮಾಡಿದ ವ್ಯಕ್ತಿಗಳಿಗೆ ಐವತ್ತು ವರ್ಷಗಳು ತುಂಬಿದಾಗ ಇಲ್ಲವೇ ಅರವತ್ತು ವರ್ಷಗಳು ತುಂಬಿದಾಗ ಅವರ ಅಭಿಮಾನಿಗಳು, ಆಪ್ತರು ಮತ್ತು ಶಿಷ್ಯವರ್ಗ ಹೀಗೆ ಅನೇಕರು ಸೇರಿ ಅವರಿಗೆ ಅಭಿನಂದನೆ ಕಾರ್ಯಕ್ರಮ ಹಮ್ಮಿಕೊಂಡು ಆ ಹಿನ್ನೆಲೆಯಲ್ಲಿ ಗ್ರಂಥವನ್ನು ಹೊರತರುವ ಸಂಪ್ರದಾಯವು ಕಲಾ ಕ್ಷೇತ್ರದಲ್ಲೂ ಅಡಿ ಇಟ್ಟಿದೆ. ಈ ಅಭಿನಂದನಾ ಗ್ರಂಥದಲ್ಲಿ ಆಯಾ ವ್ಯಕ್ತಿಗಳ ಆಸಕ್ತಿಯ ಕ್ಷೇತ್ರ, ಅವರು ಸಾಧನೆ ಮಾಡಿದ ಕಲಾ ಪ್ರಕಾರ ಮತ್ತು ಕಲೆಯ ವಿವಿಧ ಆಯಾಮಗಳಿಗೆ ಸಂಬಂಧಿಸಿದ ಲೇಖನಗಳನ್ನು ಅನೇಕ ವಿದ್ವಾಂಸರಿಂದ ಬರೆಯಿಸಿ ಪ್ರಕಟಿಸಲಾಗುತ್ತದೆ. ಈ ಅಭಿನಂದನಾ ಗ್ರಂಥಗಳನ್ನು ಒಬ್ಬರು ಇಲ್ಲವೇ ಅನೇಕ ಜನ ವಿದ್ವಾಂಸರು ಕೂಡಿ ಸಂಪಾದನೆ ಮಾಡಿರುತ್ತಾರೆ. ಈ ರೀತಿಯ ಅಭಿನಂದನಾ ಸಮಾರಂಭಗಳನ್ನು ಹೊರತುಪಡಿಸಿಯೂ ಕೆಲವು ಪ್ರಮುಖ ವ್ಯಕ್ತಿಗಳ ನೆನಪಿನ ಸಲುವಾಗಿ ಅವರಿಗೆ ಗೌರವ ಕೊಡುವ ಹಿನ್ನೆಲೆಯಲ್ಲಿಯೂ ಕೆಲವು ಸಂಪಾದನಾ ಗ್ರಂಥಗಳು ಬಂದಿವೆ. ಅವುಗಳನ್ನು ಸಹಿತ ಇಲ್ಲಿ ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಮೊದಲಿಗೆ ಅಭಿನಂದನಾ ಗ್ರಂಥಗಳನ್ನು ಪರಿಶೀಲಿಸಬಹುದಾಗಿದೆ.

**ಸಂಭಾವನಾ ಗ್ರಂಥ :**

ಈ ಗ್ರಂಥವು ಕಲಾವಿದ ಶ್ರೀ. ಟಿ.ಪಿ. ಅಕ್ಕಿಯವರ ಷಷ್ಟಬ್ದಿಪೂರ್ತಿ ಸಮಾರಂಭದ ಸವಿನೆನಪಿಗಾಗಿ ಹೊರತರಲಾಗಿದೆ. ಇದನ್ನು ಶ್ರೀಯುತ. ಸಿ.ಎನ್.ಪಾಟೀಲ ಅವರು ಸಂಪಾದನೆ ಮಾಡಿದ್ದಾರೆ.[೧] ಇದರಲ್ಲಿ ಲೇಖನ ಮತ್ತು ಕವನಗಳಿದ್ದು, ಎಲ್ಲವೂ ಶ್ರೀ. ಟಿ.ಪಿ.ಅಕ್ಕಿಯವರ ಜೀವನ, ಸಾಧನೆ, ಕಲಾ ಬದುಕನ್ನು ಕುರಿತಾಗಿಯೇ ರಚನೆಯಾಗಿವೆ. ಈ ಲೇಖನ ಮತ್ತು ಕವನಗಳನ್ನು ವಿವಿಧ ವಿದ್ವಾಂಸರು ಬರೆದಿದ್ದು, ತಾವು ಕಂಡಂತೆ ಅಕ್ಕಿಯವರ ವ್ಯಕ್ತಿತ್ವ ಮತ್ತು ಕಲಾ ಬದುಕನ್ನು ಚಿತ್ರಿಸಿದ್ದಾರೆ. ಕವನಗಳನ್ನು ಎಸ್.ಡಿ.ಇಂಚಲ, ಆರ್.ಎಸ್. ಮಡಿವಾಳರ, ಈಶ್ವರ ಕಾಪಸೆ, ಗದಿಗೇಶ್ವರ ಎಂಬವರು ರಚನೆ ಮಾಡಿದ್ದಾರೆ.

ಲೇಖನಗಳನ್ನು ಕುರಿತು ಹೇಳುವುದಾದರೆ, ಟಿ.ಪಿ. ಅಕ್ಕಿಯವರ ವ್ಯಕ್ತಿತ್ವ ಎಂಬುದನ್ನು ಮ.ಗು. ಹಂದ್ರಾಳ ಅವರು, ಲಲಿತ ಕಲೆಗಳ ಕಲ್ಪವೃಕ್ಷವನ್ನು ಯ.ಲ. ಸಂಗೊಳ್ಳಿಯವರು, ಕಲಾ ಪ್ರತಿಮೆಯ ವಿಕಾಸ, ಕೌತಾಳ ವೀರಪ್ಪನವರು ಬರೆದಿದ್ದಾರೆ. ಇದಲ್ಲದೇ ಕಲಾಭೀಷ್ಮ, ವ್ಹಿ.ಟಿ. ಕಾಳೆ, ನಾ ಕಂಡ ಕಲಾವಿದ ಟಿ.ಪಿ.ಅಕ್ಕಿ, ವ್ಹಿ.ಎಮ್. ಜಡೆ, ಟಿ.ಪಿ. ಅಕ್ಕಿ, ಸ.ಮ. ಸಜ್ಜನ, ಆದರ್ಶ ಪ್ರಯತ್ನವಾದಿ, ಎನ್.ಜಿ. ಬಡಿಗೇರ, ಕರ್ನಾಟಕದ ಕಲಾಯೋಗಿ, ಈಶ್ವರ ಕಾಪಸೆ, ಸಹನೆಗೆ ಇನ್ನೊಂದು ಹೆಸರು, ಎಲ್.ಜಿ. ಹಂದಿಗೋಳ, ಲಲಿತಕಲಾ ಪ್ರಪಂಚದ ದಾರಿದೀಪ, ಎ.ಎಸ್. ಹೂಗಾರ್, ಸ್ವಪ್ರಯತ್ನದಿಂದ ಸಿದ್ಧಿ ಪಡೆದ ಆಚಾರ್ಯ, ಆರ್.ಜಿ. ರಾಯ್ಕರ್, ಲಲಿತಕಲಾ ಲೋಕದ ಕರ್ತೃತ್ವ ಶಕ್ತಿ, ಎ.ಎಲ್. ಅಣ್ಣಿಗೇರಿ, ಅಭ್ಯುದಯದ ಆಶ್ರಯದಾತರು, ಬಿ.ಎಸ್. ಶಿವಶಿಂಪಿಗೇರ, ಸ್ನೇಹಜೀವಿ, ಅ.ನ. ಸುಬ್ಬರಾವ್, ಕನ್ನಡದ ಕಲಾ ಜೀವನದ ಜೀವಾಳ ಎಂಬ ಲೇಖನವನ್ನು ಟಿ.ಜಿ. ಪಾಟೀಲ ಎಂಬುವರು ಬರೆದಿದ್ದಾರೆ. ಅಲ್ಲದೇ ಅದ್ಭುತ ಜೀವನ, ವಿ.ಸಿ. ಮಾಲಗತ್ತಿ, ಆದರ್ಶ ಪ್ರತೀಕ, ಎಮ್.ಎ. ಚಟ್ಟಿ, ಕಲಾಸಾಗರ, ಆರ್.ಎಫ್. ಮಿಸ್ಕಿನ್, ಲಲಿತಕಲಾ ಜಗತ್ತಿನ ಪುನರ್‌ಉದ್ಧಾರಕ, ಎಸ್.ಬಿ. ಸುಂಕದ, ಕಲಾ ಕರ್ಮಯೋಗಿ ಜಿ.ಎಮ್. ಹಂಚಿನಾಳ, ಅಕ್ಕಿಯವರು ಹಾಗೂ

೧. ಸಿ.ಎನ್.ಪಾಟೀಲ : ಸಂಭಾವನೆ : (ಸಂ) : ಸಂಭಾವನಾ ಗ್ರಂಥ ಪ್ರಕಾಶನ, ಸಮಿತಿ, ಗದಗ – ೧೯೬೯

ಸಂಗೀತಕಲೆ, ರಾಜು ಪುರಂದರೆ, ಕಲಾವಿಚಕ್ಷಣ ಚತುರ, ಮಾಧವರಾವ್, ಕಲಾ ಚೈತನ್ಯದ ಸಂಜೀವಿನಿ, ಎಸ್.ಜಿ. ಹಿರೇಮಠ ಎಂಬುವವರು ಬರೆದಿದ್ದಾರೆ. ಇದಲ್ಲದೇ ಎಂಟು ಇಂಗ್ಲೀಷ ಲೇಖನಗಳೂ ಇದರಲ್ಲಿವೆ. ಈ ಗ್ರಂಥವು ಕಲಾ ಸಾಹಿತ್ಯಕ್ಕೆ ಹೊಸ ಸೇರ್ಪಡೆಯಾಗಿದ್ದರೂ ಕಲಾ ಪ್ರಕಾರಗಳಿಗೆ ಸಂಬಂಧಿಸಿದಂತೆ ಯಾವುದೇ ಮಹತ್ವ ಪೂರ್ಣವಾದ ಲೇಖನಗಳು ಇಲ್ಲ. ಆದರೆ ಟಿ.ಪಿ. ಅಕ್ಕಿಯವರ ವ್ಯಕ್ತಿತ್ವ, ಕಲಾ ಬದುಕಿನ ವಿವಿಧ ನೋಟಗಳನ್ನು ಇಲ್ಲಿನ ಲೇಖನ ಮತ್ತು ಕವನಗಳು ಒಳಗೊಂಡಿವೆ.

ಈ ಸಂಭಾವನಾ ಗ್ರಂಥದಲ್ಲಿನ ಲೇಖನಗಳಿಂದ ಅಕ್ಕಿಯವರ ಕುರಿತಾಗಿ ತಿಳಿದುಬರುವ ವಿಷಯಗಳು ಈ ಕೆಳಗಿನಂತಿವೆ. ಸ್ವಾತಂತ್ರ್ಯದ ದಿನಗಳು ಸಮೀಪಿಸುತ್ತಿದ್ದ ದಿನಗಳಲ್ಲಿ ಕಲಾಶಾಲೆಯ ಸ್ಥಾಪನೆಯ ವಿಚಾರಗಳು ಅವರಲ್ಲಿ ಬಂದುದು ಮಾತ್ರವಲ್ಲದೆ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕ ವರ್ಷವೇ ಈ ಕಲಾಶಾಲೆಯೂ ಆರಂಭಗೊಂಡಿದ್ದು ಯೋಗಾಯೋಗ ಎನ್ನಬಹುದು. ಸ್ವಾತಂತ್ರ್ಯ ನಂತರ ದೇಶವು ಪಂಚವಾರ್ಷಿಕ ಯೋಜನೆಗಳಂತಹ ಕಾರ್ಯಕ್ರಮಗಳನ್ನು ಹಾಕಿಕೊಂಡು ಅಭಿವೃದ್ಧಿ ಪಥದಲ್ಲಿ ನಡೆದಂತೆ, ಅಕ್ಕಿಯವರೂ ತಮ್ಮ ಕಲಾಶಾಲೆಯ ಪ್ರಗತಿಗೆ ನಿರ್ಧಿಷ್ಪ ಯೋಜನೆಗಳನ್ನು ಹಾಕಿಕೊಂಡರು. ದಾನಿಗಳು, ಶ್ರೀಮಂತರು ಮತ್ತು ಕಲಾ ಪ್ರೇಮಿಗಳಿಂದ ದೇಣಿಗೆ ಸಂಗ್ರಹಿಸುವುದು, ಕಲಾಶಾಲೆಯನ್ನು ನಡೆಸಲು ಸ್ಥಳಾವಕಾಶ ಪಡೆದುಕೊಳ್ಳುವುದು ಮುಂತಾದ ಕ್ರಮಗಳನ್ನು ಯೋಜನಾ ಬದ್ಧವಾಗಿ ರೂಪಿಸಿದರು. ಮಾತ್ರವಲ್ಲದೇ ಕಲಾಶಾಲೆಯ ಆರಂಭಿಕ ದಿನಗಳಲ್ಲಿ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಮುಂಬೈಗೆ ಕಲಿಯಲು ತಮ್ಮ ಖರ್ಚಿನಿಂದ ಕಳುಹಿಸಿ, ಕಲಿಕೆಯ ನಂತರ ಅವರು ತಮ್ಮ ಕಲಾಶಾಲೆಯಲ್ಲಿಯೇ ಸೇವೆ ಸಲ್ಲಿಸುವಂತೆ ನೋಡಿಕೊಂಡರು. ಇದರಿಂದಾಗಿ ಬೇರೆಯವರಿಗೆ ಕೊಡಬೇಕಾದ ಸಂಬಳದ ಹೆಚ್ಚಿನ ಖರ್ಚು ಉಳಿಯುತ್ತಿತ್ತು. ಇಂತಹ ಅನೇಕ ವಿವರಗಳು ಇಲ್ಲಿನ ಲೇಖನಗಳಿಂದ ತಿಳಿದುಬರುತ್ತದೆ.

**ಶ್ರೀ. ಶಂಕರರಾವ್ ಆಳಂದಕರ್ :**

ಗುಲಬರ್ಗಾ ವಿಭಾಗದ ಶ್ರೇಷ್ಠ ಕಲಾವಿದರಲ್ಲಿ ಒಬ್ಬರಾಗಿದ್ದ ಶ್ರೀ ಶಂಕರರಾವ್ ಆಳಂದಕರ್ ಅವರ ಕಲಾ ಶ್ರೇಷ್ಠತೆಯ ಪ್ರತೀಕವಾಗಿ ಸ್ಮರಣ ಸಂಚಿಕೆಯನ್ನು ಅವರ ಮರಣಾ ನಂತರ ಹೊರತರಲಾಗಿದೆ. ಬಾಲಕೃಷ್ಣ ವಾಮನ ಜೋಗ[೨] ಸಂಪಾದನೆ ಮಾಡಿರುವ ಈ ಕೃತಿಯು ೧೯೭೪ ರಲ್ಲಿ ಪ್ರಕಟವಾಗಿದೆ.

ಈ ಸ್ಮರಣ ಸಂಚಿಕೆಯಲ್ಲಿ ಶಂಕರರಾವ್ ಆಳಂದಕರ್ ಅವರ ಜೀವನ ಮತ್ತು ಕಲಾಕೃತಿಗಳ ಬಗ್ಗೆ ಲೇಖನಗಳಿರುವಂತೆ ಕಲೆಯ ಕುರಿತೂ ಲೇಖನಗಳಿವೆ. ಇಂಗ್ಲೀಷ, ಕನ್ನಡ ಮತ್ತು ಹಿಂದಿ ಈ ಮೂರು ಭಾಷೆಗಳಲ್ಲಿರುವ ಲೇಖನಗಳನ್ನು ವಿವಿಧ ವಿದ್ವಾಂಸರು ಬರೆದಿದ್ದಾರೆ. ಎ ಗಿಫ್ಟೆಡ್ ಆರ್ಟಿಸ್ಟ, ಪ್ರತಿಬಿಂಬ, ನಾ ಕಂಡ ಶ್ರೀ.ಶಂಕರರಾವ್ ಆಳಂದಕರ್, ಕಲಾತಪಸ್ವಿಗೆ ಶ್ರದ್ಧಾಂಜಲಿ, ಆದರ್ಶ ಕಲಾವಿದ ಶ್ರೀ. ಆಳಂದಕರ್ ಶಂಕರರಾಯರು, ನಾ ಕಂಡ ಶ್ರೀ. ಶಂಕರರಾಯರು, ಧೃವತಾರೆ, ಏಕ್ ಪ್ರತಿಭಾ ಸಂಪನ್ ಕಲಾವಂತ, ಹೀಗೆ ೧೮ ಲೇಖನಗಳಿವೆ. ಇವುಗಳನ್ನು ಶ್ರೀ.ವಿ.ಪಿ. ದೇವಳಗಾಂವಕರ್, ಆರ್.ಎನ್. ಕಡಪಿ, ಶ್ರೀ.ಬಿ.ಎ.ಸನದಿ, ಟಿ.ಎಸ್. ಅನಂತರಂಗಾಚಾರ್ ಮುಂತಾದವರು ಬರೆದಿದ್ದಾರೆ. ಈ ಪುಸ್ತಕದಲ್ಲಿ ಅಲ್ಲಲ್ಲಿ ಶ್ರೀ ಶಂಕರರಾವ್ ಆಳಂದಕರ್ ಅವರೇ ರಚಿಸಿರುವ ಚಿತ್ರಕಲಾ ಕೃತಿಗಳನ್ನು ಸಂದರ್ಭೋಚಿತವಾಗಿ ಹಾಕಿರುವುದು ಸಂಚಿಕೆಯ ಮೌಲ್ಯವನ್ನು ಹೆಚ್ಚಿಸಿದೆ.

---

೨. ಬಾಲಕೃಷ್ಣ ವಾಮನ ಜೋಗ : ಶ್ರೀ ಶಂಕರರಾವ್ ಆಳಂದಕರ್ : (ಸಂ) : ಬಾಲಕೃಷ್ಣ ವಾಮನ ಜೋಗ : ನೂತನ ವಿದ್ಯಾಲಯ ಸೊಸಾಯಿಟಿ, ಗುಲಬರ್ಗಾ-೧೯೭೪

ಈ ಸಂಪಾದನಾ ಸ್ಮರಣ ಸಂಚಿಕೆಯು ಹಲವು ರೀತಿಯಿಂದ ಮಹತ್ವ ಪಡೆದುಕೊಳ್ಳುತ್ತದೆ. ಹೈದರಾಬಾದ್ ಕರ್ನಾಟಕದ ಖ್ಯಾತ ಕಲಾವಿದರು, ಎಸ್.ಎಮ್. ಪಂಡಿತ್ ಅವರ ಗುರುಗಳೂ ಆದ ಶಂಕರರಾವ್ ಆಳಂದಕರ್ ಅವರ ಬದುಕು ಮತ್ತು ಕಲೆಯ ಕುರಿತು ಹೆಚ್ಚಿನ ಬರವಣಿಗೆ ಮತ್ತು ಮಾಹಿತಿಗಳು ಲಭ್ಯವಿಲ್ಲದ ಸಂದರ್ಭದಲ್ಲಿ ಇದು ಆ ಕೊರತೆಯನ್ನು ಸ್ವಲ್ಪ ಮಟ್ಟಿಗಾದರೂ ನೀಗಿಸುತ್ತದೆ. ಅವರ ಆದರ್ಶ ಜೀವನ, ಕುತೂಹಲಕರ ಕಲಾ ಬದುಕು ಈ ಕೃತಿಯಲ್ಲಿ ವಿವಿಧ ಲೇಖನಗಳಲ್ಲಿ ಮಡುಗೊಂಡಿವೆ. ಆದರೆ ಅವರ ಕಲೆ ಮತ್ತು ಕಲಾಶೈಲಿ ಹಾಗೂ ಕೃತಿಗಳ ಬಗ್ಗೆ ಲೇಖನಗಳು ಇಲ್ಲದ್ದು ದೊಡ್ಡ ಕೊರತೆಯಾಗಿ ಕಂಡುಬರುತ್ತದೆ. ಒಟ್ಟಿನಲ್ಲಿ ಆಳಂದಕರರ ಕುರಿತು ಮಾಹಿತಿ ನೀಡುವಲ್ಲಿ ಇದು ಪ್ರಮುಖ ಪಾತ್ರ ವಹಿಸುತ್ತದೆ.

**ಕಲಾ ತಪಸ್ವಿ :**

ಗದುಗಿನ ಕಲಾವಿದ ಶ್ರೀ. ಮುರಿಗೆಪ್ಪ ಚೆಟ್ಟಿಯವರಿಗೆ ಕಲಾತಪಸ್ವಿ ಎಂಬ ಅಭಿನಂದನಾ ಗ್ರಂಥವನ್ನು ೧೯೯೧ ರಲ್ಲಿ ಸಮರ್ಪಿಸಲಾಗಿದೆ. ಮಹಾಲಿಂಗ ಯಾಳಗಿಯವರು[೩] ಸಂಪಾದನೆ ಮಾಡಿದ ಈ ಗ್ರಂಥದಲ್ಲಿ ಚಟ್ಟಿಯವರ ಕಲಾ ಜೀವನ ಸಾಧನೆಗಳ ಬಗ್ಗೆ ಲೇಖನಗಳಿವೆ.

ಕರ್ನಾಟಕ ರಾಜ್ಯವು ಭಾರತೀಯ ಚಿತ್ರಕಲಾ ಕ್ಷೇತ್ರಕ್ಕೆ ಕೊಟ್ಟಿರುವ ಅಪೂರ್ವ ಕೊಡುಗೆಗಳಲ್ಲಿ ಗದುಗಿನ ಮಹಾನ್ ಕಲಾವಿದ ಶ್ರೀ.ಮುರಿಗೆಪ್ಪ ಚಟ್ಟಯವರೂ ಒಬ್ಬರಾಗಿದ್ದಾರೆ. ವೀರಶೈವ ಪುಣ್ಯ ಪುರುಷರು, ಮಹಾತ್ಮರು ಮತ್ತು ಶರಣರನ್ನು ಚಿತ್ರಿಸುವಲ್ಲಿ ಸಿದ್ಧಹಸ್ತರು. ಪರಂಪರಾಗತ ಕಲೆಯನ್ನು ಮುಂದುವರಿಸಿಕೊಂಡು ಬಂದಿರುವ ಕಲಾವಿದರಲ್ಲಿ ಪ್ರಮುಖರು. ಕಲೆಗಾಗಿ ತನ್ನನ್ನೇ ತಾನು ಸಮರ್ಪಿಸಿಕೊಂಡು 'ಕಲಾತಪಸ್ವಿ' ಎನಿಸಿಕೊಂಡ ಇವರಿಗೆ ಹಲವಾರು ಪ್ರಶಸ್ತಿ ಬಹುಮಾನಗಳು ಬಂದಿವೆಯಲ್ಲದೇ ಸಂಘ-ಸಂಸ್ಥೆಗಳು, ಮಠ-ಮಾನ್ಯಗಳು ಸನ್ಮಾನಿಸಿ ಗೌರವಿಸಿವೆ. ಇಂತಹ ಎಲ್ಲ ವಿವರಗಳನ್ನೊಳಗೊಂಡ ಲೇಖನಗಳು ಈ ಗ್ರಂಥದಲ್ಲಿವೆ.

ನಾಡಿನ ಹಲವಾರು ವಿದ್ವಾಂಸರು ಬರೆದ ಲೇಖನಗಳು ಇದರಲ್ಲಿದ್ದು, ಒಟ್ಟು ೪೬ ಲೇಖನಗಳನ್ನು ಆರು ಭಾಗಗಳಲ್ಲಿ ವಿಂಗಡಿಸಲಾಗಿದೆ. ವ್ಯಕ್ತಿತ್ವಕಲೆ, ಕಾವ್ಯಕಲೆ, ಜೀವನಕಲೆ, ಪ್ರಶಸ್ತಿಕಲೆ, ಸಂಕೀರ್ಣಕಲೆ ಮತ್ತು ಚಿತ್ರಕಲೆ ಎಂಬ ಆರು ವಿಭಾಗಗಳಲ್ಲಿ ೪೬ ಲೇಖನಗಳು ವಿಂಗಡಣೆಗೊಂಡಿವೆ. ಈ ಎಲ್ಲ ಲೇಖನಗಳಲ್ಲಿ ಬಹುತೇಕ ಚಟ್ಟಿಯವರ ಜೀವನ ಮತ್ತು ಕಲಾ ಬದುಕನ್ನು ಚಿತ್ರಿಸುವುದರ ಜೊತೆಗೆ ಕಲಾಕೃತಿಗಳ ವಿಶ್ಲೇಷಣೆಯನ್ನು ಒಳಗೊಂಡಿವೆ. ಅಲ್ಲಲ್ಲಿ ಚಟ್ಟಿಯವರು ಚಿತ್ರಿಸಿದ ೪೬ ರೇಖಾ ಚಿತ್ರಗಳನ್ನು ಸಾಂದರ್ಭಿಕವಾಗಿ ಬಳಸಿಕೊಳ್ಳಲಾಗಿದೆ.

**ಚೈತನ್ಯ :**

ಕಲಾವಿದ ಶ್ರೀ.ವಿ.ಸಿ. ಮಾಲಗತ್ತಿಯವರ ಅಭಿನಂದನಾ ಸಮಾರಂಭದ ಪ್ರಯುಕ್ತ ಹೊರ ತಂದ ಸ್ಮರಣ ಸಂಚಿಕೆಗೆ ಚೈತನ್ಯ ಎಂದು ಹೆಸರಿಸಲಾಗಿದೆ. ಇದನ್ನು ಎಸ್.ಎ. ಭೋಜ ಮತ್ತು ರಾಘವೇಂದ್ರ ಜೋಶಿ ಕೂಡಿಸಂಪಾದನೆ ಮಾಡಿದ್ದಾರೆ.[೪] ಈ ಸಂಚಿಕೆಯಲ್ಲಿ ಮಾಲಗತ್ತಿಯವರ ಜೀವನ, ಕಲಾಸಾಧನೆ, ಕಲಾಶೈಲಿ, ಕಲಾಕೃತಿಗಳ ಬಗ್ಗೆ ಲೇಖನಗಳಿರುವಂತೆ ಚಿತ್ರಕಲೆಗೆ ಸಂಬಂಧಿಸಿದ ವಿವಿಧ ಲೇಖನಗಳೂ ಇವೆ. ಒಟ್ಟು ಮೂವತ್ತು ಲೇಖನಗಳನ್ನು ಹೊಂದಿದ ಈ ಗ್ರಂಥದಲ್ಲಿ ಅಲ್ಲಲ್ಲಿ ಪೂರಕವಾಗಿ ಕೆಲವು ಅವರ ಚಿತ್ರಗಳನ್ನು ಬಳಸಿಕೊಳ್ಳಲಾಗಿದೆ.

೩. ಮಹಾಲಿಂಗ ಯಾಳಗಿ : (ಸಂ) ಕಲಾತಪಸ್ವಿ : ಶ್ರೀ.ಮುರಿಗೆಪ್ಪಣ್ಣ ಚಟ್ಟಿ ಅಭಿನಂದನೆ ಗ್ರಂಥ, ಸಮೀತಿ, ಗದಗ-೧೯೯೧
೪. ಎಸ್.ಎ.ಭೋಜ, ರಾಘವೇಂದ್ರ ಜೋಶಿ : (ಸಂ) : ಚೈತನ್ಯ : ಮಾಲಗತ್ತಿ ಆಫ್‌ಸೆಟ್ ಪ್ರಿಂಟರ್ಸ್ ಮತ್ತು ಪಬ್ಲಿಷರ್, ಬೆಳಗಾವಿ-೧೯೯೭.

ಈ ಗ್ರಂಥದಲ್ಲಿ ಇರುವ ಕಲೆಯ ಬಗೆಗಿನ ಲೇಖನಗಳು ಹಲವು ಆಯಾಮಗಳಿಗೆ ಸಂಬಂಧಿಸಿವೆ. ಭಾರತೀಯ ಕಲೆಯ ಕುರಿತಾಗಿರುವ ಲೇಖನಗಳಿಂದ ಈ ಕೆಳಗಿನ ಪ್ರಮುಖ ಅಂಶಗಳು ತಿಳಿದು ಬರುತ್ತವೆ. ಭಾರತೀಯ ಚಿತ್ರಕಲಾ ಪರಂಪರೆಯು ಪ್ರಾಗಿತಿಹಾಸ ಕಾಲದಿಂದಲೇ ತೊಡಗಿಕೊಂಡಿದ್ದು, ಸಿಂಧೂ ನಾಗರಿಕತೆಯ ಕಾಲ, ವೇದಗಳ ಕಾಲ ಮತ್ತು ಮಹಾಕಾವ್ಯಗಳ ಕಾಲದ ಹೊತ್ತಿಗೆ ನಿರ್ದಿಷ್ಟ ರೂಪು ತಾಳಿತು. ಕಲೆಯನ್ನು ಹೀಗೆ ರಚಿಸಬೇಕೆಂಬ ಮಾರ್ಗಸೂಚಿಗಳು ಹುಟ್ಟಿಕೊಂಡವು. ನಂತರದ ದಿನಗಳಲ್ಲಿ ಕಲೆಗಾಗಿಯೇ ಸಾಹಿತ್ಯವೂ ರಚನೆಯಾಗತೊಡಗಿತು. ಕ್ರಿ.ಪೂ. ೭ನೇ ಶತಮಾನದ ಹೊತ್ತಿಗೆ ಅಜಂತೆಯ ಉತ್ಕೃಷ್ಟ ರಚನೆಗಳು ನಡೆದವು. ಆಮೇಲಿನ ದಿನಗಳಲ್ಲಿ ಕಿರುರೂಪ ಚಿತ್ರಶೈಲಿಗಳು, ಹಸ್ತಪ್ರತಿ ಚಿತ್ರಕಲೆ ಹೀಗೆ ಕಲಾ ಪರಂಪರೆ ಬೆಳೆಯಿತು. ಬ್ರಿಟೀಷರ ಆಗಮನದಿಂದ ಪಾಶ್ಚಾತ್ಯ ಪ್ರಭಾವವು ಕಲೆಯಲ್ಲಿ ಉಂಟಾಗಿ ಭಾರತೀಯ ಕಲೆಯ ಅವನತಿ ಹೊಂದತೊಡಗಿತು. ನಂತರ ಬಂಗಾಲ ಕಲಾಶೈಲಿಯ ಮೂಲಕ ಭಾರತೀಯ ಕಲೆಯು ಪುನರುಥ್ಥಾನ ಉಂಟಾಯಿತು. ಹೀಗೆ ಬೆಳೆದು ಬಂದಿರುವ ಭಾರತೀಯ ಕಲಾ ಪರಂಪರೆಗೆ ಸಂಬಂಧಿಸಿದ ಇಲ್ಲಿನ ವಿಚಾರಗಳು ಲೇಖನಗಳಲ್ಲಿವೆ. ಭಿತ್ತಿ ಚಿತ್ರಕಲೆ, ಕಿರುರೂಪ ಚಿತ್ರಕಲೆ, ಕರ್ನಾಟಕದ ಚಿತ್ರಕಲೆ, ಬಂಗಾಲ ಕಲಾಶೈಲಿ, ಖ್ಯಾತ ಕಲಾವಿದರ ಬಗ್ಗೆ ಇಲ್ಲಿನ ಲೇಖನಗಳು ಮಾಹಿತಿ ನೀಡುತ್ತವೆ.

**ಕಲಾವಿದ ಅಂದಾನಿ ಐವತ್ತು :**

ಗುಲಬರ್ಗಾದ ಕಲಾವಿದರಾದ ಶ್ರೀ.ವಿ.ಜಿ. ಅಂದಾನಿಯವರಿಗೆ ಐವತ್ತು ತುಂಬಿದ ಸಂದರ್ಭದಲ್ಲಿ ಅಭಿನಂದನೆ ಗ್ರಂಥವನ್ನು ಹೊರತರಲಾಗಿದೆ. 'ಕಲಾವಿದ ಅಂದಾನಿ ಐವತ್ತು' ಎಂದು ಹೆಸರಿಸಲಾಗಿರುವ ಈ ಗ್ರಂಥವನ್ನು ಚಂದ್ರಹಾಸ ವೈ. ಜಾಲಿಹಾಳ ಸಂಪಾದಿಸಿದ್ದಾರೆ.[೫] ಈ ಕೃತಿಯಲ್ಲಿ ಅಂದಾನಿಯವರ ಜೀವನ, ಕಲಾಬದುಕು, ಕಲಾಕೃತಿ ರಚನೆಯ ವಿಧಾನ, ಶೈಲಿ, ತಂತ್ರಗಾರಿಕೆ, ವಿಷಯದ ಆಯ್ಕೆ, ಕೃತಿಗಳ ವಿಮರ್ಶೆ ಮುಂತಾದ ವಿಷಯಗಳ ಬಗ್ಗೆ ಹದಿಮೂರು ಕನ್ನಡ ಮತ್ತು ಆರು ಇಂಗ್ಲೀಷ ಲೇಖನಗಳಿವೆ. ಮತ್ತೊಂದು ಭಾಗದಲ್ಲಿ ಅಂದಾನಿಯವರು ವಿವಿಧ ಸಂದರ್ಭಗಳಲ್ಲಿ ಬರೆದ ಕಲೆಯ ಕುರಿತಾಗಿರುವ ಆರು ಲೇಖನಗಳಿದ್ದರೆ, ಬೇರೆ ಬೇರೆ ಪತ್ರಿಕೆಗಳು ಅಂದಾನಿಯವರ ಕಲಾಜೀವನ ಕಲೆ, ಕಲಾಕೃತಿಗಳ ಬಗ್ಗೆ ಬರೆದಂತಹ ಎಂಟು ಲೇಖನಗಳೂ ಇಲ್ಲಿವೆ. ಇದರ ಜೊತೆಗೆ ಅಂದಾನಿಯವರು ರಚಿಸಿದ ಹನ್ನೊಂದು ಚಿತ್ರಕಲಾ ಕೃತಿಗಳನ್ನು ಈ ಪುಸ್ತಕದಲ್ಲಿ ಅಲ್ಲಲ್ಲಿ ಅಳವಡಿಸಲಾಗಿದೆ.

ಹೈದರಾಬಾದ್ ಕರ್ನಾಟಕ ಪ್ರದೇಶದ ಹಿಂದುಳಿದ ಜಿಲ್ಲೆಯಿಂದ ಬಂದ ಅಂದಾನಿಯವರು ಕಲೆಯ ಕ್ಷೇತ್ರದಲ್ಲಿ ಹಿಂದುಳಿಯಲಿಲ್ಲ. ತಾವು ಮಾತ್ರವಲ್ಲದೇ ಇಡೀ ಗುಲಬರ್ಗಾ ಜಿಲ್ಲೆಯನ್ನು ರಾಷ್ಟ್ರಮಟ್ಟದಲ್ಲಿ ಕಲೆಯ ಮೂಲಕ ಪ್ರಸಿದ್ಧಿಗೊಳಿಸಿದರು. ಚಿತ್ರಕಲೆಯಲ್ಲಿ ಸ್ನಾತಕೋತ್ತರ ಮಟ್ಟದ ಶಿಕ್ಷಣವನ್ನು ಕೊಡುವ ನಿಟ್ಟಿನಲ್ಲಿ ಸಂಸ್ಥೆಯನ್ನು ಬೆಳೆಸಿದರು. ಬೇರೆ ಬೇರೆ ಸಂಘ-ಸಂಸ್ಥೆಗಳ ಸದಸ್ಯರಾಗಿ, ಅಧ್ಯಕ್ಷರಾಗಿ, ಎಲ್ಲಕ್ಕಿಂತ ಮಿಗಿಲಾಗಿ ರಾಜ್ಯ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿ ದಕ್ಷಕಾರ್ಯ ನಿರ್ವಹಿಸಿದ ಇವರ ಕಾಲಾವಧಿಯಲ್ಲಿ ಅನೇಕ ಕಲಾ ಸಾಹಿತ್ಯ, ಪ್ರಕಟಣೆಗಳು ಹೊರಬಂದಿವೆ. ಕಲಾ ಶಿಕ್ಷಕರಾಗಿ, ಸಮಕಾಲೀನ ಕಲೆಯ ಕ್ಷೇತ್ರದಲ್ಲಿ ಪ್ರಮುಖ ಕಲಾಕಾರನಾಗಿ, ವಿಶಿಷ್ಟ ಶೈಲಿಯ ರೇಖಾಚಿತ್ರಗಳ ರೂವಾರಿಯಾಗಿ ಅಂದಾನಿಯವರು ಖ್ಯಾತರಾಗಿದ್ದಾರೆ. ಅವರ ಕುರಿತು ಇಂತಹ ಹಲವಾರು ಸಂಗತಿಗಳನ್ನು ಇಲ್ಲಿನ ಲೇಖನಗಳು ಒಳಗೊಂಡಿವೆ.

೫. ಚಂದ್ರಹಾಸ ವೈ.ಜಾಲಿಹಾಳ : (ಸಂ) : ಕಲಾವಿದ ಅಂದಾನಿ ಐವತ್ತು : ಪ್ರಕಾಶನ, ಅಂದಾನಿ ಗೆಳೆಯರ ಬಳಗ, ಗುಲಬರ್ಗಾ-೧೯೯೯

**ಚಿತ್ರಕಲಾ :**

ಬೆಂಗಳೂರಿನ ಚಿತ್ರಕಲಾ ಪರಿಷತ್ತಿನ ಉನ್ನತಿಗೆ ಕಾರಣರಾದ ಎಂ.ಎಸ್. ನಂಜುಂಡರಾವ್ ಅವರ ಅಭಿನಂದನಾ ಸಂದರ್ಭದಲ್ಲಿ 'ಚಿತ್ರಕಲಾ' ಎಂಬ ಗ್ರಂಥವನ್ನು ಹೊರತರಲಾಗಿದೆ. ಚೂಡಾಮಣಿ ನಂದಗೋಪಾಲ ಅವರು[೧] ಸಂಪಾದನೆ ಮಾಡಿರುವ ಈ ಗ್ರಂಥವು ೨೦೦೦ ದಲ್ಲಿ ಪ್ರಕಟವಾಗಿದೆ.

ಇದರಲ್ಲಿ ಎಂ.ಎಸ್. ನಂಜುಂಡರಾವ್ ಅವರ ಕಲಾಜೀವನ, ಸಾಧನೆ, ಕಲಾಕೃತಿಗಳು, ಶೈಲಿ, ಚಿತ್ರಕಲಾ ಪರಿಷತ್ತನ್ನು ಕಟ್ಟಿ ಬೆಳೆಸಿದ ರೀತಿ ಮುಂತಾದ ಸಂಗತಿಗಳ ಬಗ್ಗೆ ಒಂದು ಭಾಗದಲ್ಲಿ ಲೇಖನಗಳಿದ್ದರೆ, ಇನ್ನೊಂದು ಭಾಗದಲ್ಲಿ ಕಲೆಯ ಕುರಿತು ಲೇಖನಗಳಿವೆ. ಇಂಗ್ಲೀಷ ಮತ್ತು ಕನ್ನಡ ಭಾಷೆಯಲ್ಲಿ ಇರುವ ಈ ಗ್ರಂಥದಲ್ಲಿ ಅಲ್ಲಲ್ಲಿ ಪೂರಕ ಚಿತ್ರಗಳೂ ಇವೆ. ಆಂಗ್ಲ ಭಾಷೆಯಲ್ಲಿ ಇಪ್ಪತ್ತೊಂದು ಜನ ವಿದ್ವಾಂಸರಿಂದ ಲೇಖನಗಳನ್ನು ಬರೆಸಲಾಗಿದ್ದರೆ, ಕನ್ನಡದಲ್ಲಿ ಹನ್ನೆರಡು ಲೇಖನಗಳನ್ನು ವಿದ್ವಾಂಸರು ಬರೆದಿದ್ದಾರೆ.

ಇದರಲ್ಲಿರುವ ಪ್ರಮುಖ ಲೇಖನಗಳಲ್ಲಿ ಚಿತ್ರಕಲೆ ಕುರಿತ ಶಾಸ್ತ್ರ ಗ್ರಂಥಗಳು, ಕಾವ್ಯ ಮತ್ತು ಚಿತ್ರಕಲೆ, ಕಲೆಯ ಉಪಲಬ್ಧ, ಪರಂಪರೆಯ ಪಲ್ಲಟ, ಕಲೆ ಮತ್ತು ಸಮಾಜಪ್ರಜ್ಞೆ, ಸಾಂಪ್ರದಾಯಿಕ ಶಿಲ್ಪಕಲೆ, ಚಿತ್ರಕಲೆ, ಮೈಸೂರು ಸಾಂಪ್ರದಾಯಿಕ ಕಲೆ, ವೆಂಕಟಪ್ಪ ಸಮಕಾಲೀನ ಶಿಲ್ಪಕಲೆ, ಇಂಟರ್‌ನೆಟ್ ಬಲೆಯಲ್ಲಿ ದೃಶ್ಯಕಲೆ, ಚಿತ್ರಕಲಾ ಪರಿಷತ್ತಿನ ಬೆಳವಣಿಗೆ ಮುಂತಾದವು ಒಳಗೊಳ್ಳುತ್ತವೆ.

ಚಿತ್ರಕಲಾ ಪರಿಷತ್ತನ್ನು ಕಟ್ಟಿ ಬೆಳೆಸಿ ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಸಿದ್ಧಿಯಾಗುವಂತೆ ಮಾಡಿದ ದಕ್ಷ ಆಡಳಿತಗಾರ ನಂಜುಂಡರಾವ್ ಬಗೆಗಿನ ವೈಯಕ್ತಿಕ ವಿವರಗಳನ್ನು ಹೆಚ್ಚಾಗಿ ಇಂಗ್ಲೀಷ ಲೇಖನಗಳು ಕೊಡುತ್ತವೆ. ಕಲಾ ಸಾಹಿತಿಯಾಗಿಯೂ ಅವರು ಪಾತ್ರವಹಿಸಿದ್ದು ಹಲವಾರು ಗ್ರಂಥಗಳನ್ನು ಸ್ವತಃ ಬರೆದು ಪ್ರಕಟಿಸಿದ್ದಾರೆ. ಇದರ ಕುರಿತಾಗಿಯೂ ಇಲ್ಲಿನ ಲೇಖನಗಳಲ್ಲಿ ಬೆಳಕು ಬೀರಲಾಗಿದೆ.

**ಸೃಷ್ಟಿ :**

ಬಾಗಲಕೋಟೆಯ ಡಾ. ಬಿ.ಕೆ. ಹಿರೇಮಠ ಅವರ ಅಭಿಮಾನಿಗಳು ಮತ್ತು ಕಲಾಸಕ್ತರೆಲ್ಲ ಸೇರಿ ಬಿ.ಕೆ. ಹಿರೇಮಠರಿಗೆ ಅಭಿನಂದನಾ ಸಮಾರಂಭ ಏರ್ಪಡಿಸಿದ್ದರ ಸವಿನೆನಪಿಗಾಗಿ 'ಸೃಷ್ಠಿ' ಎಂಬ ಸ್ಮರಣ ಸಂಚಿಕೆಯನ್ನು ಹೊರತರಲಾಗಿದೆ. ಡಾ.ಬಿ.ಕೆ. ಹಿರೇಮಠರು ಕಲೆ, ಕಲಾ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಅನೇಕ ಲೇಖನಗಳನ್ನು ಆಗಾಗ ಬರೆದು ಪತ್ರಿಕೆ, ಸ್ಮರಣಸಂಚಿಕೆ, ವಿಶೇಷ ಸಂಚಿಕೆ ಮುಂತಾದವುಗಳಿಗೆ ನೀಡುತ್ತಾ ಬಂದಿಧ್ದಾರೆ. ಅವು ಪ್ರಕಟಣೆಯೂ ಆಗಿವೆ. ಕರ್ನಾಟಕ ಭಾರತಿ, ಹೇಮಕೂಟ, ಸಂಶೋಧನಾ ವ್ಯಾಸಂಗ, ಕನ್ನಡ ಅಧ್ಯಯನ ಮುಂತಾದ ಸಂಶೋಧನಾ ಪತ್ರಿಕೆಗಳಲ್ಲದೆ ಸುಧಾ, ತರಂಗ, ಕರ್ಮವೀರ, ಕಸ್ತೂರಿ, ಸಂಯುಕ್ತ ಕರ್ನಾಟಕ, ಪ್ರಜಾವಾಣಿಗಳಂತಹ ಜನಪ್ರಿಯ ಪತ್ರಿಕೆಗಳಲ್ಲೂ ಇವರ ಲೇಖನಗಳು ಪ್ರಕಟವಾಗಿವೆ. ಅವುಗಳಲ್ಲಿ ಆಯ್ದ ಳಳ ಲೇಖನಗಳನ್ನು ಸೃಷ್ಠಿಯಲ್ಲಿ ಪ್ರಕಟಿಸಲಾಗಿದೆ.[೨] ಸಾಮಾನ್ಯವಾಗಿ ಸಂಶೋಧನೆ, ಹಸ್ತಪ್ರತಿ, ಸಾಹಿತ್ಯ, ಕಲಾಸಾಹಿತ್ಯ, ಚಿತ್ರಕಲೆ, ಅನುವಾದ, ವ್ಯಕ್ತಿತ್ವ, ಸಾಧನೆ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಇಲ್ಲಿ ಲೇಖನಗಳಿವೆ. ಕೆಲವು ಲೇಖನಗಳನ್ನು ರಾಜ್ಯ ಮತ್ತು ರಾಷ್ಟ್ರಮಟ್ಟದ ವಿಚಾರ ಸಂಕಿರಣಗಳಲ್ಲೂ ಮಂಡಿಸಿದ್ದಾರೆ.

---

೧. ಚೂಡಾಮಣಿ ನಂದಗೋಪಾಲ : ಚಿತ್ರಕಲಾ : (ಸಂ) : ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು-೨೦೦೦.
೨. ಡಾ. ಬಿ.ಕೆ. ಹಿರೇಮಠ : ಸೃಷ್ಠಿ : ಬಾಪೂಜಿ ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ರಿ), ಬಾಗಲಕೋಟ-೨೦೦೩.

ಈ ಸಂಪುಟದಲ್ಲಿನ ಲೇಖನಗಳಲ್ಲಿ ಕಲೆ ಮತ್ತು ಕಲಾ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳ ಬಗ್ಗೆ ಹೇಳುವುದಾದಲ್ಲಿ ಕರ್ನಾಟಕ ಕಲೆ, ಹಸ್ತಪ್ರತಿ ಚಿತ್ರಕಲೆ, ಭಿತ್ತಿಚಿತ್ರಕಲೆ, ಪ್ರಾಚೀನ ಚಿತ್ರಕಲೆ ರಚನಾ ವಿಧಾನಗಳು, ಚಿತ್ರ ರಚನೆಯ ಪರಿಕರಗಳು, ಕಿರುರೂಪ ಚಿತ್ರಗಳು, ಪ್ರಾಚೀನ ಚಿತ್ರ ಮತ್ತು ಚಿತ್ರಕಲೆಯ ಬಗೆಗಿನ ವಿವರಗಳು, ಉಲ್ಲೇಖಗಳು, ವಿವಿಧ ರಾಜ ಮನೆತನಗಳ ಅವಧಿಯಲ್ಲಿ ಬೆಳೆದ ಕಲೆ ಹೀಗೆ ಹಲವಾರು ಸಂಗತಿಗಳ ಬಗೆಗೆ ಪರೋಕ್ಷವಾಗಿ ಹೇಳುತ್ತವೆ. ಡಾ.ಬಿ.ಕೆ. ಹಿರೇಮಠ ವಿದ್ವತ್ತು, ಅನುಭವ, ಸಾಹಿತ್ಯ ರಚನೆಯ ಬಗೆಗಿನ ಜ್ಞಾನಪರಿಧಿ, ಸಂಶೋಧನೆ ಹಿನ್ನೆಲೆಯಿಂದ ಈ ಲೇಖನಗಳು ಪ್ರಬುದ್ಧವಾಗಿ ಮೂಡಿ ಬಂದಿವೆ.

**ನಿಜದ ನೆಲೆ :**

ಕರ್ನಾಟಕದ ಕಲೆ ಮತ್ತು ಸಾಹಿತ್ಯ ಉಭಯ ಕ್ಷೇತ್ರಗಳಲ್ಲಿ ಸಾಧನೆಗೈದವರು ಡಾ. ಬಿ.ಕೆ. ಹಿರೇಮಠರು. ಚಿತ್ರಕಲಾವಿದರಾಗಿ ಕಲಾ ಸಾಹಿತಿಯಾಗಿ, ಸಂಶೋಧಕರಾಗಿ ಮಾಡಿದ ಕಾರ್ಯ, ನೀಡಿದ ಕೊಡುಗೆ ಅನನ್ಯವಾದುದು. ತಮ್ಮ ಅಧ್ಯಾಪಕ ವೃತ್ತಿಯೊಂದಿಗೆ ಕನ್ನಡ ನಾಡು-ನುಡಿ, ಕಲೆ ಹಾಗೂ ಸಾಹಿತ್ಯ ಕುರಿತಂತೆ ಮಹತ್ವದ ಗ್ರಂಥಗಳನ್ನು ಮತ್ತು ಅನೇಕ ಲೇಖನಗಳನ್ನು ರಚಿಸಿದ್ದಾರೆ. ಹಾಗೆಯೆ ನೂರಾರು ಚಿತ್ರಕಲಾ ಕೃತಿಗಳನ್ನು ರಚಿಸುವ ಮೂಲಕ ತಾವೊಬ್ಬ ಶ್ರೇಷ್ಠ ಕಲಾವಿದರೆಂದೂ ತೋರಿಸಿ ಕೊಟ್ಟಿದ್ದಾರೆ. ಇಂತಹ ವಿದ್ವಾಂಸರಾದ ಡಾ.ಬಿ.ಕೆ.ಹಿರೇಮಠರಿಗೆ ಅರವತ್ತು ತುಂಬಿದಾಗ ಅವರ ವಿದ್ಯಾರ್ಥಿಗಳು ಮತ್ತು ಅಭಿಮಾನಗಳು ಸಮರ್ಪಿಸಿದ ಅಭಿನಂದನಾ ಗ್ರಂಥವನ್ನು ಡಾ.ಎಸ್.ಸಿ.ಪಾಟೀಲ ಮತ್ತು ಸತ್ಯಾನಂದ ಪಾತ್ರೋಟಿ ಅವರು[೮] ಸಂಪಾದಿಸಿದ್ದಾರೆ.

ನಿಜದ ನೆಲೆ ಎಂಬ ನಾಮಕರಣದಿಂದ ಹೊರಬಂದ ಈ ಬೃಹತ್ ಅಭಿನಂದನಾ ಗ್ರಂಥದಲ್ಲಿ ಒಟ್ಟು ಮೂರು ಭಾಗಗಳನ್ನು ಮಾಡಲಾಗಿದೆ. ಒಂದನೆಯ ಭಾಗದಲ್ಲಿ ನಾಡಿನ ವಿವಿಧ ವಿದ್ವಾಂಸರು ಬರೆದ ಕಲೆಯ ಬಗೆಗಿನ ಎಪ್ಪತ್ತನಾಲ್ಕು ಲೇಖನಗಳಿವೆ. ಪ್ರಾಗಿತಿಹಾಸ ಕಾಲದಿಂದ ಒಳಗೊಂಡು ಸಮಕಾಲೀನ ಕಲೆಯವರೆಗೆ ಹಲವು ವಸ್ತು ವಿಷಯಗಳಿಗೆ ಸಂಬಂಧಿಸಿದಂತಹ ಲೇಖನಗಳು ಇಲ್ಲಿವೆ. ಎರಡನೆಯ ಭಾಗದಲ್ಲಿ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳನ್ನು ನಾಡಿನ ಹಲವಾರು ವಿದ್ವಾಂಸರು ಬರೆದಿದ್ದಾರೆ. ಇಲ್ಲಿ ಒಟ್ಟು ಮೂವತ್ತನಾಲ್ಕು ಲೇಖನಗಳಿವೆ. ಮೂರನೆಯ ಭಾಗದಲ್ಲಿ ಪೂರ್ವಾರ್ಧ ಮತ್ತು ಉತ್ತರಾರ್ಧ ಎಂಬ ಎರಡು ಉಪಯೋಗಗಳನ್ನು ಮಾಡಿಕೊಳ್ಳಲಾಗಿದೆ. ಪೂರ್ವಾರ್ಧದಲ್ಲಿ ಡಾ. ಬಿ.ಕೆ. ಹಿರೇಮಠರ ಒಡನಾಡಿಗಳಾದ ಮಕ್ಕಳು, ಅಳಿಯಂದಿರು, ವಿದ್ಯಾರ್ಥಿಗಳು, ಮಿತ್ರರು, ವಿದ್ವಾಂಸರು, ಗುರುಗಳು, ಸಹಪಾಠಿಗಳು ಹೀಗೆ ಅನೇಕ ಜನರು ತಮ್ಮ ಅನಿಸಿಕೆಗಳನ್ನು ಅವರ ಕುರಿತಾಗಿ ಬರೆದಿದ್ದಾರೆ. ಇಲ್ಲಿ ಒಟ್ಟು ಮೂವತ್ತಮೂರು ಲೇಖನಗಳಿವೆ. ಉತ್ತರಾರ್ಧದಲ್ಲಿ ಡಾ.ಬಿ.ಕೆ.ಹಿರೇಮಠರು ರಚಿಸಿದ ಸಾಹಿತ್ಯ ಕೃತಿ, ಲೇಖನಗಳು ಮತ್ತು ಚಿತ್ರಕಲಾ ಕೃತಿಗಳ ಬಗ್ಗೆ ವಿಮರ್ಶಾತ್ಮಕ ಲೇಖನಗಳಿವೆ. ಇಲ್ಲಿ ಒಟ್ಟು ಏಳು ಲೇಖನಗಳಿವೆ.

ನಿಜದ ನೆಲೆ ಕೃತಿಯಲ್ಲಿರುವ ಲೇಖನಗಳು ಚಿತ್ರಕಲೆಯ ದೃಷ್ಟಿಯಿಂದ ಮಹತ್ವದವುಗಳಾಗಿವೆ. ಚಿತ್ರಕಲೆಯ ವೈವಿಧ್ಯತೆಯ ಅಧ್ಯಯನವನ್ನು ನಾವಿಲ್ಲಿ ಕಾಣಬಹುದು. ಪ್ರಾಚೀನ ಚಿತ್ರಕಲಾ ಪ್ರಕಾರಗಳಲ್ಲಿ ಆದಿಮಾನವನ ಗುಹಾಚಿತ್ರಗಳು ಮತ್ತು ಭಿತ್ತಿಚಿತ್ರಗಳು ಪ್ರಮುಖವಾದವಾದವುಗಳಾಗಿದ್ದು, ಇವುಗಳನ್ನೊಳಗೊಂಡಂತೆ ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಭಿತ್ತಿಚಿತ್ರಗಳಲ್ಲಿ ಐತಿಹಾಸಿಕ

೮. ಡಾ. ಎಸ್.ಸಿ. ಪಾಟೀಲ, ಸತ್ಯಾನಂದ ಪಾತ್ರೋಟಿ:ನಿಜದ ನೆಲೆ : ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ, ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟ-೨೦೦೩

ವ್ಯಕ್ತಿಗಳು, ಬಿ.ಕೆ. ಹಳ್ಳಿಯ ಭಿತ್ತಿ ಚಿತ್ರಗಳು, ರಾಯಚೂರಿನ ಭಿತ್ತಿ ಚಿತ್ರಗಳು ಎಂಬುದಾಗಿ ಈ ವಿಷಯಕ್ಕೆ ಸಂಬಂಧಿಸಿದ ಮತ್ತು ಪೂರಕವಾಗಿ ಇರುವ ಹತ್ತು ಲೇಖನಗಳಿವೆ.

ಭಾರತೀಯ ಪ್ರಾಚೀನ ಚಿತ್ರಕಲಾ ಪ್ರಕಾರದಲ್ಲಿ ಹಸ್ತಪ್ರತಿ ಚಿತ್ರಕಲೆ ಪ್ರಮುಖವಾಗಿದ್ದು, ಇದಕ್ಕೆ ಸಂಬಂಧಿಸಿದ ಲೇಖನಗಳು ಮತ್ತು ಹಸ್ತಪ್ರತಿ ಚಿತ್ರಕಲೆಯ ಜೊತೆಗೆ ಸಾಹಿತ್ಯ ಮತ್ತು ಚಿತ್ರಕಲೆಯ ಬಗೆಗಿನ ಲೇಖನಗಳನ್ನು ಇಲ್ಲಿ ಹೆಸರಿಸಬಹುದು. ಶಾಸ್ತ್ರ, ಗ್ರಂಥಗಳು ಮತ್ತು ಚಿತ್ರಕಲೆ, ವಿಷ್ಣುಧರ್ಮೋತ್ತರ ಪುರಾಣ ಚಿತ್ರಕಲೆ, ಮಾನಸೋಲ್ಲಾಸ ಚಿತ್ರಕಲೆ, ಕರ್ನಾಟಕದ ಹಸ್ತಪ್ರತಿ ಚಿತ್ರಗಳು, ವೀರಶೈವ ಹಸ್ತಪ್ರತಿಗಳಲ್ಲಿ ಚಿತ್ರಕಲೆ, ಜೈನಹಸ್ತಪ್ರತಿಗಳಲ್ಲಿ ಚಿತ್ರಕಲೆ, ಮುಸ್ಲಿಂ ಹಸ್ತಪ್ರತಿಗಳಲ್ಲಿ ಚಿತ್ರಕಲೆ, ಉದ್ಧರಣೆಗಳು: ಚಿತ್ರಕಲೆ, ಜೈನ ಸಾಹಿತ್ಯಲ್ಲಿ ಚಿತ್ರಕಲೆ, ವೀರಶೈವ ಸಾಹಿತ್ಯದಲ್ಲಿ ಚಿತ್ರಕಲೆ, ಹೀಗೆ ಈ ಗುಂಪಿನಲ್ಲಿ ಒಳಗೊಳ್ಳುವ ಸುಮಾರು ಹದಿನೈದು ಲೇಖನಗಳಿವೆ.

ಜನಪದ ಕಲಾ ಪ್ರಕಾರವು ಯಾವುದೇ ಚಿತ್ರಕಲಾ ಪ್ರಕಾರದ ಮೂಲ ಸತ್ವವನ್ನು ಪ್ರತಿಫಲಿಸುತ್ತದೆ. ಈ ಬಗೆಯ ಜನಪದ ಕಲೆಗೆ ಸಂಬಂಧಿಸಿದ ಲೇಖನಗಳು ಇಲ್ಲಿವೆ. ಜನಪದ ಚಿತ್ರಕಲೆ ಕಿನ್ನಾಳವರ್ಣ ಚಿತ್ರಕಲೆ, ಗೋಕಾಕ ಬಣ್ಣಗಾರಿಕೆ, ಕಲಘಟಗಿ ಚಿತ್ರಕಲೆ, ಹಚ್ಚೆ ಚಿತ್ರಕಲೆ, ಕಸೂತಿ ಚಿತ್ರಕಲೆ, ಹೀಗೆ ಜನಪದಕ್ಕೆ ಸಂಬಂಧಿಸಿದ ಹದಿನೈದು ಲೇಖನಗಳಿವೆ.

ಇತ್ತೀಚಿನ ದಿನಗಳಲ್ಲಿ ಕಲೆ ಮತ್ತು ಕಲಾಕೃತಿಗಳಿಗೆ ಕೊಡುವ ಮಹತ್ವವನ್ನು ಕಲಾವಿಮರ್ಶೆಗೂ ಕೊಡಲಾಗುತ್ತಿದೆ. ಹಾಗಾಗಿ ಕಲಾ ವಿಮರ್ಶೆಗೆ ಸಂಬಂಧಿಸಿದ ಲೇಖನಗಳೂ ಇಲ್ಲಿ ಕಂಡುಬರುತ್ತವೆ. ದೃಶ್ಯಕಲೆ: ಒಂದು ಚಿಂತನೆ, ಕಲಾ ವಿಮರ್ಶೆಯ ಪರಿಭಾಷೆ, ಕಲಾ ವಿಮರ್ಶೆಯ ಹೊಣೆಗಳು, ಕಲಾಭಿರುಚಿ, ದೃಶ್ಯಕಲೆಯ ಅಭಿವ್ಯಕ್ತಿ ಸಾಧ್ಯತೆಗಳು, ರಸತತ್ವ, ಸೌಂದರ್ಯಪ್ರಜ್ಞೆ, ಚಿತ್ರಕಲೆ ಮತ್ತು ರಸಾನುಭವ, ಚಿತ್ರಕಲೆಯಲ್ಲಿ ನವರಸ, ಚಿತ್ರಕಲೆ ಮತ್ತು ಸಮಕಾಲೀನತೆ, ಈ ರೀತಿ ಕಲಾ ವಿಮರ್ಶೆಯ ಕುರಿತಾಗಿಯೂ ಕೆಲವು ಲೇಖನಗಳಿವೆ.

ಇವುಗಳಲ್ಲದೇ ಚಿತ್ರಕಲೆ ಮತ್ತು ಮಕ್ಕಳ ಮನಸ್ಸು, ಶಾಲಾ ಬೋಧನೆಯಲ್ಲಿ ಕಲಾ ಶಿಕ್ಷಣದ ಮಹತ್ವ ಎನ್ನುವಂತಹ ಲೇಖನಗಳೂ ಇಲ್ಲಿದ್ದು, ಒಟ್ಟಾರೆಯಾಗಿ ಈ ಸಂಪಾದನಾ ಗ್ರಂಥವು ಕಲಾಕೋಶದ ಮಾದರಿಯಲ್ಲಿದೆ. ಚಿತ್ರಕಲಾ ಸಾಹಿತ್ಯ ದೃಷ್ಟಿಯಿಂದ ಇದೊಂದು ಗಮನಾರ್ಹ ಕೊಡುಗೆಯಾಗಿದೆ.

ಪ್ರಸ್ತುತ ಅಭಿನಂದನಾ ಗ್ರಂಥವು ಕರ್ನಾಟಕದಲ್ಲಿ ಕನ್ನಡದ ಮಟ್ಟಿಗೆ ಒಂದು ಮೈಲುಗಲ್ಲಾಗಿದೆ ಎನ್ನಬಹುದು. ಇದರಲ್ಲಿರುವಷ್ಟು ಸಂಖ್ಯೆಯ ಕಲಾ ಲೇಖನಗಳು ಇದುವರೆಗೆ ಬೇರೆ ಯಾವುದೇ ಸಂಪುಟದಲ್ಲಿ ಪ್ರಕಟವಾಗಿಲ್ಲ. ಅಲ್ಲದೇ ವಿಷಯ ವೈವಿಧ್ಯತೆಯಿಂದಲೂ ಇದು ಬೇರೆ ಯಾವುದೇ ಸಂಪುಟಕ್ಕಿಂತ ಮುಂದಿದೆ. ಕರ್ನಾಟಕದ ಬಹುಪಾಲು ಕಲಾ ಪ್ರಕಾರಗಳು, ಕಲಾ ಸಾಹಿತ್ಯ, ವಿಮರ್ಶೆ, ಪರಂಪರೆ, ಹೀಗೆ ಹಲವು ವಿಷಯಗಳು ಇಲ್ಲಿದ್ದು ಸಂಶೋಧಕರಿಗೆ ಪ್ರಮುಖ ಆಕರ ಗ್ರಂಥವಾಗಿ ಮೂಡಿಬಂದಿದೆ.

ಅಭಿನಂದನೆ ಹಿನ್ನೆಲೆಯ ಸಂಪಾದನಾ ಸಾಹಿತ್ಯದಲ್ಲಿ ಹೆಚ್ಚಾಗಿ ಉತ್ತರ ಕರ್ನಾಟಕದ ವ್ಯಕ್ತಿಗಳ ಬಗ್ಗೆ ಅಭಿನಂದನೆ ಗ್ರಂಥಗಳು ಪ್ರಕಟವಾಗಿವೆ. ಟಿ. ಪಿ. ಅಕ್ಕಿ, ಶಂಕರಾವ್ ಆಳಂದಕರ್, ವ್ಹಿ. ಸಿ. ಮಾಲಗತ್ತಿ, ವ್ಹಿ.ಜಿ.ಅಂದಾನಿ, ಎಂ.ಎಸ್.ನಂಜುಡರಾವ್, ಬಿ.ಕೆ.ಹಿರೇಮಠ ಇವರ ಅಭಿನಂದನೆ ಗ್ರಂಥಗಳು ಪ್ರಕಟವಾಗಿವೆ.

ಈ ಪ್ರಕಾರದ ಗ್ರಂಥಗಳಲ್ಲಿ ಆಯಾ ವ್ಯಕ್ತಿಗಳ ಆಸಕ್ತಿಯ ಕ್ಷೇತ್ರ ಸಾಧನೆ ಮಾಡಿದ ಕಲಾಪ್ರಕಾರ, ಕಾರ್ಯಕ್ಷೇತ್ರ, ಇನ್ನಿತರ ಹವ್ಯಾಸಗಳಲ್ಲದೇ ಅವರ ವ್ಯಕ್ತಿತ್ವ, ಜೀವನ ವಿಧಾನಗಳ ಕುರಿತು ಲೇಖನಗಳು ಕಂಡುಬರುತ್ತವೆ. ಇವುಗಳ ಜೊತೆಗೆ ಕೆಲವರು ಅಭಿನಂದನಾ ಗ್ರಂಥಗಳಲ್ಲಿ ಎರಡು ಭಾಗ ಮಾಡಿಕೊಂಡು ಒಂದು ಭಾಗವನ್ನು ಸಂಬಂಧಿಸಿದ ವ್ಯಕ್ತಿಯ ಬಗೆಗಿನ ಲೇಖನಗಳಿಗೆ ಮೀಸಲಾಗಿರಿಸಿದ್ದರೆ, ಇನ್ನೊಂದು ಭಾಗದಲ್ಲಿ ವಿವಿಧ ಕಲಾಪ್ರಕಾರಗಳಿಗೆ ಸಂಬಂಧಪಟ್ಟ ಲೇಖನಗಳನ್ನು ಪ್ರಕಟಿಸಲಾಗಿದೆ. ಈ ಪ್ರಕಾರದ ಗ್ರಂಥಗಳ ಮುಖ್ಯ ಉದ್ದೇಶ ಆಯಾ ವ್ಯಕ್ತಿಗಳ ಸಾಧನೆ, ಸಿದ್ಧಿಗಳು, ಜೀವನವಿಧಾನಗಳನ್ನು ತಿಳಿಸುವುದೇ ಆಗಿದೆ. ಹಾಗಾಗಿ ಇವು ಅದೇ ಹಿನ್ನಲೆಯ ಮಾಹಿತಿಯನ್ನು ಪ್ರಧಾನವಾಗಿ ಕೊಡುತ್ತವೆ.

**ಸ್ಮರಣ ಸಂಚಿಕೆ ಹಿನ್ನೆಲೆಯ ಸಂಪಾದನಾ ಸಾಹಿತ್ಯ :**

ಶಾಲೆ, ಕಾಲೇಜುಗಳು, ಸಂಘ-ಸಂಸ್ಥೆಗಳು ತಮ್ಮ ವಾರ್ಷಿಕ, ದಶವಾರ್ಷಿಕ, ೨೫ ವರ್ಷಗಳ ಬೆಳ್ಳಿಹಬ್ಬ, ೫೦ ವರ್ಷಗಳ ಸ್ವರ್ಣ ಮಹೋತ್ಸವ ಮತ್ತು ೧೦೦ ವರ್ಷಗಳ ವಜ್ರ ಮಹೋತ್ಸವಗಳನ್ನು ಆಚರಿಸುವುದು ವಾಡಿಕೆಯಾಗಿದೆ. ಈ ಸಂದರ್ಭದಲ್ಲಿ ಕಾರ್ಯಕ್ರಮದ ನೆನಪಿಗಾಗಿ ಸ್ಮರಣ ಸಂಚಿಕೆಗಳನ್ನು ಹೊರತರಲಾಗುತ್ತದೆ. ಇಂತಹ ಸ್ಮರಣ ಸಂಚಿಕೆಗಳಲ್ಲಿ ಆಯಾ ಶಾಲೆ, ಕಾಲೇಜು, ಸಂಘ ಸಂಸ್ಥೆಗಳ ಕುರಿತಾಗಿ ಲೇಖನಗಳಿರುತ್ತವಲ್ಲದೇ ಬೇರೆ ಬೇರೆ ಕಲಾ ಪ್ರಕಾರಗಳಿಗೆ ಸಂಬಂಧಿಸಿದ ಲೇಖನಗಳನ್ನೂ ವಿವಿಧ ವಿದ್ವಾಂಸರಿಂದ ಬರೆಯಿಸಿ ಪ್ರಕಟಿಸಿರುತ್ತಾರೆ. ಇಂತಹ ಸಂಪಾದನಾ ಗ್ರಂಥಗಳನ್ನು ಸಹಿತ ಒಬ್ಬರು ಇಲ್ಲವೇ ಒಬ್ಬರಿಗಿಂತ ಹೆಚ್ಚಿನ ವ್ಯಕ್ತಿಗಳು ಸೇರಿಯೂ ಸಂಪಾದನೆ ಮಾಡಿರುತ್ತಾರೆ. ಚಿತ್ರಕಲಾ ಕ್ಷೇತ್ರದಲ್ಲೂ ಹಲವಾರು ಕಲಾಶಾಲೆ, ಕಾಲೇಜು, ಸಂಘ-ಸಂಸ್ಥೆಗಳು ತಮ್ಮ ಸಮಾರಂಭಗಳಲ್ಲಿ ಸ್ಮರಣ ಸಂಚಿಕೆ ಮಾದರಿಯ ಸಂಪಾದನಾ ಗ್ರಂಥಗಳನ್ನು ಹೊರತಂದಿವೆ. ಅವುಗಳನ್ನು ಈ ಕೆಳಗಿನಂತೆ ಸ್ಥೂಲವಾಗಿ ನೋಡಬಹುದು.

**ಕಲಾ ನಿವೇದನ :**

ಬೆಂಗಳೂರಿನ ಕಲಾ ಮಂದಿರದ ಕಲಾ ಶಾಲೆಯ ಸುವರ್ಣ ಮಹೋತ್ಸವ ಸವಿನೆನಪಿಗಾಗಿ ಕಲಾನಿವೇದನ ಎಂಬ ಸ್ಮರಣ ಸಂಚಿಕೆಯನ್ನು ೧೯೬೯ರಲ್ಲಿ ಹೊರತರಲಾಗಿದೆ. ಅ.ನ. ಸುಬ್ಬರಾವ್ ಮತ್ತು ಬಿ. ಅಶ್ವತ್ಥ ನಾರಾಯಣರಾವ್ ಕೂಡಿ ಈ ಸ್ಮರಣ ಸಂಚಿಕೆಯನ್ನು ಸಂಪಾದನೆ ಮಾಡಿದ್ದಾರೆ.[೯] ಐವತ್ತು ಪುಟಗಳನ್ನು ಹೊಂದಿದ ಇದರಲ್ಲಿ ವಿವಧ ವಿದ್ವಾಂಸರು ಕಲೆಯ ವಿಚಾರವಾಗಿ ಲೇಖನಗಳನ್ನು ಬರೆದಿದ್ದಾರೆ. ದೃಷ್ಟಿಯೂ-ಸೃಷ್ಟಿಯೂ, ಚಿತ್ರಕಲೆ, ಕಲೆ ಮತ್ತು ಸಾಹಿತ್ಯ, ಚಿತ್ರಕಲೆಯ ನೆಲೆ, ದೃಶ್ಯಕಾಣುವ ಕಣ್ಣು, ಬರೆಯುವ ಕೈ, ಯಾರಿಗಾಗಿ ಕಲೆ?, ಕಲೆ ಮತ್ತು ನೀತಿ, ಸೌಂದರ್ಯವಿರುವುದೆಲ್ಲಿ?, ಪ್ರಾಚೀನ ಚಿತ್ರಕಲೆ, ಆಯುಧಗಳು ಮತ್ತು ಲಾಂಛನ, ಅಬನೀಂದ್ರನಾಥ ಟ್ಯಾಗೋರ್ ಎಂಬ ಲೇಖನಗಳು ಮೊದಲ ಗುಂಪಿನಲ್ಲಿವೆ. ಮತ್ತೊಂದು ಭಾಗದಲ್ಲಿ ಪ್ರತಿಭಾವಂತ ಕಲಾವಿದ ಪಿ.ಎಸ್. ರಾವ್, ಚಿತ್ರ ಸಂಕಲನ, ಯಾಂತ್ರಿಕ ಜೀವನದಲ್ಲಿ ಕಲೆಯ ಸ್ಥಾನ, ರಸಋಷಿ ಕಲಾವಿದ ವೆಂಕಟಪ್ಪನವರು, ಈರ್ವರು ಶಿಲ್ಪಕಲಾವಿದರು, ನಿತ್ಯ ಜೀವನದಲ್ಲಿ ಬೆಳೆದುಬಂದ ಕಲೆ, ನನ್ನ ನೆನಪುಗಳು, ಪ್ರಬುದ್ಧ ಶಿಲ್ಪಕಲಾವಿದ, ದೇವಿ ಪ್ರಸಾದ್‌ರಾಯ್ ಚೌಧರಿ, ತರುಣ ಕಲಾವಿದ ಬಿ. ಕೆ. ಶ್ರೀನಿವಾಸವರ್ಮ, ನಿಗೂಢ ಚಿತ್ರಕಲೆ, ಸೌಂದರ್ಯವೆಂದರೇನು?, ಲಲಿತಕಲಾ ಶಾಲೆ, ಕಲಾಮಂದಿರದ ಅರ್ಧ ಶತಮಾನದ

---

೯. ಅ.ನ. ಸುಬ್ಬರಾವ್. ಬಿ.ಅಶ್ವತ್ಥ ನಾರಾಯಣರಾವ್ (ಸಂ) : ಕಲಾನಿವೇದನ : ಕಲಾಪ್ರಕಾಶನ: ಕಲಾಮಂದಿರ, ಬಸವನಗುಡಿ, ಬೆಂಗಳೂರು-೧೯೬೯.

ಇತಿಹಾಸ, ಸೂತ್ರ ಪುತ್ಥಳಿ ನರ್ತನ, ಸೂತ್ರದ ಬೊಂಬೆಯಾಟ, ತೊಗಲು ಬೊಂಬೆಯಾಟ, ದೇವನಹಳ್ಳಿಯ ಸ್ಥಪತಿಗಳು, ಪ್ರಾಚೀನ ಭಾರತೀಯ ವಾಸ್ತುಶಿಲ್ಪದ ಆದ್ಯ ಪ್ರವರ್ತಕರು, ಅಕಾಡೆಮಿಗಳು ಏನು ಮಾಡುತ್ತಿವೆ?, ಮೈಸೂರು ರಾಜ್ಯದ ಲಲಿತಕಲಾ ಅಕಾಡೆಮಿ, ಲಲಿತಕಲಾ ಅಕಾಡಮಿಯಿಂದ ಪುರಸ್ಕೃತ ಕಲಾವಿದರು, ಸೀಮೋಲ್ಲಂಘನದ ಸಂಕೇತ ಅನಕೃ, ಚಿತ್ರಕಲಾವಿದರು, ಎಚ್ಚತ್ತ ಕನ್ನಡ ಲೇಖಕಿಯರು, ಮಕ್ಕಳ ಪುಸ್ತಕಗಳಲ್ಲಿ ಚಿತ್ರಗಳ ಅಗತ್ಯ, ಅಲಂಕಾರ, ಧೀಮಂತ ದೇವುಡು, ಕಲಾಮಂದಿರದ ಇತಿಹಾಸ, ಕಲಾಮಂದಿರದ ರೂಪುರೇಷೆ ಎಂಬ ಕನ್ನಡ ಲೇಖನಗಳಿವೆ. ಇದರ ಜೊತೆಗೆ Indian Art, History and Nature of Painting in Karnataka, A few problems facing the Art field in Idnia, I meet the great Artist Dr. Deviprasad Raichoudary, Indian painting, Meaning of Art, Bird's Eye view of Artistic Haritage of Karnataka, Art Appreciation in Bengal, The Legend of Jackson Pollock, To think is More than to known, ಎಂಬಂತಹ ಇಂಗ್ಲೀಷ ಲೇಖನಗಳನ್ನು ಈ ಸಂಚಿಕೆ ಒಳಗೊಂಡಿದೆ. ಪ್ರಸ್ತುತ ಸ್ಮರಣ ಸಂಚಿಕೆಯಲ್ಲಿನ ಲೇಖನಗಳು ಕಲಾ ಪ್ರಕಾರದ ಹಲವು ಆಯಾಮಗಳಿಗೆ ಸಂಬಂಧಿಸಿವೆ. ಕನ್ನಡದಲ್ಲಿ ಕಲಾ ಬರವಣಿಗೆಗಳು ಇಲ್ಲವೆನ್ನುವ ಅರವತ್ತರ ದಶಕದ ಹೊತ್ತಿಗೆ ಇಂತಹ ಒಂದು ಕಲಾ ಸಂಚಿಕೆಯನ್ನು ಹೊರತಂದಿರುವುದು. ಕಲಾಕ್ಷೇತ್ರಕ್ಕೆ ನೀಡಿದ ಪ್ರಮುಖ ಕೊಡುಗೆ ಎನ್ನಬಹುದು. ಇಲ್ಲಿಯ ಲೇಖನಗಳಿಂದ ಹೊರಹೊಮ್ಮಿದ ಕಲೆಯ ವಿಚಾರವಾಗಿರುವ ಮುಖ್ಯ ಸಂಗತಿಗಳಲ್ಲಿ ಕೆಲವು ಕೆಳಗಿನಂತಿವೆ.

ದೃಷ್ಟಿಯೂ-ಸೃಷ್ಟಿಯೂ ಲೇಖನದಲ್ಲಿ ಕಲೆಯ ಮೂಲ ಮತ್ತು ಅದರಿಂದಾಚೆಗೆ ನಡೆಯುವ ಭಾವನಾತ್ಮಕ, ಪ್ರಾಯೋಗಿಕ ಕ್ರಿಯೆಗಳ ಬಗ್ಗೆ ವಿವರಿಸುವ ಲೇಖಕರು ಸೃಷ್ಟಿಯಲ್ಲಿನ ದೃಷ್ಟಿಗೋಚರ ವಿಚಾರಗಳನ್ನು ಪುನರ್ ಸೃಷ್ಟಿ ಮಾಡುವ ಕಲಾವಿದನ ಪ್ರತಿಭಾ ಸಾಮರ್ಥ್ಯದ ಕುರಿತು ತಿಳಿಸುತ್ತಾರೆ. ಕಲೆ ಮತ್ತು ಸಾಹಿತ್ಯ ಲೇಖನದಲ್ಲಿ ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖಗೊಂಡ ಚಿತ್ರಕಲೆಯ ವಿವರಗಳನ್ನು ಕೊಡಲಾಗಿದೆ. ಯಾರಿಗಾಗಿ ಕಲೆ?, ಕಲೆ ಮತ್ತು ನೀತಿ, ಸೌಂದರ್ಯವಿರುವುದೆಲ್ಲಿ?, ಈ ಬರಹಗಳು ಕಲೆ ಮತ್ತು ಸಮಾಜ, ಕಲೆ ಮತ್ತು ಸಹೃದಯರ ಸಂಬಂಧಗಳನ್ನು ಕುರಿತು ಚರ್ಚಿಸಿದರೆ, ಇಂಗ್ಲೀಷ ಲೇಖನಗಳಲ್ಲಿ ಹೆಚ್ಚಿನವು ಭಾರತೀಯ ಮತ್ತು ಕರ್ನಾಟಕ ಕಲೆಯ ಬಗ್ಗೆ ವಿವೇಚಿಸುತ್ತವೆ. ಈ ಸಂಪುಟದಲ್ಲಿನ ಲೇಖನಗಳು ಚಿಕ್ಕ ಪ್ರಮಾಣದಲ್ಲಿ ಬರೆಯಲ್ಪಟ್ಟಿವೆ. ವಿಸ್ತಾರವಾದ ಲೇಖನ ಬರಹಗಳು ಇಲ್ಲಿಲ್ಲ. ಕೇವಲ ಐವತ್ತು ಪುಟಗಳನ್ನು ಹೊಂದಿದ ಈ ಸ್ಮರಣ ಸಂಚಿಕೆಯಲ್ಲಿ ಕನ್ನಡದ ನಲವತ್ತು ಮತ್ತು ಇಂಗ್ಲೀಷಿನ ಹತ್ತು ಲೇಖನಗಳು ಹೀಗೆ ಒಟ್ಟು ಐವತ್ತು ಲೇಖನಗಳಿವೆ.

**ಕಲಾ ಶಿಕ್ಷಣ, ವಿಚಾರ ಸಂಕಿರಣ :**

ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿಯು ದಿವಂಗತ ಟಿ.ಪಿ. ಅಕ್ಕಿಯವರು ಅಧ್ಯಕ್ಷರಾಗಿದ್ದ ಸಮಯದಲ್ಲಿ ದಿನಾಂಕ :೨೪-೦೨-೧೯೮೩ ರಂದು ಕಲಾ ಶಿಕ್ಷಣದ ಬಗ್ಗೆ ವಿಚಾರ ಸಂಕಿರಣವನ್ನು ಹಮ್ಮಿಕೊಂಡಿತ್ತು. ಇದರಲ್ಲಿ ರಾಜ್ಯ ಮತ್ತು ಹೊರರಾಜ್ಯಗಳ ಕಲಾವಿದರು, ಕಲಾ ವಿಮರ್ಶಕರು, ಕಲಾ ಶಾಲೆಯ ಪ್ರಾಂಶುಪಾಲರು, ಶಿಕ್ಷಕರು, ಮುಖ್ಯಸ್ಥರು, ಬರಹಗಾರರು ಪಾಲ್ಗೊಂಡು ತಮ್ಮ ವಿಚಾರಗಳನ್ನು ಮಂಡಿಸಿದರು. ಇಲ್ಲಿ ಮಂಡಿತವಾದ ವಿಚಾರಗಳನ್ನು ಪುಸ್ತಕ ರೂಪದಲ್ಲಿ ಹೊರತರಲಾಗಿದ್ದು,[೧೦] ಇದಕ್ಕೆ ಕಲಾ ಶಿಕ್ಷಣ ವಿಚಾರ ಸಂಕಿರಣ ಎಂದು ಹೆಸರಿಸಲಾಗಿದೆ.

---

೧೦ ಟಿ.ಪಿ. ಅಕ್ಕಿ : (ಸಂ) : ಕಲಾಶಿಕ್ಷಣ ವಿಚಾರ ಸಂಕಿರಣ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೩.

ಈ ಪುಸ್ತಕದಲ್ಲಿ ಹಲವಾರು ವಿಷಯಗಳು ಕಲಾ ಶಿಕ್ಷಣಕ್ಕೆ ಸಂಬಂಧ ಪಟ್ಟಂತೆ ಚರ್ಚಿತಗೊಂಡಿವೆ. ಅಕಾಡಮಿಯ ಅಧ್ಯಕ್ಷರಾಗಿದ್ದ ಟಿ.ಪಿ. ಅಕ್ಕಿಯವರ ಪ್ರಾಸ್ತಾವಿಕ ಭಾಷಣವನ್ನು ಮೊದಲಿಗೆ ಕೊಡಲಾಗಿದೆ. ಇದರಲ್ಲಿ ಕರ್ನಾಟಕ ರಾಜ್ಯದ ಕಲಾ ಶಿಕ್ಷಣವನ್ನು ಹೇಗೆ ಅಭಿವೃದ್ಧಿಪಡಿಸಬಹುದು ಎನ್ನುವ ಸಂಗತಿಗಳನ್ನು ತಿಳಿಸಿದ್ದಾರೆ. ಕರ್ನಾಟಕದಲ್ಲಿ ಕಲಾ ಶಿಕ್ಷಣದ ಪರಿಸ್ಥಿತಿ ಮತ್ತು ಪರಿಹಾರಗಳ ಬಗೆಗೆ ಮೈಸೂರಿನ ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿಯ ಡೀನ್‌ರಾಗಿದ್ದ ವಿ.ಎಂ. ಶೊಲಾಪುರಕರ್ ಅವರು ವಿಷಯ ಮಂಡಿಸಿದ್ದು ಅದರ ಭಾಗವನ್ನು ಕೊಡಲಾಗಿದೆ. ಇಂದಿನ ಕಲಾ ಶಿಕ್ಷಣದ ಆಗುಹೋಗುಗಳು, ಪರಿಣಾಮಗಳು, ಪ್ರತಿಕ್ರಿಯೆಗಳ ಬಗೆಗೆ ಹೈದರಾಬಾದಿನ ಕಾಲೇಜ್ ಆಫ್ ಆರ್ಟ್ಸನ ಉಪಪ್ರಾಚಾರ್ಯರಾದ ವಿದ್ಯಾಭೂಷಣ ಅವರು ತಮ್ಮ ಪ್ರಬಂಧದಲ್ಲಿ ಚರ್ಚಿಸಿದ್ದಾರೆ.

ಪ್ರಾಥಮಿಕ ಹಾಗೂ ಮಾಧ್ಯಮಿಕ ಕಲಾ ಶಿಕ್ಷಣದ ವಿಚಾರಗಳ ಬಗೆಗೆ ಆರ್.ಜಿ.ರಾಯಕರ್ ಅವರು ವಿಷಯ ಮಂಡಿಸಿದ್ದು, ಹಲವಾರು ಸಂಗತಿಗಳು ಚರ್ಚಿತಗೊಂಡಿವೆ. ವಿದ್ಯಾಭ್ಯಾಸದ ಕ್ರಮದಲ್ಲಿ ಕಲೆಯ ಗುರಿ, ಮಾಧ್ಯಮಿಕ ಶಾಲೆಯಲ್ಲಿ ಕಲಾ ಶಿಕ್ಷಣ, ಕಲಾ ಶಿಕ್ಷಣ ವಿಷಯವಾಗಿ ಸೂಚನೆಗಳು ಇದರಲ್ಲಿ ಹೇಳಲ್ಪಟ್ಟಿವೆ. ಎರಡನೆಯ ಭಾಗದಲ್ಲಿ ಇದೇ ಲೇಖನಗಳ ಇಂಗ್ಲೀಷ ಭಾಷಾಂತರವಿದೆ.

ಈ ಕೃತಿಯು ಕಲಾ ಶಿಕ್ಷಣದ ದೃಷ್ಟಿಯಿಂದ ಉಪಯುಕ್ತವಾಗಿದೆ. ಕಲಾ ಶಿಕ್ಷಣದ ಬಗೆಗೆ ನಿರ್ಧಿಷ್ಠವಾದ ಮತ್ತು ಪರಿಣಾಮಕಾರಿಯಾದ ಕ್ರಮಗಳನ್ನು ತೆಗೆದುಕೊಳ್ಳಲು ಪರದಾಡುತ್ತಿರುವ ಇಂದಿನ ದಿನಗಳಲ್ಲಿ ಕಲಾ ಶಿಕ್ಷಣದ ರೂಪುರೇಷೆ, ಬೆಳವಣಿಗೆ, ಇತ್ಯಾದಿಗಳ ಬಗ್ಗೆ ಸ್ಥೂಲ ನೋಟವನ್ನು ಇಲ್ಲಿನ ಲೇಖನಗಳಲ್ಲಿ ಕಂಡುಕೊಳ್ಳಬಹುದಾಗಿದೆ. ಎಂಭತ್ತರ ದಶಕದಲ್ಲಿ ಕಲಾ ಬರಹಗಳು ಕಡಿಮೆ ಇದ್ದ ದಿನಗಳಲ್ಲಿ ಹೊರಬಂದ ಈ ಪುಸ್ತಕವು ಕಲಾ ಶಿಕ್ಷಣಕ್ಕೆ ಮಾತ್ರವಲ್ಲದೇ ಕಲಾವಿದರಿಗೂ ಉಪಯುಕ್ತವಾಗಿದೆ.

**ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ : ಸ್ಕೂಲ್ ಆಫ್ ಆರ್ಟ ಧಾರವಾಡ :**

ಧಾರವಾಡದ 'ಸ್ಕೂಲ್ ಆಫ್ ಆರ್ಟ' ಇದರ ಸುವರ್ಣ ಮಹೋತ್ಸವದ ಅಂಗವಾಗಿ 'ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ' ಎಂಬ ಗ್ರಂಥ ಹೊರತರಲಾಗಿದೆ. ಎಚ್.ಜೆ.ಮುಲ್ಲಾ ಸಂಪಾದನೆ ಮಾಡಿರುವ ಈ ಸಂಚಿಕೆಯು ೧೯೮೫ ರಲ್ಲಿ ಬಿಡುಗಡೆಯಾಗಿದೆ.[೧೧] ಇದರಲ್ಲಿರುವ ಲೇಖನಗಳನ್ನು ಎರಡು ರೀತಿಯಲ್ಲಿ ವಿಂಗಡಿಸಬಹುದು. ಮೊದಲ ಭಾಗದಲ್ಲಿ ಶ್ರೀ.ಡಿ.ವಿ. ಹಾಲಭಾವಿಯವರ ಕಲಾಬದುಕು, ಕಲಾಕೃತಿ ಮತ್ತು ಕಲಾ ಸಾಧನೆಗಳನ್ನು ಕುರಿತಾಗಿದ್ದರೆ, ಎರಡನೆಯ ಭಾಗದಲ್ಲಿ ಕಲಾವಿದರು, ಕಲಾ ಪ್ರಕಾರಗಳು, ಕಲಾ ವಿದ್ಯಾರ್ಥಿಗಳು, ಜೀವನ ಮತ್ತು ಕಲೆಯ ಸಮನ್ವಯ ಬಿಂಬಿಸುವ ಲೇಖನಗಳಿವೆ. ಈ ಸಂಚಿಕೆಯಲ್ಲಿ ಕಲೆಯ ಮಹತ್ವ, ಕಲಾವಿದ ಡಿ.ವಿ. ಹಾಲಭಾವಿ, ಕಲೆಯ ಬಲೆಯೊಳಗೆ, ಭಾರತೀಯ ಚಿತ್ರಕಲೆ ಅಂದು-ಇಂದು, ಕಲಾತಪಸ್ವಿ ಹಾಲಭಾವಿಯವರು, ಜೀವನ ಮತ್ತು ಕಲೆ, ಫೋಟೋಗ್ರಾಫಿಯ ಉಗಮ, ಪಾಬ್ಲೋಪಿಕಾಸೋ, ಕಲಾವಿದನಾಗಲು ನನ್ನನ್ನು ಕಾಡುತ್ತಿರುವ ಸಮಸ್ಯೆಗಳು, ನನ್ನ ಗುರುಗಳು ಮತ್ತು ಸಮಕಾಲೀನ ವಿದ್ಯಾರ್ಥಿಗಳು ಎಂಬಂತಹ ಲೇಖನಗಳಿವೆ. ಜೊತೆಗೆ ಸಾಂದರ್ಭಿಕವಾಗಿ ಕೆಲವು ರೇಖಾಚಿತ್ರಗಳನ್ನು ಕೊಡಲಾಗಿದೆ.

---

೧೧. ಎಚ್.ಜೆ.ಮುಲ್ಲಾ : (ಸಂ) : ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ : ಸ್ಕೂಲ್ ಆಫ್ ಆರ್ಟ ಸುವರ್ಣ ಮಹೋತ್ಸವ ಸಮಿತಿ, ಧಾರವಾಡ-೧೯೮೫.

ಇಲ್ಲಿನ ಲೇಖನಗಳನ್ನು ಎಸ್.ಸಿ.ಪಾಟೀಲ, ಸದಾಶಿವ ಬಡಿಗಣ್ಣವರ, ಎಂ.ಶಕುಂತಲಾ, ಪಿ.ಆರ್.ತಿಪ್ಪೇಸ್ವಾಮಿ, ಮ.ಗು. ಹಂದ್ರಾಳ, ಬಿ.ಆರ್. ವಾಡಪ್ಪಿ, ಸ.ಸ.ಮಾಳವಾಡ, ಸಿ.ಎನ್.ಪಾಟೀಲ, ಹೊಸಕುಂಬಾರ, ನರಹರಿ ಕೆ.ಎನ್. ಡಿ.ವಿ.ಹಾಲಭಾವಿ, ಆರ್.ಎಮ್.ಅಂಬಲಿ ಇವರುಗಳು ಬರೆದಿದ್ದಾರೆ. ಇಲ್ಲಿರುವ ಲೇಖನಗಳಲ್ಲಿ ಎಲ್ಲವೂ ಉತ್ಕೃಷ್ಟವಾಗಿಲ್ಲ. ಎಸ್.ಸಿ.ಪಾಟೀಲ ಬರೆದ ಕಲಾವಿದ ಹಾಲಭಾವಿಯವರು, ಪಿ.ಆರ್.ತಿಪ್ಪೇಸ್ವಾಮಿ ಬರೆದ ಭಾರತೀಯ ಚಿತ್ರಕಲೆ ಅಂದು-ಇಂದು, ಮ.ಗು.ಹಂದ್ರಾಳ ಅವರು ಬರೆದ ಕಲಾತಪಸ್ವಿ ಹಾಲಭಾವಿ ದಾನಪ್ಪನವರು, ಬಿ.ಆರ್. ವಾಡಪ್ಪಿಯವರು ಬರೆದ ಜೀವನ ಮತ್ತು ಕಲೆ, ಸ.ಸ.ಮಾಳವಾಡರು ಬರೆದ ಧ್ಯೇಯನಿಷ್ಠ ದಾನಪ್ಪ, ಇವುಗಳು ಉತ್ತಮ ಮಟ್ಟದಲ್ಲಿವೆ. ಈ ಸಂಪಾದನಾ ಕೃತಿಯಲ್ಲಿ ಹಾಲಭಾವಿಯವರ ಸಮಕಾಲೀನ ವಿದ್ಯಾರ್ಥಿಗಳು ಮತ್ತು ಗುರುಗಳ ಬಗೆಗಿನ ಮಾಹಿತಿ ಕೊಟ್ಟಿರುವುದು ಆ ಕಾಲದ ಕಲಾ ವಾತಾವರಣ ತಿಳಿದುಕೊಳ್ಳಲು ಸಹಾಯ ಮಾಡುತ್ತದೆ.

**ಸಂಯೋಜನೆ :**

ಸಂಯೋಜನೆ ಎಂಬ ಈ ಗ್ರಂಥವು ಬೆಂಗಳೂರಿನ ಸಂಯೋಜಿತ ಸಂಸ್ಥೆ ಹೊರತಂದಿರುವ ಸ್ಮರಣ ಸಂಚಿಕೆಯಾಗಿದೆ. ಇದನ್ನು ಅ.ಲ. ನರಸಿಂಹನ್ ಸಂಪಾದನೆ ಮಾಡಿದ್ದಾರೆ.[೨೨] ೧೯೮೭ ರಲ್ಲಿ ಹೊರಬಂದ ಈ ಕೃತಿಯಲ್ಲಿ ಐದು ಲೇಖನಗಳಿವೆ. ಕಲಾಕೃತಿ ಮತ್ತು ಅದರ ಮಾರುಕಟ್ಟೆ ಲೇಖನವನ್ನು ರವಿಕುಮಾರ ಕಾಶಿಯವರು ಬರೆದಿದ್ದಾರೆ. ಕಲಾಕೃತಿಯ ಮಾರುಕಟ್ಟೆಯ ಸ್ವರೂಪ, ಕಲಾವಿದರು ಕೃತಿ ಮಾರಾಟ ಮಾಡುವಲ್ಲಿ ಅನುಸರಿಸಬೇಕಾದ ಕ್ರಮಗಳು, ಪ್ರಮುಖ ಮಾರುಕಟ್ಟೆಗಳು ಎಲ್ಲೆಲ್ಲಿ ಲಭ್ಯ ಎನ್ನುವಂತಹ ವಿವರಗಳನ್ನು ಈ ಲೇಖನದಲ್ಲಿ ಕೊಟ್ಟಿದ್ದಾರೆ.

ಪರಿವರ್ತನೆಯ ಹಂತದಲ್ಲಿ ಚಿತ್ರಕಲೆ ಎಂಬ ಲೇಖನವನ್ನು ಅ.ಲ. ನರಸಿಂಹನ್ ಅವರು ಬರೆದಿದ್ದು, ಇದರಲ್ಲಿ ಹಿಂದಿನಿಂದ ಬೆಳೆದುಬಂದ ಪಾರಂಪರಿಕ ಚಿತ್ರಕಲೆ, ಕಾಲದಿಂದ ಕಾಲಕ್ಕೆ ಬದಲಾದ ಅದರ ಸ್ವರೂಪ, ಸಮಕಾಲೀನ ಸಂದರ್ಭದಲ್ಲಿ ಪಡೆದುಕೊಂಡ ತಿರುವು ಲಕ್ಷಣ ಮತ್ತು ಪ್ರಭಾವ ಮುಂತಾದ ಸಂಗತಿಗಳನ್ನು ಚರ್ಚಿಸಿದ್ದಾರೆ. ಕಲಾ ವಿಮರ್ಶೆಯ ಹೊಣೆಗಳು ಎಂಬ ಲೇಖನದಲ್ಲಿ ಎನ್.ಮರಿಶಾಮಾಚಾರ್ ಅವರು ಕಲಾ ವಿಮರ್ಶಕನಾದವನು ಕೃತಿಯೊಂದನ್ನು ವಿಮರ್ಶೆ ಮಾಡುವಾಗ ಅನುಸರಿಸಬೇಕಾದ ಕ್ರಮಗಳು, ಆತನ ಮನಸ್ಥಿತಿ, ಕೃತಿಯನ್ನು ನೋಡುವ ನೋಟ, ಪ್ರಾಚೀನ ಮತ್ತು ಸಮಕಾಲೀನ ಕಲಾ ಸಂದರ್ಭಗಳ ಜ್ಞಾನದ ಆಳ ಮುಂತಾದವುಗಳು ಪ್ರಭಾವ ಬೀರುತ್ತವೆ ಎನ್ನುತ್ತಾರೆ.

'ಚಿತ್ರಾಲಂಕೃತ ಹಸ್ತಪ್ರತಿಗಳು' ಎಂಬ ಲೇಖನದಲ್ಲಿ ಕೆ.ವಿ. ಸುಬ್ರಹ್ಮಣ್ಯ ಅವರು ಹಸ್ತಪ್ರತಿ ಚಿತ್ರಕಲೆಯ ಲಕ್ಷಣಗಳು, ರಚನಾ ವಿಧಾನ, ವಿನ್ಯಾಸ, ಬಣ್ಣಗಾರಿಕೆ, ಸಂಯೋಜನೆ, ವಸ್ತು ವಿಷಯ ಇವುಗಳನ್ನು ಸ್ಥೂಲವಾಗಿ ವಿವೇಚಿಸಿದ್ದಾರೆ. 'ಪ್ರದರ್ಶನ ಕಲೆಗಾಗಿ ಆದರ್ಶ ಕಟ್ಟಡ ಸಮುಚ್ಚಯ'ಎಂಬ ಲೇಖನದಲ್ಲಿ ರಾಮದಾಸ್ ಅಡ್ಯಂತಾಯ ಅವರು ಪ್ರದರ್ಶನಾಲಯಗಳ ರೂಪುರೇಷೆಗಳು ಹೇಗಿರಬೇಕು, ಬೆಳಕಿನ ವಿನ್ಯಾಸ ಹೇಗಿರಬೇಕು, ಚಿತ್ರ ಮತ್ತು ಶಿಲ್ಪ ಸೇರಿದಂತೆ ಇನ್ನಿತರ ಪ್ರದರ್ಶನ ಕಲೆಗೆ ಪೂರಕವಾಗುವಂತೆ ಹೇಗೆ ಅವುಗಳನ್ನು ರೂಪಿಸಬೇಕುಎನ್ನುವಂತಹ ಮಾಹಿತಿಗಳನ್ನು ಕೊಟ್ಟಿದ್ದಾರೆ.

---

೧೨. ಅ.ಲ. ನರಸಿಂಹನ್ : (ಸಂ) : ಸಂಯೋಜನೆ : ಸಂಯೋಜಿತ ಪ್ರಕಾಶನ, ಮಲ್ಲೇಶ್ವರಂ ಬೆಂಗಳೂರು-೧೯೮೭.

ಒಟ್ಟಾರೆ ಇಲ್ಲಿನ ಲೇಖನಗಳು ವಿಷಯ ಸಂಗ್ರಹಣೆ, ಬರವಣಿಗೆಯ ಶೈಲಿ, ಪ್ರಸ್ತುತ ಪಡಿಸುವ ವಿಧಾನಗಳಿಂದ ಗಮನ ಸೆಳೆಯುತ್ತವೆ. ಎಂಭತ್ತರ ದಶಕದಿಂದ ಕಲಾ ಸಾಹಿತ್ಯದ ಬರವಣಿಗೆಯಲ್ಲಿ ಬದಲಾವಣೆ ಕಂಡುಬರುವಂತೆ ಬಾಸವಾಗುತ್ತದೆ. ಮೊದಲಿನ ದಿನಗಳಲ್ಲಿ ನೇರವಾಗಿ ವಿಷಯದ ಬಗ್ಗೆ ವಿವರಣೆ ಕೊಡುತ್ತ ಬಂದಿದ್ದರೆ, ಈ ಹೊತ್ತಿನಲ್ಲಿ ವೈಚಾರಿಕವಾಗಿ, ವಿಮರ್ಶಾತ್ಮಕವಾಗಿ, ಚರ್ಚಾತ್ಮಕವಾಗಿ ಮತ್ತು ತೌಲನಿಕವಾಗಿ ನೋಡುವ ಪರಿಪಾಠ ಬೆಳೆದು ಬಂದಿದೆ. ಈ ಹಿನ್ನೆಲೆಯಲ್ಲಿಯೇ ಇಲ್ಲಿನ ಲೇಖನಗಳು ತೆರೆದುಕೊಂಡಿವೆ. ಹಾಗಾಗಿ ಕನ್ನಡ ಕಲಾ ಸಾಹಿತ್ಯದಲ್ಲಿ ಇದು ಗಮನಾರ್ಹ ಪ್ರಯತ್ನವಾಗಿದೆ ಎಂದು ಹೇಳಬಹುದು.

**ಸಂತ, ಕಲಾವಿದ, ಶುಭರಾಯರು :**

ಶುಭರಾಯರು ಒಬ್ಬ ಸಂತರಾಗಿದ್ದುಕೊಂಡು ಚಿತ್ರರಚನೆ ಮಾಡಿದವರು. ತಾವು ವಾಸಿಸುತ್ತಿದ್ದ ಮಠದಲ್ಲಿ ಆಧ್ಯಾತ್ಮ ಸಾಧನೆಯ ಜೊತೆಗೆ ಚಿತ್ರಕಲೆಯನ್ನು ರೂಢಿಸಿಕೊಂಡವರು. ಹಸ್ತಪ್ರತಿಗಳು ಮತ್ತು ಮಠದ ಭಿತ್ತಿಗಳಲ್ಲಿ ಅವರು ರಚಿಸಿದ ಸಾಂಪ್ರದಾಯಿಕ ಶೈಲಿಯ ವರ್ಣಚಿತ್ರಗಳು ಕಂಡುಬರುತ್ತವೆ. ನಾಡಿನ ಈ ರೀತಿಯ ವಿಶಿಷ್ಟ ವ್ಯಕ್ತಿತ್ವ ಹೊಂದಿದ ಸಂತ, ಕಲಾವಿದ, ಶುಭರಾಯರ ಕಲಾ ಜೀವನ ಮತ್ತು ಕಲೆ ಕುರಿತಾಗಿ ವಿಚಾರ ಸಂಕಿರಣವನ್ನು ಏರ್ಪಡಿಸಲಾಗಿತ್ತು. ಇಲ್ಲಿ ಮಂಡಿತವಾದ ಪ್ರಬಂಧಗಳನ್ನು ಒಂದೆಡೆಗೆ ಸಂಪಾದನೆ ಮಾಡಿ ಅ.ಲ. ನರಸಿಂಹನ್ ಅವರು ರಾಜ್ಯ ಲಲಿತಕಲಾ ಅಕಾಡೆಮಿಗೆ ನೀಡಿದ್ದಾರೆ.[೧೩] ಅಕಾಡೆಮಿಯು ೧೯೯೩ ರಲ್ಲಿ ಸಂತ, ಕಲಾವಿದ, ಶುಭರಾಯರು ಎಂಬ ಹೆಸರಿನ ಕೃತಿಯನ್ನು ಈ ಕಾರ್ಯಕ್ರಮದ ಸ್ಮರಣ ಸಂಚಿಕೆಯಾಗಿ ಹೊರತಂದಿದೆ.

ಶುಭರಾಯರ ಕುರಿತು ಆರು ಲೇಖನಗಳು ಈ ಗ್ರಂಥದಲ್ಲಿವೆ. ದೈವೀಕಲಾವಿದ ಶ್ರೀ ಶುಭರಾಯರು ಎಂಬ ಲೇಖನವನ್ನು ಪಿ.ಜಿ.ಬುವಾ ಇವರು ಬರೆದಿದ್ದಾರೆ. ಶುಭರಾಯರ ಮಠದ ಚಿತ್ರಕಲೆ, ಬಾವುರಾವ್ ಸಾದ್ವೇಲ್ಕರ್, ಸಂತ, ಕವಿ, ಚಿತ್ರಕಾರ, ಎನ್.ಸಿ. ದೇಸಾಯಿ, ಸಂತ, ಕಲಾವಿದ, ಶುಭರಾಯರು, ಭಗವಾನದಾಸ್ ತಿವಾರಿ, ಸಂತ ಶುಭರಾಯರ ವ್ಯಕ್ತಿತ್ವ, ಕಲಾಸಕ್ತಿ, ಚಿತ್ರಕಲೆ ಮತ್ತು ಚೈತನ್ಯಮಯ ಜೀವನ, ಸಿ.ಡಿ. ಆಚಾರ್ಯ, ಜೋಷಿ, ಚಿತ್ರಕಲೆ ಮತ್ತು ಶುಭರಾಯರು ಎಂಬ ಲೇಖನವನ್ನು ಅ.ಲ. ನರಸಿಂಹನ್ ಅವರು ಬರೆದಿದ್ದಾರೆ.

ಈ ಸಂಚಿಕೆಯಲ್ಲಿರುವ ಲೇಖನಗಳು ಶುಭರಾಯರ ಜೀವನ, ಕಲೆ, ಕಲಾಕೃತಿಗಳು ಮತ್ತು ಭಕ್ತಿ, ಆರಾಧನಾಗಳಂತಹ ವಿಚಾರಗಳ ಬಗ್ಗೆ ಬೆಳಕು ಬೀರುತ್ತವೆ. ದೈವೀಕಲಾವಿದ ಶುಭರಾಯರು ಎನ್ನುವ ಲೇಖನದಲ್ಲಿ ಪಿ.ಜಿ. ಬುವಾ ಅವರು ಶುಭರಾಯರ ಕಲೆಯನ್ನು ಕುರಿತು ಹೇಳುತ್ತಾ ದೈವೀಪ್ರೇರಣೆಯಿಂದ ಇಂತಹ ಕಲಾಕೃತಿಗಳ ರಚನೆ ಸಾಧ್ಯ. ಹಾಗಾಗಿಯೇ ಅವರು ಕೃಷ್ಣನ ದೈವಿಕ ಚಿತ್ರಗಳನ್ನು ಹೆಚ್ಚಿನ ಹಂಬಲದಿಂದ ಬರೆದಿದ್ದಾರೆ. ಅವರ ಕೃತಿಗಳು ಭಕ್ತಿ ಮತ್ತು ಪೂಜಾ ವಿಧಾನದ ಸಾಂಕೇತಿಕ ಪ್ರತೀಕಗಳಾಗಿ ಮೂಡಿ ಬಂದಿವೆ ಎನ್ನುತ್ತಾರೆ. ಶುಭರಾಯರ ಮಠದ ಚಿತ್ರಕಲೆ ಎಂಬ ಲೇಖನದಲ್ಲಿ ಬಾಬುರಾವ್ ಸಾದ್ವೇಲ್‌ಕರ ಅವರು ಶುಭರಾಯರ ಚಿತ್ರಕಲೆಯ ರಚನಾಕ್ರಮ, ಬಣ್ಣ ತಯಾರಿಕೆ, ವಸ್ತು ವಿಷಯಗಳು ಮತ್ತು ಯಾವ ಸಂದರ್ಭಗಳಲ್ಲಿ ಅವರು ಚಿತ್ರಗಳನ್ನು ಮಠದಲ್ಲಿ ಪ್ರದರ್ಶಿಸುತ್ತಿದ್ದರು ಎನ್ನುವ ಸಂಗತಿಗಳನ್ನು ತಿಳಿಸಿದ್ದಾರೆ.

---

೧೩. ಅ.ಲ.ನರಸಿಂಹನ್ : (ಸಂ) : ಸಂತ, ಕಲಾವಿದ, ಶುಭರಾಯರು : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೩.

ಸಂತ, ಕವಿ, ಚಿತ್ರಕಾರ ಎಂಬ ಎನ್.ಸಿ. ದೇಸಾಯಿಯವರ ಲೇಖನ ಮತ್ತು ಸಂತ, ಕಲಾವಿದ ಶುಭರಾಯ ಎನ್ನುವ ಭಗವಾನ್‌ದಾಸ್ ತಿವಾರಿ ಇವರ ಬರಹಗಳು ಶುಭರಾಯರ ವ್ಯಕ್ತಿತ್ವ, ಮಠದಲ್ಲಿನ ಅವರ ಸನ್ಯಾಸಿ ಬದುಕು, ಅದನ್ನು ಅನುಸರಿಸಿ ನಡೆದ ಹಾದಿಯಲ್ಲಿ ರಚನೆಯಾದ ಚಿತ್ರಕಲೆ ಇವುಗಳ ಬಗ್ಗೆ ತಿಳಿಸುತ್ತವೆ. ಚಿತ್ರಕಲೆ ಮತ್ತು ಶುಭರಾಯರು ಎಂಬ ಲೇಖನದಲ್ಲಿ ಅ.ಲ. ನರಸಿಂಹನ್ ಅವರು ಶುಭರಾಯರ ಚಿತ್ರಗಳನ್ನು ವಿಷಯಾನುಸಾರ ನಾಲ್ಕು ರೀತಿಯಲ್ಲಿ ವಿಂಗಡಿಸಿ ವಿವೇಚಿಸುತ್ತಾರೆ. ದಶಾವತಾರಕ್ಕೆ ಸಂಬಂಧಿಸಿದ ಚಿತ್ರಗಳು, ಕೃಷ್ಣನ ಕಥೆಗಳಿಗೆ ಸಂಬಂಧಿಸಿದ ಚಿತ್ರಗಳು, ರಾಮಾಯಣಕ್ಕೆ ಸಂಬಂಧಿಸಿದ ಚಿತ್ರಗಳು ಮತ್ತು ಪ್ರಕೃತಿಗೆ ಸಂಬಂಧಿಸಿದ ಚಿತ್ರಗಳು ಎಂಬುದಾಗಿ ಭಾಗಮಾಡಿಕೊಂಡು ವಿವರಿಸಿದ್ದಾರೆ. ಇಂತಹ ವಿವರಗಳ ಹಿನ್ನೆಲೆಯಲ್ಲಿ ಪ್ರಸ್ತುತ ಸಂಚಿಕೆಯು ಶುಭರಾಯರ ಜೀವನ ಮತ್ತು ಕಲೆಯನ್ನು ಸ್ಥೂಲವಾಗಿ ತಿಳಿದುಕೊಳ್ಳಲು ಪ್ರಮುಖ ಆಕರವಾಗಿದೆ.

**ಜಾನಪದ ಸಾಹಿತ್ಯ ದರ್ಶನ :**

ಈ ಕೃತಿಯು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ನಡೆಸಿದ ಅಖಿಲ ಕರ್ನಾಟಕ ಹದಿನಾರನೆಯ ಜಾನಪದ ಸಮ್ಮೇಳನದ ಸ್ಮರಣೆಗಾಗಿ ಸಿದ್ಧಗೊಂಡಿದೆ. ಇದನ್ನು ಡಾ.ಎಸ್.ಜಿ.ಇಮ್ರಾಪೂರ ಸಂಪಾದನೆ ಮಾಡಿದ್ದಾರೆ.[೧೪] ಈ ಸಮ್ಮೇಳನವು ತೊಗಲುಗೊಂಬೆಯಾಟದ ಕಲೆಗೆ ಸೀಮಿತವಾಗಿದ್ದು, ಇಲ್ಲಿ ಮಂಡಿಸಲಾದ ಪ್ರಬಂಧಗಳನ್ನು ಈ ಕೃತಿಯಲ್ಲಿ ಪ್ರಕಟಿಸಲಾಗಿದೆ.

ತೊಗಲುಗೊಂಬೆಯಾಟದ ಪ್ರಾಚೀನತೆ ಮತ್ತು ಪರಂಪರೆ ಲೇಖನವನ್ನು ಡಾ. ಬಿ.ವಿ. ಮಲ್ಲಾಪುರ ಬರೆದಿದ್ದು, ತೊಗಲು ಗೊಂಬೆಯ ಹುಟ್ಟು ಬೆಳವಣಿಗೆ ವಿವಿಧ ಆಯಾಮಗಳಲ್ಲಿ ಅದು ಪ್ರಸಾರ ಹೊಂದಿರುವುದನ್ನು ಪ್ರಮುಖವಾಗಿ ಹೇಳಲಾಗಿದೆ. ದಕ್ಷಿಣ ಭಾರತದ ತೊಗಲು ಗೊಂಬೆಯಾಟಗಳು ಎಂಬ ಲೇಖನವನ್ನು ಹ.ಕ. ರಾಜೇಗೌಡ ಅವರು ಬರೆದಿದ್ದು, ಇದರಲ್ಲಿ ಕರ್ನಾಟಕ, ಆಂಧ್ರ, ತಮಿಳುನಾಡು ಮತ್ತು ಕೇರಳ ಒಳಗೊಂಡಂತೆ ದಕ್ಷಿಣ ರಾಜ್ಯಗಳಲ್ಲಿ ಪ್ರಚಲಿತದಲ್ಲಿರುವ ಗೊಂಬೆಯಾಟದ ಸ್ವರೂಪ ಮತ್ತು ಲಕ್ಷಣಗಳನ್ನು ಕುರಿತು ಹೇಳಿದ್ದಾರೆ. ಕರ್ನಾಟಕದ ತೊಗಲು ಗೊಂಬೆಯಾಟದ ಪರಂಪರೆ–ವೈಶಿಷ್ಟ್ಯ ಎನ್ನವ ಲೇಖನ ಡಾ. ಶ್ರೀಕಂಠಕೂಡಿಗೆಯವರು ಹೈದರಾಬಾದ್ ಕರ್ನಾಟಕದ ತೊಗಲು ಗೊಂಬೆಯಾಟದ ಲೇಖನವನ್ನು ಡಾ.ಎಂ.ಎಸ್. ಲಠ್ಠೆಯವರು ಬರೆದಿದ್ದಾರೆ. ತೊಗಲು ಗೊಂಬೆಯಾಟದ ಸಂಗೀತ ಡಾ. ಬಸವರಾಜ ಮಲಶೆಟ್ಟಿ, ತೊಗಲುಗೊಂಬೆಯಾಟದ ಕಥಾವಸ್ತು, ಸಾಹಿತ್ಯ, ಸಂಭಾಷಣೆ, ಲೇಖನ ಶ್ರೀರಾಮ ಇಟ್ಟಣ್ಣವರ, ತೊಗಲುಗೊಂಬೆಯಾಟದ ರಂಗಸಜ್ಜಿಕೆ, ಡಾ.ಡಿ.ಕೆ. ರಾಜೇಂದ್ರ, ತೊಗಲುಗೊಂಬೆಯಾಟದ ಮೇಲೆ ಆಧುನಿಕತೆಯ ಪ್ರಭಾವ ಎಂಬ ಲೇಖನವನ್ನು ಹಿ.ಚಿ. ಬೋರಲಿಂಗಯ್ಯ ಅವರು ಬರೆದಿದ್ದಾರೆ.

ಈ ಕೃತಿಯು ತೊಗಲು ತೊಗಲುಗೊಂಬೆ ಚಿತ್ರಕಲೆಯ ವಿವಿಧ ಆಯಾಮಗಳನ್ನು ಕಟ್ಟಿಕೊಡುತ್ತದೆ. ತೊಗಲು ಗೊಂಬೆಗಳ ತಯಾರಿಕೆ, ಚಿತ್ರರಚನಾಕ್ರಮ, ಬಣ್ಣ ಲೇಪನ ವಿಧಾನ, ಚಿತ್ರಗಳನ್ನು ಕತ್ತರಿಸುವ ರೀತಿ, ಅವುಗಳಿಗೆ ಕಡ್ಡಿಗಳನ್ನು ಅಳವಡಿಸುವುದು, ಚಿತ್ರಗಳಿಗೆ ಹೊಳಪು ಕೊಡುವುದು ಹೀಗೆ ಚಿತ್ರಕಲೆಯ ಹಲವು ವಿಷಯಗಳು ಇಲ್ಲಿ ಚರ್ಚಿತಗೊಂಡಿವೆ. ತೊಗಲುಗೊಂಬೆಯ ಪ್ರಾದೇಶಿಕ ಲಕ್ಷಣಗಳು, ಅವುಗಳಲ್ಲಿನ ಸಾಮ್ಯತೆ, ಭಿನ್ನತೆಗಳು, ಆಟದ ವಿಧಾನಗಳು ಮುಂತಾದವುಗಳನ್ನು ತಿಳಿದುಕೊಳ್ಳುವಲ್ಲಿ ಈ ಸಂಚಿಕೆ ಉಪಯುಕ್ತ ಮಾಹಿತಿ ನೀಡುತ್ತದೆ.

---

೧೪. ಡಾ.ಎಸ್.ಜಿ. ಇಮ್ರಾಪೂರ : (ಸಂ) : ಜಾನಪದ ಸಾಹಿತ್ಯ ದರ್ಶನ ಭಾಗ–೧೬ : ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೧೯೯೪.

**ಚಿತ್ರಾಕ್ಷಿ :**

ಧಾರವಾಡದ ಸ್ಕೂಲ್ ಆಫ್ ಆರ್ಟ ಇದರ ವಜ್ರ ಮಹೋತ್ಸವದ ಸವಿನೆನಪಿಗಾಗಿ 'ಚಿತ್ರಾಕ್ಷಿ' ಎಂಬ ಸ್ಮರಣ ಸಂಚಿಕೆಯನ್ನು ಹೊರತರಲಾಗಿದೆ. ೧೯೯೫ರಲ್ಲಿ ಪ್ರಕಟವಾದ ಈ ಗ್ರಂಥವನ್ನು ಡಾ.ಎಸ್.ಸಿ.ಪಾಟೀಲ್ ಸಂಪಾದನೆ ಮಾಡಿದ್ದಾರೆ.[೧೫] ಈ ಸ್ಮರಣ ಸಂಚಿಕೆಯಲ್ಲಿ ಕಲಾಚಾರ್ಯ ಶ್ರೀ ದಾನಪ್ಪ. ವೀರಭದ್ರಪ್ಪ ಹಾಲಭಾವಿಯವರು ಕಟ್ಟಿದ ಕಲಾಮಂದಿರ, ಮಧುರ ನೆನಹುಗಳು, ಹಿರಿಯ ಕಲಾವಿದ ದಾನಪ್ಪಾ ಹಾಲಭಾವಿ, ಕಲಾ ಪ್ರವಾದಿ ಹಾಲಭಾವಿ ಶ್ರೀ ದಾನಪ್ಪಾ, ಕಲಾವಿದನೊಂದಿಗೆ ಕ್ಷಣಕಾಲ, ದಾನಪ್ಪ ವೀರಭದ್ರಪ್ಪ ಹಾಲಭಾವಿ, ಕನಸುಗಾರ, ಕಲಾಗುರು ದಾನಪ್ಪಾ ಹಾಲಭಾವಿ, ಅಪ್ರತಿಮ ಕಲಾಕಾರ ಶ್ರೀ. ಹಾಲಭಾವಿಯವರು, ಸಂತೃಪ್ತ ಕಲಾವಿದ ಶ್ರೀ ಡಿ.ವಿ. ಹಾಲಭಾವಿ, ಶ್ರೀ ಹಾಲಭಾವಿಯವರ ಬದುಕು-ಕಲಾಸಾಧನೆ ಕೆಲವು ವಿಚಾರಗಳು, ಹಿರಿಯ ಕಲಾವಿದ ಶ್ರೀ ಡಿ.ವಿ. ಹಾಲಭಾವಿ ಎಂಬ ಲೇಖನಗಳಲ್ಲದೇ ಕಲೆಯ ಕುರಿತಾಗಿರುವ ಭಾರತೀಯ ಲಲಿತ ಕಲೆಗಳ ಪರಂಪರೆ ಬೆಳೆದು ಬಂದ ದಾರಿ, ಜನಪದ ಚಿತ್ರಕಲೆಯ ಪ್ರಾಚೀನತೆ, ಗುಳೇದಗುಡ್ಡದ ಭಿತ್ತಿಚಿತ್ರಗಳು, ಉತ್ತರ-ದಕ್ಷಿಣ ಕರ್ನಾಟಕದಲ್ಲಿ ಕಲೆ, ಚಿತ್ರಕಲೆಯಲ್ಲಿ ವಾಸ್ತವಿಕತೆ ಮತ್ತು ಅನುಕರಣ, ಪ್ರೇಕ್ಷಕ, ಕಲಾವಿದ ಮತ್ತು ವಿಮರ್ಶಕ, ಹುಟ್ಟು ಕಲಾವಿದ ಹಾಗೂ ಪರಿಸರದಲ್ಲಿ ಹುಟ್ಟುವ ಕಲಾವಿದ, ಪ್ರಾಚೀನ ಭಾರತದ ಭಿತ್ತಿಚಿತ್ರಗಳು, ಕಲೆ ಮತ್ತು ಔದ್ಯೋಗೀಕರಣ, ಸೋಂದಾದಲ್ಲೊಂದು ಪ್ರಾಗ್ ಚಾರಿತ್ರಿಕ ರೇಖಾ ಚಿತ್ರ, ಯಥಾದರ್ಶನ, ಬೋಧನೆಯಲ್ಲಿ ಕಲಾ ಶಿಕ್ಷಣದ ಮಹತ್ವ, ಕಲಾ ಶಿಬಿರಗಳು-ಒಂದು ಟಿಪ್ಪಣಿ, ವಿಶಿಷ್ಟ ವರ್ಣ ಚಿತ್ರಕಲೆಯ ಆಗರ ಬಾದಾಮಿ ಎನ್ನುವ ಲೇಖನಗಳಿವೆ. His Masterpiece, Art Gallary, A Non Artist look at Art, Meriteal Artist Halabhavi, My lifes Mission-Art Education ಎನ್ನುವಂತಹ ಇಂಗ್ಲೀಷ ಲೇಖನಗಳಿವೆ.

ಈ ಸಂಚಿಕೆಯಲ್ಲಿರುವ ಲೇಖನಗಳು ಕಲಾಸಂಸ್ಥೆಯನ್ನು ಕಟ್ಟಿ ಬೆಳೆಸಿದ ವ್ಯಕ್ತಿಯ ಕಲಾಪ್ರೇಮ, ಆಸಕ್ತಿ-ಅಭಿರುಚಿಗಳನ್ನು ತಿಳಿಸಿಕೊಡುವುದರ ಜೊತೆಗೆ ಅವರ ಕಲಾ ಬದುಕು ಮತ್ತು ಕಲಾಕೃತಿಗಳ ಬಗ್ಗೆಯೂ ತಿಳಿಸಿಕೊಡುತ್ತವೆ. ಹಾಲಭಾವಿಯವರ ಕಲಾಕೃತಿ ರಚನೆಯ ವಿಧಾನ, ಬಣ್ಣದ ಬಳಕೆ, ದೃಶ್ಯ ಸಂಯೋಜನೆ, ರೇಖಾ ಲಾವಣ್ಯ, ವಿಷಯದ ಆಯ್ಕೆ, ಮುಂತಾದವುಗಳ ಬಗ್ಗೆ ಸ್ಥೂಲ ನೋಟ ಬೀರುವ ಲೇಖನಗಳು ಇದರಲ್ಲಿವೆ. ಇನ್ನೊಂದು ಭಾಗದಲ್ಲಿರುವ ಲೇಖನಗಳು ಕಲೆಯ ವಿವಿಧ ಆಯಾಮಗಳನ್ನು ಪರಿಚಯಿಸುತ್ತವೆ.

ಪ್ರಾಗಿತಿಹಾಸ ಚಿತ್ರಕಲೆ, ಭಿತ್ತಿಚಿತ್ರಕಲೆ, ಔದ್ಯೋಗೀಕರಣದಲ್ಲಿ ಕಲೆಯ ಪಾತ್ರ, ಶಿಕ್ಷಣದಲ್ಲಿ ಕಲೆಯ ಮಹತ್ವ ಮುಂತಾದ ಅಂಶಗಳ ಕುರಿತು ಕೆಲವು ಲೇಖನಗಳು ಬೆಳಕು ಚೆಲ್ಲಿವೆ. ಬರವಣಿಗೆ, ಭಾಷಾ ಪ್ರೌಢಿಮೆ, ಶಬ್ದಸಂಗ್ರಹ ಇಂತಹ ಸಾಹಿತ್ಯಕ ವಿಷಯಗಳ ಹಿನ್ನೆಲೆಯಲ್ಲಿ ಇಲ್ಲಿರುವ ಎಲ್ಲ ಲೇಖನಗಳು ಪ್ರೌಢವಾಗಿಲ್ಲ. ಕೆಲವು ವಿದ್ವಾಂಸರ ಲೇಖನಗಳು ಮೌಲಿಕವಾಗಿದ್ದರೆ ಇನ್ನುಳಿದವು ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸಪ್ಪೆಯಾಗಿವೆ. ಆದರೂ ಕಲಾ ವಿಷಯವಾಗಿರುವ ಮಾಹಿತಿ ಮೂಲದ ದೃಷ್ಟಿಯಿಂದ ಇದೊಂದು ಗಮನಾರ್ಹವಾದ ಸ್ಮರಣ ಸಂಚಿಕೆ ಎಂದು ಹೇಳಬಹುದು.

---

೧೫. ಡಾ.ಎಸ್.ಸಿ.ಪಾಟೀಲ : (ಸಂ) : ಚಿತ್ರಾಕ್ಷಿ : ಸ್ಕೂಲ್ ಆಫ್ ಆರ್ಟ ವಜ್ರಮಹೋತ್ಸವ ಸಮೀತಿ, ಧಾರವಾಡ-೧೯೯೫.

**ಕಲಾ ಚೇತನ :**

ಕನ್ನಡ ಕಲಾ ಸಾಹಿತಿಗಳ ಪ್ರಥಮ ಸಮ್ಮೇಳನದ ಸ್ಮರಣ ಸಂಚಿಕೆಯಾಗಿ ೧೯೯೫ ರಲ್ಲಿ ಕಲಾಚೇತನ ಎಂಬ ಗ್ರಂಥವನ್ನು ಹೊರತರಲಾಗಿದೆ. ಇದನ್ನು ಎನ್. ಮರಿಶಾಮಾಚಾರ್ ಅವರು ಸಂಪಾದನೆ ಮಾಡಿದ್ದು,[೧೬] ಕಲಾ ವಿಚಾರವಾಗಿರುವ ಲೇಖನಗಳಿವೆ. ಸಂಯೋಜಿತ ಸಂಸ್ಥೆ ನಡೆದು ಬಂದ ದಾರಿ, ಚಿತ್ರಕಲೆ ಮತ್ತು ಮನೋವಿಜ್ಞಾನ, ಕನ್ನಡದಲ್ಲಿ ಕಲಾ ಸಾಹಿತ್ಯ ಒಂದು ಪಕ್ಷಿನೋಟ, ಆಧುನಿಕತೆಯ ಕಾಲ, ಸೃಜನಶೀಲತೆ, ಕಲೆ ಹಾಗೂ ಜೀವನ, ಕಲೆ ಮತ್ತು ಸಮಾಜ, ಚಿತ್ರಕಲೆಯ ನೆಲೆಯಲ್ಲಿ ಸಂಸ್ಕೃತಿ ಪರಂಪರೆಗಳ ವಿಮರ್ಶೆ, ಚಿತ್ರಕಲೆ ಕುರಿತ ಲೇಖನಗಳು ಮತ್ತು ಪುಸ್ತಕಗಳು ಎಂಬಂತಹ ಲೇಖನಗಳಿವೆ. ಇವುಗಳನ್ನು ಮರಿಶಾಮಾಚಾರ್, ಅ.ಲ.ನರಸಿಂಹನ್, ಸಿ.ಆರ್.ಚಂದ್ರಶೇಖರ್, ಕೆ.ವಿ. ಸುಬ್ರಹ್ಮಣ್ಯಂ, ಎಸ್.ಎಲ್.ಭೈರಪ್ಪ, ಎಚ್.ಎ.ಅನಿಲಕುಮಾರ, ಚಿ.ಸು.ಕೃಷ್ಣಶೆಟ್ಟಿಯವರು ಬರೆದಿದ್ದಾರೆ.

ಪ್ರಸ್ತುತ ಅಧ್ಯಯನದ ದೃಷ್ಟಿಯಲ್ಲಿ ಈ ಸಂಪಾದನಾ ಕೃತಿ ಗಮನಾರ್ಹವಾಗಿದೆ ಎನ್ನಬಹುದು. ಕಾರಣ ಕನ್ನಡದಲ್ಲಿ ಕಲಾಸಾಹಿತ್ಯ ಒಂದು ಪಕ್ಷಿನೋಟ ಮತ್ತು ಚಿತ್ರಕಲೆ ಕುರಿತ ಲೇಖನಗಳು ಮತ್ತು ಪುಸ್ತಕಗಳು ಎಂಬ ಎರಡು ಲೇಖನಗಳಲ್ಲಿ ಅದುವರೆಗೆ ಬಂದ ಕನ್ನಡ ಕಲಾಸಾಹಿತ್ಯದ ಬಗ್ಗೆ ಒಂದು ಸ್ಥೂಲ ನೋಟ ಕೊಡುವುದರ ಜೊತೆಗೆ ಕರ್ನಾಟಕದಲ್ಲಿ ಕಲಾ ಸಾಹಿತ್ಯ ಮತ್ತು ಕಲಾ ವಿಮರ್ಶೆಯಲ್ಲಿ ಹೆಸರು ಮಾಡಿದ ವಿದ್ವಾಂಸರು ಇಲ್ಲಿನ ಲೇಖನಗಳನ್ನು ಬರೆದಿರುವುದು ಈ ಪುಸ್ತಕಕ್ಕೆ ಒಂದು ಮೌಲ್ಯ ತಂದುಕೊಟ್ಟಿದೆ. ಬದಲಾಗುತ್ತಿರುವ ಪರಿಭಾಷೆ, ವೈಚಾರಿಕವಾಗಿ ನೋಡುವ ದೃಷ್ಟಿಕೋನ, ಸಮಕಾಲೀನ ಸಂದರ್ಭಕ್ಕೆ ಸ್ಪಂದಿಸುವ ಬರವಣಿಗೆಗಳು ಇದರಲ್ಲಿವೆ.

**ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು :**

ಧಾರವಾಡದ ಸ್ಕೂಲ್ ಆಫ್ ಆರ್ಟ ಇದರ ವಜ್ರ ಮಹೋತ್ಸವದ ಸವಿನೆನಪಿಗಾಗಿಯೇ 'ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು' ಎಂಬ ಈ ಸ್ಮರಣ ಸಂಚಿಕೆಯನ್ನು ಸಹಿತ ೧೯೯೫ ರಲ್ಲಿಯೇ ಹೊರತರಲಾಗಿದೆ.[೧೭] ಧಾರವಾಡದ ಸ್ಕೂಲ್ ಆಫ್ ಆರ್ಟ ಇದರ ವಜ್ರ ಮಹೋತ್ಸವದ ಅಂಗವಾಗಿ ಹಮ್ಮಿಕೊಂಡ ಹಲವಾರು ಕಾರ್ಯಕ್ರಮಗಳಲ್ಲಿ ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳ ಬಗ್ಗೆ ನಡೆಸಲಾದ ವಿಚಾರ ಸಂಕಿರಣವು ಪ್ರಮುಖವಾದುದಾಗಿತ್ತು. ಈ ವಿಚಾರ ಸಂಕಿರಣದಲ್ಲಿ ಮಂಡಿಸಲಾದ ಹದಿನಾಲ್ಕು ಲೇಖನಗಳನ್ನು ಪುಸ್ತಕ ರೂಪದಲ್ಲಿ ತರಲಾಗಿದೆ. ಬೇರೆ ಬೇರೆ ಕ್ಷೇತ್ರಗಳಲ್ಲಿ ಗುರುತಿಸಿಕೊಂಡ ವಿದ್ವಾಂಸರಿಂದ ಹೊರಬಂದ ಇಲ್ಲಿನ ಲೇಖನಗಳು ಹೆಚ್ಚು ಮೌಲಿಕವಾಗಿವೆ. 'ಚಿತ್ರಕಲೆ ಮತ್ತು ವಾಣಿಜೋದ್ಯಮ' ಎಂಬ ಲೇಖನವನ್ನು ಶಂಕರ ಪಾಟೀಲ ಬರೆದಿದ್ದು, ವಸ್ತುಗಳ ಮಾರಾಟ, ಪ್ರಚಾರದಲ್ಲಿ ಜಾಹೀರಾತುಗಳ ಪಾತ್ರ, ಅವುಗಳಿಗೆ ರಚಿಸುವ ಭಿತ್ತಿಚಿತ್ರಗಳ ವಿನ್ಯಾಸ, ಆಕರ್ಷಕ ವರ್ಣಗಾರಿಕೆ ಹೇಗಿರಬೇಕು ಎಂದು ಹೇಳುತ್ತಾರೆ. ಅಲ್ಲದೆ ಮಾರಾಟ ವಸ್ತುಗಳ ಹೆಸರು, ಗುಣಮಟ್ಟದ ಜಾಹೀರಾತು ಕೊಡುವ ವಿಧಾನ, ಮುಂತಾದವುಗಳನ್ನು ಅವರು ಇಲ್ಲಿ ವಿಶ್ಲೇಷಿಸಿದ್ದಾರೆ.

---

೧೬. ಎನ್.ಮರಿಶಾಮಾಚಾರ್ :(ಸಂ) : ಕಲಾಚೇತನ : ಸಂಯೋಜಿತ ಸಂಸ್ಥೆ (ರಿ) ಜಯನಗರ, ಬೆಂಗಳೂರು-೧೯೯೫

೧೭. ಡಾ:ಎಸ್.ಸಿ. ಪಾಟೀಲ : (ಸಂ) : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು : ಸ್ಕೂಲ್ ಆಫ್ ಆರ್ಟ ವಜ್ರ ಮಹೋತ್ಸವ ಸಮೀತಿ, ಧಾರವಾಡ: ೧೯೯೫.

'ಚಿತ್ರಕಲೆ ಮತ್ತು ಸಂಗೀತ' ಲೇಖನವನ್ನು ಸದಾನಂದ ಕನವಳ್ಳಿಯವರು ಬರೆದಿದ್ದಾರೆ. ಭಾರತೀಯ ಚಿತ್ರಕಲೆಯ ಭವ್ಯ ಪರಂಪರೆಯಲ್ಲಿ ರಾಗಮಾಲಾ ಚಿತ್ರಗಳ ಮಹತ್ವ, ಸಂಗೀತ ಮತ್ತು ಚಿತ್ರಕಲೆಯ ಸಂಬಂಧ, ರಾಗಮಾಲೆ ಚಿತ್ರಗಳ ಹಿನ್ನೆಲೆ, ಇವುಗಳನ್ನು ವಿವೇಚಿಸಿದ್ದಾರೆ. ಜೊತೆಗೆ ಒಂದೊಂದು ರಾಗಗಳಿಗೆ ಒಂದೊಂದು ದೇವತೆಗಳು, ಆಯಾ ದೇವರುಗಳ ಗುಣಲಕ್ಷಣಗಳು ಆಯಾ ಪ್ರದೇಶಗಳ ಸೃಷ್ಠಿ, ಆಯಾ ರಾಗಗಳನ್ನು ಚಿತ್ರಿಸುವ ಬಗೆ, ರಾಗಕ್ಕೆ ತಕ್ಕ ಹಾಗೆ ವರ್ಣಮೇಳ ಹೇಗೆ ಸೃಷ್ಟಿಸಬೇಕು ಎನ್ನುವಂತಹ ಅನೇಕ ಸಂಗತಿಗಳ ಬಗ್ಗೆ ವಿಶ್ಲೇಷಿಸಿದ್ದಾರೆ.

'ಚಿತ್ರಕಲೆ ಮತ್ತು ಶಿಲ್ಪ' ಈ ಲೇಖನವನ್ನು ಡಾ. ಸಿಂದಗಿ ರಾಜಶೇಖರ್ ಬರೆದಿದ್ದಾರೆ. ಚಿತ್ರಕಲೆ ಮತ್ತು ಶಿಲ್ಪ ಇವುಗಳಲ್ಲಿ ಯಾವುದು ಮೊದಲು ಎನ್ನುವುದನ್ನು ಗ್ರಹಿಸುವುದು ಸುಲಭ ಸಾಧ್ಯವಾದ ವಿಚಾರವಾದುದಲ್ಲ ಎನ್ನುತ್ತ, ಆದರೂ ಚಿತ್ರಕಲೆಯೇ ಮೊದಲು ಮಾನವನಿಂದ ಆರಂಭಗೊಂಡಿತು ಎಂಬುದನ್ನು ಹಲವು ಉದಾಹರಣೆಗಳ ಸಮೇತ ವಿವರಿಸಿದ್ದಾರೆ. ಜೊತೆಗೆ ಚಿತ್ರ ಮತ್ತು ಶಿಲ್ಪಕಲೆಗಳ ಪರಸ್ಪರ ಸಂಬಂಧ, ಪೂರಕವಾದ ಬೆಳವಣಿಗೆ ಮುಂತಾದವುಗಳನ್ನು ತಮ್ಮ ಲೇಖನದಲ್ಲಿ ಸಾದರಪಡಿಸಿದ್ದಾರೆ.

'ಚಿತ್ರಕಲೆ ಮತ್ತು ಮನೋವಿಜ್ಞಾನ' ಎಂಬ ಲೇಖನದಲ್ಲಿ ಡಾ.ಎಸ್.ಬಿ.ಹವಳಪ್ಪನವರ ಚಿತ್ರಕಲೆ ಮತ್ತು ಮನೋವಿಜ್ಞಾನಗಳ ಆಂತರಿಕ ಸಂಬಂಧಗಳನ್ನು ವಿಶ್ಲೇಷಿಸಿದ್ದಾರೆ. ಮಗು ತಾನು ಬೆಳೆಯುವಾಗ ತನ್ನ ಸುತ್ತಲಿನ ಪರಿಸರದ ಪ್ರಭಾವದಿಂದ ಅನೇಕ ಅಭಿರುಚಿಗಳನ್ನು ಹೊಂದುತ್ತದೆ. ಸಂವೇದನೆಯಲ್ಲಿ ವಸ್ತುಗಳನ್ನು ನೋಡಿದ ಮೇಲೆ ಅವು ಕಲೆಗಾರನ ಮನೋಮಂದಿರದಲ್ಲಿ ನೆಲೆಸುತ್ತವೆ. ಈ ಹಿನ್ನೆಲೆಯಲ್ಲಿ ಚಿತ್ರಕಲೆ ಮತ್ತು ಮನೋವಿಜ್ಞಾನಗಳು ಪೂರಕವಾದ ಅಂಶಗಳಾಗಿವೆ ಎಂಬಂತಹ ಅನೇಕ ವಿಚಾರಗಳನ್ನು ಇವರು ಪ್ರಸ್ತಾಪಿಸಿದ್ದಾರೆ.

'ಚಿತ್ರಕಲೆ ಮತ್ತು ಶಿಕ್ಷಣ' ಎಂಬ ಲೇಖನವನ್ನು ಡಾ.ಎಸ್.ಸಿ.ಪಾಟೀಲ ಬರೆದಿದ್ದಾರೆ. ಪ್ರಾಚೀನ ಕಾಲದಿಂದಲೂ ಮಾನವನ ಶಿಕ್ಷಣದಲ್ಲಿ ಚಿತ್ರಕಲೆಯ ಪಾತ್ರವನ್ನು ಕುರಿತಂತೆ ವೇದ, ಉಪನಿಷತ್ತು ಮತ್ತು ಭಗವದ್ಗೀತೆ ಮುಂತಾದ ಸಾಹಿತ್ಯ ಕೃತಿಗಳ ಉದಾಹರಣೆಗಳ ಮೂಲಕ ಬಿಂಬಿಸಿದ್ದಾರೆ. ಶಿಕ್ಷಣ ಮಾಧ್ಯಮದಲ್ಲಿ ಚಿತ್ರಕಲೆ ಏಕೆ ಬಹುಮುಖ್ಯವಾಗಿದೆ ಎಂಬುದಕ್ಕೆ ಹಲವಾರು ಕಾರಣಗಳನ್ನು ನೀಡಿದ್ದಾರೆ. ಯಾವುದೇ ವಿಷಯವು ಚಿತ್ರಕಲೆಯ ಮುಖಾಂತರ ಕಲಿಸಲ್ಪಟ್ಟಾಗ ಹೆಚ್ಚು ಪ್ರಭಾವಯುತವಾಗುತ್ತದಲ್ಲದೇ, ಮಗುವಿನಲ್ಲಿ ಆನಂದ, ಸಂತೋಷ, ಸಂಸ್ಕಾರಗಳನ್ನು ಉಂಟು ಮಾಡುತ್ತದೆ. ೧೯೮೬ರ ನಂತರ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಚಿತ್ರಕಲಾ ಶಿಕ್ಷಣಕ್ಕೆ ಮಹತ್ವ ನೀಡಿರುವ ಬಗ್ಗೆ ಲೇಖನದಲ್ಲಿ ಗಮನ ಸೆಳೆಯುತ್ತಾರೆ. ಈ ರೀತಿಯಾಗಿ ಎಲ್ಲ ಹದಿನಾಲ್ಕು ಲೇಖನಗಳೂ ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳನ್ನು ಕುರಿತಂತೆ ವಿದ್ವತ್ ಪೂರ್ಣವಾದ ಲೇಖನಗಳೇ ಆಗಿವೆ.

ಕನ್ನಡ ಚಿತ್ರಕಲಾ ಸಾಹಿತ್ಯದಲ್ಲಿ ಈ ಸಂಚಿಕೆಯು ಒಂದು ಮಹತ್ವಪೂರ್ಣ ಪ್ರಯತ್ನವೆನ್ನಬಹುದು. ಕಲಾ ವಿಷಯವಾಗಿರುವ ಯಾವುದೇ ಸಂಚಿಕೆ, ಸಂಪುಟಗಳು ಹೆಚ್ಚಿನ ಸಂದರ್ಭದಲ್ಲಿ ಕಲೆಯ ಕುರಿತಾಗಿಯೇ ರಚನೆಯಾಗುವುದು ಕಂಡುಬರುತ್ತದೆ. ಆದರೆ ಇಲ್ಲಿ ಚಿತ್ರಕಲೆಗೆ ಪೂರಕವಾಗಿರುವ ಕ್ಷೇತ್ರಗಳನ್ನು ಆಯ್ಕೆ ಮಾಡಿ ಅವುಗಳ ಬಗ್ಗೆ ಲೇಖನ ಬರೆಸಿರುವುದು ಗಮನಾರ್ಹವಾಗಿದೆ. ಚಿತ್ರಕಲೆಗೆ ಬೇರೆ ಕ್ಷೇತ್ರಗಳು ಹೇಗೆ ಪೂರಕವಾಗಿವೆ, ಯಾವ ಕ್ಷೇತ್ರಗಳು ಪೂರಕ ಎನ್ನುವಂತಹ ವಿವರಗಳು ಇಲ್ಲಿವೆ.

ಇದರಿಂದ ಚಿತ್ರಕಲಾವಿದರು ಬರಿ ತಮ್ಮ ಕ್ಷೇತ್ರದ ಬಗ್ಗೆ ಮಾತ್ರ ಚಿಂತಿಸದೆ ಇತರ ಪೂರಕ ಕ್ಷೇತ್ರಗಳ ಬಗ್ಗೆಯೂ ಹೇಗೆ ಮತ್ತು ಏಕೆ ಗಮನ ಹರಿಸಬೇಕು ಎನ್ನುವಂತಹ ವಿಚಾರಗಳನ್ನು ತಿಳಿಸಲಾಗಿದೆ. ಇದು ಇಂದಿನ ಆಧುನಿಕ, ಪ್ರಗತಿಪರ ಮತ್ತು ಜಾಗತೀಕರಣದ ಹಿನ್ನೆಲೆಯಲ್ಲಿ ಹೆಚ್ಚು ಪ್ರಸ್ತುತವಾದ ಪ್ರಯತ್ನವೂ ಆಗಿದೆ. ಎಲ್ಲ ಕ್ಷೇತ್ರಗಳಲ್ಲೂ ಇಂದು ಆಯಾ ಕ್ಷೇತ್ರಗಳಿಗೆ ಪೂರಕವಾದ ಬೇರೆ ಕ್ಷೇತ್ರಗಳನ್ನು ಗುರುತಿಸಿ ಹೊಸಹೊಸ ಉದ್ಯೋಗಾವಕಾಶಗಳನ್ನು ಸೃಷ್ಟಿಸುತ್ತಿರುವ ಸಂದರ್ಭದಲ್ಲಿ ಇಂತಹ ಪ್ರಯತ್ನಗಳು ಇನ್ನೂ ಹೆಚ್ಚಾಗಬೇಕು. ಆ ಹಿನ್ನೆಲೆಯಲ್ಲಿ ಈ ಸಂಚಿಕೆ ಮಹತ್ವ ಪಡೆದುಕೊಳ್ಳುತ್ತದೆ.

**ಸಾಕ್ಷಿ :**

ಇಲಕಲ್ಲಿನ ವಿಜಯ ಚಿತ್ರಕಲಾ ಮಹಾವಿದ್ಯಾಲಯವು ಸ್ಥಾಪನೆಯಾಗಿ ಐದು ವರ್ಷಗಳು ತುಂಬಿದ ಸಂದರ್ಭದಲ್ಲಿ ಅದರ ಸವಿನೆನಪಿಗಾಗಿ ಸ್ಮರಣ ಸಂಚಿಕೆಯೊಂದನ್ನು ಹೊರತರಲಾಗಿದೆ. 'ಸಾಕ್ಷಿ' ಎಂಬ ಹೆಸರಿನ ಈ ಸಂಚಿಕೆಯನ್ನು ಅದೇ ಕಾಲೇಜಿನ ಸಂಸ್ಥಾಪಕ ಪ್ರಾಚಾರ್ಯರಾದ ಬಸವರಾಜ ಗವಿಮಠರು ಸಂಪಾದಿಸಿದ್ದಾರೆ.[೧೮] ಇದರಲ್ಲಿ ಅಂತಹ ಪರಿಣಾಮಕಾರಿಯಾದ ಮತ್ತು ಮೌಲಿಕವಾಗಿರುವ ಯಾವುದೇ ಕಲಾ ಲೇಖನಗಳು ಇಲ್ಲ. ಕೇವಲ ಐದು ವರ್ಷಗಳಲ್ಲಿ ಕಲಾಶಾಲೆ ಹೇಗೆ ನಡೆದು ಬಂದಿತು ಎನ್ನುವ ಬಗ್ಗೆ ಅಲ್ಲಿ ನಡೆದ ವಿವಿಧ ಕಾರ್ಯಕ್ರಮಗಳ ಛಾಯಾಚಿತ್ರಗಳನ್ನು ಕೊಡಲಾಗಿದೆ.

ಇದರಲ್ಲಿರುವ ಪ್ರಮುಖ ಸಂಗತಿಗಳು ಛಾಯಾಚಿತ್ರಗಳ ಮೂಲಕವೆ ಬಿಂಬಿಸಲ್ಪಟ್ಟಿವೆ. ಮೊದಲಿಗೆ ಪ್ರಾಚಾರ್ಯರ ಮಾತುಗಳನ್ನು ಕೊಡಲಾಗಿದ್ದು, ಇಲ್ಲಿ ಕಲಾಶಾಲೆಯ ಸ್ಥಾಪನೆಯ ಹಿನ್ನೆಲೆ, ಬೆಳವಣಿಗೆ, ಸಹಾಯ ನೀಡಿದ ಮಹನೀಯರು, ಸಂಕಷ್ಟದ ಪರಿಸ್ಥಿತಿಗಳನ್ನು ಎದುರಿಸಿದ ರೀತಿ, ಶೈಕ್ಷಣಿಕ ವಿವರಗಳನ್ನು ಸ್ಥೂಲವಾಗಿ ತಿಳಿಸಿದ್ದಾರೆ. ಅದೇ ರೀತಿ ಕಾಲೇಜಿನ ಶಿಕ್ಷಕವರ್ಗ, ವಿದ್ಯಾರ್ಥಿವೃಂದ ಅವರ ಸಾಧನೆ–ಸಿದ್ಧಿಗಳು, ಅವರ ಕಲಾಕೃತಿಯ ಛಾಯಾಚಿತ್ರಗಳು, ಪ್ರಾಚಾರ್ಯರು ಭಾಗವಹಿಸಿದ ವಿವಿಧ ಕಾರ್ಯಕ್ರಮಗಳು ಮತ್ತು ಭೇಟಿ ಮಾಡಿದ ಗಣ್ಯರ ಛಾಯಾಚಿತ್ರಗಳನ್ನೂ ಕೊಡಲಾಗಿದೆ.

ಐದನೆಯ ವರ್ಷದ ಸಮಾರಂಭವನ್ನು ಅದ್ಧೂರಿಯಾಗಿ ನಡೆಸಿದ ಕುರಿತು ಛಾಯಾಚಿತ್ರಗಳಿದ್ದು, ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಸದಸ್ಯರ ಫೋಟೋಗಳನ್ನು ಕೊಡಲಾಗಿದೆ. ಇದರಲ್ಲಿ ಕಲೆಯ ಕುರಿತು ಒಂದೆರಡು ಲೇಖನಗಳನ್ನಾದರೂ ಕೊಟ್ಟಿದ್ದರೆ ಸಾಹಿತ್ಯಿಕ ದೃಷ್ಟಿಯಿಂದ ಪ್ರಸ್ತುತ ಸಂಚಿಕೆಗೆ ಒಂದು ಮೌಲ್ಯ ಬರುತ್ತಿತ್ತು ಎಂದು ಹೇಳಬಹುದು.

**ಶಿಕ್ಷಣದಲ್ಲಿ ಕಲಾಭಿವ್ಯಕ್ತಿಗೆ ಆಕರಗಳು :**

ಕರ್ನಾಟಕ ರಾಜ್ಯ ಚಿತ್ರಕಲಾ ಶಿಕ್ಷಕರ ಸಂಘದವರು ಕಲಾಪ್ರೇಮಿ, ಕಲಾ ಬರಹಗಾರ ಬಿ.ಪಿ. ಬಾಯಿರಿಯವರ ಸ್ಮರಣೆಗಾಗಿ ಈ ಕೃತಿಯನ್ನು ಹೊರತಂದಿದ್ದಾರೆ. ಇದನ್ನು ಎನ್. ಶ್ರೀಪತಿ ಸಂಪಾದನೆ ಮಾಡಿದ್ದು,[೧೯] ಇದರಲ್ಲಿ ಒಟ್ಟು ಹದಿನೈದು ಲೇಖನಗಳಿವೆ. ಈ ಸಂಪಾದನೆ ಕೃತಿಯಲ್ಲಿರುವ ಲೇಖನಗಳನ್ನು ಎರಡು ರೀತಿಯಲ್ಲಿ ವಿಂಗಡಿಸಬಹುದು. ಎರಡು ಲೇಖನಗಳು ಬಾಯಿರಿಯವರ ಪರಿಚಯಕ್ಕೆ ಸಂಬಂಧಿಸಿದ್ದರೆ, ಮತ್ತೆ ಉಳಿದ ಹದಿಮೂರು ಲೇಖನಗಳು ಕಲಾ ಶಿಕ್ಷಣಕ್ಕೆ ಸಂಬಂಧಿಸಿವೆ.

---

೧೮. ಬಸವರಾಜ ಗವಿಮಠ : ಸಂ: ಸಾಕ್ಷಿ : ವಿಜಯ ಚಿತ್ರಕಲಾ ಮಹಾವಿದ್ಯಾಲಯ, ಇಲಕಲ್ಲ– ೧೯೯೭.

೧೯. ಎನ್. ಶ್ರೀಪತಿ : (ಸಂ) : ಶಿಕ್ಷಣದಲ್ಲಿ ಕಲಾಭಿವ್ಯಕ್ತಿಗೆ ಆಕರಗಳು : ಕರ್ನಾಟಕ ರಾಜ್ಯ ಚಿತ್ರಕಲಾ ಶಿಕ್ಷಕರ ಸಂಘ (ರಿ) ಬೆಂಗಳೂರು– ೧೯೯೭

ಇದರಲ್ಲಿರುವ ಲೇಖನಗಳಲ್ಲಿ ಮಕ್ಕಳ ಚಿತ್ರಕಲೆ, ಶಿಕ್ಷಣದಲ್ಲಿ ಮನೋವಿಜ್ಞಾನ, ವಿದ್ಯಾರ್ಥಿಗಳಲ್ಲಿ ಆಲೋಚನಾ ಸಾಮರ್ಥ್ಯ ಬೆಳೆಸುವ ಅವಶ್ಯಕತೆ ಮತ್ತು ಸಲಹೆ, ಮಾನಸಿಕ ಬೆಳವಣಿಗೆಯ ದೃಷ್ಟಿಯಲ್ಲಿ ಮಕ್ಕಳ ಚಿತ್ರಕಲೆ, ಮಗು ಮತ್ತು ಚಿತ್ರಕಲಾ ಶಿಕ್ಷಣ, ಕಲಾ ಶಿಕ್ಷಣದ ಪ್ರಸಕ್ತ ಪಠ್ಯ ವಸ್ತುವಿನಲ್ಲಿ ನಾವೀನ್ಯತೆ, ಶಿಶುಕಲೆ, ಸೃಜನಶೀಲ ಅಭಿವ್ಯಕ್ತಿ, ಚಿತ್ರಕಲಾ ಮಾಧ್ಯಮ, ಪರಿಣಾಮಕಾರಿ ಬೋಧನೆ, ಕಲೆ-ಕಲಿಕೆ, ಚಿತ್ರಕಲೆಯ ಮೌಲ್ಯಮಾಪನ, ಶಿಕ್ಷಕರಿಗೆ ಸೇವಾ ಸೂತ್ರಗಳು ಎನ್ನುವ ಲೇಖನಗಳು ಕಲಾ ಶಿಕ್ಷಣಕ್ಕೆ ಸಂಬಂಧಿಸಿವೆ. ಶಿವರಾಮ ಕಾರಂತರು ಮಾಡಿದ ಭಾಷಣದ ಭಾಗವನ್ನು ಕೊಡಲಾಗಿದ್ದು, ಇದು ಬಾಯಿರಿಯವರ ಪರಿಚಯದ ಜೊತೆಗೆ ರಾಜ್ಯದ ಕಲಾಸ್ವರೂಪವನ್ನು ಸ್ಥೂಲವಾಗಿ ತಿಳಿಸಿಕೊಡುತ್ತದೆ.

ಈ ಕೃತಿಯು ಚಿತ್ರಕಲಾ ಸಾಹಿತ್ಯ ಕ್ಷೇತ್ರದಲ್ಲಿ ಗಮನಾರ್ಹವಾಗಿದ್ದು ಚಿತ್ರಕಲಾ ಶಿಕ್ಷಣದ ಬಗ್ಗೆ ಹೆಚ್ಚಿನ ಮಾಹಿತಿ ಒಳಗೊಂಡಿದೆ. ಕಲಾ ಶಿಕ್ಷಣಕ್ಕೆ ಪ್ರತ್ಯೇಕ ಮಾರ್ಗಸೂಚಿಗಳಿಲ್ಲ ಎಂಬುವ ಕೊರತೆಯನ್ನು ಸ್ವಲ್ಪ ಮಟ್ಟಿಗೆ ನೀಗಿಸುವ ಹಂತದಲ್ಲಿ ಈ ಕೃತಿ ಸಹಕಾರಿಯಾಗಬಲ್ಲುದು. ಕಲಾ ಶಿಕ್ಷಣದ ವೈಫಲ್ಯ, ಇತರೆ ಶಿಕ್ಷಣ ಕ್ರಮದಲ್ಲಿ ಚಿತ್ರಕಲೆಯ ಪಾತ್ರ ಮತ್ತು ಅಳವಡಿಕೆ, ಅದರಿಂದುಂಟಾಗುವ ಪ್ರಯೋಜನಗಳು, ಮುಂತಾದುವುಗಳಲ್ಲದೆ ಪ್ರಾಚೀನ ಪರಂಪರೆ ಹೊಂದಿದ ಚಿತ್ರಕಲೆ ಯಾವಾಗಲೂ ಶಿಕ್ಷಣ ನೀಡಿಕೆಯ ಕ್ರಮದಲ್ಲಿ ಹಿಂದುಳಿದಿರುವಿಕೆಗೆ ಕಾರಣಗಳಾವುವು ಎಂಬಂತಹ ವಿಚಾರಗಳು ಈ ಸಂಚಿಕೆಯ ಲೇಖನಗಳಿಂದ ತಿಳಿದುಬರುತ್ತವೆ.

**ಚೌಕಟ್ಟು :**

ಸಂಚಯ ಸಂಸ್ಥೆಯ ಹತ್ತನೆಯ ವಾರ್ಷಿಕೋತ್ಸವದ ಅಂಗವಾಗಿ ಏರ್ಪಡಿಸಿದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧವನ್ನು ಈ ಕೃತಿಯಲ್ಲಿ ಒಟ್ಟಾಗಿ ಪ್ರಕಟಿಸಲಾಗಿದೆ. ಇದನ್ನು ಎಚ್.ಎ. ಅನಿಲಕುಮಾರ ಸಂಪಾದನೆ ಮಾಡಿದ್ದು[೨೦] ಎಂಟು ಲೇಖನಗಳು ಇದರಲ್ಲಿವೆ. ಈ ಎಲ್ಲ ಲೇಖನಗಳ ಆಶಯ ಸಮಕಾಲೀನ ದೃಶ್ಯಕಲೆಯ ಇತ್ತೀಚಿನ ಒಲವು ನಿಲುವುಗಳನ್ನು ಕುರಿತಾಗಿದೆ.

'ದೃಶ್ಯ ಸಂಯೋಜನೆಯ ಅರಿವಿನ ಮರೆವಿನ ಚಿತ್ರ' ಲೇಖನವನ್ನು ಎಚ್.ಎ. ಅನಿಲಕುಮಾರ ಬರೆದಿದ್ದು, ನಮ್ಮ ಸಂಸ್ಕೃತಿಯ ಭಾಗವಾಗಿ ದೃಶ್ಯಾತ್ಮಕ ಅರಿವು ಹೇಗೆ ಕವಲೊಡೆದಿದೆ ಎಂಬುದನ್ನು ಕುರಿತು ಹೇಳುತ್ತಾರೆ. ಕೆ.ವಿ. ಸುಬ್ರಹ್ಮಣ್ಯಂ ಬರೆದಿರುವ ಕರ್ನಾಟಕದ ಸಮಕಾಲೀನ ಕಲೆಯ ಸಂವೇದನೆಯ ನೆಲೆಗಳು ಎಂಬ ಲೇಖನದಲ್ಲಿ ಸಮುದಾಯದ ಆರ್ಥಿಕ ವ್ಯವಸ್ಥೆ, ದೃಷ್ಟಿಸಂವೇದನೆಯ ನೆಲೆಗಳು, ಜನರ ನೋವು, ನರಳಾಟ, ತಳಮಳ, ಮಾನವ ಸೃಷ್ಟಿಸಿದ ದುರಂತಗಳು ಮುಂತಾದ ವಿಷಯಗಳ ಬಗ್ಗೆ ಬೆಳಕುಚೆಲ್ಲಲು ಪ್ರಯತ್ನಿಸಿದ್ದಾರೆ.

'ಸಮಕಾಲೀನ ಕಲೆಯ ಕೆಲವು ಸವಾಲುಗಳು' ಲೇಖನದಲ್ಲಿ ರಮೇಶಚಂದ್ರ ಅವರು ಸಾಂಸ್ಕೃತಿಕ ಬದುಕನ್ನು ದಾಖಲಿಸುವ ಪ್ರಯತ್ನ ಮಾಡಿದ್ದಾರೆ. ಜೊತೆಗೆ ಭಾರತೀಯ ಕಲೆಯು ಅನ್ಯ ಪ್ರಭಾವಗಳಿಂದ ಪ್ರೇರಿತವಾಗಿದ್ದರೂ ತನ್ನತನವನ್ನು ಉಳಿಸಿಕೊಂಡಿದೆ ಎನ್ನುತ್ತಾರೆ. ಹೀಗೆ ಇಲ್ಲಿರುವ ಎಲ್ಲ ಲೇಖನಗಳೂ ಸಮಕಾಲೀನ ಕಲೆಯ ದ್ವಂದ, ವೈರುಧ್ಯಗಳು, ಆಶಯ ಮತ್ತು ಪರಿಣಾಮಗಳ ಬಗ್ಗೆ ಮುಖ್ಯವಾಗಿ ಪ್ರತಿಪಾದಿಸುತ್ತವೆ.

---

೨೦. ಎಚ್.ಎ. ಅನಿಲಕುಮಾರ : (ಸಂ) : ಚೌಕಟ್ಟು : ಸಂಚಯ ಪ್ರಕಾಶನ, ಬೆಂಗಳೂರು-೧೯೯೭

ಬಹುಮುಖ್ಯವಾಗಿ ಸಮಕಾಲೀನ ಕಲೆಯ ರೂಪುರೇಷೆ, ನಿಲುವು, ಆಶಯ, ರಚನಾಕ್ರಮ, ವಸ್ತುವಿಷಯ, ಮಾಧ್ಯಮ, ಪರಿಕರಗಳು ಇಂತಹ ಸಂಗತಿಗಳಲ್ಲಿ ಬದಲಾವಣೆಯುಂಟಾದಂತೆ ಅವುಗಳನ್ನು ನೋಡುವ ಕಣ್ಣುಗಳು, ತಿಳಿದುಕೊಳ್ಳುವ ಆಂತರ್ಯ, ಅನುಭವಿಸುವ ಮನಸ್ಸುಗಳ ಜೊತೆಗೆ ವಿಮರ್ಶಿಸುವ ವಿಮರ್ಶಕನ ಹೊಣೆಯೂ ಬದಲಾಗಬೇಕಿದೆ ಎನ್ನುವ ವಿಚಾರಗಳನ್ನು ಇಲ್ಲಿನ ಲೇಖನಗಳು ತಿಳಿಸಿ ಕೊಡುತ್ತವೆ. ಕಲೆಗಾಗಿ ಕಲೆ ಎನ್ನುವ ನಿಲುವಿನಿಂದ ಭಿನ್ನವಾಗಿ ಸಮಾಜ ಮತ್ತು ಸಮುದಾಯಕ್ಕಾಗಿ ಕಲೆ ಎನ್ನುವ ಪರಿಕಲ್ಪನೆ ಸಮಕಾಲೀನ ಕಲೆಯ ಆಶಯಗಳಲ್ಲಿ ಮೂಡಬೇಕಿದೆ ಎನ್ನುವುದು ಈ ಸಂಚಿಕೆಯ ಉದ್ದೇಶಗಳಲ್ಲೊಂದು.

**ಸುವರ್ಣ ವಿಜಯ :**

ಗದುಗಿನ ವಿಜಯಕಲಾ ಮಂದಿರ ಸಂಸ್ಥೆಯ ಸುವರ್ಣ ಮಹೋತ್ಸವ ಸಮಾರಂಭದ ನೆನಪಿನ ಸಂಚಿಕೆಯಾಗಿ ಈ ಗ್ರಂಥವನ್ನು ಹೊರತರಲಾಗಿದೆ. ಇದನ್ನು ಅನ್ನದಾನಿ ಹಿರೇಮಠ ಅವರು[೨೧] ಸಂಪಾದನೆ ಮಾಡಿದ್ದಾರೆ. ಇದರಲ್ಲಿ ಗದುಗಿನ ವಿಜಯಕಲಾ ಮಂದಿರ ಸಂಸ್ಥೆಯ ಹುಟ್ಟು, ಬೆಳವಣಿಗೆ, ಈ ಸಂಸ್ಥೆಯ ರೂವಾರಿ ಟಿ.ಪಿ. ಅಕ್ಕಿಯವರ ವ್ಯಕ್ತಿತ್ವ ವಿವಿಧ ಕಲಾಪ್ರಕಾರ ಮತ್ತು ಕಲಾ ಶಿಕ್ಷಣದ ಬಗ್ಗೆ ಲೇಖನಗಳಿವೆ. ವಿವಿಧ ವಿದ್ವಾಂಸರು ಇವುಗಳನ್ನು ಬರೆದಿದ್ದಾರೆ.

'ಕಲಾ' ಎಂಬ ಲೇಖನವನ್ನು ಡಾ. ಪಂ.ಪುಟ್ಟರಾಜ ಕವಿಗವಾಯಿಗಳು, ಕರ್ನಾಟಕದಲ್ಲಿ ಕಲಾ ಶಿಕ್ಷಣ, ಟಿ.ಪಿ.ಅಕ್ಕಿಯವರು, ಸಮಕಾಲೀನ ಕಲೆ–ಅನ್ನದಾನಿ ಹಿರೇಮಠ, ದೃಷ್ಟಿ ಸವಿದ ಸೃಷ್ಟಿ ಈ ಚಿತ್ರಕಲೆ, ಸಿ.ಜಿ. ಹೆಬ್ಬಾಳ, ಮಕ್ಕಳಿಗೆ ನಾವೇಕೆ ಚಿತ್ರಕಲೆ ಕಲಿಸಬೇಕು–ಎ.ವಿ.ಗಂಧದ, ಅಜರಾಮರ–ರವೀಂದ್ರ ಕೊಪ್ಪರ, ಕಲಾಚೇತನ–ಡಿ.ವಿ. ಬಡಿಗೇರ, ಒಂದು ಶಿಸ್ತು – ಬಿ.ಪಿ. ಬಾಯಿರಿ, ಕಲಾ ಪ್ರಪಂಚದ ಚೇತನ–ಎಸ್.ಬಿ. ಸುಂಕದ, ನಾ ಕಂಡ ಕರುಣಾಮಯಿ–ಎಸ್.ಎ. ಭಾವಿ, ಟಿ.ಪಿ.ಅಕ್ಕಿ ಸೌಮ್ಯಶಕ್ತಿ–ಎಂ. ದಸ್ತಗೀರ, ಒಂದು ಶಕ್ತಿ–ಆರ್.ಜಿ. ರಾಯ್ಕರ, ಕಾವ್ಯಾಂಜಲಿ –ಅಮೃತೇಶ ತಾಂಡರ, ನುಡಿನಮನ ಎನ್ನುವ ಲೇಖನವನ್ನು ನೀಲಕಂಠ ಬರೆದಿದ್ದಾರೆ. ಇದಲ್ಲದೆ ರ್‍ಯಾಂಕ್ ವಿಜೇತರ ಪಟ್ಟಿ ಮತ್ತು ಟಿ.ಪಿ. ಅಕ್ಕಿಯವರ ಜೀವನದ ಪ್ರಮುಖ ಘಟನೆಗಳನ್ನು ಈ ಗ್ರಂಥದಲ್ಲಿ ಕೊಡಲಾಗಿದೆ.

ಈ ಸ್ಮರಣ ಸಂಚಿಕೆಯ ಕಲಾ ಎಂಬ ಲೇಖನದಲ್ಲಿ ಕಲೆಯನ್ನು ಆಧ್ಯಾತ್ಮದ ಹಿನ್ನೆಲೆಯಲ್ಲಿ ಬಿಂಬಿಸಲಾಗಿದೆ. ಎಲ್ಲ ಕಲೆಗಳು ಪರಮಾತ್ಮನ ಸಾಕ್ಷಾತ್ಕಾರದ, ಅನನ್ಯಭಾವ ತೀವ್ರತೆಯ ಭಕ್ತಿ ಮಾರ್ಗಗಳನ್ನೇ ಸಂಕೇತಿಸುತ್ತಿದ್ದು, ಪ್ರಾಚೀನರು ಆ ಕಾರಣವಾಗಿಯೇ ಕಲೆಯನ್ನು ಪೂಜ್ಯ ಭಾವದಿಂದ ನೋಡುತ್ತಿದ್ದರು ಎಂಬಂತಹ ವಿಚಾರಗಳನ್ನು ಹೇಳಲಾಗಿದೆ. ಸೃಷ್ಟಿಯಲ್ಲಿನ ಘಟನೆಗಳು ದೃಷ್ಟಿಗೋಚರವಾಗಿ ಪ್ರತಿ ಸೃಷ್ಟಿಗೊಳ್ಳುವ ವಿಚಾರಗಳು ದೃಷ್ಟಿ ಸವಿದ ಸೃಷ್ಟಿ ಎಂಬ ಲೇಖನದಲ್ಲಿ ಕಂಡುಬಂದರೆ, ಉಳಿದವುಗಳು ಟಿ.ಪಿ.ಅಕ್ಕಿಯವರ ವ್ಯಕ್ತಿ ಜೀವನ, ಕಲಾ ಬದುಕುಗಳನ್ನು ಕಟ್ಟಿ ಕೊಡುತ್ತವೆ. ಕಲಾ ಲೇಖನಗಳ ದೃಷ್ಟಿಯಿಂದ ಅಷ್ಟೊಂದು ಮಹತ್ವ ಪಡೆದುಕೊಳ್ಳದ ಈ ಸಂಚಿಕೆ ಐವತ್ತು ವರ್ಷಗಳನ್ನು ಪೂರೈಸಿದ ನೆನಪಿನ ಸಂಚಿಕೆ ಎನ್ನುವುದಕ್ಕೆ ಮುಖ್ಯವಾಗುತ್ತದೆ.

---

೨೧. ಅನ್ನದಾನಿ ಹಿರೇಮಠ : ಸಂ: ಸುವರ್ಣ ವಿಜಯ : ವಿಜಯ ಕಲಾ ಮಂದಿರ ಸಂಸ್ಥೆಯ ಸುವರ್ಣ ಮಹೋತ್ಸವ ಸಮಿತಿ, ಗದಗ –೧೯೯೭

**ಕಲಾ ಗಂಗೋತ್ರಿ :**

ಬೆಂಗಳೂರಿನಲ್ಲಿರುವ ಕಲೆ, ಸಾಹಿತ್ಯ, ಸಂಸ್ಕೃತಿ ಮತ್ತು ರಂಗಭೂಮಿ ಸಂಸ್ಥೆಯು ತನ್ನ ನಾಲ್ಕನೆಯ ವಾರ್ಷಿಕೋತ್ಸವದ ಸವಿನೆನಪಿಗಾಗಿ ಸ್ಮರಣ ಸಂಚಿಕೆಯೊಂದನ್ನು ಹೊರತಂದಿದೆ. ಕಲಾ ಗಂಗೋತ್ರಿ ಎಂದು ಹೆಸರಿಸಿರುವ ಇದನ್ನು ಶಿವಕುಮಾರ ಮತ್ತು ಜಿ.ಕೆ.ಶಿವಣ್ಣ ಸಂಯುಕ್ತವಾಗಿ ಸಂಪಾದನೆ ಮಾಡಿದ್ದಾರೆ.[೨೨] ಇದರಲ್ಲಿ ಲೇಖನಗಳು, ಕವನಗಳು, ನುಡಿಮುತ್ತುಗಳು ಮತ್ತು ಗಣ್ಯರ ಶುಭ ಸಂದೇಶಗಳನ್ನು ಪ್ರಕಟಿಸಲಾಗಿದೆ. ಕಲೆಯ ಕುರಿತ ಲೇಖನಗಳಲ್ಲಿ ಕೆಲವು ಚಿಕ್ಕ ಪ್ರಮಾಣದಲ್ಲಿದ್ದರೂ ಗಂಭೀರವಾಗಿ ಚಿಂತನೆಗೆ ತೊಡಗಿಸುವಂತಿವೆ. ಮತ್ತೆ ಕೆಲವು ಜಾಳು ಜಾಳಾಗಿವೆ. ಇದರಲ್ಲಿರುವ ಕಲಾ ಲೇಖನಗಳಲ್ಲಿ ಲಲಿತಾ ಹೊಯ್ಸಳ ಅವರು ಬರೆದ ಮಕ್ಕಳು ಮತ್ತು ಚಿತ್ರಕಲೆ, ಡಾ.ಅ.ಲ.ನರಸಿಂಹನ್ ಅವರ ಯುವಜನತೆ ಮತ್ತು ಚಿತ್ರಕಲೆ, ಹಾಗೂ ಯುವಜನತೆ ಮತ್ತು ಶಿಲ್ಪ ಗಮನಾರ್ಹವಾಗಿವೆ.

ಈ ಸಂಪಾದನಾ ಕೃತಿಯಲ್ಲಿ ಕೇವಲ ಚಿತ್ರಕಲಾ ಪ್ರಕಾರವಲ್ಲದೆ ಸಾಹಿತ್ಯ, ಸಂಗೀತ, ನಾಟಕ, ನೃತ್ಯ, ಜನಪದ ಹೀಗೆ ವಿವಿಧ ಕಲಾ ಪ್ರಕಾರಗಳಿಗೆ ಸಂಬಂಧಿಸಿದ ಲೇಖನಗಳೂ ಇವೆ. ಡಾ.ಆರ್. ಪೂರ್ಣಿಮಾ ಅವರ ಯುವಜನತೆ ಮತ್ತು ಸಾಹಿತ್ಯ, ಎಸ್.ಲಲಿತಾ ರಂಗಸ್ವಾಮಿಯವರ 'ಯುವಜನತೆ ಮತ್ತು ಸೇವೆ' ಲೇಖನಗಳು ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಪಟ್ಟಿದ್ದರೆ, ಅಪ್ಪಗೆರೆ ತಿಮ್ಮರಾಜು ಅವರ ಜಾನಪದ ಜಗತ್ತು ಜನಪದ ಕ್ಷೇತ್ರವನ್ನು ಪ್ರತಿನಿಧಿಸುತ್ತದೆ. ತುಮಕೂರು ಶಿವಕುಮಾರರ ಲೇಖನ ಮಕ್ಕಳ ರಂಗ ತರಬೇತಿ ಶಿಬಿರಗಳು ಏಕೆ ಮತ್ತು ಎಷ್ಟು ಅವಶ್ಯಕ?, ಹೂಲಿ ಶೇಖರ ಅವರ ದೂರದೃಷ್ಟಿ–ರಂಗಸೃಷ್ಟಿ, ಇವು ರಂಗಭೂಮಿಗೆ ಸಂಬಂಧಿಸಿವೆ. ಅದರಂತೆ ಎಸ್. ಸಂಧ್ಯಾ ಪುರಾಣಿಕರ ಭಾರತೀಯ ನಾಟ್ಯ ಪದ್ಧತಿ ಹಾಗೂ ಯುವಜನತೆ, ನಾಗಲಕ್ಷ್ಮೀ ದಾತಾರರ ನಾಟ್ಯಶಾಸ್ತ್ರ ಇವು ನಾಟ್ಯಕಲೆಗೆ ಸೇರಿದ್ದರೆ, ವೈ.ಎಸ್.ಜೋತಿ ಶಶಿಕುಮಾರರ ಯುವಜನರು ಮತ್ತು ಸಂಗೀತ ಇದು ಸಂಗೀತಕ್ಕೆ ಸಂಬಂಧಪಟ್ಟಿದೆ. ಸಾಹಸಕ್ರೀಡೆ ಹಾಗೂ ಯುವಜನರ ಸಾಮಾಜಿಕ ಹೊಣೆಗಾರಿಕೆ ಲೇಖನವನ್ನು ವೆಂಕಟೇಶ ಬರೆದಿದ್ದಾರೆ. ಈ ಕೃತಿಯಲ್ಲಿನ ಲೇಖನಗಳು ಚಿಕ್ಕದಾದರೂ ಬರವಣಿಗೆಯ ದೃಷ್ಟಿಯಿಂದ ಉತ್ತಮ ಮಟ್ಟದಲ್ಲಿವೆ. ಕೆಲವೇ ಲೇಖನಗಳು ತೀರಾ ಸಪ್ಪೆ ಎನ್ನುವಂತಿದ್ದರೂ ಕೆಲವು ಉಪಯುಕ್ತ ಮಾಹಿತಿ ನೀಡಬಲ್ಲವು.

**ಭೂತಾರಾಧನೆಯಲ್ಲಿ ಬಣ್ಣಗಾರಿಕೆ :**

ಉಡುಪಿಯಲ್ಲಿ ೧೯೯೩ರ ಏಪ್ರಿಲ್ ತಿಂಗಳು ೨೧ನೆಯ ತಾರೀಖಿನಂದು ಭೂತಾರಾಧನೆಯಲ್ಲಿ ಬಣ್ಣಗಾರಿಕೆ ಎಂಬ ವಿಷಯದ ಬಗ್ಗೆ ಕಮ್ಮಟ ನಡೆಸಲಾಯಿತು. ಅದರ ಸವಿನೆನಪಿಗಾಗಿ ಈ ಕೃತಿಯನ್ನು ನಂತರದ ದಿನಗಳಲ್ಲಿ ಪ್ರಕಟಿಸಲಾಯಿತು. ಈ ಕೃತಿಯನ್ನು ಡಾ.ವಿವೇಕ ರೈ ಅವರು ಸಂಪಾದನೆ ಮಾಡಿದ್ದು,[೨೩] ಭೂತಾರಾಧನೆಯ ಬಣ್ಣಗಾರಿಕೆಯ ಬಗ್ಗೆ ಮಹತ್ವದ ಸಂಗತಿಗಳನ್ನು ಒಳಗೊಂಡಿದೆ.

ಉಡುಪಿಯಲ್ಲಿ ನಡೆದ ಈ ಕಮ್ಮಟದಲ್ಲಿ ಕರಾವಳಿ ಭಾಗದ ವಿವಿಧ ಜನಾಂಗದ ಹಲವಾರು ಭೂತ ಪಾತ್ರಧಾರಿಗಳು ಭಾಗವಹಿಸಿದ್ದರು. ಅಲ್ಲಿ ಭಾಗವಹಿಸಿದ ಭೂತದ ಪಾತ್ರಧಾರಿಗಳನ್ನು ನೇರವಾಗಿ ಸಂದರ್ಶನ ಮಾಡಿ ವಿಷಯ ಸಂಗ್ರಹಣೆ ಮಾಡಿ ಈ ಕೃತಿ ರಚನೆ ಮಾಡಲಾಗಿದೆ.

---

೨೨. ತುಮಕೂರು ಶಿವಕುಮಾರ ಮತ್ತು ಜಿ.ಕೆ.ಶಿವಣ್ಣ : (ಸಂ) : ಕಲಾಗಂಗೋತ್ರಿ : ಕಲೆ, ಸಾಹಿತ್ಯ, ಸಂಸ್ಕೃತಿ ಮತ್ತು ರಂಗಭೂಮಿ ಸಂಸ್ಥೆ, ಬೆಂಗಳೂರು–೨೦೦೦

೨೩. ಡಾ.ಬಿ.ಎ. ವಿವೇಕ ರೈ : (ಸಂ) : ಭೂತಾರಾಧನೆಯಲ್ಲಿ ಬಣ್ಣಗಾರಿಕೆ : ಶ್ರೀ.ಧರ್ಮಸ್ಥಳ ಮಂಜುನಾಥೇಶ್ವರ ತುಳುಪೀಠ, ಮಂಗಳೂರು ವಿಶ್ವವಿದ್ಯಾಲಯ –೨೦೦೧.

ಇಲ್ಲಿ ಭೂತಗಳನ್ನು ಸಂದರ್ಶನ ಮಾಡಿದ ವಿದ್ವಾಂಸರಲ್ಲಿ ಅಮೃತ ಸೋಮೇಶ್ವರ, ಡಾ.ಕೆ.ಚಿನ್ನಪ್ಪಗೌಡ ಮತ್ತು ಡಾ. ಬಿ.ಎ. ವಿವೇಕ ರೈ ಅವರಂತಹ ವಿದ್ವಾಂಸರು ಸೇರಿದ್ದಾರೆ. ಇಲ್ಲಿ ಭಾಗವಹಿಸಿದ ಭೂತಗಳಲ್ಲಿ ಪಂಜುರ್ಲಿ, ನಂದಿಗೋಣ, ಗುಳ್ಳಿಗ, ಬಚ್ಚಮನಾಯಕ, ಬಿರ್ಮೆರ್ ಶಿವುರೆಡ್ಡಿ ಭೂತ, ಪಿಲಿ ಚಾಮುಂಡಿ, ಲೆಕ್ಕಸಿರಿ, ಕಲ್ಲುರ್ಟಿ, ಭೈರವ ಮುಂತಾದ ಭೂತಗಳು ಪಾಲ್ಗೊಂಡಿದ್ದವು. ಇಲ್ಲಿ ಸಂದರ್ಶನಕಾರರು ಕಲಾವಿದರ ಹಿನ್ನೆಲೆ, ಪಾತ್ರ ವೈವಿಧ್ಯ, ಭೂತಾರಾಧನೆಯ ಬಣ್ಣಗಾರಿಕೆ, ಲೇಪನ ವಿಧಾನ, ತಯಾರಿಕೆ ಕ್ರಮಗಳು, ಹೀಗೆ ಹಲವಾರು ಸಂಗತಿಗಳ ಬಗೆಗೆ ವಿವರ ನೀಡಿದ್ದಾರೆ.

ಈ ಕೃತಿಯು ಭೂತಾರಾಧನೆಯಲ್ಲಿ ಬಣ್ಣಗಾರಿಕೆ ಎಂಬುದಾಗಿದ್ದರೂ ಬಣ್ಣದ ಲೇಪನ, ಅವುಗಳ ತಯಾರಿಕೆ, ಕಲಾವಿದರ ಕಲಾವಂತಿಕೆಗಳ ದೃಷ್ಟಿಯಿಂದ ಚಿತ್ರಕಲಾವಿದರಿಗೂ ಉಪಯುಕ್ತವಾಗಿದೆ. ಇದರಲ್ಲಿರುವ ಬಣ್ಣಗಳ ಕುರಿತಾದ ಪಾರಂಪರಿಕ ತಿಳುವಳಿಕೆಗಳು ಚಿತ್ರಕಲಾವಿದರಿಗೆ ಅತ್ಯಮೂಲ್ಯವಾದವುಗಳು ಎಂದರೂ ತಪ್ಪಿಲ್ಲ. ಡಾ. ಬಿ.ಎ. ವಿವೇಕ ರೈ ಅವರ ಸಂಪಾದಕತ್ವದಲ್ಲಿ ಹೊರಬಂದ ಈ ಸಂಚಿಕೆ ಭಾಷಾ ಶೈಲಿ, ಬರವಣಿಗೆಯ ಪ್ರಬುದ್ಧತೆ, ಶಬ್ದ ಸಂಪತ್ತು, ಇವೆಲ್ಲವುಗಳ ದೃಷ್ಟಿಯಿಂದಲೂ ಉತ್ಕೃಷ್ಟವಾಗಿದೆ. ಇಲ್ಲಿ ವಿಷಯ ಮಂಡಿಸಿದ ವಿದ್ವಾಂಸರೆಲ್ಲರೂ ಆಯಾ ಕ್ಷೇತ್ರದಲ್ಲಿ ಪ್ರಬುದ್ಧತೆ ಹೊಂದಿದವರ ಸಹಜವಾಗಿಯೇ ಅವರ ವಿದ್ವತ್ತಿನ ಸೆಳಕು ಇಲ್ಲಿನ ಬರವಣಿಗೆಯಲ್ಲಿ ಗೋಚರಿಸುತ್ತದೆ. ಕಲಾದೃಷ್ಟಿಯಿಂದ ಮಾತ್ರವಲ್ಲದೇ ಜನಪದ ಕಲಾ ಪ್ರಕಾರದ ಹಿನ್ನೆಲೆಯಿಂದಲೂ ಇದೊಂದು ಗಮನಾರ್ಹ ಕೃತಿಯಾಗಿದೆ.

**ನಿಸರ್ಗ :**

ಚಿತ್ರಕಲಾ ಶಿಕ್ಷಕರ ನಾಲ್ಕನೇ ಮಹಾ ಸಮ್ಮೇಳನವು ಬಿಜಾಪುರದಲ್ಲಿ ೨೦೦೩ ಮಾರ್ಚ ೫, ೬, ೭ನೆಯ ದಿನಾಂಕಗಳಂದು ನಡೆಯಿತು. ಇದರ ಸವಿನೆನಪಿಗಾಗಿ ನಿಸರ್ಗ ಎಂಬ ಸ್ಮರಣ ಸಂಚಿಕೆಯನ್ನು ಹೊರತರಲಾಗಿದೆ. ಫ.ಗು. ಸಿದ್ಧಾಪುರ ಎಂಬುವರು[೨೪] ಸಂಪಾದನೆ ಮಾಡಿದ ಈ ಕೃತಿಯಲ್ಲಿ ಕಲೆಯ ಕುರಿತ ಲೇಖನಗಳಿವೆ. ಬದುಕಿನಲ್ಲಿ ಚಿತ್ರಕಲೆ ಎಂಬ ಲೇಖನವನ್ನು ಈಶ್ವರ ಎನ್.ಜೋಶಿ, ಚಿತ್ರಕಲೆ ಮತ್ತು ಶಿಕ್ಷಣ–ಡಾ.ಎಸ್.ಸಿ.ಪಾಟೀಲ, ವಿಜ್ಞಾನ ಮತ್ತು ಚಿತ್ರಕಲೆ–ಜಂಬುನಾಥ ಕಂಚ್ಯಾಣಿ, ಪ್ರಜಾಪ್ರಭುತ್ವ ಮತ್ತು ಶಿಕ್ಷಣ–ಡಾ. ವಿ.ಡಿ.ಐಹೊಳ್ಳಿ ಇವರು ಬರೆದಿದ್ದಾರೆ. ಇದರ ಜೊತೆಗೆ ಯೋಗಾಸನ, ಶಾಲೆಯಲ್ಲಿ ಶಿಸ್ತು, ಮಾತೃ ಭಾಷೆಯಲ್ಲಿ ಶಿಕ್ಷಣ ಎಂಬಂತಹ ವಿಷಯಗಳ ಕುರಿತಾಗಿಯೂ ಲೇಖನಗಳಿವೆ.

ಈ ಸ್ಮರಣ ಸಂಚಿಕೆಯ ಲೇಖನಗಳಲ್ಲಿ ಅವುಗಳ ಹೆಸರೇ ಸೂಚಿಸುವಂತೆ ಚಿತ್ರಕಲೆಯೊಂದಿಗೆ ಆಯಾ ಕ್ಷೇತ್ರಗಳ ಸಂಬಂಧಗಳನ್ನು ಕುರಿತು ಹೇಳುತ್ತವೆ. ಬದುಕಿನಲ್ಲಿ ಚಿತ್ರಕಲೆ ಎನ್ನುವ ಲೇಖನ ಜೀವನದಲ್ಲಿ ಚಿತ್ರಕಲೆಯ ಪಾತ್ರ, ಯಾವ ಸಂದರ್ಭಗಳಲ್ಲಿ ಬದುಕು ಚಿತ್ರಕಲೆಯನ್ನು ಅವಲಂಬಿಸುತ್ತದೆ ಎನ್ನುವುದರ ಜೊತೆಗೆ ಕಲಾತ್ಮಕ ಬದುಕು ಹೇಗಿರಬೇಕು ಎನ್ನುವ ಸಂಗತಿಗಳನ್ನು ತಿಳಿಸುತ್ತದೆ.

ಚಿತ್ರಕಲೆ ಮತ್ತು ಶಿಕ್ಷಣ ಎನ್ನುವ ಲೇಖನವು ಚಿತ್ರಕಲೆ ಶಿಕ್ಷಣದ ಸ್ವರೂಪ, ಸ್ಥಿತಿಗತಿಗಳನ್ನು ಬಿಂಬಿಸುವುದರ ಜೊತೆಗೆ ಇನ್ನಿತರ ಶಿಕ್ಷಣ ಕ್ರಮದಲ್ಲಿ ಕಲೆಯ ಪಾತ್ರವೇನು ಎಂಬಂತಹ ವಿಚಾರಗಳ ಬಗ್ಗೆ ಚರ್ಚಿಸುತ್ತದೆ. ವಿಜ್ಞಾನ ಮತ್ತು ಚಿತ್ರಕಲೆ ಎನ್ನುವ ಬರಹದಲ್ಲಿ ವೈಜ್ಞಾನಿಕ ಬೆಳವಣಿಗೆಗಳಿಂದ ಚಿತ್ರಕಲಾ ಕ್ಷೇತ್ರದಲ್ಲಿ ಉಂಟಾದ ಪರಿಣಾಮಗಳು, ನಿತ್ಯಬದುಕಿನಲ್ಲಿ ವೈಜ್ಞಾನಿಕ ಪ್ರಗತಿಯ ಬಿಂಬಗಳು ಮತ್ತು ಕಲಾ ಪ್ರಸಂಗಗಳನ್ನು ಜೊತೆ–ಜೊತೆಯಲ್ಲಿ ಇಟ್ಟು ನೋಡುತ್ತ ಕಲೆಯೂ ಒಂದು ಬಗೆಯ ವಿಜ್ಞಾನ ಎಂಬ ಅಭಿಪ್ರಾಯ ಪಡಲಾಗಿದೆ.

೨೪. ಪ.ಗು.ಸಿದ್ಧಾಪುರ : (ಸಂ) : ನಿಸರ್ಗ : ಬಿಜಾಪುರ, ಬಾಗಲಕೋಟೆ ಚಿತ್ರಕಲಾ ಶಿಕ್ಷಕರ ಸಂಘ, ಬಿಜಾಪುರ–೨೦೦೩.

ಪ್ರಜಾಪ್ರಭುತ್ವ ಮತ್ತು ಶಿಕ್ಷಣ ಎನ್ನುವ ಬರಹದಲ್ಲಿ ಸ್ವಾತಂತ್ರ್ಯ ನಂತರ ಪ್ರಜಾಪ್ರಭುತ್ವ ಹೊಂದಿದ ಭಾರತದ ಶಿಕ್ಷಣ ಪದ್ಧತಿಗಳ ಬಗೆಗೆ ವಿವೇಚಿಸಲಾಗಿದೆ. ಚಿತ್ರಕಲಾ ಶೈಕ್ಷಣಿಕ ವಿವರಗಳನ್ನು ಈ ಸಂಚಿಕೆ ಹೆಚ್ಚಾಗಿ ನೀಡುತ್ತದೆ.

**ಸ್ಪರ್ಶ :**

ಕರ್ನಾಟಕ ರಾಜ್ಯ ಚಿತ್ರಕಲಾ ಶಿಕ್ಷಕರ ೬ನೆಯ ಶೈಕ್ಷಣಿಕ ಮಹಾ ಸಮ್ಮೇಳನ ಹುಬ್ಬಳ್ಳಿಯಲ್ಲಿ ಫೆಬ್ರವರಿ ೨೭, ೨೮ (೨೦೦೭)ರಂದು ನಡೆಯಿತು. ಈ ಸಂದರ್ಭದಲ್ಲಿ ಸ್ಮರಣ ಸಂಚಿಕೆಯನ್ನು ಹೊರತರಲಾಗಿದ್ದು ಇದನ್ನು ಶ್ರೀಕಾಂತ ಕುಲಕರ್ಣಿ ಸಂಪಾದನೆ ಮಾಡಿದ್ದಾರೆ.[೨೫] ಈ ಕೃತಿಯಲ್ಲಿ ಕಲೆಯ ಕುರಿತ ಲೇಖನಗಳು ಮತ್ತು ಕವನಗಳಿವೆ. ಅನೇಕ ಜನರು ಇವುಗಳನ್ನು ಬರೆದಿದ್ದಾರೆ. ಒಟ್ಟು ಇಪ್ಪತ್ತಮೂರು ಲೇಖನಗಳು ಮತ್ತು ಹನ್ನೊಂದು ಕವನಗಳಿವೆ.

ಚಿತ್ರಕಲೆ ಒಂದು ಚಿಂತನೆ, ಅಪೂರ್ವ ಕಲಾ ಶಿಕ್ಷಕ ಹಾಲಭಾವಿ, ಕಲಾ ಶಿಕ್ಷಣದ ಚಿಂತನ, ಮಗುವಿನ ಜ್ಞಾನ ವಿಕಾಸಕ್ಕೆ ಚಿತ್ರಕಲೆ ಸಂಜೀವಿನಿ, ಕರ್ನಾಟಕದಲ್ಲಿ ಕಲೆಗೆ ಮುಸ್ಲಿಂಷಾಹಿ ಅರಸರ ಪ್ರೋತ್ಸಾಹ, ಕಲೆ ಮಾನವನ ಪ್ರಥಮಭಾಷೆ, ಚಿತ್ರಕಲೆಯ ನೆಲೆಬೆಲೆ, ಸಾಂಪ್ರದಾಯಿಕ ಕಲೆ ಮತ್ತು ನವ್ಯಕಲೆ, ಕಲೆಗಾರನಾಗು, ಮೌನಕಾವ್ಯ, ಚಿತ್ರಕಲೆ ಮತ್ತು ಸಮಾಜ, ಕಲೆಯ ಸಿರಿ ಹುಬ್ಬಳ್ಳಿ, ಚಿತ್ರಕಲೆಯ ಅವಶ್ಯಕತೆ, ಶಿಕ್ಷಣದಲ್ಲಿ ಚಿತ್ರಕಲೆಯ ಮಹತ್ವ ಎಂಬ ಲೇಖನಗಳಿವೆ. ಇವುಗಳ ಜೊತೆಗೆ ಕಲೆಯ ಮಹತ್ವ, ಗುರುವಿನ ಪ್ರೇರಣೆ, ಕಲೆಗೆ ಗಡಿ ಇಲ್ಲ ಅದು ಎಲ್ಲರ ಗುಡಿ, ಚಿತ್ರಕಲೆಯ ಮಹತ್ವ, ಬದುಕು, ಬಣ್ಣ, ಚಿತ್ರಕಲೆಯ ಜನನ ಹಾಗೂ ಬೆಳವಣಿಗೆ, ಚಿತ್ರಕಲೆಗೆ ಮಾಧ್ಯಮವಾಗಿ ಕಂಪ್ಯೂಟರ್, ಚಿತ್ರಕಲಾ ವಿಷಯ ಶಾಲಾ ಶಿಕ್ಷಣದಲ್ಲಿ ಕಡ್ಡಾಯವಾಗಲಿ ಎನ್ನುವ ಲೇಖನಗಳಿವೆ.

ಕವನಗಳು ಸಹಿತ ಚಿತ್ರಕಲೆ ವಿಷಯವಾಗಿಯೇ ರಚನೆಗೊಂಡಿವೆ. ನುಡಿಮುತ್ತುಗಳು, ಚುಟುಕುಗಳು ಸಹಿತ ಕಲಾ ವಿಷಯಗಳನ್ನು ಪ್ರತಿಬಿಂಬಿಸುತ್ತವೆ. ಇಲ್ಲಿನ ಕಲಾ ಲೇಖನಗಳನ್ನು ಅನೇಕ ಜನ ವಿದ್ವಾಂಸರು ಬರೆದಿದ್ದು, ಗುಣಮಟ್ಟದ ಹಿನ್ನೆಲೆಯಲ್ಲಿ ಉತ್ಕೃಷ್ಟವಾಗಿಲ್ಲ. ಅಲ್ಲದೆ ಕಂಪ್ಯೂಟರ್ ತಪ್ಪುಗಳು ಹೆಚ್ಚಾಗಿ ಉಳಿದುಕೊಂಡಿವೆ. ಸ್ಮರಣಸಂಚಿಕೆಯ ಹಿನ್ನೆಲೆಯ ಸಂಪಾದನಾ ಸಾಹಿತ್ಯದಲ್ಲಿ ಕಲಾನಿವೇದನ, ಕಲಾಶಿಕ್ಷಣ ವಿಚಾರ ಸಂಕಿರಣ, ಸುವರ್ಣಮಹೋತ್ಸವ ಸಂಚಿಕೆ ಸ್ಕೂಲ್ ಆಫ್ ಆರ್ಟ್ಸ ಧಾರವಾಡ, ಸಂಯೋಜನೆ, ಸಂತಕಲಾವಿದ ಶುಭರಾಯರು, ಜಾನಪದ ದರ್ಶನ, ಚಿತ್ರಾಕ್ಷಿ, ಕಲಾಚೇತನ, ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಸಾಕ್ಷಿ, ಶಿಕ್ಷಣದಲ್ಲಿ ಕಲಾಅಭಿವ್ಯಕ್ತಿಗೆ ಆಕರಗಳು, ಚೌಕಟ್ಟು, ಸುವರ್ಣವಿಜಯ, ಕಲಾಗಂಗೋತ್ರಿ, ಭೂತಾರಾಧನೆಯಲ್ಲಿ ಬಣ್ಣಗಾರಿಕೆ, ನಿಸರ್ಗ ಮತ್ತು ಸ್ಪರ್ಶ ಎಂಬ ಗ್ರಂಥಗಳ ಕುರಿತು ವಿವೇಚಿಸಲಾಗಿದೆ.

ಈ ಪ್ರಕಾರದ ಗ್ರಂಥಗಳನ್ನು ಕಲಾಶಾಲೆಗಳು, ಕಲಾಸಂಸ್ಥೆಗಳು, ಕಲಾಶಿಕ್ಷಕರ ಸಂಘಗಳು ಹೊರತಂದಿವೆ. ಕಲಾಸಂಸ್ಥೆ ಮತ್ತು ಕಲಾಶಾಲೆಗಳು ಹೊರತಂದ ಸ್ಮರಣಸಂಚಿಕೆಗಳಲ್ಲಿ ಹೆಚ್ಚಾಗಿ ಆಯಾ ಕಲಾಶಾಲೆಗಳ ಹಾಗೂ ಕಲಾಸಂಸ್ಥೆಗಳ ಹುಟ್ಟು, ಬೆಳವಣಿಗೆ, ಸಾಧನೆ-ಸಿದ್ಧಿಗಳಿಗೆ ಹೆಚ್ಚಿನ ಮಹತ್ವ ಕೊಡಲಾಗಿದೆ. ಕಲಾಶಾಲೆಗಳ ಹಿನ್ನಲೆಯಲ್ಲಿ ಹೊರಬಂದ ಸ್ಮರಣಸಂಚಿಕೆಗಳಲ್ಲಿ ಆಯಾ ಕಲಾಶಾಲೆಯ ವಿದ್ಯಾರ್ಥಿಗಳ ಸಾಧನೆ, ಅಧ್ಯಾಪಕರ ಸಾಧನೆಗಳನ್ನು ವಿಶೇಷವಾಗಿ ಬಿಂಬಿಸಲಾಗಿದೆ. ಅಲ್ಲದೆ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಬರೆದ ಲೇಖನ, ಕವನ, ಚುಟುಕುಗಳನ್ನು ಕೆಲವು ಸಂದರ್ಭಗಳಲ್ಲಿ ಪ್ರಕಟಿಸಲಾಗಿದೆ.

---

೨೫. ಶ್ರೀಕಾಂತ ಕುಲಕರ್ಣಿ : (ಸಂ) : ಸ್ಪರ್ಶ : ಕರ್ನಾಟಕ ರಾಜ್ಯ ಚಿತ್ರಕಲಾ ಶಿಕ್ಷಕರ ಆರನೆಯ ಶೈಕ್ಷಣಿಕ ಮಹಾಸಮ್ಮೇಳನ, ಹುಬ್ಬಳ್ಳಿ-೨೦೦೭

ಇದರ ಜೊತೆಗೆ ಕೆಲವು ಕಲಾಶಾಲೆಗಳು ಕಲಾಪ್ರಕಾರಗಳ ಬಗೆಗಿರುವ ಲೇಖನಗಳಿಗೂ ಮಹತ್ವಕೊಟ್ಟಿರುವುದು ಕಂಡುಬರುತ್ತದೆ. ಕಲಾಶಿಕ್ಷಕರ ಸಂಘಗಳು ಹೊರತಂದ ಸ್ಮರಣಸಂಚಿಕೆಗಳಲ್ಲಿ ಅವರ ಸಂಘದ ಕಾರ್ಯಚಟುವಟಿಕೆಗಳಲ್ಲದೆ, ಕಲಾಶಿಕ್ಷಣದ ಬಗ್ಗೆ ಲೇಖನಗಳನ್ನು ಪ್ರಕಟಿಸಲಾಗಿದೆ. ಈ ಪ್ರಕಾರದ ಸಂಪಾದನಾ ಸಾಹಿತ್ಯವು ಶೈಕ್ಷಣಿಕ ಅಂಶವನ್ನು ಹೆಚ್ಚಾಗಿ ಒಳಗೊಂಡಿವೆ.

**ಸಂಕೀರ್ಣ ಹಿನ್ನೆಲೆಯ ಸಂಪಾದನಾ ಸಾಹಿತ್ಯ :**

ಸಂಪಾದನಾ ಸಾಹಿತ್ಯದಲ್ಲಿ ಅಭಿನಂದನೆ ಹಿನ್ನೆಲೆಯ ಸಂಪಾದನಾ ಸಾಹಿತ್ಯ ಮತ್ತು ಸ್ಮರಣ ಸಂಚಿಕೆ ಹಿನ್ನಲೆಯ ಸಂಪಾದನಾ ಸಾಹಿತ್ಯ ಎಂಬ ಎರಡು ರೀತಿಯ ಗ್ರಂಥಗಳನ್ನು ಪರಿಗಣಸಲಾಗಿದ್ದು, ಇವುಗಳನ್ನು ಹೊರತುಪಡಿಸಿದ ಸಂಪಾದನಾ ಗ್ರಂಥಗಳನ್ನು ಸಂಕೀರ್ಣ ಹಿನ್ನಲೆಯ ಸಂಪಾದನಾ ಸಾಹಿತ್ಯ ಎಂದು ಪ್ರತ್ಯೇಕವಾಗಿ ವಿಂಗಡಿಸಬಹುದು. ಈ ಸಂಪಾದನಾ ಗ್ರಂಥದಲ್ಲಿ ಒಬ್ಬನೆ ವ್ಯಕ್ತಿ ಬರೆದ ಲೇಖನಗಳು ಇರಬಹುದು. ಇಲ್ಲವೆ ಹಲವು ಜನ ವಿದ್ವಾಂಸರು ಬರೆದ ಲೇಖನಗಳಿರಬಹುದು. ಅವುಗಳನ್ನೆಲ್ಲ ಒಟ್ಟಾಗಿ ಸೇರಿಸಿ ಸಂಪಾದನೆ ಮಾಡಿರುವ ಗ್ರಂಥಗಳನ್ನು ಈ ಗುಂಪಿನಲ್ಲಿ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಚಿತ್ರಕಲಾ ಕ್ಷೇತ್ರದಲ್ಲಿ ಇರುವ ಇಂತಹ ಸಂಪಾದನಾ ಗ್ರಂಥಗಳನ್ನು ಈ ಕೆಳಗಿನಂತೆ ವಿವೇಚಿಸಬಹುದು.

**ಸೌಂದರ್ಯ ಮತ್ತು ಕಲೆ :**

ಸೌಂದರ್ಯ ಮತ್ತು ಕಲೆ ಎನ್ನುವ ಈ ಕೃತಿಯನ್ನು ಕೆ.ಬಿ. ರಾಮಕೃಷ್ಣರಾವ್ ಸಂಪಾದನೆ ಮಾಡಿದ್ದಾರೆ.[೨೬] ಸಾಮಾನ್ಯವಾಗಿ ಎಲ್ಲ ಕಲೆಗಳಿಗೂ ಅನ್ವಯಿಸುವ ಸೌಂದರ್ಯದ ಪ್ರತಿಪಾದನೆಯನ್ನು ಇಲ್ಲಿ ಮಾಡಲಾಗಿದೆ. ಪ್ರತ್ಯೇಕವಾಗಿ ಚಿತ್ರಕಲೆಯ ಬಗ್ಗೆ ವಿವರಣೆ ಕಂಡುಬರುವುದಿಲ್ಲ. ಆದರೆ ಸಾಂದರ್ಭಿಕವಾಗಿ ಸೌಂದರ್ಯ ಸಿದ್ಧಾಂತ ವಿವೇಚಿಸುವಾಗ ಎಲ್ಲ ಕಲೆಗಳ ಜೊತೆಗೆ ಚಿತ್ರಕಲೆಯ ಉದಾಹರಣೆಯನ್ನು ಸಾಂದರ್ಭಿಕವಾಗಿ ಕೊಡಲಾಗಿದೆ.

ಈ ಕೃತಿಯಲ್ಲಿ ಎರಡು ಭಾಗ ಮಾಡಿಕೊಂಡು ವಿಷಯ ನಿರೂಪಿಸಲಾಗಿದೆ. ಮೊದಲನೆಯ ಭಾಗದಲ್ಲಿ ಸೌಂದರ್ಯ ಪರಿಕಲ್ಪನೆಯನ್ನು ವಿವಿಧ ಕಲೆಗಳ ಹಿನ್ನೆಲೆಯಲ್ಲಿ ವಿವೇಚನೆ ಮಾಡಲಾಗಿದ್ದರೆ, ಎರಡನೆಯ ಭಾಗದಲ್ಲಿ ಕಲೆಯ ರಚನೆ, ಕಲಾವಿದ, ಕಲಾಕೃತಿ ಮತ್ತು ಸಹೃದಯ ಇವುಗಳ ಸಹ ಸಂಬಂಧಗಳು, ಕಲಾತತ್ವಗಳನ್ನು ಕುರಿತು ಚರ್ಚಿಸಲಾಗಿದೆ. ಸುಂದರವಾದುದು, ಸುಂದರವಲ್ಲದ್ದು, ಸೌಂದರ್ಯಶಾಸ್ತ್ರದ ಪರಿಧಿ ಎಷ್ಟು, ಅತ್ಯಂತಿಕವಾದ ಆನಂದ, ಕಲೆಗಾಗಿ ಕಲೆ ಅಲ್ಲ, ಕಲೆ ಬ್ರಹ್ಮ ಸೂಚಿಯಾಗಿರಬೇಕು, ಕಲೆಯು ನೀಡುವ ವಿಶಿಷ್ಟ ರೀತಿಯ ಆನಂದ ಮುಂತಾದ ಅಂಶಗಳು ಇಲ್ಲಿ ವಿವೇಚನೆಗೊಳಪಟ್ಟಿವೆ.

ಕಲಾತತ್ವಶಾಸ್ತ್ರ ದೃಷ್ಟಿಯಿಂದ ಮುಖ್ಯವಾಗುವ ಈ ಕೃತಿ ಚಿತ್ರಕಲಾ ಸಾಹಿತ್ಯದಲ್ಲಿ ಗಮನಾರ್ಹವಾಗಿದೆ ಎನ್ನಬಹುದು. ಕಲಾತತ್ವಶಾಸ್ತ್ರ ಮತ್ತು ಸೌಂದರ್ಯ ಶಾಸ್ತ್ರಗಳ ಬಗೆಗಿನ ಕೊರತೆಯನ್ನು ಇದು ನೀಗಿಸುತ್ತದೆ. ಪಾಶ್ಚಾತ್ಯ ಕಲಾಮೀಮಾಂಸಕರ ಅಭಿಪ್ರಾಯಗಳು, ಭಾರತೀಯ ಚಿಂತಕರ ಅಭಿಪ್ರಾಯಗಳು ಇಲ್ಲಿ ಹೇಳಲ್ಪಟ್ಟಿವೆ. ರಸನಿಷ್ಪತ್ತಿ, ಔಚಿತ್ಯ, ಸಾಧಾರಣೀಕರಣ, ಮಾನಸಿಕದೂರ, ನವರಸಗಳು, ಅಲಂಕಾರ, ಪ್ರತಿಭೆ, ಕೃತಿ ಮತ್ತು ಕೃತಿಕಾರನ ಸಂಬಂಧಗಳು, ಸೌಂದರ್ಯ ಮತ್ತು ಕಲೆಯ ಮೂಲ ಪರಿಕಲ್ಪನೆಗಳು ಹೀಗೆ ಹಲವಾರು ವಿಚಾರಗಳ ಬಗ್ಗೆ ಬೆಳಕು ಚೆಲ್ಲುವ ಈ ಪುಸ್ತಕವು ಕಲಾಸಾಹಿತ್ಯದಲ್ಲಿ ಮುಖ್ಯವಾಗಿದೆ.

೨೬. ಕೆ.ಬಿ. ರಾಮಕೃಷ್ಣರಾವ್ : (ಸಂ) : ಸೌಂದರ್ಯ ಮತ್ತು ಕಲೆ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ಮೈಸೂರು-೧೯೭೧.

**ಪ್ರಶಸ್ತಿ ಪಡೆದ  ಕಲಾವಿದರು :**

ಕರ್ನಾಟಕ ಲಲಿತ ಕಲಾ ಅಕಾಡೆಮಿಯು ಶ್ರೇಷ್ಠ ಚಿತ್ರಕಾರರನ್ನು ಮತ್ತು ಶಿಲ್ಪಿಗಳನ್ನು ಗುರುತಿಸಿ, ಪ್ರಶಸ್ತಿ ನೀಡುವ ಸಂಪ್ರದಾಯವನ್ನು ೧೯೬೫ ರಿಂದ ನಡೆಸಿಕೊಂಡು ಬಂದಿದೆ. ಕೆಲವು ಸಂದರ್ಭದಲ್ಲಿ ಇಂತಹ ಪ್ರಶಸ್ತಿ ಪಡೆದ ಕಲಾವಿದರ ಬಗ್ಗೆ ಪರಿಚಯ ಲೇಖನಗಳ ಸಂಪುಟಗಳನ್ನು ಹೊರತರಲಾಗಿದೆ. ಪ್ರಸ್ತುತ ಕೃತಿಯು  ಅಂತಹ ಪ್ರಶಸ್ತಿ ಪಡೆದ ಕಲಾವಿದರ ಪರಿಚಯ ಲೇಖನಗಳುಳ್ಳ ಸಂಪುಟವಾಗಿದ್ದು, ಇದನ್ನು ಪಿ.ಆರ್. ತಿಪ್ಪೇಸ್ವಾಮಿಯವರು ಸಂಪಾದನೆ ಮಾಡಿದ್ದಾರೆ.[೨೭]

ಈ ಪುಸ್ತಕದಲ್ಲಿ ಒಟ್ಟು  ೬೩ ಜನ ಪ್ರಶಸ್ತಿ ಪಡೆದ ಕಲಾವಿದರ ಪ್ರಸ್ತಾಪವಿದೆ. ಈ ಎಲ್ಲ ಕಲಾವಿದರು ತಮ್ಮ ಕಲಾಬದುಕಿನಲ್ಲಿ, ಕಲೆಯ ಕ್ಷೇತ್ರದಲ್ಲಿ  ಉನ್ನತ ಸಾಧನೆ, ಸಿದ್ಧಿ ಪಡೆದವರೇ ಆಗಿದ್ದಾರೆ. ಅಲ್ಲದೇ ಇಲ್ಲಿ ಪರಿಚಯಿಸಲ್ಪಟ್ಟ ಕಲಾವಿದರೆಲ್ಲರೂ  ಮುಂಬೈನ ಜೆ.ಜೆ. ಕಲಾಶಾಲೆಯಲ್ಲಿ ಮತ್ತು ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಕಲಾ ಶಿಕ್ಷಣವನ್ನು  ಪಡೆದವರಾಗಿದ್ದಾರೆ ಎಂಬುದು ಗಮನಾರ್ಹ.

ಈ ಕೃತಿಯಲ್ಲಿ ಆಯಾ ಕಲಾವಿದರ ಭಾವಚಿತ್ರದೊಂದಿಗೆ ಅವರ ಕಲಾ ಬದುಕಿನ ವಿವರಗಳನ್ನು ಸ್ಥೂಲವಾಗಿ  ಕೊಡಲಾಗಿದೆ. ಅಲ್ಲದೆ ಕಲಾವಿದರ ಕುರಿತಾಗಿ ಮಾಹಿತಿ ನೀಡುವಾಗ ಜನನ, ಬಾಲ್ಯ, ಕಲಾಶಿಕ್ಷಣ, ಕಲಾಕೃತಿ ರಚನೆ, ಭಾಗವಹಿಸಿದ ಶಿಬಿರ ಮತ್ತು ಪ್ರದರ್ಶನಗಳು,  ಪಡೆದ ಪ್ರಶಸ್ತಿ ಗೌರವಗಳು ಸ್ಥೂಲ ರೂಪದಲ್ಲಿ ಹೇಳಲ್ಪಟ್ಟಿವೆ. ಕೆಲವು ಸಂದರ್ಭದಲ್ಲಿ ಪ್ರಭಾವ, ಪ್ರೇರಣೆ, ಚಿತ್ರಶೈಲಿ, ಕಲಾಚಟುವಟಿಕೆ ಮತ್ತು ಇನ್ನಿತರ ಸಾಂಸ್ಕೃತಿಕ ಚಟುವಟಿಕೆಗಳ ಬಗೆಗಿನ ಮಾಹಿತಿಯನ್ನು ಇಲ್ಲಿ ಕೊಡಲಾಗಿದೆ. ಕಲಾವಿದರ ಕುರಿತಾದ ಮಾಹಿತಿಯನ್ನು ಹೀಗೆ ಕೊಡುವುದರಿಂದ ಅವರ ಕಲೆ, ಕಲಾಶೈಲಿ, ಸಾಧನೆ, ಸಿದ್ಧಿಗಳು, ಸಮಕಾಲೀನ ಕಲೆಯ ವಾತಾವರಣ  ಮುಂತಾದುವು ತಿಳಿದು ಬರುತ್ತವಲ್ಲದೆ ಮುಂದಿನ ಪೀಳಿಗೆಗೆ ಕಾಯ್ದಿಡುವ ನಿಟ್ಟಿನಲ್ಲಿ ಪ್ರಮುಖ ಆಕರಗಳಾಗಿ ಹೊರಹೊಮ್ಮತ್ತವೆ.

**ಕೆ. ವೆಂಕಟಪ್ಪ : ಸವಿ ನೆನೆಪು :**

ಕರ್ನಾಟಕ ಕಲಾ ಸಾಹಿತ್ಯದಲ್ಲಿ ಕೆ. ವೆಂಕಟಪ್ಪ ಮತ್ತು ಹೆಬ್ಬಾರರ ಬಗ್ಗೆ ಬಂದಷ್ಟು ಬರಹಗಳು ಇನ್ನಿತರ ಕಲಾವಿದರ ಬಗ್ಗೆ ಬಂದಿಲ್ಲ. ಕೆ. ವೆಂಕಟಪ್ಪನವರ ಬಗ್ಗೆ ಬಂದಿರುವ ಇತರೆಲ್ಲ ಪುಸ್ತಕಗಳಿಗಿಂತ ವಿಶಿಷ್ಟವಾಗಿ ಈ  ಸಂಪಾದನಾ ಕೃತಿಯು ಮೂಡಿ ಬಂದಿದೆ. ಇದನ್ನು ಎಸ್.ಎನ್. ಚಂದ್ರಶೇಖರ್ ಸಂಪಾದನೆ ಮಾಡಿದ್ದು,[೨೮] ವೆಂಕಟಪ್ಪನವರ ಬಗ್ಗೆ ವಿವಿಧ ಆಯಾಮಗಳಿಗೆ  ಸ್ಪಂದಿಸುವ ಲೇಖನಗಳಿವೆ. ಇಲ್ಲಿನ ಲೇಖನಗಳನ್ನು ಖ್ಯಾತ ಸಾಹಿತಿಗಳು ಮತ್ತು ಕಲಾವಿದರು ಬರೆದಿದ್ದು  ಪ್ರಬುದ್ಧವಾಗಿವೆ.

ಈ ಪುಸ್ತಕದಲ್ಲಿ  ವೆಂಕಟಪ್ಪನವರನ್ನು ಕುರಿತು  ಒಟ್ಟು ಏಳು ಲೇಖನಗಳಿವೆ.  'ವರ್ಣ ಶಿಲ್ಪಿ' ಲೇಖನವನ್ನು ಕುವೆಂಪುರವರು, 'ಕಲಾತಪಸ್ವಿ'ಯನ್ನು ಎಂ.ವಿ. ಸೀತಾರಾಮಯ್ಯ, 'ಕುಂಚದೊಂದಿಗೆ ಹುಟ್ಟಿದನೋ' ಎಂಬ ಲೇಖನವನ್ನು ಸಿ.ನಿಜಲಿಂಗಪ್ಪ, 'ಸಿದ್ಧಿಪುರುಷ' ಎಂಬುದನ್ನು ವೈ.ಸುಬ್ರಹ್ಮಣ್ಯರಾಜು, 'ನನ್ನ ವಿಶಿಷ್ಟ ರೋಗಿ' ಲೇಖನವನ್ನು ಡಾ.ಕೆ.ರಂಗಾಚಾರ್ಯ, 'ವರ್ಣಮಯ ಬದುಕು' ಎಂ.ಎಸ್. ನಂಜುಂಡರಾವ್ ಮತ್ತು  'ಆದರ್ಶಜೀವಿ' ಎಂಬ ಲೇಖನವನ್ನು ಪಿ.ಆರ್.ತಿಪ್ಪೇಸ್ವಾಮಿಯವರು ಬರೆದಿದ್ದಾರೆ.

---

೨೭. ಪಿ.ಆರ್. ತಿಪ್ಪೇಸ್ವಾಮಿ : (ಸಂ) : ಪ್ರಶಸ್ತಿ ಪಡೆದ ಕಲಾವಿದರು : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೭

೨೮. ಎಸ್.ಎನ್.ಚಂದ್ರಶೇಖರ್ : (ಸಂ) : ಕೆ.ವೆಂಕಟಪ್ಪ  ಸವಿನೆನಪು :  ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೭

ಈ ಕೃತಿಯಲ್ಲಿನ ಲೇಖನಗಳನ್ನು ಆಯಾ ಕ್ಷೇತ್ರದಲ್ಲಿ ಹೆಸರು ಮಾಡಿದ ಶ್ರೇಷ್ಠ ವಿದ್ವಾಂಸರೆ ಬರೆದಿದ್ದು, ಅವರ ಜ್ಞಾನ ಪರಿಧಿಯ ಹಿನ್ನೆಲೆಯಿಂದ ಮೌಲಿಕವಾಗಿ ಮೂಡಿ ಬಂದಿದೆ. ವರ್ಣಶಿಲ್ಪಿ ಲೇಖನವು ವೆಂಕಟಪ್ಪನವರ ಕಲೆ ಮತ್ತು ಕಲಾಕೃತಿ ರಚನೆಗೆ ಪ್ರಾಮುಖ್ಯತೆ ನೀಡಿದ್ದರೆ, ಕಲಾತಪಸ್ವಿಯು ಕಲಾ ಬದುಕಿಗೆ ಮಹತ್ವ ಕೊಟ್ಟಿದೆ. ಸಿದ್ಧಿ ಪುರುಷ ಲೇಖನದಲ್ಲಿ ಕಲೆ ಮತ್ತು ದೈವತ್ವದ ಭಾವನೆಗಳ ಹಿನ್ನೆಲೆಯಲ್ಲಿ ಅವರ ಕೃತಿಗಳನ್ನು ವಿಶ್ಲೇಷಿಸಲಾಗಿದ್ದರೆ, ಆದರ್ಶ ಜೀವಿ ಲೇಖನದಲ್ಲಿ ಅವರ ಲೌಕಿಕ ಬದುಕಿಗೆ ಪ್ರಾಮುಖ್ಯತೆ ಕೊಡಲಾಗಿದೆ. ವೆಂಕಟಪ್ಪನವರ ಬಗೆಗಿನ ಹಲವಾರು ಸಂಗತಿಗಳನ್ನು ತಿಳಿಸಿ ಕೊಡುವ ಈ ಕೃತಿಯು ಕರ್ನಾಟಕ ಕಲಾ ಸಾಹಿತ್ಯದಲ್ಲಿ ಗಮನಾರ್ಹವಾಗಿದೆ.

**ಕಲೆ ಮತ್ತು ರಸಾಸ್ವಾದನೆ :**

ಕಲಾ ಶಾಲೆಯ ಅಧ್ಯಾಪಕರಿಗೆ ರಾಜ್ಯ ಲಲಿತ ಕಲಾ ಅಕಾಡೆಮಿಯು ಕಲಾ ರಸಗ್ರಹಣ ಕಾರ್ಯಗಾರವನ್ನು ೧೯೮೮ನೇ ಇಸ್ವಿಯ ಡಿಸೆಂಬರ್ ತಿಂಗಳಲ್ಲಿ ನಡೆಸಿತು. ಐದು ದಿನಗಳು ನಡೆದ ಈ ಕಾರ್ಯಾಗಾರದಲ್ಲಿ ಉಪನ್ಯಾಸ, ಪ್ರಾತ್ಯಕ್ಷಿಕೆ, ಸ್ಲೈಡ್ಸ ಪ್ರದರ್ಶನ, ಚಿತ್ರ ಪ್ರದರ್ಶನಗಳನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಗಾರದಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಮಂಡಿಸಲಾದ ಪ್ರಬಂಧಗಳನ್ನು ಪುಸ್ತಕ ರೂಪದಲ್ಲಿ ಹೊರತರಲಾಗಿದೆ. ಈ ಕೃತಿಯನ್ನು ಎಂ.ಎಚ್. ಕೃಷ್ಣಯ್ಯ ಎಂಬುವರು[೨೯] ಸಂಪಾದನೆ ಮಾಡಿದ್ದಾರೆ.

ಈ ಸಂಪಾದನಾ ಕೃತಿಯಲ್ಲಿರುವ ಲೇಖನಗಳು ಪ್ರಮುಖವಾಗಿ ನವ್ಯಕಲೆ, ದೃಶ್ಯಕಲೆಗಳನ್ನು ಆಸ್ವಾದಿಸುವ ಮತ್ತು ಪರಿಭಾವಿಸುವ ವಿಷಯ ಕುರಿತಾಗಿವೆ. ಇಲ್ಲಿ ಒಟ್ಟು ಹದಿಮೂರು ಲೇಖನಗಳಿದ್ದು ಕಲಾ ಪ್ರಕಾರ, ಕಲಾ ಶಿಕ್ಷಣ, ಕಲಾ ವಿಮರ್ಶೆ ಎಂಬ ಮೂರು ವಿಚಾರಗಳನ್ನು ಬಿಂಬಿಸುತ್ತವೆ, ಶಿಕ್ಷಣ ಕಲೆ, ಕಲೆ ಮತ್ತು ಮನಶಾಸ್ತ್ರ ಎನ್ನುವ ಲೇಖನಗಳು ಕಲಾ ಶಿಕ್ಷಣಕ್ಕೆ ಸಂಬಂಧಿಸಿದ್ದರೆ, ಕಲಾರಸಗ್ರಹಣ, ಕಲೆ ಮಾಧ್ಯಮ ಮತ್ತು ರಸಾನುಭವ, ಚಿತ್ರಕಲೆಯ ಪರಿಭಾಷೆ ಮತ್ತು ಸಾಮಗ್ರಿ, ರಸತತ್ವ ಸೌಂದರ್ಯ ಪ್ರಜ್ಞೆ, ನಾನು ಹೇಗೆ ಕಲಾ ವಿಮರ್ಶೆ ಮಾಡುತ್ತೇನೆ, ಇನ್ನುಳಿದ ಲೇಖನಗಳಾದ ಕಲೆ ಎಂದರೇನು?, ಪ್ರಾಚೀನ ಗ್ರಂಥಗಳಲ್ಲಿ ಚಿತ್ರಕಲೆ, ಕರ್ನಾಟಕದಲ್ಲಿ ಚಿತ್ರಕಲೆ, ಭಾರತೀಯ ಸಾಂಪ್ರದಾಯಿಕ ಶಿಲ್ಪಕಲೆ, ವಿವಿಧ ಕಲೆಗಳ ನಡುವಿನ ಸಂಬಂಧ, ಸಂಯೋಜನೆ ಒಂದು ಟಿಪ್ಪಣಿ ಇವುಗಳು ಕಲಾ ಪ್ರಕಾರದ ಗುಂಪಿಗೆ ಸೇರುತ್ತವೆ.

ಕಲಾ ಶಾಲೆಯ ಅಧ್ಯಾಪಕರಿಗೆ ನಡೆಸಿದ ಕಲಾ ರಸಗ್ರಹಣ ಕಾರ್ಯಕ್ರಮವು ಎಷ್ಟು ಜನ ಅಧ್ಯಾಪಕರಿಗೆ ಉಪಯುಕ್ತವಾಯಿತು ಎನ್ನುವದಕ್ಕಿಂತ ಕಲಾ ಸಾಹಿತ್ಯಕ್ಕೆ ಒಂದು ಉತ್ತಮ ಕಲಾ ವಿಮರ್ಶೆ ಮತ್ತು ಕಲಾತತ್ವಶಾಸ್ತ್ರದ ಬಗೆಗಿನ ಆಕರಗ್ರಂಥ ಈ ಮೂಲಕ ಲಭ್ಯವಾಯಿತು ಎನ್ನುವುದು ಇಲ್ಲಿನ ಲೇಖನಗಳ ದೃಷ್ಟಿಯಿಂದ ಹೇಳಬಹುದಾಗಿದೆ.

**ಸಮಕಾಲೀನ ಕಲೆ :**

ರಾಜ್ಯ ಲಲಿತ ಕಲಾ ಅಕಾಡೆಮಿಯು ಆಗಾಗ ನಡೆಸಿದ ಕಲಾ ಉಪನ್ಯಾಸಗಳನ್ನು ಆಯ್ದು ಪ್ರಕಟಿಸಿದೆ. ಅಂತಹ ಕಲಾ ಉಪನ್ಯಾಸಗಳನ್ನು ಆಯ್ದು ಪ್ರಕಟಿಸಿರುವ ಈ ಕೃತಿಯು ಆರ್.ಎಂ. ಹಡಪದ್ ಅವರ ಪ್ರಧಾನ ಸಂಪಾದಕತ್ವದಲ್ಲಿ ಹೊರಬಂದಿದೆ.[೩೦]

---

೨೯. ಎಂ.ಎಚ್.ಕೃಷ್ಣಯ್ಯ : (ಸಂ) : ಕಲೆ ಮತ್ತು ರಸಾಸ್ವಾದನೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೮.

೩೦. ಆರ್.ಎಂ.ಹಡಪದ : (ಸಂ) : ಸಮಕಾಲೀನ ಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೮

ಇದರಲ್ಲಿ ಒಟ್ಟು ಹನ್ನೆರಡು ಉಪನ್ಯಾಸಗಳಿವೆ. ಕೆಲವು ಇಂಗ್ಲೀಷಿನಲ್ಲಿದ್ದರೆ, ಮತ್ತೆ ಕೆಲವು ಕನ್ನಡದಲ್ಲಿವೆ. ಇಲ್ಲಿಯ ಲೇಖನಗಳನ್ನು ನಂದಕುಮಾರ, ಡಾ. ಗಿರಡ್ಡಿ ಗೋವಿಂದರಾಜ್, ಡಾ. ಜಿ.ಎಸ್. ಶಿವರುದ್ರಪ್ಪ, ಬಿ.ಸಿ. ರಾಮಚಂದ್ರ ಶರ್ಮ, ಅಂಜಲಿ ಸರ್ಕಾರ ಮತ್ತು ರಜನಿ ಪ್ರಸನ್ನ ಅವರು ತಲಾ ಎರಡರಂತೆ ಬರೆದಿದ್ದಾರೆ.

ಭಾರತೀಯ ಚಿತ್ರಕಲೆ, ಅದರ ಪ್ರಾಚೀನ ಪರಂಪರೆ, ಆಧುನಿಕ ರೂಪ, ಕಲಾವಿದರು, ಕಲಾ ಪರಿಕರಗಳು, ಕಲೆಯ ತಾಂತ್ರಿಕ ಅಂಶಗಳ ಬಗ್ಗೆ ಇಲ್ಲಿನ ಲೇಖನಗಳು ಬೆಳಕು ಚೆಲ್ಲುತ್ತವೆ. ಮಾತ್ರವಲ್ಲದೆ ವಿವಿಧ ಕಲಾ ಪ್ರಕಾರಗಳು, ರಾಜಾರವಿವರ್ಮ ಮತ್ತು ಅವನ ಕಲೆ, ಬಂಗಾಲ ಕಲೆ, ಕಲಾವಿದ, ಕಲಾಕೃತಿ ಮತ್ತು ಸಹೃದಯರ ಸಂಬಂಧಗಳು, ರಸಾಸ್ವಾದನೆ, ಕಲೆಯ ಅರ್ಥ, ಕೌಶಲ್ಯ, ಸಾಮಾಜಿಕ ಪ್ರಭಾವಗಳು ಇಲ್ಲಿ ಕಲೆಯ ಹಿನ್ನೆಲೆಯಲ್ಲಿ ಬಿಂಬಿಸಿವೆ. ರಸಾನುಭವ ಮತ್ತು ಕಲೆ ಕುರಿತು ಚರ್ಚಿಸಲಾಗಿದೆ.

ಪ್ರಸ್ತುತ ಕೃತಿಯಲ್ಲಿ ಪ್ರಖ್ಯಾತ ವಿಮರ್ಶಕರಿಂದ ಆಯ್ದ ಲೇಖನಗಳನ್ನು ಪ್ರಕಟಿಸಲಾಗಿದ್ದು, ಕಲಾ ಸಾಹಿತ್ಯಕ್ಕೆ ಹೊಸ ಆಯಾಮ ಕೊಟ್ಟಂತಾಗಿದೆ. ಜಿ.ಎಸ್. ಶಿವರುದ್ರಪ್ಪ ಮತ್ತು ಗಿರಡ್ಡಿ ಗೋವಿಂದರಾಜ್ ಅವರಂತಹ ವಿದ್ವಾಂಸರ ಪ್ರಬುದ್ಧ ವಿಮರ್ಶೆಗಳು, ಇನ್ನುಳಿದವರ ಕಲೆಯ ಬಗೆಗಿನ ಒಳತಿರುಳುಗಳು ಈ ಕೃತಿಯು ಉತ್ತಮವಾಗಿ ಮೂಡಿಬರಲು ಕಾರಣವಾಗಿವೆ. ವಿಮರ್ಶೆಯ ಕುರಿತು ಕಲಾ ಸಾಹಿತ್ಯದಲ್ಲಿ ಕಡಿಮೆ ಪ್ರಮಾಣದಲ್ಲಿ ಬರಹಗಳಿದ್ದು, ಇದೊಂದು ಮಹತ್ವದ ಕೃತಿಯಾಗಿದೆ.

**ತುಳುವರ ಆಚರಣೆಯಲ್ಲಿ ಕಲಾವಂತಿಕೆ :**

ತುಳು ಜನಾಂಗವು ವಿವಿಧ ರೀತಿಯ ಕಲೆಗಳನ್ನು ಆಚರಣೆಯಲ್ಲಿ ಅಳವಡಿಸಿಕೊಂಡಿದೆ. ಹತ್ತು ಹಲವು ಬಗೆಯ ಕಲೆಗಳು ಇವರಿಂದ ವಿವಿಧ ಸಂದರ್ಭಗಳಲ್ಲಿ ಆಚರಿಸಲ್ಪಡುತ್ತವೆ. ಸಿರಿಜಾತ್ರೆ, ನಾಗಮಂಡಲ, ಡೆಕ್ಕೆಬಲಿಯಂತಹ ಆಚರಣೆಗಳಲ್ಲಿ ಹೆಚ್ಚಿನ ಕಲಾವಂತಿಕೆ ಕಂಡುಬರುತ್ತದೆ. ತುಳುವರ ಆಚರಣೆಯಲ್ಲಿ ಕಲಾವಂತಿಕೆ ಎಂಬ ಈ ಕೃತಿಯನ್ನು ಕ.ವೆಂ. ರಾಜಗೋಪಾಲ ಎಂಬುವರು ಸಂಪಾದನೆ ಮಾಡಿದ್ದು,[೩೧] ಹಲವು ಸಂದರ್ಭಗಳಲ್ಲಿ ಬೇರೆ ಬೇರೆ ವಿದ್ವಾಂಸರು ಮಂಡಿಸಿದ ಪ್ರಬಂಧಗಳನ್ನು ಇಲ್ಲಿ ಒಟ್ಟಾಗಿ ಪ್ರಕಟಿಸಲಾಗಿದೆ.

ಈ ಪುಸ್ತಕದಲ್ಲಿ ಒಟ್ಟು ಹನ್ನೆರಡು ಲೇಖನಗಳಿವೆ. ತುಳುವರ ಆಚರಣೆಯಲ್ಲಿ ಜಾನಪದ ಅಲಂಕರಣ, ತುಳುವರ ಸಿರಿಜಾತ್ರೆ, ನಾಗಮಂಡಲ, ಡೆಕ್ಕೆಬಲಿ, ಭೂತಾರಾಧನೆಯಲ್ಲಿ ಅಲಂಕರಣ, ಮೆಕ್ಕೆಕಟ್ಟೆ ಉರುಗಳು, ದಕ್ಷಿಣ ಕನ್ನಡ ಜಿಲ್ಲೆಯ ಮುಖವಾಡಗಳು, ದಕ್ಷಿಣ ಕನ್ನಡ ಜಿಲ್ಲೆಯ ಗೊಂಬೆಯಾಟಗಳು, ದಕ್ಷಿಣ ಕನ್ನಡ ಜಿಲ್ಲೆಯ ಭಿತ್ತಿಚಿತ್ರಗಳು, ದಕ್ಷಿಣ ಕನ್ನಡ ಜಿಲ್ಲೆಯ ಆಚರಣೆಗಳು, ಹೀಗೆ ವಿವಿಧ ವಿಷಯಗಳಿಗೆ ಸಂಬಂಧಿಸಿದ ಲೇಖನಗಳಿವೆ. ಇವುಗಳನ್ನು ಅಮೃತ ಸೋಮೇಶ್ವರ, ಮುಕುಂದಪ್ರಭು, ಎ.ವಿ.ನಾವಡ, ಕೆ.ಚಿನ್ನಪ್ಪಗೌಡ, ಪುರುಷೋತ್ತಮ ಬಿಳಿಮಲೆ, ಕ.ವೆಂ. ರಾಜಗೋಪಾಲ ಮುಂತಾದ ವಿದ್ವಾಂಸರು ಬರೆದಿದ್ದಾರೆ.

ಈ ಕೃತಿಯಲ್ಲಿ ನೇರವಾಗಿ ಚಿತ್ರಕಲೆಗೆ ಸಂಬಂಧಿಸಿದ ಲೇಖನವೆಂದರೆ ದಕ್ಷಿಣ ಕನ್ನಡ ಜಿಲ್ಲೆಯ ಭಿತ್ತಿಚಿತ್ರಗಳು ಎಂಬುದಾಗಿದೆ. ಇನ್ನುಳಿದ ಲೇಖನಗಳು ಸಾಂದರ್ಭಿಕವಾಗಿ ಚಿತ್ರಕಲೆಯ ವಿವರಗಳನ್ನು ಹೊಂದಿವೆ. ಚಿತ್ರಕಲೆ ಸಾಹಿತ್ಯದ ದೃಷ್ಟಿಯಿಂದ ಈ ಕೃತಿಯು ಗಮನಾರ್ಹವಾಗಿದೆ ಎನ್ನಬಹುದು. ಕಾರಣ ನಾಗಮಂಡಲ ಆಚರಣೆ, ಭೂತಾರಾಧನೆಯ ಸಂದರ್ಭದಲ್ಲಿ ದಕ್ಷಿಣ ಕನ್ನಡದ ಹೆಚ್ಚಿನ

೩೧. ಕ.ವೆಂ.ರಾಜಗೋಪಾಲ : (ಸಂ) : ತುಳುವರ ಆಚರಣೆಯಲ್ಲಿ ಕಲಾವಂತಿಕೆ : ಕರ್ನಾಟಕ ಲಲಿತಕಲಾ ಅಕಾಡಿಮಿ, ಬೆಂಗಳೂರು- ೧೯೮೯

ಆಚರಣೆಗಳಲ್ಲಿ ಚಿತ್ರಕಲಾ ಅಂಶಗಳು ತುಂಬಿಕೊಂಡಿವೆ. ಮೆಕ್ಕೆಕಟ್ಟೆ ಉರುಗಳಂತೂ ಶಿಲ್ಪ ಮತ್ತು ಚಿತ್ರಕಲಾ ಪ್ರಕಾರಗಳ ಸಂಯುಕ್ತ ರೂಪ ಹೊಂದಿದ ಪ್ರಾತಿನಿಧಿಕ ಕೃತಿಗಳಾಗಿವೆ. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ತುಳುವರ ಆಚರಣೆಯಲ್ಲಿ ಕಂಡು ಬರುವ ಚಿತ್ರಕಲೆಯ ಅಂಶಗಳನ್ನು ಈ ಕೃತಿ ಪರೋಕ್ಷವಾಗಿ ಬಿಂಬಿಸುತ್ತದೆ ಎಂದು ಹೇಳಬಹುದಾಗಿದೆ.

**ಕಲಾಕ್ವಿಜ್ :**

ಕಲಾಕ್ವಿಜ್ ಎಂಬ ಈ ಕಿರು ಪುಸ್ತಕದಲ್ಲಿ ಕಲೆಯ ಕುರಿತಾಗಿ ಚಿಕ್ಕ ಪ್ರಶ್ನೋತ್ತರಗಳಿವೆ. ಭಾರತೀಯ ಚಿತ್ರಕಲಾ ಪರಂಪರೆ, ಭಾರತೀಯ ವಾಸ್ತುಶಿಲ್ಪ, ಮೂರ್ತಿಶಿಲ್ಪ, ಕರ್ನಾಟಕದ ಕಲಾವಿದರು, ಬಣ್ಣಗಳು, ವಿದೇಶೀ ಕಲಾವಿದರು, ಕರ್ನಾಟಕದ ಸಮಕಾಲೀನ ಕಲೆಯ ಬಗ್ಗೆ ಪ್ರಶ್ನೋತ್ತರಗಳಿವೆ. ಕಲಾ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಿರುವ ಚಿತ್ರಕಲೆಯ ಪ್ರಾಚೀನ ಶಾಸ್ತ್ರ ಗ್ರಂಥಗಳು, ಭಾರತದಲ್ಲಿ ನವ್ಯಕಲಾ ಸಂಪ್ರದಾಯದ ಉದಯ, ಬೌದ್ಧ ಮತ್ತು ರಜಪೂತ ಚಿತ್ರಗಳ ಪ್ರಧಾನ ವಿಷಯಗಳು, ವಾಸ್ತುಶಿಲ್ಪದ ಪ್ರಾಚೀನ ಗ್ರಂಥಗಳು, ನಾಗರಶೈಲಿ, ದ್ರಾವಿಡಶೈಲಿ, ವೇಸರಶೈಲಿಯ ದೇವಾಲಯಗಳು, ಗುಹಾಂತರ ವಾಸ್ತುಶಿಲ್ಪ ಕೃತಿಗಳು, ಕೊನಾರ್ಕ್ ಸೂರ್ಯದೇವಾಲಯ, ವಿಜಯ ನಗರ ಚಿತ್ರಕಲೆ, ಚಾಲುಕ್ಯರ ವಾಸ್ತುಶಿಲ್ಪ ಚಿತ್ರಕಲೆ ಹೀಗೆ ಹತ್ತು ಹಲವು ವಿಷಯಗಳ ಬಗ್ಗೆ ಪ್ರಶ್ನೋತ್ತರಗಳಿವೆ.

ಈ ಸಂಪಾದನೆ ಕೃತಿಯು[೩೨] ಪ್ರಶ್ನೋತ್ತರ ರೂಪದಲ್ಲಿದ್ದರೂ ಕಲೆಯ ಬಗೆಗಿನ ಉತ್ತಮ ಮಾಹಿತಿಗಳನ್ನು ಒಳಗೊಂಡಿರುವುದು ಮಾತ್ರವಲ್ಲದೆ ಓದುಗರಲ್ಲಿ ಕುತೂಹಲ ಮತ್ತು ಆಸಕ್ತಿಗಳನ್ನು ಹುಟ್ಟಿಸುತ್ತದೆ. ಚಿಕ್ಕ ಮಕ್ಕಳನ್ನು ಮತ್ತು ಕಲೆಯ ಬಗ್ಗೆ ಪ್ರಾಥಮಿಕ ಮಾಹಿತಿಗಳನ್ನು ತಿಳಿದುಕೊಳ್ಳವವರನ್ನು ದೃಷ್ಟಿಯಲ್ಲಿಟ್ಟುಕೊಂಡು ರಚನೆಯಾದ ಈ ಚಿಕ್ಕ ಕೃತಿಯು ಇತ್ತೀಚಿನ ನೆಟ್ ಪರೀಕ್ಷೆಯ ಅಭ್ಯರ್ಥಿಗಳಿಗೂ ಉಪಯುಕ್ತವಾಗಿದೆ.

**ದೃಶ್ಯಕಲೆಯ ಆರಾಧಕರು :**

ಕರ್ನಾಟಕ ಲಲಿತಕಲಾ ಅಕಾಡೆಮಿಯು ರಾಜ್ಯದ ಶ್ರೇಷ್ಠ ಕಲಾವಿದರ ಕುರಿತು ಕಿರುಮಾಹಿತಿ ಮತ್ತು ಪರಿಚಯ ಲೇಖನಗಳನ್ನು ಬರೆಸುವ ಹಿನ್ನೆಲೆಯಲ್ಲಿ ಪ್ರಕಟವಾದ ಈ ಕೃತಿಯಲ್ಲಿ ರಾಜ್ಯದ ಇಪ್ಪತ್ತನಾಲ್ಕು ಕಲಾವಿದರ ಬಗ್ಗೆ ಸ್ಥೂಲ ಮಾಹಿತಿಯುಳ್ಳ ಪರಿಚಯ ಲೇಖನಗಳನ್ನು ಕೊಡಲಾಗಿದೆ. ಇದನ್ನು ಎಚ್.ಎನ್. ಸುರೇಶ್ ಸಂಪಾದನೆ ಮಾಡಿದ್ದು,[೩೩] ಆಯಾ ಕಲಾವಿದರ ಕಲಾ ಬದುಕು, ಕಲಾ ಪ್ರದರ್ಶನ, ಕಾರ್ಯಾಗಾರ, ಶಿಬಿರ, ಪ್ರಶಸ್ತಿ ಗೌರವಗಳಂತಹ ಸಂಗತಿಗಳು ಮತ್ತು ಕಲಾಶೈಲಿ, ಕೃತಿಗಳ ರಚನೆ, ಸಂಗ್ರಹಗಳ ಬಗೆಗಿನ ಕಿರು ಮಾಹಿತಿ ಕೊಡಲಾಗಿದೆ.

ಈ ಪುಸ್ತಕದಲ್ಲಿ ಟಿ.ಪಿ. ಅಕ್ಕಿ, ಆಚಾರ್ಯ ಎಚ್.ಎನ್. ಇನಾಮತಿ, ಎಸ್. ಕಾಳಪ್ಪ, ಎಸ್.ಎನ್. ಕುಕ್ಕೆ, ಕೃಷ್ಣಕ್ಷತ್ರಿ, ಎಸ್.ಜಿ. ಚಿನ್ನಣ್ಣವರ, ಪಿ.ಆರ್. ತಿಪ್ಪೇಸ್ವಾಮಿ, ಎಸ್. ನರಸಿಂಹಚಾರ್, ಆರ್.ಎಸ್. ನಾಯ್ಡು, ಸಿ.ಎಸ್. ಪಾಟೀಲ, ಬಿ. ಬಸವಣ್ಣ ಶಿಲ್ಪಿ, ಬಿ.ಪಿ. ಬಾಯಿರಿ, ಹೀಗೆ ರಾಜ್ಯದ ಖ್ಯಾತ ಇಪ್ಪತ್ತನಾಲ್ಕು ಕಲಾವಿದರ ಬಗ್ಗೆ ಇಲ್ಲಿ ಪರಿಚಯಿಸಲಾಗಿದೆ.

---

೩೨. ಎನ್. ವಿಶ್ವರೂಪಾಚಾರ್ : (ಸಂ) : ಕಲಾಕ್ವಿಜ್ : ಸಿ.ಎಂ.ಎನ್. ಪ್ರಕಾಶನ, ಬೆಂಗಳೂರು–೧೯೯೦.

೩೩. ಎಚ್.ಎನ್. ಸುರೇಶ : (ಸಂ) : ದೃಶ್ಯಕಲೆಯ ಆರಾಧಕರು : ಲಲಿತಕಲಾ ಅಕಾಡೆಮಿ ಬೆಂಗಳೂರು–೧೯೯೦.

ಉತ್ತರ ಕರ್ನಾಟಕ ಭಾಗದಲ್ಲಿ ಪ್ರಸಿದ್ಧ ಚಿತ್ರಕಲಾ ಶಾಲೆಯನ್ನು ಗದಗದಲ್ಲಿ ಸ್ಥಾಪಿಸಿದ ಅಕ್ಕಿಯವರ ಸಾಧನೆ, ಹುಬ್ಬಳ್ಳಿಯಲ್ಲಿ ಫೋಟೋ ಸ್ಟುಡಿಯೋ ಸ್ಥಾಪಿಸಿ ಕಲಾ ವಲಯದಲ್ಲಿ ಹೆಸರು ಮಾಡಿದ ಕೃಷ್ಣಕ್ಷತ್ರಿ, ಜನಪದ ಕ್ಷೇತ್ರದಲ್ಲಿ ಅವಿರತವಾಗಿ ದುಡಿದ ಪಿ.ಆರ್.ತಿಪ್ಪೇಸ್ವಾಮಿ, ಕಲಾ ಸಾಹಿತ್ಯವನ್ನು ರಚಿಸಿ ಪ್ರಖ್ಯಾತರಾದ ಬಾಯಿರಿಯವರು ಹೀಗೆ ಕಲೆಯೊಂದಿಗೆ ಅವರ ಕಲಾ ಹವ್ಯಾಸಗಳೂ ಇಲ್ಲಿ ಬಿಂಬಿತಗೊಂಡಿವೆ.

**ಕಲೆ ಮತ್ತು ಮನುಷ್ಯ ಸಂಸ್ಕೃತಿ :**

ಈ ಕೃತಿಯನ್ನು ಜೋತಿ ಹೊಸೂರ ಎಂಬುವವರು ಸಂಪಾದಿಸಿದ್ದಾರೆ.[೩೪] ವಿವಿಧ ವಿಷಯಕ್ಕೆ ಸಂಬಂಧಿಸಿದ ಲೇಖನಗಳ ಜೊತೆಗೆ ಕಲೆಯ ಕುರಿತ ಕೆಲವು ಲೇಖನಗಳು ಇದರಲ್ಲಿವೆ. ಮನುಷ್ಯನು ಸ್ವಭಾವತ ಸಮಾಜ ಜೀವಿ, ಪ್ರಜ್ಞಾವಂತ, ಪರಿಪೂರ್ಣತೆಯ ಉಪಾಸಕನೂ ಹೌದು. ಇವುಗಳನ್ನು ಪಡೆಯಲು ಹವಣಿಸುತ್ತಿರುವುದು ಅವನ ಸಹಜಗುಣ. ಅವನಲ್ಲಿ ಅಭಿವ್ಯಕ್ತಿಗೊಳ್ಳುವ ಕಲಾಗುಣ ಸಹ ಸ್ವಾಭಾವಿಕವಾಗಿ ರೂಪುಗೊಳ್ಳುತ್ತದೆ. ಇಂತಹ ವಿಚಾರ ವಿಮರ್ಶೆಗಳಿಗೆ ಸಂಬಂಧಪಟ್ಟ ಲೇಖನಗಳು ಇಲ್ಲಿವೆ.

ಈ ಕೃತಿಯಲ್ಲಿ ಕಲೆ, ಭಾಷೆ, ಸಾಹಿತ್ಯದ ಪ್ರಕಾರಗಳು, ಕಾವ್ಯ ವಿಚಾರಗಳ ಲೇಖನಗಳಿದ್ದು, ಅವುಗಳನ್ನು ವಿವಿಧ ಗೋಷ್ಠಿಗಳಲ್ಲಿ ಮಂಡಿಸಲಾಗಿದೆ. ಅವುಗಳನ್ನೆಲ್ಲ ಒಟ್ಟಾಗಿ ಈ ಕೃತಿಯಲ್ಲಿ ಪ್ರಕಟಿಸಲಾಗಿದೆ. ಕಲೆ ಮತ್ತು ಮನುಷ್ಯ ಸಂಸ್ಕೃತಿ, ಭಾಷೆ ಮತ್ತು ಅನುಭವ, ಕನ್ನಡಕವಿಗಳು ಮತ್ತು ರಾಷ್ಟ್ರೀಯ ಭಾವೈಕ್ಯತೆ, ಹೊರನಾಡಿನಲ್ಲಿ ಕನ್ನಡ ಪ್ರಚಾರ, ಮುಂಬಯಿ ಕನ್ನಡಿಗರ ದ್ವಂದ್ವ, ಪರಂಪರೆಯ ಪರೆ ಹರಿದ ಭವ್ಯ ಮಾನವ, ಕನ್ನಡದಲ್ಲಿ ಮಕ್ಕಳಕಾವ್ಯ, ಕನ್ನಡಕ್ಕೆ ಎಂತಹ ಶಿಶು ಕವನ ಬೇಕು, ಕವಿ ಭೀಮದಾಸ, ಜನಪದ ಮರಾಠಿಕವಿ ಕುಸುಮಾಗ್ರಜನ್ನ, ಮೊದಲ ಕೃತಿಯಿಂದೀಚೆಗೆ, ಮೊಹರಂ ಹಾಡುಗಳು ಮುಂತಾದ ಲೇಖನಗಳಿವೆ. ಇವುಗಳಲ್ಲಿ ಕಲೆ ಮತ್ತು ಮನುಷ್ಯ ಸಂಸ್ಕೃತಿ ಎಂಬ ಲೇಖನ ಮಾತ್ರ ಕಲೆಯ ಕುರಿತು ಹೆಚ್ಚಿನ ಅಂಶಗಳನ್ನು ನೀಡುತ್ತದೆ. ಸಂಸ್ಕೃತಿಯ ಅವಿಭಾಜ್ಯ ಅಂಗವಾದ ಕಲೆ ಮನುಷ್ಯ ಜೀವನದ ಬದಲಾವಣೆಗಳಿಗೆ ಹೇಗೆ ಸ್ಪಂದಿಸುತ್ತ ಬಂದಿದೆ. ಮಾತ್ರವಲ್ಲದೆ ಕಾಲ-ಕಾಲಕ್ಕೆ ಅವನ ಜೀವನದ ದಾರಿಯಲ್ಲಿ ಸಂಸ್ಕೃತವಂತನಾಗಿ ಬಾಳುವಲ್ಲಿ ಅದು ಹೇಗೆ ಸಹಕಾರಿಯಾಗಿದೆ, ಬಾಹ್ಯ ಬದುಕು ಮಾತ್ರವಲ್ಲದೆ ಆಂತರಿಕ ಬದುಕಿನಲ್ಲಿಯೂ ಕಲೆ ಹೇಗೆ ಪರಿಣಾಮಕಾರಿಯಾದ ಪ್ರಭಾವಗಳನ್ನು ಬೀರಬಲ್ಲದು ಎನ್ನುವಂತಹ ಅಂಶಗಳು ಇದರಲ್ಲಿವೆ.

**ರೇಖಾ ಚಿತ್ರ :**

ಕರ್ನಾಟಕ ಲಲಿತಕಲಾ ಅಕಾಡೆಮಿಯು ೧೯೯೧ ರಲ್ಲಿ ಹೊರತಂದ ಈ ಕೃತಿಯಲ್ಲಿ ರೇಖಾಚಿತ್ರಕಲೆಯ ಬಗೆಗೆ ಲೇಖನಗಳಿವೆ. ಬಿ.ವಿ.ಕೆ. ಶಾಸ್ತ್ರಿ ಸಂಪಾದನೆ ಮಾಡಿರುವ ಈ ಗ್ರಂಥದಲ್ಲಿ[೩೫] ರೇಖಾಚಿತ್ರದ ಬಗ್ಗೆ ವಿವಿಧ ವಿದ್ವಾಂಸರು ಬರೆದಿರುವ ಏಳು ಲೇಖನಗಳಿವೆ. ರೇಖೆ, ರೇಖಾಚಿತ್ರ, ರೇಖಾಚಿತ್ರಗಳ ಚಾರಿತ್ರಿಕ ಹಿನ್ನೆಲೆ, ಪ್ರಾಚೀನತೆ, ಪಾಶ್ಚಾತ್ಯ ಮತ್ತು ಮಧ್ಯಯುಗದ ಚಿತ್ರಗಳಲ್ಲಿ ರೇಖಾವಿನ್ಯಾಸ, ಪೌರಾತ್ಯ ರಾಷ್ಟ್ರಗಳಾದ ಚೀನಾ, ಜಪಾನ್ ದೇಶಗಳ ಚಿತ್ರಕಲೆಯಲ್ಲಿ ರೇಖೆ, ಭಾರತದಲ್ಲಿ ಅಚ್ಚು ಚಿತ್ರಕಲೆಯ ಇತಿಹಾಸ, ಭಾರತೀಯ ಸಮಕಾಲೀನ ಚಿತ್ರಗಳಲ್ಲಿ ರೇಖೆಯ ವಿನ್ಯಾಸಗಳ ಬಗ್ಗೆ ವಿವರಗಳನ್ನೊಳಗೊಂಡ ಲೇಖನಗಳಿವೆ.

---

೩೪. ಜೋತಿ ಹೊಸೂರ : (ಸಂ) : ಕಲೆ ಮತ್ತು ಮನುಷ್ಯ ಸಂಸ್ಕೃತಿ : ಕಾಲಗತಿ ಗ್ರಂಥಮಾಲೆ, ಗದಗ-೧೯೯೦.

೩೫. ಬಿ.ವಿ.ಕೆ.ಶಾಸ್ತ್ರಿ : (ಸಂ) : ರೇಖಾಚಿತ್ರ : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು-೧೯೯೧.

ಈ ಸಂಪಾದನಾ ಕೃತಿಯಿಂದ ರೇಖಾಚಿತ್ರದ ಬಗೆಗೆ ಒಂದು ಸ್ಥೂಲ ನೋಟ ಲಭ್ಯವಾಗುತ್ತದೆ. ಪ್ರಾಗಿತಿಹಾಸ ಕಾಲದ ಚಿತ್ರಕಲೆಯಿಂದ ತೊಡಗಿ ಇಂದಿನ ಸಮಕಾಲೀನ ಕಲಾಕೃತಿಗಳವರೆಗೆ ರೇಖಾಚಿತ್ರದ ಸ್ವರೂಪವು ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದಿದೆ. ಪ್ರಾಗಿತಿಹಾಸ ಕಾಲದಲ್ಲಿ ರೇಖೆಗಳೇ ಚಿತ್ರದ ಒಟ್ಟು ಸ್ವರೂಪವನ್ನು ಪ್ರತಿನಿಧಿಸಿದರೆ, ನಂತರದ ಬೃಹತ್ ಭಿತ್ತಿ ಚಿತ್ರಗಳಲ್ಲಿ ಕಲಾಕೃತಿಯಲ್ಲಿನ ಆಕಾರಗಳ ನಿರ್ದಿಷ್ಟ ಪ್ರಮಾಣ ಸೂಚಿಸುತ್ತವೆ. ಕಿರುರೂಪ ಚಿತ್ರಕಲೆ ಮತ್ತು ಹಸ್ತಪ್ರತಿ ಚಿತ್ರಕಲೆಗಳಲ್ಲಿ ವರ್ಣಲೇಪನದ ಜೊತೆಗೆ ಚಲನಾತ್ಮಕ ಶಕ್ತಿಶಾಲಿ ರೇಖೆಗಳು ಚಿತ್ರದ ಜೀವಾಳವಾಗಿದ್ದು ಕಂಡುಬರುತ್ತದೆ. ಸಮಕಾಲೀನ ಕಲೆ ಮತ್ತು ಅಮೂರ್ತ ಕಲೆಗಳಲ್ಲಿ ರೇಖೆಗಳಿಗಿಂತ ಆಕಾರಗಳ ಸಂಯೋಜನೆಗೆ ಮಹತ್ವ ಕೊಟ್ಟಿರುವ ಸಂಗತಿಗಳು ತಿಳಿದು ಬರುತ್ತವೆ. ಬಹುಮುಖ್ಯ ವಿಚಾರಗಳಲ್ಲಿ ಪಾಶ್ಚಾತ್ಯ ಕಲೆಯು ರೇಖೆಯನ್ನು ಗೌಣವಾಗಿ ಕಂಡರೆ ಪೌರಾತ್ಯ ಕಲೆಯು ರೇಖೆಗೆ ಪ್ರಾಧಾನ್ಯ ಕೊಟ್ಟಿರುವುದು ತಿಳಿದು ಬರುತ್ತದೆ. ಇಂತಹ ಅನೇಕ ವಿಚಾರಗಳನ್ನು ಈ ಸಂಪಾದನಾ ಕೃತಿ ತಿಳಿಸಿ ಕೊಡುತ್ತದೆ.

**ಸಾಹಿತ್ಯ ಕಲೆಗಳಲ್ಲಿ ಪರಿವರ್ತನೆ ಮತ್ತು ಪ್ರಗತಿ :**

ಈ ಕೃತಿಯನ್ನು ಎಂ.ಎಚ್. ಕೃಷ್ಣಯ್ಯ ಸಂಪಾದನೆ ಮಾಡಿದ್ದಾರೆ.[೩೬] ಇದರಲ್ಲಿ ಒಟ್ಟು ಒಂಭತ್ತು ಲೇಖನಗಳಿದ್ದು, ವಿವಿಧ ವಿದ್ವಾಂಸರು ಬರೆದಿದ್ದಾರೆ. ಇಲ್ಲಿರುವ ಲೇಖನಗಳಲ್ಲಿ ಎರಡು ಲೇಖನಗಳು ಚಿತ್ರಕಲೆಗೆ ಸಂಬಂಧಿಸಿವೆ. ಕರ್ನಾಟಕದ ಲಲಿತ ಕಲೆಗಳಲ್ಲಿ ಪರಿವರ್ತನೆ ಮತ್ತು ಪ್ರಗತಿ ಎಂಬ ಲೇಖನ ಮತ್ತು ಪುರಾತನ ಪದ್ಧತಿಗಳು ಎನ್ನುವ ಇನ್ನೊಂದು ಲೇಖನ ಚಿತ್ರಕಲೆಗೆ ಸೇರಿವೆ. ಇನ್ನುಳಿದವು ನೃತ್ಯ, ಸಂಗೀತ, ನಾಟಕ ಮತ್ತು ಸಾಹಿತ್ಯದ ಕುರಿತಾಗಿವೆ. ಇದೊಂದು ತೀರಾ ಚಿಕ್ಕ ಪುಸ್ತಕವಾಗಿದೆ.

**ನವ್ಯಕಲೆಯ ನವ ಮುಖಗಳು :**

ಈ ಕೃತಿಯನ್ನು ಬಿ.ವಿ.ಕೆ. ಶಾಸ್ತ್ರಿ ಸಂಪಾದನೆ ಮಾಡಿದ್ದಾರೆ.[೩೭] ಇದರಲ್ಲಿ ಒಟ್ಟು ಒಂಭತ್ತು ಲೇಖನಗಳಿದ್ದು, ಆರು ಕನ್ನಡ ಮತ್ತು ಮೂರು ಇಂಗ್ಲೀಷ ಭಾಷೆಯಲ್ಲಿವೆ. ಕರ್ನಾಟಕ ಮತ್ತು ಭಾರತೀಯ ನವ್ಯಕಲೆಯ ವಿಚಾರವಾಗಿ ಈ ಲೇಖನಗಳು ಮಾಹಿತಿ ಕೊಡುತ್ತವೆ. ಕನ್ನಡ ಲೇಖನಗಳನ್ನು ಬಿ.ವಿ.ಕೆ. ಶಾಸ್ತ್ರಿ, ಎಸ್.ಎನ್. ಚಂದ್ರಶೇಖರ್, ಚಿ.ಸು. ಕೃಷ್ಣಶೆಟ್ಟಿ, ವಿಜಯರಾವ್, ಎಂ.ಎಸ್. ನಂಜುಂಡರಾವ್, ಎಂ.ಎಚ್. ಕೃಷ್ಣಯ್ಯ ಬರೆದಿದ್ದಾರೆ. ಇಂಗ್ಲೀಷ ಲೇಖನಗಳನ್ನು ಚೂಡಾಮಣಿ ನಂದಗೋಪಾಲ, ರಜನಿ ಪ್ರಸನ್ನ, ಸೀತಾ.ಎಂ. ರಾಥೋಡ್ ಅವರುಗಳು ಬರೆದಿದ್ದಾರೆ. ಈ ಒಟ್ಟು ಲೇಖನಗಳು ನವ್ಯಕಲೆಯ ಬಗೆಗೆ ಉತ್ತಮಮಾಹಿತಿಯನ್ನು ನೀಡುತ್ತವೆ. ಕರ್ನಾಟಕದ ನವ್ಯಕಲೆಯ ವಿಚಾರವಾಗಿ ಆರಂಭಿಕ ಹಂತ, ಅದರಲ್ಲಿ ಪಾಲ್ಗೊಂಡ ಪ್ರಮುಖ ಕಲಾವಿದರು, ನಾವು ನಾಲ್ವರು ಕಲಾಗುಂಪು, ಅದರ ಕಾರ್ಯ ಚಟುವಟಿಕೆಗಳು, ಅರವತ್ತರ ದಶಕದ ಯುವಕಲಾವಿದರು, ನವ್ಯಕಲೆಯನ್ನು ಅವರು ಬೆಳೆಸಿದ ರೀತಿ, ಭಾರತೀಯ ಕಲಾಕ್ಷೇತ್ರಕ್ಕೆ ಕರ್ನಾಟಕದ ಕೊಡುಗೆ ಮುಂತಾದ ಸಂಗತಿಗಳು ಬಿಂಬಿತವಾಗಿವೆ. ಭಾರತೀಯ ನವ್ಯಕಲೆಯ ಕುರಿತಾಗಿ, ಬಂಗಾಲ ಕಲಾಶೈಲಿಯ ಕ್ಷೀಣತೆ, ಪಾಶ್ಚಾತ್ಯ ನವ್ಯ ಪ್ರಭಾವ, ನವ್ಯಕಲೆ ಅನುಸರಿಸಿದ ಅಮೃತಾ ಶೇರಗಿಲ್, ಗಗನೇಂದ್ರನಾಥ ಟ್ಯಾಗೋರ್, ರವೀಂದ್ರನಾಥ ಟ್ಯಾಗೋರ್ ಮುಂತಾದವರ ಬಗ್ಗೆ ಮತ್ತು ಅವರ ಕಲೆಯ ಬಗ್ಗೆ ವಿವೇಚಿಸಲಾಗಿದೆ.

---

೩೬. ಎಂ.ಎಚ್.ಕೃಷ್ಣಯ್ಯ : (ಸಂ) : ಸಾಹಿತ್ಯ ಕಲೆಗಳಲ್ಲಿ ಪರಿವರ್ತನೆ ಮತ್ತು ಪ್ರಗತಿ : ಕರ್ನಾಟಕ ರಾಜ್ಯ ಅಕಾಡೆಮಿಗಳ ಸಂಯುಕ್ತ ವೇದಿಕೆ, ಬೆಂಗಳೂರು-೧೯೯೧.

೩೭. ಬಿ.ವಿ.ಕೆ.ಶಾಸ್ತ್ರಿ : (ಸಂ) : ನವ್ಯಕಲೆಯ ನವ ಮುಖಗಳು : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೨

**ಚಿತ್ರಕಲಾ ಪ್ರಪಂಚ :**

ಕರ್ನಾಟಕ ಲಲಿತಕಲಾ ಅಕಾಡೆಮಿಯು ಪ್ರಕಟಿಸಿದ ಗಮನಾರ್ಹ ಪುಸ್ತಕಗಳಲ್ಲಿ ಚಿತ್ರಕಲಾ ಪ್ರಪಂಚವೂ ಒಂದಾಗಿದೆ. ಇದನ್ನು ಅ.ಲ. ನರಸಿಂಹನ್ ಮತ್ತು ಎನ್. ಮರಿಶಾಮಾಚಾರರು ಸಂಪಾದನೆ ಮಾಡಿದ್ದಾರೆ.[೩೮] ಕನ್ನಡದಲ್ಲಿ ಅದುವರೆಗೂ ಬಂದ ಪ್ರಮುಖ ಕಲಾ ಲೇಖನಗಳನ್ನು ಆಯ್ದು ಈ ಕೃತಿಯಲ್ಲಿ ಪ್ರಕಟಿಸಲಾಗಿದೆ. ಕಲೆ, ಕಲಾಸಾಹಿತ್ಯ ಹಾಗೂ ಕಲಾ ವಿಮರ್ಶೆಯ ವಿವಿಧ ಆಯಾಮಗಳಿಗೆ ಸಂಬಂಧಿಸಿದ ಎಪ್ಪತ್ತು ಲೇಖನಗಳು ಇಲ್ಲಿವೆ.

ಇದರಲ್ಲಿರುವ ಲೇಖನಗಳಲ್ಲಿ ಭಾರತೀಯ ಕಲೆ, ಕರ್ನಾಟಕದ ಕಲೆ, ಪ್ರಾಚೀನ ಕಲಾ ಪರಂಪರೆ, ಪ್ರಾಗೈತಿಹಾಸಿಕ ಕಲೆ, ಕಿರುರೂಪ ಚಿತ್ರಕಲೆ, ಭಿತ್ತಿಚಿತ್ರಕಲೆ, ಹಸ್ತಪ್ರತಿ ಚಿತ್ರಕಲೆ, ಜನಪದ ಚಿತ್ರಕಲೆ, ಸಾಹಿತ್ಯದಲ್ಲಿ ಚಿತ್ರಕಲೆ, ಆಧುನಿಕ ಕಲೆ, ಮಕ್ಕಳ ಚಿತ್ರಕಲೆ, ಹೀಗೆ ಹಲವಾರು ವಿಷಯಗಳನ್ನು ಪ್ರತಿನಿಧಿಸುವ ಲೇಖನಗಳಿವೆ. ಚಿತ್ರದುರ್ಗ ಪರಿಸರದ ಪ್ರಾಗಿತಿಹಾಸ ಚಿತ್ರಕಲೆ, ಪ್ರಾಚೀನ ಚಿತ್ರಕಲೆ, ವಿಶಿಷ್ಟ ವರ್ಣಚಿತ್ರಕಲೆಯ ಆಗರ ಬಾದಾಮಿ ಲೇಖನಗಳು ಪ್ರಾಗೈತಿಹಾಸಿಕ ಕಲೆಯ ಕುರಿತಾಗಿ ಮಾಹಿತಿ ನೀಡಿದರೆ, ಶಿಬಿಯ ಭಿತ್ತಿಚಿತ್ರಗಳು, ಪ್ರಾಚೀನ ಚಿತ್ರರಚನೆಯಲ್ಲಿ ಭಿತ್ತಿ ಸಿದ್ಧತೆ ಎನ್ನುವ ಲೇಖನಗಳು ಭಿತ್ತಿಚಿತ್ರಕಲೆಯ ಕುರಿತು ತಿಳಿಸುತ್ತವೆ. ಭಾರತೀಯ ಚಿತ್ರಕಲಾ ಪರಂಪರೆ, ಭಾರತೀಯ ಚಿತ್ರಕಲೆ ಅದರ ಪ್ರಾಚೀನತೆ, ಭಾರತೀಯ ಚಿತ್ರಕಲೆ ಎನ್ನುವ ಲೇಖನಗಳಲ್ಲಿ ಭಾರತೀಯ ಕಲೆಯ ವಿವಿಧ ಆಯಾಮಗಳನ್ನು ಕಟ್ಟಿಕೊಡಲಾಗಿದೆ.

ಚಿಕಣಿ ಚಿತ್ರಕಲೆಯ ಬಗ್ಗೆಯೂ ನಾಲ್ಕು ಲೇಖನಗಳಿವೆ. ಇವು ಆ ಕಲೆಯ ರಚನಾ ವಿಧಾನ, ಶೈಲಿ, ವಸ್ತು ವಿಷಯ, ಪ್ರಾದೇಶಿಕ ವಿಶಿಷ್ಟತೆ, ಆಯಾ ಶೈಲಿಯ ಪ್ರಮುಖ ಗುಣಲಕ್ಷಣಗಳ ಕುರಿತಾಗಿ ಮಾಹಿತಿ ಕೊಡುತ್ತವೆ. ಪ್ರಾಚೀನ ಸಾಹಿತ್ಯ ಮತ್ತು ಚಿತ್ರಕಲೆಗೆ ಸಂಬಂಧಿಸಿದಂತೆ ಏಳು ಲೇಖನಗಳಿದ್ದು ಇದರಲ್ಲಿ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖಗೊಂಡ ಚಿತ್ರಕಲೆಯ ಅಂಶಗಳನ್ನು ವಿಶ್ಲೇಷಿಸಲಾಗಿದೆ. ಅಲ್ಲದೆ ಆಯಾ ಗ್ರಂಥಗಳಲ್ಲಿ ಹೇಳಲಾದ ಚಿತ್ರಕಲೆಯ ರಚನಾ ಕ್ರಮ, ಪರಿಕರಗಳು, ವಿಷಯಗಳು, ಕಲಾ ವಿಮರ್ಶೆ ಮುಂತಾದ ಅಂಶಗಳನ್ನು ಸ್ಥೂಲವಾಗಿ ಸಮೀಕ್ಷಿಸಲಾಗಿದೆ. ಕಲೆ ಮತ್ತು ತಾಂತ್ರಿಕ ಆಚರಣೆಗಳು ಪ್ರಾಗಿತಿಹಾಸ ಕಾಲದಿಂದಲೇ ಕಂಡು ಬರುತ್ತವೆ. ತಾಂತ್ರಿಕ ಆಚರಣೆಯ ಅವಿಭಾಜ್ಯ ಅಂಗವಾಗಿ ಕಲೆ ಬಳಕೆಗೊಂಡ ರೀತಿ, ವಿವಿಧ ರೀತಿಯ ಮಂಡಲ ಚಿತ್ರಗಳು, ಸಾಂಕೇತಿಕ ಆಕಾರಗಳ ಬಗೆಗಿನ ಮಾಹಿತಿಯನ್ನು ಹೊಂದಿದ ಲೇಖನಗಳೂ ಇಲ್ಲಿವೆ.

ಕಲೆ ಮತ್ತು ಸಮಾಜ, ವ್ಯಕ್ತಿನಿಷ್ಟವಾದ ಕಲೆ ಸಮುದಾಯದ ಸಾರ್ವತ್ರಿಕತೆಗೆ ತೆರೆದುಕೊಳ್ಳುವ ಮಾರ್ಗಸೂಚಿಗಳು, ಕಲೆಗಾಗಿ ಕಲೆಯಲ್ಲದೇ ಸಮಾಜಕ್ಕಾಗಿ ಕಲೆ ಎಂಬಂತಹ ವಿಷಯಗಳನ್ನು ಬಿಂಬಿಸುವ ಲೇಖನಗಳೂ ಇಲ್ಲಿವೆ. ಇಂದಿನ ದಿನಗಳಲ್ಲಿ ಕಲೆಗಿಂತ ಕಲಾ ವಿಮರ್ಶೆಗೆ ಹೆಚ್ಚಿನ ಮಹತ್ವವಿದ್ದು, ವಿಮರ್ಶಕನ ಹೊಣೆಗಳು, ಸಾಮಾಜಿಕ ಅರಿವಿನ ಜವಾಬ್ದಾರಿಗಳು ವಿಭಿನ್ನ ರೀತಿಯಲ್ಲಿ ಹೇಗೆ ಕೆಲಸ ಮಾಡುತ್ತವೆ ಎನ್ನುವಂತಹ ಸಂಗತಿಗಳನ್ನು ಬಿಂಬಿಸುವ ಕಲಾ ವಿಮರ್ಶೆಯ ಕುರಿತಾದ ಲೇಖನಗಳಿಂದ ಈ ಪುಸ್ತಕಕ್ಕೆ ಮೌಲಿಕತೆ ಉಂಟಾಗಿದೆ. ಈ ಹಿನ್ನೆಲೆಯಲ್ಲಿ ಕಲೆ ಮತ್ತು ಸಾಮಾಜಿಕ ಪ್ರಜ್ಞೆ, ಕಲೆಯಲ್ಲಿ ಸಮಕಾಲೀನ ಕೃತಿಗಳು, ಕಲೆ ಮತ್ತು ಸಮುದಾಯ, ಧರ್ಮ, ಕಲೆ ಮತ್ತು ತತ್ವ ರಸ ಮತ್ತು ಸೌಂದರ್ಯ, ಕಲೆ ಮತ್ತು ಪ್ರಾಯೋಗಿಕ ವಿಮರ್ಶೆ, ಕಲಾ ವಿಮರ್ಶೆಯ ಹೊಣೆಗಳು ಎಂಬಂತಹ ಲೇಖನಗಳು ಮಹತ್ವ ಪಡೆದುಕೊಳ್ಳುತ್ತವೆ.

---

೩೮. ಅ.ಲ.ನರಸಿಂಹನ್.ಎನ್.ಮರಿಶಾಮಾಚಾರ್ :(ಸಂ):ಚಿತ್ರಕಲಾ ಪ್ರಪಂಚ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೩

ಇವುಗಳಲ್ಲದೆ ಶಿಕ್ಷಣ ಮತ್ತು ಚಿತ್ರಕಲೆ, ಚಿತ್ರಕಲಾ ಶಿಕ್ಷಣ, ಶಿಕ್ಷಣದಲ್ಲಿ ಕಲೆ, ಕರ್ನಾಟಕದಲ್ಲಿ ಕಲಾ ವಿದ್ಯಾಭ್ಯಾಸ ಲೇಖನಗಳು ಕಲಾಶಿಕ್ಷಣದ ಬಗ್ಗೆ ಮಾಹಿತಿ ನೀಡಿದರೆ, ಮಕ್ಕಳ ಚಿತ್ರಕಲೆ ಹಾಗೂ ಮನಶಾಸ್ತ್ರ ಮತ್ತು ಇವುಗಳ ಕುರಿತಾಗಿಯೂ ಈ ಕೃತಿಯಲ್ಲಿ ಲೇಖನಗಳನ್ನು ಅಳವಡಿಸಲಾಗಿದೆ. ಪ್ರಸ್ತುತ ಪುಸ್ತಕದಲ್ಲಿರುವ ಲೇಖನಗಳು ವಿವಿಧ ಆಯಾಮಗಳನ್ನು ಬಿಂಬಿಸುವ ಮೂಲಕ ಚಿತ್ರಕಲೆಯ ವಿಶ್ವಕೋಶದ ಸ್ವರೂಪವನ್ನು ಈ ಪುಸ್ತಕಕ್ಕೆ ಒದಗಿಸಿ ಕೊಟ್ಟಿವೆ ಎಂದರೆ ತಪ್ಪಿಲ್ಲ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಕಲಾ ಸಾಹಿತ್ಯದಲ್ಲಿ ಇದೊಂದು ಮಹತ್ವ ಪೂರ್ಣವಾದ ಸಾಹಿತ್ಯ ಕೃತಿಯಾಗಿದೆ ಎನ್ನಬಹುದು.

**ಬಾರಾಮಾಸ :**

ಈ ಕೃತಿಯನ್ನು ಶಾಂತರಸರು ಸಂಪಾದನೆ ಮಾಡಿದ್ದು,[೩೯] ಹನ್ನೆರಡು ತಿಂಗಳುಗಳಲ್ಲಿ ನಿಸರ್ಗದ ಪರಿಣಾಮ ಹೇಗಿರುತ್ತದೆ ಎಂಬ ವಿವರ ಇದರಲ್ಲಿದೆ. ಬಾರಾಮಾಸ ಎಂದರೆ ಹನ್ನೆರಡು ತಿಂಗಳುಗಳು. ಈ ಹನ್ನೆರಡು ತಿಂಗಳುಗಳಲ್ಲಿ ಪ್ರಕೃತಿಯು ಬೇರೆ ಬೇರೆ ಲಕ್ಷಣಗಳಿಂದ ಕಂಗೊಳಿಸುತ್ತದೆ, ಚೈತ್ರದ ಚಿಗುರು, ವೈಶಾಖದ ಹಸಿರು, ವಸಂತ ಋತುವಿನ ಆಕರ್ಷಣೆ, ಹೀಗೆ ಹಲವು ಕಾಲಮಾನಗಳಲ್ಲಿ ಪ್ರಕೃತಿ ಬದಲಾಗುತ್ತದೆ. ಅದಕ್ಕನುಸಾರವಾಗಿ ನಮ್ಮ ಬದುಕೂ ಪರಿವರ್ತನೆ ಹೊಂದುತ್ತಿರುತ್ತದೆ. ಈ ಹಿನ್ನೆಲೆಯಲ್ಲಿ ಗಂಡು ಹೆಣ್ಣಿನ ಸಂಬಂಧಗಳನ್ನು ಬಿಡಿಸಿಟ್ಟಾಗ ಅನೇಕ ಕುತೂಹಲಕರವಾದ ಸಂಗತಿಗಳು ಗೋಚರಿಸುತ್ತವೆ. ಸರಸ, ವಿರಸ, ಮಿಲನ, ಇಂತಹ ಭಾವನಾತ್ಮಕ ಸಂಬಂಧಗಳಲ್ಲಿ ಸ್ತ್ರೀಯನ್ನು ಕೇಂದ್ರವಾಗಿಟ್ಟುಕೊಂಡು ಹಲವು ಜನ ಪ್ರಾಚೀನ ಕವಿಗಳು ಸಾಹಿತ್ಯ ರಚನೆ ಮಾಡಿದ್ದಾರೆ.

ಈ ಗ್ರಂಥದಲ್ಲಿ ಬಾರಾಮಾಸದ ಋತುವರ್ಣನೆಗಳನ್ನು ಪರಿಣಾಮಕಾರಿಯಾಗಿ ಮಾಡಲಾಗಿದ್ದು ಆಯಾ ಋತುಗಳ ವರ್ಣನೆಗೆ ಸಂಬಂಧಿಸಿದಂತೆ ಚಿತ್ರಗಳನ್ನು ರಚಿಸಲಾಗಿದೆ. ಈ ಪುಸ್ತಕದಲ್ಲಿನ ಚಿತ್ರಗಳನ್ನು ಕಿರುರೂಪ ಚಿತ್ರ ರಚನೆಯಲ್ಲಿ ಪ್ರಖ್ಯಾತರಾದ ಕಲಾವಿದ ಗುಲಬರ್ಗಾದ ವಿಜಯ ಹಾಗರಗುಂಡಗಿ ಅವರು ರಚನೆ ಮಾಡಿದ್ದಾರೆ. ಕಲ್ಲೂರು ಲಿಂಗಣ್ಣ ಒಡೆಯನ ಈ ಕೃತಿಯ ಆಶಯಗಳಿಗೆ ಹೊಂದಿಕೆಯಾಗುವಂತೆ ಚಿತ್ರಗಳಿವೆ. ರಾಜಸ್ಥಾನದ ಕಿರುರೂಪ ಚಿತ್ರಶೈಲಿಗಳಲ್ಲಿಯೂ ಬಾರಾಮಾಸಕ್ಕೆ ಸಂಬಂಧಿಸಿದ ಹಲವಾರು ಚಿತ್ರಗಳಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಕಿರುರೂಪ ಚಿತ್ರರಚನೆಯಲ್ಲಿ ಖ್ಯಾತಿಯನ್ನು ಹೊಂದಿರುವ ವಿಜಯ ಹಾಗರಗುಂಡಗಿ ಅವರು ಕರ್ನಾಟಕದ ಸುರಪುರ ಚಿತ್ರಕಲಾ ಶೈಲಿಯನ್ನು ಕರಗತ ಮಾಡಿಕೊಂಡು ಅದರಲ್ಲಿ ಪಳಗಿದ್ದಾರೆ. ಆ ಕಲೆಯ ಪ್ರಮುಖ ಲಕ್ಷಣಗಳನ್ನು ಅನುಸರಿಸಿ ರಚಿಸಿದ ಇಲ್ಲಿನ ಬಾರಾಮಾಸದ ಚಿತ್ರಗಳು ಕಿರುರೂಪ ಚಿತ್ರಶೈಲಿಯ ಉತ್ತಮ ಕೃತಿಗಳ ಸಾಲಿಗೆ ಸೇರುತ್ತವೆ. ಈ ಸಾಹಿತ್ಯ ಕೃತಿಯ ಸಾಹಿತ್ಯಿಕ ವಿಷಯವನ್ನು ಗೌಣವಾಗಿಸಿದರೂ ಉತ್ತಮವಾದ ಕಿರುರೂಪ ಚಿತ್ರಕಲೆಯ ಸಂಪುಟವಾಗಿದೆ ಎಂದು ಹೇಳಬಹುದು.

**ರಾಷ್ಟ್ರ ಪ್ರಶಸ್ತಿ ಪಡೆದ ಕಲಾವಿದರು :**

ಕರ್ನಾಟಕ ಲಲಿತಕಲಾ ಅಕಾಡಮಿಯು ರಾಷ್ಟ್ರ ಪ್ರಶಸ್ತಿ ಪಡೆದ ಕಲಾವಿದರ ಕುರಿತು ಲೇಖನಗಳುಳ್ಳ ಪುಸ್ತಕವನ್ನು ಹೊರತಂದಿದೆ. ಪ್ರಸ್ತುತ ಈ ಪುಸ್ತಕವನ್ನು ಡಾ.ಬಿ.ಕೆ. ಹಿರೇಮಠ ಮತ್ತು ಮರಿಶಾಮಾಚಾರರು ಕೂಡಿ ಸಂಪಾದನೆ ಮಾಡಿದ್ದಾರೆ.[೪೦] ಈ ಕೃತಿಯಲ್ಲಿ ರಾಷ್ಟ್ರ ಪ್ರಶಸ್ತಿ ಪಡೆದ ಹನ್ನೊಂದು ಜನ ಕಲಾವಿದರ ಬಗೆಗೆ ಲೇಖನ ರೂಪದ ಕಿರು ಮಾಹಿತಿಯನ್ನು ಕೊಡಲಾಗಿದೆ.

೩೯. ಶಾಂತರಸ : (ಸಂ) : ಬಾರಾಮಾಸ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ –೧೯೯೩
೪೦. ಡಾ.ಬಿ.ಕೆ.ಹಿರೇಮಠ ಮತ್ತು ಎನ್.ಮರಿಶಾಮಾಚಾರ್ : (ಸಂ) : ರಾಷ್ಟ್ರ ಪ್ರಶಸ್ತಿ ಪಡೆದ ಕಲಾವಿದರು : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು–೧೯೯೩.

ಇಲ್ಲಿ ಪರಿಚಯಿಸಿದ ಕಲಾವಿದರಲ್ಲಿ ಕೆ.ಕೆ. ಹೆಬ್ಬಾರ್, ಎಸ್.ಜಿ. ವಾಸುದೇವ್, ಬಾಲನ್ ನಂಬಿಯಾರ್, ಯುಸೂಫ್ ಅರಕ್ಕಲ್, ವಿಜಯ ಸಿಂಧೂರ, ಕೆ.ಆರ್. ಸುಬ್ಬಣ್ಣ, ಎನ್. ಪುಷ್ಪಮಾಲಾ, ಎಲ್.ಪಿ. ಅಂಚನ್, ಕೆ.ಎಸ್. ರಾವ್, ಆರ್. ಉಮೇಶ, ವ್ಹಿ.ಜಿ. ಅಂದಾನಿ ಅವರುಗಳಿದ್ದಾರೆ. ಈ ಕಲಾವಿದರ ವ್ಯಕ್ತಿ ವಿವರ, ಪರಿಚಯ, ಕಲೆ ಮತ್ತು ಕಲಾಕೃತಿಗಳನ್ನು ಸ್ಥೂಲ ರೂಪದಲ್ಲಿ ಕೊಡಲಾಗಿದೆ. ಆಯಾ ಕಲಾವಿದರ ಜನನ, ಬಾಲ್ಯ, ಪ್ರಾರಂಭಿಕ ಕಲೆಯ ಒಲವು, ಕಲಾಶಿಕ್ಷಣ, ಕಲಾ ಬದುಕು, ಕೃತಿ ರಚನೆ, ಮಾಧ್ಯಮಗಳು, ಚಿತ್ರಶೈಲಿ, ವಸ್ತು ವಿಷಯಗಳು, ಅವರು ಭಾಗವಹಿಸಿದ ಶಿಬಿರ, ಕಾರ್ಯಾಗಾರ ಮತ್ತು ಪ್ರದರ್ಶನಗಳು, ಅವರಿಗೆ ಸಂದಿರುವ ಪ್ರಶಸ್ತಿ ಗೌರವಗಳು, ಇನ್ನಿತರ ಸಾಂಸ್ಕೃತಿಕ ಚಟುವಟಿಕೆಗಳು ಹೀಗೆ ಹಲವಾರು ಅಂಶಗಳನ್ನು ಈ ಪರಿಚಯ ಲೇಖನಗಳು ಒಳಗೊಂಡಿವೆ.

ಈ ಪುಸ್ತಕದಿಂದ ರಾಷ್ಟ್ರ ಪ್ರಶಸ್ತಿ ಪಡೆದ ಹಿರಿಯ ಕಲಾವಿದರ ಬಗೆಗಿನ ಸಾಧನೆ, ಸಿದ್ಧಿಗಳು, ಅವುಗಳನ್ನು ಸಾಧಿಸಲು ಅವರು ಮಾಡಿದ ಪ್ರಯತ್ನಗಳು, ಕಲಾ ಕ್ಷೇತ್ರದಲ್ಲಿ ಕಂಡುಕೊಂಡ ಹೊಸ ಆಯಾಮಗಳ ಬಗೆಗೆ ತಿಳಿದುಬರುತ್ತವೆ.

**ಕಲಾಕೋಶ :**

ಕನ್ನಡದಲ್ಲಿ ಕೋಶಗಳು ಅಪರೂಪವೇನಲ್ಲ. ಈಗಾಗಲೇ ಮೈಸೂರು ವಿಶ್ವವಿದ್ಯಾಲಯದಿಂದ ಜ್ಞಾನಗಂಗೋತ್ರಿ ಸಂಪುಟಗಳು, ಕನ್ನಡ ವಿಷಯ ವಿಶ್ವಕೋಶಗಳು, ಅಲ್ಲದೇ ಬೇರೆ ಬೇರೆ ಪ್ರಕಾಶನದಿಂದ ಜಾನಪದ ವಿಶ್ವಕೋಶಗಳು, ಕನ್ನಡ ವಿಶ್ವವಿದ್ಯಾಲಯದಿಂದ ಜನಪದ ಕಲೆಗಳ ಕೋಶ, ಕಿರಿಯರ ಕರ್ನಾಟಕ, ವೈದ್ಯವಿಶ್ವಕೋಶಗಳಂತಹ ವಿವಿಧ ಬಗೆಯ ಕೋಶಗಳು ಪ್ರಕಟವಾಗಿವೆ. ಇವುಗಳಲ್ಲಿ ಕೆಲವು ಸಾಂದರ್ಭಿಕವಾಗಿ ಕಲೆ ಮತ್ತು ಕಲಾವಿದರ ಬಗ್ಗೆ ಹೇಳುತ್ತವೆ. ಆದರೆ ಕಲೆಗಾಗಿಯೇ ವಿಶ್ವಕೋಶದಂತಹ ಬೃಹತ್ ಸಂಪುಟಗಳ ಹೊರಬಂದಿರುವುದು ಇದು ಪ್ರಥಮ ಪ್ರಯತ್ನವಾಗಿದೆ. ಇದನ್ನು ಎನ್. ಮರಿಶಾಮಾಚಾರ್ ಮತ್ತು ಅ.ಲ.ನರಸಿಂಹನ್ ಅವರು[೪೧] ಸಂಪಾದಿಸಿದ್ದಾರೆ.

ಪ್ರಸ್ತುತ ಕಲಾಕೋಶವು ಚಿತ್ರಕಲೆಯನ್ನು ಮುಖ್ಯವಾಗಿಟ್ಟುಕೊಂಡರೂ ಸಾಂದರ್ಭಿಕವಾಗಿ ಶಿಲ್ಪಕಲೆಯನ್ನು ಸಹಿತ ಪರಿಗಣಿಸಲಾಗಿದೆ. ಈ ಕಲಾಕೋಶದಲ್ಲಿ ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಕಲಾವಿಷಯಗಳು, ವಿವಿಧ ದೇಶಗಳ ಕಲಾ ಪ್ರಕಾರಗಳು, ಆಧುನಿಕ ಕಲಾಶೈಲಿಗಳು, ಕಲಾಪರಿಕರಗಳು, ಮಾಧ್ಯಮಗಳು, ವಿವಿಧ ರಾಜರ ಪ್ರೋತ್ಸಾಹದ ಅಡಿಯಲ್ಲಿ ಬೆಳೆದ ಕಲಾಶೈಲಿಗಳು, ವರ್ಣಗಳು, ಕಲಾವಿದರು, ಕಲಾನೆಲೆಗಳು, ಚಿತ್ರಗಳ ವಸ್ತುವಿಷಯಗಳು ಮುಂತಾದ ಅಂಶಗಳು ನಮೂದಿಸಲ್ಪಟ್ಟಿವೆ. ಪ್ರಾಚೀನ, ಮಧ್ಯಕಾಲೀನ, ಆಧುನಿಕ ಮತ್ತು ಆಧುನಿಕೋತ್ತರ ಕಲೆ ಮತ್ತು ಕಲಾವಿದರು, ವಾಸ್ತುರಚನೆ, ಶಿಲ್ಪಕೃತಿಗಳು, ಶಿಲೋಪಕರಣಗಳು, ಗ್ರಾಫಿಕ್‌ಕಲೆ, ಸೌಂದರ್ಯಶಾಸ್ತ್ರ, ಕಲಾವಿಮರ್ಶೆ, ಶಾಸ್ತ್ರ ಗ್ರಂಥಗಳು, ಚಿತ್ರಕಲೆಯ ವ್ಯಾಕರಣ, ದೃಶ್ಯಭಾಷೆ ಹೀಗೆ ಅನೇಕ ವೈವಿಧ್ಯ ಕಲಾವಿಷಯಗಳಿಗೆ ಸಂಬಂಧಿಸಿದ ಸುಮಾರು ಮೂರುನೂರು ನಮೂದುಗಳನ್ನು ಈ ಕೋಶದಲ್ಲಿ ಕೊಡಲಾಗಿದೆ. ಅಕಾರಾದಿಯಾಗಿ ಹೊಂದಿಸಲಾದ ಇಲ್ಲಿಯ ಕಲಾವಿಷಯದ ನಮೂದುಗಳಲ್ಲಿ ಆಯಾ ವಿಷಯದ ಸಂಕ್ಷಿಪ್ತವಾದ ಮಾಹಿತಿ ಲಭ್ಯವಾಗುತ್ತದೆ.

---

೪೧. ಎನ್.ಮರಿಶಾಮಾಚಾರ್, ಡಾ. ಅ.ಲ.ನರಸಿಂಹನ್ : (ಸಂ) : ಕಲಾಕೋಶ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು– ೧೯೯೪

**ಕರ್ನಾಟಕ ಜನಪದ ಕಲೆಗಳ ಕೋಶ :**

ಕನ್ನಡ ವಿಶ್ವವಿದ್ಯಾಲಯವು ಹೊರತಂದ ಕೋಶಗಳಲ್ಲಿ ಕರ್ನಾಟಕ ಜನಪದ ಕಲೆಗಳ ಕೋಶವು ವಿಶಿಷ್ಟವಾಗಿದೆ. ಇದನ್ನು ಹಿ.ಚಿ. ಬೋರಲಿಂಗಯ್ಯ ಸಂಪಾದಿಸಿದ್ದು,[೪೨] ಕರ್ನಾಟಕ ಜನಪದ ಕಲೆಗಳನ್ನು ವಿಷಯಾನುಸಾರ ವಿಂಗಡಿಸಿ ವಿಶ್ಲೇಷಣೆ ಮಾಡಲಾಗಿದೆ. ಇಲ್ಲಿನ ಜನಪದ ಕಲಾ ಪ್ರಕಾರಗಳು ಮುಖ್ಯವಾಗಿ ಕುಣಿತ, ವಾದ್ಯ ನುಡಿಸುವುದು, ಹಾಡುಗಾರಿಕೆ, ಆಟೋಟ, ಆಚರಣೆ, ನಂಬಿಕೆ, ವಿಧಿಕ್ರಿಯೆಗಳಂತಹ ವಿಚಾರಗಳಿಗೆ ಸಂಬಂಧಿಸಿದ್ದರೂ ಸಾಂದರ್ಭಿಕವಾಗಿ ಅಲ್ಲಲ್ಲಿ ಚಿತ್ರ ಮತ್ತು ಶಿಲ್ಪಕಲೆಯ ವಿವರಗಳು ಉಲ್ಲೇಖಗೊಂಡಿವೆ.

ಈ ಕೋಶದಲ್ಲಿ ಪ್ರಮುಖವಾಗಿ ಕುಣಿತ, ವಾದ್ಯ ನುಡಿಸುವುದು, ಹಾಡುಗಾರಿಕೆ, ಪೂಜಾ ವಿಶೇಷಗಳಂತಹ ಕಲೆಗಳನ್ನು ಪರಿಚಯಿಸಿದ್ದರೂ ಅವುಗಳ ಆಚರಣೆಯ ಸಂದರ್ಭದಲ್ಲಿ ಚಿತ್ರ ಮತ್ತು ಶಿಲ್ಪಕಲೆಯ ಪಾತ್ರ ಏನು? ಎಂಬುದು ಕುತೂಹಲಕರವಾದ ಸಂಗತಿಯಾಗಿದೆ. ಈ ಕೋಶದಲ್ಲಿ ಹೇಳಲ್ಪಟ್ಟ ಜನಪದ ಕಲೆಗಳೆಂದರೆ ಮಾರಿ ಆರಾಧನೆ, ಭೂತಾರಾಧನೆ, ನಾಗಾರಾಧನೆ, ವೀರಭದ್ರ ಆರಾಧನೆ, ಯಲ್ಲಮ್ಮನ ಆರಧನೆ, ಮಲೆಮಹದೇಶ್ವರ ಮತ್ತು ಮಂಟೇಸ್ವಾಮಿ ಆರಾಧನೆ, ಮೈಲಾರಲಿಂಗನ ಆರಾಧನೆ, ಫಲವಂತಿಕೆಯ ಆಚರಣೆಯ ಕಲೆಗಳು, ವಿಶೇಷ ಜನವರ್ಗದ ಮತ್ತು ಬುಡಕಟ್ಟುಗಳ ಕಲೆಗಳು ಎಂಬುದಾಗಿದ್ದು ಮತ್ತೆ ಇವುಗಳಲ್ಲಿ ಉಪ ವಿಭಾಗಗಳನ್ನು ಮಾಡಿಕೊಂಡು ಹಲವಾರು ವಿಷಯಗಳನ್ನು ಪ್ರಸ್ತಾಪಿಸಲಾಗಿದೆ.

ನಾಗಾರಾಧನೆಯಲ್ಲಿ ಚಿತ್ರಿಸುವ ತಾಂತ್ರಿಕ ಚಿತ್ರಕಲೆ, ಭೂತಾರಾಧನೆಯಲ್ಲಿನ ಮುಖವರ್ಣಿಕೆ, ಹಾಲಕ್ಕಿ ವಕ್ಕಲಿಗರ ಹಸೆ ಚಿತ್ರಕಲೆ, ಮಾರಿ ಆರಾಧನೆಯ ಬಣ್ಣದ ಮೂರ್ತಿಗಳು, ಉರುಗಳ ಕಲಾತ್ಮಕ ರೂಪಗಳು, ಹೀಗೆ ಹಲವು ಸಂದರ್ಭಗಳಲ್ಲಿ ಬಳಕೆಗೊಳ್ಳುವ ಕಲೆಯ ವಿಷಯಗಳು ಇಲ್ಲಿವೆ. ಜೋಕುಮಾರ, ಗುಳ್ಳವ, ವೀರಭದ್ರ ಆರಾಧನೆ, ಫಲವಂತಿಕೆಯ ಆರಾಧನೆಯ ಗುರ್ಚಿ, ಮುಂತಾದ ಕಲೆಗಳೂ ಚಿತ್ರ ಮತ್ತು ಶಿಲ್ಪಕಲೆಯ ಅಂಶಗಳನ್ನು ಒಳಗೊಂಡಿದ್ದು ಅವುಗಳ ಮಾಹಿತಿ ಇದರಲ್ಲಿದೆ. ಈ ಜನಪದ ಕಲೆಗಳ ಕೋಶದಿಂದ ಸಾಕಷ್ಟು ಪ್ರಮಾಣದ ಚಿತ್ರ ಮತ್ತು ಶಿಲ್ಪಕಲಾ ವಿಷಯಗಳ ವಿವರಗಳು ತಿಳಿದು ಬರುತ್ತವೆ. ಆ ದೃಷ್ಟಿಯಿಂದ ಇದೊಂದು ಗಮನಾರ್ಹ ಕೃತಿಯಾಗಿದೆ.

**ಆರ್.ಎಂ. ಹಡಪದ :**

ಉತ್ತರ ಕರ್ನಾಟಕದ ಗ್ರಾಮೀಣ ಪ್ರದೇಶದಿಂದ ಬೆಂಗಳೂರಿನಂತಹ ರಾಜಧಾನಿ ಸ್ಥಳಕ್ಕೆ ಹೋಗಿ ಕಲಾಶಾಲೆಯನ್ನು ಕಟ್ಟಿ ಸಮರ್ಥವಾಗಿ ಮುನ್ನಡೆಸಿದ ಬಾದಾಮಿಯ ಆರ್.ಎಂ. ಹಡಪದ ಅವರು ಶ್ರೇಷ್ಠ ಕಲಾ ಶಿಕ್ಷಕ ಮಾತ್ರವಲ್ಲದೇ ಸಮಕಾಲೀನ ಕಲಾಕ್ಷೇತ್ರದಲ್ಲಿ ಪರಿಣಾಮಕಾರಿಯಾದ ಪಾತ್ರ ವಹಿಸಿದ ಕಲಾವಿದರೂ ಆಗಿದ್ದಾರೆ. ಇವರ ಶಿಷ್ಯರಲ್ಲಿ ಅನೇಕರು ಹೊರ ರಾಜ್ಯಗಳಲ್ಲದೆ ವಿದೇಶಗಳಲ್ಲಿಯೂ ಕಲಿತು ಬಂದವರಿದ್ದಾರೆ. ಹಡಪದ ಅವರ ಬಗೆಗಿರುವ ಈ ಕೃತಿಯನ್ನು ಸಂಯೋಜಿತ ಸಂಸ್ಥೆಯವರು ಹೊರತಂದಿದ್ದು, ಎನ್. ಮರಿಶಾಮಾಚಾರ್ ಸಂಪಾದನೆ[೪೩] ಮಾಡಿದ್ದಾರೆ.

---

೪೨. ಹಿ.ಚಿ. ಬೋರಲಿಂಗಯ್ಯ : (ಸಂ) : ಕರ್ನಾಟಕ ಜನಪದ ಕಲೆಗಳ ಕೋಶ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ–೧೯೯೬.

೪೩. ಎನ್. ಮರಿಶಾಮಾಚಾರ್ : (ಸಂ) : ಆರ್.ಎಂ. ಹಡಪದ : ಸಂಯೋಜಿತ (ರಿ), ಜಯನಗರ ಬೆಂಗಳೂರು–೧೯೯೬.

ಹಡಪದ ಅವರ ಬಗೆಗಿನ ವಿವಿಧ ಆಯಾಮಗಳನ್ನು ಬಿಂಬಿಸುವ ಹತ್ತು ಲೇಖನಗಳು ಈ ಪುಸ್ತಕದಲ್ಲಿವೆ. ಖ್ಯಾತನಾಮರು ಇಲ್ಲಿನ ಲೇಖನಗಳನ್ನು ಬರೆದಿದ್ದು ಮೌಲಿಕತೆಯಿಂದ ಕೂಡಿವೆ. ಎಲೆಮರೆಯಲ್ಲಿ ಕಲಾಮೊಗ್ಗು, ನಾವು ನಾಲ್ವರು, ಹಡಪದ ಅವರ ಕಲಾಸೃಷ್ಟಿ, ಕಲಾವಿದ ಹಡಪದ, ಅರವತ್ತರ ಹಡಪದ್, ಸಮಕಾಲೀನ ಕಲೆ ಮತ್ತು ಕೆನ್‌ಕಲಾಶಾಲೆ, ಆರ್.ಎಂ. ಹಡಪದರ ಶಿಲ್ಪ ಮತ್ತು ಪ್ರಿಂಟ್ಸಗಳು, ನಿಜಗುರು, ಪ್ರಯೋಗಶೀಲ ಕಲಾವಿದ, ಹಡಪದ್ ಮತ್ತು ಸಾಮಾಜಿಕ ಚಿಂತನ ಎಂಬ ಹತ್ತು ಲೇಖನಗಳನ್ನು ಕ್ರಮವಾಗಿ ಶೀಲಾಕಾಂತ ಪತ್ತಾರ್, ಬಿ.ವಿ.ಕೆ. ಶಾಸ್ತ್ರಿ, ಕೆ.ಎಸ್.ಶ್ರೀನಿವಾಸ ಮೂರ್ತಿ, ಕಿ.ರಂ.ನಾಗರಾಜ್, ಆರ್.ಎ. ಶಾಂತರಾಜ, ಡಾ. ಅ.ಲ. ನರಸಿಂಹನ್, ಕೆ.ವಿ.ಸುಬ್ರಹ್ಮಣ್ಯಂ, ಪ.ಸ.ಕುಮಾರ, ಎನ್. ಮರಿಶಾಮಾಚಾರ್ ಮತ್ತು ಎಮ್.ಎಚ್. ಕೃಷ್ಣಯ್ಯ ಅವರುಗಳು ಬರೆದಿದ್ದಾರೆ.

ಈ ಕೃತಿಯಲ್ಲಿನ ಲೇಖನಗಳ ಮೂಲಕ ಹಡಪದರ ಕುರಿತಾಗಿ ಅನೇಕ ವಿವರಗಳು ತಿಳಿದು ಬರುತ್ತವೆ. ಬಾಲ್ಯ, ಪರಿಸರ, ಆರಂಭಿಕ ದಿನಗಳ ಕಲಾ ಪರಿಸ್ಥಿತಿ, ಕಲೆಗೆ ಸ್ಫೂರ್ತಿ ನೀಡಿದ ಬಾದಾಮಿಯ ಪರಿಸರ ಇಂತಹ ಸಂಗತಿಗಳು ಎಲೆಮರೆಯ ಕಲಾಮೊಗ್ಗು ಎಂಬ ಲೇಖನದಲ್ಲಿ ಬಿಂಬಿತವಾಗಿವೆ. ನಾವು ನಾಲ್ವರು ಲೇಖನದಲ್ಲಿ ರಾಜ್ಯದ ಸಮಕಾಲೀನ ಕಲಾ ಚಳುವಳಿಯ ಆರಂಭಿಕ ಪರಿಸ್ಥಿತಿ, ಕಲಾಕ್ಷೇತ್ರದ ಸ್ಪಂದನಗಳನ್ನು ಕಟ್ಟಿಕೊಡಲಾಗಿದೆ. ಹಡಪದರ ಕಲಾಸೃಷ್ಟಿ ಲೇಖನವು ಅವರ ಕೃತಿ ರಚನೆಯ ವಿಧಾನ, ಮಾಧ್ಯಮಗಳು, ವಿವಿಧ ಪ್ರಕಾರದ ಚಿತ್ರಗಳ ಬಗ್ಗೆ ತಿಳಿಸುತ್ತದೆ. ಸಮಕಾಲೀನ ಕಲೆ ಮತ್ತು ಕೆನ್‌ಕಲಾಶಾಲೆ ಎಂಬ ಲೇಖನದಲ್ಲಿ ಸಮಕಾಲೀನ ಕಲಾಕ್ಷೇತ್ರಕ್ಕೆ ಸ್ಪಂದಿಸುವ ಇಲ್ಲಿನ ಶಿಕ್ಷಕರು ಮತ್ತು ವಿದ್ಯಾರ್ಥಿ ಬಳಗ, ಇಲ್ಲಿ ಕಲಿತ ವಿದ್ಯಾರ್ಥಿಗಳು ಹೊರರಾಜ್ಯ ಮತ್ತು ಹೊರರಾಷ್ಟ್ರಗಳಲ್ಲಿ ಕಲಾ ಅಧ್ಯಯನ ಮಾಡಿದ ವಿವರಗಳು ಬಿಂಬಿತಗೊಂಡಿವೆ. ಹಡಪದರು ಚಿತ್ರಕಲಾ ಕೃತಿಗಳನ್ನು ಮಾತ್ರ ರಚಿಸದೆ ಹಲವಾರು ಶಿಲ್ಪಗಳನ್ನು ವಿವಿಧ ಮಾಧ್ಯಮಗಳಲ್ಲಿ ರಚಿಸಿದ್ದಾರೆ. ಹಾಗೆಯೇ ಗ್ರಾಫಿಕ್ಸ ಕೃತಿಗಳನ್ನು ರಚಿಸಿದ್ದು ಅವುಗಳ ವಿವರವು ಮತ್ತೊಂದು ಲೇಖನದಲ್ಲಿದೆ. ಹಡಪದ್ ಮತ್ತು ಸಾಮಾಜಿಕ ಚಿಂತನ ಲೇಖನವು ಅವರ ಕಲಾ ವಿಚಾರಗಳು, ಸಾಮಾಜಿಕ ಒಡನಾಟಗಳು, ಕಲಾವಿಮರ್ಶೆ, ಸಂಸ್ಕೃತಿಯ ಬಗೆಗಿನ ಅವರ ಅನುಸಂಧಾನಗಳು, ಅನ್ಯ ಶಿಸ್ತುಗಳ ಬಗೆಗೆ ಅವರಿಗಿದ್ದ ಆದರ ಒಲವುಗಳಂತಹ ವಿಚಾರಗಳನ್ನು ಕಟ್ಟಿಕೊಡುತ್ತದೆ. ಹೀಗೆ ಖ್ಯಾತ ಕಲಾವಿದ ಹಡಪದರ ಕಲೆ ಮತ್ತು ಜೀವನದ ಬಗ್ಗೆ ಹಲವಾರು ಸಂಗತಿಗಳನ್ನು ತಿಳಿಸುವ ಈ ಪುಸ್ತಕವು ಕಲಾ ಸಾಹಿತ್ಯದಲ್ಲಿ ಮಹತ್ವದ ಕೃತಿಯಾಗಿದೆ ಎಂದು ಹೇಳಬಹುದು.

**ಕೆ. ವೆಂಕಟಪ್ಪ – ಚಿತ್ರಸಂಪುಟ :**

ಕರ್ನಾಟಕದ ಕಲಾವಿದರಲ್ಲಿ ಬೃಹತ್ ಚಿತ್ರ ಸಂಪುಟಗಳು ಹೊರ ಬಂದಿರುವುದು ಕೆ.ವೆಂಕಟಪ್ಪ ಮತ್ತು ಎಸ್.ಎನ್.ಸ್ವಾಮಿಯವರ ಕುರಿತಾಗಿ ಮಾತ್ರ. ಸ್ವಾಮಿಯವರ ಬಗೆಗಿನ ಚಿತ್ರ ಸಂಪುಟವನ್ನು ರಾಜ್ಯ ಶಿಲ್ಪಕಲಾ ಅಕಾಡೆಮಿಯು ಹೊರತಂದಿದ್ದರೆ, ಕೆ. ವೆಂಕಟಪ್ಪನವರ ಬಗೆಗಿನ ಈ ಚಿತ್ರ ಸಂಪುಟವನ್ನು[೪೪] ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹೊರತಂದಿದೆ. ನಾಡಿನ ಪ್ರಸಿದ್ಧ ಚಿತ್ರಕಲಾವಿದ ಕೆ. ವೆಂಕಟಪ್ಪ ಇವರನ್ನು ಕುರಿತ ಈ ಚಿತ್ರ ಸಂಪುಟದಲ್ಲಿ ವೆಂಕಟಪ್ಪನವರ ಕಲಾಕೃತಿಗಳ ಛಾಯಾಚಿತ್ರಗಳನ್ನು ಕೊಟ್ಟಿದ್ದಾರೆ. ವರ್ಣಚಿತ್ರಗಳು, ಮೂರ್ತಿಶಿಲ್ಪಗಳು, ಅರ್ಧಶಿಲ್ಪ ಫಲಕಗಳು, ರೇಖಾಚಿತ್ರಗಳು ಮತ್ತು ಮಿಶ್ರಮಾಧ್ಯಮದ ಚಿತ್ರಗಳನ್ನು ಕೊಡಲಾಗಿದೆ.

---

೪೪. ಕನ್ನಡ ಮತ್ತು ಸಂಸ್ಕೃತಿ ಇಲಾಖೆ : (ಸಂ) : ಕೆ. ವೆಂಕಟಪ್ಪ, ಚಿತ್ರಸಂಪುಟ : ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು– ೧೯೯೭

ವರ್ಣಚಿತ್ರಗಳಲ್ಲಿ ಮೈಸೂರಿನ ನೀಲಗಿರಿ ಮರಗಳು, ಚಾಮುಂಡಿ ಬೆಟ್ಟದ ದೃಶ್ಯ, ಬುದ್ಧ ಅವನ ಶಿಷ್ಯರು, ವೀಣೆಯ ಹುಚ್ಚು, ಉದಕಮಂಡಲದ ದೃಶ್ಯ, ಮುಂಗಾರು ಮಳೆಯ ಆರ್ಭಟ, ಸೂರ್ಯಾಸ್ತ, ರಾಧಾ ಮತ್ತು ಜಿಂಕೆ ಎಂಬ ಚಿತ್ರಗಳಿವೆ. ಮೂರ್ತಿ ಶಿಲ್ಪದಲ್ಲಿ ರವೀಂದ್ರನಾಥ ಟ್ಯಾಗೋರ್, ಇ.ಬಿ. ಹ್ಯಾವೆಲ್, ಪರ್ಸಿಬ್ರೌನ್, ಇವರ ಮೂರ್ತಿಗಳಿವೆ. ಅರ್ಧಶಿಲ್ಪ ಫಲಕಗಳಲ್ಲಿ ಪರಿತ್ಯಾಗ, ಪರಿವ್ರಾಜಕ, ರಾಮನು ಹನುಮಂತನಿಗೆ ಮುದ್ರೆ ಕೊಡುತ್ತಿರುವುದು, ಏಕಲವ್ಯನು ಧನುರ್ವಿದ್ಯೆಯನ್ನು ಕಲಿಯುತ್ತಿರುವುದು, ಶಿವತಾಂಡವ ನೃತ್ಯ ಎಂಬ ಕಲಾಕೃತಿಗಳಿವೆ. ಹೀಗೆ ಒಟ್ಟು ವೆಂಕಟಪ್ಪನವರ ಎಪ್ಪತ್ತೊಂದು ಕಲಾಕೃತಿಗಳ ಛಾಯಾಚಿತ್ರಗಳನ್ನು ಈ ಸಂಪುಟದಲ್ಲಿ ಅಳವಡಿಸಲಾಗಿದೆ. ಈ ಸಂಪುಟವು ಕನ್ನಡ ಮತ್ತು ಇಂಗ್ಲೀಷ ಭಾಷೆಗಳಲ್ಲಿ ಪ್ರಕಟಗೊಂಡಿದೆ.

ಈ ಚಿತ್ರ ಸಂಪುಟದಿಂದ ವೆಂಕಟಪ್ಪನವರ ಕಲಾಶೈಲಿ, ಕೃತಿ ರಚನೆ ವಿಧಾನಗಳು, ಅವರ ಕಲಾ ಮೂಲಗಳು, ರಚನಾ ಮಾಧ್ಯಮಗಳು, ಪ್ರಭಾವ, ಪ್ರೇರಣೆ ಮುಂತಾದ ಅಂಶಗಳು ತಿಳಿದು ಬರುತ್ತವೆ. ಮಾತ್ರವಲ್ಲದೆ ಅಧ್ಯಯನ ದೃಷ್ಟಿಯಿಂದ ಅವರ ಕಲಾಕೃತಿಗಳನ್ನು ಕಾಯ್ದಿಡುವ ಹಿನ್ನೆಲೆಯಲ್ಲಿ ಈ ಬಗೆಯ ಚಿತ್ರ ಸಂಪುಟಗಳು ಉಪಯುಕ್ತವಾಗಿವೆ.

**ಸಮಕಾಲೀನ ಕಲೆ :**

ಕರ್ನಾಟಕ ಲಲಿತಕಲಾ ಅಕಾಡೆಮಿಯು ಹೊರತಂದಿರುವ ಈ ಕೃತಿಯನ್ನು ಎಸ್.ಎನ್. ಚಂದ್ರಶೇಖರ್ ಸಂಪಾದನೆ ಮಾಡಿದ್ದಾರೆ.[೪೫] ಇದರಲ್ಲಿ ಮೂರು ದೊಡ್ಡ ಲೇಖನಗಳಿದ್ದು, ಅವುಗಳನ್ನು ಎಸ್.ಎನ್. ಚಂದ್ರಶೇಖರ್, ಅ.ಲ.ನರಸಿಂಹನ್ ಮತ್ತು ಕೆ.ವಿ. ಸುಬ್ರಹ್ಮಣ್ಯ ಅವರುಗಳು ಬರೆದಿದ್ದಾರೆ. ಸಮಕಾಲೀನ ಕಲೆಯು ತನ್ನ ರಚನಾ ಹಂತದಲ್ಲಿ ಯಾವ ರೀತಿಯ ಅಭಿವ್ಯಕ್ತಿಗಳನ್ನು ಪಡೆದುಕೊಳ್ಳುತ್ತದೆ ಎಂಬುದರ ಬಗ್ಗೆ ಈ ಲೇಖಕರು ತಮ್ಮ ಬರಹಗಳಲ್ಲಿ ಚರ್ಚಿಸಿದ್ದಾರೆ. ಹಿಂದಿನ ದಿನಗಳಲ್ಲಿ ಇರುತ್ತಿದ್ದ ಚಿತ್ರಗಳಲ್ಲಿನ ಆಕೃತಿಗಳು ವಿಕೃತಿಗಳಾಗಿ ರೂಪಾಂತರಗೊಂಡಿರುವುದು. ಕಲೆಯು ಸಮಾಜದ ವಿವಿಧ ಸ್ಥರಗಳಲ್ಲಿ ಸ್ಪಂದಿಸುವ ಅಂಶಗಳು, ಪ್ರತ್ಯೇಕ ಶೈಲಿಗಳನ್ನು ಅಳವಡಿಸಿಕೊಂಡಿರುವ ಕಲಾವಿದರು ಅದರಲ್ಲಿಯೇ ಹೆಚ್ಚಿನ ಹುಡುಕಾಟಕ್ಕೆ ತೊಡಗಿರುವುದು, ಕಲಾಕೃತಿಯ ವಿಕೃತ ಆಕಾರಗಳ ರೂಪುರೇಷೆಗಳು ಮುಂತಾದ ಅಂಶಗಳು ಈ ಕೃತಿಯಲ್ಲಿನ ಲೇಖನಗಳಲ್ಲಿ ಚರ್ಚಿತಗೊಂಡಿವೆ.

'ಆಕೃತಿ-ವಿಕೃತಿಗಳ ರೂಪುರೇಷೆ' ಶೀರ್ಷಿಕೆಯಡಿಯಲ್ಲಿ ಎಸ್.ಎನ್. ಚಂದ್ರಶೇಖರ್ ಅವರು ಸಮಕಾಲೀನ ಕಲೆಯ ಬಗ್ಗೆ ಹಲವು ವಿಷಯಗಳನ್ನು ಚರ್ಚಿಸಿದ್ದಾರೆ. ಇದರಲ್ಲಿ ನಗರ ಜೀವನ, ಸಾಂಸ್ಕೃತಿಕ ವಿಷಯಗಳು, ಶಿಲ್ಪಗಳಲ್ಲಿ ಈ ಅಂಶಗಳ ಒಡಂಬಡಿಕೆಗಳ ಬಗ್ಗೆ ತಿಳಿಸುತ್ತಾರೆ.

'ವಿಕೃತ ಚಿತ್ರಕಲೆ' ಶೀರ್ಷಿಕೆಯಡಿಯಲ್ಲಿ ಅ.ಲ.ನರಸಿಂಹನ್ ಅವರು ಆಧುನಿಕ ಕಲಾ ಪಂಥದ ಇಜಮ್‌ಗಳ ಬಗ್ಗೆ ವಿವರಿಸಿದ್ದಾರೆ. ಇಲ್ಲಿ ಶಿಲ್ಪಚಿತ್ರಗಳ ರಚನೆಯಲ್ಲಿ ಕಂಡು ಬರುವ ವಿಕೃತತೆಗಳು, ನವ್ಯಕಲೆಯ ಪ್ರಸ್ತುತತೆ, ನಾಟಕೀಯ ಚಿತ್ರಗಳು, ಪಾಶ್ಚಾತ್ಯಿಕ ಒಲವು, ಭಾರತ ಮತ್ತು ಕರ್ನಾಟಕದಲ್ಲಿ ವಿಕೃತತೆಯ ರಚನೆಗಳ ಬಗ್ಗೆ ತಿಳಿಸುತ್ತಾರೆ. ಕೆ.ವಿ.ಸುಬ್ರಹ್ಮಣ್ಯ ಅವರು 'ವಿಕೃತರೂಪ ಶಿಲ್ಪಕಲೆ' ಲೇಖನದಲ್ಲಿ ವಿಶಿಷ್ಟ ಕಲ್ಪನೆ, ರೂಪ ವಿಕಾಸ, ವಿದೇಶ, ಭಾರತ, ಕರ್ನಾಟಕಗಳಲ್ಲಿ ಇದರ ಪರಿಣಾಮವನ್ನು ಚರ್ಚಿಸಿದ್ದಾರೆ.

---

೪೫. ಎಸ್.ಎನ್.ಚಂದ್ರಶೇಖರ್ : (ಸಂ) : ಸಮಕಾಲೀನ ಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೮.

**ಕಲಾ ಪಯಣಿಗರು :**

ಉತ್ತರ ಕರ್ನಾಟಕದ ಕೆಲವು ತರುಣ ಕಲಾವಿದರ ಕುರಿತು ಈ ಗ್ರಂಥ ರಚನೆಯಾಗಿದೆ. ಇದನ್ನು ಅಶೋಕ ಶೆಟ್ಟರ ಸಂಪಾದನೆ ಮಾಡಿದ್ದಾರೆ.[೪೬] ಉತ್ತರ ಕರ್ನಾಟಕದ ಕೆಲವು ತರುಣ ಕಲಾವಿದರು ಒಂದೆಡೆ ಸೇರಿ ಸಂಚಾರಿ ಪ್ರದರ್ಶನವನ್ನು ೧೯೯೮ರಲ್ಲಿ ಹಮ್ಮಿಕೊಂಡರು. ಇದರ ಅಂಗವಾಗಿ ಎಂಟು ಜನ ಕಲಾವಿದರ ಕಲಾಕೃತಿಗಳನ್ನು ರಾಜ್ಯದ ವಿವಿಧ ಜಿಲ್ಲೆ, ತಾಲೂಕು ಮತ್ತು ಪ್ರಮುಖ ಸ್ಥಳಗಳಲ್ಲಿ ಪ್ರದರ್ಶಿಸಲಾಯಿತು. ಈ ಪ್ರದರ್ಶನದಲ್ಲಿ ಪಾಲ್ಗೊಂಡ ಕಲಾವಿದರ ವಿವರ ಮತ್ತು ಕಲಾಕೃತಿಗಳ ವಿಮರ್ಶೆಯನ್ನು ಇದರಲ್ಲಿ ಮಾಡಲಾಗಿದೆ. ಆಯಾ ಕಲಾವಿದರ ಭಾವಚಿತ್ರ, ಕಲಾಕೃತಿಗಳ ಛಾಯಾಚಿತ್ರ ಮತ್ತು ಸ್ವ-ವಿವರಗಳನ್ನು ಈ ಗ್ರಂಥದಲ್ಲಿ ಕೊಡಲಾಗಿದೆ.

ಉತ್ತರ ಕರ್ನಾಟಕದ ಮಟ್ಟಿಗೆ ಇಂತಹ ಒಂದು ಪ್ರಯತ್ನ ಕಲೆಯ ದೃಷ್ಟಿಯಿಂದ ಗಮನಾರ್ಹವಾದುದಾಗಿದೆ. ಸಂಚಾರಿ ಕಲಾ ಪ್ರದರ್ಶನ ಏರ್ಪಾಟು ಮಾಡುವುದನ್ನು ಹೆಚ್ಚಾಗಿ ರಾಜ್ಯ ಲಲಿತಕಲಾ ಅಕಾಡೆಮಿಯು ಮಾಡುತ್ತ ಬಂದಿದೆ. ರಾಜ್ಯದ ಹಿರಿಯ ಕಲಾವಿದರು ಮತ್ತು ರಾಷ್ಟ್ರ ಪ್ರಶಸ್ತಿ ಕಲಾವಿದರ ಕೃತಿಗಳನ್ನು ರಾಜ್ಯದ ಬೇರೆ ಬೇರೆ ಸ್ಥಳಗಳಲ್ಲಿ ಅಕಾಡೆಮಿಯು ಪ್ರದರ್ಶಿಸಿದೆ. ಅಲ್ಲದೆ ದೊಡ್ಡದಾದ ಬಸ್ಸೊಂದನ್ನು ವ್ಯವಸ್ಥೆಗೊಳಿಸಿ ರಾಜ್ಯಾದ್ಯಂತ ಚಿತ್ರಗಳನ್ನು ಪ್ರದರ್ಶಿಸಿದೆ. ನಂತರ ಇದರಲ್ಲಿ ಭಾಗವಹಿಸಿದ ಕಲಾವಿದರ ಪರಿಚಯವನ್ನು ಬಿಂಬಿಸುವ ಕ್ಯಾಟಲಾಗ್‌ಗಳನ್ನು ಹೊರತಂದಿದೆ. ಈ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕದ ಎಂಟು ಜನ ಕಲಾವಿದರು ಸೇರಿ ಸಂಚಾರಿ ಪ್ರದರ್ಶನವನ್ನು ಹಮ್ಮಿಕೊಂಡಿದ್ದು ಅದರ ಅಂಗವಾಗಿ ಕಲಾ ಪಯಣಿಗರು ಎಂಬ ಕೃತಿಯನ್ನು ಹೊರತರಲಾಗಿದೆ. ಉತ್ತರ ಕರ್ನಾಟಕ ಭಾಗದಿಂದ ಈ ಪ್ರದರ್ಶನದ ನಂತರ ಅಂತಹ ಪ್ರಯತ್ನಗಳು ಮತ್ತೆ ನಡೆದಿಲ್ಲ. ಆ ಕಾರಣವಾಗಿಯೂ ಈ ಒಂದು ಕೃತಿಯು ಮಹತ್ವ ಪಡೆದುಕೊಳ್ಳುತ್ತದೆ.

**ದೃಶ್ಯಕಲಾ ವಿಮರ್ಶೆ :**

ದೃಶ್ಯಕಲಾ ವಿಮರ್ಶೆ ಎಂಬ ಈ ಸಂಪಾದನಾ ಕೃತಿಯಲ್ಲಿ ಕಲೆ ಮತ್ತು ಕಲಾ ವಿಮರ್ಶೆಗಳಿಗೆ ಸಂಬಂಧಿಸಿದ ಇಪ್ಪತ್ತೆರಡು ಲೇಖನಗಳಿವೆ. ರಾಜ್ಯ ಲಲಿತಕಲಾ ಅಕಾಡೆಮಿಯು ಈ ಕೃತಿಯನ್ನು ಹೊರತಂದಿದ್ದು, ವ್ಹಿ. ಜಿ. ಅಂದಾನಿಯವರು ಇದನ್ನು ಸಂಪಾದನೆ ಮಾಡಿದ್ದಾರೆ.[೪೭] ಇದರಲ್ಲಿರುವ ಲೇಖನಗಳನ್ನು ಬೇರೆ ಬೇರೆ ವಿದ್ವಾಂಸರು ಬರೆದಿದ್ದಾರೆ. ಡಿ.ಎಸ್. ಚೌಗಲೆ, ಅನ್ನದಾನಿ ಹಿರೇಮಠ, ವೀರಣ್ಣ ದಂಡೆ, ಎಚ್.ವಿ. ಮಂತಟ್ಟಿ, ಅದೇ ರೀತಿಯಲ್ಲಿ ವಿಜಯಾನಂದ ಕಾಲವಾಡ, ಚಿ.ಸು. ಕೃಷ್ಣಶೆಟ್ಟಿ, ಕುಪ್ಪಣ್ಣ ಕಂದಗಲ್ಲ, ಕೆ.ವಿ. ಸುಬ್ರಹ್ಮಣ್ಯ, ಪಿ. ಚಂದ್ರಿಕಾ ಇವರುಗಳು ಕನ್ನಡ ಲೇಖನಗಳನ್ನು ಬರೆದಿದ್ದಾರೆ, ಆಂಗ್ಲಭಾಷೆಯ ಲೇಖನಗಳನ್ನು ಎಚ್.ಎ. ಅನಿಲಕುಮಾರ, ವೀಣಾ ಕೋತಿನ, ತಿಮ್ಮಯ್ಯ ಹಾಗೂ ತುಷಾರ್ ಎಂಬುವರು ಬರೆದಿದ್ದಾರೆ. ಪ್ರಸ್ತುತ ಪುಸ್ತಕದಲ್ಲಿನ ಲೇಖನಗಳು ಕಲಾವಿಮರ್ಶೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿದವುಗಳಾಗಿವೆ. ಕಲೆ ಮತ್ತು ಸಮಾಜ, ಕಲೆ, ಕಲಾವಿದ ಮತ್ತು ಸಹೃದಯ ಇವರ ಸಂಬಂಧಗಳು, ಕಲೆಯ ಆಂತರಿಕ ಮತ್ತು ಬಾಹ್ಯ ವಿಚಾರಗಳು, ಸೌಂದರ್ಯ, ಔಚಿತ್ಯ, ರಸಾನುಭವ, ರೀತಿ, ಶೈಲಿ, ಕಲೆಗಾಗಿ ಕಲೆ, ಸಮಾಜಕ್ಕಾಗಿ ಕಲೆ, ಸಂಸ್ಕೃತಿಯ ಅಂಗವಾಗಿ ಕಲೆ, ಕಲಾ ವಿಮರ್ಶಕನ ಹೊಣೆಗಳು, ಕಲಾಕೃತಿ ರಚನೆಯ ಮಾಧ್ಯಮಗಳು, ಪ್ರಾಚೀನ ಪರಂಪರೆ ಮುಂತಾದ ಸಂಗತಿಗಳ ಬಗೆಗೆ ಇಲ್ಲಿನ ಲೇಖನಗಳಲ್ಲಿ ವಿಮರ್ಶೆಗಳಿವೆ.

---

೪೬. ಅಶೋಕ ಶೆಟ್ಟರ : (ಸಂ) : ಕಲಾ ಪಯಣಿಗರು : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೮.
೪೭. ವ್ಹಿ.ಜಿ.ಅಂದಾನಿ : (ಸಂ) : ದೃಶ್ಯಕಲಾ ವಿಮರ್ಶೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦.

ಅದೇ ರೀತಿ ಭಾರತೀಯ ಸೌಂದರ್ಯಶಾಸ್ತ್ರ, ಪಾಶ್ಚಾತ್ಯ ಸೌಂದರ್ಯಶಾಸ್ತ್ರಜ್ಞರ ಅಭಿಮತ, ಅಭಿಪ್ರಾಯಗಳು, ಪಾಶ್ಚಾತ್ಯ ಚಿಂತಕರಾದ ಪ್ಲೇಟೋ, ಅರಿಸ್ಟಾಟಲ್, ಕಾಂಟ್, ಕ್ರೋಚೆ ಇವರುಗಳ ಕಲಾ ವಿಚಾರವಾಗಿ ಇಲ್ಲಿನ ಲೇಖನಗಳು ಬೆಳಕು ಚೆಲ್ಲುತ್ತವೆ. ಕಲಾ ವಿಮರ್ಶೆಯ ದೃಷ್ಟಿಯಿಂದ ಇದೊಂದು ಗಮನಾರ್ಹ ಕೃತಿಯಾಗಿದೆ.

**ಕರ್ನಾಟಕ ಕಲಾವಿದರ ಪರಿಚಯಾವಳಿ :**

ಕರ್ನಾಟಕ ಲಲಿತಕಲಾ ಅಕಾಡಮಿಯು ನಾಡಿನ ಪ್ರಮುಖ ಕಲಾವಿದರ ಸ್ಥೂಲ ಪರಿಚಯ ಮಾಡಿಕೊಡುವ ಉದ್ದೇಶದಿಂದ 'ಕರ್ನಾಟಕ ಕಲಾವಿದರ ಪರಿಚಯಾವಳಿ' ಎಂಬ ಕೃತಿಯನ್ನು ಹೊರತಂದಿದೆ. ಎಸ್.ಎನ್. ಚಂದ್ರಶೇಖರ್ ಸಂಪಾದನೆ ಮಾಡಿರುವ[೪೮] ಈ ಕೃತಿಯಲ್ಲಿ ರಾಜ್ಯದ ಹಳೆಯ ತಲೆಮಾರಿನ ಕಲಾವಿದರೂ ಸೇರಿ ಸುಮಾರು ೩೦೦ ಜನ ಕಲಾವಿದರ ಒಂದೊಂದು ಕಲಾಕೃತಿ ಮತ್ತು ಅವರ ಸ್ವ-ವಿವರವನ್ನು ಸ್ಥೂಲವಾಗಿ ಕೊಡಲಾಗಿದೆ.

೧೯೮೩ರ ಹೊತ್ತಿಗೆ ಖ್ಯಾತನಾಮರಾಗಿದ್ದ ಅಂದಿನ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದ ಶ್ರೀ.ಟಿ.ಪಿ.ಅಕ್ಕಿಯವರಿಂದ ಹಿಡಿದು ದಂಡಾವತಿಮಠ, ಎಂ.ಟಿ.ವ್ಹಿ. ಆಚಾರ್ಯ, ಅಂಚನ್ ಎಲ್.ಪಿ, ಬಡಿಗೇರ್ ಎನ್.ಜಿ, ಅಂದಾನಿ ವ್ಹಿ.ಜಿ, ನಂಜುಂಡರಾವ್ ಎಂ.ಎಸ್, ಅ.ಲ.ನರಸಿಂಹನ್, ಡಾ.ಎಸ್.ಸಿ.ಪಾಟೀಲ, ಪುಷ್ಪಾ ದ್ರಾವಿಡ್, ಹೀಗೆ ಹಳೆ ಬೇರಿನೊಂದಿಗೆ ಹೊಸ ಚಿಗುರು ಸೇರಿಸಿ ಒಟ್ಟು ೩೦೦ ಜನ ಕರ್ನಾಟಕದ ಕಲಾವಿದರ ಪಟ್ಟಿಯನ್ನು ಕೊಟ್ಟಿದ್ದಾರೆ. ಕರ್ನಾಟಕದ ಪ್ರಮುಖ ಕಲಾವಿದರ ವಿಳಾಸಗಳು, ಪ್ರಶಸ್ತಿ ಗೌರವಗಳು, ಅವರ ಕಲಾಕೃತಿ, ಶೈಲಿಗಳ ಬಗ್ಗೆ ತಿಳಿಸಿಕೊಡುವ ಮಹತ್ವದ ಗ್ರಂಥ ಇದಾಗಿದ್ದು, ಕನ್ನಡ ಮತ್ತು ಆಂಗ್ಲಭಾಷೆಯಲ್ಲಿ ಪ್ರಕಟವಾಗಿದೆ.

**ಎಕ್ಸಿಬಿಷನ್ ಆಫ್ ಕರ್ನಾಟಕ ಆರ್ಟಿಸ್ಟ್ :**

ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿಯು ರಾಜ್ಯದ ನಲವತ್ತೊಂದು ಜನ ಕಲಾವಿದರು ಮತ್ತು ಅವರ ಕಲಾಕೃತಿಗಳ ಬಗ್ಗೆ ಪರಿಚಯ ರೂಪದ ಕ್ಯಾಟಲಾಗ್ ಮಾದರಿಯ ಕಿರು ಪುಸ್ತಕವನ್ನು ಪ್ರಕಟಿಸಿದೆ. ಇದನ್ನು ವ್ಹಿ.ಜಿ. ಅಂದಾನಿಯವರು ಸಂಪಾದನೆ ಮಾಡಿದ್ದು,[೪೯] ಆಂಗ್ಲ ಭಾಷೆಯಲ್ಲಿದೆ. ಈ ಪುಸ್ತಕವನ್ನು ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿ ಬೆಂಗಳೂರು, ಕೇಂದ್ರ ಲಲಿತಕಲಾ ಅಕಾಡೆಮಿ ನವದೆಹಲಿ ಮತ್ತು ಗೋವಾ ಅಕಾಡೆಮಿ ಗೋವಾ ಇವುಗಳ ಸಂಯುಕ್ತ ಸಹಯೋಗದಲ್ಲಿ ಹೊರತರಲಾಗಿದೆ. ಇದು ಸಂಪೂರ್ಣವಾಗಿ ವರ್ಣದಿಂದ ಪ್ರಕಟಗೊಂಡಿದ್ದು ಕಲಾಕೃತಿಗಳ ನೈಜರೂಪವನ್ನು ತಿಳಿದುಕೊಳ್ಳುವಲ್ಲಿ ಸಹಕಾರಿಯಾಗಿದೆ.

ಈ ಪುಸ್ತಕದಲ್ಲಿ ಪ್ರತಿಯೊಬ್ಬ ಕಲಾವಿದರ ಭಾವಚಿತ್ರ ಅವರ ಕಲಾಕೃತಿಯ ಛಾಯಾಚಿತ್ರ ಜೊತೆಯಾಗಿ ಮುದ್ರಿಸಿದ್ದು ಕಲಾವಿದರ ಬಗ್ಗೆ ಸಂಕ್ಷಿಪ್ತ ಮಾಹಿತಿಯನ್ನು ನೀಡುವ ಸ್ವ-ವಿವರಗಳನ್ನು ಕೊಡಲಾಗಿದೆ. ಅಲ್ಲದೇ ಅವರ ಕೃತಿಗಳ ರಚನಾ ಶೈಲಿ, ಮಾಧ್ಯಮ, ಪ್ರಭಾವ, ಪ್ರೇರಣೆಯನ್ನೂ ತಿಳಿಸಲಾಗಿದೆ. ಇಲ್ಲಿ ಪ್ರಕಟಗೊಂಡ ನಲವತ್ತೊಂದು ಜನ ಕಲಾವಿದರಲ್ಲಿ ವ್ಹಿ.ಜಿ.ಅಂದಾನಿ, ಅಪ್ಪಾಜಯ್ಯ, ಮುಸಾವಳಗಿ, ಎಂ.ಸಿ.ಚಟ್ಟಿ, ಮೋಹನ್ ಸೀತನೂರು, ವಿಜಯ ಸಿಂಧೂರ ಮುಂತಾದವರು ಕರ್ನಾಟಕವನ್ನು ಪ್ರತಿನಿಧಿಸುವ ಪ್ರಮುಖರಾಗಿದ್ದಾರೆ. ಉಳಿದವರು ಬೇರೆ ರಾಜ್ಯಗಳಿಗೆ ಸೇರಿದ ಕಲಾವಿದರಾಗಿದ್ದಾರೆ.

---

೪೮. ಎಸ್.ಎನ್.ಚಂದ್ರಶೇಖರ್ :(ಸಂ):ಕರ್ನಾಟಕ ಕಲಾವಿದರ ಪರಿಚಯಾವಳಿ:ಕರ್ನಾಟಕ ಲಲಿತಕಲಾ ಅಕಾಡೆಮಿ,ಬೆಂಗಳೂರು-೨೦೦೦

೪೯. ವ್ಹಿ.ಜಿ.ಅಂದಾನಿ : (ಸಂ) : ಎಕ್ಸಿಬಿಷನ್ ಆಫ್ ಕರ್ನಾಟಕದ ಆರ್ಟಿಸ್ಟ್ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦.

**ಪರಿಚಯ :**

ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿಯು ಪರಿಚಯ ಎನ್ನುವ ಪುಸ್ತಕದಲ್ಲಿ ತನ್ನ ಕಾರ್ಯ ಚಟುವಟಿಕೆಗಳನ್ನು ಪರಿಚಯಿಸಿಕೊಂಡಿದೆ. ಈ ಕೃತಿಯನ್ನು ಎಚ್.ಶಂಕರಪ್ಪ ಸಂಪಾದಿಸಿದ್ದಾರೆ.[೫೦] ಇದರಲ್ಲಿ ಹದಿನಾರು ಅಧ್ಯಾಯಗಳಿವೆ. ಒಂದೊಂದು ಅಧ್ಯಾಯವು ಒಂದೊಂದು ವಿಷಯದ ಬಗ್ಗೆ ಮಾಹಿತಿ ಕೊಡುತ್ತದೆ. ಅಕಾಡೆಮಿಯ ಆರಂಭ, ಬೆಳವಣಿಗೆ, ಕಾರ್ಯ ಚಟುವಟಿಕೆಗಳು, ಅಧ್ಯಕ್ಷರು ಮತ್ತು ಸದಸ್ಯರ ಬಗೆಗಿನ ವಿವರಗಳಿವೆ.

ಈ ಪುಸ್ತಕದಲ್ಲಿರುವ ಮುಖ್ಯ ಸಂಗತಿಗಳಲ್ಲಿ ಈ ಕೆಳಗಿನ ಅಂಶಗಳು ಒಳಗೊಂಡಿವೆ. ಅಕಾಡೆಮಿಯ ಪರಿಚಯ, ವಿದ್ಯಾರ್ಥಿವೇತನ ಸ್ವರೂಪ, ಕಾರ್ಯಾಗಾರ ಮತ್ತು ಕಲಾಶಿಬಿರಗಳು, ಕಲಾ ಪ್ರದರ್ಶನಗಳು, ೧೯೬೪ ರಿಂದ ೨೦೦೦ ವರೆಗಿನ ಅಕಾಡೆಮಿ ಅಧ್ಯಕ್ಷರುಗಳು ಮತ್ತು ಸದಸ್ಯರ ಪಟ್ಟಿ, ಅಕಾಡಮಿಯ ರಿಜಿಸ್ಟ್ರಾರ್‌ಗಳ ಪಟ್ಟಿ, ಅಕಾಡೆಮಿ ಪ್ರಶಸ್ತಿ ಪಡೆದವರ ಪಟ್ಟಿ, ಕೇಂದ್ರ ಲಲಿತಕಲಾ ಅಕಾಡೆಮಿಯಿಂದ ಪ್ರಶಸ್ತಿ ಪಡೆದವರು, ರಾಜ್ಯೋತ್ಸವ ಪ್ರಶಸ್ತಿ ಪಡೆದವರು, ಗೌರವ ಪ್ರಶಸ್ತಿ ಪಡೆದವರು, ವೆಂಕಟಪ್ಪ ಪ್ರಶಸ್ತಿ ಪಡೆದುಕೊಂಡವರ ಪಟ್ಟಿ, ವಾರ್ಷಿಕ ಕಲಾ ಪ್ರದರ್ಶನಗಳಲ್ಲಿ ಬಹುಮಾನ ಪಡೆದವರ ಪಟ್ಟಿ, ಅಕಾಡೆಮಿಯ ಪ್ರಕಟಣೆಗಳು, ಅಕಾಡೆಮಿಯ ಸಂಗ್ರಹದಲ್ಲಿರುವ ಕಲಾಕೃತಿಗಳ ವಿವರ, ಈ ಕೃತಿಗಳ ರಚನಾ ಮಾಧ್ಯಮ, ಅಳತೆ, ಮೌಲ್ಯ ಇತ್ಯಾದಿಗಳು, ಅಕಾಡೆಮಿಯ ಶಾಶ್ವತ ಕಲಾಪ್ರದರ್ಶನ, ಆಡಿಯೋ ಮತ್ತು ವಿಡಿಯೋ ಕ್ಯಾಸೆಟ್ಟುಗಳು, ಸ್ಲೈಡುಗಳು, ಮಾಶಾಸನ, ಗೌರವಧನ ಪಡೆದ ಕಲಾವಿದರು, ಅಕಾಡೆಮಿಯ ಗ್ರಂಥಾಲಯದಲ್ಲಿನ ಪುಸ್ತಕಗಳ ವಿವರ ಮುಂತಾದವುಗಳು ಈ ಕೃತಿಯಲ್ಲಿ ಪರಿಚಯಿಸಲ್ಪಟ್ಟಿವೆ. ರಾಜ್ಯ ಲಲಿತಕಲಾ ಅಕಾಡೆಮಿಯ ಬಗ್ಗೆ ತಿಳಿದುಕೊಳ್ಳಲು ಇದೊಂದು ಉತ್ತಮ ಕೈಪಿಡಿ ಪುಸ್ತಕವಾಗಿದೆ.

**೨೯ನೆಯ ವಾರ್ಷಿಕ ಕಲಾ ಪ್ರದರ್ಶನ :**

ಕರ್ನಾಟಕ ಲಲಿತಕಲಾ ಅಕಾಡೆಮಿಯು ಪ್ರತಿವರ್ಷ ವಾರ್ಷಿಕ ಕಲಾಪ್ರದರ್ಶನವನ್ನು ಏರ್ಪಡಿಸಿ ಅದರಲ್ಲಿ ವಿಜೇತರಾದವರಿಗೆ ಬಹುಮಾನ, ಪ್ರಶಸ್ತಿ ಪುರಸ್ಕಾರಗಳನ್ನು ನೀಡುತ್ತ ಬಂದಿದೆ. ಅಲ್ಲದೆ ಈ ವಾರ್ಷಿಕ ಪ್ರದರ್ಶನದ ಬಗ್ಗೆ ರೂಪುರೇಷೆಗಳು, ಭಾಗವಹಿಸಿದ ಕಲಾವಿದರು, ಬಹುಮಾನ ಪಡೆದ ಕಲಾವಿದರು ಮತ್ತು ಕಲಾಕೃತಿಗಳ ಬಗ್ಗೆ ಮಾಹಿತಿ ನೀಡುವುದಕ್ಕಾಗಿ ಕ್ಯಾಟ್‌ಲಾಗ್ ಮಾದರಿಯ ಕಿರು ಪುಸ್ತಕವನ್ನು ಹೊರತಂದಿದೆ. ಪ್ರಸ್ತುತ ಈ ೨೯ನೆಯ ವಾರ್ಷಿಕ ಕಲಾಪ್ರದರ್ಶನ ಕೃತಿಯನ್ನು ವ್ಹಿ.ಜಿ.ಅಂದಾನಿಯವರ ಸಂಪಾದಕತ್ವದಲ್ಲಿ ಹೊರತರಲಾಗಿದೆ.[೫೧]

ಈ ಕೃತಿಯಲ್ಲಿ ೨೯ನೆಯ ವಾರ್ಷಿಕ ಕಲಾ ಪ್ರದರ್ಶನದ ರೂಪುರೇಷೆಗಳು, ನಿರ್ಣಾಯಕರು, ಅವರ ಅಭಿಪ್ರಾಯಗಳು, ಬಹುಮಾನಿತ ಕಲಾವಿದರು, ಅವರ ಕೃತಿಗಳು, ಪ್ರದರ್ಶನಗೊಂಡ ಒಟ್ಟು ಕಲಾಕೃತಿಗಳ ವಿವರ, ಭಾಗವಹಿಸಿದ ಕಲಾವಿದರ ಸಂಕ್ಷಿಪ್ತ ಪರಿಚಯ, ಕಲಾಕೃತಿಗಳ ರಚನಾ ಮಾಧ್ಯಮ, ದರಪಟ್ಟಿ, ರಾಷ್ಟ್ರಮಟ್ಟದ ಪುರಸ್ಕಾರಕ್ಕೆ ಆಯ್ಕೆಯಾದ ಕಲಾವಿದರ ಮಾಹಿತಿ ಮತ್ತು ಅವರ ಕಲಾಕೃತಿಗಳ ಕುರಿತು ಹೇಳಲಾಗಿದೆ. ಇವರ ಕಲಾಕೃತಿಗಳ ಬಣ್ಣದ ಛಾಯಾಚಿತ್ರಗಳನ್ನು ಅಳವಡಿಸಲಾಗಿದೆ.

---

೫೦. ಎಚ್.ಶಂಕರಪ್ಪ : (ಸಂ) : ಪರಿಚಯ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦.

೫೧. ವ್ಹಿ.ಜಿ.ಅಂದಾನಿ : (ಸಂ) : ೨೯ನೆಯ ವಾರ್ಷಿಕ ಕಲಾ ಪ್ರದರ್ಶನ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦.

ಇಂತಹ ವಾರ್ಷಿಕ ಕಲಾ ಪ್ರದರ್ಶನಗಳ ಸಂಚಿಕೆಗಳಿಂದ ಆಯಾ ವರ್ಷಗಳಲ್ಲಿ ಎಂತಹ ಬಗೆಯ ಕಲಾಕೃತಿಗಳನ್ನು ಪ್ರಶಸ್ತಿಗೆ ಆಯ್ಕೆ ಮಾಡಲಾಗಿತ್ತು. ಮತ್ತು ಒಟ್ಟು ಪ್ರದರ್ಶನಗೊಂಡ ಕೃತಿಗಳು ಯಾವ ಯಾವ ಶೈಲಿಗಳಲ್ಲಿದ್ದವು ಎನ್ನುವ ಸಂಗತಿಗಳು ತಿಳಿದು ಬರುತ್ತವಲ್ಲದೆ ವರ್ಷ ವರ್ಷವೂ ಈ ಸಂಚಿಕೆ ಪ್ರಕಟಿಸುವುದರಿಂದ ಕಲಾ ಬೆಳವಣಿಗೆಯ ಹಂತಗಳನ್ನು ಕಂಡುಕೊಳ್ಳಬಹುದಾಗಿದೆ.

**ಕಲಾ ಸ್ವರೂಪ ಮತ್ತು ಪ್ರಚಾರ ಕಲೆ :**

ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಚಿತ್ರಕಲಾ ಶಿಕ್ಷಣ ಮಾತ್ರವಲ್ಲದೇ ಕಲಾ ಚಟುವಟಿಕೆಗಳು ಮತ್ತು ಕಲಾ ಸಾಹಿತ್ಯ ಪ್ರಕಟಣೆಯಲ್ಲಿ ಗಮನಾರ್ಹ ಸಾಧನೆ ಮಾಡಿರುವ ಐಡಿಯಲ್ ಫೈನ್ ಆರ್ಟ ಸಂಸ್ಥೆಯು ಈ ಕೃತಿಯನ್ನು ಹೊರತಂದಿದೆ. ಸಂಸ್ಥೆಯ ಕಲಾಶಾಲೆಯ ಪ್ರಾಚಾರ್ಯರಾದ ವ್ಹಿ.ಜಿ.ಅಂದಾನಿ ಅವರು ಇದನ್ನು ಸಂಪಾದಿಸಿದ್ದಾರೆ.[೫೨] ಈ ಪುಸ್ತಕವು ಚಿತ್ರಕಲೆಗೆ ಸಂಬಂಧಿಸಿದ ಲೇಖನಗಳನ್ನು ಒಳಗೊಂಡಿದ್ದು, ಮುಖ್ಯವಾಗಿ ಎರಡು ಭಾಗ ಮಾಡಲಾಗಿದೆ. ಒಂದನೆಯ ಭಾಗವು 'ಕಲಾ ಸ್ವರೂಪ'ವಾಗಿದ್ದು ಇಲ್ಲಿ ಲಲಿತಕಲೆಗೆ ಸಂಬಂಧಿಸಿದ ಲೇಖನಗಳಿವೆ. ಪ್ರಾಗೈತಿಹಾಸಿಕ ಚಿತ್ರಕಲೆ, ರಾಜಾಶ್ರಯದ ಚಿತ್ರಕಲೆ, ಭಾರತ ಮತ್ತು ಹೊರದೇಶಗಳ ಚಿತ್ರಕಲೆಗಳ ಬಗ್ಗೆ ಇಲ್ಲಿನ ಲೇಖನಗಳು ವಿವರಣೆ ನೀಡುತ್ತವೆ.

ಎರಡನೆಯ ಭಾಗವು 'ಪ್ರಚಾರ ಕಲೆ'ಗೆ ಸಂಬಂಧಪಟ್ಟಿದ್ದು ಇದರಲ್ಲಿ ಪ್ರಚಾರಕಲೆಯ ಇತಿಹಾಸ, ವಿವಿಧ ಆಯಾಮಗಳು, ವಸ್ತುವಿಷಯಗಳು, ಪ್ರಚಾರಕಲೆಯ ವಿವಿಧ ಭಾಗಗಳು ಮತ್ತು ಪ್ರಮುಖ ಲಕ್ಷಣಗಳನ್ನು ಕುರಿತ ವಿವರವಾದ ಮಾಹಿತಿ ಕೊಡಲಾಗಿದೆ.

ಪ್ರಾಗೈತಿಹಾಸಿಕ ಚಿತ್ರಕಲೆ ಲೇಖನದಲ್ಲಿ ಫ್ರಾನ್ಸ, ಸ್ಪೇನ್ ದೇಶಗಳ ಗುಹಾಚಿತ್ರಗಳು, ಆಫ್ರಿಕಾ, ಆಸ್ಟ್ರೇಲಿಯಾ, ಬರ್ಮಾ ದೇಶಗಳ ಪ್ರಾಗಿತಿಹಾಸ ಚಿತ್ರಗಳನ್ನು ಪ್ರಾರಂಭದಲ್ಲಿ ಉಲ್ಲೇಖಿಸಿ ನಂತರ ಭಾರತದ ಪ್ರಾಗಿತಿಹಾಸ ಚಿತ್ರಕಲೆಯ ಕುರಿತು ಹೇಳಿದೆ. ಆಮೇಲೆ ಕರ್ನಾಟಕದ ಈ ಪ್ರಕಾರದ ಚಿತ್ರಕಲೆ ಮತ್ತು ನೆಲೆಗಳ ಬಗ್ಗೆ ವಿವರಿಸಲಾಗಿದೆ. ರಾಜಾಶ್ರಯದ ಚಿತ್ರಕಲೆ ಲೇಖನದಲ್ಲಿ ಕರ್ನಾಟಕದ ವಿವಿಧ ರಾಜವಂಶಗಳ ಆಶ್ರಯದಲ್ಲಿ ಬೆಳೆದು ಬಂದ ಚಿತ್ರಕಲೆಯನ್ನು ವಿವೇಚಿಸಲಾಗಿದೆ. ಶಾತವಾಹನರು, ಚಾಲುಕ್ಯರು, ಹೊಯ್ಸಳರು, ರಾಷ್ಟ್ರಕೂಟರು, ವಿಜಯನಗರ ದೊರೆಗಳು, ಸುರಪುರ ನಾಯಕರು, ಬಹುಮನಿ ಸುಲ್ತಾನರು, ಬಿಜಾಪುರ, ಬೀದರ, ಗುಲಬರ್ಗಾದ ಮುಸ್ಲಿಂ ಸುಲ್ತಾನರು ಕಲೆಗೆ ನೀಡಿದ ಪ್ರೋತ್ಸಾಹವನ್ನು ಹೇಳಲಾಗಿದೆ. ಜೊತೆಗೆ ಆ ಕಾಲದ ಕಲಾಕೃತಿಗಳನ್ನು ಹೆಸರಿಸಲಾಗಿದೆ. ಲಲಿತಕಲೆ ಮತ್ತು ಅನ್ವಯಕಲೆ ಈ ಎರಡೂ ವಿಭಾಗದ ವಿದ್ಯಾರ್ಥಿಗಳಿಗೆ, ಕಲಾಸಕ್ತರಿಗೆ ಉಪಯುಕ್ತವಾದ ಪುಸ್ತಕವಾಗಿದೆ.

**ಕರ್ನಾಟಕ ಕಲಾವಿದರ ಪರಿಚಯಾವಳಿ :**

ರಾಜ್ಯ ಲಲಿತಕಲಾ ಅಕಾಡೆಮಿಯು ಹೊರತಂದಿರುವ ಈ ಕಲಾವಿದರ ಪರಿಚಯಾವಳಿ ಪುಸ್ತಕವನ್ನು ಎಸ್.ಎನ್. ಚಂದ್ರಶೇಖರ್ ಸಂಪಾದಿಸಿದ್ದಾರೆ.[೫೩] ಇದರಲ್ಲಿ ಕರ್ನಾಟಕದ ಕಲಾವಿದರ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ. ಎರಡುನೂರು ಪುಟಗಳನ್ನು ಹೊಂದಿದ ಈ ಗ್ರಂಥದ ಇರಗ್ಲೀಷ ಅನುವಾದವೂ ಇದೆ.

---

೫೨. ವ್ಹಿ.ಜಿ.ಅಂದಾನಿ : (ಸಂ) : ಕಲಾಸ್ವರೂಪ ಮತ್ತು ಪ್ರಚಾರಕಲೆ : ಐಡಿಯಲ್ ಫೈನ್ ಆರ್ಟ ಸಂಸ್ಥೆ, ಗುಲಬರ್ಗಾ-೨೦೦೧.
೫೩. ಎಸ್.ಎನ್.ಚಂದ್ರಶೇಖರ್ : (ಸಂ) : ಕರ್ನಾಟಕ ಕಲಾವಿದರ ಪರಿಚಯಾವಳಿ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೧

ಇಲ್ಲಿ ಕಲಾವಿದರ ಹೆಸರು, ಶಿಕ್ಷಣ, ಕಲಾಭ್ಯಾಸ, ವೃತ್ತಿ, ಕಲಾಪ್ರದರ್ಶನಗಳು, ಭಾಗವಹಿಸಿದ ಶಿಬಿರಗಳು, ಪಡೆದ ಪ್ರಶಸ್ತಿಗಳು, ಪುರಸ್ಕಾರಗಳು, ಕಟ್ಟಿದ ಸಂಘ ಸಂಸ್ಥೆಗಳು, ವಿವಿಧ ಸದಸ್ಯತ್ವ, ಸಾಮಾಜಿಕ ಕೆಲಸದ ವಿವರಗಳು, ಮಾತ್ರವಲ್ಲದೆ ಅವರ ಸಾಹಿತ್ಯ ಮತ್ತು ಸಾಂಸ್ಕೃತಿಕ ವಿವರಗಳೂ ಸಂಕ್ಷಿಪ್ತದಲ್ಲಿ ನಮೂದಿಸಲ್ಪಟ್ಟಿವೆ. ರಾಜ್ಯದ ಹಿರಿಯ ಮತ್ತು ಕಿರಿಯ ಕಲಾವಿದರ ಸಂಕ್ಷಿಪ್ತ ಪರಿಚಯವುಳ್ಳ ಈ ಕೃತಿಯಿಂದ ಹಲವಾರು ಕಲಾವಿದರ ಹೆಸರುಗಳು ಕೈಬಿಟ್ಟು ಹೋಗಿರಬಹುದು. ಆದರೂ ರಾಜ್ಯದ ಒಟ್ಟು ಕಲಾವಿದರ ಬಗ್ಗೆ ಒಂದು ಸ್ಥೂಲ ನೋಟವನ್ನು ಈ ಕೃತಿಯು ಕೊಡುತ್ತದೆ.

**ಕಲಾ ಚರಿತ್ರೆ :**

ವಿಶ್ವಕೋಶ ಮಾದರಿಯಲ್ಲಿರುವ ಈ ಕಲಾ ಗ್ರಂಥವನ್ನು ಕರ್ನಾಟಕ ಶಿಲ್ಪಕಲಾ ಅಕಾಡಮಿಯು ಹೊರತಂದಿದ್ದು, ಎನ್.ಮರಿಶಾಮಾಚಾರ್ ಸಂಪಾದಿಸಿದ್ದಾರೆ.[೫೪] ಜಗತ್ತಿನ ಪ್ರಾಚೀನ ನಾಗರಿಕತೆಗಳಲ್ಲಿ ಬೆಳೆದು ಬಂದಿರುವ ವಿವಿಧ ಕಲಾಶೈಲಿಗಳ ಮಾಹಿತಿ ಇಲ್ಲಿದೆ. ಈಜಿಪ್ಟ, ಮೆಸೋಪೊಟೋಮಿಯಾ, ಸಿಂಧೂ, ಚೀನಾ, ರೋಮ್ ಹೀಗೆ ಪ್ರಾಚೀನ ಸಂಸ್ಕೃತಿಗಳು ಆಯಾ ಕಾಲದಲ್ಲಿ ಪ್ರತ್ಯೇಕವಾದ ಕಲಾಶೈಲಿಗಳನ್ನು ಹೊಂದಿದ್ದು, ಆ ನೆಲದ, ಪರಿಸರದ ಗುಣಲಕ್ಷಣಗಳಿಂದ ಕೂಡಿದ್ದವು ಎಂದು ಹೇಳುತ್ತ ಅಂತಹ ಜಗತ್ತಿನ ಎಂಟು ಕಲಾ ಸಂಸ್ಕೃತಿಯ ಕುರಿತಾಗಿ ಸ್ಥೂಲ ಮಾಹಿತಿಯನ್ನು ಈ ಗ್ರಂಥದಲ್ಲಿ ಕೊಡಲಾಗಿದೆ.

ಪುಸ್ತಕದಲ್ಲಿರುವ ವಿಷಯಗಳಲ್ಲಿ ಮುಖ್ಯವಾಗಿ ಇತಿಹಾಸ ಪೂರ್ವಕಲೆ, ಈಜಿಪ್ಟಿನಕಲೆ, ಗ್ರೀಕ್ ಕಲೆ, ಎಟ್ರುಸ್ಕನ್‌ಕಲೆ, ರೋಮ್ ನಂತರದ ಮಧ್ಯಯುಗದಕಲೆ, ಗಾಥಿಕ್‌ಕಲೆ, ಚೈನಾದಕಲೆ, ಜಪಾನಿನ ಕಲೆ ಕುರಿತು ವಿವರಗಳಿವೆ. ಈ ಎಂಟು ಮುಖ್ಯ ಅಧ್ಯಾಯಗಳಲ್ಲಿ ಮತ್ತೆ ಉಪ-ಅಧ್ಯಾಯಗಳು ಪ್ರತ್ಯೇಕ ಶೀರ್ಷಿಕೆಗಳಲ್ಲಿ ಹಲವಾರು ವಿಷಯಗಳು ಹೇಳಲ್ಪಟ್ಟಿವೆ.

ಉಪವಿಭಾಗಗಳಲ್ಲಿ ಹೇಳಲಾಗಿರುವ ಸಂಗತಿಗಳಲ್ಲಿ ಸುಮೇರಿಯನ್, ಬೆಬಿಲೋನಿಯನ್, ಅಸ್ಸೀರಿಯನ್, ಹರಪ್ಪಾ ಮತ್ತು ಮೊಹಂಜೋದಾರೋ, ಹೋ ಆಂಗ್ ಹೋ ಪ್ರದೇಶದ ಸಂಸ್ಕೃತಿಗಳಲ್ಲಿ ಬೆಳೆದು ಬಂದ ಕಲೆಗಳು ಸೇರಿವೆ. ಇದಲ್ಲದೆ ಈಜಿಪ್ಟಿನ ಪಿರಾಮಿಡ್ಡು, ದೇವಾಲಯಗಳು, ಸ್ಪಿಂಕ್ಸಗಳು, ಗ್ರೀಕ್ ಶಿಲ್ಪಗಳು, ಕ್ರೀಟ್ಸ್ ದ್ವೀಪದ ಕಲೆ, ಹೆಲೆನಿಸ್ಟಿಕ್ ಕಲೆ, ಕ್ರೈಸ್ತಕಲೆ, ಗಾಥಿಕ್‌ಕಲೆ, ಬಾರೋಕ್‌ಕಲೆ, ರೋಕೊಕೊಕಲೆ, ಜಪಾನಿನ ಪ್ರಾಚೀನ ಭಿತ್ತಿಚಿತ್ರಗಳು ಹೀಗೆ ಹಲವಾರು ವಿಷಯಗಳು ನಮೂದಿಸಲ್ಪಟ್ಟಿವೆ. ಪ್ರಾಚೀನ ಕಲಾ ಪರಂಪರೆ ಬೆಳೆದು ಬಂದ ಹಿನ್ನೆಲೆಯನ್ನು ತಿಳಿದುಕೊಳ್ಳಲು ಈ ಗ್ರಂಥ ಉಪಯುಕ್ತ ಮಾಹಿತಿ ನೀಡುತ್ತದೆ.

**ಕೆ. ವೆಂಕಟಪ್ಪ :**

ಕರ್ನಾಟಕ ಕಲಾವಿದರಲ್ಲಿ ವೆಂಕಟಪ್ಪನವರ ಬಗೆಗೆ ಬಂದಷ್ಟು ಸಾಹಿತ್ಯ ಬೇರೆ ಕಲಾವಿದರ ಬಗ್ಗೆ ಬಂದಿಲ್ಲ. ಅವರ ಕುರಿತ ವ್ಯಕ್ತಿಚಿತ್ರಗಳು, ಲೇಖನಗಳು ಮತ್ತು ಚಿತ್ರ ಸಂಪುಟಗಳು ಹೀಗೆ ವೈವಿಧ್ಯ ಸಾಹಿತ್ಯ ಅವರ ಜೀವನ ಮತ್ತು ಕಲೆಯ ಬಗೆಗೆ ರಚನೆಯಾಗಿದೆ. ವಿವಿಧ ಪತ್ರಿಕೆ, ಸ್ಮರಣ ಸಂಚಿಕೆಗಳಲ್ಲೂ ಅವರ ಕುರಿತು ಲೇಖನಗಳಿವೆ. ಪ್ರಸ್ತುತ ಸಂಪಾದನಾ ಕೃತಿಯಲ್ಲಿ ವೆಂಕಟಪ್ಪನವರ ಬಗೆಗಿರುವ ಹನ್ನೊಂದು ಲೇಖನಗಳಿವೆ.[೫೫]

---

೫೪. ಎನ್.ಮರಿಶಾಮಾಚಾರ್ : (ಸಂ) : ಕಲಾಚರಿತ್ರೆ; ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು –೨೦೦೨.

೫೫. ಕೆ. ವೆಂಕಟಪ್ಪ : ಕನ್ನಡ ಮತ್ತು ಸಂಸ್ಕೃತಿ ಇಲಾಖೆ : ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು–೧೯೭೮

ಈ ಸಂಪುಟದಲ್ಲಿ ಪ್ರಕಟಿಸಿರುವ ಲೇಖನಗಳನ್ನು ನಾಡಿನ ಖ್ಯಾತ ವಿದ್ವಾಂಸರು ಬರೆದಿದ್ದಾರೆ. ಇಲ್ಲಿನ ಲೇಖನಗಳಲ್ಲಿ ಕಲಾವಿದ ಕೆ.ವೆಂಕಟಪ್ಪ, ಕಲಾಯೋಗಿ ದಿವಂಗತ ಕೆ.ವೆಂಕಟಪ್ಪನವರು, ಕೆ.ವೆಂಕಟಪ್ಪ, ಜಗದ್ವಿಖ್ಯಾತ ಕಲಾ ವಿದ್ಯಾರ್ಥಿ ಕೆ.ವೆಂಕಟಪ್ಪ, ವೀಣೆಯ ಹುಚ್ಚು, ಕಲಾತಪಸ್ವಿ ಕೆ.ವೆಂಕಟಪ್ಪ, ಮೈಸೂರಿನ ಚಿತ್ರಶಿಲ್ಪಿಗಳಾದ ಕೆ.ವೆಂಕಟಪ್ಪನವರು, ಕಲಾವಿದ ಕೆ.ವೆಂಕಟಪ್ಪ, ಕೆ.ವೆಂಕಟಪ್ಪ, ವರ್ಣಶಿಲ್ಪಿ ಎಂಬ ಹನ್ನೊಂದು ಲೇಖನಗಳಿವೆ. ಇವುಗಳನ್ನು ಅನುಕ್ರಮವಾಗಿ ಬಿ.ಜಿ.ಎಲ್.ಸ್ವಾಮಿ, ವಿ.ಸೀ., ಪಿ.ಆರ್. ತಿಪ್ಪೇಸ್ವಾಮಿ, ಜಿ.ವೆಂಕಟಾಚಲಂ, ರುಮಾಲೆ ಚನ್ನಬಸವಯ್ಯ, ಬಿ.ವಿ.ಕೆ.ಶಾಸ್ತ್ರಿ, ಕೆ.ವಿ.ಸುಬ್ರಹ್ಮಣ್ಯ, ಬಿ.ವೆಂಕೋಬರಾವ್, ಪಾಟೀಲ ಪುಟ್ಟಪ್ಪ, ಸಾಕ್ರ, ರಾಮಚಂದ್ರರಾವ್, ಕುವೆಂಪು ಅವರು ಬರೆದಿದ್ದಾರೆ.

ಬಿ.ಜಿ.ಎಲ್. ಸ್ವಾಮಿಯವರು ತಮ್ಮ ಲೇಖನದಲ್ಲಿ ವ್ಯಕ್ತಿತ್ವ ಮತ್ತು ಕಲಾ ವೈಶಿಷ್ಟ, ಮೊದಲ ಭೇಟಿ, ಶಿಷ್ಯನಾಗುವ ಆಸೆ, ಕಲಾನಿಷ್ಠೆ, ಭಾವದ ಆಹ್ವಾನೆ, ಸ್ವಯಂಚಿಕಿತ್ಸೆ, ವೀಣೆಯಸಾಧನೆ, ಮೂಡ್, ಶಿಲ್ಪಶೈಲಿಯಸ್ವಂತಿಕೆ, ನಿಸರ್ಗದೊಡನೆ ಸಹಸ್ಪಂದನ, ಕಲಾಕಲ್ಪನೆ, ದೂರದಕಲ್ಪನೆ, ಅಧ್ಯಯನ, ಕಲೆಯ ವಿದ್ಯಾರ್ಥಿ, ಪ್ರಯೋಗಪ್ರಜ್ಞೆ, ಸನ್ನಿವೇಶ ಗ್ರಹಿಕೆ, ವ್ಯಕ್ತಿತ್ವದ ಬಿಂಬ ಎಂಬ ತಲೆಬರಹದಡಿಯಲ್ಲಿ ವಿಷಯಗಳನ್ನು ನಿರೂಪಿಸಿದ್ದಾರೆ.

ವಿ.ಸೀ.ಅವರು ತಮ್ಮ ಲೇಖನದಲ್ಲಿ ಕೆ. ವೆಂಕಟಪ್ಪನವರ ಕಲಾಜೀವನ ಮತ್ತು ವ್ಯಕ್ತಿತ್ವದ ಬಗ್ಗೆ ಬೆಳಕು ಚೆಲ್ಲಿದ್ದಾರೆ. ಪಿ.ಆರ್.ತಿಪ್ಪೇಸ್ವಾಮಿಯವರು ವೆಂಕಟಪ್ಪನವರ ಕಲಾ ಬದುಕಿನಲ್ಲಿ ಮೈಸೂರು ಸಂಸ್ಥಾನದ ಅರಸರೊಂದಿಗಿನ ಸಂಬಂಧಗಳು ಮತ್ತು ಅವರ ದಿನಚರಿಗಳ ಬಗೆಗೆ ವಿಶೇಷವಾಗಿ ಗಮನ ಹರಿಸಿದ್ದಾರೆ. ವೆಂಕಟಾಚಲಂ ಅವರು ತಮ್ಮ ಲೇಖನದಲ್ಲಿ ಸ್ವತಂತ್ರ ಮನೋಭಾವ, ಕಲೆಗೆ ಉನ್ನತ ಸ್ಥಾನ, ಕಲಾವ್ಯಾಸಂಗ, ಆದರ್ಶವ್ಯಕ್ತಿ, ಪ್ರಥಮ ಶ್ರೇಣಿಯ ಕೀರ್ತಿಲಾಂಛನ, ಜೀವನದ ಕನಸು ಎಂಬ ಉಪವಿಭಾಗಗಳಲ್ಲಿ ವಿಷಯ ನಿರೂಪಣೆ ಮಾಡಿದ್ದಾರೆ. ರುಮಾಲೆ ಚನ್ನಬಸವಯ್ಯನವರು ವೆಂಕಟಪ್ಪನವರ ಶಿಸ್ತು, ಸಂಯಮ, ಆದರ್ಶಗಳನ್ನು ತಮ್ಮ ಲೇಖನಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಬಿ.ವಿ.ಕೆ.ಶಾಸ್ತ್ರಿಯವರು ಸಂಗೀತದ ಬಗೆಗಿನ ಒಲವನ್ನು ತಿಳಿಸಿದ್ದಾರೆ. ಕೆ.ವಿ.ಸುಬ್ರಹ್ಮಣ್ಯ ಅವರು ವೆಂಕಟಪ್ಪನವರ ಜಲವರ್ಣ ಕೃತಿಗಳ ಬಗ್ಗೆ ಹೆಚ್ಚು ಆದ್ಯತೆ ಕೊಟ್ಟಿದ್ದಾರೆ. ವೆಂಕೋಬರಾವ್ ಅವರು ಪ್ಲಾಸ್ಟರ್ ಕೃತಿಗಳೊಂದಿಗೆ ಅವರ ಮೂರ್ತಿ ರಚನೆಯನ್ನು ಬಿಂಬಿಸಿದ್ದಾರೆ. ಅದರಂತೆ ಪಾಟೀಲ ಪುಟ್ಟಪ್ಪನವರು ವೆಂಕಟಪ್ಪನವರ ಜೀವನ ಘಟನಾವಳಿಗಳ ಕುರಿತು ಬೆಳಕು ಬೀರಿದರೆ, ಸಾ.ಕೃ.ರಾಮಚಂದ್ರರಾಯರು ವೆಂಕಟಪ್ಪನವರ ಕಲಾಬದುಕಿನ ಕೊನೆಯ ದಿನಗಳ ಕುರಿತು ಮಾಹಿತಿ ಒದಗಿಸಿದ್ದಾರೆ. ಹೀಗೆ ಕೆ. ವೆಂಕಟಪ್ಪನವರ ಜೀವನ ಮತ್ತು ಕಲೆಯ ಕುರಿತು ಹಲವು ಆಯಾಮಗಳನ್ನು ಹೊಂದಿರುವ ಇಲ್ಲಿನ ಲೇಖನಗಳು ಕಲಾ ಸಾಹಿತ್ಯ ದೃಷ್ಟಿಯಿಂದ ಪ್ರಮುಖವಾಗಿವೆ.

**ಕುವೆಂಪು ಸಾಹಿತ್ಯ ಚಿತ್ರ ಸಂಪುಟ :**

ಕುವೆಂಪು ಸಾಹಿತ್ಯವನ್ನು ಆಧರಿಸಿ ರಚಿಸಿದ ಚಿತ್ರಗಳನ್ನು ಒಂದು ಕಡೆಗೆ ತಂದು ಅವುಗಳನ್ನು ವಿಶ್ಲೇಷಿಸುವ ಪ್ರಯತ್ನ ಈ ಗ್ರಂಥದಲ್ಲಿದೆ. ಬೇರೆ ಬೇರೆ ಕಲಾವಿದರು ರಚಿಸಿದ ಈ ಚಿತ್ರಗಳಲ್ಲಿ ಕುವೆಂಪು ಅವರ ಸಾಹಿತ್ಯಕ್ಕೆ ಪೂರಕವಾಗಿರುವ ಚಿತ್ರಗಳಲ್ಲದೇ ಅವರ ನೆಚ್ಚಿನ ಸ್ಥಳ ಕವಿಶೈಲ, ಅವರ ಮನೆ, ಊರಿನ ಬೀದಿಗಳು, ಸುತ್ತಲಿನ ಪರಿಸರವನ್ನು ಕಲಾವಿದರು ಚಿತ್ರಿಸಿದ್ದಾರೆ. ಕುವೆಂಪು ಸಾಹಿತ್ಯಕ್ಕೆ ಪೂರಕವಾಗಿರುವ ಚಿತ್ರಗಳಲ್ಲಿ 'ರಾಮಾಯಣದರ್ಶನಂ' ಆಧರಿಸಿದ ಚಿತ್ರಗಳು ಉತ್ಕೃಷ್ಟವಾಗಿದ್ದರೆ, ಅವರ ಪರಿಸರಕ್ಕೆ ಸಂಬಂಧಿಸಿದ ಚಿತ್ರಕೃತಿಗಳಲ್ಲಿ ಕವಿಶೈಲ ಮತ್ತು ಅವರ ಮನೆಯ ಚಿತ್ರಗಳು

ಮೋಹಕವಾಗಿವೆ. ಕವಿಶೈಲದ ಬಂಡೆಗಳು, ಸುತ್ತಲಿನ ಗಿಡ–ಮರಗಳು, ನಂತರದಲ್ಲಿ ನಿರ್ಮಿಸಿದ ಕಲ್ಲಿನ ಅಮೂರ್ತ ಶಿಲ್ಪಕೃತಿಗಳು ಚಿತ್ರದಲ್ಲಿ ಸುಂದರವಾಗಿ ಮೂಡಿ ಬಂದಿವೆ. ಈ ಗ್ರಂಥವನ್ನು ಎಂ.ಎಚ್. ಕೃಷ್ಣಯ್ಯನವರು ಸಂಪಾದನೆ ಮಾಡಿದ್ದು,[೫೬] ತೈಲವರ್ಣ ಮತ್ತು ಜಲವರ್ಣದ ಕಲಾಕೃತಿಗಳು ಇದರಲ್ಲಿವೆ. ತಮ್ಮ ಬರಹಗಳಲ್ಲಿ ಕುವೆಂಪುರವರು ವೈವಿಧ್ಯ ರೀತಿಯಲ್ಲಿ ಪ್ರಕೃತಿಯನ್ನು ವರ್ಣಿಸಿದ್ದಾರೆ. ಕವಿಶೈಲದ ಬಂಡೆಯ ಮೇಲೆ ಕುಳಿತಾಗ ಕಾಣುವ ಸೂರ್ಯೋದಯ, ಸೂರ್ಯಾಸ್ತಗಳನ್ನು ಮಾತ್ರವಲ್ಲದೇ ಸುತ್ತಲಿನ ವಾತಾವರಣ, ಹಾಗೆ ಇಡೀ ಮಲೆನಾಡ ಪರಿಸರ ಮತ್ತು ಜನಜೀವನಗಳು ಅವರ ಬರಹಗಳಲ್ಲಿ ಮುಪ್ಪುರಿಗೊಂಡಿದ್ದು ಅದರ ಅನುಸಾರವಾಗಿ ಕಲಾವಿದರು ವರ್ಣಚಿತ್ರ ಬಿಡಿಸಿದ್ದಾರೆ.

ಮೂಡಲ ಮನೆಯ ಮುತ್ತಿನ ನೀರಿನ ಎರಕಾವ ಹೊಯ್ದು ಹಾಗೆ ಸೂರ್ಯೋದಯ ಕವಿಗೆ ಕಂಡರೆ, ಕಲಾವಿದ ವರ್ಣಮೇಳದ ಭವ್ಯ ಚಿತ್ತಾರಗಳಿಂದ ಈ ದೃಶ್ಯವನ್ನು ಇನ್ನೂ ಪರಿಣಾಮಕಾರಿಯಾಗಿ ಮಾಡಿರುವ ಪ್ರಯತ್ನಗಳು ಇಲ್ಲಿವೆ. ಹಾಗಾಗಿ ಕುವೆಂಪು ಸಾಹಿತ್ಯ ಚಿತ್ರಗಳ ಮೂಲಕ ಹೊಸ ಅರ್ಥ ಪಡೆದುಕೊಂಡು ಈ ಚಿತ್ರ ಸಂಪುಟದಲ್ಲಿ ಕಂಗೊಳಿಸಿದೆ ಎನ್ನಬಹುದು.

ಸಂಕೀರ್ಣ ಹಿನ್ನಲೆಯ ಸಂಪಾದನಾ ಸಾಹಿತ್ಯದಲ್ಲಿ ಸೌಂದರ್ಯ ಮತ್ತು ಕಲೆ, ಪ್ರಶಸ್ತಿ ಪಡೆದ ಕಲಾವಿದರು, ಕೆ. ವೆಂಕಟಪ್ಪ ಸವಿನೆನಪು, ಕಲೆ ಮತ್ತು ರಸಸ್ವಾದನೆ, ಸಮಕಾಲೀನ ಕಲೆ, ತುಳುವರ ಆಚರಣೆಯಲ್ಲಿ ಕಲಾವಂತಿಕೆ, ಕಲಾಕ್ವಿಜ್, ದೃಶ್ಯಕಲೆಯ ಆರಾಧಕರು, ಕಲೆ ಮತ್ತು ಮನುಷ್ಯ ಸಂಸ್ಕೃತಿ, ನವ್ಯಕಲೆಯ ನವಮುಖಗಳು, ಚಿತ್ರಕಲಾ ಪ್ರಪಂಚ, ಕಲಾಕೋಶ, ದೃಶ್ಯಕಲಾ ವಿಮರ್ಶೆ, ಕರ್ನಾಟಕದ ಕಲಾವಿದರ ಪರಿಚಯಾವಳಿ, ಹೀಗೆ ಹಲವು ಬಗೆಯ ಕೃತಿಗಳು ಒಳಗೊಳ್ಳುತ್ತವೆ. ಕಲಾಪ್ರಕಾರಗಳು, ಕಲಾವಿಮರ್ಶೆ, ವ್ಯಕ್ತಿಪರಿಚಯ, ನವ್ಯಕಲೆ, ಜನಪದ ಕಲೆ, ಇವುಗಳ ಬಗ್ಗೆ ಲೇಖನಗಳಿರುವಂತೆ ಕಲೆಯ ಬಗ್ಗೆ ಸ್ಥೂಲ ಮಾಹಿತಿ ಇರುವ ವಿಶ್ವಕೋಶದಂತಹ ಗ್ರಂಥಗಳು ಈ ಗುಂಪಿನಲ್ಲಿವೆ.

ಮೇಲಿನ ಮೂರು ಪ್ರಕಾರದ ಸಂಪಾದನಾ ಸಾಹಿತ್ಯದಲ್ಲಿ ಸಂಕೀರ್ಣ ಹಿನ್ನಲೆಯ ಸಂಪಾದನಾ ಸಾಹಿತ್ಯವು ಮಹತ್ವದ ಮಾಹಿತಿಯನ್ನು ಕೊಡುತ್ತದೆ. ಅಭಿನಂದನೆ ಮತ್ತು ಸ್ಮರಣಸಂಚಿಕೆ ಹಿನ್ನಲೆಯ ಸಂಪಾದನಾ ಸಾಹಿತ್ಯದಲ್ಲಿ ವ್ಯಕ್ತಿ ಮತ್ತು ಕಲಾಸಂಸ್ಥೆಗಳ ಬಗೆಗಿನ ಮಾಹಿತಿ ಮುಖ್ಯವಾಗಿ ಹೊರಬಂದರೆ ಸಂಕೀರ್ಣ ಹಿನ್ನಲೆಯ ಸಂಪಾದನಾ ಸಾಹಿತ್ಯದಲ್ಲಿ ಕಲಾವಿಚಾರವಾಗಿ ಹೆಚ್ಚಿನ ಮಾಹಿತಿ ದೊರಕುತ್ತದೆ. ಸಂಪಾದನಾ ಸಾಹಿತ್ಯವು ಶಾಲೆ, ಕಾಲೇಜು, ಸಂಘ–ಸಂಸ್ಥೆ ಇವುಗಳಿಂದ ಹೆಚ್ಚಿನ ಪ್ರಮಾಣದಲ್ಲಿ ಬೆಳವಣಿಗೆಯಾಗಿರುವುದು ಕಂಡುಬರುತ್ತದೆ.

ಚಿತ್ರಕಲಾ ಸಂಪಾದನಾ ಸಾಹಿತ್ಯದಲ್ಲಿ ಎಲ್ಲ ಕೃತಿಗಳು ಉತ್ತಮ ಮಟ್ಟದಲ್ಲಿಲ್ಲ. ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಸಂಯೋಜನೆ, ದೃಶ್ಯಕಲಾ ವಿಮರ್ಶೆ, ಜನಪದ ಕಲೆಗಳ ಕೋಶ, ಚಿತ್ರಕಲಾ ಪ್ರಪಂಚ, ಕಲಾಕೋಶ, ನಿಜದ ನೆಲೆ, ಮುಂತಾದ ಕೆಲವೇ ಗ್ರಂಥಗಳು ಉತ್ಕೃಷ್ಟವಾಗಿವೆ. ಸ್ಪರ್ಷ, ನಿಸರ್ಗ, ಸುವರ್ಣ ವಿಜಯ, ಪ್ರಶಸ್ತಿ ಪಡೆದ ಕಲಾವಿದರು, ಇಂತಹ ಕೆಲವು ಕೃತಿಗಳು ತೀರಾ ಜಾಳಾಗಿವೆ. ಸಂಪಾದನಾ ಸಾಹಿತ್ಯದಲ್ಲಿ ವೈವಿಧ್ಯತೆ ಇದ್ದರೂ ಮೌಲಿಕತೆಯು ಕಡಿಮೆಯಾಗಿದೆ ಎಂದು ಹೇಳಬಹುದು.

---

೫೬. ಎಂ.ಎಚ್.ಕೃಷ್ಣಯ್ಯ : (ಸಂ) : ಕುವೆಂಪು ಸಾಹಿತ್ಯ ಚಿತ್ರ ಸಂಪುಟ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು – ೨೦೦೪.

ಆರಂಭಿಕ ಹಂತದಲ್ಲಿ ಚಿತ್ರಕಲಾ ಸಾಹಿತ್ಯವು ಸಂಪಾದನೆ ಸ್ವರೂಪದಲ್ಲಿಯೇ ಬಹುಮಟ್ಟಿಗೆ ಬೆಳವಣಿಗೆಯಾಗುತ್ತ ಬಂದಿರುವುದು ತಿಳಿದುಬರುತ್ತದೆ. ವಿಷ್ಣುಧರ್ಮೋತ್ತರ ಪುರಾಣ, ಸಮರಾಂಗಣ ಸೂತ್ರಧಾರ, ಶಿಲ್ಪರತ್ನ, ನಾರದಶಿಲ್ಪ ಇಂತಹ ಪ್ರಾಚೀನ ಗ್ರಂಥಗಳನ್ನು ಸಂಪಾದನೆ ಮಾಡಿ ಪ್ರಕಟಿಸಿರುವುದು ಕಂಡುಬರುತ್ತದೆ. ಮುಂದೆ ಸಂಪಾದನೆ ಸ್ವರೂಪವು ಬದಲಾಗಿ ವಿವಿಧ ಆಯಾಮಗಳನ್ನು ಪಡೆದುಕೊಂಡಿತು. ಪ್ರಾಚೀನ ಗ್ರಂಥಗಳನ್ನು ಸಂಪಾದಿಸುವುದರ ಜೊತೆಗೆ, ಅಭಿನಂದನಾ ಹಿನ್ನೆಲೆಯ ಗ್ರಂಥಗಳು, ಸ್ಮರಣ ಸಂಚಿಕೆ ಹಿನ್ನೆಲೆಯ ಸಂಪಾದನಾ ಗ್ರಂಥಗಳು ಮತ್ತು ಇನ್ನಿತರ ವಿಶೇಷ ಕಾರ್ಯಕ್ರಮಗಳ ಹಿನ್ನೆಲೆಯಲ್ಲಿ ಸಂಪಾದನಾ ಕೃತಿಗಳನ್ನು ಹೊರತರಲಾಯಿತು.

ಚಿತ್ರಕಲಾ ಸಂಪಾದನಾ ಸಾಹಿತ್ಯದಲ್ಲಿ ಒಳಗೊಳ್ಳುವ ಅಭಿನಂದನಾ ಹಿನ್ನೆಲೆಯ ಸಂಪಾದನಾ ಸಾಹಿತ್ಯದಲ್ಲಿ ಉತ್ತರ ಕರ್ನಾಟಕದ ಕಲಾವಿದರ ಬಗ್ಗೆ ಹೆಚ್ಚಿನ ಅಭಿನಂದನಾ ಗ್ರಂಥಗಳು ಪ್ರಕಟಗೊಂಡಿವೆ. ಟಿ.ಪಿ.ಅಕ್ಕಿ ಅವರ 'ಸಂಭಾವನಾ', ಶಂಕರರಾವ್ ಆಳಂದಕರ್ ಅವರ 'ಶ್ರೀಶಂಕರರಾವ್ ಆಳಂದಕರ್', ಮುರಿಗೆಪ್ಪ ಚಟ್ಟಿಯವರ 'ಕಲಾತಪಸ್ವಿ', ವಿ.ಸಿ.ಮಾಲಗತ್ತಿಯವರ 'ಚೈತನ್ಯ', ವ್ಹಿ.ಜಿ.ಅಂದಾನಿಯವರ 'ಕಲಾವಿದ ಅಂದಾನಿ ಐವತ್ತು', ಬಿ.ಕೆ.ಹಿರೇಮಠ ಅವರ 'ಸೃಷ್ಠಿ', 'ನಿಜದ ನೆಲೆ', ಎಂ.ಎಸ್.ನಂಜುಂಡರಾವ್ ಅವರ 'ಚಿತ್ರಕಲಾ' ಪ್ರಕಟಗೊಂಡಿದ್ದು, ಉತ್ತರ ಕರ್ನಾಟಕದ ಕಲಾವಿದರ ಕುರಿತಾಗಿವೆ. ಎಂ.ಎಸ್.ನಂಜುಂಡರಾವ್ ಅವರ 'ಚಿತ್ರಕಲಾ' ದಕ್ಷಿಣ ಕರ್ನಾಟಕದ ಕಲಾವಿದರ ಬಗ್ಗೆ ಬಂದ ಅಭಿನಂದನಾ ಗ್ರಂಥವಾಗಿದೆ. ಇವುಗಳಲ್ಲಿ ಟಿ.ಪಿ.ಅಕ್ಕಿಯವರ ಅಭಿನಂದನಾ ಗ್ರಂಥದಲ್ಲಿ ಹೆಚ್ಚಾಗಿ ವ್ಯಕ್ತಿ ಪರಿಚಯ ಕುರಿತ ಲೇಖನಗಳು ಮತ್ತು ಕಲಾಶಾಲೆಯ ಬಗ್ಗೆ ಒಂದೆರಡು ಲೇಖನಗಳಿವೆ. ಆದರೆ ಕಲೆ ಮತ್ತು ಕಲಾಪ್ರಕಾರದ ಬಗ್ಗೆ ಲೇಖನಗಳಿಲ್ಲವೆಂಬುದರ ಕೊರತೆ ಕಂಡುಬರುವುದು. ಅದೆ ರೀತಿ ಶಂಕರರಾವ್ ಆಳಂದಕರವರ ಗ್ರಂಥದಲ್ಲಿ ಎಲ್ಲ ಲೇಖನಗಳು ಅವರ ವ್ಯಕ್ತಿತ್ವ, ಕಲಾ ಬದುಕಿನ ಬಗ್ಗೆ ಇವೆ. ಕಲಾತಪಸ್ವಿ ಎಂಬ ಚೆಟ್ಟಿಯವರ ಬಗೆಗಿನ ಅಭಿನಂದನಾ ಗ್ರಂಥದಲ್ಲಿ ಆರು ಭಾಗಗಳಲ್ಲಿ ಲೇಖನಗಳನ್ನು ವಿಂಗಡಿಸಿದ್ದರೂ ಎಲ್ಲವೂ ಅವರ ಕಲೆ, ಕಲಾಬದುಕು ಮತ್ತು ವ್ಯಕ್ತಿತ್ವ ಕುರಿತಂತೆ ಬರೆಯಲ್ಪಟ್ಟಿವೆ.

ವ್ಹಿ.ಸಿ.ಮಾಲಗತ್ತಿಯವರ 'ಚೈತನ್ಯ', ಅಂದಾನಿಯವರ 'ಅಂದಾನಿ ಐವತ್ತು', ನಂಜುಂಡರಾವ್ ಅವರ 'ಚಿತ್ರಕಲಾ', ಬಿ.ಕೆ.ಹಿರೇಮಠರ 'ಸೃಷ್ಠಿ' ಮತ್ತು 'ನಿಜನ ನೆಲೆ' ಗಳು ಆಯಾ ವ್ಯಕ್ತಿಗಳ ಬಗೆಗಿನ ಪರಿಚಯವನ್ನು ಕೊಡುವುದರ ಜೊತೆಗೆ ಕಲೆ, ಕಲಾಪ್ರಕಾರ, ಕಲಾ ಸಾಹಿತ್ಯ, ವಿಮರ್ಶೆ ಮುಂತಾದ ವಿಷಯಗಳ ಬಗೆಗಿನ ಲೇಖನಗಳನ್ನು ಒಳಗೊಂಡಿವೆ. ಬಿ.ಕೆ.ಹಿರೇಮಠರ ಸೃಷ್ಠಿ ಹಾಗೂ ಜನಿದ ನೆಲೆಗಳು ಅಭಿನಂದನಾ ಹಿನ್ನೆಲೆಯ ಚಿತ್ರಕಲಾ ಸಾಹಿತ್ಯದ ಗ್ರಂಥಗಳಲ್ಲಿ ಮಹತ್ವದ ಕೃತಿಗಳಾಗಿವೆ. ಸೃಷ್ಠಿಯಲ್ಲಿ ಬಿ.ಕೆ.ಹಿರೇಮಠರು ವಿವಿಧ ಸಂದರ್ಭಗಳಲ್ಲಿ ತಾವೆ ಬರೆದ ಲೇಖನಗಳು ಮತ್ತು ಬೇರೆ ಬೇರೆ ವಿಚಾರ ಸಂಕಿರಣಗಳಲ್ಲಿ ಮಂಡಿಸಿದ ಪ್ರಬಂಧಗಳನ್ನು ಪ್ರಕಟಿಸಲಾಗಿದೆ. ಕರ್ನಾಟಕದ ಕಲೆ, ಹಸ್ತಪ್ರತಿಚಿತ್ರಕಲೆ, ಭಿತ್ತಿಚಿತ್ರಕಲೆ, ಪ್ರಾಚೀನ ಚಿತ್ರಕಲಾ ರಚನಾ ವಿಧಾನಗಳು, ಚಿತ್ರರಚನೆಯ ಪರಿಕರಗಳು, ಕಿರುರೂಪ ಚಿತ್ರಗಳು, ಪ್ರಾಚೀನ ಚಿತ್ರ ಮತ್ತು ಶಿಲ್ಪಕಲಾವಿದರ ಬಗೆಗಿನ ಉಲ್ಲೇಖಗಳು, ಪ್ರಾಚೀನ ಶಾಸ್ತ್ರಗ್ರಂಥಗಳಲ್ಲಿ ಚಿತ್ರಕಲೆಯ ಬಗೆಗಿನ ವಿವರಗಳು ಹೀಗೆ ವಿವಿಧ ವಿಷಯಕ್ಕೆ ಅನುಗುಣವಾದ ಲೇಖನಗಳು ಇಲ್ಲಿವೆ. ಅದರಂತೆ ನಿಜದ ನೆಲೆ ಗ್ರಂಥವು ಅತ್ಯಂತ ಮಹತ್ವದ ಗ್ರಂಥವಾಗಿದ್ದು ಅಭಿನಂದನಾ ಗ್ರಂಥಗಳಲ್ಲಿ ಚಿತ್ರಕಲಾ ಸಾಹಿತ್ಯದಲ್ಲೇ ಅತಿ ದೊಡ್ಡದಾದ ಮತ್ತು ಹೆಚ್ಚಿನ ಕಲಾವಿಷಯಗಳನ್ನು

ಒಳಗೊಂಡ ಮೌಲಿಕ ಕೃತಿಯಾಗಿದೆ. ಪ್ರಾಗೈತಿಹಾಸ ಚಿತ್ರಕಲೆ, ಪ್ರಾಚೀನ ಭಿತ್ತಿಚಿತ್ರಕಲೆ, ಕಿರುರೂಪ ಚಿತ್ರಕಲೆ, ಬೌದ್ಧ ಚಿತ್ರಕಲೆ, ಜೈನ ಚಿತ್ರಕಲೆ, ಇಸ್ಲಾಂ ಚಿತ್ರಕಲೆ, ಕ್ರೈಸ್ತ ಚಿತ್ರಕಲೆ, ಹಸ್ತಪ್ರತಿ ಚಿತ್ರಕಲೆ, ಜನಪದ ಚಿತ್ರಕಲೆ, ಮಧ್ಯಕಾಲೀನ ಚಿತ್ರಕಲೆ, ಪ್ರಾಚೀನ ಕಾವ್ಯಗಳಲ್ಲಿ ಚಿತ್ರಕಲೆ, ಶಾಸ್ತ್ರಗ್ರಂಥಗಳಲ್ಲಿ ಚಿತ್ರಕಲೆ, ಸಾಹಿತ್ಯ ಮತ್ತು ಚಿತ್ರಕಲೆ, ಸಮಾಜ ಮತ್ತು ಚಿತ್ರಕಲೆ, ಚಿತ್ರಕಲೆಯೊಂದಿಗಿನ ಅನ್ಯ ಶಿಸ್ತುಗಳ ಸಂಬಂಧಗಳ ಬಗ್ಗೆ ಇಲ್ಲಿ ಲೇಖನಗಳಿವೆ. ಇದರಲ್ಲಿ ಚಿತ್ರಕಲೆಯೊಂದಿಗೆ ವಾಣಿಜ್ಯೋದ್ಯಮ, ರಂಗಭೂಮಿ, ಯೋಗ, ಶಾಸನಗಳು, ಕೈಗಾರಿಕೆ ಹೀಗೆ ಹಲವು ವಿಷಯಗಳಿವೆ.

ಕಲಾವಿಮರ್ಶೆಯ ಕುರಿತಂತೆಯೂ ಇಲ್ಲಿ ಲೇಖನಗಳಿದ್ದು, ಹಲವು ಆಯಾಮಗಳನ್ನು ಬಿಂಬಿಸುತ್ತವೆ. ಈ ಗ್ರಂಥವು ಚಿತ್ರಕಲಾ ಸಾಹಿತ್ಯದ ಬಗೆಗಿನ ಹಲವಾರು ವಿಷಯಗಳನ್ನು ಒಳಗೊಂಡ ಮೌಲಿಕ ಕೃತಿಯಾಗಿದ್ದು ಆಧುನಿಕ ಮತ್ತು ಆಧುನಿಕೋತ್ತರ ಕಲೆಯ ಬಗೆಗಿನ ಲೇಖನಗಳಲ್ಲಿ ಮತ್ತು ವಿಷಯ ನಿರೂಪಣೆಯಲ್ಲಿ ಕೊರತೆ ಕಂಡುಬರುತ್ತದೆ.

ಸ್ಮರಣ ಸಂಚಿಕೆ ಹಿನ್ನೆಲೆಯ ಸಂಪಾದನಾ ಕೃತಿಗಳಲ್ಲಿ ಬೆಂಗಳೂರಿನ ಕಲಾಮಂದಿರ ಕಲಾಶಾಲೆಯ 'ಕಲಾನಿವೇದನ', ಸ್ಕೂಲ ಆಫ್ ಆರ್ಟ್, ಧಾರವಾಡದ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ವಜ್ರಮಹೋತ್ಸವದ 'ಚಿತ್ರಾಕ್ಷಿ', ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ವಿಜಯ ಕಲಾಮಂದಿರ ಸಂಸ್ಥೆ ಗದುಗಿನ 'ಸುವರ್ಣ ವಿಜಯ', ವಿಜಯ ಚಿತ್ರಕಲಾ ವಿದ್ಯಾಲಯ, ಇಲಕಲ್ಲದ 'ಸಾಕ್ಷಿ' ಪ್ರಮುಖವಾಗಿವೆ. ಇವುಗಳಲ್ಲಿ ಚಿತ್ರಾಕ್ಷಿ ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು ಈ ಎರಡು ಕೃತಿಗಳನ್ನು ಹೊರತುಪಡಿಸಿದರೆ ಉಳಿದವುಗಳು ಆಯಾ ಕಲಾಶಾಲೆಗಳ ಸಾಧನೆ-ಸಿದ್ಧಿಗಳನ್ನು ಒಳಗೊಂಡಂತಹ ಲೇಖನಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಿವೆ. ಚಿತ್ರಾಕ್ಷಿಯಲ್ಲಿ ಪ್ರಾಚೀನ ಚಿತ್ರಕಲೆ ಮತ್ತು ಕಲಾವಿಮರ್ಶೆ ಬಗ್ಗೆ ಲೇಖನಗಳಿದ್ದರೆ ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು ಗ್ರಂಥದಲ್ಲಿ ಚಿತ್ರಕಲೆಗೆ ಪೂರಕವಾಗಿರುವ ಅನ್ಯ ಶಿಸ್ತುಗಳ ಬಗ್ಗೆ ಲೇಖನಗಳಿವೆ. ಚಿತ್ರಕಲೆಯೊಂದಿಗೆ ವಾಣಿಜ್ಯೋದ್ಯಮ, ಸಂಗೀತ, ಶಿಲ್ಪ, ಇತಿಹಾಸ, ಮನೋವಿಜ್ಞಾನ, ಶಿಕ್ಷಣ, ಶಾಸನ, ಸಾಹಿತ್ಯ ಹೀಗೆ ಬೇರೆ ಬೇರೆ ವಿಷಯಗಳ ಬಗ್ಗೆ ಲೇಖನಗಳಿವೆ.

ಇನ್ನುಳಿದಂತ ೧೯೮೩ ರಲ್ಲಿ ನಡೆದ ಕಲಾಶಿಕ್ಷಣ ವಿಚಾರ ಸಂಕಿರಣದ ಸ್ಮರಣ ಸಂಚಿಕೆಯಲ್ಲಿ ಕರ್ನಾಟಕದಲ್ಲಿ ಕಲಾ ಶಿಕ್ಷಣದ ಪರಿಸ್ಥಿತಿಗಳ ಬಗ್ಗೆ ಲೇಖನಗಳಿವೆ. ಪ್ರಾಥಮಿಕ ಶಾಲೆಗಳಲ್ಲಿ ಕಲಾಶಿಕ್ಷಣ, ಮಾಧ್ಯಮಿಕ ಶಾಲೆಗಳಲ್ಲಿ ಕಲಾಶಿಕ್ಷಣ, ಕಲಾಶಾಲೆಗಳಲ್ಲಿ ಕಲಾಶಿಕ್ಷಣ ಎಂಬ ವಿಷಯದ ಮಾಹಿತಿಯನ್ನು ಇಲ್ಲಿನ ಲೇಖನಗಳು ಕೊಡುತ್ತಿದ್ದರೂ ಕಲಾಶಾಲೆಗಳಲ್ಲಿನ ಕಲಾಶಿಕ್ಷಣದ ಮಾಹಿತಿ ಕೊಡುವಲ್ಲಿ ಕೊರತೆ ಕಂಡುಬರುತ್ತದೆ. ಸಂಯೋಜನೆ ಎಂಬುದು ಬೆಂಗಳೂರಿನ ಸಂಯೋಜಿತ ಸಂಸ್ಥೆ ಹೊರತಂದಿರುವ ಸ್ಮರಣ ಸಂಚಿಕೆಯಾಗಿದ್ದು ಇದರಲ್ಲಿ ಮೌಲಿಕ ಲೇಖನಗಳಿವೆ. 'ಕಲಾಕೃತಿ ಮತ್ತು ಅದರ ಮಾರುಕಟ್ಟೆ', 'ಪರಿವರ್ತನೆಯ ಹಂತದಲ್ಲಿ ಚಿತ್ರಕಲೆ', 'ಕಲಾ ವಿಮರ್ಶೆಯ ಹೊಣೆಗಳು', 'ಚಿತ್ರಾಲಂಕೃತ ಹಸ್ತಪ್ರತಿಗಳು', 'ಪ್ರದರ್ಶನ ಕಲೆಗಾಗಿ ಆದರ್ಶ ಕಟ್ಟಡ ಸಮುಚ್ಚಯ' ಹೀಗೆ ಸಮಕಾಲೀನ ಸಮಾಜಕ್ಕೆ ಹೆಚ್ಚು ಹತ್ತಿರವಾಗಿರುವ ವಿಷಯಗಳನ್ನು ಒಳಗೊಂಡಿವೆ.

ಸಂತ, ಕಲಾವಿದ ಶುಭರಾಯರು ಎಂಬ ಸ್ಮರಣ ಸಂಚಿಕೆಯಲ್ಲಿ ಶುಭರಾಯರ ಜೀವನ, ವ್ಯಕ್ತಿತ್ವ, ಭಕ್ತಿ, ಕಲೆ, ಕಲಾಕೃತಿ, ಕಲಾಶೈಲಿಗಳನ್ನು ತಿಳಿಸುವ ಲೇಖನಗಳಿವೆ. ಇವು ಏಕಮುಖವಾದ ಮಾಹಿತಿಯನ್ನು ಕೊಡುತ್ತಿದ್ದು, ತೌಲನಿಕವಾದ ವಿವೇಚನೆಯ ಕೊರತೆ ಕಂಡುಬರುತ್ತದೆ. ಅದರಂತೆ 'ಜಾನಪದ ಸಾಹಿತ್ಯ ದರ್ಶನ' ಸ್ಮರಣ ಸಂಚಿಕೆಯಲ್ಲಿ ವಿಶೇಷವಾಗಿ ತೊಗಲುಗೊಂಬೆ ಚಿತ್ರಕಲೆಯ ಬಗ್ಗೆ ಮಾಹಿತಿ ನೀಡುವ ಲೇಖನಗಳಿವೆ.

ಕನ್ನಡ ಕಲಾ ಸಾಹಿತಿಗಳ ಪ್ರಥಮ ಸಮ್ಮೇಳನದ ಸ್ಮರಣ ಸಂಚಿಕೆಯಾದ 'ಕಲಾ ಚೇತನ'ದಲ್ಲಿ ಚಿತ್ರಕಲೆ ಮತ್ತು ಮನೋವಿಜ್ಞಾನ, ಕನ್ನಡದಲ್ಲಿ ಕಲಾಸಾಹಿತ್ಯ ಒಂದು ಪಕ್ಷಿನೋಟ, ಆಧುನಿಕ ಕಾಲ, ಸೃಜನಶೀಲತೆ, ಕಲೆ ಹಾಗೂ ಜೀವನ, ಕಲೆ ಮತ್ತು ಸಮಾಜ, ಚಿತ್ರಕಲೆಯ ನೆಲೆಯಲ್ಲಿ ಸಂಸ್ಕೃತಿ ಪರಂಪರೆಗಳು, ಚಿತ್ರಕಲೆ ಕುರಿತ ಲೇಖನಗಳು ಮತ್ತು ಪುಸ್ತಕಗಳು ಎಂಬಂತಹ ಲೇಖನಗಳಿವೆ.

ಕರ್ನಾಟಕ ರಾಜ್ಯ ಚಿತ್ರಕಲಾ ಶಿಕ್ಷಕರು ಬಿ.ಪಿ.ಬಾಯಿರಿಯವರ ಸ್ಮರಣೆಗಾಗಿ ಹೊರತಂದ ಸ್ಮರಣ ಸಂಚಿಕೆಯಲ್ಲಿನ ಲೇಖನಗಳು ಶಿಕ್ಷಣದಲ್ಲಿ ಕಲಾಭಿವ್ಯಕ್ತಿಗೆ ಆಕರಗಳ ಕುರಿತು ಮಾಹಿತಿ ನೀಡುತ್ತವೆ. ಸಂಜಯ ಸಂಸ್ಥೆಯ ಹತ್ತನೆಯ ವಾರ್ಷಿಕೋತ್ಸವದ ಅಂಗವಾಗಿ ಹೊರತರಲಾದ 'ಚೌಕಟ್ಟು' ಕೃತಿಯಲ್ಲಿ ಕಲಾವಿಮರ್ಶೆಯ ಬಗ್ಗೆ ಲೇಖನಗಳಿವೆ. ದೃಶ್ಯ ಸಂಯೋಜನೆಯ ಅರಿವಿ ಮರೆವಿನ ಚಿತ್ರ, ಕರ್ನಾಟಕದ ಸಮಕಾಲೀನ ಕಲೆಯ ಸಂವೇದನೆಯ ನೆಲೆಗಳು, ಸಮಕಾಲೀನ ಕಲೆಯ ಸವಾಲುಗಳು ಎಂಬಂತಹ ಸಂಗತಿಗಳ ಬಗ್ಗೆ ತಿಳಿಸುತ್ತವೆ. ಒಟ್ಟು ಸ್ಮರಣ ಸಂಚಿಕೆ ಹಿನ್ನೆಲೆಯ ಸಂಪಾದನಾ ಕೃತಿಗಳನ್ನು ಅವಲೋಕಿಸಿದಾಗ ಹೆಚ್ಚಾಗಿ ವಿಮರ್ಶೆ, ಕಲಾ ಸಾಹಿತ್ಯ, ಆಧುನಿಕ ಕಲೆ ಬಗ್ಗೆ ಒಳವು ಹೊಂದಿದ್ದರೂ ಪ್ರಾಚೀನ ಮತ್ತು ಮಧ್ಯಕಾಲೀನ ಕಲಾ ವಾತಾವರಣದ ಬಗ್ಗೆ ಮೌನತಾಳಿವೆ.

ಸಂಕೀರ್ಣ ಹಿನ್ನೆಲೆಯ ಸಂಪಾದನಾ ಸಾಹಿತ್ಯದಲ್ಲಿ ವೈವಿಧ್ಯತೆ ಇದೆ. ಕಲಾಸಾಹಿತ್ಯ, ಕಲಾತತ್ವ, ಸೌಂದರ್ಯಶಾಸ್ತ್ರ, ಸಮಕಾಲೀನ ಕಲೆ, ಜನಪದ ಚಿತ್ರಕಲೆ, ಕಲಾವಿದರು, ಸಂಸ್ಕೃತಿ ಇವುಗಳ ಬಗ್ಗೆ ಮಾಹಿತಿ ನೀಡುವ ಲೇಖನಗಳಿವೆ. ಚಿತ್ರಕಲಾ ಪ್ರಪಂಚವು ಎಪ್ಪತ್ತು ಲೇಖನಗಳನ್ನೊಳಗೊಂಡ ಬೃಹತ್ ಸಂಪ್ರತಿಯಾಗಿದೆ. ಇದರಲ್ಲಿ ಪ್ರಾಗೈತಿಹಾಸ ಚಿತ್ರಕಲೆ, ಪ್ರಾಚೀನ ಭಿತ್ತಿಚಿತ್ರಕಲೆ, ಕಿರುರೂಪ ಚಿತ್ರಕಲೆ, ಹಸ್ತಪ್ರತಿ ಚಿತ್ರಕಲೆ, ಚಿತ್ರಕಲಾ ಸಾಹಿತ್ಯ, ಜನಪದ ಚಿತ್ರಕಲೆ, ಆಧುನಿಕ ಚಿತ್ರಕಲೆ, ಕಲಾ ವಿಮರ್ಶೆ, ಕಲಾಶಿಕ್ಷಣ, ಕಲಾ ಮನೋವಿಜ್ಞಾನ ಇವುಗಳ ಬಗ್ಗೆ ಮಾಹಿತಿ ನೀಡುವ ಲೇಖನಗಳಿವೆ. ಒಟ್ಟು ಸಂಪಾದನಾ ಸಾಹಿತ್ಯವನ್ನು ಅವಲೋಕಿಸಿದಾಗ ವೈವಿಧ್ಯತೆ ಕಂಡುಬಂದರೂ ಆಧುನಿಕೋತ್ತರ ಕಲೆಗಳಾದ ಪಾಪ್‌ಕಲೆ, ಅರ್ಥಆರ್ಟ್, ಪ್ರತಿಷ್ಠಾಪನಾ ಕಲೆಯಂತಹ ಸಂಗತಿಗಳ್ ಬಗ್ಗೆ ಮಾಹಿತಿ ಕೊಡುವ ಲೇಖನಗಳಿಲ್ಲ ಎನ್ನುವ ಕೊರತೆ ಎದ್ದುಕಾಣುತ್ತದೆ.

*****

**ಚಿತ್ರಕಲಾ ವ್ಯಕ್ತಿ ಅಧ್ಯಯನ ಸಾಹಿತ್ಯ :**

ಕರ್ನಾಟಕದ ಸಂದರ್ಭದಲ್ಲಿ ರಚನೆಯಾಗಿರುವ ಚಿತ್ರಕಲಾ ಸಾಹಿತ್ಯದಲ್ಲಿ ಹೆಚ್ಚಿನ ಪಾಲು ವ್ಯಕ್ತಿ ಅಧ್ಯಯನಕ್ಕೆ ಸಂಬಂಧಿಸಿದ್ದಾಗಿದೆ. ಆರಂಭಿಕ ಹಂತದಲ್ಲಿ ಚಿಕ್ಕಮಟ್ಟ ಪುಸ್ತಕಗಳು ಚಿತ್ರಕಲೆಯ ಬೇರೆ ಬೇರೆ ಪ್ರಕಾರಗಳಲ್ಲಿ ಬಂದರೂ ಗಮನಾರ್ಹ ಕೊಡುಗೆ ಎಂದರೆ ವ್ಯಕ್ತಿ ಅಧ್ಯಯನದ್ದೇ. ಚಿತ್ರಕಲಾ ವ್ಯಕ್ತಿ ಅಧ್ಯಯನ ಸಾಹಿತ್ಯವು ಕಲಾವಿದರ ಜೀವನ ಮತ್ತು ಕಲೆಯನ್ನು ಕುರಿತಂತೆ ರಚನೆಯಾಗಿದ್ದು, ಇವೆರಡರ ಸ್ಥೂಲ ಮಾಹಿತಿಗಳನ್ನು ಒಳಗೊಂಡಿರುತ್ತದೆ.

ಕರ್ನಾಟಕದ ಅನೇಕ ಜನ ಕಲಾವಿದರು ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಗಮನಾರ್ಹ ಸಾಧನೆ ಮಾಡಿದ್ದಾರೆ. ಅಂತಹ ಕಲಾವಿದರ ಬಗ್ಗೆ ಸಾಹಿತ್ಯ ರಚನೆಯಾಗಿದೆ. ಕರ್ನಾಟಕದ ಭೌಗೋಳಿಕ ವ್ಯಾಪ್ತಿಗಳು ವಿಭಿನ್ನ ಸಾಂಸ್ಕೃತಿಕ ಹಿನ್ನೆಲೆ, ಪರಿಸರಗಳನ್ನು ಹೊಂದಿರುವುದು ಮಾತ್ರವಲ್ಲದೇ, ಪಕ್ಕದ ಬೇರೆ ರಾಜ್ಯದ ಪ್ರಭಾವಗಳಿಗೂ ಒಳಗಾಗಿ ಕೊಡುಕೊಳ್ಳುವಿಕೆಗಳಿಂದ ಸಮ್ಮಿಶ್ರವಾದ ಮತ್ತು ಕುತೂಹಲಕರವಾದ ಜೀವನ ಪದ್ಧತಿಗಳನ್ನು ಅಳವಡಿಸಿಕೊಂಡಿವೆ. ಇದು ಆಯಾ ಭಾಗದ ಸಾಹಿತ್ಯ, ಕಲೆಗಳಲ್ಲಿ ಪ್ರಮುಖವಾಗಿ ಗೋಚರಿಸುತ್ತದೆ. ಚಿತ್ರಕಲೆಯ ಕ್ಷೇತ್ರದಲ್ಲೂ ಈ ಮಾತು ಅನ್ವಯಿಸುತ್ತದೆ.

ಈ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕದ ಚಿತ್ರ ಕಲಾವಿದರು, ದಕ್ಷಿಣ ಕರ್ನಾಟಕದ ಕಲಾವಿದರು, ಹೈದರಾಬಾದ್ ಕರ್ನಾಟಕದ ಕಲಾವಿದರು, ಕರಾವಳಿ ಕರ್ನಾಟಕದ ಕಲಾವಿದರು, ಮುಂಬೈ ಕರ್ನಾಟಕದ ಕಲಾವಿದರು, ತಮ್ಮ ಪರಿಸರ ಮತ್ತು ಪ್ರಭಾವಗಳಿಂದ ಪ್ರೇರಿತರಾಗಿ ವಿಭಿನ್ನ ದೃಷ್ಟಿಕೋನದ ಕಲಾಕೃತಿಗಳನ್ನು ರಚಿಸಿರುವುದು ಕಂಡುಬರುತ್ತದೆ. ಇಂತಹ ಕಲಾವಿದರ ಬಗೆಗೂ ಸಾಹಿತ್ಯ ರೂಪುಗೊಂಡಿದೆ. ಇದಲ್ಲದೆ ಹೊರರಾಜ್ಯದ ಕಲಾವಿದರು ಮತ್ತು ಅಂತರಾಷ್ಟ್ರೀಯ ಚಿತ್ರ ಕಲಾವಿದರ ಬಗ್ಗೆಯೂ ಸಾಹಿತ್ಯ ಕೃತಿಗಳನ್ನು ರಚಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಚಿತ್ರಕಲಾ ಸಾಹಿತ್ಯದಲ್ಲಿ ಇದುವರೆಗೂ ರಚನೆಯಾದ ವ್ಯಕ್ತಿ ಅಧ್ಯಯನ ಸಾಹಿತ್ಯವನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ಆರು ರೀತಿಯಲ್ಲಿ ವಿಂಗಡಿಸಬಹುದಾಗಿದೆ.

೧. ಉತ್ತರ ಕರ್ನಾಟಕದ ಕಲಾವಿದರ ಬಗ್ಗೆ ಬಂದ ಸಾಹಿತ್ಯ.

೨. ದಕ್ಷಿಣ ಕರ್ನಾಟಕದ ಕಲಾವಿದರ ಬಗ್ಗೆ ಬಂದ ಸಾಹಿತ್ಯ

೩. ಕರಾವಳಿ ಕರ್ನಾಟಕದ ಕಲಾವಿದರ ಬಗ್ಗೆ ಬಂದ ಸಾಹಿತ್ಯ

೪. ಹೊರರಾಜ್ಯ ಮತ್ತು ಅಂತರಾಷ್ಟ್ರೀಯ ಕಲಾವಿದರ ಬಗ್ಗೆ ಬಂದ ಸಾಹಿತ್ಯ

೫. ಕಲಾವಿದರ ಪರಿಚಯ ಲೇಖನಗಳ ಸಾಹಿತ್ಯ.

**೧. ಉತ್ತರ ಕರ್ನಾಟಕದ ಕಲಾವಿದರ ಬಗ್ಗೆ ಬಂದ ಸಾಹಿತ್ಯ :**

ಪ್ರಾದೇಶಿಕವಾಗಿ ಕರ್ನಾಟಕ ಭೌಗೋಳಿಕ ವ್ಯಾಪ್ತಿಯನ್ನು ಅವು ಮೊದಲು ಹೊಂದಿದ್ದ ಆಡಳಿತದ ಕೇಂದ್ರ ಸ್ಥಾನಗಳ ಹಿನ್ನೆಲೆಯಲ್ಲಿ ಮತ್ತು ಆಯಾ ಪ್ರದೇಶಗಳು ಒಳಪಟ್ಟಿದ್ದ ಆಡಳಿತ ವ್ಯಾಪ್ತಿಯ ಹಿನ್ನೆಲೆಯಲ್ಲಿ ಬೇರೆ ಬೇರೆಯಾಗಿ ಕರೆಯುತ್ತ ಬಂದಿದ್ದಾರೆ. ಹೈದರಾಬಾದ್ ಕರ್ನಾಟಕ, ಮುಂಬೈ ಕರ್ನಾಟಕ, ಮದ್ರಾಸ್ ಪ್ರಾಂತ್ಯ ಹೀಗೆ ವಿವಿಧ ರೀತಿಯಲ್ಲಿ ಗುರುತಿಸುತ್ತಿದ್ದರೂ ಇಲ್ಲಿ ಅಧ್ಯಯನಕ್ಕೆ ಪೂರಕವಾಗಿ ಪ್ರಾದೇಶಿಕ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ ಮತ್ತು ಕರಾವಳಿ ಕರ್ನಾಟಕ ಎಂಬುದಾಗಿ ಮಾತ್ರ ವಿಂಗಡಿಸಿಕೊಳ್ಳಲಾಗಿದೆ. ಇಲ್ಲಿ ಉತ್ತರ ಕರ್ನಾಟಕದ ವ್ಯಾಪ್ತಿಯನ್ನು ಬೀದರ, ಗುಲಬರ್ಗ, ವಿಜಾಪುರ, ಬಾಗಲಕೋಟ, ಧಾರವಾಡ, ಹಾವೇರಿ, ಗದಗ, ದಾವಣಗೆರೆ, ಕೊಪ್ಪಳ, ಬಳ್ಳಾರಿ, ರಾಯಚೂರು, ಬೆಳಗಾಂವ ಜಿಲ್ಲೆಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಚಿತ್ರಕಲಾವಿದರನ್ನು ಉತ್ತರ ಕರ್ನಾಟಕದ ಕಲಾವಿದರು ಎಂದು ಪರಿಗಣಿಸಲಾಗಿದ್ದು, ಅವರ ಕುರಿತು ಬಂದ ವ್ಯಕ್ತಿ ಅಧ್ಯಯನ ಸಾಹಿತ್ಯವನ್ನು ಈ ಕೆಳಗಿನಂತೆ ಪರಿಶೀಲಿಸಬಹುದು.

**ಜಿ.ಎಸ್. ದಂಡಾವತಿಮಠ :**

ಕಲಾಗುರು ಎಂದು ಖ್ಯಾತಿ ಹೊಂದಿದ ಜಿ.ಎಸ್. ದಂಡಾವತಿಮಠ ಇವರ ಶಿಷ್ಯ ಬಳಗದಲ್ಲಿ ಅನೇಕ ಜನ ಹೆಸರಾಂತ ಕಲಾವಿದರಿದ್ದಾರೆ. ಇವರ ಶಿಷ್ಯರಲ್ಲಿ ಒಬ್ಬರಾದ ವ್ಹಿ.ಸಿ.ಮಾಲಗತ್ತಿ ಈ ಪುಸ್ತಕ ಬರೆದಿದ್ದಾರೆ.[೧] ಸಾಹಿತ್ಯದಲ್ಲಿ ಆಸಕ್ತಿಯುಳ್ಳ ಮಾಲಗತ್ತಿಯವರು ಸಮರ್ಥವಾಗಿ ಈ ಕೃತಿ ರಚನೆ ಮಾಡಿದ್ದಾರೆ. ಮುಂಬೈಯಲ್ಲಿ ನೂತನ ಕಲಾಮಂದಿರ ಸ್ಥಾಪಿಸಿ ಅನೇಕ ಜನ ಹೆಸರಾಂತ ಕಲಾವಿದರನ್ನು ನಾಡಿಗೆ ನೀಡಿದ ಶ್ರೇಯಸ್ಸು ದಂಡಾವತಿಮಠರಿಗೆ ಸಲ್ಲುತ್ತದೆ. ಜೀವನ ಮತ್ತು ಕಲಾ ಬದುಕಿನ ಬಗ್ಗೆ ರಚನೆಯಾದ ಈ ಪುಸ್ತಕದಲ್ಲಿ ಹಲವು ತಲೆಬರಹಗಳ ಅಡಿಯಲ್ಲಿ ವಿಷಯ ನಿರೂಪಿಸಲಾಗಿದೆ.

೧. ವಿ.ಸಿ.ಮಾಲಗತ್ತಿ : ಜಿ.ಎಸ್.ದಂಡಾವತಿಮಠ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೨.

ಪರಂಪರೆಯ ನಿರ್ಮಾಪಕ, ರಾಜಗುರು ಸಂತಾನ, ಮಾತೆಯೇ ಮೊದಲ ಕಲಾಗುರು, ಕಲೆ ಕವಲೊಡೆಯಿತು, ಕಲಾ ವ್ಯಾಸಂಗ, ರಾಷ್ಟ್ರೀಯವಾದಿ, ಕಷ್ಟಜೀವಿ, ಪ್ರತಿಭಾವಂತ ವಿದ್ಯಾರ್ಥಿ, ಕಲೆಯಲ್ಲಿ ದಾರ್ಶನಿಕತೆ ಎಂಬಂತಹ ತಲೆಬರಹಗಳಿವೆ. ಜೊತೆಗೆ ಮಾನವೀಯತೆ, ಬುದ್ಧಿವಂತಿಕೆ, ಬರಸಿಡಿಲಿನಂತೆ ಬಂದ ಬವಣೆ, ಕೊರಡು ಕೊನರಿತು, ನೂತನ ಕಲಾಮಂದಿರದ ಸ್ಥಾಪನೆ ಎನ್ನುವ ವಿಷಯಗಳಿವೆ. ಹಾಗೆಯೇ ಕಲಾಗುರು, ಕೆ.ಕೆ. ಹೆಬ್ಬಾರರ ಗುರುವಾಗಿ, ಆರ್.ಎಂ.ಹಡಪದ್ ಅವರ ಮಾರ್ಗದರ್ಶಿಯಾಗಿ, ಸಮಯೋಚಿತ ಪ್ರಜ್ಞಾವಂತರಾಗಿ, ಮರಳಿ ಮನೆಗೆ, ಕಲಾ ಶಿಕ್ಷಣ, ಪ್ರಶಸ್ತಿಗಳ ಸುರಿಮಳೆ, ಸಮಿತಿಗಳಲ್ಲಿ ಸೇವೆ, ಕನ್ನಡದ ರಾಯಭಾರಿ, ಮರಣವೇ ಮಹಾನವಮಿ ಎಂಬ ತಲೆಬರಹಗಳಲ್ಲಿ ವಿಷಯಗಳು ವಿಶ್ಲೇಷಣೆಗೊಂಡಿವೆ.

ಈ ಕೃತಿಯ ಕೊನೆಯಲ್ಲಿ ಅನೇಕ ಮಹನೀಯರು ದಂಡಾವತಿಮಠರ ಬಗ್ಗೆ ನೀಡಿದ ಹೇಳಿಕೆಗಳನ್ನು ಕೊಡಲಾಗಿದೆ. ಇದರಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರ್, ದ.ರಾ.ಬೇಂದ್ರೆ, ಕ್ಯಾಪ್ಟನ್ ಸಾಲೋಮನ್, ಬಿ.ಎಲ್.ಸರದೇಸಾಯಿ, ಸರೋಜಿನಿ ನಾಯ್ಡು, ವಿ.ಕೆ.ಗೋಕಾಕ್ ಇವರ ಅಭಿಪ್ರಾಯಗಳು ಮುಖ್ಯವಾಗಿವೆ. ಈ ಪುಸ್ತಕದಲ್ಲಿ ಬರವಣಿಗೆಯ ಶೈಲಿಯು ಏಕತಾನತೆಯಿಂದ ಕೂಡಿದ್ದು, ನೇರವಾಗಿ ವಿಷಯ ಪ್ರಸ್ತಾಪಿಸುತ್ತ ಸಾಗುತ್ತದೆ. ಆ ಕಾಲದ ಕಲಾ ಪರಿಸ್ಥಿತಿಯನ್ನು ನೇರವಾಗಿ ಇದು ಕಟ್ಟಿಕೊಡುತ್ತದೆ.

**ಡಿ.ಜಿ. ಬಡಿಗೇರ್ :**

ಕರ್ನಾಟಕದ ಕಲೆಯನ್ನು ಲಂಡನ್‌ವರೆಗೂ ಮುಟ್ಟಿಸಿದ ಶ್ರೇಯಸ್ಸು ಡಿ.ಜಿ. ಬಡಿಗೇರ್‌ಗೆ ಸಲ್ಲುತ್ತದೆ. ಮುಂಬೈಯಲ್ಲಿ ವಿದ್ಯಾಭ್ಯಾಸ ಮಾಡಿ ಲಂಡನ್‌ನಲ್ಲಿ ಏಕವ್ಯಕ್ತಿ ಕಲಾ ಪ್ರದರ್ಶನವನ್ನು ಮಾಡಿದ ಇವರ ಬಗ್ಗೆ ಅನ್ನದಾನಿ ಹಿರೇಮಠ ಪುಸ್ತಕ ಬರೆದಿದ್ದಾರೆ.[೨] ಬಡಿಗೇರರ ಬಗ್ಗೆ ಶೋಭಾ ಬಡಿಗೇರ್ ಪುಸ್ತಕ ಬರೆದಿದ್ದರೂ ಅದಕ್ಕಿಂತ ಇದು ಭಿನ್ನವಾಗಿ ಮೂಡಿ ಬಂದಿದೆ.

ಈ ಕೃತಿಯಲ್ಲಿ ಡಿ.ಜಿ. ಬಡಿಗೇರರ ಜೀವನ ಮತ್ತು ಕಲೆಯನ್ನು ಕುರಿತು ಪ್ರಮುಖವಾಗಿ ವಿವರಿಸಲಾಗಿದೆ. ವಿವಿಧ ತಲೆಬರಹಗಳ ಅಡಿಯಲ್ಲಿ ವಿಷಯ ನಿರೂಪಿಸಲಾಗಿದೆ. ಬಾಲ್ಯ, ಶಿಕ್ಷಣ, ಲಂಡನ್‌ನಲ್ಲಿ ವಿದ್ಯಾಭ್ಯಾಸ, ಮರಳಿ ತಾಯ್ನಾಡಿಗೆ, ಕರ್ನಾಟಕಕ್ಕೆ ಆಗಮನ, ಸುಖಸಂಸಾರ, ವೀರಭದ್ರಾವತಾರ, ಎಂಜೇಲ್ ಎಂಬ ತಲೆಬರಹಗಳನ್ನು ಕೊಟ್ಟು ವಿಷಯ ನಿರೂಪಣೆ ಮಾಡಲಾಗಿದೆ. ಮುಂಬೈ ಪ್ರಾಂತದ ಶಿಕ್ಷಣ ತನಿಖಾ ಅಧಿಕಾರಿಯಾಗಿ ದಕ್ಷ ಸೇವೆ ಮಾಡಿದ್ದು, ಕಲಾ ಶಿಕ್ಷಣ ಕ್ರಮದಲ್ಲಿ ಸುಧಾರಣೆಗಳನ್ನು ತಂದದ್ದು ಇದರಲ್ಲಿ ಹೇಳಲಾಗಿದೆ. ಜೊತೆಗೆ ಅವರ ಕೆಲವು ಕಲಾಕೃತಿಗಳ ವಿಶ್ಲೇಷಣೆಯು ಸಹಿತ ಈ ಪುಸ್ತಕದಲ್ಲಿ ಕಂಡು ಬರುತ್ತದೆ. ಸಾಹಿತ್ಯದ ಪರಿಭಾಷೆಯ ಹಿನ್ನೆಲೆಯಲ್ಲಿ ಉತ್ತಮವಾಗಿ ಮೂಡಿ ಬಂದಿದೆ. ಆದರೆ ಕಲಾವಿದನ ರಚನಾ ಹಿನ್ನೆಲೆಯ ತಾಂತ್ರಿಕ ವಿಚಾರಗಳನ್ನು ಪ್ರಸ್ತುತಪಡಿಸುವಲ್ಲಿ ಲೇಖಕರು ಹೆಚ್ಚಿನ ಗಮನ ಹರಿಸಿದಂತೆ ತೋರುವುದಿಲ್ಲ. ಕಾರಣ ಚಿತ್ರಕಲಾ ಪ್ರಾಯೋಗಿಕ ವಿವರಗಳು ಸ್ವತಹಃ ಕೃತಿ ರಚನೆಯಿಂದ ಮಾತ್ರ ಅನುಭವಕ್ಕೆ ಬರುವಂತಹುಗಳಾಗಿವೆ. ಇವುಗಳನ್ನು ಹೊರತು ಪಡಿಸಿ ಇನ್ನುಳಿದ ವಿವರಗಳು ಚೆನ್ನಾಗಿ ಮೂಡಿ ಬಂದಿವೆ. ಸಾಹಿತಿಗಳು ಕಲೆಯ ಕುರಿತು ಪುಸ್ತಕ ಬರೆದಾಗ ಕಲಾಕೃತಿಯ ವಿವರಗಳಿಗಿಂತ ಇನ್ನಿತರ ಪೂರಕ ವಿಚಾರಗಳೇ ಹೆಚ್ಚು ಮಹತ್ವ ಪಡೆದುಕೊಳ್ಳುತ್ತವೆ ಎಂದು ಈ ಕೃತಿಯ ಹಿನ್ನೆಲೆಯಲ್ಲಿ ಹೇಳಬಹುದಾಗಿದೆ.

---

೨. ಅನ್ನದಾನಿ ಹಿರೇಮಠ : ಡಿ.ಜಿ.ಬಡಿಗೇರ್ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೩.

**ಎಂ.ವಿ. ಮಿಣಜಗಿ :**

ಕರ್ನಾಟಕದ ಪ್ರಸಿದ್ಧ ಕಲಾವಿದರಲ್ಲಿ ಒಬ್ಬರಾದ ಎಂ.ವಿ. ಮಿಣಜಗಿಯವರ ಬಗ್ಗೆ ಗವೀಶ ಹಿರೇಮಠ ಪುಸ್ತಕ ಬರೆದಿದ್ದಾರೆ.[೩] ಈ ಕೃತಿಯಲ್ಲಿ ಮಿಣಜಗಿಯವರ ಜೀವನ ಹಾಗೂ ಕಲಾ ಸಾಧನೆಯನ್ನು ಕುರಿತು ಸ್ಥೂಲವಾಗಿ ಪರಿಚಯಿಸಲಾಗಿದೆ. ಈ ವ್ಯಕ್ತಿ ಚಿತ್ರಣದಲ್ಲಿ ಅವರ ಬಾಲ್ಯ, ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ, 'ರಾಯಲ್ ಕಾಲೇಜ್ ಆಫ್ ಆರ್ಟ್ಸ್' ನಲ್ಲಿ ಪಡೆದ ಕಲಾಶಿಕ್ಷಣ, ಹುಬ್ಬಳ್ಳಿಯಲ್ಲಿ ಕಲಾಶಾಲೆ ಆರಂಭಿಸಿದ್ದು ಮತ್ತು ಚಿತ್ರಶೈಲಿ ಚಿತ್ರಗಳ ವಿಶ್ಲೇಷಣೆ ಪ್ರಮುಖವಾಗಿದೆ.

ರಾಗಮಾಲಾ ಚಿತ್ರಣದ ರಚನೆಯಲ್ಲಿ ವಿಶೇಷ ಪರಿಶ್ರಮ ಆಸಕ್ತಿ ಉಳ್ಳವರಾಗಿದ್ದ ಇವರು ಪ್ರಕೃತಿ ಚಿತ್ರಣ ಮತ್ತು ಸಂಯೋಜನಾ ಚಿತ್ರಣಗಳಲ್ಲಿ ಹೆಸರು ವಾಸಿಯಾಗಿದ್ದರು. ಇವರು ರಚಿಸಿದ ಚಿತ್ರಕಲಾ ಕೃತಿಗಳಲ್ಲಿ ಅನೇಕ ಶ್ರೇಷ್ಠ ಕೃತಿಗಳಿದ್ದು ಅವುಗಳಲ್ಲಿ ಮಂಜರಿ, ಸ್ಟುಡಿಯೋ, ರಾಗಭೂಪಾಲ, ಭಾವಚಿತ್ರ, ಸೋಮೇಶ್ವರ ದೇವಸ್ಥಾನದ ಚಿತ್ರ, ರಾಗಮಲ್ಹಾರ, ರಾಗಅಸಾವೇರಿ, ಮುಂತಾದವುಗಳನ್ನು ಹೆಸರಿಸಬಹುದು. ಬಾದಾಮಿಯ ಚಾಲುಕ್ಯರ ಭಿತ್ತಿ ಚಿತ್ರಗಳನ್ನು ಇವರು ನಕಲು ಮಾಡಿದ್ದು ಇಂದು ಅಧ್ಯಯನಕಾರರಿಗೆ ಇವರ ಕೃತಿಗಳೇ ಆಧಾರವಾಗಿವೆ. ಇಂತಹ ಹಲವಾರು ಸಂಗತಿಗಳು ಈ ಕೃತಿಯಲ್ಲಿ ನಿರೂಪಿತಗೊಂಡಿವೆ.

ಈ ಪುಸ್ತಕವೂ ಸಹಿತ ಹಿಂದೆ ಹೇಳಿದಂತೆ ಸಾಹಿತಿಗಳಿಂದ ರಚನೆಗೊಂಡು ಕಲೆ ಮತ್ತು ಕಲಾಕೃತಿಯ ತಾಂತ್ರಿಕ ವಿಚಾರಗಳಿಂದ ದೂರ ನಿಲ್ಲುತ್ತದೆ. ಇಲ್ಲಿ ಸಾಹಿತ್ಯಿಕ ಪರಿಭಾಷೆಗಿಂತ ಭಿನ್ನವಾದ ಕಲಾ ಪರಿಭಾಷೆಯ ಅಗತ್ಯತೆ ಕಂಡು ಬರುತ್ತದೆ. ಬರಿ ವಿವರಣಾ ಪೂರ್ಣವಾದ ಮಾಹಿತಿಗಳನ್ನು ಕ್ರೋಢೀಕರಿಸಿ ಹೊಂದಿಸಿ ಅನುಕ್ರಮವಾಗಿ ಜೋಡಿಸುವದಕ್ಕಿಂತ ಕಲೆ ಮತ್ತು ಕಲಾಕೃತಿಗಳ ವಿಶ್ಲೇಷಣೆ, ವಿಮರ್ಶೆ ಮತ್ತು ತೌಲನಿಕ ಅಧ್ಯಯನಗಳಂತಹ ಪ್ರಯತ್ನಗಳು ವ್ಯಕ್ತಿ ಪರಿಚಯದಲ್ಲಿ ಉಂಟಾದಾಗ ಹೆಚ್ಚು ಪರಿಣಾಮಕಾರಿಯಾಗಿ ಮೂಡಿ ಬರಬಲ್ಲವು.

**ಕಲಾಗುರು ದಂಡಾವತಿಮಠ :**

ಕಲಾಗುರು ಎಂದೇ ಪ್ರಸಿದ್ಧಿಗಳಿಸಿದ ದಂಡಾವತಿಮಠರ ಜೀವನ, ಕಲಾಬದುಕು, ಮುಂಬೈಯಂತಹ ಪಟ್ಟಣದಲ್ಲಿ ಕಲಾಶಾಲೆ ಆರಂಭಿಸಿ ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಟ್ಟಂತಹ ಸಂಗತಿ, ವಿದ್ಯಾರ್ಥಿಗಳ ಬಗ್ಗೆ ಅವರಿಗಿದ್ದ ಕಾಳಜಿ, ಮುಂತಾದವುಗಳು ಈ ಪುಸ್ತಕದಲ್ಲಿ ನಿರೂಪಿತಗೊಂಡಿವೆ. ಕರ್ನಾಟಕದಿಂದ ಮುಂಬೈಗೆ ಚಿತ್ರಕಲೆ ಕಲಿಯಲು ಹೋಗುವ ಬಹುಪಾಲು ವಿದ್ಯಾರ್ಥಿಗಳಿಗೆ ಇವರು ಆರಂಭಿಸಿದ ನೂತನ ಕಲಾಮಂದಿರ ಆಶ್ರಯ ತಾಣವಾಗಿತ್ತು. ಹಲವಾರು ಬಡ ವಿದ್ಯಾರ್ಥಿಗಳಿಗೆ ಇವರೇ ಸ್ವತಹ ಹಣಕಾಸಿನ ನೆರವನ್ನು ನೀಡಿ ಕಲಾಪರೀಕ್ಷೆ ಬರೆಯಲು ನೆರವಾಗಿದ್ದಾರೆ. ವ್ಯಕ್ತಿಚಿತ್ರ, ಭಾವಚಿತ್ರ, ಸಂಯೋಜನಾ ಚಿತ್ರಗಳಲ್ಲಿ ಸಿದ್ಧ ಹಸ್ತರಾಗಿದ್ದ ಇವರ ಕೃತಿಗಳ ಬಗ್ಗೆ ವಿಶ್ಲೇಷಣೆಯನ್ನು ಇದರಲ್ಲಿ ಮಾಡಲಾಗಿದೆ. ಬಿ.ಕೆ. ಹಿರೇಮಠ ಬರೆದ[೪] ಈ ಪುಸ್ತಕದಲ್ಲಿ ದಂಡಾವತಿಮಠರ ಕಲಾ ಜೀವನದ ಜೊತೆಗೆ ಅವರ ಕಲಾಶೈಲಿ, ಸಮಕಾಲೀನ ಸಂದರ್ಭದಲ್ಲಿ ಇತರ ಒಡನಾಡಿಗಳೊಂದಿಗಿನ ಅವರ ಸಂಪರ್ಕ ಮುಂತಾದ ಅಂಶಗಳ ಬಗ್ಗೆ ಸ್ಥೂಲವಾಗಿ ಬಿಂಬಿಸಲಾಗಿದೆ.

೩. ಗವೀಶ ಹಿರೇಮಠ : ಎಂ.ವಿ.ಮಿಣಜಗಿ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೩.
೪. ಬಿ.ಕೆ.ಹಿರೇಮಠ : ಕಲಾಗುರು ದಂಡಾವತಿಮಠ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೩.

ಪ್ರಸ್ತುತ ಪುಸ್ತಕವು ಚಿಕ್ಕದಾದರೂ ಚೊಕ್ಕ ನಿರೂಪಣೆಯಿಂದ ಕೂಡಿದೆ. ವಿಷಯಗಳನ್ನು ನಿರೂಪಿಸುವ ಅನುಕ್ರಮತೆ, ಸಂಶೋಧನಾ ದೃಷ್ಟಿಕೋನ, ಕಲೆ ಮತ್ತು ಕಲಾವಿದರ ಕೃತಿಗಳ ತಾಂತ್ರಿಕ ವಿಚಾರಗಳನ್ನು ಪ್ರಾಯೋಗಿಕ ಹಿನ್ನೆಲೆಯಲ್ಲಿ ಸಮರ್ಥವಾಗಿ ನಿರೂಪಿಸಲಾಗಿದೆ. ಕಲೆ ಮತ್ತು ಕಲಾವಿದರ ಕುರಿತು ಕಲಾವಿದರೇ ಪುಸ್ತಕ ಬರೆದಾಗ ಎಷ್ಟು ಸಮರ್ಥವಾಗುತ್ತದೆ ಎಂಬುದು ಈ ಕೃತಿಯ ಹಿನ್ನೆಲೆಯಲ್ಲಿ ಹೇಳಬಹುದು.

**ಡಿ.ಜಿ. ಬಡಿಗೇರ್ :**

ಈ ಪುಸ್ತಕವನ್ನು ಶೋಭಾ ಬಡಿಗೇರ್ ಬರೆದಿದ್ದಾರೆ.[೫] ಕಲಾವಿದ ದೇವಪ್ಪ ಬಡಿಗೇರ್ ಅವರು ಮಿಶ್ರಿಕೋಟೆ ಎಂಬ ಹಳ್ಳಿಯಿಂದ ಲಂಡನ್‌ದಂತಹ ಅಂತರಾಷ್ಟ್ರೀಯ ಮಹತ್ವದ ಸ್ಥಳದವರೆಗೆ ನಡೆದ ದಾರಿ, ಪಡೆದ ಸಿದ್ಧಿ ಅಪಾರವಾದುದು. ಮುಂಬೈಯಲ್ಲಿ ನೂತನ ಕಲಾಮಂದಿರ ಸ್ಥಾಪಿಸಿ ಚಿತ್ರಕಲೆ ಕಲಿಯಲು ಬಂದ ಕರ್ನಾಟಕದ ವಿದ್ಯಾರ್ಥಿಗಳಿಗೆ ಹೆಚ್ಚಿನ ಸಹಾಯವನ್ನು ಇವರು ಕಲ್ಪಿಸಿಕೊಟ್ಟರು. ಇದಲ್ಲದೆ ಮುಂಬೈ ಪ್ರಾಂತದ ವರಿಷ್ಠ ಶಿಕ್ಷಣಾಧಿಕಾರಿಯಾಗಿ ಇವರು ಕಲಾಶಿಕ್ಷಣದಲ್ಲಿ ಮಾಡಿದ ಸುಧಾರಣೆಗಳು ಮಹತ್ವಪೂರ್ಣವಾದವುಗಳಾಗಿವೆ. ದಕ್ಷಅಧಿಕಾರಿಯಾಗಿ, ಸೌಂದರ್ಯೋಪಾಸಕ ಸಹೃದಯಿಯಾಗಿ ಮತ್ತು ಸ್ವತಃ ಕಲಾವಿದರಾಗಿ ಹೇಗೆ ಕಾರ್ಯ ನಿರ್ವಹಿಸಿದರು ಆ ಮೂಲಕ ಕಲಾ ಕ್ಷೇತ್ರಕ್ಕೆ ಯಾವ ರೀತಿಯ ಮಹತ್ವ ಪೂರ್ಣವಾದ ಕೊಡುಗೆ ನೀಡಿದರು ಎನ್ನುವಂತಹ ಅಂಶಗಳು ಪುಸ್ತಕದಲ್ಲಿ ನಿರೂಪಿತಗೊಂಡಿವೆ. ಅಲ್ಲದೆ ಅವರ ಕಲಾಕೃತಿಗಳ ವಿಶ್ಲೇಷಣೆಯು ಸ್ವಲ್ಪ ಮಟ್ಟಿಗೆ ಕಂಡು ಬರುತ್ತದೆ.

ಪ್ರಸ್ತುತ ಪುಸ್ತಕವು ಡಿ.ಜಿ. ಬಡಿಗೇರರರ ಕಲೆ ಮತ್ತು ಕಲಾ ಬದುಕನ್ನು ಕುರಿತು ಸ್ಥೂಲವಾಗಿ ಹೇಳಿದರೂ ಅದರಲ್ಲಿ ಕಲೆಯು ಗೌಣವಾಗಿ ಕಲಾಬದುಕೇ ಪ್ರಮುಖ ಸ್ಥಾನ ಪಡೆದುಕೊಂಡಿದೆ. ಇದೇ ಕಲಾವಿದರ ಬಗ್ಗೆ ಅನ್ನದಾನಿ ಹಿರೇಮಠ ಸಹಿತ ಪುಸ್ತಕ ಬರೆದಿದ್ದು, ಇದಕ್ಕಿಂತ ಹೆಚ್ಚಿನ ವಿವರಗಳು ಮತ್ತು ಉತ್ತಮ ನಿರೂಪಣಾ ಶೈಲಿಯನ್ನು ಹೊಂದಿದೆ. ಈ ಕೃತಿಯಲ್ಲಿ ಅವರ ಕಲಾ ಬದುಕಿನ ವಿವರಗಳಲ್ಲಿ ಅವರ ಅಧಿಕಾರಿಯಾಗಿ ಹೇಗೆ ಸಮರ್ಥರಾದರು ಎಂಬಂತಹ ವಿವರಗಳೇ ತುಂಬಿಕೊಂಡಿವೆ.

**ಅಮೀನ ಸಾಹೇಬ ಕಮಡೊಳ್ಳಿ :**

ಪೌರಾಣಿಕ ವಿಷಯಗಳನ್ನು .ಚಿತ್ರಿಸುವಲ್ಲಿ ಸಿದ್ಧಹಸ್ತರಾದ ಕಮಡೊಳ್ಳಿಯವರ ಕುರಿತಾಗಿ ಬಿ.ಕೆ. ಹಿರೇಮಠ ಪುಸ್ತಕ ಬರೆದಿದ್ದಾರೆ.[೬] ಮುಸ್ಲಿಂ ಆದರೂ ಹಿಂದೂ ಪುರಾಣಗಳ ಬಗೆಗಿನ ಘಟನಾವಳಿಗಳನ್ನು ಪ್ರಭಾವಯುತವಾಗಿ ಚಿತ್ರಿಸಿರುವುದು ಸೋಜಿಗವಾಗಿದೆ. ಇವರ ಪೌರಾಣಿಕ ಚಿತ್ರಗಳಲ್ಲಿನ ಭಾವ ತೀವ್ರತೆ, ತನ್ಮಯತೆ, ಸಂಸ್ಕೃತಿಯ ಸಾರದಂತಿರುವ ಚಿತ್ರವಿವರಗಳು ಎಂತಹವರನ್ನೂ ಒಂದು ಕ್ಷಣ ವಿಸ್ಮಯಪಡುವಂತೆ ಮಾಡುತ್ತವೆ. ಇಂದು ಪ್ರಖ್ಯಾತವಾಗಿರುವ ಎಂ.ಎಫ್. ಹುಸೇನ ಮುಸ್ಲಿಂ ಆಗಿದ್ದು ಭಾರತೀಯ ಸಂಸ್ಕೃತಿಯ ಪೌರಾಣಿಕ ಘಟನಾವಳಿಗಳನ್ನು ವಿಕ್ಷಿಪ್ತವಾಗಿ ಚಿತ್ರಿಸುವ ಪರಿಸ್ಥಿತಿಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಹಾಗಾಗಿ ಕಮಡೊಳ್ಳಿಯವರು ಇಂದು ಭಾವೈಕ್ಯತೆಯ ದೃಷ್ಟಿಯಿಂದ ಹೆಚ್ಚು ಮಹತ್ವ ಪಡೆದುಕೊಳ್ಳುತ್ತಾರೆ.

---

೫. ಶೋಭಾ ಬಡಿಗೇರ್ : ಡಿ.ಜಿ.ಬಡಿಗೇರ್ : ವೀರಶೈವ ಅಧ್ಯಯನ ಸಂಸ್ಥೆ, ಗದಗ-೧೯೮೮.

೬. ಬಿ.ಕೆ.ಹಿರೇಮಠ : ಅಮೀನ ಸಾಹೇಬ ಕಮಡೊಳ್ಳಿ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೮.

ಈ ಹಿನ್ನೆಲೆಯಲ್ಲಿ ಕಮಡೊಳ್ಳಿಯವರ ಚಿತ್ರಗಳ ವಿಶ್ಲೇಷಣೆ, ವಿಮರ್ಶೆಗಳನ್ನು ಇಂದಿನ ಪರಿಸ್ಥಿತಿಯಲ್ಲಿ ನಿಂತು ನೋಡಿದಾಗ ಹೊಸ ಆಯಾಮಗಳನ್ನು ಕೊಡುವ ಮೂಲಕ ಪುನಃ ರೂಪಿಸಬೇಕಾಗುತ್ತದೆ. ಈ ಕಿರು ಪುಸ್ತಕದಲ್ಲಿ ಕಮಡೊಳ್ಳಿಯವರ ಬಾಲ್ಯ, ಶಿಕ್ಷಣ, ಕಲಾ ಶಿಕ್ಷಣ, ಕಲಾಬದುಕು ಮತ್ತು ಕಲಾಕೃತಿಗಳ ಬಗ್ಗೆ ಸ್ಥೂಲವಾಗಿ ಬರೆಯಲಾಗಿದೆ.

**ಕಲೋಪಾಸಕ ಎಂ.ಜಿ. ವಾಚೇದಮಠ :**

ರೇಖಾಚಿತ್ರಕ್ಕೆ ಹೆಸರಾದ ಇವರ ಬಗ್ಗೆ ಸುರೇಶ ಕುಲಕರ್ಣಿ ಪುಸ್ತಕ ಬರೆದಿದ್ದಾರೆ.[೭] ಚಿಕ್ಕ ಆಕಾರದ ರೇಖಾಚಿತ್ರಗಳನ್ನು ರಚಿಸುವುದು, ಗುಂಪು ಚಿತ್ರಗಳನ್ನು ರೇಖಾ ವಿನ್ಯಾಸದಲ್ಲಿ ಸಂಯೋಜಿಸುವುದು ಇವರ ಆಸಕ್ತಿಯ ಕೆಲಸಗಳು. ವಾಚೇದಮಠರ ಜೀವನ ಮತ್ತು ಕಲೆಯನ್ನು ಕುರಿತ ಈ ಪುಸ್ತಕದಲ್ಲಿ ಅವರ ಬಗೆಗಿನ ಹಲವು ವಿಷಯಗಳು ಅನಾವರಣಗೊಂಡಿವೆ.

ಅವರ ಅನೇಕ ರೇಖಾಚಿತ್ರಗಳು, ಭಾವಚಿತ್ರಗಳು, ಲಕ್ಷ-ಲಕ್ಷಣದ ಸಮನ್ವಯ, ಶ್ರೇಷ್ಠ ಕಲಾವಿದ, ಸತ್ಕಾರ-ಸನ್ಮಾನಗಳು, ಕೃತಿ ರಚನೆಯ ವಿಧಾನಗಳು ಇಲ್ಲಿವೆ. ದನಗಳ ಹಿಂಡು, ದನಗಳ ಸಗಣಿ, ಹಳ್ಳಿಗರ ಪತ್ರಿಕಾ ವಾಚನ, ತಾಯಂದಿರ ಶಿಶು ಸಂಗೋಪನೆ ಮುಂತಾದ ಸಾಮಾನ್ಯ ವಿಷಯಗಳನ್ನೇ ಆಯ್ದುಕೊಂಡು ಅವುಗಳಲ್ಲಿ ಅಸಾಮಾನ್ಯವಾದ ಭಾವೋತ್ಪನ್ನ ಶಕ್ತಿಯನ್ನು ತುಂಬುವುದರಲ್ಲಿ ಇವರು ಸಿದ್ಧ ಹಸ್ತರಾಗಿದ್ದರು. ಇವರ ಕುರಿತ ಇಂತಹ ವಿಷಯಗಳಲ್ಲದೇ ಅವರ ಬಾಲ್ಯ, ಶಿಕ್ಷಣ, ಕಲಾಬದುಕುಗಳ ಬಗ್ಗೆಯೂ ಈ ಕೃತಿ ವಿವರ ನೀಡುತ್ತದೆ. ವಾಚೇದಮಠ ಅವರು ರೇಖಾಚಿತ್ರ ಕಲಾವಿದರೆಂದು ಗುರುತಿಸಿಕೊಂಡಿದ್ದರೂ, ಸಂಯೋಜನಾ ಚಿತ್ರ, ಸ್ಥಿರಚಿತ್ರ, ನಿಸರ್ಗ ಚಿತ್ರ, ಭಾವಚಿತ್ರ ಮತ್ತು ವ್ಯಕ್ತಿಚಿತ್ರಗಳಂತಹ ಕೃತಿಗಳನ್ನೂ ಸಹಿತ ರಚನೆ ಮಾಡಿದ್ದಾರೆ. ಅವುಗಳ ಬಗೆಗೂ ಸಹಿತ ಲೇಖಕರು ಒಂದು ಸ್ಥೂಲ ಮಾಹಿತಿ ಕೊಟ್ಟಿದ್ದರೆ ಇನ್ನೂ ಹೆಚ್ಚು ಅರ್ಥಪೂರ್ಣವಾಗುತ್ತಿತ್ತು. ಕಲಾವಿದರನ್ನು ಹತ್ತಿರದಿಂದ ಕಂಡ ಲೇಖಕರು ಅವರ ಬದುಕನ್ನು ಪರಿಣಾಮಕಾರಿಯಾಗಿ ಮೂಡಿಸಿದ್ದಾರೆ. ರೇಖಾಚಿತ್ರಗಳ ಬಗ್ಗೆ ಹೇಳಿದ್ದರೂ ಅವುಗಳ ಶೈಲಿ, ಪ್ರಭಾವ ಪ್ರೇರಣೆ, ಹೋಲಿಕೆ, ತೌಲನಿಕತೆ ಮುಂತಾದ ಅಂಶಗಳ ಬಗ್ಗೆ ವಿವೇಚಿಸುವ ಪ್ರಯತ್ನ ಮಾಡಿದ್ದರೆ ಪುಸ್ತಕಕ್ಕೆ ಮತ್ತು ಅವರ ಕುರಿತ ಸಂಕ್ಷಿಪ್ತ ಜೀವನ ಚರಿತ್ರೆಗೆ ಹೆಚ್ಚಿನ ಮೌಲಿಕತೆ ಉಂಟಾಗುತ್ತಿತ್ತು.

**ಡಿ.ವಿ. ಹಾಲಭಾವಿ :**

ಉತ್ತರ ಕರ್ನಾಟಕದಲ್ಲಿ ಚಿತ್ರಕಲೆಯ ಬೆಳವಣಿಗೆಗೆ ಮಹತ್ವದ ಕೊಡುಗೆ ನೀಡಿದವರಲ್ಲಿ ಡಿ.ವಿ. ಹಾಲಭಾವಿಯವರೂ ಒಬ್ಬರಾಗಿದ್ದಾರೆ. ಇವರ ಕುರಿತು ಎಸ್.ಕೆ.ಹೂಗಾರ್ ಪುಸ್ತಕ ಬರೆದಿದ್ದಾರೆ.[೮] ಮುಂಬೈಯಲ್ಲಿ ಕಲಾಶಿಕ್ಷಣ ಪಡೆದು ಬಂದು ಧಾರವಾಡದಲ್ಲಿ ಚಿತ್ರಕಲಾ ಶಾಲೆ ಆರಂಭಿಸಿದರು. ಆ ಮೂಲಕ ಈ ಭಾಗದ ಕಲಾಸಕ್ತರಿಗೆ ಚಿತ್ರಕಲೆ ಕಲಿಯಲು ಅನುವು ಮಾಡಿ ಕೊಟ್ಟರು. ಇವರು ಸ್ಥಾಪಿಸಿದ ಕಲಾಶಾಲೆಯು ಉತ್ತರ ಕರ್ನಾಟಕದ ಮೊಟ್ಟ ಮೊದಲ ಕಲಾಶಾಲೆಯಾಗಿದ್ದು, ಸ್ವಾತಂತ್ರ್ಯ ಪೂರ್ವದಲ್ಲಿಯೇ ಕಲಾಶಾಲೆಯೊಂದರ ಕೊರತೆಯನ್ನು ನೀಗಿಸುತ್ತಲಿತ್ತು. ಇಂತಹ ಅಂಶಗಳು ಈ ಕೃತಿಯಲ್ಲಿವೆ. ಈ ಕೃತಿಯಲ್ಲಿ ಪ್ರಮುಖವಾಗಿ ಡಿ.ವಿ. ಹಾಲಭಾವಿಯವರ ಬಾಲ್ಯ, ಶಿಕ್ಷಣ, ಕಲಾಶಿಕ್ಷಣ, ಕಲಾಬದುಕುಗಳ ಜೊತೆಗೆ ಕಲಾಕೃತಿ ಮತ್ತು ಕಲಾಶೈಲಿಗಳ ಕುರಿತು ವಿವರಣೆ ಇದೆ. ವಿವಿಧ

---

೭. ಸುರೇಶ ಕುಲಕರ್ಣಿ : ಕಲೋಪಾಸಕ ಎಂ.ಜಿ.ವಾಚೇದಮಠ : ಶ್ರೀಮತಿ ಶಾರದಾ ವಾಚೇದಮಠ : ಹಿರೇಮಠಗಲ್ಲಿ ಮಂಗಳವಾರ ಪೇಟೆ, ಧಾರವಾಡ-೧೯೮೫.

೮. ಎಸ್.ಕೆ.ಹೂಗಾರ್ : ಡಿ.ವಿ.ಹಾಲಭಾವಿ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೫.

ತಲೆಬರಹಗಳ ಅಡಿಯಲ್ಲಿ ವಿಷಯಗಳನ್ನು ನಿರೂಪಿಸಲಾಗಿದೆ. ಪ್ರಕೃತಿ ಚಿತ್ರಣ ಮತ್ತು ಸ್ಥಿರ ಚಿತ್ರಣಗಳಲ್ಲಿ ಹೆಸರುವಾಸಿಯಾದ ಇವರ ಅನೇಕ ಕಲಾಕೃತಿಗಳ ವಿಶ್ಲೇಷಣೆಯೂ ಇದರಲ್ಲಿದೆ. ಪ್ರಸ್ತುತ ಡಿ.ವಿ. ಹಾಲಭಾವಿಯವರ ಕುರಿತ ಈ ವ್ಯಕ್ತಿ ಚಿತ್ರಣದಲ್ಲಿ ಲೇಖಕರು ಕಲಾವಿದರ ಬದುಕಿನ ಬಗ್ಗೆ ವಿವರಗಳನ್ನು ಕೊಡುತ್ತಾರೆ. ಇವು ಹೆಚ್ಚಾಗಿ ಅವರ ಲೌಕಿಕ ಬದುಕನ್ನು ಕುರಿತಾಗಿವೆ, ಕಲಾಬದುಕಿಗೆ ಸಂಬಂಧಿಸಿದ ಚಿತ್ರಣಗಳನ್ನು ನೀಡಿದ್ದರೆ ಪರಿಣಾಮಕಾರಿಯಾದ ಕೃತಿಯಾಗುತ್ತಲಿತ್ತು.

**ಎಂ.ಎ. ಚೆಟ್ಟಿ :**

ವೀರಶೈವ ಪುಣ್ಯ ಪುರುಷರು ಮತ್ತು ಪವಾಡ ಪುರುಷರ ಚಿತ್ರಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸುವಲ್ಲಿ ಎಂ.ಎ. ಚೆಟ್ಟಿಯವರನ್ನು ಮೀರಿಸಿದವರಿಲ್ಲ. ಉತ್ತರ ಕರ್ನಾಟಕದ ಪ್ರಸಿದ್ಧ ವೀರಶೈವ ಮಠಗಳಲ್ಲಿ ಇವರ ಚಿತ್ರಗಳು ಸಂಗ್ರಹಗೊಂಡಿವೆ. ವ್ಯಕ್ತಿಚಿತ್ರ, ಭಾವಚಿತ್ರಣಗಳಲ್ಲಿ ತಮ್ಮದೇ ವಿಶೇಷ ಶೈಲಿ ಕಂಡುಕೊಂಡಿದ್ದ ಎಂ.ಎ. ಚೆಟ್ಟಿಯವರ ಬಗ್ಗೆ ಅನ್ನದಾನಿ ಹಿರೇಮಠ ಪುಸ್ತಕ ಬರೆದಿದ್ದಾರೆ.[೯] ಈ ಕೃತಿಯಲ್ಲಿ ಚೆಟ್ಟಿಯವರ ಬಾಲ್ಯ, ಶಿಕ್ಷಣ, ಕಲಾಶಿಕ್ಷಣ, ಕಲಾಬದುಕು ಮತ್ತು ಕಲಾಕೃತಿಗಳ ಬಗ್ಗೆ ಸ್ಥೂಲ ಮಾಹಿತಿ ಇದೆ. ಜೊತೆಗೆ ಅವರಿಗೆ ಸಂದ ಪ್ರಶಸ್ತಿ ಗೌರವಗಳು, ಅವರ ವ್ಯಕ್ತಿತ್ವ ಕಲಾಶೈಲಿಗಳ ವಿಶ್ಲೇಷಣೆಯೂ ಇದರಲ್ಲಿದೆ. ಮುಂಬೈ ಜೆ.ಜೆ. ಕಲಾಶಾಲೆಯಲ್ಲಿ ಕಲಾಭ್ಯಾಸ, ಅಲ್ಲಿನ ವಿದ್ಯಾರ್ಥಿ ಜೀವನ, ಶಿಕ್ಷಕರೊಂದಿಗಿನ ಸಂಬಂಧ ಮುಂತಾದವುಗಳನ್ನು ಸ್ಥೂಲವಾಗಿ ಕೊಡಲಾಗಿದೆ.

ಇದೊಂದು ಕಿರುಕೃತಿಯಾದರೂ ಕಲಾವಿದರಾದ ಚೆಟ್ಟಿಯವರ ಬಗ್ಗೆ ಹೊಸದಾಗಿ ತಿಳಿದುಕೊಳ್ಳುವವರಿಗೆ ಉಪಯುಕ್ತ ಮಾಹಿತಿಯನ್ನು ನೀಡುತ್ತದೆ. ಲೇಖಕ ಅನ್ನದಾನಿ ಹಿರೇಮಠರು ತಮ್ಮ ಸಾಹಿತ್ಯಿಕ ಹಿನ್ನೆಲೆಯಿಂದ ಬರವಣಿಗೆಯಲ್ಲಿ ಪ್ರಭಾವ ಬೀರುತ್ತಾರಾದರೂ ಚೆಟ್ಟಿಯವರ ಚಿತ್ರಶೈಲಿ, ಕೃತಿಗಳ ವಿಮರ್ಶೆ, ರಚನಾ ವಿಧಾನ, ಮಾಧ್ಯಮಗಳಂತಹ ಸಂಗತಿಗಳನ್ನು ತಿಳಿಸುವಲ್ಲಿ ವಿಫಲರಾಗುತ್ತಾರೆ. ವೀರಶೈವ ಪುಣ್ಯ ಪುರುಷರು, ಮಠ ಮಂದಿರಗಳ ಧಾರ್ಮಿಕ ಹಿನ್ನೆಲೆಯ ಚಿತ್ರಗಳನ್ನು ಹೇಗೆ ಪರಿಣಾಮಕಾರಿಯಾಗಿ ಚಿತ್ರಿಸಿದರು? ಅದಕ್ಕಾಗಿ ಅವರ ದೈವಿಕ ಸ್ವರೂಪ, ಸರಳ ಜೀವನ, ಭಕ್ತಿ ಮತ್ತು ಸೈದ್ಧಾಂತಿಕ ಜೀವನ ವಿಧಾನಗಳು ಹೇಗೆ ಪೂರಕವಾಗಿ ಕೆಲಸ ಮಾಡಿದವು ಎನ್ನುವಂತಹ ಸಂಗತಿಗಳಿಗೆ ಹೆಚ್ಚು ಮಹತ್ವ ಕೊಡಲಾಗಿದೆ. ಮುಂಬೈಯಲ್ಲಿನ ಅವರ ಕಲಾ ಪರಿಸರದ ಬಗೆಗಿನ ವಿವರವು ಇನ್ನೂ ಬೇಕಾಗಿತ್ತು ಎನಿಸುತ್ತದೆ. ಕಲಾವಿದರ ಸ್ಥೂಲ ಮಾಹಿತಿ ಕೊಡುವ ಕೃತಿ ಇದಾಗಿದೆ.

**ಶಂಕರರಾವ್ ಆಳಂದಕರ್ :**

ಹೈದರಾಬಾದ್ ಕರ್ನಾಟಕದ ಪ್ರಮುಖ ಕಲಾವಿದರಲ್ಲಿ ಶಂಕರರಾವ್ ಆಳಂದಕರ್ ಒಬ್ಬರಾಗಿದ್ದಾರೆ. ಇವರ ಕುರಿತಾಗಿ ಎಂ.ಜಿ. ಬಿರಾದಾರ್ ಪುಸ್ತಕ ಬರೆದಿದ್ದಾರೆ.[೧೦] ಕಲಬುರ್ಗಿ ಕಂಡ ಶ್ರೇಷ್ಠ ಕಲಾವಿದರಾದ ಶಂಕರರಾವ್ ಆಳಂದಕರ್ ಅವರು ಮುಂಬೈ ಜೆ.ಜೆ. ಕಲಾಶಾಲೆಯಲ್ಲಿ ಕಲಿತು ಬಂದವರು. ಎಸ್.ಎಂ. ಪಂಡಿತ್, ಚಂದ್ರಶೇಖರ್, ಎಂ.ಟಿ. ಭೋಪಲೆಯವರಂತಹ ಹೆಸರಾಂತ ಚಿತ್ರಕಲಾವಿದರು ಇವರ ಶಿಷ್ಯರಾಗಿದ್ದರು ಎಂದರೆ ಇವರ ಶ್ರೇಷ್ಠತೆ ಅರಿವಾಗುತ್ತದೆ. ಕಲಬುರ್ಗಿ ಭಾಗದಲ್ಲಿ ಚಿತ್ರಕಲೆಯನ್ನು ಬೆಳೆಸಲು ಸಾಕಷ್ಟು ಶ್ರಮ ವಹಿಸಿದ್ದಾರೆ. ಜೊತೆಗೆ ಕಲಾಕೃತಿಗಳನ್ನು ರಚಿಸುತ್ತ ಬಹುಮುಖ ಪ್ರತಿಭಾಶಾಲಿಯಾಗಿ ಬದುಕು ಸಾಗಿಸಿದವರು ಇಂತಹ ಹಲವಾರು ಅಂಶಗಳು ಪುಸ್ತಕದಲ್ಲಿವೆ.

೯. ಅನ್ನದಾನಿ ಹಿರೇಮಠ : ಎಂ.ಎ.ಚೆಟ್ಟಿ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು–೧೯೮೫
೧೦. ಎಂ.ಜಿ.ಬಿರಾದಾರ್ : ಶಂಕರರಾವ್ ಆಳಂದಕರ್ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು–೧೯೮೬.

ಶಂಕರರಾವ್ ಆಳಂದಕರ್ ಕಲಾಬದುಕನ್ನು ಸೃಷ್ಟಿಸುವ ಈ ಕೃತಿಯಲ್ಲಿ ಅವರ ಜೀವನದ ವಿವಿಧ ಘಟನೆಗಳನ್ನು ಬೇರೆ ಬೇರೆ ತಲೆಬರಹಗಳ ಅಡಿಯಲ್ಲಿ ನಿರೂಪಿಸಲಾಗಿದೆ. ಮಾಸ್ತರರಾಗಿ, ಶಿಷ್ಯಶ್ರೇಯಾಕಾಂಕ್ಷಿಯಾಗಿ ಬಹುಮುಖ ಪ್ರತಿಭೆಯ ವ್ಯಕ್ತಿಯಾಗಿ, ಗೌರವಾನ್ವಿತ ಕುಟುಂಬದ ಸದಸ್ಯರಾಗಿ, ಸರಕಾರಿ ಸೇವೆಯಲ್ಲಿ ನೌಕರನಾಗಿ ಹೇಗೆ ಕಾರ್ಯ ನಿರ್ವಹಿಸಿದರು ಎನ್ನುವ ಅಂಶಗಳು ವ್ಯಕ್ತಗೊಂಡಿವೆ. ಜೊತೆಗೆ ಅವರ ಕನ್ನಡಾಭಿಮಾನ, ಪ್ರಶಸ್ತಿ ಗೌರವಗಳು, ಜನತೆಯ ಹತ್ತಿರಕ್ಕೆ ಕಲೆ, ಕಲೋಪಾಸನೆ ಎಂಬುದಾಗಿಯೂ ಇಲ್ಲಿ ವಿಷಯಗಳು ನಿರೂಪಣೆಗೊಂಡಿವೆ.

ಈ ಕೃತಿಯು ಶಂಕರರಾವ್ ಆಳಂದಕರರ ಕಲಾಬದುಕನ್ನು ಸ್ಥೂಲವಾಗಿ ಕಟ್ಟಿಕೊಡುವ ಮೂಲಕ ಅಂದಿನ ಹೈದರಾಬಾದ್ ಕರ್ನಾಟಕದ ಕಲಾ ಪರಿಸ್ಥಿತಿಯನ್ನು ತಿಳಿಸಿ ಕೊಡುತ್ತದೆ. ಕಲೆಯನ್ನು ಅಧ್ಯಯನ ಮಾಡುವವರು ಎಂತಹ ಪರಿಸ್ಥಿತಿ ಎದುರಿಸುತ್ತಿದ್ದರು, ಉನ್ನತ ಶಿಕ್ಷಣಕ್ಕಾಗಿ ಮುಂಬೈಗೆ ತೆರಳಲು ಪರದಾಡುವ ಬದುಕಿನ ರೀತಿಗಳು, ಅಲ್ಲಿಂದ ಕಲಿತು ಬಂದನಂತರ ಉಂಟಾಗುವ ಏಕತಾನತೆಯ ಭಾವನೆಗಳು ಸಾಂಕೇತಿಕವಾಗಿ ನಿರೂಪಿಸಲ್ಪಟ್ಟಿವೆ.

**ಕಲಾತಪಸ್ವಿ ಡಾ. ಮಿಣಜಗಿ :**

ಕಲಾತಪಸ್ವಿ ಡಾ. ಮಿಣಜಗಿಯವರ ಕುರಿತು ಶಂಕರ ಪಾಟೀಲರು ಕೃತಿರಚಿಸಿದ್ದಾರೆ.[೧೧] ಶಂಕರ ಪಾಟೀಲರು, ಮಿಣಜಗಿಯವರ ಕಲೆ ಮತ್ತು ಕಲಾ ಬದುಕನ್ನು ಮುಖ್ಯವಾಗಿಟ್ಟುಕೊಂಡು ಹನ್ನೊಂದು ಅಧ್ಯಾಯಗಳಲ್ಲಿ ವಿಷಯಗಳನ್ನು ನಿರೂಪಿಸಿದ್ದಾರೆ. ಬೇರೆ ಬೇರೆ ತಲೆಬರಹಗಳ ಅಡಿಯಲ್ಲಿ ಬಾಲ್ಯ, ಶಿಕ್ಷಣ, ಅನುಕ್ರಮವಾಗಿ ಉಚ್ಚ ಚಿತ್ರಕಲಾಶಿಕ್ಷಣ, ಚಿತ್ರಕಲಾ ಜೀವನದ ಪ್ರಾರಂಭ, ಚಿತ್ರಕಲೆಗೆ ರಾಗಮಾಲಾ ದೇಣಿಗೆ, ಚಿತ್ರಕಲಾ ಶಿಕ್ಷಕ ಮಿಣಜಗಿ, ಕಲಾ ಸೇವೆಗೆ ಮನ್ನಣೆ, ಸ್ನೇಹಶೀಲರು ಸಮಾಜ ಜೀವಿಗಳು, ಸಾಂಸಾರಿಕ ಜೀವನ, ಕಲಾಶಿಕ್ಷಣದ ಕಳಕಳಿ, ಒಬ್ಬ ಕಲಾವಿದನ ದೃಷ್ಟಿಯಲ್ಲಿ ಹಲವು ಪ್ರಥಮಗಳು ಎಂಬ ವಿಷಯಗಳು ಬಿಂಬಿಸಲ್ಪಟ್ಟಿವೆ.

ಅನೇಕ ಪ್ರಥಮಗಳನ್ನು ಸಾಧಿಸಿದ ಕೀರ್ತಿ ಮಿಣಜಗಿಯವರದು. ಕರ್ನಾಟಕದಲ್ಲಿ ಕಲಾಶಿಕ್ಷಣ ಬೆಳೆದು ಸಾಮಾನ್ಯ ಜನರಿಗೆ ನಿಲುಕುವಂತಾಗಬೇಕೆಂದು ಬಹಳ ಶ್ರಮಿಸಿದವರು. ಚಿತ್ರಕಲೆಯ ಬೆಳವಣಿಗೆಗೆ ತಮ್ಮಜೀವನ ಮುಡಿಪಾಗಿಟ್ಟು ಕ್ರಿಯಾಶೀಲರಾದವರು. ಮುಂಬೈ, ಲಂಡನ್‌ಗಳಲ್ಲಿ ಉಚ್ಚ ಕಲಾಶಿಕ್ಷಣ ಪಡೆದು ಶ್ರೇಷ್ಠ ಕಲಾವಿದರೆನಿಸಿ ಕೊಂಡವರು. ರಾಗಮಾಲಾ, ಚಿತ್ರರಚನೆಯಲ್ಲಿ ವಿಶಿಷ್ಟವಾಗಿ ಗುರುತಿಸಿಕೊಂಡ ಇವರು ಕಲಾಕ್ಷೇತ್ರದಲ್ಲಿ ಗಮನಾರ್ಹ ಸಾಧನೆ ಮಾಡಿದ್ದಾರೆ. ಅಂತಹ ವಿವಿಧ ಅಂಶಗಳು ಈ ಕೃತಿಯಲ್ಲಿ ಒಳಗೊಂಡಿವೆ. ವ್ಯಕ್ತಿ ಪರಿಚಯ ಹಿನ್ನೆಲೆಯಲ್ಲಿ ರಚನೆಯಾದ ಈ ಪುಸ್ತಕವು ರಾಜ್ಯ ಲಲಿತಕಲಾ ಅಕಾಡೆಮಿಯು ಹೊರತರುವ ವ್ಯಕ್ತಿ ಚಿತ್ರಗಳಿಗಿಂತ ಬೇರೆಯಾಗಿದ್ದು, ಹೊಸ ಆಯಾಮವನ್ನು ಸೃಷ್ಟಿಸಿದೆ. ಹಲವು ಕುಂದುಕೊರತೆಗಳ ಮಧ್ಯೆಯೂ ಇದೊಂದು ವಿನೂತನ ಪ್ರಯತ್ನವಾಗಿದೆ. ಸಿದ್ಧ ಮಾದರಿಯಲ್ಲಿ ಯಾಂತ್ರಿಕವಾಗಿ ವಿಷಯಗಳನ್ನು ಹೊಂದಿಸುವ ರೀತಿಗಿಂತ ಇಲ್ಲಿ ಲೇಖಕರು ಸ್ವತಂತ್ರವಾಗಿ ಆಲೋಚಿಸಿದ್ದಾರೆ. ಎಂಭತ್ತರ ದಶಕದಲ್ಲಿಯೇ ಇಂತಹ ಪ್ರಯತ್ನಕ್ಕೆ ತೊಡಗಿರುವುದು ವಿಶೇಷವಾಗಿದೆ. ಅಲ್ಲದೇ ಪುಸ್ತಕ ಬರೆದ ಶಂಕರ ಪಾಟೀಲರು ಸಹಿತ ಒಬ್ಬ ಕಲಾವಿದರೇ ಆಗಿರುವುದರಿಂದ ಕಲಾವಿದನ ಆಂತರ್ಯವನ್ನು ಸರಿಯಾಗಿ ಸ್ಪಂದಿಸುವ ಮೂಲಕ ಮಿಣಜಗಿಯವರಲ್ಲಿನ ಕಲಾವಿದನನ್ನು ಈ ಮೂಲಕ ಹೊರಹಾಕಿದ್ದಾರೆ.

---

೧೧. ಶಂಕರ ಪಾಟೀಲ : ಕಲಾತಪಸ್ವಿ ಡಾ. ಮಿಣಜಗಿ : ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ, ಮೂರುಸಾವಿರ ಮಠ, ಹುಬ್ಬಳ್ಳಿ–೧೯೮೭.

**ಎಸ್.ಎಂ. ಪಂಡಿತ :**

ಕಲಬುರ್ಗಿ ಜಿಲ್ಲೆ ಕಂಡ ಶ್ರೇಷ್ಠ ಕಲಾವಿದರಲ್ಲಿ ಎಸ್.ಎಮ್. ಪಂಡಿತರು ಪ್ರಮುಖರಾಗಿದ್ದಾರೆ. ಇವರ ಕುರಿತು ಮತ್ತೊಬ್ಬ ಖ್ಯಾತ ಕಲಾವಿದ ವ್ಹಿ.ಟಿ. ಕಾಳೆಯವರು ಪ್ರಸ್ತುತ ಪುಸ್ತಕವನ್ನು ರಚಿಸಿದ್ದಾರೆ.[೧೨] ಪಂಡಿತರ ಪೂರ್ಣ ಹೆಸರು ಸಾಂಬಾನಂದ ಮೋನಪ್ಪ ಪಂಡಿತ. ಸಾಂಪ್ರದಾಯಿಕ ಕಲಾ ಕುಟುಂಬವಾದ ವಿಶ್ವಕರ್ಮ ಮನೆತನದಲ್ಲಿ ಜನಿಸಿದ ಇವರಿಗೆ ಕಲೆಯ ಬಗೆಗಿನ ಒಲವು ಸಹಜವಾಗಿತ್ತು. ನೈಜ ಚಿತ್ರಣದಲ್ಲಿ ರಾಜಾ ರವಿವರ್ಮನ ನಂತರದವರೆಂದೇ ಖ್ಯಾತಿಯನ್ನು ಹೊಂದಿದ ಇವರಿಗೆ ವಿದೇಶಿಯರು ಭಾರತದ ರೆಂಬ್ರಾಂಟ್ ಎಂದೇ ಗುರುತಿಸುತ್ತಾರೆ. ಇವರ ವ್ಯಕ್ತಿಚಿತ್ರ ಮತ್ತು ಭಾವಚಿತ್ರ, ಪೌರಾಣಿಕ ಚಿತ್ರಸಂಯೋಜನೆಗಳು ಈ ಮಾತಿಗೆ ಪುಷ್ಟಿಯನ್ನು ಕೊಡುತ್ತವೆ. ಭಾರತೀಯ ಚಿತ್ರಕಲಾ ಪರಂಪರೆಯಲ್ಲಿ ಪೋಷ್ಟರ್ ಚಿತ್ರಗಳನ್ನು ಮೊದಲ ಬಾರಿಗೆ ಚಿತ್ರಿಸಿ ಆ ಪರಂಪರೆಯನ್ನು ಹುಟ್ಟುಹಾಕಿದ ಪಂಡಿತರು ಚಲನಚಿತ್ರ ರಂಗಕ್ಕೆ ಅಂದಿನ ದಿನಗಳಲ್ಲಿ ಅನಿವಾರ್ಯ ಕಲಾವಿದರಾಗಿದ್ದರು. ತಾಂತ್ರಿಕತೆ ಅಷ್ಟಾಗಿ ಮುಂದುವರೆಯದ ಅಂದಿನ ದಿನಗಳಲ್ಲಿ ಚಲನಚಿತ್ರಗಳ ಪೋಷ್ಟರ್‌ಗಳ ರಚನೆಗಾಗಿ ಕಲಾವಿದರು ಇದರಲ್ಲಿ ಸಾಲುಗಟ್ಟಿ ನಿಲ್ಲುತ್ತಿದ್ದರು ಎನ್ನುವುದು ಅಷ್ಟೇ ಸೋಜಿಗದ ಸಂಗತಿ. ಚಿತ್ರಗಳ ರಚನೆಯಲ್ಲಿ ಶೃಂಗಾರ, ಉಜ್ವಲತೆ, ಅತಿ ರಮ್ಯತೆಗಳನ್ನು ಅಳವಡಿಸುತ್ತಲಿದ್ದ ಪಂಡಿತರ ಕೃತಿಗಳಿಗೆ ದೇಶ-ವಿದೇಶಗಳಲ್ಲಿ ಅಪಾರ ಜನಪ್ರಿಯತೆ ಇಂದಿಗೂ ಇದೆ.

ಈ ಪುಸ್ತಕದಲ್ಲಿ ಅವರ ಚಿತ್ರಣವಿಧಾನ, ಚಿತ್ರಗಳ ವಸ್ತು ವಿಷಯ, ಕೌಟುಂಬಿಕ ಜೀವನ, ಬಾಲ್ಯ, ಪ್ರಾಥಮಿಕ ಶಿಕ್ಷಣ, ಕಲಾಶಿಕ್ಷಣ, ಕಲೆಯ ಬಗೆಗಿನ ಒಲವು, ಅದನ್ನು ಸಿದ್ಧಿಸಿಕೊಂಡ ಬಗೆ, ಮುಂಬೈಯಲ್ಲಿನ ಕಲಾಬದುಕುಗಳಲ್ಲದೇ ಕಲಾಕೃತಿಗಳ ವಿಶ್ಲೇಷಣೆಯೂ ಈ ಕೃತಿಯಲ್ಲಿದೆ. ಈ ಪುಸ್ತಕ ಬರೆದ ಕಾಳೆಯವರು ಸ್ವತಹ ಕಲಾವಿದರು, ಕಲಾ ಲೇಖಕರು, ಹಲವು ಪುಸ್ತಕಗಳನ್ನು ಬರೆದವರು ಆಗಿದ್ದು ಅಂತಹ ಜ್ಞಾನ ಹಿನ್ನೆಲೆಯ ಪರಿಧಿಯು ಈ ಕಿರು ಪುಸ್ತಕದಲ್ಲಿ ಗೋಚರಿಸುತ್ತದೆ. ಸಾಮಾನ್ಯ ವ್ಯಕ್ತಿಯೊಬ್ಬ ಹೇಗೆ ಮೇರು ಸ್ಥಾನಕ್ಕೇರಬಲ್ಲ, ತನ್ನ ಸಾಧನೆ ಸಿದ್ಧಿಗಳಿಂದ ವಿಶ್ವವಿದ್ಯಾಲಯ ಮಟ್ಟದ ಗೌರವ ಡಾಕ್ಟರೇಟ್ ಪಡೆದುಕೊಳ್ಳುವ ಹಂತ ತಲುಪಬಲ್ಲ ಎಂಬ ವಿಚಾರಗಳು ತಿಳಿದು ಬರುತ್ತವೆ.

**ಟಿ.ಪಿ. ಅಕ್ಕಿ :**

ಉತ್ತರ ಕರ್ನಾಟಕದ ಚಿತ್ರಕಲಾ ಶಿಕ್ಷಣಕ್ಕೆ ಮಹತ್ವದ ಕೊಡುಗೆ ನೀಡಿದವರಲ್ಲಿ ಟಿ.ಪಿ. ಅಕ್ಕಿಯವರು ಪ್ರಮುಖರು. ಗದಗ ಜಿಲ್ಲೆಯನ್ನು ಕಲಾಕ್ಷೇತ್ರ ಮಾಡುವಲ್ಲಿ ಇವರು ಅಹರ್ನಿಶಿ ದುಡಿದಿದ್ದಾರೆ. ಈ ಭಾಗದ ಕಲಾವಿದ್ಯಾರ್ಥಿಗಳು ಇಂದಿಗೂ ಹೆಚ್ಚಾಗಿ ಸ್ಮರಿಸುವ, ಕಲಾಗುರು ಎಂದೇ ಪರಿಗಣಿಸಲಾಗಿರುವ ಇವರ ಬಗ್ಗೆ ಅವರ ವಿದ್ಯಾರ್ಥಿಯಾದ ವಿ.ಟಿ. ಕಾಳೆಯವರು ಈ ಪುಸ್ತಕ ಬರೆದಿದ್ದಾರೆ.[೧೩] ಟಿ.ಪಿ. ಅಕ್ಕಿಯವರು ಮುಂಬೈನ ಸರ್.ಜೆ.ಜೆ. ಕಲಾಶಾಲೆಯ ಆರ್ಟಮಾಸ್ಟರ್ ಪದವೀಧರರಾಗಿ ಗದುಗಿಗೆ ಬಂದು ಚಿತ್ರಕಲಾ ಶಿಕ್ಷಕ ವೃತ್ತಿಯನ್ನು ಅವಲಂಬಿಸಿದರು. ನಂತರ ಗದುಗಿನ ವಿಜಯಕಲಾ ಮಂದಿರ ಮತ್ತು ವಿಜಯ ಲಲಿತಕಲಾ ಮಹಾ ವಿದ್ಯಾಲಯದ ಸಂಸ್ಥಾಪಕರಾದರು. ಒಬ್ಬ ಕಲಾಶಿಕ್ಷಕನಾಗಿ ಕಲಾವಿದ್ಯಾರ್ಥಿಗಳಿಗೆ ಚೇತನಾ ಶಕ್ತಿಯಾಗಿ ಕೆಲಸ ಮಾಡಿದರು. ಒಂದು ಕಲಾ ಸಂಸ್ಥೆಯನ್ನು ಕಟ್ಟಿದುದು ನಿಜಕ್ಕೂ ಒಂದು ಮಹತ್ ಕಾರ್ಯವೇ ಎನ್ನಬಹುದು.

---

೧೨. ವ್ಹಿ.ಟಿ.ಕಾಳೆ : ಎಸ್.ಎಮ್. ಪಂಡಿತ್ : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು-೧೯೮೯.

೧೩. ವ್ಹಿ.ಟಿ.ಕಾಳೆ : ಟಿ.ಪಿ.ಅಕ್ಕಿ : ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೪.

ಕರ್ನಾಟಕ ರಾಜ್ಯದ ಚಿತ್ರಕಲಾ ಶಿಕ್ಷಣದ ಅಭಿವೃದ್ಧಿಗಾಗಿ ಅಕ್ಕಿಯವರು ತಮ್ಮ ಕೊನೆಯುಸಿರಿರುವರೆಗೂ ಶ್ರಮಿಸಿದರು. ಕನ್ನಡ ನಾಡಿನ ಕಲಾಶಿಕ್ಷಣ ಕ್ಷೇತ್ರಕ್ಕೆ ಒಬ್ಬ ವ್ಯಕ್ತಿಯಿಂದ ಸಲ್ಲಬೇಕಾದ ಸೇವೆಗಿಂತಲೂ ಹೆಚ್ಚಿನ ಸೇವೆ ಇವರಿಂದ ಸಲ್ಲಿದೆ. ಛಲವಾದಿ, ನಗೆಗಾರ, ಮಾತುಗಾರ, ಸ್ನೇಹಜೀವಿ, ಶಿಷ್ಯವತ್ಸಲ, ಅಸಮಾನ್ಯ ನಿಸರ್ಗ ಪ್ರೇಮಿಯಾಗಿದ್ದರು. ಟಿ.ಪಿ.ಅಕ್ಕಿಯವರು ಕಂದಾಚಾರಗಳಿಗೆ ಎಂದೂ ಬಲಿಯಾಗಬಾರದೆಂದು ಹೇಳುತ್ತಿದ್ದರು. ಅವರು ಸಾರ್ವಜನಿಕರಲ್ಲಿ ಎಷ್ಟೊಂದು ವಿಶ್ವಾಸಾರ್ಹರಾಗಿದ್ದರು ಎಂಬುದಕ್ಕೆ ಹಿಂದೊಮ್ಮೆ ಅಕ್ಕಿಯವರಿಗೆ ಆರ್ಥಿಕ ತೊಂದರೆಯಾಗಿದ್ದಾಗ ಅವರ ಅಣ್ಣ ಶಿವಾನಂದರು ರಚಿಸಿದ ಕೆಲವು ಚಿತ್ರಗಳನ್ನು ತೆಗೆದುಕೊಂಡು ಹೋಗಿ ಇವುಗಳಲ್ಲಿ ಒಂದನ್ನಾದರೂ ಖರೀದಿಸಿ ನನ್ನ ಆರ್ಥಿಕ ಅಡಚಣೆಯನ್ನು ದೂರಮಾಡಿ ಎಂದು ಟಿ.ಪಿ.ಅಕ್ಕಿಯವರು ಕೇಳಿದಾಗ ಸ್ಥಳೀಯ ಸಿದ್ದಣ್ಣನವರು ಎಲ್ಲಾ ಚಿತ್ರಗಳನ್ನೂ ವೀಕ್ಷಿಸಿ ತಮ್ಮ ಗುಮಾಸ್ತನ ಕೈಗೆ ಕೊಟ್ಟು ಅಕ್ಕಿಯವರ ಕಡೆಗೆ ತಿರುಗಿ ಗುರುಗಳೆ ನಿಮಗೆಷ್ಟು ಹಣ ಬೇಕು ಎಂದು ಕೇಳಿದರಂತೆ. ಇಂತಹ ಬಹು ಸೂಕ್ಷ್ಮವಾದ ವಿಚಾರಗಳನ್ನು ಲೇಖಕರು ಹೊರತರುವ ಮೂಲಕ ಟಿ.ಪಿ.ಅಕ್ಕಿಯವರು ಸಾರ್ವಜನಿಕ ಜೀವನದಲ್ಲಿ ಎಷ್ಟು ಶುಭ್ರವಾಗಿದ್ದರೆಂದು ಗುರುತಿಸಿದ್ದಾರೆ. ಚಿತ್ರ ಕಲಾವಿದರು, ಚಿತ್ರಕಲಾ ಶಿಕ್ಷಕರು, ಶಿಲ್ಪಕಲಾವಿದರುಗಳಲ್ಲದೆ ಶ್ರೀ ಬಸವರಾಜ ಮನ್ಸೂರು, ಶಾರದಾ ಹಾನಗಲ್, ರಾಜೀವ್ ಪುರಂದರೆ ಮುಂತಾದವರೊಂದಿಗೂ ನಿಕಟ ಸಂಪರ್ಕವನ್ನಿಟ್ಟುಕೊಂಡ ಬಗ್ಗೆ ಗಮನ ಸೆಳೆಯುತ್ತಾರೆ. ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿ ಟಿ.ಪಿ.ಅಕ್ಕಿಯವರು ಗಮನಾರ್ಹ ಸಾಧನೆ ಮಾಡಿದ್ದಾರೆ. ಇಂತಹ ಅನೇಕ ವಿಷಯಗಳು ಈ ಪುಸ್ತಕದಲ್ಲಿ ಸ್ಥೂಲವಾಗಿ ವ್ಯಕ್ತಗೊಂಡಿವೆ. ಈ ಕೃತಿಯಲ್ಲಿ ಮುಖ್ಯವಾಗಿ ಅವರ ಬಾಲ್ಯ, ಶಿಕ್ಷಣ, ಮುಂಬೈಯಲ್ಲಿನ ಕಲಾ ವ್ಯಾಸಂಗ, ಗದುಗಿನಲ್ಲಿನ ಶಿಕ್ಷಕ ವೃತ್ತಿ, ಕಲಾಶಾಲೆಯ ಸ್ಥಾಪನೆ, ಅದನ್ನು ಉಳಿಸಿ ಬೆಳೆಸುವಲ್ಲಿ ಅವರು ಪಟ್ಟಿರುವ ಕಷ್ಟ-ನಷ್ಟಗಳು, ಅವರ ಶಿಷ್ಯ ವಾತ್ಸಲ್ಯ, ಮುಂತಾದ ಅಂಶಗಳು ಬೆಳಕು ಕಂಡಿವೆ.

**ಬಾನಯ್ಯ ಗರುಡಾದ್ರಿ :**

ಕರ್ನಾಟಕದ ಸುರಪುರ ಸಂಸ್ಥಾನವು ನಾಡಿನ ಕಲಾಕ್ಷೇತ್ರಕ್ಕೆ ವಿಶಿಷ್ಟವಾದ ಕೊಡುಗೆ ಕೊಟ್ಟಿದೆ. ಚಿತ್ರಕಲಾವಿದರನ್ನು ಬೆಳೆಸಿ ಪೋಷಿಸುವ ಮೂಲಕ ಪ್ರತ್ಯೇಕವಾದ ಚಿತ್ರಕಲಾ ಶೈಲಿಯನ್ನು ಹುಟ್ಟು ಹಾಕಿದೆ. ಈ ಆಸ್ಥಾನದ ಚಿತ್ರಕಲಾವಿದರಾಗಿದ್ದವರು ಗರುಡಾದ್ರಿ ಮನೆತನದವರು. ಈ ವಂಶದ ಬಾನಯ್ಯ ಗರುಡಾದ್ರಿ ಶ್ರೇಷ್ಠ ಕಲಾವಿದರ ಸಾಲಿನಲ್ಲಿ ಸೇರುತ್ತಾರೆ. ಸುರಪುರ ಸಂಸ್ಥಾನದ ಅರಮನೆಯಲ್ಲಿ ಮಾತ್ರವಲ್ಲದೇ ಊರಿನ ಶ್ರೀಮಂತರು, ಅಧಿಕಾರಿಗಳು, ಮಠಮಾನ್ಯಗಳು, ದೇವಾಲಯಗಳಲ್ಲಿ ಬಾನಯ್ಯ ಚಿತ್ರರಚನೆ ಮಾಡಿದ್ದಾರೆ. ಅವರ ಅನೇಕ ಕೃತಿಗಳು ಇಂದಿಗೂ ನೋಡಲು ಸಿಗುತ್ತವೆ. ಇವರ ಬಗ್ಗೆ ಬಸವರಾಜ ಉಪ್ಪಿನ ಪುಸ್ತಕ ಬರೆದಿದ್ದಾರೆ.[೧೪]

ಆಂಧ್ರಪ್ರದೇಶ ಮೂಲದ ಗರುಡಾದ್ರಿ ಮನೆತನದವರು ವಿಜಯನಗರ ಸಾಮ್ರಾಜ್ಯದಲ್ಲಿ ಚಿತ್ರಕಲಾವಿದರಾಗಿದ್ದರು. ವಿಜಯನಗರ ಪತನದ ನಂತರ ಸುರಪುರಕ್ಕೆ ವಲಸೆ ಬಂದು ರಾಜಾಶ್ರಯದಲ್ಲಿ ಆಸ್ಥಾನದ ಕಲಾವಿದರಾಗಿ ನೆಲೆನಿಂತರು. ಸಂಸ್ಥಾನದಲ್ಲಿ ಬ್ರಿಟಿಷ್ ಅಧಿಕಾರಿಯಾಗಿದ್ದ ಮೆಡೋಸ್ ಟೇಲರ್‌ನು ಚಿತ್ರಕಲೆಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟು ಈ ಭಾಗದಲ್ಲಿ ಕಲೆ ಬೆಳೆಯಲು ಸಹಾಯಕನಾದನು. ಸ್ವತಹ ಕಲಾವಿದನೂ ಆಗಿದ್ದ ಮೆಡೋಸ್ ಟೇಲರ್‌ನು ಬಾನಯ್ಯ ಗರುಡಾದ್ರಿಯವರ ಮನೆತನಕ್ಕೆ ಹೆಚ್ಚಿನ ಸಹಾಯ ಒದಗಿಸಿಕೊಟ್ಟನು.

೧೪. ಬಸವರಾಜ ಉಪ್ಪಿನ : ಬಾನಯ್ಯ ಗರುಡಾದ್ರಿ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು -೧೯೯೫.

ಚಿತ್ರರಚನೆಯಲ್ಲಿ ಬಾನಯ್ಯ ಗರುಡಾದ್ರಿಯವರು ಸ್ವತಹ ತಯಾರಿಸಿಕೊಂಡ ಪ್ರಕೃತಿ ಸಹಜ ವರ್ಣಗಳನ್ನು ಉಪಯೋಗಿಸುತ್ತಿದ್ದರು. ಅಂತೆಯೇ ಅವು ಇಂದಿಗೂ ಅಚ್ಚಳಿಯದೇ ಉಳಿದಿವೆ. ಈ ಎಲ್ಲ ವಿಷಯಗಳ ಜೊತೆಗೆ ಅವರು ಬಣ್ಣ ತಯಾರಿಸಿಕೊಳ್ಳುತ್ತಿದ್ದ ರೀತಿ, ಚಿತ್ರಣವಿಧಾನ, ಚಿತ್ರಶೈಲಿಗಳ ಬಗ್ಗೆ ಈ ಪುಸ್ತಕದಲ್ಲಿ ವಿವೇಚಿಸಲಾಗಿದೆ. ಪ್ರಸ್ತುತ ಕಿರುಪುಸ್ತಕವು ಬಾನಯ್ಯ ಗರುಡಾದ್ರಿ ಹೆಸರಿನ ಮೂಲಕ ಸುರಪುರ ಸಂಸ್ಥಾನದ ಸುರಪುರ ಚಿತ್ರಕಲಾ ಶೈಲಿಯ ಕುರಿತು ಸ್ಥೂಲ ನೋಟವನ್ನು ಒದಗಿಸಿ ಕೊಡುತ್ತದೆ. ಆ ಕಾಲದ ಕಲಾವಿದರು, ಕಲಾ ಪ್ರೋತ್ಸಾಹ, ಕಲಾ ಪರಿಸ್ಥಿತಿಗಳು ಇದರಲ್ಲಿ ವ್ಯಕ್ತಗೊಂಡಿವೆ.

**ಆರ್. ಎಂ. ಹಡಪದ್ :**

ಕರ್ನಾಟಕದ ಶ್ರೇಷ್ಠ ಕಲಾವಿದರಲ್ಲಿ ಒಬ್ಬರಾದ ಆರ್.ಎಂ. ಹಡಪದ್‌ರ ಕುರಿತು ಎಂ.ಎಚ್. ಕೃಷ್ಣಯ್ಯ ಪುಸ್ತಕ ಬರೆದಿದ್ದಾರೆ.[೧೫] ಇದರಲ್ಲಿ ಪ್ರಮುಖವಾಗಿ ಹಡಪದ್ ಅವರ ಬಾಲ್ಯ, ಶಿಕ್ಷಣ, ಕಲಾಜೀವನದ ಪ್ರಾರಂಭಿಕ ದಿನಗಳು, ಹೀಗೆ ವಿವಿಧ ಹಂತಗಳನ್ನು ಲೇಖಕರು ಸೂಕ್ಷ್ಮವಾಗಿ ಗ್ರಹಿಸಿದ್ದಾರೆ.

ಹಡಪದ್ ಅವರು ಕರ್ನಾಟಕ ಇತಿಹಾಸದಲ್ಲಿ ಪ್ರಮುಖ ಸ್ಥಾನ ಪಡೆದ ಚಾಲುಕ್ಯರ ರಾಜಧಾನಿಯಾಗಿದ್ದ ಬಾದಾಮಿಯಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣ ಬಾದಾಮಿಯಲ್ಲಿ, ಕಲಾಶಿಕ್ಷಣವನ್ನು ಟಿ.ಪಿ.ಅಕ್ಕಿಯವರ ಗದುಗಿನ ವಿಜಯಕಲಾ ಮಂದಿರದಲ್ಲಿ ಪಡೆದರು. ಮುಂಬೈಯ ಜೆ.ಜೆ. ಕಲಾಶಾಲೆಯಲ್ಲಿ ಕಲಾ ಡಿಪ್ಲೋಮಾ ಮುಗಿಸಿ ಬಂದು ಕಲಾಶಿಕ್ಷಕರಾಗಿ ಜೀವನ ಪ್ರಾರಂಭಿಸಿದರು. ಬಾದಾಮಿಯ ಶಿಲಾ ಗುಹೆಗಳು, ಬೃಹತ್ ಶಿಲಾ ಬೆಟ್ಟಗಳು ಇವರ ಕಲಾ ಜೀವನಕ್ಕೆ ಪ್ರೇರಣೆ ನೀಡಿವೆ. ಬಾದಾಮಿಗೆ ಭೇಟಿ ನೀಡುತ್ತಿದ್ದ ವಿದೇಶಿ ಕಲಾವಿದರ ಒಡನಾಟದಿಂದ ಕಲೆಯ ಹೊಸ ಅಂಶಗಳ ಬಗ್ಗೆ ಹೆಚ್ಚಿನ ಒಲವು ತೋರಿಸಲು ಸಾಧ್ಯವಾಗಿರುವುದನ್ನು ಅವರು ಹೇಳಿಕೊಳ್ಳುತ್ತಲಿದ್ದರು. ಬಾದಾಮಿಯ ಗುಹೆಗಳು ಆ ದಿನಗಳಲ್ಲಿ ಹಡಪದರ ಎರಡನೆಯ ಮನೆಯಾಗಿತ್ತು.

ಹಡಪದರು ಬೆಂಗಳೂರಿಗೆ ೧೯೬೧ರಲ್ಲಿ ಬಂದರು. ೧೯೬೮ರಲ್ಲಿ ಕೆಲವು ಶಿಷ್ಯರ ಸಹಾಯದಿಂದ ಕೆನ ಸ್ಕೂಲ್ ಆಫ್ ಆರ್ಟ್ಸ್ ಕಲಾಶಾಲೆಯನ್ನು ಸ್ಥಾಪಿಸಿದರು. ಕಷ್ಟ-ನಷ್ಟಗಳನ್ನು ಎದುರಿಸಿ ಈ ಶಾಲೆಯನ್ನು ಬೆಳೆಸಿದರು. ಇಡೀ ರಾಷ್ಟ್ರದಲ್ಲಿಯೇ ಅದಕ್ಕೆ ಹೆಸರು ತಂದುಕೊಟ್ಟರು. ಈ ಸಂದರ್ಭದಲ್ಲಿ ಮೂರ್ತದಿಂದ ಅಮೂರ್ತಶೈಲಿಗೆ ತಿರುಗಿದ ಇವರ ಕಲಾಕೃತಿಗಳು ಹೊಸ ಆಯಾಮ ಪಡೆದುಕೊಂಡವು. ಹಡಪದರು ೧೯೬೪ರಲ್ಲಿ ನಾವುನಾಲ್ವರು ಎಂಬ ಕಲಾವಿದರ ಗುಂಪನ್ನು ರಚಿಸಿಕೊಂಡರು. ಟಿ.ಕೆ. ಪಾಟೀಲ್, ಎಸ್.ಎಸ್. ಮನೋಳಿ, ಜಿ.ವೈ. ಹುಬ್ಳೀಕರ್ ಈ ಗುಂಪಿನಲ್ಲಿದ್ದರು. ಇದು ಕರ್ನಾಟಕದ ಕಲಾ ಇತಿಹಾಸದ ಮೈಲುಗಲ್ಲಾಗಿರುವುದನ್ನು ಲೇಖಕರು ಗುರುತಿಸಿದ್ದಾರೆ.

ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿ ಇವರು ಸಲ್ಲಿಸಿರುವ ಸೇವೆ ಅನುಪಮವಾಗಿದೆ. ಅನೇಕ ಮಹತ್ಕಾರ್ಯಗಳನ್ನು ಈ ಸಂದರ್ಭದಲ್ಲಿ ಕೈಗೊಂಡರು. ವಿಚಾರಧಾರೆಯನ್ನು ಹಿರಿಯ ಕಲಾವಿದರುಗಳು, ಇನ್ನಿತರ ವಿದ್ವಾಂಸರೊಂದಿಗೆ ವಿವೇಚಿಸುವ ಪ್ರಯತ್ನವನ್ನು ಇವರು ಮಾಡಿದರು. ಈ ಪುಸ್ತಕದಲ್ಲಿ ಮುಖ್ಯವಾಗಿ ಹಡಪದರ ಬಾಲ್ಯ, ಶಿಕ್ಷಣ, ಕಲಾಶಿಕ್ಷಣ, ಕಲಾಬದುಕು, ಕಲಾಕೃತಿ ರಚನೆ, ಕಲಾಚಟುವಟಿಕೆಗಳ ಬಗ್ಗೆ ವಿವರಗಳಿವೆ.

---

೧೫. ಎಂ.ಎಚ್. ಕೃಷ್ಣಯ್ಯ : ಆರ್.ಎಂ.ಹಡಪದ್ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೭.

**ಎಂ.ಟಿ. ಭೋಪಲೆ :**

ಪಾರಂಪರಿಕ ಚಿತ್ರಕಲೆಯ ಅಂಶಗಳನ್ನು ತಮ್ಮ ಕೃತಿಯಲ್ಲಿ ಅಳವಡಿಸಿಕೊಂಡು ಕೃತಿರಚಿಸಿದ ಪ್ರಮುಖ ಕಲಾವಿದರಲ್ಲಿ ಒಬ್ಬರು. ನಂದಲಾಲ್ ಬೋಸ್, ಜಾಮಿನಿರಾಯ್, ಅಬನೀಂದ್ರನಾಥ ಟ್ಯಾಗೋರ್ ಇವರುಗಳ ಹಾಗೆ ಭೋಪಲೆಯವರೂ ಸಹಿತ ಜೈನ, ಬೌದ್ಧ, ರಜಪೂತ ಕಲಾಶೈಲಿಗಳ ಪ್ರಮುಖ ಅಂಶಗಳನ್ನು ತಮ್ಮ ಕೃತಿಗಳಲ್ಲಿ ಅಳವಡಿಸಿಕೊಂಡರು. ಕರ್ನಾಟಕದ ಮಟ್ಟಿಗೆ ಅಂದಿನ ದಿನಗಳಲ್ಲಿ ಇದು ಗಮನಾರ್ಹ ಅಂಶವಾಗಿತ್ತು. ಈ ರೀತಿಯ ಕಲಾಶೈಲಿಯನ್ನು ಹೊಂದಿದ ಭೋಪಲೆಯವರ ಕುರಿತು ಪ್ರಸ್ತುತ ಕೃತಿಯನ್ನು ಡಿ.ಎನ್. ಅಕ್ಕಿಯವರು ರಚಿಸಿದ್ದಾರೆ.[೧೬] ಪಾಶ್ಚಾತ್ಯ ಕಲೆಯ ಲಕ್ಷಣಗಳು ಮತ್ತು ಪೌರಾತ್ಯ ಕಲೆಯ ಲಕ್ಷಣಗಳು ಭಿನ್ನವಾಗಿದ್ದು, ಪ್ರಸ್ತುತ ಪಡಿಸುವ ರೀತಿಗಳಲ್ಲೂ ವ್ಯತ್ಯಾಸವಿದೆ. ಭೋಪಲೆಯವರು ಪಾಶ್ಚಾತ್ಯ ಶೈಲಿಯ ಕಲಾಶಿಕ್ಷಣ ಪಡೆದಿದ್ದರೂ ಅದರ ಪ್ರಭಾವಕ್ಕೊಳಗಾಗದೇ ಪೌರಾತ್ಯ ಕಲೆಯ ಗುಣಲಕ್ಷಣಗಳಿಗೆ ಮಾರುಹೋಗಿ ತಮ್ಮ ಕೃತಿಯಲ್ಲಿ ಅವುಗಳನ್ನು ಅಳವಡಿಸಿಕೊಂಡರು.

ಆರಂಭಿಕ ಹಂತದಲ್ಲಿ ರೇಖಾಲಾಲಿತ್ಯ, ವರ್ಣಲೇಪನ ವಿಧಾನಗಳಲ್ಲಿ ಮಾತ್ರ ಪಾರಂಪರಿಕ ಅಂಶಗಳನ್ನು ತಂದುಕೊಂಡರೆ ನಂತರದ ದಿನಗಳಲ್ಲಿ ಚಿತ್ರಕಲಾ ಶೈಲಿಗಳ ಬಗ್ಗೆ ಚಿಂತನ, ಮನನ, ಅಧ್ಯಯನಗಳ ಮೂಲಕ ಹೆಚ್ಚಿನ ಅಂಶಗಳನ್ನು ಅಳವಡಿಸಿಕೊಂಡರು. ಈ ಹಂತದಲ್ಲಿ ಭೋಪಲೆಯವರಿಂದ ಸತ್ವಪೂರ್ಣ ಕೃತಿಗಳು ಬರತೊಡಗಿದವು. ವರ್ಣ ಸಂಯೋಜನಾ ಚಿತ್ರಗಳ ಜೊತೆಗೆ ಪ್ರಕೃತಿಚಿತ್ರ, ರೇಖಾಚಿತ್ರ, ಭಾವಚಿತ್ರ, ವ್ಯಕ್ತಿಚಿತ್ರ, ಪೆನ್ಸಿಲ್‌ಡ್ರಾಯಿಂಗ್, ಇಂಡಿಯನ್‌ಇಂಕ್ ಚಿತ್ರಗಳನ್ನು ತಮ್ಮ ವಿಶಿಷ್ಟ ಕಲಾಶೈಲಿಯಿಂದ ರಚಿಸಿದ್ದಾರೆ. ಭೋಪಲೆಯವರ ಜೀವನ ಮತ್ತು ಕಲೆಯನ್ನು ಕುರಿತ ಈ ಕೃತಿಯಲ್ಲಿ ಮುಖ್ಯವಾಗಿ ಅವರ ಬಾಲ್ಯ, ಶಿಕ್ಷಣ, ಕಲಾ ಆಸಕ್ತಿ, ಕಲಾ ಬದುಕು, ಕೃತಿರಚನೆ ಹಾಗೂ ಅವುಗಳ ವಿಶ್ಲೇಷಣೆಯನ್ನು ಕೊಡಲಾಗಿದೆ. ಜೊತೆಗೆ ಅವರಿಗೆ ಬಂದಿರುವ ಪ್ರಶಸ್ತಿ ಗೌರವಗಳು, ಕಲಾ ಪ್ರದರ್ಶನಗಳ ಕಿರುಮಾಹಿತಿ ಇದೆ. ವ್ಯಕ್ತಿಚಿತ್ರಣದ ಹಿನ್ನೆಲೆಯಲ್ಲಿ ಇದೊಂದು ಗಮನಾರ್ಹ ಕೃತಿಯಾಗಿದೆ.

**ಸೋಮಶೇಖರ್ ಸಾಲಿ :**

ಕರ್ನಾಟಕ ಕಲಾಕ್ಷೇತ್ರದಲ್ಲಿ ಶ್ರೇಷ್ಠ ಕಲಾವಿದರ ಸಾಲಿನಲ್ಲಿ ಸೋಮಶೇಖರ ಸಾಲಿಯವರೂ ಸೇರುತ್ತಾರೆ. ಇವರನ್ನು ಕುರಿತು ಡಾ.ಬಿ.ಕೆ.ಹಿರೇಮಠ ಕೃತಿರಚಿಸಿದ್ದಾರೆ.[೧೭] ಈ ಕೃತಿಯಲ್ಲಿ ಸಾಲಿಯವರ ಬಾಲ್ಯ, ಕಲಾಶಿಕ್ಷಣ, ವಿದ್ಯಾಭ್ಯಾಸ, ಕಲಾಬದುಕು, ಕಲಾಕೃತಿಗಳ ರಚನೆ, ಕೃತಿಗಳ ವಿಶ್ಲೇಷಣೆಯನ್ನು ಮಾಡಲಾಗಿದೆ. ವ್ಯಕ್ತಿಚಿತ್ರ ಮತ್ತು ಸಂಯೋಜನಾ ಚಿತ್ರಗಳ ರಚನೆಯಲ್ಲಿ ಸಿದ್ಧಹಸ್ತರಾದ ಇವರ ಕಲಾಶೈಲಿಯು ನೈಜತೆ ಮತ್ತು ಆಧುನಿಕತೆಯ ಸಮ್ಮಿಳನದಂತೆ ಕಂಡುಬರುತ್ತದೆ. ಹಲವಾರು ಗಮನಾರ್ಹ ಚಿತ್ರಗಳನ್ನು ರಚಿಸಿದ ಸಾಲಿಯವರು ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿಯೂ ಕಾರ್ಯನಿರ್ವಹಿಸಿದ್ದಾರೆ. ಇವರ ಶ್ರೇಷ್ಠ ಚಿತ್ರಗಳಲ್ಲಿ ವೀರವಿರಾಗಿಣಿ ಅಕ್ಕಮಹಾದೇವಿ, ರೂಪದರ್ಶಿ, ಚರಖಾ, ಭಾವಚಿತ್ರ, ಮಹಿಳೆ, ನಗ್ನರೂಪದರ್ಶಿ, ನರ್ತಕಿ, ಬಂಥನಾಳ ಶಿವಯೋಗಿಗಳ ಚಿತ್ರಗಳು ಸೇರಿವೆ. ಚಿತ್ರರಚನೆಯ ವಿಧಾನದಲ್ಲಿ ಜಲವರ್ಣ, ತೈಲವರ್ಣ ಮತ್ತು ಮಿಶ್ರಮಾಧ್ಯಮಗಳನ್ನು ಇವರು ಬಳಸಿದ್ದಾರೆ. ಇವೆಲ್ಲವುಗಳ ವಿಶ್ಲೇಷಣೆ ಇದೆ.

---

೧೬. ಡಿ.ಎನ್.ಅಕ್ಕಿ : ಎಂ.ಟಿ.ಭೋಪಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೯.

೧೭. ಡಾ. ಬಿ.ಕೆ. ಹಿರೇಮಠ :ಸೋಮಶೇಖರ ಸಾಲಿ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೯.

ಈ ಪುಸ್ತಕದಲ್ಲಿ ಸಾಲಿಯವರ ಕಲೆ ಮತ್ತು ಕಲಾ ಬದುಕಿನ ಮೂಲಕ ಉತ್ತರ ಕರ್ನಾಟಕ ಭಾಗದ ಅಂದಿನ ಕಲಾ ಪರಿಸ್ಥಿತಿ, ಮಧ್ಯಮವರ್ಗದ ಜನ ಸಮುದಾಯದ ಸಾಂಸ್ಕೃತಿಕ ಒಡನಾಟಗಳು, ಸಮಾಜದ ಮುಖ್ಯ ಸೆಲೆಯಲ್ಲಿ ಅವರು ತಮ್ಮನ್ನು ಗುರುತಿಸಿಕೊಳ್ಳುವಲ್ಲಿ ಪಡುವ ಪರಿಶ್ರಮಗಳು ಮುಂತಾದ ಅಂಶಗಳು ಪರೋಕ್ಷವಾಗಿ ಮೂಡಿ ಬಂದಿವೆ. ಎಂತಹ ಶ್ರೇಷ್ಠ ಮತ್ತು ಪ್ರಬುದ್ಧ ಕಲಾವಿದನಾದರೂ ಜೀವನ ನಿರ್ವಹಣೆಗೆ ಸಾಮಾನ್ಯ ಕೆಲಸವನ್ನು ಸಹಿತ ಅಪ್ಪಿಕೊಂಡು, ಉಚ್ಛಕಲಾ ಮೌಲ್ಯಗಳನ್ನು ಗೌಣವಾಗಿಸುವ ಪರಿಸ್ಥಿತಿಗಳು ಕೃತಿಯ ಮೂಲಕ ಅನಾವರಣಗೊಂಡಿವೆ.

**ರಮ್ಯಕಲೆಯ ರಸ ಋಷಿ, ಎಸ್.ಎಂ. ಪಂಡಿತ :**

ಈ ಪುಸ್ತಕವನ್ನು ಎನ್.ಮರಿಶಾಮಾಚಾರ್ ಬರೆದಿದ್ದಾರೆ.[೧೮] ಕರ್ನಾಟಕ ಕಂಡ ಅದ್ಭುತ ಕಲಾವಿದರಲ್ಲಿ ಎಸ್.ಎಮ್.ಪಂಡಿತ್ ಅಗ್ರಗಣ್ಯರಾಗಿದ್ದಾರೆ. ಋಷಿ ಸದೃಶ್ಯ ಜೀವನ ನಡೆಸಿದ ಪಂಡಿತರ ಕಲಾ ಜೀವನದ ಸಂಕ್ಷಿಪ್ತ ಪರಿಚಯ ಕೃತಿಯಲ್ಲಿದೆ. ಕಲೆಗೆ ಹೆಸರಾದ ವಿಶ್ವಕರ್ಮ ಜನಾಂಗದಲ್ಲಿ ಹುಟ್ಟಿದ ಪಂಡಿತರು ಬಾಲ್ಯದಿಂದಲೇ ಕಲೆಯ ಬಗೆಗೆ ಆಸಕ್ತಿವುಳ್ಳವರಾಗಿದ್ದರು. ತಮ್ಮ ಕಲಾ ಅಧ್ಯಯನವನ್ನು ಮುಂಬೈಯಲ್ಲಿ ಪೂರೈಸಿದ ನಂತರ ಅಲ್ಲಿಯೇ ಕೃತಿ ರಚನೆಯಲ್ಲಿ ತೊಡಗಿದರು. ನೈಜಶೈಲಿಯ ಚಿತ್ರರಚನೆಯಲ್ಲಿ ಪ್ರಬುದ್ಧರಾಗಿದ್ದ ಇವರು ಚಲನಚಿತ್ರ ಪ್ರಚಾರದ ಭಿತ್ತಿ ಪತ್ರಗಳನ್ನು ಮೊದಲ ಬಾರಿಗೆ ಜನಪ್ರಿಯಗೊಳಿಸಿದರು. ಕರ್ನಾಟಕದ ರವಿವರ್ಮ ಎಂದೇ ಖ್ಯಾತರಾದ ಪಂಡಿತರು ರವಿವರ್ಮನಂತೆಯೇ ಭಾರತೀಯ ಪುರಾಣ, ಮಹಾಕಾವ್ಯಗಳಂತಹ ವಸ್ತುಗಳನ್ನು ಚಿತ್ರರೂಪಕ್ಕಿಳಿಸಿದರು. ಈ ರೀತಿಯಲ್ಲಿ ಪಂಡಿತರ ಬಗೆಗೆ ಹಲವಾರು ವಿಷಯಗಳು ಕೃತಿಯಲ್ಲಿ ವ್ಯಕ್ತಗೊಂಡಿವೆ.

ಇವುಗಳಲ್ಲದೇ ಈ ಪುಸ್ತಕದಲ್ಲಿ ಮುಖ್ಯವಾಗಿ ಎಸ್.ಎಮ್. ಪಂಡಿತರ ಬಾಲ್ಯ, ಕಲೆಯ ಆಸಕ್ತಿ, ಪ್ರಾಥಮಿಕ ಶಿಕ್ಷಣ, ಕಲಾಶಿಕ್ಷಣ, ಕಲಾಬದುಕು, ಕಲಾಕೃತಿ ರಚನೆಯ ತಾಂತ್ರಿಕತೆ, ಶೈಲಿ, ಪ್ರಭಾವ ಮುಂತಾದ ಅಂಶಗಳ ಬಗೆಗೆ ವಿವೇಚಿಸಲಾಗಿದೆ. ಅಲ್ಲದೆ ಕೆಲವು ಕೃತಿಗಳ ಬಗ್ಗೆ ವಿವರಕೊಡಲಾಗಿದೆ. ಎಸ್.ಎಮ್. ಪಂಡಿತರ ಕಲೆ ಮತ್ತು ಬದುಕನ್ನು ಸ್ಥೂಲವಾಗಿ ತಿಳಿದುಕೊಳ್ಳುವಲ್ಲಿ ಈ ಕೃತಿ ಸಹಕಾರಿಯಾಗಿದೆ.

**ಶಿವಾನಂದ ಪಿ. ಅಕ್ಕಿ :**

ಗದುಗಿನ ಟಿ.ಪಿ.ಅಕ್ಕಿಯವರ ಸೋದರ ಶಿವಾನಂದ ಅಕ್ಕಿಯವರ ಬಗ್ಗೆ ಅವರ ಒಡನಾಟವನ್ನು ಹತ್ತಿರದಿಂದ ಬಲ್ಲವರಾದ ವ್ಹಿ.ಟಿ. ಕಾಳೆಯುವರು ಪುಸ್ತಕ ಬರೆದಿದ್ದಾರೆ.[೧೯] ಟಿ.ಪಿ.ಅಕ್ಕಿಯವರ ಮನೆತನ ಚಿತ್ರಕಲೆಗೆ ಹೆಸರಾಗಿದ್ದು ಮಾತ್ರವಲ್ಲದೇ ಉತ್ತರ ಕರ್ನಾಟಕ ಭಾಗದಲ್ಲಿ ಕ್ರಿ.ಶ. ೧೯೪೭ರ ಹೊತ್ತಿಗೆ ಚಿತ್ರಕಲಾ ಶಾಲೆಯನ್ನು ಆರಂಭಿಸಿ ಈ ಭಾಗದ ಕಲಾ ವಿದ್ಯಾರ್ಥಿಗಳಿಗೆ ಚಿತ್ರಕಲೆ ಕಲಿಯಲು ಅನುವು ಮಾಡಿಕೊಟ್ಟವರು. ಈ ಕುಟುಂಬದಲ್ಲಿ ಹುಟ್ಟಿದ ಶಿವಾನಂದ ಕೂಡಾ ಚಿತ್ರಕಲೆಯ ಆಸಕ್ತಿಯನ್ನು ಬಾಲ್ಯದಲ್ಲಿಯೇ ಬೆಳೆಸಿಕೊಂಡವರು. ನಂತರ ಮುಂಬೈಯಲ್ಲಿ ಚಿತ್ರಕಲಾ ಶಿಕ್ಷಣ ಪಡೆದು ಕೆಲಕಾಲ ಅಲ್ಲಯೇ ನೆಲೆನಿಂತು ಚಿತ್ರಕಲಾ ರಚನೆ ಮತ್ತು ಪ್ರದರ್ಶನಗಳನ್ನು ಮಾಡಿದರು. ನಿಸರ್ಗಚಿತ್ರ ಮತ್ತು ವ್ಯಕ್ತಿಚಿತ್ರ ರಚನೆಯಲ್ಲಿ ಪ್ರವೀಣತೆ ಪಡೆದುಕೊಂಡಿದ್ದ ಇವರು ಮಿತಭಾಷಿಯೂ ಆಗಿದ್ದರು. ಕೆಲ ಕಾಲದ ನಂತರ ಬುದ್ಧಿ ಭ್ರಮಣೆಗೆ ಒಳಗಾಗಿ ಚಿತ್ರಕಲೆಯ ರಚನೆಯನ್ನು ಕೈಬಿಟ್ಟರು. ಕಿರು ವಯಸ್ಸಿನಲ್ಲಿ ಅಪಾರ ವಿದ್ವತ್ತನ್ನು ಚಿತ್ರಕಲಾ ಕ್ಷೇತ್ರದಲ್ಲಿ ಪಡೆದುಕೊಂಡಿದ್ದ ಶಿವಾನಂದ ಪಿ.ಅಕ್ಕಿ ಅಕಾಲದಲ್ಲಿ ಕಲೆ

೧೮. ಎನ್.ಮರಿಶಾಮಾಚಾರ್ : ರಮ್ಯಕಲೆಯ ರಸಋಷಿ : ಎಸ್.ಎಮ್. ಪಂಡಿತ : ವಿಶ್ವಕರ್ಮ ಪ್ರಕಾಶನ, ಮೂಡಬಿದರೆ–೧೯೯೯.

೧೯. ವ್ಹಿ.ಟಿ.ಕಾಳೆ :ಶಿವಾನಂದ ಪಿ.ಅಕ್ಕಿ. : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು–೧೯೯೯.

ರಚನೆಯನ್ನು ಕೈಬಿಡಬೇಕಾಯಿತು. ಅವರದು ದುರಂತ ಜೀವನದ ಅಧ್ಯಾಯವೆಂದೇ ಹೇಳಬಹುದು. ಅವರ ಕುರಿತು ಈ ಎಲ್ಲ ಅಂಶಗಳು ಪುಸ್ತಕದಲ್ಲಿ ಮೂಡಿಬಂದಿವೆ. ಮುಖ್ಯವಾಗಿ ಈ ಕೃತಿಯು ಶಿವಾನಂದ ಅಕ್ಕಿಯವರ ಬಾಲ್ಯ, ಶಿಕ್ಷಣ, ಕಲಾಶಿಕ್ಷಣ, ಕಲಾಬದುಕು, ಬುದ್ಧಿಭ್ರಮಣೆಯ ಅವಧಿ, ಕೊನೆಯ ದಿನಗಳು, ಕಲಾಕೃತಿ, ಪ್ರದರ್ಶನಗಳ ಬಗ್ಗೆ ವಿವರ ನೀಡುತ್ತದೆ. ಪ್ರಸ್ತುತ ಪುಸ್ತಕವು ಶಿವಾನಂದ ಅಕ್ಕಿಯವರ ಬುದ್ಧಿಭ್ರಮಣೆ, ಅದರಿಂದ ಅವರ ಮನೆಯಲ್ಲಿ ಉಂಟಾದ ಭಾವನಾತ್ಮಕ ಪರಿಸ್ಥಿತಿಗಳ ಕುರಿತು ಹೆಚ್ಚು ಗಮನ ಹರಿಸುತ್ತದೆ. ಕಲಾಕ್ಷೇತ್ರಕ್ಕೆ ಶಿವಾನಂದ ಅಕ್ಕಿಯವರಿಂದ ಕೊಡಮಾಡಲ್ಪಟ್ಟ ಕಿರುಕಾಣಿಕೆಗಳ ಕುರಿತು ವಿವೇಚಿಸಿದ್ದರೆ ಹೆಚ್ಚಿನ ಮೌಲಿಕತೆ ಉಂಟಾಗುತ್ತಿತ್ತು.

**ಜೆ.ಎಸ್. ಖಂಡೇರಾವ್ :**

ಕರ್ನಾಟಕದ ಸಮಕಾಲೀನ ಕಲಾವಿದರಲ್ಲಿ ಮಹತ್ವದ ಸ್ಥಾನವನ್ನು ಪಡೆದವರು ಗುಲಬರ್ಗಾದ ಜಗದೇವಪ್ಪ ಖಂಡೇರಾವ್ ಹಿಂದುಳಿದ ಈ ಭಾಗದಲ್ಲಿ ಕಲಾಶಾಲೆ ಸ್ಥಾಪಿಸಿ ಹಲವು ಜನ ಕಲಾವಿದರು ರೂಪುಗೊಳ್ಳುವಂತೆ ಮಾಡಿದವರು. ರಾಜ್ಯದಲ್ಲಿಯೇ ಮೊದಲಿಗೆ ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ ಆರಂಭಿಸುವಲ್ಲಿ ಇವರ ಪ್ರಯತ್ನ ಗಮನಾರ್ಹವಾದುದಾಗಿದೆ. ಇವರು ಆರಂಭಿಸಿದ ದಿ ಐಡಿಯಲ್ ಫೈನ್ ಆರ್ಟ ಸಂಸ್ಥೆ ಇಂದು ರಾಜ್ಯದ ಪ್ರಮುಖ ಕಲಾಶಾಲೆಯಾಗಿ ಗುರುತಿಸಿಕೊಂಡು ಬೃಹತ್ತಾಗಿ ಬೆಳೆದಿದೆ. ಇವರು ಸೇವೆ ಸಲ್ಲಿಸಿದ ಶರಣಬಸವೇಶ್ವರ ಚಿತ್ರಕಲಾ ಸ್ನಾತಕೋತ್ತರ ಕೇಂದ್ರವು ನಾಡಿಗೆ ಹಲವು ಜನ ಸಂಶೋಧಕರನ್ನು ನೀಡಿದೆ.

ಮುಂಬೈ ಜೆ.ಜೆ.ಕಲಾಶಾಲೆಯಲ್ಲಿ ಕಲಿತ ಖಂಡೇರಾವ್ ಅವರು ನಂತರದ ದಿನಗಳಲ್ಲಿ ನವ್ಯಶೈಲಿಗೆ ತಿರುಗಿದರು. ಏಂಡೋ ಸರಣಿಯ ಚಿತ್ರಗಳನ್ನು ಆಧುನಿಕ ಶೈಲಿಯಲ್ಲಿ ಪ್ರಮುಖವಾಗಿ ರಚಿಸುವ ಇವರು ಭಾವಚಿತ್ರ ಮತ್ತು ವ್ಯಕ್ತಿ ಚಿತ್ರಣಗಳಲ್ಲೂ ಸಿದ್ಧ ಹಸ್ತರು. ಇದರ ಜೊತೆಗೆ ನಿಸರ್ಗ ಚಿತ್ರ ಮತ್ತು ಸಂಯೋಜನಾ ಚಿತ್ರರಚನೆಗಳಲ್ಲೂ ಇವರು ವಿಶಿಷ್ಟ ಶೈಲಿ ಕಂಡು ಕೊಂಡಿದ್ದಾರೆ. ಇಂತಹ ಎಲ್ಲ ಅಂಶಗಳ ಜೊತೆಗೆ ಅವರ ಬಾಲ್ಯ, ಶಿಕ್ಷಣ, ಕಲಾಬದುಕು, ಕಲಾಕೃತಿಗಳ ವಿಶ್ಲೇಷಣೆಯು ಈ ಪುಸ್ತಕದಲ್ಲಿದೆ. ಕುಪ್ಪಣ್ಣ ಕಂದಗಲ್ ಕೃತಿ ರಚಿಸಿದ್ದಾರೆ.[೨೦] ಈ ಕೃತಿಯು ಖಂಡೇರಾವರ ಕಲಾಬದುಕಿನ ಬಗ್ಗೆ ಹೆಚ್ಚಿನ ಗಮನ ಹರಿಸಿದೆಯೇ ವಿನಃ ಅವರ ಕಲೆಮತ್ತು ಕಲಾಕೃತಿಗಳ ಬಗೆಗೆ ತೀರಾ ಕಡಿಮೆ ಎನ್ನಬಹುದಾದ ವಿಚಾರಗಳನ್ನು ತಿಳಿಸುತ್ತದೆ. ರಾಜ್ಯದಲ್ಲಿ ಅವರೊಬ್ಬ ವಿಶಿಷ್ಟ ಶೈಲಿಯನ್ನು ಅಳವಡಿಸಿಕೊಂಡ ಕಲಾವಿದರು ಎಂಬುದಕ್ಕೆ ಕಾರಣಗಳನ್ನು ಹುಡುಕುವ ಪ್ರಯತ್ನ ಬೇಕಾಗಿತ್ತು.

**ಬಿ.ಕೆ. ಹುಬ್ಬಳ್ಳಿ :**

ಬೆಳಗಾಂವ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಮುಗಟಖಾನ್ ಹುಬ್ಬಳ್ಳಿ ಎಂಬ ಊರಿನವರಾದ ಬಿ.ಕೆ.ಹುಬ್ಬಳ್ಳಿಯವರ ಬಗ್ಗೆ ಡಿ.ಎಸ್. ಚೌಗಲೆ ಪುಸ್ತಕ ಬರೆದಿದ್ದಾರೆ.[೨೧] ಇದರಲ್ಲಿ ಬಿ.ಕೆ.ಹುಬ್ಬಳ್ಳಿಯವರ ಜೀವನ ಮತ್ತು ಕಲಾಕೃತಿಗಳ ಬಗ್ಗೆ ಮುಖ್ಯವಾಗಿ ಬಿಂಬಿಸಲಾಗಿದೆ. ಈ ಪುಸ್ತಕ ಒಳಗೊಂಡಿರುವ ಪ್ರಮುಖಂಶಗಳಲ್ಲಿ ಬಿ.ಕೆ. ಹುಬ್ಬಳ್ಳಿಯವರ ಬಾಲ್ಯ ಜೀವನ, ಪ್ರಾಥಮಿಕ ಮತ್ತು ಕಲಾಶಿಕ್ಷಣ, ಚಿತ್ರಕಲೆಗೆ ಆಕರ್ಷಿತವಾಗುವಂತೆ ಮಾಡಿದ ಘಟನಾವಳಿಗಳು, ಸುತ್ತಲಿನ ಪರಿಸರದಲ್ಲಿ ಚಿತ್ರಕಲೆಗೆ ದೊರೆತ ಪ್ರೋತ್ಸಾಹ, ಕಲಾಶಾಲೆಗಳಲ್ಲಿ ಪರೀಕ್ಷೆಗಾಗಿ ಸಿದ್ಧರಾಗುತ್ತಿದ್ದ ಪರಿ, ಎಲಿಮೆಂಟರಿ

---

೨೦. ಕುಪ್ಪಣ್ಣ ಕಂದಗಲ್ : ಜೆ.ಎಸ್.ಖಂಡೇರಾವ್ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು –೧೯೯೯

೨೧. ಡಿ.ಎಸ್. ಚೌಗಲೆ : ಬಿ.ಕೆ.ಹುಬ್ಬಳ್ಳಿ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು– ೧೯೯೯.

ಪರೀಕ್ಷೆಯಲ್ಲಿ ಪಾಸಾದ ಸಂತೋಷ, ಧಾರವಾಡದ ಹಾಲಭಾವಿ ಕಲಾಶಾಲೆಯಿಂದ ಮುಂಬೈ ಸರ್.ಜೆ.ಜೆ. ಕಲಾಶಾಲೆವರೆಗೆ ನಡೆದು ಬಂದ ಹಾದಿ, ಮುಂಬೈದಲ್ಲಿನ ಜೀವನ, ಮದುವೆ, ಸಾಂಸಾರಿಕ ಜೀವನ, ಇಂಗ್ಲೀಷ ಕಲಾವಿದರಪ್ರಭಾವ, ದೇಶಿತನದ ಸಂಸ್ಕಾರ, ಮುಂತಾದ ವಿಷಯಗಳು ಒಳಗೊಳ್ಳುತ್ತವೆ. ಇವುಗಳ ಜೊತೆಗೆ ರಾಜ್ಯ ಲಲಿತಕಲಾ ಅಕಾಡೆಮಿಯ ಸದಸ್ಯರಾಗಿ ಕಾರ್ಯನಿರ್ವಹಿಸಿದ ರೀತಿ, ಬೇರೆ ಬೇರೆ ಕಲಾಶಾಲೆ ಮತ್ತು ಕಲಾಶಿಬಿರಗಳಿಗೆ ಸಂದರ್ಶಕ ಕಲಾವಿದರಾಗಿ ಭೇಟಿ ನೀಡಿ, ಕಲಾಕೃತಿ ರಚನೆ ಮತ್ತು ಉಪನ್ಯಾಸ ನೀಡಿದ ವಿವರಗಳು ಮತ್ತು ಅವರಿಗೆ ಸಂದಿರುವ ಪ್ರಶಸ್ತಿ ಗೌರವಗಳ ಕುರಿತಾಗಿ ವಿವರಗಳು ಈ ಪುಸ್ತಕದಲ್ಲಿವೆ.

ಈ ಪುಸ್ತಕದಲ್ಲಿ ನಿರೂಪಿತಗೊಂಡಿರುವ ಅಂಶಗಳಿಂದ ಪ್ರಮುಖವಾಗಿ ಬಿ.ಕೆ. ಹುಬ್ಬಳ್ಳಿಯವರ ರೇಖಾಚಿತ್ರ, ಜಲವರ್ಣ ಮತ್ತು ತೈಲವರ್ಣ ಕೃತಿಗಳ ರಚನೆಯ ವಿಧಾನಗಳು ತಿಳಿದುಬರುತ್ತವೆ. ಜೊತೆಗೆ ಇವರು ಕೇವಲ ಚಿತ್ರಕಲಾವಿದರಾಗಿರದೇ ನಾಟ್ಯ ಸಂಗೀತ, ಶಿಲ್ಪಕಲಾ ಪ್ರಕಾರಗಳಲ್ಲಿ ಆಸಕ್ತಿ ಉಳ್ಳವರಾಗಿದ್ದು ಅವುಗಳಲ್ಲಿಯೂ ಭಾಗಿಯಾಗುತ್ತಿದ್ದರು.

**ವಿಜಯ ಸಿಂಧೂರ :**

ಕರ್ನಾಟಕದ ಸಮಕಾಲೀನ ಕಲಾಕ್ಷೇತ್ರದಲ್ಲಿ ಗಮನಾರ್ಹ ಸಾಧನೆ ಮಾಡಿರುವ ವಿಜಯ ಸಿಂಧೂರರ ಬಗ್ಗೆ ಕೆ.ವಿ. ಸುಬ್ರಹ್ಮಣ್ಯ ಪುಸ್ತಕ ಬರೆದಿದ್ದಾರೆ.[೨೨] ಇದು ಅವರ ಕಲೆ ಮತ್ತು ಜೀವನ ಕುರಿತಾಗಿದೆ. ಉತ್ತರ ಕರ್ನಾಟಕದ ಜಮಖಂಡಿಯಲ್ಲಿ ಜನಿಸಿ ಅಲ್ಲಿಯೇ ನೆಲೆಸಿರುವ ರಾಷ್ಟ್ರೀಯ ಪ್ರಶಸ್ತಿ ಪುರಸ್ಕೃತ ಚಿತ್ರಕಲಾವಿದ ಶ್ರೀ ವಿಜಯ ಸಿಂಧೂರರ ಕಲಾಜೀವನ ಕುತೂಹಲಕಾರಿಯಾಗಿದೆ. ಇದರಲ್ಲಿ ಅವರ ಬಾಲ್ಯ ಶಿಕ್ಷಣ, ನಂತರ ಜೆ.ಜೆ.ಕಲಾಶಾಲೆಯ ಕಲಾಶಿಕ್ಷಣ, ಅನುಭವಗಳು ತುಂಬಿಕೊಂಡಿವೆ. ರಾಷ್ಟ್ರೀಯ ಖ್ಯಾತ ಕಲಾವಿದರಾದ ಜತಿನ್‌ದಾಸ್ ಕಾಮ್‌ಕರ್, ಪುಂಚಿತ್ತಾಯ ಮುಂತಾದವರ ಸ್ನೇಹ, ಅವರೊಂದಿಗಿನ ಅನುಭವ, ಇವರ ಚಿತ್ರರಚನೆಯ ಶೈಲಿ, ತಂತ್ರಗಾರಿಕೆ, ಇವುಗಳ ಜೊತೆಗೆ ಇವರ ಸ್ಥಳೀಯ ಜೀವನ, ಭಾವಚಿತ್ರಗಳು, ಪ್ರಕೃತಿ ಚಿತ್ರಗಳಲ್ಲಿನ ಪ್ರಬಲ ಕೈಚಳಕ ತೈಲವರ್ಣದಲ್ಲಿ ಇವರ ವಿಶಿಷ್ಟ ಪ್ರಯೋಗಗಳು, ಪಡೆದ ಪ್ರಶಸ್ತಿಗಳು, ವ್ಯಕ್ತಿ ವಿವರ, ಪ್ರದರ್ಶನಗಳು ಹಾಗೂ ಕಲಾಕೃತಿಗಳಲ್ಲಿನ ಭಾವಪ್ರತಿಕ್ರಿಯೆ, ಅಭಿವ್ಯಕ್ತಿ ಮುಂತಾದ ವಿಷಯಗಳು ಸ್ಥೂಲವಾಗಿ ವ್ಯಕ್ತಗೊಂಡಿವೆ.

**ಎಂ.ಬಿ. ಪಾಟೀಲ :**

ಕರ್ನಾಟಕದ ಖ್ಯಾತ ಕಲಾವಿದರಲ್ಲಿ ಒಬ್ಬರಾದ ಎಂ.ಬಿ. ಪಾಟೀಲರ ಬಗ್ಗೆ ವಿ.ಎಸ್. ವೆಂಕಟಲಕ್ಷ್ಮೀಯವರು ಪುಸ್ತಕ ಬರೆದಿದ್ದಾರೆ.[೨೩] ಇದು ಇವರ ಕಲೆ, ಕಲಾಕೃತಿ ಮತ್ತು ಕಲಾಬದುಕನ್ನು ಕುರಿತಾಗಿದೆ. ಇದರಲ್ಲಿ ಸೂಕ್ತ ಕಲಾ ಹಿನ್ನೆಲೆಯ ಪರಿಚಯ, ಅವರ ಕಲಾ ಸೆಳೆತಕ್ಕೆ ಕಾರಣವಾದ ಅವರ ಊರಿನ ಪರಿಸರ, ಕುಟುಂಬದ ವ್ಯವಸ್ಥೆ, ಇವರ ಅಭಿನಯ, ಚಿತ್ರಕಲೆಗೆ ಪ್ರವೇಶ ಪಡೆದ ರೀತಿಗಳನ್ನು ಹೇಳಲಾಗಿದೆ. ಅಲ್ಲದೇ ಖ್ಯಾತ ಕಲಾವಿದರಿಂದ ಕಲಾಭ್ಯಾಸ, ಜೆ.ಜೆ.ಶಾಲೆಯಲ್ಲಿ ವ್ಯಾಸಂಗದ ದಿನಗಳ ಪಡಿಪಾಟಲು, ಉದ್ಯೋಗಕ್ಕಾಗಿ ನಡೆಸಿದ ಹುಡುಕಾಟ, ಅನುಭವಿಸಿದ ವಿಚಿತ್ರ ಅನುಭವಗಳು, ಡ್ರಾಯಿಂಗ್ ಟೀಚರ್ ಆಗಿ ಸ್ವಲ್ಪಕಾಲ ಸೇವೆ ಸಲ್ಲಿಸಿದ ಪ್ರಸಂಗಗಳು ಉಲ್ಲೇಖಗೊಂಡಿವೆ. ನಂತರ ವಿವಾಹಬಂಧನ, ಚಿತ್ರಕಲಾ ಪ್ರದರ್ಶನಗಳಲ್ಲಿ ಇವರಪಾಲುಗಾರಿಕೆ, ಕಲಾಕೃತಿ ರಚನೆಯಲ್ಲಿನ

---

೨೨. ಕೆ.ವಿ.ಸುಬ್ರಹ್ಮಣ್ಯ : ವಿಜಯ ಸಿಂಧೂರ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦.

೨೩. ಬಿ.ಎಸ್. ವೆಂಕಟಲಕ್ಷ್ಮೀ : ಎಂ.ಬಿ.ಪಾಟೀಲ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦.

ತಂತ್ರಗಾರಿಕೆ, ನೈಪುಣ್ಯ, ಕೈಚಳಕದ ವಿವರಗಳಿವೆ. ಸಂಘಟನೆ, ಸ್ಮರಣೀಯ ಮೈಲುಗಲ್ಲುಗಳ ಬಗ್ಗೆ, ಪ್ರಶಸ್ತಿ ಪುರಸ್ಕಾರಗಳು, ವ್ಯಕ್ತಿ ವಿವರಗಳಿವೆ, ಪ್ರಾತ್ಯಕ್ಷಿಕೆ, ಪಾಲ್ಗೊಂಡ ಕಲಾಶಿಬಿರಗಳ ವಿವರ ಕಲಾಕೃತಿಗಳ ಸಂಗ್ರಹಗಳ ಬಗ್ಗೆ ಲೇಖಕರು ದಾಖಲಿಸಿದ್ದಾರೆ.

**ಶಾಂತಲಿಂಗಪ್ಪ ಪಾಟೀಲ :**

ಗುಲಬರ್ಗಾ ವಿಭಾಗದ ಕಲಾವಿದರಾದ ಶಾಂತಲಿಂಗಪ್ಪ ಪಾಟೀಲರ ಕಲಾಜೀವನ, ಸಾಧನೆ ಕುರಿತು ಎಚ್.ವ್ಹಿ. ಮಂತಟ್ಟಿಯವರು ಪುಸ್ತಕ ಬರೆದಿದ್ದಾರೆ.[೨೪] ಕಲಬುರ್ಗಿ ಜಿಲ್ಲೆಯ ಆಳಂದ ತಾಲೂಕಿನ ನಿಂಬಾಳ ಗ್ರಾಮದಲ್ಲಿ ಜನಿಸಿದ ಶಾಂತಲಿಂಗಪ್ಪನವರ ತಂದೆ ಗಿರೆಪ್ಪ ಮತ್ತು ತಾಯಿ ನಿಂಗಮ್ಮ ಕೃಷಿ ಪ್ರಾಮುಖ್ಯತೆ ಇರುವ ಕುಟುಂಬದಲ್ಲಿ ಹುಟ್ಟಿದ ಶಾಂತಲಿಂಗಪ್ಪನವರು ಬಾಲ್ಯದಲ್ಲಿಯೇ ಅಚ್ಚ ಹಸಿರ ಹೊಲಗಳು, ಗಿಡ-ಮರಗಳು, ಪಕ್ಷಿಗಳ ಇಂಚರ ಇವೆಲ್ಲವನ್ನು ಆಸ್ವಾದಿಸುತ್ತಾ ಪ್ರಕೃತಿಯ ಮಡಿಲಲ್ಲಿ ತಲ್ಲೀನರಾಗಿರುತ್ತಿದ್ದರು. ಶಾಂತಲಿಂಗಪ್ಪ ಪಾಟೀಲರು ಭಾರತೀಯ ಸಂಸ್ಕೃತಿಯನ್ನು ಆಳವಾಗಿ ಪ್ರೀತಿಸುತ್ತಿದ್ದರು. ಬಾಲ್ಯದಿಂದಲೇ ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳನ್ನು ಕಥೆಗಳ ರೂಪದಲ್ಲಿ ಕೇಳಿ ಅವುಗಳಿಂದ ಪ್ರಭಾವಿತರಾಗಿದ್ದರು. ಚಿತ್ರಕಲೆ ಇವರ ಅಭ್ಯಾಸದ ವಸ್ತುವಾದದರೂ, ಶಿಲ್ಪಕಲೆಯಲ್ಲಿಯೂ ಅಷ್ಟೇ ಗಂಭೀರವಾಗಿ ತೊಡಗಿಸಿಕೊಂಡಿದ್ದರು.

ನಿಜಾಮರ ಒಡೆತನದಲ್ಲಿದ್ದ ರಾಜಾ ದಿನಕರ ಎಂಬುವರ ಸ್ಟುಡಿಯೋದಲ್ಲಿದ್ದು, ಕಲಾ ರಚನೆಯಲ್ಲಿ ತೊಡಗಿದ ಪಾಟೀಲರಿಗೆ ಅವರ ಆಸ್ಥಾನದಲ್ಲಿ ವಿಶೇಷ ಸ್ಥಾನ ದೊರೆತಿತ್ತು. ನಿಜಾಮರ ಸಂಗ್ರಹಾಲಯದಲ್ಲಿ ಪಾಟೀಲರು ಚಿತ್ರಿಸಿದ ಭಾವ ಚಿತ್ರವನ್ನು ಪ್ರದರ್ಶಿಸಲಾಗಿದೆ. ಈ ಚಿತ್ರ ನಿಜಾಮರ ಸೊಸೆಯದಾಗಿದೆ. ಇವಳು ಲಾಹೋರಿನಲ್ಲಿ ಶ್ರೇಷ್ಠ ನಟಿಯಾಗಿದ್ದಳು. ತೈಲವರ್ಣದಲ್ಲಿ ರಚಿಸಿದ ಈ ಚಿತ್ರವು ಜನಾಕರ್ಷಣೆಯನ್ನು ಇಂದಿಗೂ ಉಳಿಸಿಕೊಂಡಿದೆ.

ಈ ಪುಸ್ತಕವು ಒಳಗೊಂಡ ಪ್ರಮುಖ ಅಂಶಗಳು ಹೀಗಿವೆ. ಹೈದರಾಬಾದ್ ಕರ್ನಾಟಕ ಭಾಗದ ಖ್ಯಾತ ಕಲಾವಿದ ಶ್ರೀ. ಶಾಂತಲಿಂಗಪ್ಪ ಪಾಟೀಲರ ಚಿತ್ರಕಲೆ ಹಿನ್ನೆಲೆ, ಕುಟುಂಬ ಜೀವನ, ಜೆ.ಜೆ.ಕಲಾಶಾಲೆಯನ್ನು ಸೇರಿದ ಬಗೆ, ವ್ಯಾಸಂಗ, ನಂತರ ನಿಜಾಮರ ಆಸ್ಥಾನದಲ್ಲಿ ಸ್ಥಾನ ಪಡೆದದ್ದು, ಅಲ್ಲಿ ಪ್ರಮುಖ ಚಿತ್ರಗಳನ್ನು ರಚಿಸಿದ್ದು, ತೈಲಚಿತ್ರಣದವಿಧಾನ, ಮೂರ್ತಿಶಿಲ್ಪದರಚನೆ, ಛಾಯಾಚಿತ್ರಗಳಲ್ಲಿನ ಪರಿಣತಿಯ ಬಗ್ಗೆ, ಕಲಾಕೃತಿಗಳ ವಿಶ್ಲೇಷಣೆ ಮತ್ತು ಕಲಾವಿದರ ಕಲಾಪ್ರದರ್ಶನಗಳು, ಜೆ.ಜೆ. ಕಲಾಶಾಲೆಯಲ್ಲಿ ಕೆಲವು ಕಾಲ ಉಪಾಧ್ಯಾಯರಾಗಿ ಸಲ್ಲಿಸಿದ ಸೇವೆಯ ಬಗ್ಗೆ ಸ್ಥೂಲವಾಗಿ ಹೇಳಲಾಗಿದೆ. ಈ ಪುಸ್ತಕವು ಶಾಂತಲಿಂಗಪ್ಪ ಪಾಟೀಲರ ಕಲಾಬದುಕಿನ ಮೂಲಕ ಹೈದರಾಬಾದ್ ಕರ್ನಾಟಕದ ಅಂದಿನ ಕಲಾ ಪರಿಸ್ಥಿತಿ ಮತ್ತು ಹೈದರಾಬಾದ್ ನಿಜಾಮರ ಆಸ್ಥಾನದ ಕಲೆಯ ಪ್ರೋತ್ಸಾಹ, ಕಲಾವಿದರ ಸ್ಥಿತಿಗತಿಗಳ ಬಗ್ಗೆ ಪರೋಕ್ಷವಾಗಿ ತಿಳಿಸುತ್ತದೆ.

**ಎಸ್.ಎಮ್. ಪಂಡಿತ :**

ಕರ್ನಾಟಕದ ನೈಜ ಚಿತ್ರಕಲಾ ಕ್ಷೇತ್ರದಲ್ಲಿ ಪ್ರಮುಖವಾಗಿ ಗುರುತಿಸುವ ಹೆಸರು ಎಸ್.ಎಮ್. ಪಂಡಿತರದಾಗಿದೆ. ಗುಲಬರ್ಗಾ ವಿಭಾಗದ ಕೀರ್ತಿಯನ್ನು ಕಲಾವಲಯದಲ್ಲಿ ಉತ್ತುಂಗಕ್ಕೇರಿಸಿದ ಪಂಡಿತರ ಬಗ್ಗೆ ವಿ.ಜಿ. ಅಂದಾನಿಯವರು ಪುಸ್ತಕ ಬರೆದಿದ್ದಾರೆ.[೨೫] ಇದರಲ್ಲಿ

---

೨೪. ಎಚ್.ವ್ಹಿ. ಮಂತಟ್ಟಿ : ಶಾಮತಲಿಂಗಪ್ಪ ಪಾಟೀಲ :ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦.

೨೫. ಎಸ್.ಎಮ್. ಪಂಡಿತ : ವಿ.ಜಿ.ಅಂದಾನಿ : ಪ್ರಸಾರಾಂಗ ಗುಲಬರ್ಗಾ ವಿಶ್ವವಿದಾಲಯ, ಗುಲಬರ್ಗಾ-೨೦೦೫.

ಪಂಡಿತರ ಬಾಲ್ಯ.. ಕಲೆಯ ಒಲವು, ಕಲಾಶಿಕ್ಷಣ, ಕಲಾಬದುಕು, ಮುಂಬೈಯಲ್ಲಿನ ಅವರ ಕಲಾರಚನೆಯ ಸ್ಥಿತ್ಯಂತರಗಳು, ಗುಲಬರ್ಗಾದೊಂದಿಗಿನ ಅವರ ಆತ್ಮೀಯ ಒಡನಾಟಗಳು ಬಿಂಬಿತವಾಗಿವೆ. ಇದಲ್ಲದೆ ಅವರ ಕೌಟುಂಬಿಕ ಜೀವನದ ಏರಿಳಿತಗಳು, ಅವರ ಶಿಷ್ಯರ ಕಲಿಕೆಗಳು ಇಲ್ಲಿ ನಿರೂಪಿತಗೊಂಡಿವೆ.

ಈ ಕೃತಿಯಲ್ಲಿ ಪಂಡಿತ ಅವರ ಕಲಾಕೃತಿ ರಚನೆಯ ವಿಧಾನಗಳು, ಶೈಲಿಗಳು, ಮಾಧ್ಯಮಗಳು, ಕಲಾ ಪ್ರದರ್ಶನಗಳು, ಮಾರಾಟ, ಪ್ರಶಸ್ತಿ, ಗೌರವಗಳು, ವಸ್ತು ವಿಷಯಗಳ ಬಗ್ಗೆ ಹೇಳಲಾಗಿದೆ. ಅದೇ ರೀತಿ ಕೃತಿ ವಿಶ್ಲೇಷಣೆಯಲ್ಲಿ ಪೌರಾಣಿಕ ಚಿತ್ರಗಳು, ಐತಿಹಾಸಿಕ ಕೃತಿಗಳು, ಭಾವಚಿತ್ರಗಳು, ವ್ಯಕ್ತಿಚಿತ್ರಗಳು ಮುಂತಾದವುಗಳ ಬಗ್ಗೆ ವಿವರಣೆ ಇದೆ.

ಕಲಾವಿದರ ದೃಷ್ಟಿಕೋನದಿಂದ ನೋಡಿದಾಗ ಪಂಡಿತರ ಇತರ ಪುಸ್ತಕಗಳಿಗಿಂತ ಇದು ಸ್ವಲ್ಪ ಭಿನ್ನವಾಗಿ ಮೂಡಿ ಬಂದಿದೆ. ಇಲ್ಲಿ ಪಂಡಿತರ ಕಲಾಶೈಲಿ, ಮಾಧ್ಯಮ, ರಚನಾವಿಧಾನ ವಸ್ತುವಿಷಯಗಳಂತಹ ಸಂಗತಿಗಳ ಬಗ್ಗೆ ಸ್ಥೂಲವಾಗಿ ಚರ್ಚಿಸಿದರೂ ಕಲೆ ಮತ್ತು ಕಲಾಕೃತಿಗಳ ಬಗೆಗೆ ಯಾವ ವಿಚಾರಗಳೂ ಬಿಂಬಿಸಲ್ಪಟ್ಟಿಲ್ಲ. ಪಂಡಿತರ ಪೌರಾಣಿಕ ವಿಷಯಗಳ ಬಗೆಗಿನ ಅತಿರಂಜಿತ ವರ್ಣನೆಗಳು, ದೈವೀಕತೆಯ ಆರೋಪ ಇಂತಹ ಸಂಗತಿಗಳನ್ನು ಕಲಾಬರಹದಲ್ಲಿ ಕಡಿಮೆ ಮಾಡಿದಷ್ಟೂ ಖಚಿತತೆ ಉಂಟಾಗುತ್ತದೆ.

ಉತ್ತರ ಕರ್ನಾಟಕದ ಕಲಾವಿದರ ಬಗ್ಗೆ ಬಂದ ಚಿತ್ರಕಲಾ ಸಾಹಿತ್ಯವನ್ನು ಗಮನಿಸಿದಾಗ ಅನೇಕ ವಿಷಯಗಳು ತಿಳಿದುಬರುತ್ತವೆ. ದಂಡಾವತಿಮಠ, ಡಿ.ಜಿ.ಬಡಿಗೇರ, ಎಂ.ವ್ಹಿ.ಮಿಣಜಗಿ ಮತ್ತು ಎಸ್.ಎಂ.ಪಂಡಿತರ ಬಗ್ಗೆ ಒಂದಕ್ಕಿಂತ ಹೆಚ್ಚಿನ ಪುಸ್ತಕಗಳು ಪ್ರಕಟಗೊಂಡಿವೆ. ಉತ್ತರ ಕರ್ನಾಟಕದ ಬಹುಮಟ್ಟಿನ ಕಲಾವಿದರು ಮುಂಬೈ ಜೆ.ಜೆ.ಕಲಾಶಾಲೆಯಲ್ಲಿ ಕಲಾಶಿಕ್ಷಣ ಪಡೆದುಕೊಂಡಿರುವುದು ತಿಳಿದು ಬರುತ್ತದೆ. ಇವರೆಲ್ಲರ ನಡುವಿನ ಮತ್ತೊಂದು ಸಾಮ್ಯತೆಯ ಅಂಶವೆಂದರೆ ಬಡತನದ ಸ್ಥಿತಿಯಲ್ಲಿ ಕಲಾಶಿಕ್ಷಣ ಪಡೆದುಕೊಂಡಿರುವುದಾಗಿದೆ. ದಂಡಾವತಿಮಠರ ನೂತನ ಕಲಾಮಂದಿರ ಹೆಚ್ಚಿನ ಕಲಾವಿದರಿಗೆ ಆಶ್ರಯತಾಣವಾಗಿರುವುದು ಗಮನಿಸುವ ಅಂಶವಾಗಿದೆ.

ಈ ಕಲಾವಿದರು ತಮ್ಮ ವಯಕ್ತಿಕ ಶೈಲಿಯಲ್ಲಿ ಚಿತ್ರಿಸುತ್ತಿದ್ದರೂ ಪಾಶ್ಚಾತ್ಯ ಪ್ರೇರಿತ ವಿಕ್ಟೋರಿಯನ್ ಕಲಾಶೈಲಿಯ ಪ್ರಭಾವ ಎಲ್ಲರಲ್ಲೂ ಕಂಡುಬರುತ್ತದೆ. ಪಾಶ್ಚಾತ್ಯ ಪದ್ಧತಿಯ ಚಿತ್ರರಚನೆ ಮಾಡುತ್ತಿದ್ದರೂ ಹೆಚ್ಚಿನವರು ಚಿತ್ರರಚನೆಗಾಗಿ ಭಾರತೀಯ ಧಾರ್ಮಿಕ ವಿಷಯಗಳನ್ನು ಆಯ್ದುಕೊಂಡಿರುವುದು ತಿಳಿದುಬರುತ್ತದೆ. ಇಂತಹ ಅನೇಕ ಸಂಗತಿಗಳು ಮತ್ತು ಆಯಾ ವ್ಯಕ್ತಿಗಳ ನಿತ್ಯಬದುಕಿನ ವಿವರಗಳು ಇಲ್ಲಿ ಮೂಡಿಬಂದಿದ್ದು, ಕಲೆ, ಕಲಾಕೃತಿ, ಕಲಾವಿಮರ್ಶೆಯ ಬಗೆಗಿನ ಕೊರತೆ ಕಂಡುಬರುತ್ತದೆ.

**೨. ದಕ್ಷಿಣ ಕರ್ನಾಟಕದ ಕಲಾವಿದರ ಬಗ್ಗೆ ಬಂದ ಸಾಹಿತ್ಯ :**

ದಕ್ಷಿಣ ಕರ್ನಾಟಕದ ವ್ಯಾಪ್ತಿಯನ್ನು ಅಧ್ಯಯನದ ಅನುಕೂಲಕ್ಕಾಗಿ ಮೈಸೂರು, ಬೆಂಗಳೂರು, ಚಾಮರಾಜನಗರ, ಶಿವಮೊಗ್ಗ, ಹಾಸನ, ಕೋಲಾರ, ಚಿತ್ರದುರ್ಗ, ತುಮಕೂರು, ಮಂಡ್ಯ, ಚಿಕ್ಕಮಗಳೂರು ಜಿಲ್ಲೆಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಚಿತ್ರಕಲಾವಿದರನ್ನು ದಕ್ಷಿಣ ಕರ್ನಾಟಕದ ಕಲಾವಿದರು ಎಂದು ಪರಿಗಣಿಸಿ ಅವರ ಕುರಿತು ಬಂದ ವ್ಯಕ್ತಿ ಅಧ್ಯಯನ ಸಾಹಿತ್ಯವನ್ನು ಈ ಕೆಳಗಿನಂತೆ ವಿವೇಚಿಸಲಾಗಿದೆ.

**ಎಂ. ವೀರಪ್ಪ :**

ಕರ್ನಾಟಕದ ಕಲಾಗುರುಗಳಿಗೆ ಗುರುಗಳಾಗಿದ್ದ ಮತ್ತು ಹೆಚ್ಚಿನ ಸೇವೆಯನ್ನು ಕಲೆಗಾಗಿ ಮುಡುಪಾಗಿಟ್ಟಿದ್ದ ಶ್ರೀ. ಎಂ. ವೀರಪ್ಪನವರ ಕಲಾ ಜೀವನವನ್ನು ನಿರೂಪಿಸಿರುವ ಪುಸ್ತಕವನ್ನು ಪಿ.ಆರ್. ತಿಪ್ಪೇಸ್ವಾಮಿಯವರು ಬರೆದಿದ್ದಾರೆ.[೨೬] ಇದರಲ್ಲಿ ವೀರಪ್ಪನವರ ಜನನ, ಜನ್ಮಸ್ಥಳದ ಪರಿಸರ, ಬಾಲ್ಯಶಿಕ್ಷಣ, ಮೈಸೂರಿನ ಚಾಮರಾಜೇಂದ್ರ ಟೆಕ್ನಿಕಲ್ ಇನ್ಸಟ್ಯೂಟನ್ನು ಸೇರಿದ ಬಗೆ, ಆರಂಭಿಕ ಹಂತದಲ್ಲಿ ಹೇಳಲಾಗಿದೆ. ಆಗಿನ ನ್ಯಾಯಮೂರ್ತಿಗಳಾದ ಜಿ.ಪರಮಶಿವಯ್ಯನವರ ಪರಿಚಯದಿಂದ ಜೆ. ಜೆ. ಕಲಾಶಾಲೆಗೆ ಸೇರಿದ್ದು, ಅಲ್ಲಿ ಖ್ಯಾತನಾಮರ ಮಾರ್ಗದರ್ಶನದಲ್ಲಿ ಕಲಾಭ್ಯಾಸ ಪೂರೈಸಿದ್ದು ದೊಡ್ಡ ಸಾಧನೆಯಾಗಿದೆ. ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಕಲಾಶಾಲೆಯಲ್ಲಿ ಅಧ್ಯಾಪಕರಾಗಿ ಸೇವೆಸಲ್ಲಿಸಿ, ಸಂಸ್ಥಾನದ ಉತ್ತಮ ಕಲಾವಿದರೆನಿಸಿಕೊಂಡಿದ್ದು ವಿಶಿಷ್ಟವಾಗಿದೆ. ಸಂಸಾರ ನಿರ್ವಹಣೆ, ವಿದ್ಯಾರ್ಥಿಗಳಿಗೆ ಪ್ರೋತ್ಸಾಹ, ಜಪಾನ್ ಪ್ರವಾಸ, ಅಲ್ಲಿನ ಅನುಭವಗಳು, ಕಲಾ ಚಟುವಟಿಕೆಗಳ ಬಗ್ಗೆ ವಿವರಗಳು ಈ ಕೃತಿಯಲ್ಲಿವೆ. ಇವರ ಆದರ್ಶ ವ್ಯಕ್ತಿತ್ವ, ಕಲಾಶಿಕ್ಷಣಕ್ಕೆ ಇವರ ದಕ್ಷ ಹೋರಾಟ, ಸನ್ಮಾನ, ಬಿರುದು ಬಾವಲಿಗಳ ಬಗ್ಗೆ ಸಂಕ್ಷಿಪ್ತವಾಗಿರುವ ನೋಟಗಳಿವೆ.

**ಎಸ್. ಆರ್. ಅಯ್ಯಂಗಾರ್ :**

ಮೈಸೂರು ಮಹಾರಾಜರ ಆಸ್ಥಾನದಲ್ಲಿ ಚಿತ್ರಕಲಾವಿದರಾಗಿ ಸೇವೆ ಸಲ್ಲಿಸಿದ ಎಸ್.ಆರ್. ಅಯ್ಯಂಗಾರ ಬಗ್ಗೆ ಅ.ಲ. ನರಸಿಂಹನ್ ಪುಸ್ತಕ ಬರೆದಿದ್ದಾರೆ.[೨೭] ಇವರ ಪೂರ್ಣ ಹೆಸರು ಶ್ರೀರಂಗ ಪಟ್ಟಣ, ಶ್ರೀನಿವಾಸ ರಂಗಸ್ವಾಮಿ ಅಯ್ಯಂಗಾರ್ ಎಂಬುದಾಗಿದೆ. ಕ್ರಿ.ಶ. ೧೮೯೮ ರಲ್ಲಿ ಶ್ರೀರಂಗ ಪಟ್ಟಣದಲ್ಲಿ ಜನ್ಮತಾಳಿದ ಎಸ್.ಆರ್. ಅಯ್ಯಂಗಾರ್ ಅವರ ಕುರಿತಾಗಿರುವ ಬಾಲ್ಯ, ಕಲಾಶಿಕ್ಷಣ, ಕಲಾವಿದರಾಗಿ ರೂಪುಗೊಂಡ ಬಗೆ, ಕಲಾಬದುಕಿನ ನೋವು ನಲಿವುಗಳು, ಏಳು-ಬೀಳುಗಳು ವ್ಯಕ್ತಗೊಂಡಿವೆ.

ಕಲಾನಿಲಯವಾಗಿದ್ದ ಮೈಸೂರು ಅರಮನೆ ೧೯೪೨ರಲ್ಲಿ ಅಯ್ಯಂಗಾರ್ ಅವರಿಗೆ ಆಶ್ರಯ ನೀಡಿತು. ಇಲ್ಲಿ ಅವರು ಸುಮಾರು ೬೦ಕ್ಕೂ ಹೆಚ್ಚು ತೈಲವರ್ಣ ಕಲಾಕೃತಿಯನ್ನು ರಚನೆ ಮಾಡಿದರು. ಇವುಗಳಲ್ಲಿ ಬಹುಪಾಲು ಚಿತ್ರಗಳು ರಾಜವಂಶಸ್ಥರು ಮತ್ತು ಅಧಿಕಾರಿಗಳ ಭಾವಚಿತ್ರ ಇಲ್ಲವೇ ವ್ಯಕ್ತಿ ಚಿತ್ರಗಳೇ ಆಗಿವೆ. ಮೈಸೂರು ಮಹಾರಾಜರು, ದಿವಾನರು ಮತ್ತು ಇನ್ನಿತರೆ ಅಧಿಕಾರಿಗಳ ಚಿತ್ರಗಳು ಇದರಲ್ಲಿ ಸೇರಿವೆ. ಅರಮನೆಯ ಕಲಾವಿದರಾಗಿದ್ದರಿಂದ ಅಯ್ಯಂಗಾರ್ ಸಹಜವಾಗಿಯೇ ಪ್ರಸಿದ್ಧಿಗೆ ಬಂದರು. ಇಂತಹ ಹಲವಾರು ಅಂಶಗಳು ಈ ಪುಸ್ತಕದಲ್ಲಿ ತೆರೆದುಕೊಂಡಿವೆ. ಜೊತೆಗೆ ಅವರ ಕಲಾಕೃತಿಗಳ ವಿಶ್ಲೇಷಣೆಯನ್ನೂ ಮಾಡಿರುವುದು ಔಚಿತ್ಯ ಪೂರ್ಣವೆನಿಸುತ್ತದೆ.

ಈ ಪುಸ್ತಕದ ಮೂಲಕ ಆಸ್ಥಾನ ಕಲಾವಿದರೊಬ್ಬರ ಕಲಾಶೈಲಿ, ಕಲಾಕೃತಿ ರಚನಾ ವಿಧಾನ ಮತ್ತು ಸಾಮಾಜಿಕವಾಗಿ ಅವರಿಗಿರುವ ಸ್ಥಾನಮಾನ, ಕಲಾವಿದರ ಸ್ಥಿತಿಗತಿ, ಇನ್ನುಳಿದ ಸಾಮಾನ್ಯ ಕಲಾವಿದರ ಜೊತೆಗಿನ ಹೋಲಿಕೆ, ವ್ಯತ್ಯಾಸಗಳಂತಹ ಅಂಶಗಳು ತಿಳಿದುಬರುತ್ತವೆ.

---

೨೬. ಪಿ.ಆರ್. ತಿಪ್ಪೇಸ್ವಾಮಿ : ಎಂ.ವೀರಪ್ಪ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೬.

೨೭. ಅ.ಲ.ನರಸಿಂಹನ್ : ಎಸ್.ಆರ್. ಅಯ್ಯಂಗಾರ್ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೭.

**ವೈ. ಸುಬ್ರಹ್ಮಣ್ಯರಾಜು :**

ಮೈಸೂರು ಸಾಂಪ್ರದಾಯಿಕ ಚಿತ್ರಕಲೆಯ ಕಲಾವಿದರಾದ ವೈ. ಸುಬ್ರಹ್ಮಣ್ಯರಾಜುರ ಬಗ್ಗೆ ಎಂ.ಎಸ್. ಚಂದ್ರಶೇಖರ್ ಪುಸ್ತಕ ಬರೆದಿದ್ದಾರೆ.[೨೮] ಮೈಸೂರು ಶೈಲಿಯ ಚಿತ್ರರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಈ ಕಲಾವಿದರು ಆ ಶೈಲಿಯ ಉಳಿವಿಗಾಗಿ, ಮುಂದುವರಿಕೆಗಾಗಿ ಮತ್ತು ಪ್ರಾಚೀನ ಕಲಾಕೃತಿಗಳ ಸಂಗ್ರಹಕ್ಕಾಗಿ ಅವಿರತವಾಗಿ ದುಡಿದವರು. ಅನೇಕ ಜನ ಶಿಷ್ಯರಿಗೆ ಮೈಸೂರು ಶೈಲಿಯಲ್ಲಿ ಚಿತ್ರಿಸಲು ತರಬೇತಿ ಕೊಟ್ಟವರು, ಹಾಗೂ ಈ ಕಲಾ ಶೈಲಿಯ ಬಗ್ಗೆ ನಾಡಿನಾದ್ಯಂತ ಕಾರ್ಯಾಗಾರಗಳನ್ನು ನಡೆಸಿ ಕೊಟ್ಟವರು ವೈ. ಸುಬ್ರಹ್ಮಣ್ಯರಾಜುರವರು.

ಈ ಕೃತಿಯಲ್ಲಿ ಅವರ ಬಾಲ್ಯ, ಶಿಕ್ಷಣ, ಕಲಾಶಿಕ್ಷಣ, ಕಲಾಬದುಕು ಮತ್ತು ಕಲಾಕೃತಿಗಳ ವಿಶ್ಲೇಷಣೆಯು ಪ್ರಮುಖವಾಗಿ ಮೂಡಿ ಬಂದಿದೆ. ಇವರ ಕಲಾಜೀವನ ಕಟ್ಟಿಕೊಡುವ ಸಂದರ್ಭದಲ್ಲಿ ವಿಶಿಷ್ಟವಾದ ಮತ್ತು ಆಕರ್ಷಕವಾದ ತಲೆಬರಹಗಳನ್ನು ಕೊಡಲಾಗಿದೆ. ಕಾರ್ಯತತ್ಪರತೆ, ಎಲ್ಲಾ ಕಲಾವಿದರೇ. ದೀಪದ ಹೊದಿಕೆ, ನುರಿತ ಗುರುಗಳು, ಶಿಷ್ಯವೃಂದ, ಡಿಪ್ಲೋಮಾ ಗಳಿಕೆ, ಖ್ಯಾತ ಪ್ಯಾನಲ್‌ಗಳು, ಎಲ್ಲೆಡೆ ಮಾನ್ಯತೆ ಮುಂತಾದ ತಲೆಬರಹಗಳಿವೆ.

ಈ ಕೃತಿಯಲ್ಲಿ ಕಲಾವಿದರು ರಚಿಸಿದ ಚಿತ್ರಕೃತಿಗಳನ್ನು ಸಂದರ್ಭಕ್ಕನುಸಾರವಾಗಿ ಹಾಕಲಾಗಿದೆ. ಸಂಯೋಜನಾ ಚಿತ್ರ, ರೇಖಾಚಿತ್ರ ಮತ್ತು ಮೈಸೂರು ದಸರಾ ಮೆರವಣಿಗೆಯ ಚಿತ್ರಗಳ ವಿಶ್ಲೇಷಣೆ ಕಂಡು ಬರುತ್ತವೆ. ಪ್ರಸ್ತುತ ಪುಸ್ತಕದಲ್ಲಿ ಸಾಂಪ್ರದಾಯಿಕ ಕಲಾವಿದರು ಚಿತ್ರರಚನೆಯಲ್ಲಿ ಇನ್ನೂ ಉಳಿಸಿಕೊಂಡಿರುವ ಪ್ರಾಕೃತಿಕ ಬಣ್ಣಗಳ ತಯಾರಿಕೆ, ಬಣ್ಣದ ಮೂಲಗಳು, ಅವುಗಳ ಗುಣಮಟ್ಟ, ದೀರ್ಘಕಾಲೀನ ಬಾಳಿಕೆ ಇಂತಹ ವಿಚಾರಗಳ ಬಗ್ಗೆ ಚರ್ಚೆ ಇಲ್ಲದ್ದು ಕೊರತೆಯಾಗಿ ಕಂಡು ಬರುವುದು.

**ಎನ್.ಎಸ್. ಸುಬ್ಬುಕೃಷ್ಣ :**

ಕರ್ನಾಟಕದ ಪ್ರಸಿದ್ಧ ಕಲಾವಿದರಲ್ಲಿ ಒಬ್ಬರಾದ ಎನ್.ಎಸ್. ಸುಬ್ಬುಕೃಷ್ಣರ ಬಗ್ಗೆ ಎಚ್.ವಿ. ಗಾಯತ್ರಿಯವರು ಪುಸ್ತಕ ಬರೆದಿದ್ದಾರೆ.[೨೯] ಸುಬ್ಬುಕೃಷ್ಣ ಅವರ ಸಂಕ್ಷಿಪ್ತ ಜೀವನ ಮತ್ತು ಕಲೆಯನ್ನು ತಿಳಿಸುವ ಚಿಕ್ಕಪುಸ್ತಕ ಇದಾಗಿದೆ. ಈ ಕೃತಿಯಲ್ಲಿ ಪ್ರಮುಖವಾಗಿ ಕಲಾವಿದರ ಬಾಲ್ಯ, ಶಿಕ್ಷಣ, ಸಂಗೀತದ ಬಗೆಗಿನ ಆಸಕ್ತಿ, ಕಲಾಕೃತಿಗಳ ರಚನೆಯ ಬಗ್ಗೆ ವಿವರಗಳಿವೆ. ಚಿತ್ರಕಲಾವಿದರಾಗಲು ಸುಬ್ಬುಕೃಷ್ಣ ಅವರಿಗೆ ಪ್ರೇರಣೆ ನೀಡಿದವರ ವಿವರ, ಚಿತ್ರ ರಚನೆಯ ವಿಧಾನ, ಉಪಯೋಗಿಸುತ್ತಿದ್ದ ಪಾಶ್ಚಾತ್ಯ ಬಣ್ಣಗಳು, ಮಾಧ್ಯಮಗಳು, ಕೆಂಪು ಬಣ್ಣದ ವಿಶೇಷತೆಯ ಬಗ್ಗೆ ಮಾಹಿತಿ ಕಂಡು ಬರುತ್ತದೆ. ಭಾರತದ ಪ್ರಧಾನಿ ಪಂಡಿತ ನೆಹರೂ ಅವರು ಇವರಿಗೆ ಚಿತ್ರಣಕ್ಕಾಗಿ ಕೆಲವು ದಿನಗಳವರೆಗೆ ರೂಪದರ್ಶಿಯಾಗಿದ್ದಂತೆ ಅನೇಕ ರಾಷ್ಟ್ರನಾಯಕರು ಇವರಿಗೆ ರೂಪದರ್ಶಿಯಾಗಿದ್ದರು. ಇವರ ಕಲಾಪ್ರದರ್ಶನಗಳು, ಕಲಾ ಸಂಗ್ರಹಾಲಯಗಳು ಮತ್ತು ಇವರ ದಿನಚರಿಯ ಬಗ್ಗೆ ಈ ಪುಸ್ತಕ ಮಾಹಿತಿ ನೀಡುತ್ತದೆ.

---

೨೮. ಎಂ.ಎಸ್.ಚಂದ್ರಶೇಖರ್ : ವೈ.ಸುಬ್ರಹ್ಮಣ್ಯರಾಜು : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು–೧೯೮೭.

೨೯. ಎಚ್.ವಿ. ಗಾಯತ್ರಿ : ಎನ್.ಎಸ್. ಸುಬ್ಬುಕೃಷ್ಣ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು –೧೯೮೯.

**ವೈ. ನಾಗರಾಜು :**

ಕರ್ನಾಟಕ ಕಂಡ ಸಾಂಪ್ರದಾಯಿಕ ಚಿತ್ರಕಲಾವಿದರುಗಳಲ್ಲಿ ಅಗ್ರ ಪಂಕ್ತಿಯಲ್ಲಿರುವವರು ವೈ. ನಾಗರಾಜು. ಇವರ ಕುರಿತಾಗಿ ಅ.ಲ.ನರಸಿಂಹನ್ ಕೃತಿ ರಚಿಸಿದ್ದಾರೆ.[೩೦] ಈ ಪುಸ್ತಕದಲ್ಲಿ ನಾಗರಾಜು ಅವರ ಬಾಲ್ಯ, ಶಿಕ್ಷಣ, ಕಲೆಯ ಬಗೆಗಿನ ಆಸಕ್ತಿ, ವಂಶ ಪಾರಂಪರ್ಯೆಯ ಕಲಾಬಳುವಳಿ, ಕಲಾ ಜೀವನಕ್ಕೆ ಪಾದಾರ್ಪಣೆ ಮಾಡಿದ ಸಂಗತಿ, ಕಲಾಕೃತಿಗಳ ರಚನೆಯ ವಿಧಾನ ಹಾಗೂ ಮಾಧ್ಯಮಗಳಿವೆ. ಜೊತೆಗೆ ಮಿರ್ಜಾ ಇಸ್ಮಾಯಿಲ್‌ರಿಂದ ಮೈಸೂರು ಮಹಾರಾಜರಿಗೆ ಪರಿಚಯಗೊಂಡು ಅನಂತರ ಅರಸರ ಪ್ರೋತ್ಸಾಹದಿಂದ ಬೆಳೆದ ಬಗೆ, ಲಂಡನ್‌ದಲ್ಲಿ ಚಿತ್ರಕಲಾ ವ್ಯಾಸಂಗ, ವಿದೇಶ ಪಯಣ, ಅಲ್ಲಿನ ಅನುಭವಗಳು, ಸಂದ ಪ್ರಶಸ್ತಿ ಗೌರವಗಳು, ಪ್ರಸಿದ್ಧ ಕಲಾಕೃತಿಗಳು, ಕುಟುಂಬ ಹಿನ್ನೆಲೆ, ಹಾಗೂ ಅವರ ಕಲಾಕೃತಿಗಳ ವಿಭಿನ್ನ ಆಶಯಗಳು ಪುಸ್ತಕದಲ್ಲಿ ಅನಾವರಣಗೊಂಡಿವೆ.

**ಎನ್. ಹನುಮಯ್ಯ :**

ನಿಸರ್ಗ ಚಿತ್ರರಚನೆಯಲ್ಲಿ ಹೆಸರು ಮಾಡಿದ ಮೈಸೂರಿನ ಕಲಾ ದಿಗ್ಗಜರುಗಳಲ್ಲಿ ಒಬ್ಬರಾದ ಖ್ಯಾತ ಕಲಾವಿದ ಎನ್. ಹನುಮಯ್ಯ ಕಲಾಜೀವನ ಕುರಿತು ಕೆ.ವಿ. ಸುಬ್ರಹ್ಮಣ್ಯ ಪುಸ್ತಕ ಬರೆದಿದ್ದಾರೆ.[೩೧] ಇದರಲ್ಲಿ ಪ್ರಮುಖವಾಗಿ ಅವರ ಬಾಲ್ಯಜೀವನ, ಮೈಸೂರು ಮಹಾರಾಜರ ಕೃಪಾಪೋಷಣೆ, ಮೈಸೂರು ಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಸಂಸ್ಥೆಯಲ್ಲಿ ತೈಲ ಮತ್ತು ಜಲವರ್ಣಗಳಲ್ಲಿ ಪರಿಣಿತಿ ಪಡೆದ ರೀತಿಗಳ ಬಗ್ಗೆ ಹೇಳಿದೆ. ಅಂತೆಯೇ ಇವರ ಸಮಕಾಲೀನ ಕಲಾವಿದರುಗಳ ಕಲಾದೃಷ್ಟಿ, ಅವರೊಂದಿಗಿನ ಅನುಭವ, ಅಭಿಪ್ರಾಯ, ಪಾಶ್ಚಾತ್ಯ ಕಲೆಯ ಪ್ರಭಾವ, ಜೆ.ಜೆ. ಕಲಾಶಾಲೆಯ ವ್ಯಾಸಂಗ, ಖ್ಯಾತನಾಮರ ಸಮಕಾಲೀನ ಬದುಕುಗಳು ಇಲ್ಲಿ ಬಿಂಬಿತವಾಗಿವೆ. ಮೈಸೂರು ಸುತ್ತಲಿನ ಪರಿಸರವನ್ನೇ ಇವರು ಕೇಂದ್ರೀಕರಿಸಿ, ಪ್ರಕೃತಿ ಚಿತ್ರಗಳನ್ನು ರಚಿಸಿದ್ದಾರೆ. ಹಳ್ಳಿಗಳ ಪ್ರಕೃತಿಯನ್ನು ವೈಭವೀಕರಿಸುತ್ತಿದ್ದ ಎನ್.ಜೆ. ಪಾವಂಜೆ, ಟಂಕಸಾಲೆಯವರ ಮಾರ್ಗದರ್ಶನ ಪಡೆಯುತ್ತಿದ್ದರು. ಇವರ ಕಲಾಶೈಲಿ, ತಾಂತ್ರಿಕ ವಿಧಾನಗಳು ಆಕರ್ಷಕವಾಗಿದ್ದವು. ಬೆಳಕಿನ ಬಗೆಗೆ ಇವರ ವಿಶಿಷ್ಟ ಕಲ್ಪನೆ-ಬಳಕೆ, ದೇಶ-ವಿದೇಶಗಳಲ್ಲಿ ಇವರ ಕಲಾಕೃತಿಗಳ ಸಂಗ್ರಹ, ಸ್ಥಳೀಯ ವಿಮರ್ಶಕರ ನಿಲುವು ಸ್ಥಳೀಯ ಕಲಾವಿದರ ಬಗ್ಗೆ ಗಮನ ನೀಡುವಂತೆ ಮಾಡಿರುವ ಇವರ ಸಾಧನೆಗಳು, ಇವರಿಗೆ ಸಂದ ಪ್ರಶಸ್ತಿಗಳು, ಪ್ರೋತ್ಸಾಹಿಸಿದ ಹಿರಿಯರು, ಸಂಸ್ಥೆಗಳ ಹೆಸರುಗಳನ್ನು ಲೇಖಕರು ನಮೂದಿಸಿದ್ದಾರೆ.

**ಎಂ.ಟಿ.ವಿ. ಆಚಾರ್ಯ :**

ಕರ್ನಾಟಕದ ಕಲಾಕ್ಷೇತ್ರಕ್ಕೆ ರೋಮ್ಯಾಂಟಿಕ್ ಲೇಪನ ಕೊಟ್ಟ ಕಲಾವಿದರಲ್ಲಿ ಎಂ.ಟಿ.ವಿ. ಆಚಾರ್ಯರೂ ಒಬ್ಬರಾಗಿದ್ದಾರೆ. ಇವರ ಬಗ್ಗೆ ಚಿ.ಸು. ಕೃಷ್ಣಶೆಟ್ಟಿಯವರು ಪುಸ್ತಕ ಬರೆದಿದ್ದಾರೆ.[೩೨] ಕಲೆ ಸಾಮಾನ್ಯರಿಗೂ ಅರ್ಥವಾಗುವಂತಿರಬೇಕು ಎನ್ನುವ ಮನೋಭಾವದ ಆಚಾರ್ಯರು ಆ ನಿಟ್ಟಿನಲ್ಲಿಯೇ ಕಲಾಕೃತಿಗಳನ್ನು ರಚಿಸಿದವರು. ಅವರ ಪೌರಾಣಿಕ ಚಿತ್ರಗಳು ಈ ಮಾತಿಗೆ ಹೆಚ್ಚು ಪುಷ್ಟಿಯನ್ನು ಕೊಡುತ್ತವೆ. ಚಂದಮಾಮ ಮಾಸಪತ್ರಿಕೆಯ ಮುಖ್ಯ ಕಲಾವಿದರಾಗಿ ಇವರು ಸಲ್ಲಿಸಿದ ಸೇವೆ ಅನುಪಮವಾಗಿದೆ. ಇವರ ಭೀಮ ಧುರ್ಯೋಧನರ ಕಾದಾಟದ ಚಿತ್ರ ಒಂದು ಮೈಲುಗಲ್ಲಾಗಿದೆ.

---

೩೦. ಅ.ಲ.ನರಸಿಂಹನ್ : ವೈ ನಾಗರಾಜು : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು-೧೯೮೯.

೩೧. ಕೆ.ವಿ.ಸುಬ್ರಹ್ಮಣ್ಯ : ಎನ್.ಹನುಮಯ್ಯ : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು-೧೯೮೯.

೩೨. ಎಂ.ಟಿ.ವಿ.ಆಚಾರ್ಯ : ಚಿ.ಸು. ಕೃಷ್ಣಶೆಟ್ಟಿ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು -೧೯೯೦

ಜನಸಾಮಾನ್ಯರಿಗೆ ಕಲೆಯನ್ನು ಸುಲಭದಲ್ಲಿ ಮನೆಗೆ ತಲುಪಿಸುವ ನಿಟ್ಟಿನಲ್ಲಿ ಅಂಚೆ ಮೂಲಕ ಕಲಾ ಶಿಕ್ಷಣವನ್ನು ಇವರು ಆರಂಭಿಸಿದರು. ಜಲವರ್ಣದಿಂದ ಹೆಚ್ಚಿನ ಚಿತ್ರಗಳನ್ನು ರಚನೆ ಮಾಡಿದ ಆಚಾರ್ಯರು ರಾಮಾಯಣ, ಮಹಾಭಾರತಗಳಂತಹ ಕಥಾಚಿತ್ರಗಳನ್ನು ರಚಿಸಿದ್ದಾರೆ. ಇಂತಹ ಪ್ರಮುಖ ಅಂಶಗಳು ಈ ಪುಸ್ತಕದಲ್ಲಿ ಅಡಕವಾಗಿವೆ. ಈ ಕೃತಿಯಲ್ಲಿ ಪ್ರಮುಖವಾಗಿ ಆಚಾರ್ಯರ ಬಾಲ್ಯ, ಶಿಕ್ಷಣ, ಕಲಾಶಿಕ್ಷಣ, ಕಲಾಬದುಕು, ಅನುಭವಿಸಿದ ನೋವುಗಳು, ಚಿತ್ರಣವಿಧಾನ, ವಸ್ತುವಿಷಯಗಳು, ವೃತ್ತಿಬದುಕು, ಕೃತಿಗಳ ವಿಶ್ಲೇಷಣೆ ಇವುಗಳ ಬಗ್ಗೆ ಮಾಹಿತಿ ಕಂಡು ಬರುತ್ತದೆ.

**ರುಮಾಲೆ ಚನ್ನಬಸಯ್ಯ :**

ರುಮಾಲೆ ಚನ್ನಬಸವಯ್ಯರ ಕಲಾಜೀವನ ಕುರಿತು ಕೆ.ಎಸ್. ಶ್ರೀನಿವಾಸಮೂರ್ತಿಯವರು ಪುಸ್ತಕ ಬರೆದಿದ್ದಾರೆ.[೩೩] ರುಮಾಲೆ ಚನ್ನಬಸವಯ್ಯನವರು ಬಾಲ್ಯದಿಂದಲೂ ಚಿತ್ರಕಲೆಯ ಬಗ್ಗೆ ಆಸಕ್ತಿಯುಳ್ಳವರಾಗಿದ್ದರು. ಒಬ್ಬ ಶ್ರೇಷ್ಠ ಕಲಾವಿದರಾಗಿ ಕಲಾ ಜಗತ್ತಿಗೆ ಅವರು ಅಪೂರ್ವ ಕೊಡುಗೆ ನೀಡಿದ್ದಾರೆ. ರುಮಾಲೆಯವರು ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಭಾರತದ ರಾಜಕೀಯ ಮತ್ತು ಸಾಮಾಜಿಕ ಏಳು-ಬೀಳುಗಳಲ್ಲಿ ಸಕ್ರಿಯರಾಗಿದ್ದ ವ್ಯಕ್ತಿ. ೧೯೩೯-೪೦ ರಲ್ಲಿ ಬೆಂಗಳೂರಿನ ಸೆಂಟ್ರಲ್ ಜೈಲು ಮತ್ತು ಬೈಲಹೊಂಗಲ ಜೈಲುಗಳಲ್ಲಿ ಅವರು ಒಂದು ವರ್ಷ ಕಠಿಣ ಜೈಲು ವಾಸಕ್ಕೆ ಗುರಿಯಾದವರು.

ರುಮಾಲೆ ಅವರು ಮೂಲತಃ ಒಬ್ಬ ಪ್ರಕೃತಿ ಚಿತ್ರಕಾರರು. ಅವರು ಪ್ರಕೃತಿಯನ್ನು ಕಂಡು ಕೊಂಡಿರುವ ಮತ್ತು ಅದನ್ನು ಚಿತ್ರಿಸಿರುವ ರೀತಿಗಳ ನಡುವೆ ಅನ್ಯೋನ್ಯ ಸಂಬಂಧಿಸಿದೆ. ಅವರ ಕಲಾಕೃತಿಗಳೆಂದರೆ ಭಾವಚಿತ್ರಗಳು ಮತ್ತು ಸಂಯೋಜನೆಗಳಾಗಿವೆ. ಶಿವಬಾಲಯೋಗಿಗಳ ಎದೆ ಮಟ್ಟದ ಭಾವಚಿತ್ರದಲ್ಲಿ ವಿಶಾಲವಾದ ಭುಜ ಮತ್ತು ಭಾವ ರಮ್ಯತೆಯನ್ನು ಗಮನಿಸಬಹುದು. 'ಕೂಡಲಸಂಗಮ'ವನ್ನು ಕುರಿತ ಸಂಯೋಜನೆಯಲ್ಲಿ ಕೂಡಲಸಂಗಮಲಿಂಗ ಬಸವೇಶ್ವರರಐಕ್ಯಮಂಟಪ ಮತ್ತು ಕೂಡಲಸಂಗಮದ ವಿಹಂಗಮ ದೃಶ್ಯಗಳ ಮೂರು ಪ್ರತ್ಯೇಕ ಭಾಗಗಳಿಂದ ಕೂಡಿದೆ. ರುಮಾಲೆಯವರು ೭೦೦ಕ್ಕೂ ಹೆಚ್ಚಿನ ಸಂಖ್ಯೆಯ ಕಲಾಕೃತಿಗಳನ್ನು ರಚಿಸಿದ್ದಾರೆ. ಇಂತಹ ವಿವರಗಳ ಜೊತೆಗೆ ಈ ಕೃತಿಯಲ್ಲಿ ಪ್ರಮುಖವಾಗಿ ಅವರ ಬಾಲ್ಯ, ಶಿಕ್ಷಣ, ಕಲಾಬದುಕು, ಕಲಾಕೃತಿರಚನೆ ಮತ್ತು ಕೃತಿಗಳ ಬಗ್ಗೆ ವಿಶ್ಲೇಷಣೆ ಇದೆ.

**ಪಿ.ಆರ್. ತಿಪ್ಪೇಸ್ವಾಮಿ :**

ಪಿ.ಆರ್.ತಿಪ್ಪೇಸ್ವಾಮಿಯವರ ಕುರಿತು ಡಾ.ಜಿ.ಶಂ. ಪರಮಶಿವಯ್ಯನವರು ಕೃತಿರಚಿಸಿದ್ದಾರೆ.[೩೪] ಪಿ.ಆರ್.ತಿಪ್ಪೇಸ್ವಾಮಿಯವರ ಕಲಾಜೀವನ ಕುರಿತ ಈ ಪುಸ್ತಕವು ಅವರ ಬಗ್ಗೆ ಸ್ಥೂಲ ಮಾಹಿತಿ ಕೊಡುತ್ತದೆ. ಚಿತ್ರದುರ್ಗ ಜಿಲ್ಲೆಯ ಹರ್ತಿಕೋಟೆಯಲ್ಲಿ ಜನಿಸಿದ ಪಿ.ಆರ್.ತಿಪ್ಪೇಸ್ವಾಮಿಯವರು ಕರ್ನಾಟಕ ಕಂಡ ಶ್ರೇಷ್ಠ ಕಲಾವಿದರಲ್ಲಿ ಒಬ್ಬರಾಗಿದ್ದಾರೆ. ಪಿ.ಆರ್.ತಿಪ್ಪೇಸ್ವಾಮಿಯವರು ಮಾಡಿದ ಕಲಾ ಸಾಧನೆ ಅದ್ಭುತವಾದುದು. ಒಂದು ಗ್ರಾಮದ ಗೌಡಿಕೆ ಮನೆತನದಲ್ಲಿ ಜನಿಸಿದ ಇವರು ಪಟೇಲರಾಗಿ ಉಳಿಯದೇ ಕಲಾಕ್ಷೇತ್ರಕ್ಕೆ ವಿಶೇಷ ಕೊಡುಗೆ ನೀಡಿದರು. ಇವರು ರಚಿಸಿದ ಚಿತ್ರಗಳು ನೂರಾರು. ಇವರ ಕಲಾಕೃತಿಗಳು ಕುವೆಂಪು, ಬೇಂದ್ರೆ, ಮಾಸ್ತಿ,

೩೩. ಕೆ.ಎಸ್. ಶ್ರೀನಿವಾಸಮೂರ್ತಿ : ರುಮಾಲೆ ಚನ್ನಬಸವಯ್ಯ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೦

೩೪. ಜಿ.ಶಂ.ಪರಮಶಿವಯ್ಯ : ಪಿ.ಆರ್.ತಿಪ್ಪೇಸ್ವಾಮಿ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೪.

ದೇ.ಜ.ಗೌ., ಜಿ.ಶಂ.ಪ., ರಂಗಭೂಮಿ ತಜ್ಞ ರಾಜಶೇಖರ್ ಕದಂಬ ಮೊದಲಾದವರ ಮನೆಯನ್ನು ಅಲಂಕರಿಸಿವೆಯಲ್ಲದೆ ಸರ್ಕಾರಿ ವಸ್ತು ಸಂಗ್ರಹಾಲಯ, ಕರ್ನಾಟಕ ಲಲಿತಕಲಾ ಅಕಾಡೆಮಿ, ಮೈಸೂರಿನ ಜಯಚಾಮರಾಜೇಂದ್ರ ಚಿತ್ರಕಲಾಶಾಲೆ ಇನ್ನು ಮುಂತಾದ ಕಡೆಗಳಲ್ಲಿ ಸಂಗ್ರಹವಾಗಿವೆ. ತಿಪ್ಪೇಸ್ವಾಮಿಯವರು ಒಬ್ಬ ಕಲಾವಿದ ಮಾತ್ರವಲ್ಲದೇ ಉತ್ತಮ ಕಲಾ ಬರಹಗಾರರು, ಸ್ನೇಹ ಜೀವಿಯೂ ಆಗಿದ್ದರು ಎನ್ನುವ ವಿವರಗಳು ಈ ಕೃತಿಯಲ್ಲಿವೆ.

ಮೈಸೂರಿನ ಜನಪದ ಸಾಹಿತ್ಯ ಅಕಾಡೆಮಿಯೊಡನೆ ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದ ಅವರು ಮೈಸೂರು ವಿಶ್ವವಿದ್ಯಾಲಯದ ಜನಪದ ವಸ್ತು ಸಂಗ್ರಹಾಲಯದ ಬೆಳವಣಿಗೆಗೆ ವಿಶೇಷವಾಗಿ ದುಡಿದು, ಕನ್ನಡ ನಾಡಿನ ವಿವಿಧ ಮೂಲೆ ಮೂಲೆಗಳಿಂದಲೂ ಅಪಾರ ಕಲಾ ವಸ್ತುಗಳನ್ನು ಸಂಗ್ರಹಿಸಿ ತಂದಿದ್ದರು. ಕರ್ನಾಟಕ ಜನಪದ ಪರಿಷತ್ತಿನ ಸಕ್ರೀಯ ಸದಸ್ಯರಾಗಿ ದುಡಿದರಲ್ಲದೆ ಧರ್ಮಸ್ಥಳದ ಮಂಜೂಷಾ ವಸ್ತುಸಂಗ್ರಹಾಲಯ ರೂಪಿಸುವಲ್ಲಿ ಪೂಜ್ಯ ವೀರೇಂದ್ರ ಹೆಗ್ಗಡೆಯವರಿಂದಲೂ ಮೆಚ್ಚುಗೆ ಪಡೆದಿದ್ದರು. ಮಂಜೂಷಾ ವಸ್ತುಸಂಗ್ರಹಾಲಯಕ್ಕೆ ಅಪೂರ್ವ ವಸ್ತುಗಳನ್ನು ಸಂಗ್ರಹಿಸಿ ತರುವಲ್ಲಿ ಅವರ ಪಾತ್ರ ಅತ್ಯಂತ ಮಹತ್ವದ್ದಾಗಿದೆ.

ಚಿತ್ರಕಲಾ ಪರಿಷತ್ತಿನ ಎಂ.ಎಸ್. ನಂಜುಂಡರಾಯರು ತಿಪ್ಪೇಸ್ವಾಮಿಯವರ ಆತ್ಮೀಯ ಸ್ನೇಹಿತರು. ಚಿತ್ರಕಲಾ ಪರಿಷತ್ತನ್ನು ಕಟ್ಟುವಲ್ಲಿ ಇವರ ಸಲಹೆ ಸೂಚನೆಗಳನ್ನು ಪಡೆದಿದ್ದರ ಬಗ್ಗೆ ವಿವರಗಳಿವೆ. ಪಿ.ಆರ್.ತಿಪ್ಪೇಸ್ವಾಮಿ ಚಿತ್ರಕಲೆ, ಸಾಹಿತ್ಯ, ಜನಪದ ಈ ಮೂರೂ ಕ್ಷೇತ್ರಗಳಲ್ಲಿ ಪ್ರವೀಣತೆ ಪಡೆದುಕೊಂಡವರು. ಪ್ರಶಸ್ತಿ ಗೌರವಗಳಿಗೆ ಗಮನಹರಿಸದೆ ಸೇವೆ ಮಾಡಿದವರು. ಮುಖ್ಯವಾಗಿ ಜನಪದ ಹಾಗೂ ಕಲಾಕ್ಷೇತ್ರದಲ್ಲಿ ಕೆಲಸ ಮಾಡಿದ ತಿಪ್ಪೇಸ್ವಾಮಿಯವರ ಬಾಲ್ಯ, ಶಿಕ್ಷಣ, ಕಲಾಬದುಕು, ಜನಪದ ಕ್ಷೇತ್ರದ ಆಕರ್ಷಣೆ, ವಸ್ತು ಸಂಗ್ರಹಾಲಯಗಳೊಂದಿಗಿನ ಒಡನಾಟ, ಕಲಾಕೃತಿಗಳ ರಚನೆ, ಕಲಾ ಬರಹಗಳ ಬಗ್ಗೆ ಈ ಪುಸ್ತಕವು ಸಂಕ್ಷಿಪ್ತ ನೋಟ ಬೀರುತ್ತದೆ.

ತಿಪ್ಪೇಸ್ವಾಮಿಯವರು ಕಲಾಕ್ಷೇತ್ರದಲ್ಲಿ ಮಾಡಿರುವ ಸಾಧನೆ, ಚಿತ್ರಕಲೆಯ ರಚನೆ ಮತ್ತು ಅವುಗಳ ತತ್ವಾಧಾರಿತ ಐತಿಹಾಸಿಕ ದಾಖಲಾತಿ, ಕಲಾವಿದರ ಪರವಾದ ಹೋರಾಟಗಳು, ಪ್ರಾರಂಭಿಸಿದ ಪತ್ರಿಕೆಗಳು, ಲೇಖನಗಳ ಭಂಡಾರ, ಇವುಗಳ ಬಗೆಗೆ ವಿವರಗಳಿವೆ. ಜೊತೆಗೆ ಕೆ. ವೆಂಕಟಪ್ಪನವರಿಂದ ಹಿಡಿದು ಚಿತ್ರಕಲಾ ಪರಿಷತ್ತಿನ ನಂಜುಂಡರಾಯರ ಜೊತೆಗಿನ ಸಂಬಂಧಗಳು, ಅನುಭವಗಳು, ಕಲಾಪ್ರವಾಸದ ಬಗೆಗಿನ ಉಲ್ಲೇಖ, ರಾಷ್ಟ್ರೀಯ ರಾಜ್ಯಮಟ್ಟದ ಕಲಾ ಕಾರ್ಯಾಗಾರಗಳು, ಜಾನಪದ ಕ್ಷೇತ್ರದಲ್ಲಿನ ಸೇವೆ, ವಸ್ತು ಸಂಗ್ರಹಕಾರರಾಗಿ ಧರ್ಮಸ್ಥಳ ಮಂಜೂಷಾಕ್ಕೆ ನೀಡಿದ ಕೊಡುಗೆ, ಬೊಂಬೆಯಾಟದ ವಿದೇಶ ಪ್ರವಾಸ, ಇವುಗಳ ಬಗ್ಗೆ ಹೇಳಲಾಗಿದೆ. ಅಂತೆಯೇ ಮಠಗಳಲ್ಲಿ ತಮ್ಮ ಚಿತ್ರಕಲಾ ರಚನೆ, ಕಲಾರಂಗಕ್ಕೆ ಆದ ಅನ್ಯಾಯಗಳ ವಿರುದ್ಧ ಹೋರಾಟ, ಕರ್ನಾಟಕದ ಕಲಾವಿದರ ಬಗ್ಗೆ ಅವರಿಗಿದ್ದ ಕಳಕಳಿ ಇಲ್ಲಿ ವ್ಯಕ್ತಗೊಂಡಿದೆ.

ಕಲಾಯಾತ್ರೆಯ ಮೂಲಕ ಹಲವಾರು ಸ್ಥಳಗಳ ಭೇಟಿ, ನಿಸರ್ಗ ಚಿತ್ರಣ, ಅಂದಿನ ಖ್ಯಾತ ಕವಿಗಳೊಂದಿಗೆ ಇದ್ದಂತಹ ಮಧುರ ಸ್ನೇಹ-ಸಂಬಂಧಗಳ ಬಗ್ಗೆ ವಿವರಿಸಲಾಗಿದೆ. ಪ್ರೇಕ್ಷಣೀಯ ಮತ್ತು ಕಲಾತ್ಮಕ ನೆಲೆಯ ಹಿನ್ನೆಲೆಯ ಐತಿಹಾಸಿಕ ಸ್ಥಳಗಳ ದಾಖಲಾತಿ ಇವರು ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾದ ಬಳಿಕ ಮಾಡಿದ ಸಾಧನೆಗಳು ಪುಸ್ತಕದಲ್ಲಿ ವ್ಯಕ್ತಗೊಂಡಿವೆ.

**ಎಸ್. ನಂಜುಂಡಸ್ವಾಮಿ :**

ಕರ್ನಾಟಕ ಕಲಾ ವಲಯದಲ್ಲಿ ಸಾಂಪ್ರದಾಯಿಕ ಚಿತ್ರರಚನೆಯಲ್ಲಿ ಹೆಸರು ಮಾಡಿದ ಕಲಾವಿದರಲ್ಲಿ ನಂಜುಂಡಸ್ವಾಮಿಯವರೂ ಒಬ್ಬರಾಗಿದ್ದಾರೆ. ಎಸ್.ಎನ್.ಸ್ವಾಮಿ ಎಂಬ ಹೆಸರಿನಿಂದ ಚಿರಪರಿಚಿತರು. ಇವರನ್ನು ಕುರಿತು ಪಿ. ಆರ್. ತಿಪ್ಪೇಸ್ವಾಮಿಯವರು ಕೃತಿರಚಿಸಿದ್ದಾರೆ.[೩೫]

ಮೈಸೂರು ಜಿಲ್ಲೆಯ ಯಳಂದೂರು ತಾಲೂಕಿನ ಎರಗಂಬಳ್ಳಿ ಗ್ರಾಮದಲ್ಲಿ ೧೯೦೬ರ ಮಾರ್ಚ ೨೫ರಂದು ಜನಿಸಿದ ನಂಜುಂಡ ಸ್ವಾಮಿಯವರು ಬಾಲ್ಯದಲ್ಲಿಯೇ ಕಲೆಯ ಒಲವು ಹೊಂದಿದವರಾಗಿದ್ದರು. ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಕಲಾಶಾಲೆಯಲ್ಲಿ ಕಲಾಶಿಕ್ಷಣ ಪಡೆದ ಇವರು ನಂತರ ಹೆಚ್ಚಿನ ಕಲಿಕೆಗಾಗಿ ಮುಂಬೈನ ಜೆ.ಜೆ.ಕಲಾಶಾಲೆಗೆ ತೆರಳಿದರು. ಕಲಾಶಾಲೆಯ ಮುಖ್ಯಸ್ಥರಾಗಿದ್ದ ಗ್ಲಾಡ್‌ಸ್ಟೋನ್ ಅವರ ಪ್ರೀತಿಪಾತ್ರ ಶಿಷ್ಯರಾಗಿದ್ದ ಇವರು ತೈಲವರ್ಣ ಕೃತಿರಚನೆಯಲ್ಲಿ ಪ್ರಬುದ್ಧರಾಗಿದ್ದರು. ಅದರಂತೆ ಜಲವರ್ಣ ಕೃತಿಗಳು, ರೇಖಾಚಿತ್ರಗಳು, ಪೆನ್ನು ಮತ್ತು ಇಂಕು ಮಾಧ್ಯಮದ ಕೃತಿಗಳು, ಲೋಹ ಮತ್ತು ಶಿಲಾ ಶಿಲ್ಪಗಳನ್ನು ಇವರು ರಚಿಸಿದ್ದಾರೆ. ರಾಜ್ಯ ಶಿಲ್ಪಕಲಾ ಅಕಾಡೆಮಿಯು ಎಸ್.ಎನ್. ಸ್ವಾಮಿಯವರ ಚಿತ್ರಕಲಾ ಕೃತಿಗಳ ಬೃಹತ್ ಸಂಪುಟವನ್ನೇ ಹೊರತಂದಿರುವುದುನ್ನು ಇಲ್ಲಿ ಸ್ಮರಿಸಬಹುದು.

ಮೈಸೂರು ಸಂಸ್ಥಾನದ ದೊರೆಗಳಿಗೆ ಹತ್ತಿರವಾದ ಇವರು ಅರಮನೆಯ ಕಲ್ಯಾಣ ಮಂಟಪದಲ್ಲಿ ಕೆಲವು ಭಿತ್ತಿಚಿತ್ರಗಳನ್ನು ಗೋಡೆಯ ಮೇಲೆ ರಚನೆಮಾಡಿದ್ದಾರೆ. ಈ ಕೃತಿಯಲ್ಲಿ ಮುಖ್ಯವಾಗಿ ನಂಜುಂಡ ಸ್ವಾಮಿಯವರ ಬಾಲ್ಯ, ಶಿಕ್ಷಣ, ಕಲಾಬದುಕುಗಳು ಬಿಂಬಿತವಾಗಿದ್ದು, ಅದರಡಿಯಲ್ಲಿ ಹಲವಾರು ವಿಷಯಗಳು ವ್ಯಕ್ತಗೊಂಡಿವೆ. ಕಲಾಶಿಕ್ಷಣಕ್ಕೆ ತೆರಳಿದ್ದು, ಪ್ರಾರಂಭ ಹಂತದಲ್ಲಿ ಕಲೆಯ ಒಲವು, ಕಲಾಕೃತಿ ರಚನೆಯ ವಿಧಾನಗಳು, ಶೈಲಿ, ಮಾಧ್ಯಮಗಳು, ವಸ್ತುವಿಷಯಗಳು ಹೇಳಲ್ಪಟ್ಟಿದ್ದು, ಕೆಲವು ಕೃತಿಗಳ ವಿಶ್ಲೇಷಣೆಯೂ ಇದೆ.

**ಪಿ. ಸುಬ್ಬರಾವ್ :**

ಕಲಾವಿದರು ಬಡವರ ಮನೆಯಲ್ಲಿ ಜನ್ಮತಾಳುತ್ತಾರೆ ಎನ್ನುವ ಹಳೆಯ ನಾಣ್ನುಡಿಯಂತೆ ಬಡತನದಲ್ಲಿ ಹುಟ್ಟಿಬೆಳೆದು ನೋವುಂಡು ಕಲಾವಿದರಾಗಿ ರೂಪುಗೊಂಡ ಪಿ.ಸುಬ್ಬರಾವ್ ಇವರ ಬಗ್ಗೆ ಎಂ.ಎಸ್. ನಂಜುಂಡರಾವ್ ಪುಸ್ತಕ ಬರೆದಿದ್ದಾರೆ.[೩೬] ಈ ಕೃತಿಯಲ್ಲಿ ಸುಬ್ಬರಾವ್‌ರ ಬಾಲ್ಯ, ಶಿಕ್ಷಣ, ಕಲಾಶಿಕ್ಷಣ, ಕಲೆಯ ಕಡೆಗೆ ಆಕರ್ಷಣೆ, ಅವರ ಒಟ್ಟು ಜೀವನ ಕ್ರಮಗಳು ಒಡಮೂಡಿವೆ. ಬಾಲ್ಯದಲ್ಲಿ ಅವರು ಅನುಭವಿಸಿದ ಕಷ್ಟ ನೋವುಗಳು, ಮೈಸೂರಿನಲ್ಲಿ ಅವರ ಕಲಾ ಅಧ್ಯಯನ, ಮುಂತಾದ ಅಂಶಗಳು ಇದರಲ್ಲಿವೆ.

ಸೃಷ್ಟಿಶೀಲ ಕಲಾವಿದರಾಗಿ ಸೃಷ್ಟಿಯ ನೈಜ ಘಟನೆಗಳನ್ನು ತಮ್ಮ ಕೃತಿಗಳ ವಸ್ತುವಾಗಿಸಿಕೊಂಡರು. ಸಮಾಜದ ಆಗುಹೋಗುಗಳಿಗೆ ತೀವ್ರವಾಗಿ ಸ್ಪಂದಿಸುತ್ತಿದ್ದ ಪಿ.ಸುಬ್ಬರಾವ್ ಸಮಾಜದಲ್ಲಿನ ಬಡತನ, ದಾರಿದ್ರ್ಯ, ನಿರ್ಗತಿಕತನ, ಅಲೆಮಾರಿ ಬದುಕು, ನಿರುದ್ಯೋಗ ಇವುಗಳಿಂದಾಗಿ ತೀವ್ರ ನೊಂದುಕೊಂಡಿದ್ದರು. ಮಾತ್ರವಲ್ಲದೆ ತಮ್ಮ ಹೆಚ್ಚಿನ ಕೃತಿಗಳಲ್ಲಿ ಅಂತಹ ವಿಷಯಗಳನ್ನೇ ಚಿತ್ರಿಸಿದರು. ದಾರಿದ್ರ್ಯ, ಹೆಂಗಳೆಯರು, ಭಾವಚಿತ್ರ, ಶಾಲೆಗೆ ಬೀಳ್ಕೊಡುಗೆ, ತಾಯಿಮಗು, ನಿಸರ್ಗದ

೩೫. ಪಿ.ಆರ್.ತಿಪ್ಪೇಸ್ವಾಮಿ : ಎಸ್.ನಂಜುಂಡಸ್ವಾಮಿ :ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು –೧೯೯೪.

೩೬. ಎಂ.ಎಸ್.ನಂಜುಂಡರಾವ್ : ಪಿ.ಸುಬ್ಬರಾವ್ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು– ೧೯೯೪.

ಪುತ್ರರು, ಪಂಜಾಬಿ ರೋಟಿ, ಮನೆವಾರ್ತೆ, ನಾಗಾಲೋಟ, ಇಂತಹ ಕೃತಿಗಳು ಅವರ ಮನಸ್ಥಿತಿ ಮತ್ತು ಕಲಾಶೈಲಿ ತಿಳಿಯಲು ಉತ್ತಮ ಉದಾಹರಣೆಗಳಾಗಿವೆ. ಇವುಗಳ ಬಗ್ಗೆ ಈ ಪುಸ್ತಕದಲ್ಲಿ ಸಂಕ್ಷಿಪ್ತ ವಿವರಣೆ ಇದೆ. ಚಿತ್ರಕಲಾ ಕ್ಷೇತ್ರದಲ್ಲಿ ಖ್ಯಾತಿ ಹೊಂದಿದ್ದರೂ ವಿಧಿವಂಚಿತವಾಗಿ, ಉಳಿದ ಕಲಾವಿದರು ಇವರಾಗಿದ್ದಾರೆ. ಹೆಚ್ಚಾಗಿ ಜಲವರ್ಣದಲ್ಲಿ ಚಿತ್ರ ರಚಿಸಿದ ಇವರ ಬದುಕಿನ ವ್ಯಂಗವನ್ನು ಅವರ ಕೃತಿಗಳ ಮೂಲಕವೇ ತಿಳಿದುಕೊಳ್ಳಬಹುದಾಗಿದೆ. ಹಾಗಾಗಿ ಈ ಪುಸ್ತಕವು ಪರೋಕ್ಷವಾಗಿ ಕಲೆ ಮತ್ತು ಸಮಾಜ, ಕಲೆ ಮತ್ತು ಕಲಾವಿದ, ಕಲಾಕೃತಿ ಮತ್ತು ಸಹೃದಯ ಇಂತಹ ಸಂಬಂಧಗಳ ಬಗ್ಗೆ ಸಾಂಕೇತಿಕವಾದ ಅವಲೋಕನ ಮಾಡುತ್ತದೆ ಎಂದು ಹೇಳಬಹುದ

**ಎಂ.ಎಸ್. ಚಂದ್ರಶೇಖರ್ :**

ಕರ್ನಾಟಕದ ಕಲಾವಲಯದಲ್ಲಿ ನಿಸರ್ಗ ಚಿತ್ರರಚನೆಗೆ ಹೆಸರಾದ ಎಂ.ಎಸ್. ಚಂದ್ರಶೇಖರ್ ಬಗ್ಗೆ ಯು.ಎಸ್. ವೆಂಕಟರಾಮನ್ ಪುಸ್ತಕ ಬರೆದಿದ್ದಾರೆ.[೩೭] ಈ ಕೃತಿಯಲ್ಲಿ ಚಂದ್ರಶೇಖರರ ಬಾಲ್ಯ, ಪ್ರಾಥಮಿಕ ಶಿಕ್ಷಣ, ಕಲೆಯ ಕಡೆಗಿನ ಒಲವು, ಕಲಾಶಿಕ್ಷಣ, ಕಲಾಬದುಕು ಇವುಗಳನ್ನು ಹೇಳಲಾಗಿದೆ. ಜೊತೆಗೆ ಅವರ ಕಲಾಕೃತಿ ರಚನೆಯ ವಿಧಾನ, ಶೈಲಿ, ಪ್ರಭಾವ ಪ್ರೇರಣೆಗಳು, ಕಲಾಪ್ರದರ್ಶನ ಮತ್ತು ಪ್ರಶಸ್ತಿ ಗೌರವಗಳ ಬಗ್ಗೆ ವಿವರಣೆ ಇದೆ. ಕಲಾಕೃತಿಗಳ ವಿಶ್ಲೇಷಣೆಯ ಸಂದರ್ಭಗಳಲ್ಲಿ ಅವರ ನಿಸರ್ಗ ಚಿತ್ರಗಳಿಗೆ ಹೆಚ್ಚು ಮಹತ್ವ ನೀಡಲಾಗಿದೆ. ಅಲ್ಲಲ್ಲಿ ಕೆಲವು ಛಾಯಾಚಿತ್ರಗಳನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ.

ಎಂ.ಎಸ್.ಚಂದ್ರಶೇಖರ್‌ರ ನಿಸರ್ಗ ಚಿತ್ರರಚನೆಯಲ್ಲಿ ಪಾಶ್ಚಾತ್ಯ ಪ್ರಭಾವವು ಕಂಡುಬರುತ್ತದೆ. ಉಳಿದ ಚಿತ್ರಗಳಿಗಿಂತ ಇವುಗಳನ್ನೇ ಅವರು ಹೆಚ್ಚಾಗಿ ರಚಿಸಿದ್ದು, ಅದರಲ್ಲಿ ಪ್ರತ್ಯೇಕವಾದ ಶೈಲಿಯನ್ನು ಕಂಡುಕೊಂಡಂತೆ ತೋರುತ್ತದೆ. ಬಣ್ಣಗಾರಿಕೆ, ಚಿತ್ರದ ಆಕಾರಗಳು ಮತ್ತು ಸ್ಥಳಾವಕಾಶವನ್ನು ಹೊಂದಿಸುವ ರೀತಿ, ದೃಶ್ಯಗಳನ್ನು ಅವಶ್ಯಕತೆಗೆ ತಕ್ಕಂತೆ ಬದಲಾಯಿಸಿಕೊಳ್ಳುವ ರೀತಿ, ಮುಂತಾದವುಗಳು ಈ ಮಾತಿಗೆ ಪುಷ್ಟಿ ಕೊಡುತ್ತವೆ. ಸಾಹಿತ್ಯ ಕ್ಷೇತ್ರದ ವಿದ್ವಾಂಸರು ಬರೆದ ಈ ಪುಸ್ತಕವು ಶಬ್ದ ಸಂಪತ್ತಿನಿಂದ ಕೂಡಿದ್ದರೂ ಪ್ರಾದೇಶಿಕ ಹಿನ್ನೆಲೆಯ ವಿವರಗಳು ಕಡಿಮೆಯಾಗಿವೆ. ಒಬ್ಬ ಶ್ರೇಷ್ಠ ನಿಸರ್ಗ ಚಿತ್ರರಚನಾಕಾರನ ಕಲಾಬದುಕು ಈ ಮೂಲಕ ಹೊರಬಂದಿದೆ.

**ಎಂ.ಜೆ. ಶುದ್ಧೋದನ :**

ಕರ್ನಾಟಕದ ಪ್ರಮುಖ ಕಲಾವಿದರ ಸಾಲಿಗೆ ಸೇರುವ ಎಂ.ಜೆ. ಶುದ್ಧೋಧನ ಬಗ್ಗೆ ಎಚ್.ಎಂ.ಪರಮೇಶ ಪುಸ್ತಕ ಬರೆದಿದ್ದಾರೆ.[೩೮] ಇದರಲ್ಲಿ ಮುಖ್ಯವಾಗಿ ಎಂ.ಜೆ. ಶುದ್ಧೋದನರ ಜೀವನ ಚರಿತ್ರೆ, ಕಲಾವಂತಿಕೆ, ಕಲಾಕೃತಿಗಳ ಬಗ್ಗೆ ಲೇಖಕರು ದಾಖಲಿಸಿದ್ದಾರೆ.

ಎಂ.ಜೆ. ಶುದ್ಧೋದನರು ಎಂ.ಎಸ್. ಜಗದೀಶನ್ ಎಂಬ ಕಲಾಶಿಕ್ಷಕರ ಮಗನಾಗಿ ೧೯೧೪ರ ಫೆಬ್ರವರಿ ೨ರಂದು ಮೈಸೂರಿನಲ್ಲಿ ಜನಿಸಿದರು. ಬಾಲ್ಯ ವಿದ್ಯಾಭ್ಯಾಸ, ಅನಂತರ ಚಿತ್ರಕಲೆಯ ಗೀಳಿನಿಂದ ಕಲಾಪ್ರಪಂಚಕ್ಕೆ ಸೇರ್ಪಡೆಯಾದರು. ಮಹಾರಾಜ ಪ್ರೌಢಶಾಲೆಯಲ್ಲಿ ಆರ್.ಕೆ.ನಾರಾಯಣ್‌ರ ಸೋದರ ಆರ್.ಕೆ.ಬಲರಾಂರವರ ಸಹಪಾಠಿಯಾಗಿದ್ದರು. ಕೇರಳದ ಪ್ರಖ್ಯಾತ ಚಿತ್ರಕಲಾವಿದರಾದ ರಾಜಾರವಿವರ್ಮರ ಜೊತೆಯಲ್ಲಿ ಸಹಕಲಾವಿದರಾಗಿ ಕೆಲಸ ಮಾಡಿದ್ದು ಇವರ ಹಿರಿಮೆಯಾಗಿದೆ.

೩೭. ಯು.ಎಸ್. ವೆಂಕಟರಾಮನ್ : ಎಂ.ಎಸ್. ಚಂದ್ರಶೇಖರ್ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೪.

೩೮. ಎಚ್.ಎಂ.ಪರಮೇಶ :ಎಂ.ಜೆ.ಶುದ್ಧೋಧನ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು -೧೯೯೫.

ಚಾಮರಾಜೇಂದ್ರ ವೃತ್ತಿಶಿಕ್ಷಣ ಸಂಸ್ಥೆಯಲ್ಲಿ ಕಲಾಭ್ಯಾಸ ಮುಗಿಸಿ, ಪ್ರಾಚ್ಯ ಸಂಶೋಧನಾ ಇಲಾಖೆಯಲ್ಲಿ ಎಂ.ಎಚ್.ಕೃಷ್ಣಯ್ಯನವರ ನಿರ್ದೇಶನದಲ್ಲಿ ಕೆಲಸ ಮಾಡಿದರು. ನಂತರ ಚನ್ನಪಟ್ಟಣದ ಕರಕುಶಲ ಕೈಗಾರಿಕಾ ಶಾಲೆಯಲ್ಲಿ ಕಲಾಶಿಕ್ಷಕರಾಗಿ, ೧೯೫೯ರಲ್ಲಿ ಚಾಮರಾಜೇಂದ್ರ ವೃತ್ತಿಶಿಕ್ಷಣ ಸಂಸ್ಥೆಯ ಕಲಾಶಾಲೆಯ ವೈಸ್‌ಪ್ರಿನ್ಸಿಪಾಲ್ ಆಗಿ ಕಲಾಸೇವೆ ಮಾಡಿದರು. ಜೊತೆಗೆ ವಿಧಾನಸೌಧದ ಸಭಾಂಗಣದಲ್ಲಿ ಗಾಂಧೀಜಿಯವರ ಚಿತ್ರರಚನೆ ಮಾಡಿದರು. ಅನಂತರ ಅನೇಕ ಖ್ಯಾತನಾಮರ ಚಿತ್ರಗಳನ್ನು ರಚಿಸಿದ್ದು ಮಾತ್ರವಲ್ಲದೆ ಸಾಕಷ್ಟು ಭೂದೃಶ್ಯಗಳನ್ನು ನಿರ್ಮಿಸಿರುವ ವಿವರ ಈ ಪುಸ್ತಕದಲ್ಲಿದೆ.

**ಮಧುಗಿರಿ ರಾಮು :**

ಕರ್ನಾಟಕ ಚಿತ್ರಕಲಾ ಕ್ಷೇತ್ರದಲ್ಲಿ ವ್ಯಕ್ತಿಚಿತ್ರ, ಭಾವಚಿತ್ರಗಳ ರಚನೆ ಮತ್ತು ಸಾಧುಸಂತರು, ಪುಣ್ಯಪುರುಷರ ಚಿತ್ರಗಳನ್ನು ರಚಿಸುವಲ್ಲಿ ತಮ್ಮದೇ ವಿಶಿಷ್ಟ ಛಾಪು ಮೂಡಿಸಿದ ಮಧುಗಿರಿ ರಾಮು ಬಗ್ಗೆ ಯು.ಎಸ್.ವೆಂಕಟರಾಮನ್ ಪುಸ್ತಕ ರಚಿಸಿದ್ದಾರೆ.[೩೯] ೭೦-೮೦ರ ದಶಕದಲ್ಲಿ ವಾರಪತ್ರಿಕೆ, ಮಾಸಪತ್ರಿಕೆಗಳಲ್ಲಿ ಇವರು ರಚಿಸಿದ ಸಾಂದರ್ಭಿಕ ಚಿತ್ರಗಳು ರಾರಾಜಿಸುತ್ತಿದ್ದವು. ಅದರಲ್ಲಿ ಸಾಧುಸಂತರು, ಪುಣ್ಯಪುರುಷರ ಚಿತ್ರಗಳೇ ಹೆಚ್ಚಾಗಿವೆ. ಇವರ ಕಲಾಜೀವನವು ಈ ಪುಸ್ತಕದಲ್ಲಿ ವ್ಯಕ್ತಗೊಂಡಿದೆ. ಮಧುಗಿರಿ ರಾಮು ಅವರ ಬಾಲ್ಯ, ವಿದ್ಯಾಭ್ಯಾಸ, ಮೈಸೂರಿನಲ್ಲಿ ಸೇವೆ, ಶಾಲಾ ವ್ಯಾಸಂಗದ ನಂತರ ಕಲಾವಿದರಾಗಿ ರೂಪುಗೊಂಡ ಬಗೆ, ಮುಂತಾದ ಅಂಶಗಳು ಇಲ್ಲಿವೆ. ಜೊತೆಗೆ ಅವರ ಕಲಾಕೃತಿ ವಿಶ್ಲೇಷಣೆಯಲ್ಲಿ ಪ್ರಮುಖವಾಗಿ ಭಾವಚಿತ್ರಗಳು, ವ್ಯಕ್ತಿಚಿತ್ರ, ಸಂಯೋಜನೆ ಚಿತ್ರಗಳ ಕುರಿತಾಗಿ ಹೇಳಲಾಗಿದೆ. ಕೊನೆಯಲ್ಲಿ ಅವರ ವ್ಯಕ್ತಿತ್ವ ಮತ್ತು ಜೀವನದ ಪ್ರಮುಖ ಘಟ್ಟಗಳನ್ನು ಗುರುತಿಸಲಾಗಿದೆ.

ಈ ಕೃತಿಯಲ್ಲಿ ಕಲಾವಿದ ಮಧುಗಿರಿ ರಾಮು ಅವರ ಬಾಲ್ಯ, ಶಿಕ್ಷಣ, ಕಲಾಬದುಕು, ಕಲಾಶಿಕ್ಷಣ. ಕೃತಿರಚನಾ ವಿಧಾನ, ಪತ್ರಿಕೆಗಳಿಗೆ ಕೃತಿರಚಿಸಿ ಕೊಡುತ್ತಿದ್ದ ಸಂದರ್ಭ, ಕೃತಿ ವಿಶ್ಲೇಷಣೆ, ಮುಂತಾದ ಅಂಶಗಳು ಬಿಂಬಿತವಾಗಿವೆ. ಈ ಪುಸ್ತಕವು ಮಧುಗಿರಿ ರಾಮು ಅವರ ಪತ್ರಿಕಾ ಮಾಧ್ಯಮದ ಕೃತಿರಚನೆಯ ಹೆಚ್ಚಿನಮಾಹಿತಿಯನ್ನು ಒಳಗೊಂಡಿಲ್ಲ. ಮಧುಗಿರಿ ರಾಮು ಅವರು ಕಲಾವಿದರಾಗಿ ಸಮಾಜಕ್ಕೆ ತೆರೆದುಕೊಂಡಿದ್ದ ಪತ್ರಿಕೆಗಳಲ್ಲಿನ ಚಿತ್ರಗಳ ಮೂಲಕ ಎಪ್ಪತ್ತರ ದಶಕದ ತರಂಗ, ಸುಧಾ, ಕಸ್ತೂರಿ, ಮಯೂರ, ಕರ್ಮವೀರ, ತುಷಾರ, ಉದಯವಾಣಿ ಮುಂತಾದ ಪತ್ರಿಕೆಗಳು ಇವರ ಕೃತಿಗಳಿಂದ ರಾರಾಜಿಸಿವೆ. ಹೆಚ್ಚಾಗಿ ಸಾಧುಸಂತರು, ಪುಣ್ಯಪುರುಷರು, ದೇವತಾ ಚಿತ್ರಗಳನ್ನು ಇವರು ಚಿತ್ರಿಸಿದ್ದು, ಬಹುಮಟ್ಟಿಗೆ ಜಲವರ್ಣವನ್ನೇ ಉಪಯೋಗಿಸಿದ್ದಾರೆ. ಇವುಗಳ ಜೊತೆಗೆ ಕಲಾವಿದರು ಮತ್ತು ಪತ್ರಿಕೆಗಳ ಸಂಬಂಧಗಳು ಆ ಕಾಲದಲ್ಲಿ ಹೇಗಿದ್ದವು ಎನ್ನುವಂತಹ ವಿವರಗಳು ಇಲ್ಲಿ ಮೂಡಿ ಬಂದಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತು.

**ಎಸ್.ಎಸ್. ಕುಕ್ಕೆ :**

ಕರ್ನಾಟಕದ ಹಳೆಯ ತಲೆಮಾರಿನ ಕಲಾವಿದರಲ್ಲಿ ಎಸ್.ಎಸ್. ಕುಕ್ಕೆಯವರು ಪ್ರಮುಖ ಸಾಲಿನಲ್ಲಿ ನಿಲ್ಲುತ್ತಾರೆ. ಪ್ರಸ್ತುತ ವಿ.ಟಿ.ಎಸ್.ರಾವ್ ಬರೆದ[೪೦] ಈ ಪುಸ್ತಕದಲ್ಲಿ ಕುಕ್ಕೆಯವರ ಬಾಲ್ಯಜೀವನ, ಕಲಾ ಸಂವೇದನೆಗಳು, ಕಲಾವಿದನಾಗಲು ಸ್ಫೂರ್ತಿಯಾದ ಘಟನೆಗಳು, ಪ್ರತಿಭಾನ್ವಿತ ಕಲಾವಿದ್ಯಾರ್ಥಿ, ಬೆಂಗಳೂರಿನಲ್ಲಿ ಕಲಾವಿದನಾಗಿ ನೆಲೆ ಕಂಡುಕೊಂಡಿದ್ದು, ಬಹುಮುಖ ಪ್ರತಿಭೆಯ ವ್ಯಕ್ತಿತ್ವ

೩೯. ಯು.ಎಸ್. ವೆಂಕಟರಾಮನ್ : ಮಧುಗಿರಿ ರಾಮು : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೭.

೪೦. ಎಸ್.ಎಸ್. ಕುಕ್ಕೆ : ವಿ.ಟಿ.ಎಸ್.ರಾವ್ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು- ೧೯೯೭.

ಕಲಾಚಟುವಟಿಕೆಗಳು, ಕಲಾಶಿಕ್ಷಕರಾಗಿ ಕೆಲಸ ನಿರ್ವಹಿಸಿದ ರೀತಿ, ಕಲಾ ಪ್ರದರ್ಶನಗಳ ಕುರಿತಾಗಿ ಹೇಳಲಾಗಿದೆ. ಜೊತೆಗೆ ಇವರಿಗೆ ಸಂದ ಪ್ರಶಸ್ತಿ ಗೌರವಗಳು, ಕಲಾಕೃತಿಗಳ ಸಂಗ್ರಹ, ಕಲಾಗ್ಯಾಲರಿಯ ನೋಟ, ಕಲಾಬದುಕಿನ ಕೊನೆಯ ದಿನಗಳು, ಕಲಾಕೃತಿಗಳ ಸಂಕ್ಷಿಪ್ತ ವಿಶ್ಲೇಷಣೆ ಮಾಡಲಾಗಿದೆ.

ಈ ಪುಸ್ತಕವು ಹಳೆಯ ತಲೆಮಾರಿನ ಕಲಾವಿದರ ಕಲಾಶೈಲಿ, ಅವರ ಕಲಾ ಮೂಲಗಳು, ಕಲಾಕೃತಿಯ ರಚನಾವಿಧಾನ, ಬಣ್ಣಗಾರಿಕೆ, ರೇಖಾಲಾಲಿತ್ಯ, ಸಂಯೋಜನಾ ರೀತಿಗಳ ಬಗ್ಗೆ ತಿಳಿಸಿಕೊಡುತ್ತದಲ್ಲದೆ ಕಲೆಯ ಬಗ್ಗೆ ಆಗಿನ ಸಂದರ್ಭಗಳಲ್ಲಿ ಜನರಿಗಿದ್ದ ಅಭಿಪ್ರಾಯ, ಕಲಾ ವಾತಾವರಣವನ್ನು ತಿಳಿಯುವಲ್ಲಿ ಸಹಕಾರಿಯಾಗಿದೆ.

ಇದಲ್ಲದೆ ಆರಂಭಿಕ ದಿನಗಳಲ್ಲಿ ಇವರು ಕಲೆಗೆ ಆಕರ್ಷಿತರಾದ ಪ್ರಸಂಗಗಳು, ಕಲೆಯನ್ನು ಅಧ್ಯಯನ ಮಾಡಿ ನೆಲೆ ಕಂಡುಕೊಳ್ಳಲು ಪಟ್ಟ ಪರಿಶ್ರಮ, ಬಹುಮುಖ ಪ್ರತಿಭೆಯು ಇವರಿಗೆ ಸಹಕಾರಿಯಾದ ರೀತಿ ಮುಂತಾದ ಅಂಶಗಳು ಪರಿಣಾಮಕಾರಿಯಾದ ರೀತಿಯಲ್ಲಿ ಮೂಡಿವೆ. ಕಲಾವಲಯವನ್ನು ಹೆಚ್ಚಾಗಿ ಪ್ರವೇಶಿಸುವ ಬಡ ವಿದ್ಯಾರ್ಥಿಗಳ ಕಷ್ಟದ ಬದುಕು ಇಲ್ಲಿ ಚಿತ್ರಣಗೊಂಡಿದೆ.

**ಎಂ.ಎಫ್. ಸೂಫಿ :**

ಪ್ರಾಣಿ ಮತ್ತು ಪಕ್ಷಿಗಳ ಚಿತ್ರರಚನೆಯಲ್ಲಿ ಸಿದ್ಧಹಸ್ತರಾಗಿದ್ದ ಎಂ.ಎಫ್. ಸೂಫಿಯವರ ಪೂರ್ಣ ಹೆಸರು ಜನಾಬ್ ಫಕೀರ್ ಮಹಮ್ಮದ ಸೂಫಿ ಎಂಬುದಾಗಿದೆ. ಕಲಾಕ್ಷೇತ್ರದಲ್ಲಿ ಮೃಗ-ಖಗಗಳ ಕಲಾವಿದರೆಂದೇ ಖ್ಯಾತರಾದ ಇವರ ಬದುಕು ಸಹಜತೆಯಿಂದ ಆಡಂಬರಗಳಿಲ್ಲದಂತೆ ಕೂಡಿತ್ತು. ಶಿವಕೊಡಬೇಕು ನಾವು ಅನುಭವಿಸಬೇಕು ಎನ್ನುವ ರೀತಿಯಲ್ಲಿ ಬದುಕು ಸಾಗಿಸಿದ ಇವರ ಬಗ್ಗೆ ಪಿ.ಆರ್. ತಿಪ್ಪೇಸ್ವಾಮಿಯವರು ಪುಸ್ತಕ ಬರೆದಿದ್ದಾರೆ.[೪೧]

ಮೈಸೂರಿನ ಮೃಗಾಲಯವನ್ನು ಮನೆಯಂತೆ ಭಾವಿಸಿ ಅಲ್ಲಿರುವ ಎಲ್ಲ ಬಗೆಯ ಮೃಗ ಪ್ರಾಣಿ ಪಕ್ಷಿಗಳನ್ನು ಸೂಫಿ ಚಿತ್ರಿಸಿರುವರು. ಚಾಮರಾಜೇಂದ್ರ ಕಲಾಶಾಲೆಯಲ್ಲಿ ಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಇವರು ಮೈಸೂರು ದಸರಾ ಸಂದರ್ಭದಲ್ಲಿ ವೇದಿಕೆ ಸಿಂಗರಿಸುವ ಕೆಲಸವನ್ನು ಮಾಡುತ್ತಿದ್ದರು. ಕರ್ನಾಟಕ ಲಲಿತಕಲಾ ಅಕಾಡೆಮಿಯು ೧೯೮೨ರಲ್ಲಿ ಇವರಿಗೆ ಪ್ರಶಸ್ತಿಯನ್ನು ಕೊಡಮಾಡಿದೆ. ಈ ಬಗೆಯ ವಿವರಣೆ ಇರುವ ಈ ಪುಸ್ತಕದಲ್ಲಿ ಸೂಫಿಯವರ ಬಾಲ್ಯಜೀವನ, ಕಲಾಬದುಕು, ಕಲಾಕೃತಿ ರಚನೆಯ ಹಿನ್ನೆಲೆ, ವಿಧಾನ, ಮೈಸೂರು ಮೃಗಾಲಯದೊಂದಿಗೆ ಭಾವನಾತ್ಮಕ ನಂಟು ಮುಂತಾದ ಅಂಶಗಳು ಹೇಳಲ್ಪಟ್ಟಿವೆ. ಅಲ್ಲದೆ ಕಲಾಕೃತಿಗಳ ಸಂಕ್ಷಿಪ್ತ ವಿಶ್ಲೇಷಣೆಯೂ ಇಲ್ಲಿದೆ. ಈ ಪುಸ್ತಕವು ಪ್ರಾಣಿ-ಪಕ್ಷಿಗಳ ಚಿತ್ರರಚನೆಯ ವಿಶಿಷ್ಟ ಕಲಾವಿದನೊಬ್ಬನನ್ನು ಪರಿಚಯಿಸಿದೆ. ಇತರ ವಿಷಯಗಳಿಗಿಂತ ಪ್ರಾಣಿ-ಪಕ್ಷಿಗಳ ಚಿತ್ರರಚನೆ ಹೇಗೆ ಭಿನ್ನವಾಗಿದೆ, ಅವುಗಳ ರಚನೆಯ ಸಂದರ್ಭದಲ್ಲಿ ಅನುಸರಿಸುವ ಎಚ್ಚರಿಕೆ, ಆಗುವ ತಪ್ಪುತಡೆಗಳು, ಅವುಗಳನ್ನು ಸರಿಪಡಿಸುವ ರೀತಿ, ಕಲಾವಿದರು ಹೇಗೆ ಇವೆಲ್ಲವುಗಳನ್ನು ನಿಭಾಯಿಸುತ್ತಾರೆ ಎನ್ನುವ ಅಂಶಗಳು ಈ ಕೃತಿಯ ಮೂಲಕ ಹೊರಬಂದಿದೆ. ಜೊತೆಗೆ ಸಮಕಾಲೀನವಾಗಿರುವ ಅಂದಿನ ಕೆಲವು ಪ್ರಾಣಿ-ಪಕ್ಷಿಗಳು ಇಂದು ಕಣ್ಮರೆಯಾಗಿವೆ. ಅಂತಹವುಗಳನ್ನು ಕೃತಿಗಳ ಮೂಲಕ ಉಳಿಸಿಕೊಟ್ಟಿರುವುದೂ ಇಲ್ಲಿ ಗಮನಾರ್ಹವಾಗಿದೆ.

---

೪೧. ಪಿ.ಆರ್.ತಿಪ್ಪೇಸ್ವಾಮಿ : ಎಂ.ಎಫ್.ಸೂಫಿ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು –೧೯೯೮

**ಎಸ್.ಎಸ್. ಮುನೋಳಿ :**

ಕರ್ನಾಟಕದ ಕಲಾಕ್ಷೇತ್ರದಲ್ಲಿ ಹೆಸರುವಾಸಿಯಾದ ಕಲಾವಿದರಲ್ಲಿ ಎಸ್.ಎಸ್.ಮುನೋಳಿಯವರೂ ಒಬ್ಬರು. ಇವರ ಬಗ್ಗೆ ಮಮತಾ.ಜಿ.ಸಾಗರ ಪುಸ್ತಕ ಬರೆದಿದ್ದಾರೆ.[೪೨] ಪ್ರಮುಖವಾಗಿ ಮುನೋಳಿಯವರ ಕಲಾಬದುಕು ಮತ್ತು ಕಲಾಕೃತಿಗಳ ಬಗ್ಗೆ ಈ ಕೃತಿಯಲ್ಲಿ ಹಲವಾರು ಅಂಶಗಳು ಅಡಕವಾಗಿವೆ.

೧೯೬೪ರ ಸುಮಾರಿಗೆ ಕರ್ನಾಟಕದಲ್ಲಿ ಕಲಾವಿದರ ಗುಂಪಾದ ನಾವು ನಾಲ್ವರು ಎಂಬ ಕಲಾವಿದರ ಗುಂಪನ್ನು ಸ್ಥಾಪಿಸಿದ ಪ್ರಮುಖರಲ್ಲಿ ಇವರೂ ಒಬ್ಬ ಸದಸ್ಯರಾಗಿದ್ದಾರೆ. ಈ ಕೃತಿಯಲ್ಲಿ ಎಸ್.ಎಸ್. ಮುನೋಳಿಯವರ ಬಾಲ್ಯಜೀವನ, ಕಲಾಸಕ್ತಿ, ಶಿಕ್ಷಣ, ಇವುಗಳು ವ್ಯಕ್ತಗೊಂಡಿವೆ. ಬಡತನದಲ್ಲಿ ಬೆಳೆದ ಇವರು ಚಿಕ್ಕಪ್ಪಂದಿರ ಸಹಕಾರದಿಂದ ಎಂ.ಎಸ್. ವಿಶ್ವವಿದ್ಯಾಲಯದಲ್ಲಿ ಚಿತ್ರಕಲೆಯ ಶಿಕ್ಷಣ ಪಡೆದರು. ಸಂಕು ಚೌಧರಿ, ಬೇಂದ್ರೆ, ವಿನೋದ್ ಷಾಹ, ಟಿ.ಕೆ.ಪಟೇಲ್, ಕೆ.ಕೆ.ಹೆಬ್ಬಾರ್, ವಿ.ಎಂ.ಮಾಳಿ, ಗೊಂದಲೇಕರ್, ಮುಂತಾದವರಿಂದ ಇವರು ಪ್ರೋತ್ಸಾಹ ಪಡೆದರು. ನಂತರ ಕರ್ನಾಟಕದಲ್ಲಿ ಆರ್.ಎಂ.ಹಡಪದರ ಪರಿಚಯ, ಕೆನ್ ಕಲಾಶಾಲೆ, ಎಂ.ಎಸ್.ನಂಜುಂಡರಾಯರ ಚಿತ್ರಕಲಾ ಪರಿಷತ್ತು, ಅ.ನ.ಸುಬ್ಬರಾಯರ ಕಲಾಮಂದಿರದ ಒಡನಾಟಗಳು ಪರಿಣಾಮಕಾರಿಯಾಗಿ ಅವರ ಜೀವನದಲ್ಲಿ ಪ್ರಭಾವ ಬೀರಿದವು.

ಎಸ್.ಎಸ್.ಮುನೋಳಿಯವರು ತಮ್ಮ ಚಿತ್ರಕಲಾ ಕೃತಿಗಳನ್ನು ಮೂರ್ತಸ್ವರೂಪದಿಂದ ಅಮೂರ್ತದ ಶೈಲಿಯ ಕಡೆಗೆ ಯಾವ ರೀತಿಯಾಗಿ ಕೊಂಡೊಯ್ದರು ಮತ್ತು ಇದಕ್ಕೆ ಪ್ರೇರಣೆಗಳನ್ನು ಯಾವ ಹಂತಗಳಲ್ಲಿ ಯಾರಿಂದ ಪಡೆದುಕೊಂಡರು ಎಂಬುದನ್ನು ಈ ಪುಸ್ತಕದಲ್ಲಿ ವಿವೇಚಿಸಲಾಗಿದೆ.

**ಯೂಸುಫ್ ಅರಕ್ಕಲ್ :**

ಸಮಕಾಲೀನ ಕಲಾಕ್ಷೇತ್ರದಲ್ಲಿ ವಿಶಿಷ್ಟ ಕಲಾಶೈಲಿಯನ್ನು ರೂಪಿಸಿಕೊಂಡ ಪ್ರಮುಖ ಕಲಾವಿದರಲ್ಲಿ ಇವರೂ ಒಬ್ಬರು. ಯೂಸುಫ್ ಅರಕ್ಕಲ್ ಬಗ್ಗೆ ಹೆಚ್ಚಾಗಿ ತಿಳಿದುಕೊಂಡಿರುವ ಕಲಾವಿಮರ್ಶಕ ಕೃಷ್ಣಶೆಟ್ಟಿಯವರು ಈ ಪುಸ್ತಕ ಬರೆದಿದ್ದಾರೆ.[೪೩] ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಖ್ಯಾತಿ ಗಳಿಸುವ ಮೂಲಕ ಕರ್ನಾಟಕಕ್ಕೆ ಕೀರ್ತಿ ತಂದು ಕೊಟ್ಟ ಇವರ ಕೃತಿಗಳು ಕರ್ನಾಟಕದ ಸಮಕಾಲೀನ ಕಲಾ ಸಂದರ್ಭದಲ್ಲಿ ಹೊಸ ಆಯಾಮವನ್ನು ಸೃಷ್ಟಿಸಿವೆ. ದಪ್ಪವಾದ ರೇಖೆಗಳು, ವಿಕೃತ ಎನ್ನುವಂತಿರುವ ಆಕಾರಗಳು, ಅಮೂರ್ತ ಕಲ್ಪನೆಯ ಹಿನ್ನೆಲೆ, ಸಾಂಕೇತಿಕ ವಿವರಗಳು, ದಪ್ಪವಾದ ವರ್ಣಲೇಪನಗಳು ಅವರ ಪ್ರತ್ಯೇಕ ಕಲಾಶೈಲಿಯನ್ನು ಪ್ರತಿನಿಧಿಸುವ ಅಂಶಗಳಾಗಿವೆ.

ಈ ಪುಸ್ತಕದಲ್ಲಿ ಅರಕ್ಕಲ್ ಅವರ ಜೀವನ ಮತ್ತು ಕಲೆ ಸ್ಥೂಲವಾಗಿ ಮೂಡಿಬಂದಿವೆ. ಜೀವನಕ್ಕೆ ಸಂಬಂಧಿಸಿದ ವಿಭಾಗದಲ್ಲಿ ಬಾಲ್ಯ, ಶಿಕ್ಷಣ, ಕಲಾಶಿಕ್ಷಣ, ಕಲಾಬದುಕುಗಳು ಬಿಂಬಿತಗೊಂಡಿದ್ದರೆ, ಕಲೆಯ ವಿಭಾಗದಲ್ಲಿ ಕಲಾಕೃತಿ ರಚನೆ, ಕಲಾಶೈಲಿ ಕೃತಿಗಳ ವಿಶ್ಲೇಷಣೆ, ಪ್ರದರ್ಶನಗಳ ಬಗ್ಗೆ ವಿವರ ಕೊಡಲಾಗಿದೆ. ನವ್ಯಕಲಾ ಕ್ಷೇತ್ರದಲ್ಲಿ ಹೆಸರು ಮಾಡಿದ ಯುಸೂಫ್ ಅರಕ್ಕಲ್ ಅವರ ಬಗೆಗಿರುವ ಈ ಕೃತಿಯಿಂದ ನವ್ಯಕಲೆಯ ಆಶಯಗಳು, ಬದಲಾಗುತ್ತಿರುವ ಕಲಾ ಮೌಲ್ಯಗಳು, ಬೇರೆ ಬಗೆಯಲ್ಲಿ ನಿಂತು ವಿವೇಚಿಸಬೇಕಾದ ಪರಿಸ್ಥಿತಿಯಲ್ಲಿ ಕಲಾವಿಮರ್ಶಕನ ಹೊಣೆಗಳು, ಇವುಗಳ ಬಗ್ಗೆ ಸ್ಥೂಲ ನೋಟ ಲಭ್ಯವಾಗುವುದು. ಕಲಾವಿಮರ್ಶೆ, ಕಲಾಸಾಹಿತ್ಯ ರಚನೆ, ಕಲಾಕೃತಿ ರಚನೆಯ ಹಿನ್ನೆಲೆಯಲ್ಲಿ

೪೨. ಮಮತಾ.ಜಿ.ಸಾಗರ :ಎಸ್.ಎಸ್.ಮುನೋಳಿ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು –೧೯೯೮.

೪೩. ಯೂಸುಫ್ ಅರಕ್ಕಲ್ : ಚಿ.ಸು.ಕೃಷ್ಣಶೆಟ್ಟಿ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು –೧೯೯೯

ಪ್ರಬುದ್ಧತೆ ಪಡೆದುಕೊಂಡ ಕೃಷ್ಣಶೆಟ್ಟಿಯವರು ತಮ್ಮ ಅನುಭವ, ಅಧ್ಯಯನಗಳ ಹಿನ್ನೆಲೆಯಲ್ಲಿ ಪ್ರಸ್ತುತ ಕಿರು ಪುಸ್ತಕವನ್ನು ಉತ್ತಮವಾಗಿ ರಚಿಸಿದ್ದಾರೆ.

**ಕೆ.ಟಿ. ಶಿವಪ್ರಸಾದ :**

ಕರ್ನಾಟಕದ ನವ್ಯಕಲಾ ಪರಂಪರೆಯಲ್ಲಿ ವಿಶಿಷ್ಟ ಸ್ಥಾನ ಪಡೆದುಕೊಂಡವರು ಕೆ.ಟಿ.ಶಿವಪ್ರಸಾದ್. ಪಾರಂಪರಿಕ ಮತ್ತು ಜನಪದ ಸಂಪ್ರದಾಯದ ವಿಷಯಗಳಿಗೆ ಹೊಸ ಆಯಾಮ ನೀಡಿ ಕೃತಿರಚನೆಯಲ್ಲಿ ಅಳವಡಿಸಿಕೊಳ್ಳುವ ಮೂಲಕ ಪ್ರತ್ಯೇಕ ಕಲಾಶೈಲಿಯನ್ನು ರೂಪಿಸಿಕೊಂಡವರು. ಈ ಪುಸ್ತಕವನ್ನು ಎಚ್.ಎ.ಅನಿಲಕುಮಾರ ಬರೆದಿದ್ದಾರೆ.[೪೪] ಕಲೆಯ ಕುರಿತು ಮತ್ತು ಸಮಕಾಲೀನ ಕಲೆಯ ಬಗ್ಗೆ ಅಧಿಕೃತವಾಗಿ ಮತ್ತು ಖಚಿತ ನಿಲುವಿನ ಹಿನ್ನೆಲೆಯಲ್ಲಿ ಮಾತನಾಡಬಲ್ಲ ರಾಜ್ಯದ ಕೆಲವೇ ವಿದ್ವಾಂಸರಲ್ಲಿ ಇವರೂ ಒಬ್ಬರು. ಇವರ ಹುಲಿವೇಷ, ಚಿತ್ರ ಪರಂಪರೆ, ಜನಪದ ಆಚರಣೆ, ಮೌಢ್ಯತೆ, ಸಮಕಾಲೀನ ಸ್ಪಂದನೆ, ಇಂತಹ ಸಂಗತಿಗಳ ಹಿನ್ನೆಲೆಯಲ್ಲಿ ಕೃತಿ ಮಹತ್ವಪಡೆದುಕೊಳ್ಳುತ್ತದೆ. ಪ್ರಸ್ತುತ ಪುಸ್ತಕವು ಶಿವಪ್ರಸಾದರ ಜೀವನ ಮತ್ತು ಕಲೆಯ ಬಗ್ಗೆ ಇದ್ದು ಇದರಲ್ಲಿ ಅವರ ಹುಟ್ಟು, ಬಾಲ್ಯ, ವಿದ್ಯಾಭ್ಯಾಸ, ಕಲಾಬದುಕು, ಆಸ್ತಿಕ-ನಾಸ್ತಿಕ, ದೈವತ್ವ ಮುಂತಾದವುಗಳ ಬಗೆಗಿನ ಅವರ ಅಭಿಪ್ರಾಯಗಳಿವೆ. ಅದರಂತೆ ಅವರ ಕೃತಿರಚನೆ, ಕಲಾಶೈಲಿ, ಚಿತ್ರಗಳ ವಸ್ತುವಿಷಯ, ಅಂತರ್ಮುಖಿ ಭಾವಗಳು, ಸಮಾಜಕ್ಕಾಗಿ ಕಲೆ ಎಂಬ ಅವರ ಅನಿಸಿಕೆ, ಮುಂತಾದ ವಿಷಯಗಳ ಬಗ್ಗೆ ಇಲ್ಲಿ ವಿವರವಿದೆ.

ಇಂತಹ ವಿವರಗಳಲ್ಲದೆ ನವ್ಯಕಲೆಯ ಬಗೆಗಿನ ಅವರ ಒಲವು, ಸಾಮಾಜಿಕ ನೆಲೆಯಲ್ಲಿ ಕಲೆಯ ಸ್ಥಿತಿಗತಿಗಳು, ಕಲಾವಿದನ ಮನೋಭೂಮಿಕೆಗಳು ಮತ್ತು ಸಮಕಾಲೀನ ಕಲಾ ದ್ವಂದ್ವಗಳ ಬಗ್ಗೆ ಅವರ ಅಭಿಪ್ರಾಯಗಳನ್ನು ಈ ಕೃತಿಯಲ್ಲಿ ಹಿಡಿದಿಡಲಾಗಿದೆ. ಸಮಾಜದ ಆಗುಹೋಗುಗಳಿಗೆ ಕಲಾವಿದ ಸ್ಪಂದಿಸಿ ಅದರ ಒಳಿತಿಗಾಗಿ ಕೆಲಸ ಮಾಡಬೇಕು. ಅಭಿವ್ಯಕ್ತಿ ಸ್ವಾತಂತ್ರ್ಯದ ನೆಪದಲ್ಲಿ ಸಾಮಾಜಿಕ ಸ್ವಾಸ್ಥ್ಯವನ್ನು ಕದಡುವ ವಿಚಾರಗಳು ಕಲಾನೆಲೆಯಲ್ಲಿ ವೈರುಧ್ಯವನ್ನುಂಟು ಮಾಡುತ್ತವೆ ಎನ್ನುವಂತಹ ಸಂಗತಿಗಳು ಇಲ್ಲಿ ಪರೋಕ್ಷವಾಗಿ ಬಿಂಬಿತಗೊಂಡಿವೆ.

**ಎಂ.ರಾಮನರಸಯ್ಯ :**

ಮೈಸೂರಿನ ಸಾಂಪ್ರದಾಯಿಕ ಚಿತ್ರಶೈಲಿಯ ಪ್ರಸಿದ್ಧ ಕಲಾವಿದರಲ್ಲಿ ಒಬ್ಬರಾದ ಎಂ.ರಾಮನರಸಯ್ಯನವರ ಜೀವನ ಮತ್ತು ಕಲಾಕೃತಿಗಳ ಕುರಿತಾಗಿ ಈ ಪುಸ್ತಕವಿದೆ.[೪೫] ಇವರನ್ನು ಸಮೀಪದಿಂದ ಬಲ್ಲವರಾದ ರಾಮದಾಸ್ ಅಡ್ಯಂತಾಯ್ ಅವರು ರಾಮನರಸಯ್ಯನವರ ಚಿತ್ರಶೈಲಿ, ಕಲಾಬದುಕು, ಕಲಾಕೃತಿಗಳ ವಿಮರ್ಶೆ ಜೊತೆಗೆ ಅವರ ಸೃಜನಶೀಲತೆಯ ವಿಚಾರಗಳ ಕುರಿತು ಸ್ಥೂಲವಾಗಿ ಪರಿಚಯಿಸಿದ್ದಾರೆ. ಅಲ್ಲಲ್ಲಿ ಅವರ ಕೃತಿಗಳ ಛಾಯಾಚಿತ್ರಗಳನ್ನು ಕೊಡಲಾಗಿದೆ. ಸಾಂಪ್ರದಾಯಿಕ ಚಿತ್ರಶೈಲಿಯಲ್ಲಿ ಮೈಸೂರಿನ ಚಿತ್ರಶೈಲಿಗೆ ತನ್ನದೇ ಆದ ವಿಶಿಷ್ಟ ಸ್ಥಾನವಿದೆ. ವಿಜಯನಗರ ಶೈಲಿಯ ಮುಂದುವರಿಕೆಯಾದರೂ ಹಲವಾರು ಮಾರ್ಪಾಟುಗಳೊಂದಿಗೆ ಅದಕ್ಕಿಂತ ಭಿನ್ನವಾಗಿ ನಿಲ್ಲುತ್ತದೆ. ಆಭರಣಗಳ ಅತಿಯಾದ ಬಳಕೆ, ಬಂಗಾರವರ್ಣ ಮತ್ತು ಬೆಳ್ಳಿವರ್ಣಗಳ ಹೆಚ್ಚಿನ ಉಪಯೋಗ, ಆಕೃತಿಗಳ ದುಂಡುತನಗಳಿಂದ ಇದು ಇತರೆ ಶೈಲಿಗಳಿಗಿಂತ ಭಿನ್ನವಾಗಿ ಕಂಡುಬರುತ್ತದೆ. ಈ ಶೈಲಿಯನ್ನು ಅನುಸರಿಸಿ ಅದೇ ಶೈಲಿಯಲ್ಲಿ ಚಿತ್ರರಚಿಸುತ್ತಿದ್ದ ಅರಮನೆ ವಂಶಸ್ಥ ಕಲಾವಿದರ ಕುರಿತಾಗಿ ಈ ಪುಸ್ತಕ ಬಂದಿರುವುದು ಮಹತ್ವದ್ದಾಗಿದೆ.

೪೪. ಕೆ.ಟಿ.ಶಿವಪ್ರಸಾದ್ : ಎಚ್.ಎ.ಅನಿಲಕುಮಾರ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು -೨೦೦೦.

೪೫. ಎಂ. ರಾಮನರಸಯ್ಯ : ರಾಮದಾಸ್ ಆಡ್ಯಂತಾಯ್ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦.

**ಎಸ್.ಜಿ. ವಾಸುದೇವ್ :**

ಕರ್ನಾಟಕ ಸಮಕಾಲೀನ ಕಲಾಕ್ಷೇತ್ರಕ್ಕೆ ಅನನ್ಯ ರೂಪಕಲ್ಪನೆಗಳನ್ನು ಕೊಡುಗೆಯಾಗಿತ್ತ ಎಸ್.ಜಿ. ವಾಸುದೇವರ ಕುರಿತಾಗಿರುವ ಈ ಕೃತಿಯನ್ನು ಕೆ.ವಿ. ಸುಬ್ರಹ್ಮಣ್ಯ ರಚಿಸಿದ್ದಾರೆ.[೪೬] ಪಾಶ್ಚಾತ್ಯ ಕಲೆಯ ಮೌಲ್ಯಗಳಿಗಿಂತ ಪೌರಾತ್ಯ ಕಲೆಯ ಅಂತರ್ಮುಖಿ ಭಾವಾಭಿವ್ಯಕ್ತಿಗೆ ಹೆಚ್ಚಿನ ಮಹತ್ವ ನೀಡುವ ವಾಸುದೇವ ಅಂತಹ ಅಂಶಗಳನ್ನೇ ತಮ್ಮ ಕೃತಿಗಳಲ್ಲಿ ಅಳವಡಿಸುತ್ತಾರೆ. ಸಮಕಾಲೀನ ಕಲಾ ವಲಯದಲ್ಲಿ ಅಮೂರ್ತ ಕಲಾಶೈಲಿಯ ಅನಿರ್ಧಿಷ್ಟ ರೂಪಗಳನ್ನು ಸಂಯೋಜಿಸುವ ಪ್ರಕ್ರಿಯೆಯಲ್ಲಿ ಹೆಚ್ಚಿನ ಕಲಾವಿದರು ತೊಡಗಿದ್ದರೆ, ವಾಸುದೇವ ಅವರು ಮೂರ್ತರೂಪಗಳ ಪಾರಂಪರಿಕ ಹಿನ್ನೆಲೆ, ಆಚರಣೆಗಳ ಹಿನ್ನೆಲೆಯಲ್ಲಿ ಹೊಸ ನಿಲುವಿನೊಂದಿಗೆ ಪ್ರತ್ಯೇಕ ಶೈಲಿಯನ್ನು ತಮ್ಮ ಕಲಾ ಬದುಕಿನಲ್ಲಿ ಕಂಡುಕೊಂಡಿದ್ದಾರೆ.

'ವೃಕ್ಷಗಳು' ಸರಣಿ ಕಲಾಕೃತಿಗಳಲ್ಲಿ ಅವರ ಭಾವನಾತ್ಮಕ ಅಭಿವ್ಯಕ್ತಿ, ಪರಂಪರೆಯ ಬಗೆಗಿನ ಕಾಳಜಿ, ಪರಿಸರದ ಉಳಿವಿನ ಕಳಕಳಿ, ಸಾಮಾಜಿಕ ವ್ಯವಸ್ಥೆಯ ಶ್ರೇಣೀಕೃತ ಬದುಕು ಮುಂತಾದ ಅಂಶಗಳು ಗೋಚರಿಸುತ್ತವೆ. ಬಣ್ಣ ಲೇಪನಕ್ಕಿಂತ ರೇಖಾ ವಿನ್ಯಾಸಕ್ಕೆ ಹೆಚ್ಚಿನ ಮಹತ್ವ ನೀಡುವ ಇವರ ಕೃತಿಗಳು ಗ್ರಾಮೀಣ ಸೊಗಡನ್ನು ಹಿಡಿದಿಡುವ ನಿಟ್ಟಿನಲ್ಲಿ ಮುಖ್ಯ ಪಾತ್ರ ವಹಿಸುತ್ತವೆ. ಇತ್ತೀಚಿನ 'ಥಿಯೇಟರ್ ಆಫ್ ಲೈಫ್' ಕಲಾಕೃತಿಗಳು ಅವರ ಕಲಾಶೈಲಿಯ ಪ್ರತಿಬಿಂಬದಂತಿವೆ. ಇಂತಹ ಅಂಶಗಳ ಜೊತೆಗೆ ಈ ಪುಸ್ತಕದಲ್ಲಿ ಅವರ ಜೀವನ ಮತ್ತು ಕಲೆಯ ಬಗ್ಗೆ ಹಲವು ಅಂಶಗಳು ವ್ಯಕ್ತಗೊಂಡಿವೆ. ಮುಖ್ಯವಾಗಿ ಬಾಲ್ಯ, ಶಿಕ್ಷಣ, ಕಲಾಶಿಕ್ಷಣ, ಕಲಾಬದುಕು, ಕೃತಿರಚನೆ, ಪ್ರದರ್ಶನಗಳು ಮತ್ತು ಅವರ ಕೆಲವು ಕೃತಿಗಳ ವಿಶ್ಲೇಷಣೆ ಇಲ್ಲಿದೆ. ಈ ಪುಸ್ತಕದಲ್ಲಿ ಕಲೆ ಮತ್ತು ಸಮಾಜ ಇವುಗಳ ಅನುಸಂಧಾನ, ಕಲೆ, ವ್ಯಕ್ತಿ, ಸಮುದಾಯ, ಪರಂಪರೆ, ಪರಿಸರ, ನಂಬಿಕೆ, ಆಚರಣೆ, ಇಂತಹ ಸಂಗತಿಗಳು ಸಮಕಾಲೀನ ಕಲಾವಲಯದಲ್ಲಿ ಹೇಗೆ ಬಿಂಬಿತವಾಗುತ್ತಿವೆ ಎನ್ನುವ ವಿಚಾರಗಳು ಇಲ್ಲಿ ಸಾಂಕೇತಿಕವಾಗಿ ವ್ಯಕ್ತವಾಗಿವೆ.

**ಕಲಾತಪಸ್ವಿ ಕೆ. ವೆಂಕಟಪ್ಪ :**

ಕರ್ನಾಟಕ ಕಲಾ ಚರಿತ್ರೆಯಲ್ಲಿ ಕಲಾತಪಸ್ವಿ ಎಂದೇ ಹೆಸರಾದ ಕೆ. ವೆಂಕಟಪ್ಪನವರ ಬಗ್ಗೆ ಬಂದಿರುವ ಮತ್ತೊಂದು ಪುಸ್ತಕ ಇದಾಗಿದೆ.[೪೭]ಕಲಾವಿದರ ಬಾಲ್ಯ, ಪ್ರಾಥಮಿಕ ಶಿಕ್ಷಣ, ಕಲೆಯ ಬಗೆಗಿನ ಒಲವು, ಕಲಾಶಿಕ್ಷಣ, ಕಲಾಬದುಕು, ಕಲಾಕೃತಿಗಳ ಬಗ್ಗೆ ಪ್ರಮುಖವಾಗಿ ಹೇಳಲಾಗಿದೆ.

ಈ ಕೃತಿಯಲ್ಲಿ ಪ್ರಮುಖವಾಗಿ ಕೆ. ವೆಂಕಟಪ್ಪನವರ ಬಾಲ್ಯಜೀವನ, ಮೈಸೂರಿನಲ್ಲಿ ಮೊದಲ ವರ್ಷಗಳು, ಬಂಗಾಳ ಕಲಾಶಾಲೆಯಲ್ಲಿ, ಹಿಮಾಲಯ ಯಾತ್ರೆ, ಮರಳಿ ಮೈಸೂರಿಗೆ, ಬೆಂಗಳೂರಿನಲ್ಲಿ ಅವರ ಕಲೆ ಮತ್ತು ವ್ಯಕ್ತಿತ್ವ ಎಂಬ ವಿಷಯಗಳು ನಿರೂಪಣೆಗೊಂಡಿದೆ. ಕೊನೆಯಲ್ಲಿ ಕೆಲವು ಮುಖ್ಯ ಪ್ರಸಂಗಗಳನ್ನು ಕೊಡಲಾಗಿದೆ. ಕಲಾಕೃತಿಗಳ ವರ್ಣನೆಯಲ್ಲಿ ಅವರ ಜಲವರ್ಣ ಚಿತ್ರಗಳು, ಪ್ಲಾಸ್ಟರ್ ಆಫ್ ಪ್ಯಾರಿಸ್‌ನ ಶಿಲ್ಪಗಳು, ರೇಖಾಚಿತ್ರಗಳು ವಿವರಣೆಗೊಂಡಿವೆ. ದಕ್ಷಿಣ ಕರ್ನಾಟಕದ ಕಲಾವಿದರ ಬಗ್ಗೆ ಬಂದ ಚಿತ್ರಕಲಾ ಸಾಹಿತ್ಯದಲ್ಲಿ ಅನೇಕ ಸಂಗತಿಗಳು ತಿಳಿದುಬರುತ್ತವೆ. ಈ ಭಾಗದ ಹೆಚ್ಚಿನ ಜನ ಕಲಾವಿದರು ಮೈಸೂರಿನ ಚಾಮರಾಜೇಂದ್ರ ಚಿತ್ರಕಲಾಶಾಲೆಯಲ್ಲಿ ಕಲಾಶಿಕ್ಷಣ ಪಡೆದಿರುವುದು ಗಮನಿಸುವ ಅಂಶವಾಗಿದೆ.

೪೬. ಕೆ.ವಿ.ಸುಬ್ರಹ್ಮಣ್ಯ :ಎಸ್.ಜಿ. ವಾಸುದೇವ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು -೨೦೦೧.

೪೭. ಸಾ.ಕೃ.ರಾಮಚಂದ್ರರಾವ್: ಕಲಾತಪಸ್ವಿ : ಪ್ರಾಚ್ಯ ವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ-೨೦೦೪.

ಆದರೆ ವೆಂಕಟಪ್ಪನವರು ಕಲ್ಕತ್ತಾ ಸರಕಾರಿ ಚಿತ್ರಕಲಾ ಶಾಲೆಯಲ್ಲಿ ಕಲಿತಿರುವುದು ವಿಶೇಷವಾಗಿದೆ. ಉತ್ತರ ಕರ್ನಾಟಕದ ಕಲಾವಿದರ ಕೃತಿಗಳಲ್ಲಿ ಮತ್ತು ಕಲಾಬದುಕಿನಲ್ಲಿ ಮುಂಬೈ ಪ್ರಭಾವದಿಂದ ಪಾಶ್ಚಾತ್ಯ ಲಕ್ಷಣಗಳು ಕಂಡುಬಂದರೆ, ದಕ್ಷಿಣ ಕರ್ನಾಟಕದ ಕಲಾವಿದರ ಕೃತಿಗಳಲ್ಲಿ ಕಲ್ಕತ್ತಾ ಪ್ರಭಾವದಿಂದ ಬಂಗಾಲ ಕಲಾಶೈಲಿಯ ಲಕ್ಷಣಗಳು ಕಂಡುಬರುವುದನ್ನು ಸೂಕ್ಷ್ಮವಾಗಿ ಗುರುತಿಸಬಹುದು. ಉತ್ತರ ಕರ್ನಾಟಕದ ಕಲಾವಿದರು ವಿಕ್ಟೋರಿಯನ್ ಚಿತ್ರಶೈಲಿಯಿಂದ ಪ್ರಭಾವಿತಗೊಂಡಿದ್ದರೆ, ದಕ್ಷಿಣ ಕರ್ನಾಟಕದ ಹೆಚ್ಚಿನ ಕಲಾವಿದರು ಭಾರತೀಯ ಸಾಂಪ್ರದಾಯಿಕ ಚಿತ್ರಶೈಲಿಗಳಿಂದ ಪ್ರೇರಿತರಾಗಿ ಕೃತಿ ರಚಿಸಿದ್ದು ತಿಳಿದುಬರುತ್ತದೆ.

**೩. ಕರಾವಳಿ ಕರ್ನಾಟಕ ಕಲಾವಿದರ ಬಗ್ಗೆ ಬಂದ ಸಾಹಿತ್ಯ :**

ಕರಾವಳಿ ಕರ್ನಾಟಕದ ವ್ಯಾಪ್ತಿಯನ್ನು ಅಧ್ಯಯನದ ಅನುಕೂಲಕ್ಕಾಗಿ ಉತ್ತರ ಕನ್ನಡ, ಉಡುಪಿ, ದಕ್ಷಿಣ ಕನ್ನಡ, ಕೊಡಗು ಜಿಲ್ಲೆಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಈ ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಚಿತ್ರಕಲಾವಿದರನ್ನು ಕರಾವಳಿ ಕರ್ನಾಟಕದ ಕಲಾವಿದರು ಎಂದು ಪರಿಗಣಿಸಿ ಅವರ ಕುರಿತು ಬಂದ ವ್ಯಕ್ತಿಅಧ್ಯಯನ ಸಾಹಿತ್ಯವನ್ನು ಈ ಕೆಳಗಿನಂತೆ ವಿವೇಚಿಸಲಾಗಿದೆ.

**ಕಲಾಸಾಧಕ :**

ಕಲಾವಿದ ಕೆ.ಕೆ.ಹೆಬ್ಬಾರರ ಕುರಿತ ಪುಸ್ತಕ ಇದಾಗಿದ್ದು ಮರಿಶಾಮಾಚಾರ್ ರಚನೆ ಮಾಡಿದ್ದಾರೆ.[೪೮] ಹೆಬ್ಬಾರರ ಬಾಲ್ಯ, ಜನನ, ಪ್ರಾಥಮಿಕ ಶಿಕ್ಷಣ, ಕಲಾ ಆಸಕ್ತಿ, ಕಲಾ ಶಿಕ್ಷಣವನ್ನು ಮೊದಲ ಅಧ್ಯಾಯದಲ್ಲಿ ಹೇಳಲಾಗಿದೆ. ಸತತ ಅನ್ವೇಷಣೆ ಸೃಜನಶೀಲ ಎನ್ನುವ ಎರಡನೆಯ ಅಧ್ಯಾಯದಲ್ಲಿ ಅವರ ನಿರಂತರ ಕಲಾ ಚಟುವಟಿಕೆಗಳು, ಕಲೆಯ ಬಗೆಗಿನ ದೃಷ್ಟಿಕೋನಗಳನ್ನು ಹೇಳಲಾಗಿದೆ. ಮುಂದಿನ ಭಾಗದಲ್ಲಿ ಅವರ ಕಲೆಯ ಮೂಲ ಸೆಲೆಗಳ ಪ್ರಭಾವಗಳನ್ನು ವಿಶ್ಲೇಷಿಸಲಾಗಿದೆ. ಮುಂದಿನ ಭಾಗದಲ್ಲಿ ಅವರ ಕೆಲವು ಪ್ರಮುಖ ಕಲಾಕೃತಿಗಳಾದ ನಿರ್ದಯ ಬೇಸಿಗೆ, ವೈಪರೀತ್ಯ, ನಾಗಮಂಡಲ, ಗಾಳಿಪಟಗಳು, ಕಟ್ಟಡ ಕಟ್ಟುವವರು, ನಂಬಿಕೆ, ಮೀನುಗಾರರು ಮುಂತಾದವುಗಳನ್ನು ವಿವರಿಸಲಾಗಿದೆ. ಹೆಬ್ಬಾರರು ಸಮಕಾಲೀನರ ಕಲೆಗೆ ಸ್ಪಂದಿಸಿದ ರೀತಿ, ಸಾಮಾಜಿಕ ಸ್ಥರದಲ್ಲಿ ಅವರ ಕಲಾಕೃತಿಗಳು ಹುಟ್ಟಿಹಾಕಿದ ಪ್ರಕ್ರಿಯೆಗಳು, ಭಾರತೀಯ ಮತ್ತು ಕರ್ನಾಟಕದ ಕಲಾಕ್ಷೇತ್ರಕ್ಕೆ ಹೆಬ್ಬಾರರ ಕೊಡುಗೆ ಮುಂತಾದವುಗಳನ್ನು ಸ್ಥೂಲ ರೀತಿಯಲ್ಲಿ ಲೇಖಕರು ಇಲ್ಲಿ ತಿಳಿಸಿದ್ದಾರೆ.

ಕೊನೆಯ ಭಾಗದಲ್ಲಿ ಲೇಖಕರು ಹೆಬ್ಬಾರ್ ಮತ್ತು ನಾನು ಎನ್ನುವ ವಿಭಾಗ ಮಾಡಿಕೊಂಡು ಅದರಲ್ಲಿ ಅವರೊಂದಿಗಿನ ತಮ್ಮ ನಿಕಟಸಂಪರ್ಕ ಮತ್ತು ಕಲೆಯ ಬಗೆಗಿನ ಒಲವು, ಕಲಾಶಿಕ್ಷಣ, ಕಲಾಬದುಕು, ಕಲಾ ಚಟುವಟಿಕೆಗಳನ್ನು ಕುರಿತು ಹೇಳಿದ್ದಾರೆ. ಕೊನೆಯಲ್ಲಿ ಹೆಬ್ಬಾರರ ಸಂಕ್ಷಿಪ್ತ ಪರಿಚಯ ಮತ್ತು ಬಯೋಡಾಟಾ (ಸ್ವವಿವರ)ವನ್ನು ಕೊಡಲಾಗಿದೆ. ಈ ಕಿರುಪುಸ್ತಕದಲ್ಲಿ ಅಲ್ಲಲ್ಲಿ ವಿಷಯಕ್ಕನುಸಾರವಾಗಿ ಹೆಬ್ಬಾರರ ಕಲಾಕೃತಿ ಮತ್ತು ರೇಖಾಚಿತ್ರಗಳನ್ನು ಬಳಸಿಕೊಂಡಿರುವುದು ಪುಸ್ತಕದ ಮೌಲ್ಯವನ್ನು ಹೆಚ್ಚಿಸಿದೆ.

**ಕೆ.ಕೆ. ಹೆಬ್ಬಾರ :**

ಕಲಾಸಾಹಿತಿ ಎನ್ ಮರಿಶಾಮಾಚಾರ್ ರಚಿಸಿದ ಪುಸ್ತಕವನ್ನು[೪೯] ಸಿ.ಎಮ್.ಎನ್.ಪ್ರಕಾಶನದವರು ಪ್ರಕಟಿಸಿದ್ದಾರೆ. ಇದಲ್ಲಿ ಹೆಬ್ಬಾರರ ಜನನ, ಬಾಲ್ಯಜೀವನ, ಸಾಂಸ್ಕೃತಿಕ ಪರಿಸರ, ಪ್ರಾಥಮಿಕ ಶಿಕ್ಷಣ,

೪೮. ಎನ್.ಮರಿಶಾಮಾಚಾರ್ : ಕಲಾಸಾಧಕ : ಸಿ.ಎಮ್.ಎನ್. ಪ್ರಕಾಶನ ಬೆಂಗಳೂರು-೧೯೬೯.
೪೯. ಎನ್.ಮರಿಶಾಮಾಚಾರ್ : ಕೆ.ಕೆ. ಹೆಬ್ಬಾರ : ಸಿ.ಎಮ್.ಎನ್. ಪ್ರಕಾಶನ ಬೆಂಗಳೂರು-೧೯೮೩.

ಪ್ರಾರಂಭಿಕ ಹಂತದ ಕಲೆಯ ಬಗೆಗಿನ ಆಕರ್ಷಣೆ ಮುಂತಾದ ವಿಷಯಗಳು ಮೊದಲ ಹಂತದಲ್ಲಿ ಅಭಿವ್ಯಕ್ತಗೊಂಡಿವೆ. ಮುಂಬೈಯಲ್ಲಿ ಕಲಾಶಿಕ್ಷಣ ಪಡೆದುಕೊಂಡ ರೀತಿ, ಅಲ್ಲಿಯ ಶಿಕ್ಷಣಕ್ರಮ, ಕಲಾಶಿಕ್ಷಣದ ನಂತರ ಜೆ.ಜೆ.ಕಲಾಶಾಲೆಯಲ್ಲಿ ಅಧ್ಯಾಪಕರಾಗಿ ನಿಯುಕ್ತಿಗೊಂಡ ರೀತಿ, ಅನಂತರದ ಯುರೋಪ ಪ್ರವಾಸ, ಈ ಪ್ರವಾಸದಲ್ಲಿ ಹೆಬ್ಬಾರರು ವಿವಿಧ ದೇಶವನ್ನು ಸುತ್ತಿ ಆಯಾ ದೇಶಗಳ ಕಲೆಯನ್ನು ಪರಿಭಾವಿಸಿದ ವಿಷಯಗಳು ಅನಾವರಣಗೊಂಡಿವೆ.

ಪ್ರಯೋಗಶೀಲ ಕಲಾವಿದ ಎನ್ನುವ ತಲೆಬರಹದಡಿಯಲ್ಲಿ ಅವರ ಕಲಾಕೃತಿಗಳನ್ನು ಮರಿಶಾಮಾಚಾರರು ಇಲ್ಲಿ ವಿಶ್ಲೇಷಣೆ ಮಾಡಿದ್ದಾರೆ. ಬಣ್ಣಗಾರಿಕೆ, ರೇಖಾವಿನ್ಯಾಸ, ಸಂಯೋಜನೆಯ ರೀತಿ ಮುಂತಾದ ವಿಷಯಗಳು ವಿಶ್ಲೇಷಣೆಗೆ ಒಳಪಟ್ಟಿವೆ. ಅಲ್ಲದೆ ಅವರ ಕೃತಿಗಳನ್ನು ವಿಷಯಾನುಸಾರ ವಿಂಗಡಣೆ ಮಾಡಿದ್ದು, ವೈಜ್ಞಾನಿಕ ವಿಷಯದ ಚಿತ್ರಗಳು, ಸಂಗೀತದ ಬಗೆಗಿನ ಚಿತ್ರಗಳು, ಮಾನವ ಜೀವನದ ಚಿತ್ರಗಳು, ರೇಖಾಚಿತ್ರಗಳು ಎಂಬುದಾಗಿ ವಿಂಗಡಿಸಿ ಚರ್ಚಿಸಿದ್ದಾರೆ. ವೈಜ್ಞಾನಿಕ ಚಿತ್ರಕಲೆಗಳಲ್ಲಿ ರಾಕೆಟ್, ಬರ್ತ ಆಫ್ ಮೂನ್, ಗೆಲಾಕ್ಸಿ, ಸರ್ಚ, ಬ್ರಿಜ್ ಟು ದ ಮೂನ್ ಪ್ರಮುಖವಾಗಿವೆ. ಸಂಗೀತದ ಬಗೆಗಿನ ಚಿತ್ರಗಳಲ್ಲಿ ಸಂಗೀತಗಾರರು ಪ್ರಧಾನವಾಗಿರದೆ, ಬೆರಳು ಮತ್ತು ವಾದ್ಯಗಳನ್ನು ಸಂಯೋಜನೆ ಮಾಡಲಾಗಿದೆ. ಮಾನವನನ್ನು ಕುರಿತ ಚಿತ್ರಗಳಲ್ಲಿ ಭಿಕ್ಷುಕರು, ನಿರ್ದಯಬೇಸಿಗೆ, ನಿರಾಶ್ರಿತರು, ಬಾಂಗ್ಲಾ ದೇಶದ ಉದಯ, ಕಪ್ಪುಗೋಡೆ ಮುಂತಾದವು ಪ್ರಮುಖವಾಗಿದ್ದು ಇವೆಲ್ಲವುಗಳ ಬಗ್ಗೆ ವಿಶ್ಲೇಷಣೆಯನ್ನು ಮಾಡಲಾಗಿದೆ. ಈ ಪುಸ್ತಕವು ಹೆಬ್ಬಾರರ ಕಿರು ಪರಿಚಯ ಮತ್ತು ಅವರ ಕಲಾಕೃತಿಗಳನ್ನು ಕುರಿತು ಸ್ಥೂಲ ನೋಟ ಕೊಡುತ್ತದೆ.

**ಎನ್.ಜೆ. ಪಾವಂಜೆ :**

ನರಹರಿ ಗೋಪಾಲಕೃಷ್ಣ ಪಾವಂಜೆಯವರು ದಕ್ಷಿಣ ಕನ್ನಡ ಜಿಲ್ಲೆಯವರು. ೧೮೯೨ ಏಪ್ರಿಲ್ ತಿಂಗಳಲ್ಲಿ ಯಲ್ಲೂರು ಗ್ರಾಮದಲ್ಲಿ ಜನಿಸಿದರು. ಬಾಲ್ಯದ ದಿನಗಳಲ್ಲಿಯೇ ಕಲಾಕ್ಷೇತ್ರಕ್ಕೆ ಆಕರ್ಷಿತರಾಗಿ ಮುಂದೆ ಕಲಾಶಿಕ್ಷಣ ಪಡೆದುಕೊಂಡರು. ಕರಾವಳಿ ಭಾಗದ ಶ್ರೇಷ್ಠ ಕಲಾವಿದರಲ್ಲಿ ಒಬ್ಬರಾದ ಇವರ ಜೀವನವೇ ಕಲೆಗಾಗಿ ಮೀಸಲಾಗಿತ್ತು. ಎನ್.ಜೆ. ಪಾವಂಜೆಯವರನ್ನು ಕುರಿತಾದ ಪುಸ್ತಕವನ್ನು ಮತ್ತೊಬ್ಬ ಕಲಾವಿದರಾದ ಎಂ.ಟಿ.ವಿ ಆಚಾರ್ಯ ಬರೆದಿದ್ದಾರೆ.[೫೦]

ಪಾವಂಜೆಯವರ ಕಲೆ ಮತ್ತು ಬದುಕಿನ ಅನೇಕ ವಿರಗಳು ಇಲ್ಲಿ ಅನಾವರಣಗೊಂಡಿವೆ. ಪಾವಂಜೆಯವರು ಜಲವರ್ಣ ಮಾಧ್ಯಮದಲ್ಲಿ ಸಿದ್ಧಹಸ್ತರು. ನೂರು ವರ್ಷಗಳ ಹಿಂದೆ ಇವರು ರಚಿಸಿದ ಜಲವರ್ಣ ಕೃತಿಗಳು ಈಗಲೂ ಉತ್ತಮ ಸ್ಥಿತಿಯಲ್ಲಿವೆ. ಇವರ ಕೃತಿಗಳನ್ನು ಗಮನಸಿದಾಗ ಜಲವರ್ಣ ಮಾಧ್ಯಮದಲ್ಲಿ ಇವರಿಗಿದ್ದ ಹಿಡಿತ, ಬಣ್ಣಗಳ ಸಂಯೋಜನೆಯ ಜ್ಞಾನ, ಕ್ಷಿಪ್ರ ಗತಿಯ ಕುಂಚದ ಚಲನೆ ಇತ್ಯಾದಿ ಅಂಶಗಳು ಕಂಡುಬರುತ್ತವೆ. ವಸ್ತುಗಳು ಮತ್ತು ಇನ್ನಿತರ ಆಕಾರಗಳ ಬಗ್ಗೆ ಇವರಿಗಿದ್ದ ಪರಿಶೀಲನಾ ದೃಷ್ಟಿ ಅಗಾಧವಾದುದು. ಯಾವುದೇ ಆಕಾರವನ್ನು ತಮ್ಮ ಕೃತಿಯಲ್ಲಿ ಬಳಸಿಕೊಂಡಾಗ ಅದರ ಮೂಲ ರೂಪದ ಯಥಾವತ್ ನಿರೂಪಣೆಗೆ ಮಹತ್ವ ಕೊಡುತ್ತಿದ್ದರು.

ಪಾವಂಜೆಯವರು ದೇಶದ ನಾನಾ ಭಾಗಗಳಿಗೆ ಭೇಟಿ ನೀಡಿ ಅಲ್ಲಿನ ದೃಶ್ಯಗಳನ್ನು ತಮ್ಮ ಕೃತಿಯಲ್ಲಿ ದಾಖಲಿಸಿದ್ದಾರೆ. ದೆಹಲಿ, ಆಗ್ರಾ, ಹೈದರಾಬಾದ್, ಮುಂಬೈಗಳಂತಹ ನಗರಗಳೂ ಸೇರಿದಂತೆ ಹಲವು ಸ್ಥಳಗಳ ವರ್ಣಚಿತ್ರ ಮತ್ತು ರೇಖಾಚಿತ್ರಗಳನ್ನು ರಚಿಸಿದ್ದಾರೆ. ಪ್ರಕೃತಿ ಚಿತ್ರಗಳಲ್ಲದೆ ಶ್ರೀಸಾಮಾನ್ಯರ ವಿವಧ ಭಂಗಿಗಳು, ಹಲವಾರು ಸಮಾರಂಭಗಳು, ಭಿಕ್ಷುಕರು, ಕಮ್ಮಾರ, ಚಮ್ಮಾರ,

೫೦. ಎಂ.ಟಿ.ವಿ.ಆಚಾರ್ಯ : ಎನ್.ಜಿ.ಪಾವಂಜೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೩.

ಬಡಿಗ, ವೈದಿಕ ಆಚರಣೆ ಹೀಗೆ ದೈನಂದಿನ ಬದುಕಿನ ವಿವರಗಳೂ ಇವರ ಕೃತಿಗಳಲ್ಲಿ ಮೂಡಿವೆ. ಪ್ರಸ್ತುತ ಪುಸ್ತಕವು ಪಾವಂಜೆಯವರ ಜೀವನ, ಕಲೆ ಮತ್ತು ಕಲಾಕೃತಿಗಳನ್ನು ಸ್ಥೂಲವಾಗಿ ಕಟ್ಟಿಕೊಡುತ್ತದೆ.

**ಕೆ.ಕೆ. ಹೆಬ್ಬಾರ :**

ನಾಡಿನ ಪ್ರಸಿದ್ಧ ಕಲಾವಿದರಾದ ಕೆ.ಕೆ. ಹೆಬ್ಬಾರರ ಬಗ್ಗೆ ಇರುವ ಈ ಪುಸ್ತಕವನ್ನು ಎನ್. ಮರಿಶಾಮಾಚಾರ್ ಬರೆದಿದ್ದಾರೆ.[೫೧] ಕರ್ನಾಟಕದ ಕಲೆಯ ಕೀರ್ತಿಯನ್ನು ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಪಸರಿಸಿದ ಕಲಾವಿದರಲ್ಲಿ ಹೆಬ್ಬಾರರು ಪ್ರಮುಖರಾಗಿದ್ದಾರೆ. ಕಲೆಯಲ್ಲಿ ಹೊಸ ಸಾಧ್ಯತೆಗಳನ್ನು ಕಂಡುಕೊಂಡ ಹೆಬ್ಬಾರರು ಅವುಗಳನ್ನು ಕೃತಿಗಳಲ್ಲಿ ಅಳವಡಿಸಿದವರು. ನಾಡಿನ ಕಲಾಪಯಣಕ್ಕೆ ಹೊಸ ದಿಕ್ಕು ತೋರಿಸಿದ ಇವರು ಸೃಜನಶೀಲ ವ್ಯಕ್ತಿತ್ವ ಉಳ್ಳವರಾಗಿದ್ದರು. ಅವರ ಹಲವು ಕಲಾಕೃತಿಗಳು ವಿದೇಶಗಳಲ್ಲಿ ನೆಲೆಗೊಂಡಿವೆ.

ಕೆ.ಕೆ. ಹೆಬ್ಬಾರರನ್ನು ಹತ್ತಿರದಿಂದ ಬಲ್ಲವರಾದ ಎನ್ ಮರಿಶಾಮಾಚಾರರು ಈ ಕೃತಿಯಲ್ಲಿ ಅನೇಕ ಮಹತ್ವದ ಸಂಗತಿಗಳನ್ನು ಬಿಂಬಿಸಿದ್ದಾರೆ. ಮುಖ್ಯವಾಗಿ ಇದರಲ್ಲಿ ಅವರ ಬಾಲ್ಯ, ಶಿಕ್ಷಣ, ಬಡತನದ ಬೇಗೆ, ಮುಂಬೈ ಫೋಟೋಗ್ರಾಫರನ ಬಳಿ ಕೆಲಸ ಮಾಡಿದ ಅನುಭವ, ಜೆ.ಜೆ. ಕಲಾಶಾಲೆ ಸೇರಿ ಖ್ಯಾತರಾದ ರೀತಿ, ನಂತರ ಸ್ವತಂತ್ರ ದಾರಿಯಲ್ಲಿ ಮುಂದುವರೆದಿರುವುದು, ಯುರೋಪ ಪ್ರವಾಸ, ಪರಿಸರದ ಪ್ರಭಾವಕ್ಕೆ ಒಳಗಾಗಿ ಕೃತಿಗಳನ್ನು ರಚಿಸಿರುವುದು, ವೈಜ್ಞಾನಿಕ ಅನ್ವೇಷಣೆಯ ಕೃತಿಗಳು, ಸಂಕೇತ ಪ್ರಧಾನವಾದ ಕೃತಿಗಳು, ಮಾನವ ಕುರಿತ ಚಿತ್ರಗಳು, ರೇಖಾಚಿತ್ರಗಳು, ಸುಖಮಯ ಸಂಸಾರಕ್ಕೆ ಮರಳಿದ್ದು, ಸಮಕಾಲೀನ ಕಲೆಗೆ ಕೊಡುಗೆ, ಭಾರತೀಯ ಕಲಾರಂಗಕ್ಕೆ ಕೊಡುಗೆ, ಅಕಾಡೆಮಿ ಅಧ್ಯಕ್ಷರಾಗಿ ಸಲ್ಲಿಸಿದ ಮಹತ್ಕಾರ್ಯಗಳು, ಪ್ರಶಸ್ತಿಗಳು, ವ್ಯಕ್ತಿವಿವರ ಮುಂತಾದ ಹಲವಾರು ಅಂಶಗಳು ವ್ಯಕ್ತಗೊಂಡಿವೆ. ರೇಖಾಚಿತ್ರಕ್ಕೆ ಹೆಸರಾದ ಹೆಬ್ಬಾರರ ಬಗೆಗಿನ ಈ ಪುಸ್ತಕವು ನಾಡಿನ ಕಲಾಸಾಹಿತ್ಯಕ್ಕೆ ಉಪಯುಕ್ತ ಕೊಡುಗೆಯಾಗಿದೆ.

**ಕಟ್ಟಂಗೇರಿ ಕೃಷ್ಣಹೆಬ್ಬಾರ್– ಕಲೆ ಮತ್ತು ಬದುಕು :**

ಕರ್ನಾಟಕದ ಅಭಿಜಾತ ಕಲಾವಿದ ಕೆ.ಕೆ. ಹೆಬ್ಬಾರರ ಕುರಿತು 'ಕು.ಶಿ.ಹರಿದಾಸಭಟ್ಟ' ಪುಸ್ತಕ ಬರೆದಿದ್ದಾರೆ.[೫೨] ಇದರಲ್ಲಿ ಕೆ.ಕೆ.ಹೆಬ್ಬಾರರ ಕಲೆ ಮತ್ತು ಬದುಕನ್ನು ಕುರಿತು ಸುದೀರ್ಘವಾಗಿ, ಸಂಶೋಧನಾತ್ಮಕವಾಗಿ ವಿವಿಧ ಮೂಲಗಳಿಂದ ವಿಷಯ ಸಂಗ್ರಹಣೆ ಮಾಡಿ ಕೃತಿ ರಚಿಸಲಾಗಿದೆ. ಹೆಬ್ಬಾರರ ಬಾಲ್ಯದ ದಿನಗಳು, ಜೆ.ಜೆ.ಕಲಾಶಾಲೆಯ ಅಧ್ಯಯನ, ಅಧ್ಯಾಪನ, ಕಲಾಕೃತಿ ರಚನೆಯ ವಿಧಿವಿಧಾನಗಳು, ವಸ್ತುವಿಷಯಗಳು, ವಿದೇಶಯಾತ್ರೆ, ಅಲ್ಲಿನ ಕಲಾಪ್ರದರ್ಶನಗಳು, ಸೋವಿಯತ್ ದಿನಚರಿ, ಏಕವ್ಯಕ್ತಿ ಪ್ರದರ್ಶನಗಳು, ಕಲಾ ಸಂಘಟನೆ, ಅವರಿಗೆ ಬಂದ ಪತ್ರಗಳು, ಇತ್ಯಾದಿ ಹಲವಾರು ಮಹತ್ವದ ಸಂಗತಿಗಳನ್ನು ಹೇಳಲಾಗಿದೆ. ಅಲ್ಲದೆ ಅವರನ್ನು ತೀರಾ ಹತ್ತಿರದಿಂದ ಕಂಡು ಅವರಿಂದ ಪಡೆದ ಮಾಹಿತಿಯನ್ನು ಇಲ್ಲಿ ದಾಖಲಿಸಲಾಗಿದೆ. ಕಲಾವಿದ ಹೆಬ್ಬಾರರ ಬಗ್ಗೆ ಬಂದ ಬೇರೆ ಗ್ರಂಥಗಳಿಗಿಂತ ಹೆಚ್ಚು ವಿವರಣೆಯನ್ನು ಮತ್ತು ಮೌಲಿಕತೆಯನ್ನು ಇದು ಹೊಂದಿದೆ. ಈ ಕೃತಿಯಲ್ಲಿ ಅಲ್ಲಲ್ಲಿ ವಿಷಯಕ್ಕನುಸಾರವಾಗಿ ಹೆಬ್ಬಾರರು ರಚಿಸಿದ ಚಿತ್ರಕಲಾಕೃತಿಗಳ ಛಾಯಾಚಿತ್ರಗಳನ್ನು ಅಳವಡಿಸಲಾಗಿದೆ. ವ್ಯಕ್ತಿ ಅಧ್ಯಯನದ ಹಿನ್ನೆಲೆಯಲ್ಲಿ ಇದೊಂದು ವಿಶಿಷ್ಟ ಕೃತಿಯಾಗಿದೆ.

---

೫೧. ಎನ್.ಮರಿಶಾಮಾಚರ : ಕೆ.ಕೆ. ಹೆಬ್ಬಾರ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು –೧೯೮೭.

೫೨. ಕು.ಶಿ.ಹರಿದಾಸಭಟ್ಟ : ಕಟ್ಟಂಗೇರಿ ಕೃಷ್ಣಹೆಬ್ಬಾರ್ : ಕಲೆ ಮತ್ತು ಬದುಕು : ಪ್ರಾದೇಶಿಕ ಜನಪದ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ–೧೯೮೮

ಪ್ರಸ್ತುತ ಪುಸ್ತಕವನ್ನು ರಚಿಸಿದ ಕು.ಶಿ.ಹರಿದಾಸಭಟ್ಟರು ಹೆಬ್ಬಾರರ ನಿಕಟ ಒಡನಾಡಿಗಳು, ಸ್ನೇಹಿತರು, ಖ್ಯಾತ ಸಾಹಿತಿಗಳೂ ಮೌಲಿಕವಾದ ವಿವರಗಳನ್ನು ಸಂಶೋಧನಾತ್ಮಕ ಹಿನ್ನೆಲೆಯಿಂದ ಕಟ್ಟಿಕೊಟ್ಟಿದ್ದಾರೆ. ಕಲಾಬರಹಗಾರರೂ ಏನೆಲ್ಲ ವಿಷಯಗಳತ್ತ ಗಮನ ಹರಿಸಬಹುದು, ಹೇಗೆ ಕಲಾಬರಹಗಳನ್ನು ಪರಿಣಾಮಕಾರಿಯಾಗಿ ಬರೆಯಬಹುದು ಎಂಬುದಕ್ಕೆ ಮಾದರಿಯಂತೆ ಕೃತಿ ಕಂಡು ಬರುತ್ತದೆ. ಕರಾವಳಿ ಭಾಗದ ವಿಶಿಷ್ಟ ಸಂಸ್ಕೃತಿಯಲ್ಲಿ ಬೆಳೆದ ಹೆಬ್ಬಾರರ ಕಲಾಬದುಕನ್ನು ಅದೇ ಪರಿಸರದ ಅನುಭವಿ ವಿದ್ವಾಂಸರೊಬ್ಬರು ಪರಿಣಾಮಕಾರಿಯಾಗಿ ಇಲ್ಲಿ ಕಟ್ಟಿಕೊಟ್ಟಿದ್ದಾರೆ.

**ಪಾವಂಜೆ ಗೋಪಾಲಕೃಷ್ಣಯ್ಯ :**

ಮಂಗಳೂರಿನ ಖ್ಯಾತ ಕಲಾವಿದರು, ಉತ್ತಮ ಕಲಾ ಅಧ್ಯಾಪಕರಾದ ಶ್ರೀ.ಪಾವಂಜೆ ಗೋಪಾಲಕೃಷ್ಣಯ್ಯನವರ ಕುರಿತು ಪುಸ್ತಕವನ್ನು ಬಿ.ಎನ್. ಶಾಂತಪ್ರಿಯ ಬರೆದಿದ್ದಾರೆ.[೫೩] ಇದರಲ್ಲಿ ಮುಖ್ಯವಾಗಿ ಅವರ ಬಾಲ್ಯಜೀವನ. ಕಲಾಭ್ಯಾಸಕ್ಕೆ ಪಡೆದ ತಿರುವು, ಮುಂಬೈಯಲ್ಲಿ ಕಲಾಭ್ಯಾಸಕ್ಕಾಗಿ ಸೇರಿದ್ದು, ಅಲ್ಲಿಯೇ ಅಧ್ಯಾಪಕರಾಗಿ, ಖ್ಯಾತ ಕಲಾವಿದರ ಗುರುಗಳಾಗಿ, ಅಲ್ಲಿಯೇ ಕಲಾಸೇವೆ ಮಾಡತೊಡಗಿದರು. ಅವರ ಕಲಾ ನೈಪುಣ್ಯದ ಬಗ್ಗೆ, ಬಹುಮುಖ ಪ್ರತಿಭೆಯ ಬಗ್ಗೆ ವಿವರಗಳಿವೆ. ಕುಟುಂಬದವರು ಕಲಾಭ್ಯಾಸದಲ್ಲಿ ತೊಡಗಲು ನೀಡಿದ ಪ್ರೋತ್ಸಾಹ ಮೆಚ್ಚುವಂತಹದ್ದಾಗಿದೆ. ಇವರ ಸಂಪ್ರದಾಯ, ಸಂಸ್ಕೃತಿ, ಸಾಂಸಾರಿಕ ಜೀವನ, ಕಲಾಸಾಧನೆಯ ಕೊಡುಗೆಗಳು, ಅಂತಿಮ ದಿನಗಳು, ಖ್ಯಾತ ನಾಮಧೇಯರಿಂದ ಪ್ರತಿಭಾ ಪುರಸ್ಕಾರ, ಮುಂತಾದವುಗಳ ಬಗ್ಗೆ ಸಂಕ್ಷೇಪವಾಗಿ ಲೇಖಕರು ದಾಖಲಿಸಿದ್ದು, ಇವರ ಉತ್ತಮ ಹದಿನೆಂಟು ಛಾಯಾಚಿತ್ರಗಳನ್ನು ಮುದ್ರಿಸಿದ್ದಾರೆ.

**ಜಿ.ಎಸ್. ಶೆಣೈ :**

ರಾಜ್ಯದ ಸಮಕಾಲೀನ ಕಲಾವಲಯದಲ್ಲಿ ಜಿ.ಎಸ್. ಶೆಣೈರದು ಪ್ರಮುಖ ಹೆಸರಾಗಿದೆ. ಅಮೂರ್ತ ಕಲಾಕೃತಿ ರಚನೆಯಲ್ಲಿ ಸಿದ್ಧಹಸ್ತರಾದ ಇವರ ಬಗೆಗಿರುವ ಈ ಪುಸ್ತಕವನ್ನು ಕಾಸರವಳ್ಳಿ ಜಿ.ರವೀಶ ಬರೆದಿದ್ದಾರೆ.[೫೪] ಕರಾವಳಿ ಕರ್ನಾಟಕದ ಪರಿಸರವು ಸೃಜನಶೀಲ ಮನೋಭೂಮಿಕೆಯ ಕಲಾವಿದರಿಗೆ ಕಾಲ-ಕಾಲಕ್ಕೆ ಹೊಸ ಸ್ಪಂದನೆ, ಆಯಾಮಗಳನ್ನು ನೀಡುತ್ತ ಬಂದಿದೆ. ಕೆ.ಕೆ.ಹೆಬ್ಬಾರ್, ಪೀಟರ್ ಲೂಯಿಸ್, ಪುಂಚಿತ್ತಾಯ್, ಎನ್.ಜಿ.ಪಾವಂಜೆ, ಮುಂತಾದವರು ಈ ಪರಿಸರದ ಪ್ರಭಾವದಿಂದ ಭಿನ್ನ-ಭಿನ್ನವಾದ ಅಭಿವ್ಯಕ್ತಿಯನ್ನು ಹೊರಹಾಕಿದ್ದಾರೆ. ಇವರೆಲ್ಲರಿಗಿಂತ ಬೇರೆಯಾಗಿ ನಿಲ್ಲುವ ಶೆಣೈ ಬಣ್ಣದ ಓಕುಳಿಯೊಡನೆ ಮೈದಾಳುವ ರೂಪಗಳಿಗೆ ಆಕಾರ ಕೊಡುವ ಪ್ರಯತ್ನ ಮಾಡುತ್ತಾರೆ.

ನವ್ಯಕಲೆಯ ಕ್ಷೇತ್ರದಲ್ಲಿ ವಿಶಿಷ್ಟ ಛಾಪು ಮೂಡಿಸಿದ ಇವರು ಬಣ್ಣಗಳ ಮಿಶ್ರಣ, ಹರಡುವಿಕೆ, ಮೈವಳಿಕೆಗಳಿಂದ ಆಕರ್ಷಕ ಚಿತ್ತಾರಗಳನ್ನು ರೂಪಿಸುವ ಮೂಲಕ ಅವುಗಳಿಗೆ ಕಾಲ್ಪನಿಕ ಆಕಾರ ಕೊಡುತ್ತಿದ್ದರು. ಇಂತಹ ಅಮೂರ್ತ ಚಿತ್ರರಚನಾ ಶೈಲಿಯ ಕುರಿತು ಹೇಳಲಾಗಿದೆ. ಈ ಪುಸ್ತಕದಲ್ಲಿ ಮುಖ್ಯವಾಗಿ ಅವರ ಬಾಲ್ಯ, ಶಿಕ್ಷಣ, ಕಲಾಶಿಕ್ಷಣ, ಕಲಾಬದುಕು, ಕೃತಿರಚನೆ ಮತ್ತು ಪ್ರದರ್ಶನಗಳ ಬಗ್ಗೆ ಸ್ಥೂಲ ನೋಟ ಕೊಡಲಾಗಿದೆ. ಶೆಣೈಯವರನ್ನು ಸಮೀಪದಿಂದ ಕಂಡು ಅವರ ಕಲಾನುಭವಗಳನ್ನು ಕುರಿತು ಚರ್ಚಿಸಿದ ರವೀಶ ಕಾಸರವಳ್ಳಿಯವರು ಈ ಕೃತಿಯನ್ನು ಸಮರ್ಥವಾಗಿ ಬರೆದಿದ್ದಾರೆ.

ಈ ಪುಸ್ತಕದ ಮೂಲಕ ಆ ಕಾಲದ ಕಲಾ ವಾತಾವರಣ, ನವ್ಯಕಲಾ ಕೃತಿಗಳ ಪ್ರದರ್ಶನಕ್ಕೆ ಜನರು ಸ್ಪಂದಿಸುತ್ತಿದ್ದ ರೀತಿ, ಆರಂಭಿಕ ಹಂತದಲ್ಲಿ ವಿಮರ್ಶಾ ಕ್ಷೇತ್ರದಲ್ಲಿ ಇಂತಹ ಕಲಾಕೃತಿಗಳ

---

೫೩. ಬಿ.ಎನ್.ಶಾಂತಪ್ರಿಯ : ಪಾವಂಜೆ ಗೋಪಾಲಕೃಷ್ಣಯ್ಯ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೪.

೫೪. ಡಾ.ಕಾಸರವಳ್ಳಿ ಜಿ.ರವೀಶ್ : ಜಿ.ಎಸ್.ಶೆಣೈ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು -೧೯೯೫.

ಬಗ್ಗೆ ಬರುತ್ತಿದ್ದ ಅಭಿಪ್ರಾಯಗಳು, ಹಲವು ಜನ ಸೇರಿ ಕರ್ನಾಟಕದಲ್ಲಿ ಸಮಕಾಲೀನ ಕಲೆಯ ವಾತಾವರಣವನ್ನು ಮೂಡಿಸಿದ ಸಂದರ್ಭಗಳು ಪರೋಕ್ಷವಾಗಿ ಮೂಡಿ ಬಂದಿವೆ.

**ಕಲಾವಿದ ಹೆಬ್ಬಾರರ ರೇಖಾ ಲಾವಣ್ಯ :**

ಈ ಪುಸ್ತಕವು ಕರ್ನಾಟಕದ ಖ್ಯಾತ ಕಲಾವಿದ ಹೆಬ್ಬಾರನ್ನು ಕುರಿತು ವ್ಯಾಸರಾಯ ಬಲ್ಲಾಳರು ಬರೆದಿದ್ದಾರೆ.[೫೫] ಹೆಬ್ಬಾರರ ಕಲಾ ಜೀವನದ ಹಲವು ಮುಖಗಳನ್ನು ಪರಿಚಯಿಸುವುದರ ಜೊತೆಗೆ ಅವರೊಂದಿಗೆ ಕಳೆದ ಕೆಲವು ಕ್ಷಣಗಳನ್ನು ಲೇಖಕರು ಇಲ್ಲಿ ಬರಹದ ಮೂಲಕ ಕಟ್ಟಿಕೊಟ್ಟಿದ್ದಾರೆ. ಇಲ್ಲಿರುವ ಒಟ್ಟು ಲೇಖನಗಳಲ್ಲಿ ಕೆಲವು ಅವರ ಬಾಲ್ಯ ಶಿಕ್ಷಣ ಮತ್ತು ಕಲಾ ಬದುಕನ್ನು ಕುರಿತು ಹೇಳಿದರೆ, ಇನ್ನು ಕೆಲವು ಅವರ ಕಲಾಕೃತಿಗಳ ವಿಶ್ಲೇಷಣೆಗೆ ಸಂಬಂಧಪಟ್ಟಿವೆ. ಮತ್ತೆ ಕೆಲವು ಅವರು ವಿವಿಧ ವಿದ್ವಾಂಸರು ಮತ್ತು ಮಿತ್ರರೊಂದಿಗೆ ಇಟ್ಟುಕೊಂಡ ಸೌಹಾರ್ದ ಸಂಬಂಧಗಳನ್ನು ಕುರಿತು ಹೇಳುತ್ತವೆ. ಮೊದಲ ಮಾತು, ಕಲಾವಿದ ಕಟ್ಟಂಗೇರಿ ಕೃಷ್ಣ ಹೆಬ್ಬಾರ, ಕಲಾವಿದ ಹೆಬ್ಬಾರರ ಕಣ್ಣಲ್ಲಿ ಮೂಡಬಿದರೆ, ಕೆ.ಕೆ.ಹೆಬ್ಬಾರರ ತುಳಸಿದಾಸ, ರೇಖೆಯಲ್ಲಿ ಕಥನಕಾವ್ಯ, ಹೆಬ್ಬಾರರ ಕಲಾಕೃತಿಗಳು, ಸ್ವರ್ಗದ ಬಾಗಿಲಲ್ಲಿ, ಅಂಗೋರ್‌ವಾಟ್, ನರ್ತಿಸುವ ರೇಖೆಗಳು, ಹೆಬ್ಬಾರರ ರೇಖೆಯಲ್ಲಿ ಮರಣೋತ್ತರ ಪಯಣ, ಕಲಾತಪಸ್ವಿ ಕಟ್ಟಂಗೇರಿ ಕೃಷ್ಣ ಹೆಬ್ಬಾರ, ಒಂದು ಸಂದರ್ಶನ, ಜೀವನೋಲ್ಲಾಸದ ರೇಖಾಚಿತ್ರ ಎಂಬ ಲೇಖನಗಳಿವೆ. ಈ ಎಲ್ಲ ಲೇಖನಗಳನ್ನು ವ್ಯಾಸರಾಯ ಬಲ್ಲಾಳರೇ ವಿವಿಧ ಸಂದರ್ಭಗಳಲ್ಲಿ ಬರೆದಿದ್ದು, ಅವುಗಳನ್ನು ಒಟ್ಟಾಗಿ ಪ್ರಕಟಿಸಿದ್ದಾರೆ.

ಈ ಕೃತಿಯು ಕಲಾವಿದ ಹೆಬ್ಬಾರರ ಕುರಿತು ಅನೇಕ ಉಪಯುಕ್ತ ಮಾಹಿತಿಗಳನ್ನು ನೀಡುತ್ತದೆ. ಕಲಾ ವಿದ್ಯಾರ್ಥಿಗಳಿಗೆ, ಕಲಾಸಕ್ತರಿಗೆ, ಕಲಾ ಅಧ್ಯಯನಕಾರರಿಗೆ, ಆಸಕ್ತ ಜನರಿಗೆ ಇದೊಂದು ಒಳ್ಳೆಯ ಕೃತಿಯಾಗಿದ್ದು, ಚಿತ್ರಕಲಾ ಸಾಹಿತ್ಯದಲ್ಲಿ ವ್ಯಕ್ತಿ ಅಧ್ಯಯನ ಹಿನ್ನೆಲೆಯಲ್ಲಿ ವಿಭಿನ್ನ ದೃಷ್ಟಿಕೋನಗಳನ್ನು ಪರಿಚಯಿಸುತ್ತದೆ. ಹೆಬ್ಬಾರರ ಕುರಿತು ಬಂದ ಇತರೆ ಪುಸ್ತಕಗಳು ಮುಖ್ಯವಾಗಿ ಅವರ ಜೀವನ ಮತ್ತು ಕಲೆಯ ಬಗ್ಗೆ ಹೆಚ್ಚು ಒತ್ತು ನೀಡಿದರೆ, ಈ ಕೃತಿಯಲ್ಲಿ ಹೆಬ್ಬಾರರ ಕಲಾಬದುಕು, ಸ್ನೇಹಪರತೆ, ಸಾಹಿತ್ಯ ಆಸಕ್ತಿ, ಪ್ರವಾಸ, ಆಧ್ಯಾತ್ಮ ಹಿನ್ನೆಲೆ, ಜೀವನೋಲ್ಲಾಸ, ಸಾಮಾಜಿಕ ಸಂಬಂಧಗಳು ಮುಂತಾದ ಭಿನ್ನ ಆಯಾಮಗಳ ಬಗೆಗಿನ ಲೇಖನಗಳನ್ನು ಕೊಡಲಾಗಿದೆ. ಕನ್ನಡ ಕಲಾ ಸಾಹಿತ್ಯದಲ್ಲಿ ಗಮನಾರ್ಹ ಕೊಡುಗೆ ಇದಾಗಿದೆ.

**ಪೀಟರ್ ಲೂಯಿಸ್ :**

ಕರ್ನಾಟಕ ಕಲಾಕ್ಷೇತ್ರದಲ್ಲಿ ನವ್ಯಕಲೆಯ ಹರಿವನ್ನು ವೃದ್ಧಿಗೊಳಿಸಿದ ಪ್ರಮುಖ ಕಲಾವಿದರಲ್ಲಿ ಇವರೂ ಒಬ್ಬರಾಗಿದ್ದಾರೆ. ಕರಾವಳಿ ಭಾಗದ ಚೇತನಯುಕ್ತವಾದ ಪರಿಸರವನ್ನು ಉಂಡು ಬೆಳೆದ ಇವರ ಕೃತಿಗಳಲ್ಲಿ ಆ ಪ್ರದೇಶದ ಗುಣಲಕ್ಷಣಗಳು ಮೇಳೈಸಿರುವುದು ಕಂಡುಬರುತ್ತದೆ. ಲೂಯಿಸ್ ಅವರ ಬಗ್ಗೆ ಇರುವ ಈ ಪುಸ್ತಕವನ್ನು ಬಾ.ನಾ. ಶಾಂತಪ್ರಿಯ ಬರೆದಿದ್ದಾರೆ.[೫೬] ಕರಾವಳಿ, ಕರ್ನಾಟಕದ ನೆಲ, ಜಲ ಮತ್ತು ಸಮಸ್ತ ಪರಿಸರವಲ್ಲದೆ ಅಲ್ಲಿನ ಜನಜೀವನವನ್ನೂ ಸಮರ್ಥವಾಗಿ ತಮ್ಮ ಕೃತಿಗಳಲ್ಲಿ ಅಭಿವ್ಯಕ್ತಿಸಿದವರು ಲೂಯಿಸ್. ಸಮುದ್ರ ಅಲೆಗಳ ಅಬ್ಬರ, ಏರಿಳಿತ, ಶಾಂತತೆ. ರಮ್ಯನೋಟಗಳು ಇವರ ಕಲಾಕೃತಿಯ ಪ್ರಮುಖ ಅಂಶಗಳಲ್ಲಿ ಕಂಡುಬರುತ್ತವೆ. ಸಮುದ್ರ ತೀರದ ಮೀನುಗಾರರು, ಬೆಸ್ತ ಜನಾಂಗದ ಬದುಕು ಹೊಸ ಆಯಾಮದಿಂದ ಇವರ ಕಲೆಯಲ್ಲಿ ಅಭಿವ್ಯಕ್ತಿಗೊಂಡಿದೆ.

---

೫೫. ವ್ಯಾಸರಾಯ ಬಲ್ಲಾಳ : ಕಲಾವಿದ ಹೆಬ್ಬಾರರ ರೇಖಾಲಾವಣ್ಯ : ನವಕರ್ನಾಟಕ ಪಬ್ಲಿಕೇಶನ್ಸ ಬೆಂಗಳೂರು-೧೯೯೯

೫೬. ಬಾ.ನಾ.ಶಾಂತಪ್ರಿಯ :ಪೀಟರ್ ಲೂಯಿಸ್ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು -೨೦೦೦

ಬಿಳಿಯ ವರ್ಣವನ್ನು ವಿಶಿಷ್ಟವಾಗಿ ಬಳಸುವ ಪೀಟರ್ ಲೂಯಿಸ್, ಅದಕ್ಕೊಂದು ಅನನ್ಯತೆ ತಂದು ಕೊಡುತ್ತಾರೆ. ಬಿಳಿವರ್ಣ, ಸಮುದ್ರದ ಬಿಳಿಯಾದ ನೊರೆ, ಬಿಳಿಯಾದ ಉಪ್ಪು ಬೆಳಕು ಮತ್ತು ಮಾನವ ಸಂಬಂಧಗಳಿಗೆ ವಿಶಿಷ್ಟ ಅರ್ಥವಂತಿಕೆಯನ್ನು ತಮ್ಮ ಕೃತಿಗಳಲ್ಲಿ ಕಟ್ಟಿಕೊಡುವ ಇವರು ರಾಜ್ಯದಲ್ಲಿ ಸಮಕಾಲೀನ ಕಲಾಚಳುವಳಿಯಲ್ಲಿ ಮುಂಚೂಣಿಯಲ್ಲಿದ್ದವರು. ಈ ಪುಸ್ತಕದಲ್ಲಿ ಇಂತಹ ಅಂಶಗಳ ಜೊತೆಗೆ ಅವರ ಬಾಲ್ಯ, ಶಿಕ್ಷಣ, ಕಲಾಶಿಕ್ಷಣ, ಕಲಾಬದುಕು, ಕೃತಿರಚನೆಯ ವಿಧಾನ, ಶೈಲಿ, ಪ್ರಭಾವ, ಪ್ರೇರಣೆ, ಪ್ರದರ್ಶನಗಳು, ಸಂಘಟನೆ, ಕಾರ್ಯಗಾರರು, ಕೆಲವು ಕೃತಿಗಳ ವಿಶ್ಲೇಷಣೆ ಹೀಗೆ ಹಲವು ಅಂಶಗಳು ವ್ಯಕ್ತಗೊಂಡಿವೆ. ರಾಜ್ಯ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿಯೂ ಕಾರ್ಯನಿರ್ವಹಿಸಿದ ಪೀಟರ್ ಲೂಯಿಸ್ ತಮ್ಮ ವಿಶಿಷ್ಟ ಕೃತಿಗಳಿಂದಾಗಿ ಪ್ರಸಿದ್ಧರಾಗಿದ್ದಾರೆ. ವಿವರಗಳ ಕೊರತೆಯೂ ಕಂಡು ಬರುತ್ತದೆ. ಇಲ್ಲಿಯೂ ಅವರ ಕಲಾ ಬದುಕಿನ ಬಗೆಗೆ ಹೆಚ್ಚಿನ ವಿವರಗಳಿವೆಯೇ ಹೊರತು ಕಲೆ ಮತ್ತು ಕಲಾಕೃತಿಗಳ ಕುರಿತಾಗಿ ವಿಸ್ತೃತವಾದ ವಿವರಗಳು ಗೋಚರಿಸುವುದಿಲ್ಲ. ಉಳಿದಂತೆ ನೇರವಾದ ನಿರೂಪಣೆಯು ಈ ಪುಸ್ತಕದಲ್ಲಿ ಕಂಡುಬರುತ್ತದೆ.

ಕರಾವಳಿ ಕರ್ನಾಟಕದ ಕಲಾವಿದರ ಬಗ್ಗೆ ಬಂದ ಚಿತ್ರಕಲಾ ಸಾಹಿತ್ಯ ಕೃತಿಗಳಲ್ಲಿ ಅನೇಕ ಅಂಶಗಳು ಕಂಡುಬರುತ್ತವೆ. ಇಲ್ಲಿನವರು ಹೆಚ್ಚಾಗಿ ಮುಂಬೈ ಜೆ.ಜೆ.ಕಲಾಶಾಲೆಯಲ್ಲಿ ಶಿಕ್ಷಣ ಪಡೆದಿರುವುದು ತಿಳಿದುಬರುತ್ತದೆ. ಈ ಭಾಗದ ಕಲಾವಿದರ ಕೃತಿಗಳಲ್ಲಿ ಕರಾವಳಿ ಭಾಗದ ಪ್ರಕೃತಿಯ ಲಕ್ಷಣಗಳು ಪ್ರಭಾವ ಬೀರಿವೆ. ಪೀಟರ್ ಲೂಯಿಸ್, ಎನ್.ಜೆ.ಪಾವಂಜೆ, ಮುಂಚಿತ್ತಾಯ್, ಕೆ.ಕೆ.ಹೆಬ್ಬಾರ ಇವರ ಕೃತಿಗಳಲ್ಲಿ ಸಾಗರದ ಅಬ್ಬರವಿದ್ದರೆ, ಜಿ.ಎಸ್.ಶೆಣೈ ಅವರ ಕೃತಿಗಳಲ್ಲಿ ಸಹ್ಯಾದ್ರಿ ಬೆಟ್ಟಗಳ ಏರಿಳಿತಗಳಿವೆ. ವರ್ಣಲೇಪನ ವಿಧಾನದಲ್ಲಿಯೂ ಈ ಭಾಗದ ಕಲಾವಿದರು ವಿಶಿಷ್ಟವಾಗಿ ನಿಲ್ಲುತ್ತಾರೆ. ಇಂತಹ ಅನೇಕ ಸಂಗತಿಗಳು ಇಲ್ಲಿ ಗೋಚರಿಸುತ್ತವೆ.

**೪. ಹೊರ ರಾಜ್ಯ ಮತ್ತು ಅಂತರಾಷ್ಟ್ರೀಯ ಕಲಾವಿದರ ಬಗ್ಗೆ ಬಂದ ಸಾಹಿತ್ಯ :**

ಕರ್ನಾಟಕವನ್ನು ಹೊರತುಪಡಿಸಿ ಬೇರೆ ರಾಜ್ಯದ ಕಲಾವಿದರು ಮತ್ತು ವಿದೇಶಿ ಕಲಾವಿದರ ಬಗ್ಗೆ ಕನ್ನಡದಲ್ಲಿ ಪ್ರಕಟಗೊಂಡ ಸಾಹಿತ್ಯಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಅವುಗಳನ್ನು ಈ ಕೆಳಗಿನಂತೆ ವಿಶ್ಲೇಷಣೆ ಮಾಡಲಾಗಿದೆ.

**ಕೆ.ಜಿ. ಸುಬ್ರಹ್ಮಣ್ಯನ್ :**

ಈ ಪುಸ್ತಕವು ಭಾರತದ ಸಮಕಾಲೀನ ಕಲೆಯಲ್ಲಿ ಪ್ರಯೋಗಶೀಲ ಕಲಾವಿದ, ಕಲಾ ಶಿಕ್ಷಣತಜ್ಞ, ವಿಚಾರವಂತ ಲೇಖಕ, ಭಿತ್ತಿಚಿತ್ರ ರಚನಾಕಾರ, ಪ್ರಿಂಟ್‌ಮೇಕರ್ ಹೀಗೆ ವಿವಿಧ ಆಯಾಮಗಳಲ್ಲಿ ಪ್ರಬುದ್ಧತೆಯನ್ನು ಪಡೆದುಕೊಂಡ ಬರೋಡಾದ ಕಲಾವಿದ ಕೆ.ಜಿ.ಸುಬ್ರಹ್ಮಣ್ಯರ ಬಗ್ಗೆ ಎನ್. ಮರಿಶಾಮಾಚಾರ್ ಬರೆದಿದ್ದಾರೆ.[೫೭] ಅವರು ಹೇಗೆ ಈ ಎಲ್ಲ ಕ್ಷೇತ್ರಗಳಲ್ಲಿ ಗಮನಾರ್ಹಸಾಧನೆ ಮಾಡಿದರು ಎನ್ನುವ ಅಂಶಗಳನ್ನು ಉದಾಹರಣೆಗಳ ಸಹಿತ ಬಿಂಬಿಸಿದ್ದಾರೆ. ಈ ಕೃತಿಯಲ್ಲಿ ಸುಬ್ರಹ್ಮಣ್ಯನ್ ಅವರ ಬಾಲ್ಯ, ವಿದ್ಯಾಭ್ಯಾಸ, ಶಾಂತಿನಿಕೇತನದಲ್ಲಿ ಕಲೆಯ ಅಧ್ಯಯನ, ಅವರ ಭಿತ್ತಿಚಿತ್ರಗಳು, ಸ್ಟಿಲ್ ಲೈಫ್ ಚಿತ್ರಗಳು, ಸಂಯೋಜನಾ ಚಿತ್ರಗಳು, ಗಾಜಿನ ಚಿತ್ರಗಳು, ಟೆರ್ರಾಕೊಟ್ಟ ಉಬ್ಬುಶಿಲ್ಪಗಳು ಮತ್ತು ಅವರ ಕಲಾಶೈಲಿಯ ಬಗ್ಗೆ ಸ್ಥೂಲವಾಗಿ ವಿವೇಚಿಸಲಾಗಿದೆ.

---

೫೭. ಎನ್.ಮರಿಶಾಮಾಚಾರ್ : ಕೆ.ಜಿ.ಸುಬ್ರಹ್ಮಣ್ಯನ್ : ಸಿ.ಎಂ.ಎನ್.ಪ್ರಕಾಶನ ಬೆಂಗಳೂರು-೧೯೮೬

ಕರ್ನಾಟಕ ಚಿತ್ರಕಲಾ ಸಾಹಿತ್ಯದಲ್ಲಿ ಅಂದಿನ ದಿನಗಳಲ್ಲಿ ರಚನೆಗೊಂಡ ವ್ಯಕ್ತಿಚಿತ್ರಗಳಲ್ಲಿ ಇದು ಹೊಸ ಬಗೆಯ ನಿರೂಪಣೆಯಿಂದ ಕೂಡಿದ್ದಾಗಿದೆ. ಒಬ್ಬ ಕಲಾವಿದನ ಜೀವನ ಮತ್ತು ಕಲಾಕೃತಿಗಳಲ್ಲದೆ ಹಲವು ಆಯಾಮಗಳಲ್ಲಿ ಕೃತಿರಚನಾಕಾರನೊಬ್ಬನನ್ನು ಹೇಗೆ ತೆರೆದಿಡಬಹುದೆಂಬ ಮಾರ್ಗದರ್ಶಿಯಂತೆ ಇದು ರಚನೆಯಾಗಿದೆ. ಲೇಖಕರು ಕೆ.ಜಿ.ಎಸ್. ಅವರನ್ನು ಹತ್ತಿರದಿಂದ ಕಂಡವರು ಮಾತ್ರವಲ್ಲದೆ ಅವರ ಶಿಷ್ಯತ್ವದಲ್ಲಿ ಕಲಾಶಿಕ್ಷಣವನ್ನು ಪಡೆದವರಾಗಿದ್ದು, ಖಚಿತವಾದ ವಿವರಗಳನ್ನು ಕೊಡಲು ಸಾಧ್ಯವಾಗಿದೆ.

**ರಾಜಾ ರವಿವರ್ಮ :**

ಭಾರತೀಯ ಕಲಾವಿದರಲ್ಲಿ ಆಧುನಿಕತೆಯ ಆದ್ಯಪ್ರವರ್ತಕ ಎಂಬ ಹೆಸರು ರಾಜಾ ರವಿವರ್ಮನಿಗೆ ಇರುವಂತೆಯೇ ಅವನೊಬ್ಬ ಸಂಪ್ರದಾಯ ವಿರೋಧಿಯಾದ ಚಿತ್ರಶೈಲಿಯನ್ನು ಹೊಂದಿದವನು ಎನ್ನುವ ಅಭಿಪ್ರಾಯವನ್ನು ಕೆಲವರು ಇವನಿಗೆ ಆರೋಪಿಸುತ್ತಾರೆ. ಈ ಹಿನ್ನೆಲೆಯಲ್ಲಿ ಉಭಯ ದೃಷ್ಟಿಕೋನಗಳನ್ನು ತೌಲನಿಕವಾಗಿ ವಿಶ್ಲೇಷಿಸಿ ಎನ್.ಮರಿಶಾಮಾಚಾರರು ಈ ಕೃತಿಯನ್ನು ರಚಿಸಿದ್ದಾರೆ.[೫೮] ರವಿವರ್ಮನು ೧೮೪೮ ಏಪ್ರಿಲ್ ೨೯ರಂದು ಕೇರಳದ ಕಿಲಮನೂರಿನಲ್ಲಿ ಹುಟ್ಟಿದನು. ಇವನ ಚಿಕ್ಕಪ್ಪನಾದ ರಾಜವರ್ಮನು ರವಿವರ್ಮನ ಕಲಾಪ್ರತಿಭೆ ಗುರುತಿಸಿದ್ದು ಮಾತ್ರವಲ್ಲದೇ ಅನೇಕರಿಗೆ ಪರಿಚಯಿಸಿದನು. ೧೮೬೬ರಲ್ಲಿ ತೈಲವರ್ಣ ಚಿತ್ರರಚನೆ ಕಲಿಯಲು ರವಿವರ್ಮ ತಿರುವನಂತಪುರಕ್ಕೆ ತೆರಳಿದನು. ಮುಂದಿನ ದಿನಗಳಲ್ಲಿ ಈತನ ಕೃತಿಗಳಿಗೆ ಅನೇಕ ಬಹುಮಾನಗಳು ದೊರಕಿದವು. ಕೆಲವು ದಿನಗಳ ತರುವಾಯ ರವಿವರ್ಮ ಭಾರತೀಯ ಕಾವ್ಯ, ಪುರಾಣ, ಧಾರ್ಮಿಕ ಗ್ರಂಥಗಳಿಗೆ ಅನುಸಾರವಾಗಿ ಕೃತಿರಚಿಸತೊಡಗಿದನು. ಈ ಪ್ರಯೋಗ ಅತ್ಯಂತ ಯಶಸ್ವಿಯಾಯಿತಲ್ಲದೆ ಭಾರತದ ಉದ್ದಗಲಕ್ಕೆ ಆತನ ಕೀರ್ತಿಯು ವ್ಯಾಪಿಸಿತು. ರವಿವರ್ಮನ ಕೀರ್ತಿಯನ್ನು ಕೇಳಿದ ಮೈಸೂರಿನ ಅರಸರು ಸಹಿತ ಆತನನ್ನು ತಮ್ಮ ಆಸ್ಥಾನದಲ್ಲಿ ಕರೆಯಿಸಿಕೊಂಡು ಚಿತ್ರಗಳನ್ನು ಬರೆಯಿಸಿದ್ದಾರೆ. ಇಂತಹ ವಿಷಯಗಳು ಈ ಪುಸ್ತಕದಲ್ಲಿ ಸ್ಥೂಲವಾಗಿ ವ್ಯಕ್ತಗೊಂಡಿವೆ. ಇವುಗಳ ಜೊತೆಗೆ ರಾಜಾ ರವಿವರ್ಮನ ಚಿತ್ರದ ವಸ್ತುವಿಷಯ, ರಚನಾ ಕ್ರಮ, ಸಂಯೋಜನೆ, ಸ್ಥಳಾವಕಾಶ, ರೇಖಾವಿನ್ಯಾಸ, ನೆರಳು–ಬೆಳಕಿನ ಪರಿಣಾಮ, ಬಣ್ಣದ ಮೈವಳಿಕೆ, ಮುಂತಾದ ಅಂಶಗಳು ಸಹಿತ ಇಲ್ಲಿ ಚರ್ಚಿತಗೊಂಡಿವೆ. ಈ ಎಲ್ಲ ಅಂಶಗಳಿಂದ ನೋಡಿದಾಗ ಸ್ಥೂಲ ಮಾಹಿತಿ ಒಳಗೊಂಡಿದ್ದರೂ ಈ ಕಿರುಪುಸ್ತಕವು ಚಿತ್ರಕಲಾ ಸಾಹಿತ್ಯಕ್ಕೆ ಒಂದು ಉತ್ತಮ ಕೊಡುಗೆ ಎನ್ನಬಹುದು.

**ರೆಂಬ್ರಾಂಟ್ :**

ಪಾಶ್ಚಾತ್ಯ ಕಲಾಕ್ಷೇತ್ರದಲ್ಲಿ ರಮ್ಯಕಲೆಯ ಚಿತ್ರಶೈಲಿಗೆ ವಿಶಿಷ್ಟ ಛಾಪು ತಂದು ಕೊಟ್ಟವರಲ್ಲಿ ರೆಂಬ್ರಾಂಟ್ ಪ್ರಮುಖ ಕಲಾವಿದನಾಗಿದ್ದಾನೆ. ಬಣ್ಣಗಳ ಉಜ್ವಲತೆ, ವ್ಯಕ್ತಿಚಿತ್ರಗಳಲ್ಲಿನ ಸೌಂದರ್ಯತೆ, ವೇಷ–ಭೂಷಣಗಳ ರಚನೆ ಮುಂತಾದವುಗಳಲ್ಲಿ ಮತ್ತು ಮುಖಭಾವದ ತುಡಿತಗಳನ್ನು ಚಿತ್ರಿಸುವಲ್ಲಿ ಸಿದ್ಧ ಹಸ್ತನಾದ ರೆಂಬ್ರಾಂಟ್‌ನನ್ನು ಆಸ್ಥಾನ ಕಲಾವಿದ ಮತ್ತು ರಸಋಷಿ ಎಂಬುದಾಗಿಯೂ ವಿಮರ್ಶಕರು ಪರಿಗಣಿಸುತ್ತಾರೆ. ಇಂತಹ ಮಹಾನ್ ಕಲಾವಿದರನಾಗಿರುವ ಈತನ ಕುರಿತಾಗಿರುವ ಈ ಕಿರು ಪುಸ್ತಕವನ್ನು ರಜನಿ ಪ್ರಸನ್ನರು ಬರೆದಿದ್ದಾರೆ.[೫೯]

---

೫೮. ಎನ್.ಮರಿಶಾಮಾಚಾರ್ : ರಾಜಾ ರವಿವರ್ಮ : ಎನ್.ಮರಿಶಾಮಾಚಾರ್ : ಸಿ.ಎಮ್:ಎನ್. ಪ್ರಕಾಶನ, ಬೆಂಗಳೂರು– ೧೯೯೪.

೫೯. ರಜನಿ ಪ್ರಸನ್ನ : ರೆಂಬ್ರಾಂಟ್ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೧೯೮೦

ರೆಂಬ್ರಾಂಟ್‌ನ ಕಲಾಕೃತಿಗಳಲ್ಲಿ ಆಕಾರಗಳೇ ಮುಖ್ಯ ಪಾತ್ರ ವಹಿಸುತ್ತವೆ. ವಿವಿಧ ಆಕಾರಗಳನ್ನು ಒತ್ತೊತ್ತಾಗಿರುವಂತೆ ಸಂಯೋಜಿಸುವ ಈತ ಪ್ರತಿಯೊಂದು ಆಕೃತಿಯಲ್ಲಿಯೂ ಭಾವನಾತ್ಮಕ ಚಲನೆ ಕಂಡು ಬರುವಂತೆ ಚಿತ್ರಿಸುತ್ತಾನೆ. ಯೇಸುವಿನ ಜೀವನದ ವಿವಿಧ ಘಟನೆಗಳು, ತಾಯಿ ಮಗು ಸರಣಿಯ ಚಿತ್ರಗಳು, ಕನ್ಯೆ ಮೇರಿ ಮುಂತಾದ ಕೃತಿಗಳಲ್ಲಿ ಈತನ ಪ್ರಬುದ್ಧತೆ ಕಂಡು ಬರುತ್ತದೆ. ಈ ಪುಸ್ತಕದಲ್ಲಿ ರೆಂಬ್ರಾಂಟ್‌ನ ಜನನ, ಆತನ ಕಲಾ ಅಧ್ಯಯನ, ಕಲಾಬದುಕು, ಕಲಾಕೃತಿಗಳ ರಚನೆ, ಕಲಾಶೈಲಿ ಮತ್ತು ಕೆಲವು ಕೃತಿಗಳ ವಿಶ್ಲೇಷಣೆ ಕಂಡು ಬರುತ್ತದೆ. ಅತ್ಯಂತ ಚಿಕ್ಕದಾದ ಈ ಪುಸ್ತಕವು ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚನೆಯಾದಂತೆ ಭಾಸವಾಗುತ್ತದೆ. ಸರಳವಾದ ಬರವಣಿಗೆ, ಸ್ಪಷ್ಟವಾದ ಮತ್ತು ಗೊಂದಲವಿಲ್ಲದ ವಾಕ್ಯರಚನೆಗಳು ಇಲ್ಲಿವೆ. ನೈಜಶೈಲಿಯ ಚಿತ್ರರಚನೆಯಲ್ಲಿ ಸಿದ್ಧಹಸ್ತನಾಗಿದ್ದ ರೆಂಬ್ರಾಂಟ್ ಪಾಶ್ಚಾತ್ಯ ಜಗತ್ತಿನಲ್ಲಿ ಶ್ರೀಮಂತ ಕಲಾವಿದನೆಂದು ಹೆಸರು ಮಾಡಿದವನು. ರಾಜರ ಆಸ್ಥಾನದಲ್ಲಿ ಶ್ರೀಮಂತರ ಆಸರೆಯಲ್ಲಿ ಚಿತ್ರರಚನೆ ಮಾಡಿದ ಈತ ಕಲಾ ರಾಯಭಾರಿಯಂತೆ ಜೀವನ ಸಾಗಿಸಿದನು. ಇಂತಹ ವಿವರಗಳೂ ಸಹಿತ ಸಂಕ್ಷಿಪ್ತ ರೂಪದಲ್ಲಿ ಈ ಪುಸ್ತಕದಲ್ಲಿ ಮೂಡಿ ಬಂದಿವೆ.

**ಪಿಕಾಸೋ :**

ಪಾಶ್ಚಾತ್ಯ ಕಲಾ ವಲಯದಲ್ಲಿ ಪ್ರಖ್ಯಾತನಾದ ಪಿಕಾಸೋನ ಬಗ್ಗೆ ಜಗತ್ತಿನಾದ್ಯಂತ ವಿವಿಧ ಭಾಷೆಗಳಲ್ಲಿ ಬರವಣಿಗೆಗಳು ಬಂದಿವೆ. ಹೆಚ್ಚಿನ ಬರವಣಿಗೆಗಳು ಇಂಗ್ಲೀಷನಲ್ಲಿವೆ. ಕರ್ನಾಟಕದಲ್ಲಿ ಅದರಲ್ಲೂ ಕನ್ನಡದಲ್ಲಿ ಪಿಕಾಸೋನ ಬಗ್ಗೆ ಗಂಭೀರವಾದ ಬರವಣಿಗೆಗಳು ರಚನೆಯಾಗಿಲ್ಲವೆಂದರೂ ಸರಿ. ಇಂತಹ ಕೊರತೆಯನ್ನು ನೀಗಿಸುವ ನಿಟ್ಟಿನಲ್ಲಿ ಈ ಕಿರು ಗ್ರಂಥವು ರಚನೆಯಾಗಿದೆ ಎಂದರೆ ತಪ್ಪಲ್ಲ. ಈ ಗ್ರಂಥವನ್ನು ಸುರೇಶ ಕುಲಕರ್ಣಿ ಬರೆದಿದ್ದಾರೆ.[೬೦] ಇಲ್ಲಿ ಜನನ, ಬಾಲ್ಯ, ಕಲಾಶಿಕ್ಷಣ, ಬದುಕು ಮತ್ತು ಕಲಾಕೃತಿಗಳ ಬಗ್ಗೆ ಸ್ಥೂಲವಾಗಿ ಹೇಳಲಾಗಿದೆ. ಬಾಲ್ಯದ ದಿನಗಳಲ್ಲಿ ಚಿತ್ರಕಲೆಗೆ ಆಕರ್ಷಿತವಾದ ಘಟನೆಗಳು, ಗೂಳಿಕಾಳಗವು ಪಿಕಾಸೋನ ಜೀವನದ ಮೇಲೆ ಬೀರಿದ ಪ್ರಭಾವ, ಆತನ ತಂದೆಯಿಂದ ಬಳುವಳಿಯಾಗಿ ಬಂದ ಕಲಾವಂತಿಕೆಗಳ ಬಗ್ಗೆ ಇಲ್ಲಿ ವಿವೇಚಿಸಲಾಗಿದೆ. ಹಾಗೆಯೇ ಪಿಕಾಸೋನ ಕಲಾಪ್ರದರ್ಶನಗಳು, ಮಿತ್ರರ ಒಡನಾಟ, ಆತನ ಸಾವಿನಿಂದಾದ ವಿಕಲ್ಪತೆ, ಪ್ರೇಯಸಿಯ ಸಂಗ, ಮಧ್ಯಕಾಲೀನ ಪ್ರಭಾವಗಳು, ಕೊನೆದಿನದ ಚಿತ್ರಗಳು, ಹೀಗೆ ವಿಂಗಡಿಸಿ ವಿವರಿಸಲಾಗಿದೆ.

**ನೋವಿಗದ್ದಿದ ಕುಂಚ :**

ಪಾಶ್ಚಾತ್ಯ ಕಲಾವಿದರಲ್ಲಿ ಪ್ರಸಿದ್ಧನಾದ ವ್ಯಾನ್‌ಗಾಗ್ ಎಂಬ ಕಲಾವಿದನ ಕುರಿತಾಗಿ ಈ ಪುಸ್ತಕ ರಚನೆಯಾಗಿದೆ. ಕನ್ನಡ ಚಿತ್ರಕಲಾ ವ್ಯಕ್ತಿ ಅಧ್ಯಯನ ಭೂಮಿಕೆಯಲ್ಲಿ ವಿಶಿಷ್ಟವಾಗಿ ನಿಲ್ಲುವ ನಿರೂಪಣೆಯಿಂದ ಕೂಡಿರುವ ಈ ಪುಸ್ತಕವನ್ನು ನೇಮಿಚಂದ್ರ ಬರೆದಿದ್ದಾರೆ.[೬೧]ವಿನ್ಸೆಂಟ್, ವಿಲ್ಲೊ ವ್ಯಾನ್‌ಗಾಗ್ ಇವನೊಬ್ಬ ಅಪ್ರತಿಮ ಕಲಾವಿದ. ಹಾಗೆಯೇ ವಿಕ್ಷಿಪ್ತ ಮನಸ್ಸಿನ ವ್ಯಕ್ತಿಯೂ ಹೌದು. ತನ್ನ ಕಿವಿಯನ್ನು ಕತ್ತರಿಸಿ ಕೆಂಪು ದೀಪದ ಹೆಂಗಸಿಗೆ ಕೊಟ್ಟಿದ್ದು, ಬಸಿರು ಹೊತ್ತ ಸಿಡುಬು ಮುಖದ ಸೂಳೆಯೊಡನೆ ಸಂಸಾರ ಹೂಡಿದ್ದು ಇವನ ವಿಕ್ಷಿಪ್ತ ಮನದ ಪರಿಣಾಮಗಳನ್ನು ತೋರುತ್ತವೆ. ಇಂದು ಕೋಟಿ ಡಾಲರುಗಳಿಗೆ ಮಾರಾಟವಾಗುವ ಇವನ ಚಿತ್ರಗಳು ಆತ ಬದುಕಿದ್ದಾಗ ಒಂದು

೬೦. ಪಿಕಾಸೋ : ಸುರೇಶ ಕುಲಕರ್ಣಿ : ತಾರಾ ಪ್ರಕಾಶನ; ಭಾರತೀನಗರ, ಧಾರವಾಡ–೧೯೮೧

೬೧. ನೇಮಿಚಂದ್ರ : ನೋವಿಗದ್ದಿದ ಕುಂಚ : ನವಕರ್ನಾಟಕ ಪಬಿಕೇಶನ್ಸ, ಬೆಂಗಳೂರು– ೧೯೯೩.

ಹೊತ್ತಿನ ಊಟಕ್ಕೂ ಒದಹಲಾರದ್ದು ವಿಪರ್ಯಾಸವೇ ಆಗಿದೆ. ಅದುಮಿಟ್ಟ ಭಾವನೆಗಳು, ಕ್ಯಾನ್‌ವಾಸ್ ಮೇಲೆ ಭುಗಿಲೆದ್ದ ಬಣ್ಣಗಳಾಗಿ ಸ್ಪೋಟಿಸಿದ್ದು ಇವನ ಕೃತಿಗಳಲ್ಲಿ ಗಮನಿಸಬಹುದು. ಹೀಗೆ ಹಲವಾರು ಘಟನಾವಳಿಗಳಿಂದ ವ್ಯಾನ್‌ಗಾಗ್‌ನ ಕಲಾಜೀವನವನ್ನು ಈ ಸಾಹಿತ್ಯ ಕೃತಿಯು ಕಟ್ಟಿಕೊಡುತ್ತದೆ. ಕಲಾ ಚರಿತ್ರೆಯಲ್ಲಿ ಅತ್ಯಂತ ದುರಂತ ಸಾವನ್ನು ಕಂಡ ವ್ಯಾನ್‌ಗಾಗ್ ೧೮೫೩ ಮಾರ್ಚ ೩೦ ರಂದು ಹುಟ್ಟಿದವನು. ಕೇವಲ ಹತ್ತು ವರ್ಷಗಳಲ್ಲಿ ೭೦೦ ಕ್ಕೂ ಅಧಿಕ ವರ್ಣಚಿತ್ರಗಳನ್ನು, ೯೦೦ಕ್ಕೂ ಹೆಚ್ಚು ರೇಖಾಚಿತ್ರಗಳನ್ನು ರಚಿಸಿ ಎಲ್ಲರನ್ನೂ ದಂಗು ಬಡಿಸಿದ್ದಾನೆ. ಇಂತಹ ಅನೇಕ ಅಂಶಗಳನ್ನು ಈ ಪುಸ್ತಕವು ಒಳಗೊಂಡಿದೆ. ಕೆಲವು ಕೃತಿಗಳಂತೂ ವ್ಯಾನ್‌ಗಾಗ್‌ನ ಭಾವತೀವ್ರತೆಯನ್ನುವರೆಗೆ ಹಚ್ಚುವಂತಿವೆ. ಸೂರ್ಯಕಾಂತಿಯ ಹೂಗಳು, ಭತ್ತದ ಹೊಲಗಳು, ತಾಯಿ ಮತ್ತು ಮಗುವಿನ ಚಿತ್ರ, ಕೆಲವು ಭಾವಚಿತ್ರಗಳಲ್ಲಿ ಇಂತಹ ಅಂಶಗಳನ್ನು ಗಮನಿಸಬಹುದು. ಬಣ್ಣಲೇಪನ ವಿಧಾನವೇ ಒಂದು ಕಾವ್ಯದಂತೆ ಮನೋಹರವಾಗಿ ಗೋಚರಿಸುತ್ತದೆ. ಇಂತಹ ಕೃತಿರಚನೆಯ ವಿಶ್ಲೇಷಣಾತ್ಮಕ ಅಂಶಗಳು ಕೃತಿಯಲ್ಲಿನ ಕೊರತೆಯಾಗಿ ಕಂಡುಬರುತ್ತವೆ.

**ಸ್ವೆಟಾಸ್ಲಾವ್ ರೋರಿಚ್** :

ರಶಿಯಾ ಮತ್ತು ಭಾರತೀಯ ಸಂಸ್ಕೃತಿಗಳು ಸಾಕಾರಗೊಂಡ ವಿಶಿಷ್ಟ ಕಲಾವಿದ ಸ್ವೆಟಾಸ್ಲಾವ್ ರೋರಿಚ್. ೧೯೦೪ ಅಕ್ಟೋಬರ್ ೨೩ರಂದು ಸೇಂಟ್ ಪೀಟರ್‌ಬರ್ಗದಲ್ಲಿ ಜನಿಸಿದ ರೋರಿಚ್ ಅಲ್ಲಿಯೇ ಶಿಕ್ಷಣ, ಕಲಾಶಿಕ್ಷಣವನ್ನು ಪಡೆದವರು. ನಂತರ ಭಾರತಕ್ಕೆ ಆಗಮಿಸಿದ ಇವರು ತಮ್ಮ ಕೊನೆಗಾಲದವರೆಗೂ ಇಲ್ಲಿಯೇ ನೆಲೆಸಿದರು. ಇವರ ಕುರಿತ ಈ ಕಿರು ಪುಸ್ತಕವನ್ನು ಎಂ.ಎಸ್. ನಂಜುಂಡರಾವ್ ಬರೆದಿದ್ದಾರೆ.[೨] ಆಧ್ಯಾತ್ಮ ಹಿನ್ನೆಲೆಯ ಭಾವನೆಗಳೊಂದಿಗೆ ಪ್ರಕೃತಿಯ ಮಾತೃತ್ವ, ಫಲವಂತಿಕೆ ಮತ್ತು ಅಭಿವೃದ್ಧಿಯ ಸಂಕೇತಗಳನ್ನು ಸಮನ್ವಯಗೊಳಿಸಿ ಕಲಾಕೃತಿಗಳನ್ನು ರಚಿಸುತ್ತಿದ್ದ ರೋರಿಚ್ ಭಾವನಾ ಜೀವಿಯಂತೆ ಬದುಕಿದವರು. ಹಿಮಾಲಯದ ಸ್ನಿಗ್ಧ ಸೌಂದರ್ಯ, ಆ ಪರಿಸರದ ದೈವಿಕತೆ, ಚಲುವು ಒಲವುಗಳು ಅವರನ್ನು ಆಕರ್ಷಿಸಿದ್ದು ಮಾತ್ರವಲ್ಲದೇ ಆ ಕುರಿತೇ ಹಲವಾರು ಸರಣಿ ಚಿತ್ರಗಳನ್ನು ರಚಿಸಿದ್ದಾರೆ. ಹಿಮದ ಮೇಲಿನ ಬೆಳಕು ನೆರಳುಗಳನ್ನು ರೂಪಿಸುವಲ್ಲಿ ಇವರು ಅದ್ವಿತೀಯರಾಗಿದ್ದರು. ಭಾರತದ ಅಂದಿನ ಚಲನಚಿತ್ರ ರಂಗದ ಖ್ಯಾತ ಅಭಿನೇತ್ರಿ ದೇವಿಕಾರಾಣಿ ಇವರ ಕಲೆಗೆ ಮನಸೋತು ಇವರನ್ನೇ ವರಸಿದ್ದು ಗಮನಾರ್ಹವಾಗಿದೆ.

ಭಾರತೀಯ ಸಂಸ್ಕೃತಿ, ಇಲ್ಲಿನ ಜೀವನ ಪದ್ಧತಿಗಳನ್ನು ಆಳವಾಗಿ ಅಧ್ಯಯನ ಮಾಡಿದ ರೋರಿಕ್ ತಮ್ಮ ಕೃತಿಗಳಲ್ಲಿ ಇಂತಹ ಅಂಶಗಳನ್ನು ಅಳವಡಿಸುತ್ತಿದ್ದರು. ಬೆಂಗಳೂರಿನ ಬಳಿಯ ತಾತಗುಣಿ ಎಸ್ಟೇಟ್‌ನಲ್ಲಿ ಜೀವನ ನಿರ್ವಹಣೆ ಮಾಡಿದ ರೋರಿಚ್ ಕಲೆಯ ಬಗ್ಗೆ ಬೆಂಗಳೂರು ವಿಶ್ವವಿದ್ಯಾಲಯದಿಂದ ಪಿ.ಎಚ್.ಡಿ. ಅಧ್ಯಯನವೂ ಆಗಿದೆ ಎಂಬುದನ್ನು ಇಲ್ಲಿ ಗಮನಸಬಹುದು. ಮುಖ್ಯವಾಗಿ ಈ ಪುಸ್ತಕದಲ್ಲಿ ರೋರಿಚ್ ಅವರ ಬಾಲ್ಯ, ಜೀವನ, ರಷ್ಯಾದಲ್ಲಿನ ಕಲಾಪರಿಸರ, ಭಾರತಕ್ಕೆ ಆಗಮನ, ಇಲ್ಲಿನ ಅನೇಕ ಪ್ರಮುಖ ಸ್ಥಳಗಳ ಭೂಚಿತ್ರಣ, ಕಲಾ ಪ್ರದರ್ಶನಗಳು, ಹೀಗೆ ಅನೇಕ ವಿಷಯಗಳು ಬಿಂಬಿತವಾಗಿವೆ. ಸ್ವೆಟಾಸ್ಲಾವ್ ರೋರಿಚ್‌ರ ಕಲಾಕೃತಿಗಳ ರಕ್ಷಣೆಯಲ್ಲಿ ಪ್ರಮುಖ ಪಾತ್ರವಹಿಸಿದ ನಂಜುಂಡರಾವ್ ಅವರೇ ಈ ಪುಸ್ತಕ ಬರೆದಿದ್ದು ಸೂಕ್ತವಾಗಿದೆ.

---

೭೨. ಎಂ.ಎಸ್.ನಂಜುಂಡರಾವ್ : ಸ್ವೆಟಾಸ್ಲಾವ್ ರೋರಿಚ್ : ಕರ್ನಾಟಕ ಲಲಿತಕಲಾ ಅಕಾಡೆಮಿ,- ೧೯೯೪.

**ಕಲಾತತ್ವ ಮಹರ್ಷಿ, ಆನಂದಕುಮಾರಸ್ವಾಮಿ :**

ಜಾಗತಿಕ ಕಲಾಮೀಮಾಂಸೆಯಲ್ಲಿ ಆನಂದಕುಮಾರಸ್ವಾಮಿಯವರದು ಬಹುದೊಡ್ಡ ಹೆಸರು. ವಿಶೇಷತಃ ಭಾರತೀಯ ಕಲಾ ಸಂಸ್ಕೃತಿಯ ಮಟ್ಟಿಗಂತೂ ಅವರದು ಅನನ್ಯಯೋಗದಾನ. ಕಲೆಯ ನೆಲೆ, ಕಲಾತತ್ವದ ಮೌಲ್ಯ, ಕಲೆಯ ದರ್ಶನ, ಕಲಾಭಿವ್ಯಕ್ತಿ ಮುಂತಾದ ಅನೇಕ ವಿಚಾರಗಳನ್ನು ಪರಿಶೀಲಿಸಿ, ಪ್ರತಿಪಾದಿಸಿ, ಪ್ರತಿಸ್ಪಂದಿಸಿ ಕೊಟ್ಟಿರುವಲ್ಲಿ ಇವರು ಅಗ್ರಗಣ್ಯರು. ಕಲಾ ಮೀಮಾಂಸೆಗೊಂದು ಮೌಲ್ಯ ತಂದುಕೊಟ್ಟ ದಾರ್ಶನಿಕರೆಂದೂ ಕರೆಯಬಹುದು. ಇಂತಹ ಶ್ರೇಷ್ಠ ಜ್ಞಾನಿಗಳ ಬಗ್ಗೆ ಇರುವ ಈ ಪುಸ್ತಕವನ್ನು ಸಾ.ಕೃ.ರಾಮಚಂದ್ರರಾಯರು ಬರೆದಿದ್ದಾರೆ.[೬೩] ಈ ಕೃತಿಯಲ್ಲಿ ಆನಂದ ಕುಮಾರ ಸ್ವಾಮಿಯವರ ಕುರಿತಾಗಿ ಹಲವು ವಿಚಾರಗಳು ಪ್ರಸ್ತಾಪಿಸಲ್ಪಟ್ಟಿವೆ. ಈ ಕಾಲದ ಒಬ್ಬ ಋಷಿ, ಮನೆತನ, ಪೂರ್ವಸಿದ್ಧತೆ, ಭೂವಿಜ್ಞಾನದಿಂದ ಕಲೆಯ ಕಡೆಗೆ, ಭಾರತವೋ? ಅಮೇರಿಕವೋ?, ಬೋಷ್ಟನ್ ವಸ್ತು ಸಂಗ್ರಹಾಲಯದಲ್ಲಿ, ಬೋಷ್ಟನ್ ಬ್ರಾಹ್ಮಣ, ನಟರಾಜನ ಕುಣಿತ ಕೊನೆಗೊಂಡಿತು ಎಂಬ ಶಿರ್ಷಿಕೆಗಳಲ್ಲಿ ಹಲವಾರು ವಿಷಯಗಳು ಪ್ರಸ್ತಾಪಿಸಲ್ಪಟ್ಟಿವೆ. ಮುಖ್ಯವಾಗಿ ಅವರ ಜನನ, ಬಾಲ್ಯ, ಶಿಕ್ಷಣ, ಬದುಕು, ವಿವಿಧ ದೇಶಗಳ ಪ್ರವಾಸ, ಕಲೆಯ ಅಧ್ಯಯನ, ಪ್ರೇರಣೆ, ಮುಂತಾದ ವಿಚಾರಗಳು ಇಲ್ಲಿ ಹೇಳಲ್ಪಟ್ಟಿವೆ.

ಈ ಕೃತಿ ಹೆಚ್ಚಾಗಿ ಅವರ ಬದುಕಿನ ವಿವರಗಳನ್ನು ಅನಾವರಣಗೊಳಿಸುವುದು. ಅವರ ಕೃತಿಗಳನ್ನು, ಚಿಂತನೆಗಳನ್ನು ಕುರಿತು ಸ್ಥೂಲ ಮಹಿತಿಯನ್ನು ಮಾತ್ರ ಇದು ಕೊಡುತ್ತದೆ. ಶ್ರೇಷ್ಠ ವಿಮರ್ಶಕರೂ, ಚಿಂತಕರೂ, ದಾರ್ಶನಿಕರೂ ಆದ ಸಾ.ಕೃ. ರಾಮಚಂದ್ರರಾವ್ ಅವರ ಪ್ರಬುದ್ಧ ಬರವಣಿಗೆ ಕೃತಿಗೆ ಹೆಚ್ಚಿನ ಮೌಲ್ಯ ತಂದು ಕೊಟ್ಟಿದೆ. ಆನಂದಕುಮಾರಸ್ವಾಮಿಯವರಂತೆ ಬದುಕು ಸಾಗಿಸುವ ಲೇಖಕರ ಬರವಣಿಗೆ ನೈಜಭಾವನೆಗಳಿಂದ ಹೊರಬಂದಂತೆ ಗೋಚರಿಸುತ್ತದೆ. ಕಥೆ, ಕಾದಂಬರಿ, ವಿಮರ್ಶೆ, ವ್ಯಕ್ತಿಚಿತ್ರ, ವಿಶ್ಲೇಷಣೆ, ಜೀವನ ಚರಿತ್ರೆ, ಕಲಾಮೀಮಾಂಸೆ, ಶಾಸ್ತ್ರ ಸಂಶೋಧನೆ, ಅನುವಾದ, ಸಂವಾದ, ಹೀಗೆ ಎಲ್ಲ ಪ್ರಕಾರಗಳಲ್ಲಿ ಕೈಯಾಡಿಸಿರುವ ಲೇಖಕರ ಪ್ರಬುದ್ಧತೆ, ವಿವಿಧ ಕಲೆಗಳಲ್ಲಿ ಅವರಿಗಿರುವ ಪಾಂಡಿತ್ಯ ಈ ಕೃತಿಯಲ್ಲಿ ವ್ಯಕ್ತಗೊಂಡಿವೆ.

**ಲಿಯೋ ನಾರ್ಡೋ-ಡ-ವಿನ್ಸಿ :**

ಇಟಲಿ ದೇಶದ ಪ್ರಖ್ಯಾತ ಕಲಾವಿದನಾದ ವಿನ್ಸಿಯ ಬಗ್ಗೆ ನಿರುಪಮಾ ಈ ಪುಸ್ತಕ ಬರೆದಿದ್ದಾರೆ.[೬೪] ಇಂದಿಗೂ ಜಗತ್ಪ್ರಸಿದ್ಧ ಚಿತ್ರವಾಗಿಯೇ ಉಳಿದಿರುವ ಮೊನಾಲಿಸಾ ಚಿತ್ರವನ್ನು ರಚಿಸಿದ ಲಿಯೋನಾರ್ಡೋ-ಡ-ವಿನ್ಸಿ ಹುಟ್ಟಿದ್ದು ಇಟಲಿಯಲ್ಲಿ. ತಂದೆ ಪ್ರಿಯರೋ, ತಾಯಿ ಕ್ಯಾಥರಿನ್. ಕ್ರಿ.ಶ.೧೪೫೨ ಏಪ್ರಿಲ್ ೧೫ರಂದು ಜನಿಸಿದ ಈತ ಬಹುಮುಖ ಪ್ರತಿಭಾಶಾಲಿಯಾದ ವ್ಯಕ್ತಿಯಾಗಿದ್ದನು. ಚಿತ್ರಕಲೆಯಲ್ಲಿ ವಿಶೇಷ ಆಸಕ್ತಿ ಇದ್ದರೂ ಅದರ ಜೊತೆಗೆ ಇನ್ನಿತರ ವಿಷಯಗಳನ್ನು ಆತ ತಿಳಿದುಕೊಂಡಿದ್ದ. ಜೀವಶಾಸ್ತ್ರ, ರಸಾಯನಶಾಸ್ತ್ರ, ಚಿತ್ರಕಲೆ, ಮಾನವ ಶರೀರ ಶಾಸ್ತ್ರ, ಭೂಗೋಳ ವಿಜ್ಞಾನ, ಯುದ್ಧದ ಯಂತ್ರೋಪಕರಣಗಳ ಅಧ್ಯಯನ, ಶಿಲ್ಪಶಾಸ್ತ್ರ, ಭೂಮಿಯ ಆಕರ್ಷಣೆ, ನೀರಾವರಿ ಯೋಜನಾ ತಜ್ಞ, ಪ್ರಕೃತಿ ವಿಜ್ಞಾನ, ಖಗೋಳ ವಿಜ್ಞಾನ, ಹೀಗೆ ಹತ್ತು ಹಲವು ವಿಷಯಗಳನ್ನು ಬಲ್ಲವನಾಗಿದ್ದನು. ಅದಕ್ಕಾಗಿ ಇವನನ್ನು ಹತ್ತು ಮನುಷ್ಯರು ಸೇರಿದ ಒಬ್ಬ ಮನುಷ್ಯನೆಂದು ಕರೆಯಲಾಗುತ್ತಿತ್ತು. ಇಂತಹ ಹಲವು ವಿಷಯಗಳು ಇಲ್ಲಿ ವ್ಯಕ್ತಗೊಂಡಿವೆ. ಕಲಾವಿದನ ಮನೆತನ, ಬಾಲ್ಯ, ಬೆಳಗಿನ ಪ್ರತಿಭೆ,

೬೩. ಸಾ.ಕೃ ರಾಮಚಂದ್ರರಾವ್: ಕಲಾತತ್ವ ಮಹರ್ಷಿ, ಆನಂದ ಕುಮಾರಸ್ವಾಮಿ : ಅಭಿಜ್ಞಾನ ಪ್ರಕಾಶನ, ಜಯನಗರ, ಬೆಂಗಳೂರು-೨೦೦೦

೬೪. ನಿರುಪಮಾ : ಲಿಯೋನಾರ್ಡೋ-ಡ-ವಿನ್ಸಿ ಸ್ವಪ್ನ ಬುಕ್ ಹೌಸ್ ಗಾಂಧಿ ನಗರ, ಬೆಂಗಳೂರು -೨೦೦೨.

ಯಂತ್ರಕರ್ಮಿ, ಚಿತ್ರಕಲಾವಿದ, ಕಲಾಶೈಲಿಯ ವೈಶಿಷ್ಟ್ಯ, ಹೊರದೇಶಗಳಲ್ಲಿ ಮನ್ನಣೆ, ಆವಿಷ್ಕಾರಗಳು, ಮೂರ್ತವರ್ಗದ ಮೂರ್ತಿ, ಕಷ್ಟ-ನೋವುಗಳು, ಫ್ಲಾರೆನ್ಸಿನಲ್ಲಿ ಕಲಾವಿದ, ಚಿತ್ರಕಲಾವಿದನ ಕಲ್ಪನೆಯಲ್ಲಿ, ಕುಟುಂಬದ ಸಮಸ್ಯೆಗಳು, ಮಿಲಾನಿನಲ್ಲಿ, ರೋಮ್ ನಗರದಲ್ಲಿ, ರಾಜಾಶ್ರಯ, ಬಹುಮುಖ ಪ್ರತಿಭೆ, ವ್ಯಕ್ತಿತ್ವ ಎಂಬಂತಹ ವಿಷಯಗಳು ಇಲ್ಲಿ ನಿರೂಪಣೆಗೊಂಡಿವೆ.

ಹೊರರಾಜ್ಯ ಮತ್ತು ಅಂತರಾಷ್ಟ್ರೀಯ ಕಲಾವಿದರ ಬಗ್ಗೆ ಬಂದ ಚಿತ್ರಕಲಾ ಸಾಹಿತ್ಯಕೃತಿಗಳು ಕಡಿಮೆ ಪ್ರಮಾಣದಲ್ಲಿವೆ. ಇಲ್ಲಿ ತಿಳಿದುಬರುವ ಕೆಲವು ಸಂಗತಿಗಳು ಕೆಳಗಿನಂತಿವೆ. ಹೊರರಾಜ್ಯದ ಕಲಾವಿದರ ಬಗ್ಗೆ ಬಂದ ಸಾಹಿತ್ಯದಿಂದ ಆ ಕಲಾವಿದರು ನಮ್ಮ ರಾಜ್ಯದ ಕಲಾವಿದರಿಗಿಂತ ಹೇಗೆ ಭಿನ್ನರಾಗಿದ್ದಾರೆ ಎನ್ನುವ ಅಂಶಗಳು ತಿಳಿದುಬರುತ್ತವೆ. ಕೆ.ಜಿ.ಸುಬ್ರಹ್ಮಣ್ಯ ಅವರು ಕಲಾಕೃತಿ ರಚನೆಯ ಜೊತೆಗೆ ಕಲಾಸಾಹಿತ್ಯ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ರಾಜಾರವಿವರ್ಮನಂತೂ ಇಡೀ ಭಾರತದಾದ್ಯಂತ ಹೆಸರು ಮಾಡಿದ ಕಲಾವಿದ. ಇವರಿಬ್ಬರ ಬಗ್ಗೆ ಕನ್ನಡದಲ್ಲಿ ಸ್ಥೂಲ ಮಾಹಿತಿಯನ್ನು ಈ ಕೃತಿಗಳಿಂದ ಪಡೆದುಕೊಳ್ಳಬಹುದು. ಅಂತರಾಷ್ಟ್ರೀಯ ಕಲಾವಿದರ ಬಗೆಗಿನ ಸಾಹಿತ್ಯದಲ್ಲಿ ಆಯಾ ಕಲಾವಿದರ ಬಗೆಗಿನ ರೋಚಕ ಘಟನೆಗಳು, ದೈನಂದಿನ ಬದುಕಿನ ವಿವರಗಳು ಹೆಚ್ಚಾಗಿ ಬಿಂಬಿತವಾಗಿದ್ದು ಅವರ ಕಲೆ, ಕಲಾಕೃತಿ, ಕಲಾಜೀವನದ ಬಗೆಗಿನ ಕೊರತೆ ಕಂಡುಬರುತ್ತದೆ.

**೫. ಕಲಾವಿದರ ಪರಿಚಯ, ಲೇಖನಗಳ ಸಾಹಿತ್ಯ :**

ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಕಲಾವಿದರ ಬಗೆಗಿನ ಲೇಖನಗಳನ್ನು ಹೊಂದಿದ ಸಾಹಿತ್ಯ ಕೃತಿಗಳನ್ನು ಇಲ್ಲಿ ಪರಿಗಣಿಸಲಾಗಿದೆ. ಕಲಾವಿದರ ಬಗೆಗಿನ ಸ್ಥೂಲ ಮಾಹಿತಿಯನ್ನು ಹೊಂದಿದ ಈ ಲೇಖನಗಳು ಯಾವ ಸ್ವರೂಪದಲ್ಲಿವೆ. ಯಾವ ಸಾಹಿತ್ಯ ಕೃತಿಗಳಲ್ಲಿವೆ ಎಂಬುದನ್ನು ಈ ಕೆಳಗಿನ ಕೃತಿಗಳಲ್ಲಿ ನೋಡಬಹುದು.

**ಪಾಶ್ಚಾತ್ಯ ಕಲಾವಿದರು :**

ಕರ್ನಾಟಕದಲ್ಲಿ ಕಲಾವಿದರ ಪರಿಚಯ ಲೇಖನಗಳನ್ನು ಬರೆಯುವ ಪರಂಪರೆಯನ್ನು ಅ.ನ.ಸು. ಪ್ರಾರಂಭಿಸಿದರು. ನಂತರದಲ್ಲಿ ಬಾಯಿರಿ, ಗವೀಶ ಹಿರೇಮಠ, ಶಿವರಾಂ ಕಾರಂತ ಮುಂತಾದವರು ಈ ನಿಟ್ಟಿನಲ್ಲಿ ಕೆಲಸ ಮಾಡಿದರು. ಅ.ನ.ಸು ಅವರ ನಂತರ ಈ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತರಾದ ಪ್ರಮುಖರಲ್ಲಿ ಕಮಲದಾನಿ ಗುರುರಾಯರೆ ಎನ್ನಬಹುದು. ಪ್ರಸ್ತುತ ಕೃತಿಯನ್ನು ಇವರು ಪಾಶ್ಚಾತ್ಯ ಕಲಾವಿದರು ಹೆಸರಿನಲ್ಲಿ ಹೊರತಂದಿದ್ದಾರೆ.[೭೫] ಈ ಪುಸ್ತಕದಲ್ಲಿ ಪಾಶ್ಚಾತ್ಯ ಕಲಾ ವಲಯದಲ್ಲಿ ಖ್ಯಾತರಾದ ಕಲಾವಿದರನ್ನು ಆಯ್ದು ಕೆಲವು ಕಲಾವಿದರ ಪರಿಚಯ ಲೇಖನಗಳನ್ನು ಕೊಡಲಾಗಿದೆ. ಈ ಪುಸ್ತಕದಲ್ಲಿ ಪ್ರಸಿದ್ಧ ಕಲಾವಿದರಾದ ಜಾನ್‌ವಾನ್ ಐಕ್, ಹ್ಯಾನ್ಸ ವೆಮ್ಲಿಂಕ್, ಗಿಯೋವಾನಿ ಬೆಲ್ಲಿನಿ, ಸಾಂಡ್ರೋಬಾಟಿ ಸೆಲ್ಲಿ, ಲಿಯೋನಾರ್ಡೋ-ಡ-ವಿನ್ಸಿ, ಜೇನ್ ಗೊಸರ್ಟ, ಅಲ್ಬರ್ಟ ಡ್ಯೂರರ್, ಮಾರಿಯಾ ಟೋ ಆಲ್ಬರ್ಟ, ಮೈಕಲ್ ಎಂಜಲೋ, ರಾಫೇಲ್ ಸಾಂಜೋ, ಟಿಟಿಯನ್ ಸಿಸಿಲಿಯೋ, ಎಂಡ್ರಿಯಾ ಡೆಲ್ ಸಾರ್ಟೋ, ಎಂಟೋನೊಯೋ, ಕೊರೋಜಿಯೋ, ಹ್ಯಾನ್ಸ ಹಾಲ್ಬಿನ್, ಪ್ಯಾರಿಸ್ ಬೋರ್ಡನ್, ಗ್ಯಾಂಬಟಸ್ಟಾ ಮೆರಿನೋ, ಪೀಟರ್ ಪಾಲ್ ರೂಬೆನ್ಸ, ಫ್ರಾನ್ಸಹಾಲ್, ಎಂಟನಿವಾಕ್‌ಡಿಕ್, ಡಾಯಗೋ-ಡಿ-ಸಿಲ್ವಾ, ರೆಂಬ್ರಾಂಟ್, ವಾನ್‌ಗಾಗ್, ಗೆರಾರ್ಡ ಟೇರ್ ಬೋಚ್, ಪೀಟರ್-ಡಿ-ಹೂಚ್, ಗ್ರೇಬಿಯಲ್ ಜಾನ್‌ವರ್ಮೀರ, ವಿಲಿಯಂ ಹೊಗಾರ್ಥ,

೭೫. ಕಮಲದಾನಿ ಗುರುರಾಯ : ಪಾಶ್ಚಾತ್ಯ ಕಲಾವಿದರು: ಮಕ್ತಾಲಿ ಮೋಹನ್‌ರಾವ್ ಪ್ರಕಾಶನ. ಹಾವೇರಿ-೧೯೫೧

ಹೀಗೆ ಒಟ್ಟು ೪೦ ಜನ ಕಲಾವಿದರ ಕಲೆ ಮತ್ತು ಕಲಾಜೀವನದ ಬಗ್ಗೆ ಪರಿಚಯ ಲೇಖನಗಳು ಇವೆ. ಕರ್ನಾಟಕದಲ್ಲಿ ಆರಂಭಿಕ ಹಂತದ ವ್ಯಕ್ತಿ ಪರಿಚಯ ಕುರಿತ ಲೇಖನಗಳು ಇವಾಗಿದ್ದು, ಕಲೆ ಮತ್ತು ಕಲಾಕೃತಿಗಳಿಗಿಂತ ಅವರ ಕಲಾ ಜೀವನದಲ್ಲಿ ನಡೆದ ಕೆಲವು ಪ್ರಮುಖ ಘಟನಾವಳಿಗಳಿಗೆ ಪ್ರಾಮುಖ್ಯತೆ ನೀಡಿ ಚಿತ್ರಿಸಲಾಗಿದೆ. ಅಲ್ಲದೆ ಕೆಲವು ಕಲಾವಿದರ ಪರಿಚಯ ಲೇಖನದಲ್ಲಿ ಅವರು ಯಾವ ದೇಶದವರು, ಅವರ ತಂದೆ-ತಾಯಿ, ಹುಟ್ಟಿದ ದಿನಾಂಕ, ಕಲಾಭ್ಯಾಸ ಮುಂತಾದ ವಿವರಗಳು ಗೌಣತೆಯನ್ನು ಪಡೆದುಕೊಂಡಿವೆ. ಆದರೂ ಕಲಾವಿದರನ್ನು ಪರಿಚಯಿಸುವ ಮೂಲಕ ಮುಂದಿನ ತಲೆಮಾರಿಗೆ ಅವರ ಕಲೆಯನ್ನು ತಿಳಿಸಿ, ಉಳಿಸಿ ಕೊಡುವ ಪ್ರಯತ್ನ ಈ ಮೂಲಕ ಆರಂಭಿಸಿದ್ದು ಪ್ರಮುಖವಾಗಿದೆ.

**ಸೃಜನಶೀಲ ಕಲಾವಿದರು :**

ಕರ್ನಾಟಕದ ಕಲಾವಲಯದಲ್ಲಿ ಅನೇಕ ಜನ ಪ್ರಖ್ಯಾತ ಕಲಾವಿದರು ತಮ್ಮ ಕಲೆ ಮತ್ತು ಕಲಾಕೃತಿಗಳ ಮೂಲಕ ಪ್ರಖ್ಯಾತರಾಗಿದ್ದಾರೆ. ಕರ್ನಾಟಕ ಸಂದರ್ಭಗಳಲ್ಲಿ ಆಧುನಿಕ ಅಥವಾ ಸಮಕಾಲೀನ ಕಲೆಯ ಆರಂಭಿಕ ದಿನಗಳಲ್ಲಿ ಆರ್.ಎಮ್. ಹಡಪದ, ಶಿವ ಎಸ್. ಮುನೋಳಿ, ಪೀಟರ್ ಲೂಯಿಸ್ ಮತ್ತು ಹುಬ್ಳಿಕರ್ ಅವರು ಹೆಚ್ಚು ಕ್ರಿಯಾಶೀಲರಾಗಿ ಕೆಲಸ ಮಾಡಿದರಲ್ಲದೆ 'ನಾವು ನಾಲ್ವರು' ಎಂಬ ಗುಂಪು ರಚಿಸಿಕೊಂಡು ಸಮಕಾಲೀನ ಕಲಾವಲಯದಲ್ಲಿ ರಾಜ್ಯದ ಕಲಾ ಬೆಳವಣಿಗೆಗೆ ಒಂದು ಹೊಸದಿಕ್ಕನ್ನು ತೋರಿಸುವ ಪ್ರಯತ್ನ ಮಾಡಿದರು. ಪ್ರಸ್ತುತ ಕೃತಿಯಲ್ಲಿ ಈ ನಾಲ್ವರನ್ನು ಒಳಗೊಂಡು ರಾಜ್ಯದ ಸಮಕಾಲೀನ ಪ್ರಖ್ಯಾತ ಕಲಾವಿದರ ಕುರಿತು ಪರಿಚಯ ಮಾಡಿಕೊಡಲಾಗಿದೆ. ಈ ಪುಸ್ತಕವನ್ನು ಗವೀಶ ಹಿರೇಮಠ ಬರೆದಿದ್ದು,[೬೬] ಇದರಲ್ಲಿ ಒಟ್ಟು ಇಪ್ಪತ್ತೊಂದು ಜನ ಕಲಾವಿದರ ಪರಿಚಯವಿದೆ.

ಈ ಪುಸ್ತಕದಲ್ಲಿ ಆಯಾ ಕಲಾವಿದರ ಜನನ, ಬಾಲ್ಯ, ಕಲಾಬದುಕು, ಕಲಾಶಿಕ್ಷಣ, ಕಲಾಶೈಲಿ ಮತ್ತು ಕಲಾಕೃತಿಗಳಲ್ಲದೆ ಅವರು ಭಾಗವಹಿಸಿದ ಶಿಬಿರ, ಪ್ರದರ್ಶನಗಳು ಮತ್ತು ಸಂದ ಪ್ರಶಸ್ತಿಗಳನ್ನು ಕುರಿತು ಸ್ಥೂಲವಾಗಿ ಗಮನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಇಲ್ಲಿ ಪರಿಚಯಿಸಲ್ಪಟ್ಟ ೨೧ ಜನ ಕಲಾವಿದರೆಂದರೆ ಶಿವ.ಎಸ್.ಮುನೋಳಿ, ಪೀಟರ್ ಲೂಯಿಸ್, ಆರ್.ಎಮ್ ಹಡಪದ,. ಜಿ.ವೈ.ಹುಬ್ಳಿಕರ್, ಜೆ.ಎಸ್. ಖಂಡೇರಾವ್, ಎಂ.ಬಿ.ಪಾಟೀಲ, ವಿಜಯಸಿಂಧೂರ, ಯುಸೂಫ್ ಅರಕ್ಕಲ್, ವ್ಹಿಬಿ.ಹಿರೇಗೌಡರ್, ವಿಜಿ,.ಅಂದಾನಿ, ಸಿ. ಚಂದ್ರಶೇಖರ್, ಕೆ.ಟಿ.ಶಿವಪ್ರಸಾದ್, ಕಾಳಿದಾಸ ಪತ್ತಾರ, ಜೆ.ಎಂ.ಎಸ್.ಮಣಿ, ಎನ್.ಪುಷ್ಪಮಾಲಾ, ಬಸವರಾಜ ಎಸ್.ಮುಸಾವಳಿಗಿ, ಎಸ್.ಧನಲಕ್ಷ್ಮೀ, ಎಂ.ಬಿ.ಲೋಹಾರ್, ವಿಜಯ ಬಾಗೋಡಿ ಮತ್ತು ಬಸವರಾಜ ಬುಳ್ಳಾ ಅವರಾಗಿದ್ದಾರೆ.

ಪ್ರಸ್ತುತ ಪುಸ್ತಕವು ಹಲವು ಕುಂದು ಕೊರತೆಗಳ ನಡುವೆಯೂ ಗಮನಾರ್ಹ ಪ್ರಯತ್ನವಾಗಿದೆ. ಈ ಪುಸ್ತಕದಲ್ಲಿನ ವ್ಯಕ್ತಿ ಚಿತ್ರಗಳನ್ನು ಅವಲೋಕಿಸುವವರಿಗೆ ಅವೆಲ್ಲವೂ ಒಂದು ವಿನ್ಯಾಸಕ್ಕೆ ಒಳಗಾಗಿರುವುದು ಸ್ಪಷ್ಟವಾಗಿ ಕಾಣಿಸುತ್ತದೆ. ಪ್ರಾಸ್ತವಿಕ ಮಾತುಗಳ ನಂತರ ಸ್ಥೂಲವಾಗಿ ವ್ಯಕ್ತಿಪರಿಚಯ, ಮೂರ್‍ನಾಲ್ಕು ಮುಖ್ಯ ಚಿತ್ರಗಳ ವಿವರಣೆ, ಸಂದ ಗೌರವಗಳು, ಕೆಲವು ಪತ್ರಿಕಾ ಅಭಿಪ್ರಾಯಗಳು, ಚಿತ್ರಗಳು ಸಂಗ್ರಹಣೆಗೊಂಡಿರುವ ಜಾಗಗಳು, ಪಾಲುಗೊಂಡ ಪ್ರದರ್ಶನಗಳು, ಈ ಎಲ್ಲ ಅಂಶಗಳು ಹೆಚ್ಚು ಕಡಿಮೆ ಒಂದೇ ಕ್ರಮದಲ್ಲಿ ನಿರೂಪಿಸಲ್ಪಟ್ಟಿವೆ. ಇದರಿಂದ ಏಕತಾನತೆ ಕಂಡು ಬರುತ್ತದೆ. ಕಲಾವಿದರ ಪರಿಚಯ ಮಾಡುವಲ್ಲಿ ಲೇಖಕರು ವೈವಿಧ್ಯವನ್ನುತರಲು ಪ್ರಯತ್ನಿಸಬೇಕಾಗಿತ್ತು ಎನಿಸುತ್ತದೆ. ಕಲಾವಿದರ ಬದುಕಿನಲ್ಲಿ ಹೆಚ್ಚು ಆಸಕ್ತರಾದ ಅವರಿಗೆ ಪ್ರತಿಯೊಂದು ಚಿತ್ರಣದಲ್ಲಿಯೂ ಒಂದೆರಡು ವೈಯಕ್ತಿಕ

೬೬. ಗವೀಶ ಹಿರೇಮಠ : ಸೃಜನಶೀಲ ಕಲಾವಿದರು : ಜಗದ್ಗುರು ಮೂರುಸಾವಿರ ಮಠ ಧರ್ಮಪ್ರಚಾರಕ ಮಂಡಳ, ಹುಬ್ಬಳ್ಳಿ-೧೯೯೧

ಪ್ರಸಂಗಗಳನ್ನು ಕಲೆ ಮತ್ತು ಜೀವನಕ್ಕೆ ಸಂಬಂಧಿಸಿದಂತೆ ಜೋಡಿಸುವುದು ಸಾಧ್ಯವಾಗಿದ್ದರೆ, ಈ ಬರಹಗಳ ಸ್ವಾರಸ್ಯ ಇನ್ನೂ ಹೆಚ್ಚಾಗಿರುತ್ತಿತ್ತು. ಪುಸ್ತಕದ ಮಹತ್ವದ ಭಾಗ ಎಂದರೆ ಕೊನೆಯಲ್ಲಿ ಕೊಟ್ಟಿರುವ ಚಿತ್ರಗಳು. ಇಲ್ಲಿ ಪ್ರತಿಯೊಬ್ಬ ಕಲಾವಿದರ ಭಾವಚಿತ್ರ ಮತ್ತು ಅವರ ಒಂದೊಂದು ಕಲಾಕೃತಿಗಳ ಛಾಯಾಚಿತ್ರಗಳನ್ನು ಕೊಡಲಾಗಿದೆ. ಇವು ಕಪ್ಪು-ಬಿಳುಪು ಛಾಯೆಯಲ್ಲಿದ್ದು, ವರ್ಣಮಯವಾಗಿದ್ದರೆ, ಮೂಲಕ್ಕೆ ಹತ್ತಿರವಾಗಿ ಇನ್ನಷ್ಟು ಪರಿಣಾಮಕಾರಿಯಾಗಿರುತ್ತಿದ್ದವು. ಕಲಾ ಸಾಹಿತ್ಯದ ಹಿನ್ನೆಲೆಯಲ್ಲಿ ಕಲಾವಿದರ ಪರಿಚಯ ಮತ್ತು ದಾಖಲೀಕರಣದ ದೃಷ್ಟಿಯಿಂದ ಇದೊಂದು ಗಮನಾರ್ಹ ಪುಸ್ತಕ.

**ಭಾರತದ ದೃಶ್ಯ ಕಲಾವಿದರು :**

ಭಾರತದ ದೃಶ್ಯ ಕಲಾವಿದರು ಪುಸ್ತಕವನ್ನು ಎನ್. ಮರಿಶಾಮಾಚಾರ್ ಬರೆದಿದ್ದಾರೆ.[೬೭] ಭಾರತದ ಹೆಸರಾಂತ ೨೦ ಜನ ಕಲಾವಿದರ ಜೀವನ ಮತ್ತು ಕಲೆಯ ಕುರಿತು ಸಂಕ್ಷಿಪ್ತ ಪರಿಚಯ ಇಲ್ಲಿದೆ. ಇಲ್ಲಿರುವ ಕಲಾವಿದರಲ್ಲಿ ಕೆಲವರು ಚಿತ್ರಕಲಾವಿದರಾದರೆ ಇನ್ನು ಕೆಲವರು ಶಿಲ್ಪಕಲಾವಿದರಾಗಿದ್ದಾರೆ. ಕೆಲವು ಕಲಾವಿದರು ಭಾರತೀಯ ಕಲಾ ಪರಂಪರೆಯ ಪುನರುಜ್ಜೀವನಕ್ಕಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟಿರುವರು. ಬ್ರಿಟಿಷ್ ವ್ಯವಸ್ಥೆಯ ಕಲಾಶಿಕ್ಷಣದಿಂದ ನಶಿಸಿ ಹೋಗುತ್ತಲಿದ್ದ ಭಾರತೀಯ ಪಾರಂಪರಿಕ ಕಲೆಗಳನ್ನು ಉಳಿಸಿ ಬೆಳೆಸುವ ಪ್ರಯತ್ನಕ್ಕೆ ಸ್ಫೂರ್ತಿ ಕೊಟ್ಟವರು ಇ.ಬಿ.ಹಾವೆಲ್. ಅವರ ಮಾರ್ಗದರ್ಶನದಲ್ಲಿ ಅಬನೀಂದ್ರನಾಥ ಟ್ಯಾಗೋರರು ತಮ್ಮ ಶಿಷ್ಯ ಸಮೂಹವನ್ನು ಕಟ್ಟಿಕೊಂಡು ಭಾರತೀಯ ಕಲೆಯ ಪುನರುಜ್ಜೀವನಕ್ಕಾಗಿ ಶ್ರಮಿಸತೊಡಗಿದರು. ಈ ಹಿನ್ನೆಲೆಯಲ್ಲಿಯೇ ಬಂಗಾಲ ಪ್ರಾಂತ್ಯದಲ್ಲಿ ಬಂಗಾಲ ಕಲಾಶೈಲಿ ಜನ್ಮತಾಳಿತು. ಈ ಪ್ರತ್ಯೇಕ ಕಲಾಶೈಲಿಯನ್ನು ಅನುಸರಿಸಿದವರು ಹೆಚ್ಚಾಗಿ ಅಬನೀಂದ್ರರ ಶಿಷ್ಯರು ಮತ್ತು ಪ್ರಶಿಷ್ಯರೇ ಆಗಿದ್ದರು ಎಂಬುದು ಗಮನಾರ್ಹ. ಈ ಪುಸ್ತಕದಲ್ಲಿ ಬಂಗಾಲ ಕಲಾಶೈಲಿಯ ಕಲಾವಿದರ ಬಗ್ಗೆಯೇ ಹೆಚ್ಚಿನ ಮಾಹಿತಿ ಇದೆ. ಅವರೆಲ್ಲ ಹೇಗೆ ಈ ಶೈಲಿಯನ್ನು ಉಳಿಸಿ ಬೆಳೆಸಿದರು, ಆ ಮೂಲಕ ಭಾರತೀಯ ಕಲೆಯ ಪುನರುಜ್ಜೀವನ ಮಾಡಿದರು ಎಂಬ ಸಂಗತಿಗಳು ಇಲ್ಲಿ ವ್ಯಕ್ತಗೊಂಡಿವೆ. ಇವರ ಜೊತೆಗೆ ಕೆಲವು ಭಾರತದ ಸಮಕಾಲೀನ ಕಲಾವಿದರ ಬಗ್ಗೆಯೂ ಇಲ್ಲಿ ಲೇಖನಗಳಿವೆ.

ಈ ಪುಸ್ತಕದಲ್ಲಿ ಅಬನೀಂದ್ರನಾಥ ಟ್ಯಾಗೋರ್, ನಂದಲಾಲ್ ಬೋಸ್, ರವೀಂದ್ರನಾಥ ಟ್ಯಾಗೋರ್, ಕ್ಷಿತೀಂದ್ರನಾಥ ಮುಜುಂದಾರ್, ಸೋಮನಾಥ ಹೋರೆ, ಜಾಮಿನಿರಾಯ್, ಅಮೃತಾ ಶೇರ್‌ಗಿಲ್, ಕೆ.ಕೆ.ಹೆಬ್ಬಾರ್, ಎಂ.ಎಫ್.ಹುಸೇನ, ಕೆ.ವೆಂಕಟಪ್ಪ, ವಿನೋದ್ ಬಿಹಾರಿ ಮುಖರ್ಜಿ ಮುಂತಾದ ೨೦ ಜನ ಕಲಾವಿದರ ಪರಿಚಯ ಲೇಖನಗಳಿವೆ. ಎಲ್ಲ ಕಲಾವಿದರ ಒಂದೆರಡು ಕೃತಿಗಳನ್ನು ವಿಶ್ಲೇಷಣೆ ಮಾಡಿರುವುದು ಕಲೆಯ ದೃಷ್ಟಿಯಿಂದ ಗಮನಾರ್ಹವಾಗಿದೆ.

**ಸೃಜನಶೀಲರು :**

ಭಾರತದ ಪ್ರಮುಖ ಒಂಭತ್ತು ಜನ ಕಲಾವಿದರ ಬಗ್ಗೆ ಪರಿಚಯಾತ್ಮಕ ಲೇಖನಗಳು ಈ ಪುಸ್ತಕದಲ್ಲಿವೆ. ಎನ್. ಮರಿಶಾಮಾಚಾರ್ ಬರೆದ ಈ ಲೇಖನಗಳಲ್ಲಿ[೬೮] ಆಯಾ ಕಲಾವಿದರ ಸ್ಥೂಲ ಮಾಹಿತಿ ಇದೆ. ಕಲಾವಿದರ ಹುಟ್ಟು, ಜನನ, ಕಲಾಶಿಕ್ಷಣ, ಪರಿಸರ, ಕಲಾಬದುಕು ಮತ್ತು ಕೃತಿಗಳ ವಿಶ್ಲೇಷಣೆಯನ್ನು ಸ್ಥೂಲ ರೂಪದಲ್ಲಿ ಕೊಡಲಾಗಿದೆ.

---

೬೭. ಎನ್.ಮರಿಶಾಮಾಚಾರ್ : ಭಾರತದ ದೃಶ್ಯಕಲಾವಿದರು : ಹರಿಹರ ಪ್ರಕಾಶನ ಬೆಂಗಳೂರು- ೧೯೯೩.
೬೮. ಎನ್.ಮರಿಶಾಮಾಚಾರ್ : ಸೃಜನಶೀಲರು : ಹರಿಹರ ಪ್ರಕಾಶನ ಬೆಂಗಳೂರು-೧೯೯೩

ಭಾರತದ ಪ್ರಮುಖ ಕಲಾವಿದರಾದ ನಂದಲಾಲ್ ಭೋಸ್, ಜಾಮಿನಿರಾಯ್, ಅಮೃತಾ ಶೇರ್‌ಗಿಲ್, ವಿನೋದ್ ಬಿಹಾರಿ ಮುಖರ್ಜಿ, ರಾಮಕಿಂಕರ್ ಬೈಂಜ್, ಎಸ್.ಎನ್. ಬೇಂದ್ರೆ, ಕೆ.ಸಿ.ಎಸ್. ಫಣಿಕರ್, ಎಂ.ಎಫ್.ಹುಸೇನ, ಕೆ.ಜಿ.ಸುಬ್ರಹ್ಮಣ್ಯನ್ ಇವರ ಬಗ್ಗೆ ಲೇಖನಗಳಿವೆ. ನಂದಲಾಲ ಬೋಸರ ಕುರಿತ ಲೇಖನಗಳಲ್ಲಿ ಅವರ ಬಾಲ್ಯ, ಶಿಕ್ಷಣ, ಶಾಂತಿನಿಕೇತನದಲ್ಲಿ ಅವರ ಸೇವೆ, ಕಲಾ ಅಧ್ಯಾಪಕರಾಗಿ ಅವರ ಮಹತ್ವಪೂರ್ಣ ಪಾತ್ರ ಇವುಗಳನ್ನು ಬಿಂಬಿಸಲಾಗಿದೆ. ಜಾಮಿನಿರಾಯ್ ಲೇಖನದಲ್ಲಿ ಅವರ ವಿದ್ಯಾಭ್ಯಾಸ ಕಲೆಯಲ್ಲಿ ಅವರಿಗೆ ಪ್ರಭಾವ ಬೀರಿದ ಅಂಶಗಳು, ಪ್ರಾಚೀನ ಕಲಾ ಪ್ರಾಕಾರಗಳಿಂದ ಪ್ರೇರಣೆಗೊಂಡ ಸಂಗತಿಗಳು, ಜನಪದ ಚಿತ್ರಕಲಾ ಶೈಲಿಯನ್ನು ಅಳವಡಿಸಿಕೊಂಡು ಅದರಲ್ಲಿ ಕೃತಿರಚಿಸಿದ ಬಗ್ಗೆ ಹೇಳಲಾಗಿದೆ. ಅಮೃತಾ ಶೇರ್‌ಗಿಲ್ ಅವಳ ಬಗೆಗಿನ ಲೇಖನದಲ್ಲಿ ಅವಳ ಕಲಾ ಪ್ರೀತಿ, ದೇಶ ಪರ್ಯಟನೆ, ಗ್ರಾಮೀಣ ಜನರ ಬಗೆಗಿನ ಅವಳ ಆಸಕ್ತಿ, ಇವುಗಳ ಕುರಿತು ಚಿತ್ರರಚನೆ ಮಾಡಿದ ಸಂಗತಿ ಮುಂತಾದವುಗಳನ್ನು ಕಟ್ಟಿಕೊಡಲಾಗಿದೆ.

ಪ್ರಸ್ತುತ ಕೃತಿಯು ಒಂಭತ್ತು ಜನ ಕಲಾವಿದರ ಪರಿಚಯ ಹೊಂದಿದ್ದು, ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯ ನಂತರದಲ್ಲಿ ಭಾರತೀಯ ಕಲಾವಲಯದ ಸ್ಥಿತಿಗತಿಗಳನ್ನು ಪರೋಕ್ಷವಾಗಿ ತಿಳಿಸಿಕೊಡುತ್ತದೆ. ಬಂಗಾಲ ಶೈಲಿಯ ಪ್ರಭಾವ ನಂತದರಲ್ಲಿ ಹೇಗೆ ಕ್ಷೀಣಿಸಿತು? ಅದರ ನಂತರದ ಕಲಾ ಬೆಳವಣಿಗೆಗಳು ಯಾವುವು? ಎನ್ನುವ ವಿಚಾರಗಳು ಈ ವ್ಯಕ್ತಿ ಚಿತ್ರಗಳಲ್ಲಿ ಮೂಡಿ ಬಂದಿವೆ.

**ಪಾಶ್ಚಾತ್ಯ ದೃಶ್ಯ ಕಲಾವಿದರು :**

ಪಾಶ್ಚಾತ್ಯ ಕಲಾಕ್ಷೇತ್ರದಲ್ಲಿ ಗಮನಾರ್ಹ ಸಾಧನೆ ಮಾಡಿದ ಹತ್ತು ಜನ ಕಲಾವಿದರ ಬಗ್ಗೆ ಸ್ಥೂಲ ಮಾಹಿತಿಯನ್ನು ಈ ಗ್ರಂಥ ಒಳಗೊಂಡಿದೆ. ಎನ್.ಮರಿಶಾಮಾಚಾರರು ಬರೆದ ಈ ಪುಸ್ತಕದಲ್ಲಿ[೬೯] ಪಾಶ್ಚಾತ್ಯ ಕಲಾಕ್ಷೇತ್ರದ ಪ್ರಮುಖ ಕಲಾವಿದರಾದ ಪಾಲ್‌ಸಿಜಾನ್, ಅಗಷ್ಟಸ್, ರಿನಾಯರ್, ಪಾಲ್‌ಗಾಗಿನ್, ವಿನ್ಸೆಂಟ್ ವ್ಯಾನ್‌ಗೋಗ್, ಹೆನ್ರಿಮಾಟಿಸ್, ಪಾಬ್ಲೋಪಿಕಾಸೋ, ಮಾರ್ಕಶೆಗಾಲ್, ಹೆನ್ರಿಮೂರ್, ಜಾನ್‌ಮಿರೋ, ಸಿಲ್ವೆಡರ್‌ಡಾಲಿ ಇವರ ಬಗ್ಗೆ ಕಿರು ಲೇಖನಗಳಿವೆ. ಈ ಕೃತಿಗಳಲ್ಲಿರುವ ಲೇಖನಗಳಲ್ಲಿ ಆಯಾ ಕಲಾವಿದರ ಹುಟ್ಟು, ಜೀವನ, ಕಲಾಬದುಕು, ಕಲಾಶಿಕ್ಷಣ ಮತ್ತು ಕಲಾಕೃತಿಗಳ ವಿಶ್ಲೇಷಣೆಗಳನ್ನು ಕೊಡಲಾಗಿದೆ. ಕಲಾವಿದರ ಪರಿಚಯದ ಹಿನ್ನೆಲೆಯಲ್ಲಿ ಈ ಕೃತಿ ಉಪಯುಕ್ತವೆನಿಸುತ್ತದೆ. ಕನ್ನಡದಲ್ಲಿ ಪಾಶ್ಚಾತ್ಯ ಕಲಾವಿದರ ಬಗ್ಗೆ ಬಂದಿರುವ ಬರವಣಿಗೆಗಳೇ ಕಡಿಮೆ. ಅಂತಹುದರಲ್ಲಿ ಈ ಕೃತಿ ಕಲಾಸಾಹಿತ್ಯ ಕ್ಷೇತ್ರಕ್ಕೆ ಉತ್ತಮ ಕೊಡುಗೆಯಾಗಿದೆ ಎನ್ನಬಹುದು.

ಈ ಗ್ರಂಥದಲ್ಲಿರುವ ಲೇಖನಗಳಲ್ಲಿ ಹೆನ್ರಿಮಾಟಿಸ್ ಮತ್ತು ವಿನ್ಸೆಂಟ್ ವ್ಯಾನ್‌ಗಾಗ್, ಹೆನ್ರಿಮೂರ್ ಬಗೆಗಿನ ಲೇಖನಗಳು ಕುತೂಹಲಕಾರಿಯಾಗಿವೆ. ಕಲಾವಿದ ಹೆನ್ರಿಮಾಟಿಸ್ ತನ್ನ ಕಲಾ ಜೀವನದಲ್ಲಿ ನಿರಂತರವಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ತಿರುಗಾಡಿದ ರೀತಿ, ಅದು ಆತನ ಕಲಾಕೃತಿಗಳ ಮೇಲೆ ಬೀರಿದ ಪ್ರಭಾವ, ಒಟ್ಟಾರೆ ಆತನ ಕಲಾಶೈಲಿ, ಕಲಾಕೃತಿಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ಹಾಗೆಯೇ ವಿನ್ಸೆಂಟ್ ವ್ಯಾನ್‌ಗಾಗ್ ಲೇಖನದಲ್ಲಿ ಕಲೆಯಲ್ಲಿ ತೀವ್ರ ಭಾವನೆಗಳನ್ನು ಹೊರ ಹಾಕುವ ಅವರ ರೀತಿ, ಪ್ರಖರ ಬಣ್ಣಗಳ ಲೇಪನ ಮುಂತಾದವುಗಳು ಅಡಕಗೊಂಡಿವೆ. ಹೀಗೆ ಹಲವಾರು ಅಂಶಗಳು ಈ ಗ್ರಂಥದಲ್ಲಿ ವ್ಯಕ್ತಗೊಂಡಿವೆ.

---

೬೯. ಎನ್.ಮರಿಶಾಮಾಚಾರ್ : ಪಾಶ್ಚಾತ್ಯ ದೃಶ್ಯಕಲಾವಿದರು : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು-೧೯೯೪.

**ಕಲೆಗಾರರ ಕಥೆಗಳು :**

ಕಲಾ ಸಾಹಿತ್ಯವನ್ನು ರಚಿಸಿದ ಪ್ರಮುಖ ಲೇಖಕರಲ್ಲಿ ಬಿ.ಪಿ. ಬಾಯಿರಿಯವರು ಒಬ್ಬರಾಗಿದ್ದಾರೆ. ಕಲೆಯ ಕುರಿತು ಹಲವು ಪುಸ್ತಕಗಳನ್ನು ರಚಿಸಿದ ಇವರು ಕಲಾವಿದರ ಬಗ್ಗೆ ಕಥಾರೂಪದ ಪರಿಚಯ ಲೇಖನಗಳನ್ನು ಬರೆದಿದ್ದಾರೆ.[೭೦] ಆ ಹಿನ್ನೆಲೆಯಲ್ಲಿ ರಚನೆಯಾದ ಕಲೆಗಾರರ ಕಥೆಗಳು ಎಂಬ ಈ ಪುಸ್ತಕದಲ್ಲಿ ಬಾಯಿರಿಯವರು ಭಾರತ ಮತ್ತು ವಿದೇಶಗಳ ಖ್ಯಾತ ಚಿತ್ರಕಲಾವಿದರ ಬಗ್ಗೆ ಸ್ಥೂಲವಾದ ನೋಟ ಕೊಟ್ಟಿದ್ದಾರೆ. ಪಾಶ್ಚಾತ್ಯ ಕಲಾವಿದರು ಮತ್ತು ಪೌರಾತ್ಯ ಕಲಾವಿದರುಗಳು ಅವರ ವಿಭಿನ್ನ ಕಲಾ ದೃಷ್ಟಿಕೋನಗಳು ಈ ಕೃತಿಯಲ್ಲಿ ಒಳಗೊಂಡಿವೆ. ಬಾಹ್ಯ ಪ್ರಧಾನವಾದ ಪಾಶ್ಚಾತ್ಯ ಕಲೆ, ಆಂತರಿಕ ಪ್ರಧಾನವಾದ ಪೌರಾತ್ಯ ಕಲೆಗಳ ರಚನಾ ವಿಧಾನ, ಕಲಾ ಮೌಲ್ಯ, ಆಶಯಗಳು, ಭಿನ್ನವಾದ ಸ್ವರೂಪ ಹೊಂದಿವೆ. ಇಂತಹ ಸಂಗತಿಗಳು ಇಲ್ಲಿ ಕಲಾವಿದರ ಹಿನ್ನೆಲೆಯಲ್ಲಿ ವ್ಯಕ್ತಗೊಂಡಿವೆ. ಈ ಪುಸ್ತಕದಲ್ಲಿ ಜಿಯತ್ತೋ, ಲಿಯೋನಾರ್ಡೋ-ಡ-ವಿನ್ಸಿ, ಮೈಕಲ್ ಎಂಜಲೋ, ರೆಂಬ್ರಾಂಟ್, ಹೊ.ಕು.ಸೇ, ಟರ್ನರ, ಕೊರೋಟ್, ವಿಸ್ಲರ್, ಸೇಜಾನ್, ರಾಜಾರವಿವರ್ಮ, ಪಾಲ್‌ಗಾಗಿನ್, ವಿನ್ಸೆಂಟ್ ವ್ಯಾನ್‌ಗಾಗ್, ರವೀಂದ್ರನಾಥ ಟ್ಯಾಗೋರ್, ಗುಸ್ಟವ್ ವೈಗ್ಲಂಡ್, ಆನಂದಕುಮಾರಸ್ವಾಮಿ, ಪಿಕಾಸೋ, ಕೆ.ವೆಂಕಟಪ್ಪ, ಜ್ಯಾಮಿನಿರಾಯ್, ಇಂತಹ ಕಲಾವಿದರ ಬಗ್ಗೆ ಕಥೆಗಳಿವೆಯಲ್ಲದೆ ಹವ್ಯಾಸಿ ಕಲೆಗಾರರು, ಕಲಾ ಪ್ರಪಂಚದ ಕೆಲವು ರಸ ಪ್ರಸಂಗಗಳು, ಕಲೆಯ ನುಡಿಮುತ್ತುಗಳು ಎಂಬ ಪ್ರತ್ಯೇಕ ಲೇಖನಗಳೂ ಇವೆ.

ಈ ಪುಸ್ತಕವು ಕಲೆಗಾರರ ಕಥೆಗಳು ಎಂಬುದಾಗಿದ್ದರೂ ಆಯಾ ಕಲಾವಿದರ ಜೀವನ, ಕಲೆ ಮತ್ತು ಕಲಾಕೃತಿಗಳ ಬಗ್ಗೆ ಕಥಾರೂಪದ ಸ್ಥೂಲ ಮಾಹಿತಿಯನ್ನು ಕೊಡುತ್ತದೆ. ಭಾರತ, ಪಾಶ್ಚಾತ್ಯ ಕಲಾಕ್ಷೇತ್ರ ಮತ್ತು ಪೌರಾತ್ಯ ಕಲಾಕ್ಷೇತ್ರಗಳ ಬಗ್ಗೆ ಉಪಯುಕ್ತ ಮಾಹಿತಿಯನ್ನು ಇದು ಒಳಗೊಂಡಿದೆ. ಅಲ್ಲದೆ ಕಲಾ ಸಾಹಿತ್ಯದಲ್ಲಿ ಕಲಾವಿದರು ಮತ್ತು ಅವರ ಕಲೆಯ ಬಗೆಗಿನ ಮಾಹಿತಿಯ ಮೂಲಗಳನ್ನು ಹೇಗೆ ಕಲಾತ್ಮಕವಾಗಿ ರೂಪಿಸಬಹುದು ಎಂಬ ಬಗ್ಗೆ ತಿಳಿಸಿ ಕೊಡುತ್ತದೆ.

**ದೃಶ್ಯ ಕಲಾವಿದರು :**

ಮರಿಶಾಮಾಚಾರರಿಂದ ರಚಿತವಾದ ಈ ಕೃತಿಯು ಕನ್ನಡ ವಿಶ್ವವಿದ್ಯಾಲಯ ಹಂಪಿಯಿಂದ ೨೦೦೩ರಲ್ಲಿ ಪ್ರಕಟವಾಗಿದೆ.[೭೧] ಇದರಲ್ಲಿ ದೇಶ, ವಿದೇಶಗಳ ಪ್ರಖ್ಯಾತರಾದ ೩೪ ಜನ ಕಲಾವಿದರ ಬಗ್ಗೆ ಸ್ಥೂಲ ಮಾಹಿತಿಯನ್ನು ಕೊಡುವ ೩೪ ಲೇಖನಗಳಿವೆ. ಭಾರತೀಯ ಕಲಾವಿದರಲ್ಲಿ ರಾಜಾರವಿವರ್ಮ, ಅಬನೀಂದ್ರನಾಥ ಟ್ಯಾಗೋರ್, ನಂದಲಾಲ್ ಬೋಸ್, ಗಗನೇಂದ್ರನಾಥ ಟ್ಯಾಗೋರ್, ಕೆ.ವೆಂಕಟಪ್ಪ, ಜ್ಯಾಮಿನಿರಾಯ್, ಅಸಿತಕುಮಾರ್ ಹಲ್ದಾರ್, ದೇವಿಪ್ರಸಾದ್ ರಾಯ್ ಚೌಧರಿ, ಶೈಲಜಾ ಮುಖರ್ಜಿ, ಅಮೃತಾ ಶೇರಗಿಲ್, ರವೀಂದ್ರನಾಥ ಟ್ಯಾಗೋರ್, ರಾಮಕಿಂಕರ್ ಬೈಂಜ್, ವಿನೋದ ಬಿಹಾರಿ ಮುಖರ್ಜಿ, ಎನ್.ಎಸ್. ಬೇಂದ್ರೆ, ಕೆ.ಕೆ.ಹೆಬ್ಬಾರ್, ಎಂ.ಎಫ್.ಹುಸೇನ್, ಕೆ.ಸಿ.ಎಸ್. ಫಣಿಕರ್, ಕೆ.ಜಿ.ಸುಬ್ರಹ್ಮಣ್ಯನ್, ಜೆ.ಸುಲ್ತಾನ್‌ಅಲಿ, ಸೋಮನಾಥ ಹೋರೆ, ಎಸ್.ಎಂ.ಪಂಡಿತ, ಎಸ್.ಎನ್.ಸ್ವಾಮಿ, ಇವರ ಬಗ್ಗೆ ಲೇಖನಗಳಿವೆ. ವಿದೇಶಿ ಕಲಾವಿದರಲ್ಲಿ ಅಗಷ್ಟಸ್ ರಿನಾಯರ್, ಪಾಲ್‌ಗಾಗಿನ್, ವಿನ್ಸೆಂಟ್ ವ್ಯಾನ್‌ಗಾಗ್, ಹೆನ್ರಿಮಾಟಿಸ್, ಪಾಬ್ಲೋ ಪಿಕಾಸೋ, ಮಾರ್ಕ ಶೆಗಾಲ್, ಹೆನ್ರಿಮೂರ್,

---

೭೦. ಬಿ.ಪಿ.ಬಾಯಿರಿ : ಕಲೆಗಾರರ ಕಥೆಗಳು : ಸಮಾಜ ಪುಸ್ತಕಾಲಯ, ಧಾರವಾಡ-೧೯೯೫.

೭೧. ಎನ್.ಮರಿಶಾಮಾಚಾರ್ : ದೃಶ್ಯಕಲಾವಿದರು : ಕನ್ನಡ ವಿಶ್ವವಿದ್ಯಾಲಯ ಧಾರವಾಡ-೨೦೦೩.

ಜಾನ್‌ಮಿರೋ, ಸಾಲ್ವೆಡಾರ್ ಡಾಲಿ, ಇವರುಗಳ ಕಲೆ ಮತ್ತು ಕಲಾಕೃತಿಗಳ ಬಗ್ಗೆ ಮಾಹಿತಿ ಕೊಡಲಾಗಿದೆ ಪ್ರಸ್ತುತ ಪುಸ್ತಕವು ಕಲಾವಿದರ ಕಲಾಬದುಕು, ಕಲೆ ಮತ್ತು ಕಲಾಕೃತಿಗಳ ಕುರಿತು ಸ್ಥೂಲ ಮಾಹಿತಿಯನ್ನು ನೀಡುತ್ತಿದ್ದು, ಬರವಣಿಗೆಯ ದೃಷ್ಟಿಯಿಂದ ಲೇಖಕರ ಹಳೆಯ ಪುಸ್ತಕಗಳ ಜಾಡನ್ನೇ ಹಿಡಿದಿದೆ. ಇದೇ ಕಲಾವಿದರ ಮಾಲಿಕೆಯನ್ನೇ ಮೂರುಸಾರಿ ಬೇರೆ ಬೇರೆ ಪ್ರಕಾಶನದಿಂದ ಪ್ರಕಟಿಸಿದ್ದರೂ ಕಾಲಮಾನಕ್ಕೆ ತಕ್ಕಂತೆ ಭಾಷೆಯ ಅಭಿವ್ಯಕ್ತಿ, ವಿಷಯ ಪ್ರಸ್ತುತಪಡಿಸುವ ರೀತಿಗಳು ಬದಲಾಗಬೇಕಿತ್ತು. ಆದರೆ ಒಂದೇ ತೆರನಾದ ಶೈಲಿ ಇಲ್ಲಿಯೂ ಕಂಡು ಬರುತ್ತದೆ. ಎಂಭತ್ತರ ದಶಕದ ನಂತರದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಆದ ಬದಲಾವಣೆಯಂತೆ ಇಲ್ಲಿ ಆಗದಿರುವುದು ಒಂದು ಕೊರತೆಯಾಗಿ ಗೋಚರಿಸುತ್ತದೆ.

ಕಲಾವಿದರ ಪರಿಚಯ ಲೇಖನಗಳ ಚಿತ್ರಕಲಾಸಾಹಿತ್ಯದಲ್ಲಿ ಪಾಶ್ಚಾತ್ಯ ಕಲಾವಿದರು, ಸೃಜನಶೀಲ ಕಲಾವಿದರು, ಭಾರತದ ದೃಶ್ಯಕಲಾವಿದರು, ಸೃಜನಶೀಲರು, ಪಾಶ್ಚಾತ್ಯ ದೃಶ್ಯಕಲಾವಿದರು, ಕಲೆಗಾರರ ಕಥೆಗಳು ಮತ್ತು ದೃಶ್ಯಕಲಾವಿದರು ಎಂಬ ಪುಸ್ತಕಗಳು ವಿಶ್ಲೇಷಣೆಗೊಳಪಟ್ಟಿವೆ. ಇದರಲ್ಲಿ ಮರಿಶಾಮಾಚಾರರು ಮೂರು ಮತ್ತು ಬಾಯಿರಿಯವರು ಎರಡು ಕೃತಿಗಳನ್ನು ರಚಿಸಿದ್ದಾರೆ. ಇಲ್ಲಿನ ಲೇಖನಗಳಲ್ಲಿ ಕರ್ನಾಟಕ, ಭಾರತ ಮತ್ತು ಅಂತರಾಷ್ಟ್ರೀಯ ಕಲಾವಿದರ ಬಗ್ಗೆ ಸ್ಥೂಲ ಮಾಹಿತಿ ಲಭ್ಯವಾಗುತ್ತದೆ. ಆಯಾ ಕಲಾವಿದರ ಹುಟ್ಟು, ತಂದೆ-ತಾಯಿ, ಬಾಲ್ಯ, ಕಲಾಬದುಕುಗಳ ಸಂಕ್ಷಿಪ್ತ ಮಾಹಿತಿ ದೊರಕುತ್ತದೆ. ಇವುಗಳಲ್ಲಿ ಪಾಶ್ಚಾತ್ಯ ಕಲಾವಿದರ ಬಗೆಗಿನ ಲೇಖನಗಳು ಹೆಚ್ಚಾಗಿವೆ.

ಕರ್ನಾಟಕದ ಚಿತ್ರಕಲಾ ವ್ಯಕ್ತಿಅಧ್ಯಯನ ಸಾಹಿತ್ಯ ಎಂಬ ಈ ಅಧ್ಯಾಯದಲ್ಲಿ ಇದುವರೆಗೂ ಬಂದ ವ್ಯಕ್ತಿಅಧ್ಯಯನ ಕುರಿತ ಗ್ರಂಥ ಮತ್ತು ಲೇಖನಗಳನ್ನು ವಿಷಯಾನುಸಾರ ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ. ಈ ವಿಂಗಡಣೆಯಲ್ಲಿ ಆಯಾ ಪ್ರದೇಶದ ಪ್ರಾಕೃತಿಕ ಲಕ್ಷಣಗಳು, ಜನಜೀವನ, ಸಂಸ್ಕೃತಿ, ಧಾರ್ಮಿಕತೆ, ವಿಧಿಕ್ರಿಯೆಗಳಂತಹ ಸಂಗತಿಗಳು, ಅವರ ಕಲಾಬದುಕು ಮತ್ತು ಕಲಾಕೃತಿಗಳ ಮೇಲೆ ಪ್ರಭಾವ ಬೀರಿದ್ದನ್ನು ತಿಳಿಸಲಾಗಿದೆ. ಆಯಾ ಕಲಾವಿದರ ಕಲಾಬದುಕಿನ ಜೊತೆಗೆ ದೈನಂದಿನ ಜೀವನದ ಘಟನಾವಳಿಗಳು ಇಲ್ಲಿ ಬೆಳಕುಕಂಡಿವೆ. ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಕರಾವಳಿ ಕರ್ನಾಟಕದ ಕಲಾವಿದರು ವಿಭಿನ್ನ ರೀತಿಯ ಪ್ರಭಾವಗಳಿಂದ ಪ್ರೇರಿತರಾಗಿ ಕೃತಿರಚಿಸಿದ್ದು ತಿಳಿದುಬರುತ್ತದೆ. ಕಲಾವಿದರ ಬಗೆಗಿನ ಈ ಸಾಹಿತ್ಯದಿಂದ ಕರ್ನಾಟಕದ ಕಲಾಬೆಳವಣಿಗೆ, ಕಲಾವಾತಾವರಣ, ಕಲಾಪೇಮಗಳು ತಿಳಿದುಬರುತ್ತವೆ. ಅಲ್ಲದೆ ಕರ್ನಾಟಕದ ಕಲಾಕ್ಷೇತ್ರದಲ್ಲಿರುವ ಪ್ರಾದೇಶಿಕ ಗುಣಲಕ್ಷಣಗಳು ಹೋಲಿಕೆ ವೈರುಧ್ಯಗಳಂತಹ ವಿಚಾರಗಳು ತಿಳಿದುಬರುತ್ತವೆ.

ಚಿತ್ರಕಲಾ ವ್ಯಕ್ತಿ ಅಧ್ಯಯನ ಸಾಹಿತ್ಯವನ್ನು ಅವಲೋಕಿಸಿದಾಗ ಅನೇಕ ಅಂಶಗಳು ಕಂಡುಬರುತ್ತವೆ. ಕಲಾವಿದರ ಬಗೆಗಿನ ಬಹುಪಾಲು ಕೃತಿಗಳನ್ನು ರಾಜ್ಯ ಲಲಿತಕಲಾ ಅಕಾಡಮಿಯು ಪ್ರಕಟಿಸಿರುವದು ಒಂದು ಸಂಗತಿಯಾದರೆ, ಬಹುಮಟ್ಟಿನ ಕೃತಿಗಳು ಒಂದೇ ಮಾದರಿಯನ್ನು ಅನುಕರಿಸಿದ್ದು ಮತ್ತೊಂದು ಅಂಶವಾಗಿದೆ. ಈ ಹಿನ್ನೆಲೆಯಲ್ಲಿ ವ್ಯಕ್ತಿ ಅಧ್ಯಯನ ಕೃತಿಗಳಲ್ಲಿ ವೈವಿಧ್ಯತೆ ಕಂಡುಬರುವುದಿಲ್ಲ. ಕಲಾವಿದರ ಕಲಾ ಬದುಕನ್ನು ಕಟ್ಟಿಕೊಡುವಲ್ಲಿ ಅವರುಗಳು ಮುಂಬೈ, ಬರೋಡಾ, ಶಾಂತಿನಿಕೇತನ, ಮದ್ರಾಸ್, ಕಲ್ಕತ್ತಾ ಕಲಾಶಾಲೆಗಳಲ್ಲಿ ಕಲಿತುಬಂದರೆನ್ನುವ ಅಂಶಗಳನ್ನು ವೈಭವೀಕರಿಸುವತ್ತ, ಬಡತನದಲ್ಲಿ ಕಲಿತರೆನ್ನುವುದನ್ನು ಒತ್ತಿ ಹೇಳುವಲ್ಲಿ ಮತ್ತು ಅಕಾಡಮಿಕ್ ಶೈಲಿಯಲ್ಲಿ ಚಿತ್ರರಚನೆ ಮಾಡಿದರೆಂಬಂತಹ ಸಂಗತಿಗಳ ಬಗ್ಗೆ ಹೆಚ್ಚಿನ ಗಮನಹರಿಸುತ್ತ ಬರಲಾಗಿದ್ದು ಕಲಾಶೈಲಿ, ಕಲಾಕೃತಿ ರಚನೆ, ಕಲಾವಿಮರ್ಶೆ

ತೌಲನಿಕ ವಿವೇಚನೆಯಂತಹ ಅಂಶಗಳ ಕಡೆಗೆ ಲೇಖಕರು ಗಮನಹರಿಸದಿರುವುದು ಒಂದು ಕೊರತೆಯಾಗಿ ಕಂಡುಬರುವುದು.

ಪಾಶ್ಚಾತ್ಯ ಕಲಾವಿದರ ಬಗ್ಗೆ ಬಂದ ವಿದೇಶಿ ಲೇಖಕರು ಬರೆದ ವ್ಯಕ್ತಿ ಅಧ್ಯಯನಗಳನ್ನು ನೋಡಿದಾಗ ಕನ್ನಡದಲ್ಲಿ ಬಂದಿರುವ ಈ ಎಲ್ಲ ಕೃತಿಗಳು ಇನ್ನೂ ವೈವಿಧ್ಯತೆಯಿಂದ ಕೂಡಿರಬೇಕಿತ್ತು ಎನಿಸುತ್ತದೆ. ಪಾಶ್ಚಾತ್ಯರ ಕಲಾವಿಮರ್ಶೆ ಮತ್ತು ಕಲಾವಿದನೊಬ್ಬನನ್ನು ಅವರು ನೋಡುವ ದೃಷ್ಟಿಕೋನಗಳ ನೆಲೆಗಳು ಕರ್ನಾಟಕದಲ್ಲಿ ಬಂದಿರುವ ವ್ಯಕ್ತಿ ಅಧ್ಯಯನ ಕೃತಿಗಳಲ್ಲಿಲ್ಲ. ಕಲಾಕೃತಿ ರಚನೆ, ಬಣ್ಣಗಾರಿಕೆ, ರೇಖಾಲಾಲಿತ್ಯ, ಸಂಯೋಜನಾ ಕೃಷ್ಟಿಕೋನಗಳು, ಮೈವಳಿಕೆ, ಸ್ಥಳಾವಕಾಶದ ವಿಂಗಡಣೆ, ಆಕಾರ, ಬಣ್ಣಗಳು ಮತ್ತು ಸಂಕೇತಗಳು ಒಳಗೊಂಡಿರುವ ಒಳಾರ್ಥವನ್ನು ಬಿಂಬಿಸುವಲ್ಲಿ ಇಲ್ಲಿನ ವ್ಯಕ್ತಿ ಅಧ್ಯಯನ ಕೃತಿಗಳು ವಿಫಲವಾಗಿವೆ. ಇದಕ್ಕೆ ಕಾರಣಗಳೂ ಸಾಕಷ್ಟಿವೆ. ಕಲಾವಿದ ಮತ್ತು ಕಲೆಯ ಬಗ್ಗೆ ಕಲಾವಿದರು ಬರೆದಾಗ ಅದು ಹೆಚ್ಚು ವಸ್ತುನಿಷ್ಠ ಮತ್ತು ಮೌಲಿಕತೆಯಿಂದ ಕೂಡಿರುತ್ತದೆ. ಯಾವುದೇ ಕಲಾಪ್ರಕಾರದ ತಾಂತ್ರಿಕ ವಿಧಿ–ವಿಧಾನಗಳನ್ನು ಪ್ರಾಯೋಗಿಕವಾಗಿ ಮಾಡಿ ಅನುಭವಿಸಿದವನು ಹೆಚ್ಚು ಪರಿಣಾಮಕಾರಿಯಾಗಿ ಕಟ್ಟಿಕೊಡಬಲ್ಲನು. ಆದರೆ ಸಾಹಿತಿಗಳು ಮತ್ತು ಇನ್ನಿತರ ಕ್ಷೇತ್ರಗಳ ವಿದ್ವಾಂಸರು ಕಲೆಯ ಬಗ್ಗೆ ಬರೆದಾಗ ಇಂತಹ ಕೊರತೆಗಳು ಉಂಟಾಗುವುದು ಸಾಮಾನ್ಯವಾಗಿದೆ. ಕರ್ನಾಟಕದ ಆರಂಭಿಕ ಹಂತಹ ಚಿತ್ರಕಲಾ ವ್ಯಕ್ತಿ ಅಧ್ಯಯನ ಸಾಹಿತ್ಯವು ಇದೆ ದಾರಿಯಲ್ಲಿ ಸಾಗಿದೆ. ಆದರೆ ಅಲ್ಲಲ್ಲಿ ಕೆಲವು ಜನ ಕಲಾವಿದರು ಬರವಣಿಗೆ ಬಲ್ಲವರಾಗಿದ್ದು ಅವರು ಬರೆದಂತಹ ಬೆರಳೆಣಿಕೆಯ ಕೃತಿಗಳು ಉತ್ತಮ ಮಟ್ಟದಲ್ಲಿದ್ದು ಮೌಲಿಕತೆಯಿಂದ ಕೂಡಿವೆ. ಡಾ.ಬಿ.ಕೆ.ಹಿರೇಮಠ, ಪಿ.ಆರ್.ತಿಪ್ಪೇಸ್ವಾಮಿ, ವ್ಹಿ.ಸಿ.ಮಾಲಗತ್ತಿ, ಆರ್.ಜಿ.ರಾಯ್ಕರ, ವ್ಹಿ.ಟಿ.ಕಾಳೆ, ಶಂಕರ ಪಾಟೀಲ, ಅ.ಲ.ನರಸಿಂಹನ್, ಮರಿಶಾಮಾಚಾರ್, ಕೆ.ವಿ.ಸುಬ್ರಹ್ಮಣ್ಯ, ಚಿ.ಸು.ಕೃಷ್ಣಶೆಟ್ಟಿ, ಎಚ್.ಎ.ಅನಿಲಕುಮಾರ, ಡಾ.ಎಸ್.ಸಿ.ಪಾಟೀಲ ಇಂತಹ ಕೆಲವರು ಕಲೆಯನ್ನು ಪ್ರಾಯೋಗಿಕವಾಗಿ ಬಲ್ಲವರಾಗಿದ್ದು ಇವರು ಬರೆದ ಕೃತಿಗಳು ಪ್ರಾಯೋಗಿಕ ವಿವರ ಮತ್ತು ತಂತ್ರಗಾರಿಕೆಯ ಅಂಶಗಳನ್ನು ಒಳಗೊಂಡಿವೆ.

ಉತ್ತರ ಕರ್ನಾಟಕದ ಕಲಾವಿದರಲ್ಲಿ ಜಿ.ಎಸ್.ದಂಡಾವತಿಮಠ, ಡಿ.ಜಿ.ಬಡಿಗೇರ, ಎಂ.ವ್ಹಿ.ಮಿಣಜಗಿ, ಅಮೀನಸಾಹೇಬ ಕಮಡೊಳ್ಳಿ, ವಾಚೇದಮಠ, ಡಿ.ವ್ಹಿ.ಹಾಲಭಾವಿ, ಟಿ.ಪಿ.ಅಕ್ಕಿ, ಎಂ.ಎ.ಚೆಟ್ಟಿ, ಶಂಕರರಾವ್ ಆಳಂದಕರ್, ಎಸ್.ಎಮ್.ಪಂಡಿತ, ಬಾನಯ್ಯ ಗರುಡಾದ್ರಿ, ಆರ್.ಎಂ.ಹಡಪದ, ಎಂ.ಡಿ.ಭೋಪಲೆ, ಸೋಮಶೇಖರ ಸಾಲಿ, ಶಿವಾನಂದ ಅಕ್ಕಿ, ಜೆ.ಎಸ್.ಖಂಡೇರಾವ್, ಬಿ.ಕೆ.ಹುಬಳಿ, ಬಸವರಾಜ ಹಳಿಜೋಳ, ವಿಜಯ ಸಿಂಧೂರ, ಎಂ.ಬಿ.ಪಾಟೀಲ, ಶಾಂತಲಿಂಗಪ್ಪ ಪಾಟೀಲ ಮುಂತಾದವರ ಬಗ್ಗೆ ಕೃತಿಗಳು ರಚನೆಯಾಗಿವೆ.

ದಕ್ಷಿಣ ಕರ್ನಾಟಕದ ಕಲಾವಿದರಲ್ಲಿ ಕೆ. ವೆಂಕಟಪ್ಪ, ಎಂ.ವೀರಪ್ಪ, ಎಸ್.ಆರ್.ಅಯ್ಯಂಗಾರ, ವೈ.ಸುಬ್ರಹ್ಮಣ್ಯರಾಜು, ಎನ್.ಎಸ್.ಸುಬ್ಬುಕೃಷ್ಣ, ಎನ್.ಹನುಮಯ್ಯ, ಎಂ.ಟಿ.ವ್ಹಿ.ಆಚಾರ್ಯ, ರುಮಾಲೆ ಚನ್ನಬಸವಯ್ಯ, ಪಿ.ಆರ್.ತಿಪ್ಪೇಸ್ವಾಮಿ, ಎಸ್.ನಂಜುಂಡಸ್ವಾಮಿ, ಪಿ.ಸುಬ್ಬರಾವ್, ಎಂ.ಎಸ್.ಚಂದ್ರಶೇಖರ್, ಎಂ.ಜೆ.ಶುದ್ಧೋಧನ, ಮಧುಗಿರಿ ರಾಮು, ಎಸ್.ಎಸ್.ಕುಕ್ಕೆ, ಎಂ.ಎಫ್.ಸೂಫಿ, ಎಸ್.ಎಸ್.ಮನೋಳಿ, ಯೂಸೂಫ್ ಅರಕ್ಕಲ್, ಕೆ.ಟಿ.ಶಿವಪ್ರಸಾದ್, ಎಂ ರಾಮನರಸಯ್ಯ, ಎಸ್.ಜಿ.ವಾಸುದೇವ ಇವರುಗಳ ಬಗ್ಗೆ ಕೃತಿಗಳು ಬಂದಿವೆ.

ಕರಾವಳಿ ಕರ್ನಾಟಕದ ಕಲಾವಿದರಲ್ಲಿ ಕೆ.ಕೆ.ಹೆಬ್ಬಾರ್, ಎನ್.ಜೆ.ಪಾವಂಜೆ, ಪಾವಂಜೆ ಗೋಪಾಲಕೃಷ್ಣಯ್ಯ, ಜಿ.ಎಸ್.ಶೆಣೈ, ಪೀಟರ್ ಲೂಯಿಸ್, ಪುಂಚಿತ್ತಾಯ್ ಇವರ ಬಗ್ಗೆ ಕೃತಿಗಳು ಬಂದಿವೆ. ಈ ಮೇಲಿ ಪ್ರಾದೇಶಿಕ ವಿಂಗಡಣೆಯಲ್ಲಿ ಕೆಲವು ಕಲಾವಿದರ ಬಗ್ಗೆ ಒಂದಕ್ಕಿಂತ ಹೆಚ್ಚಿನ ಕೃತಿಗಳು ಪ್ರಕಟಗೊಂಡಂತೆಯೇ ಆಯಾ ಭಾಗದಲ್ಲಿ ಅವರ ಕುರಿತು ಬರಹಗಾರರು ಹೆಚ್ಚಿನ ಒಲವು ತೋರಿದಂತೆ ಕಂಡುಬರುವುದು. ಉತ್ತರ ಕರ್ನಾಟಕ ಭಾಗದಲ್ಲಿ ಜಿ.ಎಸ್.ದಂಡಾವತಿಮಠ, ಟಿ.ಪಿ.ಅಕ್ಕಿ, ಎಮ್.ಎ.ಚೆಟ್ಟಿ, ಎಸ್.ಎಂ.ಪಂಡಿತ, ಎಂ.ವ್ಹಿ.ಮಿಣಜಗಿ ಇವರ ಬಗ್ಗೆ ಒತ್ತುಕೊಟ್ಟಿದ್ದಾರೆ. ದಕ್ಷಿಣ ಕರ್ನಾಟಕದಲ್ಲಿ ಕೆ. ವೆಂಕಟಪ್ಪ, ಕರಾವಳಿ ಕರ್ನಾಟಕದಲ್ಲಿ ಕೆ.ಕೆ.ಹೆಬ್ಬಾರ್ ಇವರ ಬಗ್ಗೆ ಹೆಚ್ಚಿನವರು ಬರೆದಿದ್ದಾರೆ. ಕರ್ನಾಟಕದ ಕಲಾವಿದರಲ್ಲಿ ವ್ಯಕ್ತಿ ಅಧ್ಯಯನ ಸಾಹಿತ್ಯವು ಅತಿ ಹೆಚ್ಚು ಪ್ರಕಟಗೊಂಡಿರುವುದು ಕೆ. ವೆಂಕಟಪ್ಪನವರ ಬಗ್ಗೆ ಮತ್ತು ನಂತರದಲ್ಲಿ ಕೆ.ಕೆ.ಹೆಬ್ಬಾರರ ಕುರಿತಾಗಿದೆ.

ಈಗಾಗಲೇ ಗಮನಿಸಿರುವಂತೆ ವ್ಯಕ್ತಿ ಅಧ್ಯಯನ ಸಾಹಿತ್ಯವು ಕಲಾ ಕ್ಷೇತ್ರದಲ್ಲಿ ಕಲಾವಿದರಿಂದ ರಚನೆಯಾದಾಗ ಹೆಚ್ಚಿನ ಮೌಲಿಕತೆಯನ್ನು ಪಡೆದುಕೊಳ್ಳುತ್ತದೆ ಎನ್ನು ಹಿನ್ನೆಲೆಯಿಂದ ಅಂತಹ ಪ್ರಯತ್ನಗಳು ಹೆಚ್ಚಾಗಬೇಕಿದೆ. ಪಿಹೆಚ್.ಡಿ. ಅಧ್ಯಯನಗಳಲ್ಲಿ ಈ ರೀತಿಯ ಪ್ರಯತ್ನಗಳು ಪ್ರಾರಂಭಗೊಂಡಿರುವುದು ಗಮನಾರ್ಹವಾಗಿದ್ದರೂ ವೈವಿಧ್ಯತೆಯಿಂದ ಬೆಳೆಯಬೇಕಾಗಿದೆ.

ಕರ್ನಾಟಕದಲ್ಲಿ ಸ್ಥಳೀಯ ಕಲಾವಿದರ ಬಗ್ಗೆ ಬಂದಂತಹ ಕೃತಿಗಳು ಹೆಚ್ಚಾಗಿದ್ದು, ಹೊರರಾಜ್ಯ ಮತ್ತು ಅಂತಾರಾಷ್ಟ್ರೀಯ ಕಲಾವಿದರ ಬಗೆಗಿನ ಕೃತಿಗಳು ಕಡಿಮೆ ಪ್ರಮಾಣದಲ್ಲಿರುವುದು ಗಮನಿಸುವ ಅಂಶವಾಗಿದ್ದು, ಆ ಬಗೆಗಿನ ತಿಳುವಳಿಕೆಯ ಕೊರತೆ ಮತ್ತು ಆಂಗ್ಲಭಾಷಾ ಕಲಾ ಸಾಹಿತ್ಯದ ಕುರಿತಾದ ತಿಳುವಳಿಕೆಯ ಕೊರತೆಗಳು ಪ್ರಮುಖ ಕಾರಣವೆನ್ನಬಹುದು. ಇವುಗಳ ಜೊತೆಗೆ ಸಮಕಾಲೀನ ಕಲಾವಿದರು, ಚಂದ್ರವರ್ಮ, ಸಂತ ಶುಭರಾಯರಂತಹ ಅಜ್ಞಾತ ಕಲಾವಿದರು, ಕೆಲವು ಪ್ರಖ್ಯಾತ ಹವ್ಯಾಸಿ ಕಲಾವಿದರು, ರಂಗಪರದೆಯ ಕಲಾವಿದರು, ಜನಪದ ಕಲಾವಿದರ ಬಗ್ಗೆ ವ್ಯಕ್ತಿ ಅಧ್ಯಯನ ಕೃತಿಗಳು ರಚನೆಯಾಗಬೇಕಾದ ಅವಶ್ಯಕತೆ ಕಂಡುಬರುತ್ತದೆ. ಈಗ ಪ್ರಕಟಗೊಂಡಿರುವ ಬಹುಮಟ್ಟಿನ ಕೃತಿಗಳು ಕಲಾಶಾಲೆಯಲ್ಲಿ ಕಲಿತ ಅಥವಾ ಕಲಾಶಿಕ್ಷಣ ಪಡೆದುಕೊಂಡು ಶಿಷ್ಟಶೈಲಿಯಲ್ಲಿ ನುರಿತ ಕಲಾವಿದರ ಕುರಿತಾಗಿವೆ. ಇವು ಒಂದು ಬಗೆಯ ಕಲಾವಾತಾವರಣವನ್ನು ಬಿಂಬಿಸುತ್ತವೆ. ಆದರೆ ಜನಪದ ಕಲಾವಿದರು, ಪ್ರಖ್ಯಾತ ಹವ್ಯಾಸಿ ಕಲಾವಿದರು, ರಂಗಪರದೆಯ ಕಲಾವಿದರ ಬಗೆಗಿನ ಅಧ್ಯಯನಗಳಿಂದ ಪಾರಂಪರಿಕ ಕಲೆಯ ಅಂಶಗಳು, ರಚನಾ ವಿಧಾನಗಳು, ಪರಿಕರಗಳು ಮುಂತಾದ ಹಲವಾರು ಸಂಗತಿಗಳು ತಿಳಿದುಬರುತ್ತವೆ. ಇಂತಹ ವಿವರಗಳು ಇಂದಿನ ಸಮಕಾಲೀನ ಕಲಾವಲಯದಲ್ಲಿ ಅವಶ್ಯವಾಗಿದ್ದು, ಅವುಗಳೊಡನೆ ಮುಖಾಮುಖಿಯಾಗಬೇಕಾದ ಅನಿವಾರ್ಯತೆ ಇದೆ. ನವ್ಯತೆ ಎಂಬುದು ಒಮ್ಮಿಂದೊಮ್ಮೆ ಉದ್ಭವಿಸದೇ ಪಾರಂಪರಿಕ ಕಲಾ ತಳಹದಿಯ ಮೇಲೆ ಕಟ್ಟಲ್ಪಟ್ಟ ರಚನೆಯಾಗಿದ್ದು ಅದರ ಮೂಲ ಸತ್ವಗಳನ್ನು ಒಳಗೊಂಡು ಬೆಳೆದಿದೆ ಎಂಬುದನ್ನು ಯುವ ಪೀಳಿಗೆಗೆ ಮನವರಿಕೆ ಮಾಡಿಕೊಡುವ ನಿಟ್ಟಿನಲ್ಲಿ ಇಂತಹ ಕಲಾವಿದರ ವ್ಯಕ್ತಿ ಅಧ್ಯಯನಗಳು ನಡೆಯಬೇಕಾದ ಅವಶ್ಯಕತೆ ಇದೆ.

*****

ಕರ್ನಾಟಕ ಚಿತ್ರಕಲಾ ಸಾಹಿತ್ಯದಲ್ಲಿ ಕನ್ನಡದಲ್ಲಿ ರಚನೆಯಾದ ಸಾಹಿತ್ಯ ಕೃತಿಗಳಿಗಿಂತ ಬೇರೆ ಭಾಷೆಯಿಂದ ಕನ್ನಡಕ್ಕೆ ಅನುವಾದಗೊಂಡ ಸಾಹಿತ್ಯ ಕೃತಿಗಳೂ ಮೌಲಿಕತೆಯಿಂದ ಕೂಡಿವೆ. ಈ ಭಾಗದ ಕಲಾ ಪರಂಪರೆ ಮತ್ತು ಕಲಾ ಪ್ರಕಾರಗಳ ಬಗ್ಗೆ ಮಹತ್ವಪೂರ್ಣವಾದ ಸಂಗತಿಗಳನ್ನು ಇವು ಒಳಗೊಂಡಿವೆ. ಅನುವಾದ ಗ್ರಂಥಗಳಲ್ಲಿ ಪ್ರಾಚೀನ ಸಂಸ್ಕೃತ ಸಾಹಿತ್ಯ ಕೃತಿಗಳನ್ನು ಸಂಪಾದನಾ ಮಾಡಿ ಅನುವಾದಿಸಿರುವುದು ಮಹತ್ವದ್ದಾಗಿದೆ. ಇವುಗಳಲ್ಲಿ ಪ್ರಾಚೀನ ಕಲಾ ಪರಂಪರೆ ಬಗೆಗೆ ಮೌಲಿಕವಾದ ವಿಚಾರಗಳು ಹೇಳಲ್ಪಟ್ಟಿವೆ. ಈ ಕಾರಣಕ್ಕಾಗಿಯೇ ಕರ್ನಾಟಕ ಚಿತ್ರಕಲಾ ಸಾಹಿತ್ಯ ಕ್ಷೇತ್ರದಲ್ಲಿ ಇವುಗಳು ವಿಶಿಷ್ಟವಾಗಿ ನಿಲ್ಲುತ್ತವೆ.

ಪ್ರಾಚೀನ ಸಂಸ್ಕೃತ ಸಾಹಿತ್ಯ ಕೃತಿಗಳನ್ನು ಸಂಪಾದಿಸಿ ಅನುವಾದ ಮಾಡಿರುವುದು ಒಂದು ಬಗೆಯಾದರೆ, ಕೆಲವು ಇಂಗ್ಲೀಷ್ ಪುಸ್ತಕಗಳು, ತೆಲುಗು ಮತ್ತು ಹಿಂದಿ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಲಾಗಿದೆ. ಆದರೆ ಕರ್ನಾಟಕ ಚಿತ್ರಕಲಾ ಸಾಹಿತ್ಯದಲ್ಲಿ ಸಂಸ್ಕೃತ ಗ್ರಂಥಗಳ ಅನುವಾದಗಳು ಹೆಚ್ಚಾಗಿದ್ದು ಇನ್ನಿತರ ಭಾಷೆಗಳ ಸಾಹಿತ್ಯ ಕೃತಿಗಳ ಅನುವಾದಗಳು ಕಡಿಮೆ ಪ್ರಮಾಣದಲ್ಲಿವೆ. ಇಂಗ್ಲೀಷ್‌ನ ಐದಾರು, ತೆಲುಗಿನ ಒಂದು, ಹಿಂದಿಯ ಎರಡು ಕೃತಿಗಳು ಈ ನಿಟ್ಟಿನಲ್ಲಿ ಮಹತ್ವಪೂರ್ಣವಾಗಿವೆ.ಈ ಅಧ್ಯಾಯದಲ್ಲಿ ಕರ್ನಾಟಕ ಚಿತ್ರಕಲಾ ಸಾಹಿತ್ಯ ಕ್ಷೇತ್ರದಲ್ಲಿರುವ ಅನುವಾದ ಗ್ರಂಥಗಳ ಜೊತೆಗೆ

ಇಂಗ್ಲೀಷ್ ಭಾಷೆಯಲ್ಲಿ ರಚನೆಯಾದ ಕರ್ನಾಟಕದ ಚಿತ್ರಕಲಾ ಸಾಹಿತ್ಯ ಮತ್ತು ಚಿತ್ರಕಲಾ ಪ್ರವಾಸ ಸಾಹಿತ್ಯವನ್ನು ಅಧ್ಯಯನಕ್ಕೆ ಪರಿಗಣಿಸುವ ಉದ್ದೇಶ ಹೊಂದಲಾಗಿದೆ. ಹಾಗಾಗಿ ಈ ಅಧ್ಯಾಯದ ವಿಷಯವನ್ನು ಈ ಕೆಳಗಿನಂತೆ ಮೂರು ಹಂತಗಳಲ್ಲಿ ವಿಂಗಡಿಸಲಾಗಿದೆ. ೧. ಚಿತ್ರಕಲಾ ಅನುವಾದ ಸಾಹಿತ್ಯ ೨. ಚಿತ್ರಕಲಾ ಇಂಗ್ಲೀಷ್ ಭಾಷೆ ಸಾಹಿತ್ಯ ೩. ಚಿತ್ರಕಲಾ ಪ್ರವಾಸ ಸಾಹಿತ್ಯ.

**೧. ಚಿತ್ರಕಲಾ ಅನುವಾದ ಸಾಹಿತ್ಯ :**

ಚಿತ್ರಕಲಾ ಅನುವಾದ ಸಾಹಿತ್ಯದಲ್ಲಿ ಅಧ್ಯಯನಕ್ಕೆ ತಿಳಿಸಿದಂತೆ ಸಂಸ್ಕೃತ, ಇಂಗ್ಲೀಷ್, ಹಿಂದಿ ಮತ್ತು ತೆಲುಗು ಭಾಷೆಯ ಕೃತಿಗಳು ಕನ್ನಡಕ್ಕೆ ಅನುವಾದಗೊಂಡಿದ್ದನ್ನು ಪರಿಗಣಿಸಲಾಗಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಇಲ್ಲಿ ಚಿತ್ರಕಲಾ ಅನುವಾದ ಸಾಹಿತ್ಯವನ್ನು ಈ ಕೆಳಗಿನಂತೆ ವಿಂಗಡಿಸಿ ವಿಶ್ಲೇಷಿಸಬಹುದಾಗಿದೆ.

ಅ. ಪ್ರಾಚೀನ ಸಂಸ್ಕೃತ ಸಾಹಿತ್ಯ ಕೃತಿಗಳ ಅನುವಾದ ಸಾಹಿತ್ಯ.

ಬ. ಇಂಗ್ಲೀಷ್ ಮತ್ತು ಇತರ ಭಾಷೆಗಳ ಸಾಹಿತ್ಯ ಕೃತಿಗಳ ಅನುವಾದ ಸಾಹಿತ್ಯ.

**ಅ. ಪ್ರಾಚೀನ ಸಂಸ್ಕೃತ ಸಾಹಿತ್ಯ ಕೃತಿಗಳ ಅನುವಾದ ಸಾಹಿತ್ಯ :**

ಭಾರತೀಯ ಚಿತ್ರಕಲಾ ಕ್ಷೇತ್ರದಲ್ಲಿ ಮಾತ್ರವಲ್ಲದೆ ಕರ್ನಾಟಕದ ಕಲಾಕ್ಷೇತ್ರದಲ್ಲಿಯೂ ಪ್ರಾಚೀನ ಸಂಸ್ಕೃತ ಸಾಹಿತ್ಯ ಕೃತಿಗಳು ಚಿತ್ರಕಲೆಯ ಬಗೆಗಿನ ಅಮೂಲ್ಯ ಮಾಹಿತಿಯನ್ನು ಒಳಗೊಂಡಿವೆ. ವಿಷ್ಣುಧರ್ಮೋತ್ತರ ಪುರಾಣ, ಸಮರಾಂಗಣ ಸೂತ್ರಧಾರ, ಕಾಮಸೂತ್ರ ಮಾನಸೋಲ್ಲಾಸ, ಶಿವತತ್ವರತ್ನಾಕರ, ಕಾಶ್ಯಪಶಿಲ್ಪಶಾಸ್ತ್ರ, ಶಿಲ್ಪರತ್ನ ಮುಂತಾದ ಗ್ರಂಥಗಳು ಚಿತ್ರಕಲೆಯ ಪ್ರಾಚೀನ ಪರಂಪರೆಯನ್ನು ಬಿಂಬಿಸುವುದರ ಜೊತೆಗೆ ಆ ಕಾಲದ ಚಿತ್ರರಚನಾ ವಿಧಾನ, ಪರಿಕರಗಳು, ಚಿತ್ರಶೈಲಿ, ಭಿತ್ತಿತಯಾರಿಕೆ, ಚಿತ್ರಗಳ ಪ್ರಮಾಣ, ಕಲಾವಿದ, ಕಲಾಕೃತಿ ಮುಂತಾದ ಅಂಶಗಳ ಬಗ್ಗೆ ತಿಳಿಸಿ ಕೊಡುತ್ತವೆ. ಇಂದಿಗೂ ಚಿತ್ರಕಲೆ ಬಗೆಗಿನ ಅಧಿಕೃತ ಮಾಹಿತಿಯು ಈ ಪ್ರಾಚೀನ ಗ್ರಂಥಗಳಿಂದಲೇ ಲಭ್ಯವಾಗುತ್ತಿದೆ. ಈ ಹಿನ್ನೆಲೆಯಲ್ಲಿ ಪ್ರಾಚೀನ ಸಂಸ್ಕೃತ ಸಾಹಿತ್ಯ ಕೃತಿಗಳ ಅನುವಾದದಿಂದ ಮೂಡಿಬಂದ ಚಿತ್ರಕಲಾ ಸಾಹಿತ್ಯವು ಇತರ ಆಕರಗಳಿಗಿಂತ ಮೌಲಿಕವಾದ ವಿಚಾರಗಳನ್ನು ಒಳಗೊಂಡಿದೆ. ಕನ್ನಡಕ್ಕೆ ಕೆಲವು ಪ್ರಾಚೀನ ಕೃತಿಗಳು ಅನುವಾದಗೊಂಡಿದ್ದು ಅವುಗಳನ್ನು ಒಂದೊಂದಾಗಿ ಈ ಕೆಳಗಿನಂತೆ ನೋಡಬಹುದಾಗಿದೆ.

**ವಿಷ್ಣುಧರ್ಮೋತ್ತರ ಪುರಾಣ :**

ಚಿತ್ರಕಲೆಯ ವಿವರಗಳನ್ನೊಳಗೊಂಡ ಮಹತ್ವದ ಗ್ರಂಥ ಇದಾಗಿದೆ. ಕ್ರಿ.ಶ. ನಾಲ್ಕನೆಯ ಶತಮಾನದಲ್ಲಿ ರಚನೆಯಾಗಿರಬಹುದಾದ ಈ ಕೃತಿಯು ವಿಶ್ವಕೋಶ ಮಾದರಿಯಲ್ಲಿದ್ದು, ಹಲವಾರು ಸಂಗತಿಗಳ ಬಗೆಗೆ ಮಾಹಿತಿ ನೀಡುತ್ತದೆ. ಈ ಗ್ರಂಥವು[೧] ಪ್ರಶ್ನೋತ್ತರ ರೂಪದಲ್ಲಿದ್ದು, ವ್ರಜಮಹಾರಾಜ ಕೇಳಿದ ಪ್ರಶ್ನೆಗಳಿಗೆ ಮಾರ್ಕಂಡೇಯ ಮಹಾಮುನಿಯು ಉತ್ತರಿಸುತ್ತಾನೆ. ಈ ಸಾಹಿತ್ಯ ಕೃತಿಯಲ್ಲಿನ ವಿಷಯಗಳನ್ನು ಖಂಡಗಳಾಗಿ ಮತ್ತು ಪ್ರತಿಯೊಂದು ಖಂಡದಲ್ಲಿ ಅಧ್ಯಾಯಗಳಾಗಿ ವಿಂಗಡಿಸಿಕೊಂಡು ವಿವರಿಸಲಾಗಿದೆ. ಶ್ಲೋಕರೂಪದಲ್ಲಿರುವ ಈ ಕೃತಿಯ ಮೂರನೆಯ ಖಂಡವು ಚಿತ್ರಕಲೆಗೆ ಮೀಸಲಾಗಿದೆ. ವ್ರಜಮಹಾರಾಜನು ಮನುಷ್ಯನಿಗೆ ಯಾವುದರಿಂದ ಒಳ್ಳೆಯದಾಗುತ್ತದೆ, ಎಂತಹ ಕರ್ಮಗಳಿಂದ ಈ ಲೋಕ ಮತ್ತು ಪರಲೋಕದಲ್ಲಿ ಮನುಷ್ಯನಿಗೆ ಶ್ರೇಷ್ಠತೆ ದೊರಕಿ ಮೋಕ್ಷ ಪ್ರಾಪ್ತಿಯಾಗುವುದು ಎಂದು ಕೇಳುತ್ತಾನೆ. ಅದಕ್ಕೆ ಮಾರ್ಕಂಡೇಯ ಮುನಿಯು ವಿವರವಾಗಿ ಉತ್ತರ ಕೊಡುತ್ತಾ ಮನುಷ್ಯ

೧. ಸಂಕೀಘಟ್ಟಂ ವೆಂಕಟಾಚಾರ್ಯ : ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣಂ: ಓರಿಯಂಟಲ್ ಲೈಬ್ರರಿ ಪಬ್ಲಿಕೇಷನ್ಸ್ ಮೈಸೂರು-೧೯೫೩.

ಮಾಡತಕ್ಕ ಉತ್ತಮ ಕ್ರಿಯೆಗಳನ್ನು ಕುರಿತು ಹೇಳುತ್ತಾನೆ. ಅವನು ಹೇಳುವ ಅನೇಕ ರೀತಿಯ ಶ್ರೇಷ್ಠ ಕೆಲಸಗಳಲ್ಲಿ ರಾಜನು ಈ ಲೋಕದಲ್ಲಿ ದೇವರಿಗಾಗಿ ದೇವಾಲಯಗಳನ್ನು ಕಟ್ಟಿಸಬೇಕು, ಅವುಗಳನ್ನು ಶಿಲ್ಪ ಚಿತ್ರಗಳಿಂದ ಅಲಂಕರಿಸಬೇಕು ಎಂದು ಹೇಳುತ್ತಾನೆ. ಮುಂದುವರಿದು ಹೇಳುತ್ತಾ ಶ್ರೇಷ್ಠಶಿಲ್ಪಿ ಮತ್ತು ಚಿತ್ರಕಲಾವಿದರಿಂದ ಈ ಕೆಲಸ ಮಾಡಿಸಬೇಕು ಎನ್ನುತ್ತಾನೆ. ಮುಂದಿನ ಹಂತದಲ್ಲಿ ಶ್ರೇಷ್ಠ ಕಲಾವಿದನ ಲಕ್ಷಣಗಳೇನು? ಎಂದು ರಾಜ ಕೇಳಿದಾಗ ಅದಕ್ಕೆ ಮಾರ್ಕಂಡೇಯಮುನಿ ಉತ್ತರ ಕೊಡುತ್ತಾನೆ. ಪ್ರತಿಮಾ ಲಕ್ಷಣ, ತಾಳಮಾನ, ಷಡಂಗಗಳು, ಭಾವೋತ್ಪನ್ನ ಮುಂತಾದ ಹಲವಾರು ಸಂಗತಿಗಳನ್ನು ಶಿಲ್ಪಿ ಮತ್ತು ಚಿತ್ರಕಾರ ತಿಳಿದಿರಬೇಕು. ಮತ್ತು ಆಯಾ ಕಲಾಕೃತಿಗಳ ರಚನೆಯ ಹಿನ್ನೆಲೆಯಲ್ಲಿ ಬಳಕೆಯಾಗುವ ಪರಿಕರಗಳು ಮತ್ತು ಅವುಗಳ ತಯಾರಿಕೆಯ ಬಗ್ಗೆ ಆತ ತಿಳಿದಿರಬೇಕು ಎನ್ನುತ್ತಾನೆ. ಈ ರೀತಿಯಲ್ಲಿ ಚಿತ್ರಕಲೆಯ ಸಂಪೂರ್ಣ ವಿವರಗಳು ಪ್ರಶ್ನೋತ್ತರ ರೂಪದಲ್ಲಿ ಹೇಳಲ್ಪಟ್ಟಿವೆ. ಇಲ್ಲಿ ಉಲ್ಲೇಖಿಸಲ್ಪಟ್ಟ ಚಿತ್ರಕಲೆಯ ವಿವರಗಳನ್ನು ಸ್ಥೂಲವಾಗಿ ಕೆಳಗಿನಂತೆ ಗಮನಿಸಬಹುದು. ಮೊದಲಿಗೆ ಕಲಾವಿದನ ಗುಣಲಕ್ಷಣಗಳಿಂದ ಆರಂಭವಾಗುವ ಮಾಹಿತಿಯು ಕಲೆಯ ಹುಟ್ಟು ಬೆಳವಣಿಗೆಯ ಕುರಿತು ತಿಳಿಸುತ್ತ ಮುಂದುವರೆಯುತ್ತದೆ. ನಾರಾಯಣ ಮುನಿಯ ತಪಸ್ಸು, ಅದನ್ನು ಭಂಗಗೊಳಿಸಲು ಬರುವ ದೇವ ಕನ್ನಿಕೆಯರು, ಅದಕ್ಕೆ ಪ್ರತಿಯಾಗಿ ನಾರಾಯಣ ಮುನಿಯು ಮಾವಿನ ಚಿಗುರಿನ ರಸದಿಂದ ತನ್ನ ತೊಡೆಯ ಮೇಲೆ ಸ್ತ್ರೀ ಚಿತ್ರ ಬರೆದು ಅದಕ್ಕೆ ಜೀವ ತುಂಬುವುದು ಮುಂತಾದ ವಿವರಗಳಿವೆ. ಇದೇ ಚಿತ್ರಕಲೆಯ ಆರಂಭವೆಂದು ಹೇಳಲಾಗಿದೆ.

ಮುಂದಿನ ಹಂತದಲ್ಲಿ ಚಿತ್ರರಚನೆಗಾಗಿ ಭಿತ್ತಿತಯಾರಿಸುವ ವಿಧಾನ, ಅದಕ್ಕೆ ಬೇಕಾಗುವ ಪರಿಕರಗಳ ಬಗ್ಗೆ ಮಾಹಿತಿ ಇದೆ. ಯಾವ ವಸ್ತುಗಳನ್ನು ಎಷ್ಟು ಪ್ರಮಾಣದಲ್ಲಿ ತೆಗೆದುಕೊಳ್ಳಬೇಕು? ಹೇಗೆ ಮಿಶ್ರಣ ಮಾಡಬೇಕು? ಭಿತ್ತಿಯನ್ನು ಸಂಸ್ಕಾರ ಮಾಡುವ ರೀತಿ, ಮೂರು ಹಂತಗಳಲ್ಲಿ ಭಿತ್ತಿಯನ್ನು ತಯಾರಿಸುವ ಕ್ರಮಗಳು ಇಲ್ಲಿ ಹೇಳಿವೆ. ಅದೇ ರೀತಿಯಲ್ಲಿ ಚಿತ್ರರಚನೆಗಾಗಿ ಬೇಕಾಗುವ ಬಣ್ಣ, ಕುಂಚ, ಅಂಟು ಪದಾರ್ಥಗಳ ವಿವರ ಇಲ್ಲಿದೆ. ಬಣ್ಣಗಳಲ್ಲಿ ಖನಿಜ ಮೂಲದ ಬಣ್ಣ, ಸಸ್ಯಮೂಲದ ಬಣ್ಣ, ಪ್ರಾಣಿಮೂಲದ ಬಣ್ಣಗಳಿರುವಂತೆ, ಅಂಟು ದ್ರಾವಣದಲ್ಲಿಯೂ ಪ್ರಾಣಿ ಜನ್ಯ ಮತ್ತು ಸಸ್ಯಜನ್ಯ ಅಂಟು ಚಿತ್ರಕ್ಕೆ ಪ್ರಮುಖ ಎಂಬುದಾಗಿ ಇಲ್ಲಿ ಹೇಳಲಾಗಿದೆ. ವಜ್ರಲೇಪ (ವಜ್ರಸರಿ) ತಯಾರಿಕೆಯ ವಿಧಾನ, ಅದಕ್ಕಾಗಿ ಬಳಸುವ ಪ್ರಾಣಿಗಳು, ಯಾವ ಸಸ್ಯದ ಅಂಟು ಚಿತ್ರಕ್ಕೆ ಶ್ರೇಷ್ಠ ಎನ್ನುವ ಸಂಗತಿ ಇಲ್ಲಿದೆ. ಪ್ರಾಥಮಿಕ ಹಂತದ ಚಿತ್ರರಚನೆಗಾಗಿ ಬಳಸುವ ವರ್ತಿಕಾ ತಯಾರಿಕೆ, ಕುಂಚಗಳನ್ನು ತಯಾರಿಸುವ ವಿಧಾನ, ಕುಂಚದ ಪ್ರಕಾರಗಳು, ಬಣ್ಣ ಮಿಶ್ರಮಾಡಿಕೊಳ್ಳುವ ತಟ್ಟೆಗಳ ಬಗ್ಗೆ ಹೇಳಲಾಗಿದೆ. ಅಂತೆಯೆ ಪ್ರತಿಮಾ ಲಕ್ಷಣಗಳಲ್ಲಿ ಪ್ರತಿಯೊಂದು ಚಿತ್ರಕ್ಕೆ ಪ್ರತ್ಯೇಕವಾದ ಅಳತೆ, ಪ್ರಮಾಣಗಳನ್ನು ಸೂಚಿಸಲಾಗಿದೆ. ದೇವತೆಗಳ ಚಿತ್ರದ ಪ್ರಮಾಣ, ತ್ರಿಮೂರ್ತಿಗಳ ಪ್ರಮಾಣ, ಸ್ತ್ರೀ ಮತ್ತು ಪುರುಷ ಚಿತ್ರಗಳ ಅಳತೆ, ಪ್ರಾಣಿ-ಪಕ್ಷಿಗಳ ಅಳತೆ ಹೀಗೆ ಪ್ರತಿಯೊಂದರ ಅಳತೆ, ಲಕ್ಷಣಗಳನ್ನು ಕಲಾವಿದ ಅರಿತುಕೊಂಡು ಚಿತ್ರಿಸಬೇಕು ಎನ್ನಲಾಗಿದೆ. ವ್ಯಕ್ತಿ ಚಿತ್ರರಚನೆಯಲ್ಲಿ ಮುಖ, ಕಣ್ಣು, ಮೂಗು, ಕಿವಿ, ಕೈಕಾಲುಗಳು ಹೀಗೆ ದೇಹದ ವಿವಿಧ ಭಾಗಗಳು ಯಾವ ಪ್ರಮಾಣದಲ್ಲಿ ಇರಬೇಕು ಎನ್ನುವ ವಿವರಗಳಿವೆ. ಭಿತ್ತಿ ಚಿತ್ರರಚನೆಯಲ್ಲಿ ಭಿತ್ತಿ ಹಸಿ ಇರುವಾಗ ಚಿತ್ರ ಬರೆಯುವ ವಿಧಾನ, ಭಿತ್ತಿ ಒಣಗಿದ ಮೇಲೆ ಚಿತ್ರರಚಿಸುವ ವಿಧಾನಗಳನ್ನು ಹೇಳಿದಂತೆ, ಚಿತ್ರರಚನೆಯ ಪ್ರಮುಖ ಆರು ಹಂತಗಳನ್ನು ಇಲ್ಲಿ ಕೊಡಲಾಗಿದೆ.

ರೇಖಾಕರ್ಮ, ಲೇಖ್ಯಕರ್ಮ, ವರ್ಣಕರ್ಮ, ವರ್ತನಕರ್ಮ, ಲೇಖನಕರ್ಮ, ದ್ವಿಕಕರ್ಮಗಳೆಂಬ ಹಂತಗಳಲ್ಲಿ ಕಲಾವಿದನು ಅನುಸರಿಸುವ ರೀತಿಗಳನ್ನು ಸೂಚಿಸಲಾಗಿದೆ. ಚಿತ್ರಗಳನ್ನು ಯಾವ ಭಂಗಿಯಲ್ಲಿ ರಚಿಸಬೇಕು, ವಿಷಯಕ್ಕೆ ಅನುಸಾರವಾಗಿ ಹೇಗೆ ಸಂಯೋಜನೆಗೊಳಿಸಬೇಕು, ಒಳ್ಳೆಯ ಚಿತ್ರ, ಕೆಟ್ಟ ಚಿತ್ರಗಳ ಸ್ವರೂಪ, ಚಿತ್ರಪ್ರದರ್ಶನಾಲಯಗಳು, ಚಿತ್ರಗಳ ಸಂರಕ್ಷಣೆಯ ವಿಧಾನ, ಕಲೆಯ ಸ್ವರೂಪ ಮುಂತಾದ ಅನೇಕ ಅಂಶಗಳು ವಿಷ್ಣುಧರ್ಮೋತ್ತರ ಪುರಾಣ ಗ್ರಂಥದಲ್ಲಿ ಹೇಳಲ್ಪಟ್ಟಿವೆ. ಚಿತ್ರಕಲೆಯ ದೃಷ್ಟಿಯಿಂದ ಗಮನಾರ್ಹ ಮಾಹಿತಿಯನ್ನು ಇದು ಒಳಗೊಂಡಿದೆ. ಚಿತ್ರಕಲೆಯ ಬಗೆಗೆ ಯಾವುದೇ ಪ್ರಾಚೀನ ಕೃತಿಗಳಿಗಿಂತ ಹೆಚ್ಚಿನ ಮಾಹಿತಿಯನ್ನು ಇದು ಒಳಗೊಂಡಿದ್ದು, ಚಿತ್ರಕಲೆಯ ಪ್ರಾತಿನಿಧಿಕ ಕೃತಿ ಎಂಬುದಾಗಿ ಇದನ್ನು ಪರಿಗಣಿಸಲಾಗುತ್ತಿದೆ.

**ಕಾಮಸೂತ್ರ :**

ಪ್ರಾಚೀನ ಭಾರತದಲ್ಲಿ ಕ್ರಿ.ಶ. ೪ನೇ ಶತಮಾನದ ಸುಮಾರಿಗೆ ವಾತ್ಸಾಯನ ಮುನಿಯಿಂದ ರಚಿತವಾದ ಕಾಮಸೂತ್ರ ಗ್ರಂಥವು ಭಾರತೀಯ ಸಾಹಿತ್ಯ ಚರಿತ್ರೆಯಲ್ಲಿ ತನ್ನದೇ ಆದ ವಿಶಿಷ್ಟತೆಯಿಂದಾಗಿ ಪ್ರಮುಖವಾಗಿದೆ. ಇದರಲ್ಲಿ ಬರುವ ಕೆಲವು ಚಿತ್ರಕಲಾ ವಿಷಯಗಳಿಂದಾಗಿ ಚಿತ್ರಕಲಾ ಸಾಹಿತ್ಯ ಕ್ಷೇತ್ರದಲ್ಲೂ ಇದು ಗಮನಾರ್ಹವೆನಿಸಿದ ಕೃತಿಯಾಗಿದೆ. ವಾತ್ಸಾಯನ ಕಾಮಸೂತ್ರದ ಮೂಲ ಸಂಸ್ಕೃತ ಗ್ರಂಥವನ್ನು ಮತ್ತು ಅದಕ್ಕೆ ಯಶೋಧರ ಪಂಡಿತನು ಬರೆದ ಜಯಮಂಗಲ ಎಂಬ ಟೀಕೆಯನ್ನು ಬನಾರಸದ ಚೌಕಾಂಬಾ ಸಂಸ್ಕೃತ ಗ್ರಂಥಾಲಯದವರು ೧೯೨೦ ಕ್ಕಿಂತ ಮೊದಲೆ ಪ್ರಕಟಿಸಿದ್ದಾರೆ. ನಂತರದಲ್ಲಿ ೧೯೨೫ರ ಸುಮಾರಿಗೆ ಡಾ.ಗ್ಯಾಂಬರ್ಸ ಎಂಬುವ ಪಾಶ್ಚಾತ್ಯ ವಿದ್ವಾಂಸರು ಈ ಕಾಮಸೂತ್ರ ಗ್ರಂಥದ ಇಂಗ್ಲೀಷ ಅನುವಾದವನ್ನು ಮಾಡಿದರು. ಆಮೇಲೆ ಭಾರತದ ಬೇರೆ ಬೇರೆ ಭಾಷೆಗಳಲ್ಲಿ ಇದು ಪ್ರಕಟವಾಗಿದೆ. ಕನ್ನಡದಲ್ಲಿ ಈ ಕೃತಿಯನ್ನು ಕ್ರಿ.ಶ. ೧೯೪೪ ರಲ್ಲಿ ವೆಂಕಟ ಜಿ.ಭಸ್ಮೆ ಪ್ರಕಟಿಸಿದರು.[೨]

ಈ ಕೃತಿಯು ಕಾಮಕಲೆಯ ಕುರಿತಾಗಿದ್ದು ಪ್ರಾಸಂಗಿಕವಾಗಿ ಮಾತ್ರ ಚಿತ್ರಕಲೆಯ ವಿಷಯ ಹೇಳಲಾಗಿದೆ. ಇದರಲ್ಲಿ ಏಳು ಅಧಿಕರಣ (ಭಾಗ) ಗಳಿದ್ದು ಪ್ರತಿಯೊಂದು ಅಧಿಕರಣದಲ್ಲೂ ವಿವಿಧ ಅಧ್ಯಾಯಗಳಿವೆ. ಒಂದನೆಯ ಅಧಿಕರಣವು 'ಸಾಧಾರಣ ಅಧಿಕರಣ'ವಾಗಿದ್ದು ಇದರಲ್ಲಿ ಐದು ಅಧ್ಯಾಯಗಳಿವೆ. ಎರಡನೆಯ ಅಧಿಕರಣವು 'ಸಾಂಪ್ರಯೋಗಿಕ ಅಧಿಕರಣ' ಎನ್ನುವುದಾಗಿದ್ದು ಇದರಲ್ಲಿ ಹತ್ತು ಅಧ್ಯಾಯಗಳಿವೆ. ಹಾಗೆಯೆ 'ಕನ್ಯಾ.ಸಾಂಪ್ರಯುಕ್ತಕ ಅಧಿಕರಣ'ಎಂಬ ಮೂರನೆಯ ಅಧಿಕರಣದಲ್ಲಿ ಐದು ಅಧ್ಯಾಯಗಳು, 'ಭಾರ್ಯಾಧಿಕಾರಿಕಾ ಅಧಿಕರಣ' ಎಂಬ ನಾಲ್ಕನೆಯ ಅಧಿಕರಣದಲ್ಲಿ ಏಳು ಅಧ್ಯಾಯಗಳಿವೆ. 'ಪಾರದಾರಿಕಾ' ಎಂಬ ಐದನೆಯ ಅಧಿಕರಣದಲ್ಲಿ ಹತ್ತು ಅಧ್ಯಾಯಗಳು ಮತ್ತು 'ವೈಶಿಕ ಅಧಿಕರಣ' ಎನ್ನುವ ಆರನೆಯ ಅಧಿಕರಣದಲ್ಲಿ ಏಳು ಅಧ್ಯಾಯಗಳಿವೆ. ಕೊನೆಯದಾದ 'ಔಪನಿಷಧಿಕ ಅಧಿಕರಣ' ಎಂಬ ಏಳನೆಯ ಅಧಿಕರಣದಲ್ಲಿ ಒಂಭತ್ತು ಅಧ್ಯಾಯಗಳಿವೆ. ಹೀಗೆ ವಿಷಯವು ಹರಡಿಕೊಂಡಿದ್ದು ಮತ್ತೆ ಪ್ರತಿ ಅಧ್ಯಾಯದಲ್ಲೂ ಶೀರ್ಷಿಕೆ, ಉಪಶೀರ್ಷಿಕೆಗಳನ್ನು ಮಾಡಿಕೊಂಡು ವಿಷಯಗಳನ್ನು ವಿವರಿಸಲಾಗಿದೆ. ಶ್ಲೋಕ ರೂಪದಲ್ಲಿರುವ ಮೂಲಗ್ರಂಥಕ್ಕೆ ಇಲ್ಲಿ ಕನ್ನಡ ಅನುವಾದವನ್ನು ಕೊಡಲಾಗಿದೆ.

---

೨. ವೆಂಕಟ.ಜಿ.ಭಸ್ಮೆ : ಕಾಮಸೂತ್ರ : ಸಮಾಜ ಪುಸ್ತಕಾಲಯ, ಧಾರವಾಡ (ಹನ್ನೊಂದನೆಯ ಆವೃತ್ತಿ)–೧೯೯೩

ಕಾಮಸೂತ್ರ ಗ್ರಂಥದಲ್ಲಿ ಬರುವ ಚಿತ್ರಕಲೆಯ ವಿಷಯವು ಸಾಂದರ್ಭಿಕವಾಗಿದ್ದು, ಪರೋಕ್ಷವಾಗಿ ಚಿತ್ರಕಲೆಯ ಕುರಿತು ಹೇಳುತ್ತದೆ. ಸ್ತ್ರೀಯು ಪುರುಷನನ್ನು ಒಲಿಸಿಕೊಳ್ಳಲು ಸಕಲ ಕಲೆಗಳಲ್ಲಿ ಪ್ರವೀಣೆಯಾಗಿರಬೇಕು ಎಂದು ಹೇಳುತ್ತ ಅದರಲ್ಲಿ ಚಿತ್ರಕಲೆಯ ವಿಷಯವನ್ನು ಸೇರಿಸಿದೆ. ಚಿತ್ರಕಲಾ ಪ್ರವೀಣೆಯಾದ ಸ್ತ್ರೀ ಷಡಂಗಗಳಿಂದ ಕೂಡಿದ ಚಿತ್ರವನ್ನು ರಚನೆ ಮಾಡಿ ನಾಯಕನ ಮನಸ್ಸನ್ನು ಆಕರ್ಷಿಸಬೇಕು ಎನ್ನುವ ಸಂಗತಿ ಇಲ್ಲಿ ಹೇಳಲಾಗಿದೆ. ಹಾಗೆಯೆ ರಾಣಿಯ ಅಂತಪುರ ಹೇಗಿರಬೇಕು, ವೇಶ್ಯೆಯರ ಶಯನ ಗೃಹಗಳಲ್ಲಿ ಯಾವ ಚಿತ್ರಗಳಿರಬೇಕು ಎನ್ನುವ ಸಂಗತಿ ಇಲ್ಲಿ ಚರ್ಚಿಸಲಾಗಿದೆ. ಈ ಸ್ಥಳಗಳಲ್ಲಿ ಮನಸ್ಸನ್ನು ಆಕರ್ಷಿಸುವ ಮತ್ತು ಮನಸ್ಸು ಉದ್ದೀಪನಗೊಳಿಸುವ ಚಿತ್ರಗಳಿರಬೇಕು. ಮತ್ತು ವಿವಿಧ ರೀತಿಯ ಸುರತ ಕ್ರೀಡೆಯ ಆಸನಗಳ ಚಿತ್ರಗಳನ್ನು ಅಲ್ಲಿ ರಚಿಸಿರಬೇಕು ಎಂಬುದಾಗಿ ಹೇಳಿದೆ. ಚಿತ್ರಗಳ ವಿವರ ಹೇಳುವಾಗ ಸ್ಥೂಲವಾಗಿ ಅವುಗಳ ವರ್ಣವಿನ್ಯಾಸ, ರೇಖಾ ಸಂಯೋಜನೆಗಳ ಬಗ್ಗೆಯೂ ವಿವರಗಳು ಕಂಡುಬರುತ್ತವೆ.

**ಮಾನಸೋಲ್ಲಾಸ :**

ಕಲ್ಯಾಣದ ಚಾಲುಕ್ಯ ಚಕ್ರವರ್ತಿ ಸೋಮೇಶ್ವರನಿಂದ ಕ್ರಿ.ಶ. ೧೧೨೯ ಸುಮಾರಿಗೆ ರಚನೆಯಾದ ಈ ಗ್ರಂಥವನ್ನು ಎಂ.ಎಂ.ಕಲಬುರ್ಗಿಯವರು ಸಂಪಾದನೆ ಮಾಡಿದ್ದಾರೆ.[೩] ಇವರಿಗಿಂತ ಮೊದಲೆ ಎರಡು ಬಾರಿ ಈ ಗ್ರಂಥವನ್ನು ಪ್ರಕಟಿಸಲಾಗಿದೆ. ಬರೋಡಾದ ಗಾಯಕ್ವಾಡ ಸಂಶೋಧನಾ ಸಂಸ್ಥೆಯಿಂದ ಶ್ರೀ.ಗಜಾನನ ಗೊಂಡೇಕರ ಎಂಬುವರು ಇಡಿಯಾಗಿ ಮತ್ತು ಮೈಸೂರಿನ ಓರಿಯಂಟಲ್ ರಿಸರ್ಚ ಇನ್‌ಸ್ಟಿಟ್ಯೂಟದ ಮೂಲಕ ರಾಮಾಶಾಸ್ತ್ರಿಯವರು ಭಾಗಶಃ ಪ್ರಕಟ ಮಾಡಿದ್ದಾರೆ. ಇದಲ್ಲದೆ ಡಾ.ಶಿವಶಂಕರ್ ಮಿಶ್ರಾ ಎಂಬುವರು  ಇದನ್ನು ಸಮಗ್ರವಾಗಿ ಅಧ್ಯಯನ ಮಾಡಿ ಇಂಗ್ಲೀಷನಲ್ಲಿ 'ಪುರಾತನ ಭಾರತದ ಲಲಿತಕಲೆಗಳು ಮತ್ತು ತಾಂತ್ರಿಕ ವಿಜ್ಞಾನ' ಎಂಬ ಕೃತಿ ರಚನೆ ಮಾಡಿದ್ದಾರೆ. ಹೀಗೆ ಅನೇಕರು ಇದರ ಕುರಿತು ಬರವಣಿಗೆ ಮಾಡಿದ್ದಾರೆ.

ಮಾನಸೋಲ್ಲಾಸ ಕೃತಿಯು ಒಂದು ವಿಶ್ವಕೋಶ ಮಾದರಿಯ ರಚನೆಯಾಗಿದ್ದರೂ ಚಿತ್ರಕಲೆಯ ದೃಷ್ಟಿಯಿಂದ ಮಹತ್ವ ಪೂರ್ಣವಾದ ಮಾಹಿತಿ ನೀಡುತ್ತದೆ. ಇದು ಐದು ವಿಶಂತಿಗಳಾಗಿ ವಿಭಾಗಿಸಲ್ಪಟ್ಟಿದ್ದು ಪ್ರತಿಯೊಂದು ವಿಶಂತಿಯಲ್ಲಿ ಇಪ್ಪತ್ತು ಅಧ್ಯಾಯಗಳಿವೆ. ಅಂದರೆ ಐದು ವಿಶಂತಿ, ನೂರು ಅಧ್ಯಾಯಗಳಲ್ಲಿ ವಿಷಯ ಹರಡಿಕೊಂಡಿದೆ. ಮತ್ತೆ ಒಂದೊಂದು ಅಧ್ಯಾಯದಲ್ಲಿಯೂ ಒಳವಿಭಾಗ ಉಪಶೀರ್ಷಿಕೆಗಳನ್ನು ಮಾಡಿಕೊಂಡು ವಿಷಯ ಮಂಡಿಸಲಾಗಿದೆ. ಈ ಮೂಲ ಕೃತಿಯು ಶ್ಲೋಕ ರೂಪದಲ್ಲಿದ್ದು ಎಲ್ಲಾ ಅಧ್ಯಾಯ ಸೇರಿ ಒಟ್ಟು ೮,೦೦೦ (ಎಂಟು ಸಾವಿರ) ಶ್ಲೋಕಗಳಿವೆ. ಪ್ರಥಮ ವಿಶಂತಿಯಲ್ಲಿ ೩೦೮ ಶ್ಲೋಕ, ದ್ವಿತೀಯ ವಿಶಂತಿಯಲ್ಲಿ ೧೩೦೦ ಶ್ಲೋಕ, ತೃತೀಯ ವಿಶಂತಿಯಲ್ಲಿ ೧೮೨೦ ಶ್ಲೋಕ, ಚತುರ್ಥ ವಿಶಂತಿಯುಲ್ಲಿ ಒಟ್ಟು ೩೨೯೧ ಮತ್ತು ಪಂಚಮ ವಿಶಂತಿಯುಲ್ಲಿ ೧೩೭೫ ಶ್ಲೋಕಗಳಿವೆ.ಪ್ರತಿಯೊಂದು ವಿಶಂತಿಯಲ್ಲಿ ಅಡಕಗೊಂಡಿರುವ ವಿಷಯಗಳ ಸಂಕ್ಷಿಪ್ತ ನೋಟ ಹೀಗಿದೆ. ಒಂದನೆ ವಿಶಂತಿಯಲ್ಲಿ ಅಸತ್ಯವರ್ಜನಾಧ್ಯಾಯ, ಪರದ್ರೋಹ ವರ್ಜನಾಧ್ಯಾಯ, ಆಗಮ್ಯ ವರ್ಜನಾಧ್ಯಾಯ, ಅಭಕ್ಷ ವರ್ಜನಾಧ್ಯಾಯ, ಹೀಗೆ ೨೦ ಅಧ್ಯಾಯಗಳಿವೆ. ಎರಡನೆಯ ವಿಶಂತಿಯಲ್ಲಿ ಸ್ವಾಮ್ಯಧ್ಯಾಯ, ಅಮಾತ್ಯಾಧ್ಯಾಯ, ರಾಷ್ಟ್ರಾಧ್ಯಾಯ, ಕೋಶಾಧ್ಯಾಯ, ದುರ್ಗಾಧ್ಯಾಯ, ವಿಗ್ರಹಾಧ್ಯಾಯ, ದಂಡಾಧ್ಯಾಯ ಹೀಗೆ ೨೦ ಅಧ್ಯಾಯಗಳಿವೆ.

---

೩. ಎಂ.ಎಂ.ಕಲಬುರ್ಗಿ : ಮಾನಸೋಲ್ಲಾಸ :  ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ –೧೯೯೮

ಮೂರನೆ ವಿಶಂತಿಯಲ್ಲಿ ಗೃಹೋಪಭೋಗ, ಸ್ನಾನಭೋಗ, ಆಸಯೋಪಭೋಗ, ಸ್ತ್ರೀಭೋಗ, ಪುತ್ರಭೋಗ, ಹೀಗೆ ೨೦ ಅಧ್ಯಾಯಗಳಿವೆ. ನಾಲ್ಕನೆಯ ವಿಶಂತಿಯಲ್ಲಿ ಶಸ್ತ್ರವಿನೋದ, ಶಾಸ್ತ್ರವಿನೋದ, ಮಲ್ಲವಿನೋದ, ಮತ್ಸ್ಯವಿನೋದ ಮುಂತಾಗಿ ೨೦ ಅಧ್ಯಾಯಗಳಿವೆ. ಅದೇ ರೀತಿಯಲ್ಲಿ ಪಂಚಮ ವಿಶಂತಿಯಲ್ಲಿ ವಿವಿಧ ಬಗೆಯ ಕ್ರೀಡಾಕಥನಗಳು, ಭೂದರಕ್ರೀಡೆ, ಸೇಚನಕ್ರೀಡೆ, ಜಲಕ್ರೀಡೆ, ಸಸ್ಯಕ್ರೀಡೆ, ಸುರತಕ್ರೀಡೆ ಮುಂತಾದ ೨೦ ಅಧ್ಯಾಯಗಳಲ್ಲಿ ವಿಷಯ ಹರಡಿಕೊಂಡಿದೆ.

ಈ ಗ್ರಂಥದಲ್ಲಿ ಚಿತ್ರಕಲೆಯ ವಿಷಯವು ಮೂರನೆಯ ವಿಶಂತಿಯಲ್ಲಿ ಬಂದಿದ್ದು ೧೨೫ನೇ ಶ್ಲೋಕದಿಂದ ಪ್ರಾರಂಭಿಸಿ ೯೧೦ನೇ ಶ್ಲೋಕದವರೆಗೆ ವಿಸ್ತರಿಸಿದೆ. ಈ ಗ್ರಂಥದಲ್ಲಿ ಬರುವ ಚಿತ್ರಕಲೆಯ ಬಗೆಗಿನ ವಿವರಗಳಲ್ಲಿ ಹಲವಾರು ಸಂಗತಿಗಳನ್ನು ಹೇಳಲ್ಪಟ್ಟಿದೆ. ಭಿತ್ತಿ ತಯಾರಿಸುವ ವಿಧಾನ, ಭಿತ್ತಿಯ ಪರಿಕರಗಳು, ಚಿತ್ರಕಾರರ ಸ್ವರೂಪ, ಚಿತ್ರರಚನಾ ಕ್ರಮಗಳು, ಚಿತ್ರರಚನೆಯ ಮಾಧ್ಯಮಗಳು, ಬಣ್ಣಗಳು, ಅವುಗಳ ತಯಾರಿಕಾ ವಿಧಾನ, ಮಿಶ್ರ ಬಣ್ಣಗಳು, ಅಂಟುದ್ರಾವಕಗಳು, ತಯಾರಿಕಾ ಕ್ರಮ, ಕುಂಚಗಳ ತಯಾರಿಕೆ, ಅವುಗಳ ಪ್ರಕಾರಗಳು, ಒಳ್ಳೆಯ ಚಿತ್ರ, ಚಿತ್ರದ ದೋಷಗಳು, ಚಿತ್ರಕ್ಕೆ ನೆರಳು ಬೆಳಕು ರಚಿಸುವ ವಿಧಾನಗಳು ಹೀಗೆ ಹತ್ತು ಹಲವು ವಿವರಗಳು ಇಲ್ಲಿ ವ್ಯಕ್ತಗೊಂಡಿವೆ. ಪ್ರಾಚೀನ ಗ್ರಂಥಗಳಲ್ಲಿ ಚಿತ್ರಕಲೆಯ ವಿವರಗಳನ್ನು ಹೊಂದಿದ ಮಹತ್ವದ ಗ್ರಂಥಗಳಲ್ಲಿ ಇದೂ ಒಂದಾಗಿದೆ. ಚಿತ್ರಕಲಾ ಸಾಹಿತ್ಯ ಕ್ಷೇತ್ರಕ್ಕೆ ಇದೊಂದು ಬಹುಮೂಲ್ಯ ಕೊಡುಗೆ ಎಂದರೂ ತಪ್ಪಿಲ್ಲ.

**ಶ್ರೀ ತತ್ವನಿಧಿ :**

ಮೈಸೂರು ದೊರೆಗಳು ಆಡಳಿತದಲ್ಲಿ ಶ್ರೇಷ್ಠರಾಗಿದ್ದಂತೆ ಸಾಹಿತ್ಯ ಕಲೆಗಳಿಗೂ ಅಪಾರವಾಗಿ ಪ್ರೋತ್ಸಾಹ ನೀಡುತ್ತಿದ್ದುದು ತಿಳಿದು ಬರುತ್ತದೆ. ಕೆಲವು ದೊರೆಗಳು ಸ್ವತಹಃ ಸಾಹಿತ್ಯ ರಚನೆಯನ್ನು ಮಾಡಿದ್ದು, ಅದರಲ್ಲಿ ಕೆಲವು ಸಾಹಿತ್ಯ ಕೃತಿಗಳು ಚಿತ್ರಕಲೆಯ ಅಂಶಗಳನ್ನು ಒಳಗೊಂಡಿವೆ. ಕೃಷ್ಣರಾಜ ಒಡೆಯರ್ ಬರೆದ ಶ್ರೀತತ್ವನಿಧಿಯು ಸಂಗೀತ ಮತ್ತು ಚಿತ್ರಕಲೆಯ ದೃಷ್ಟಿಯಿಂದ ಮಹತ್ವ ಪಡೆದುಕೊಂಡಿದೆ. ಇದನ್ನು ಸಾ.ಕೃ.ರಾಮಚಂದ್ರರಾವ್ ಸಂಪಾದನೆ ಮಾಡಿದ್ದಾರೆ.[೪] ಮೈಸೂರು ಚಿತ್ರಕಲೆಯ ಬಗೆಗೆ ಸ್ಥೂಲ ಇತಿಹಾಸ ಮತ್ತು ಮಾಹಿತಿಗಳನ್ನು ನೀಡಿದ್ದಾರೆ. ಇದರಲ್ಲಿ ಪೂರಕವಾಗಿ ಕೊಡಲಾಗಿರುವ ಮೈಸೂರು ಚಿತ್ರಕಲೆಯ ಬಗೆಗಿನ ಮಾಹಿತಿಗಳಲ್ಲಿ ಅನೇಕ ಅಂಶಗಳು ವ್ಯಕ್ತಗೊಂಡಿವೆ. ಮೈಸೂರು ಚಿತ್ರಕಲೆಯ ಬಗೆಗಿನ ಮೂಲ, ವಿಜಯನಗರದಿಂದ ವಲಸೆ ಬಂದು ಇಲ್ಲಿ ನೆಲೆನಂತ ಕಲಾವಿದರ ಹಿನ್ನೆಲೆ ಕೊಡಲಾಗಿದೆ. ಇದಲ್ಲದೆ ಪ್ರತ್ಯೇಕವಾಗಿರುವ ಕಲಾಶೈಲಿ ರೂಪುಗೊಂಡ ರೀತಿ, ಮೈಸೂರು ಪ್ರಾಂತ್ಯದ ಈ ಚಿತ್ರಶೈಲಿಯ ಲಕ್ಷಣಗಳು, ಪ್ರಭಾವ ಪ್ರೇರಣೆಗಳನ್ನು ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಅದರಂತೆ ಮೈಸೂರು ಚಿತ್ರಶೈಲಿಯ ಕಲಾವಿದರು, ಚಿತ್ರರಚನಾ ವಿಧಾನಗಳು, ಪರಿಕರಗಳು, ಕಲಾವಿದರ ಸಂಭಾವನೆ, ಸ್ಥಿತಿಗತಿ ಇತ್ಯಾದಿ ಅಂಶಗಳು ಇಲ್ಲಿವೆ.

ಭಾರತದಲ್ಲಿ ಕಿರುರೂಪ ಚಿತ್ರಶೈಲಿ ಬೆಳೆದುಬಂದ ಸ್ಥೂಲನೋಟ, ಮೊಗಲ್, ರಜಪೂತ ಕಲಾಶೈಲಿಗಳು, ನಾಯಕ-ನಾಯಕಿಯರ ಚಿತ್ರಗಳು, ವಿಶೇಷವಾಗಿ ರಾಗಮಾಲಾ ಚಿತ್ರಗಳ ಬಗ್ಗೆ ಮಾಹಿತಿ ಈ ಕೃತಿಯಲ್ಲಿದೆ. ಕರ್ನಾಟಕದಲ್ಲಿ ರಾಗಮಾಲಾ ಚಿತ್ರಗಳ ಹಿನ್ನೆಲೆ, ಮೈಸೂರು ಕಲಾವಿದರು ಈ ಪ್ರಕಾರದ ಚಿತ್ರಗಳನ್ನು ರಚಿಸುತ್ತಿದ್ದ ಕ್ರಮ, ರಾಗಮಾಲಾ ಚಿತ್ರಗಳು ಉಂಟುಮಾಡುವ ಪರಿಣಾಮಗಳ ಬಗೆಗೆ ವಿವರಿಸಲಾಗಿದೆ. ಇದರ ಜೊತೆಗೆ ರಜಪೂತ ಮತ್ತು ಮೈಸೂರು ಶೈಲಿಯ ರಾಗಮಾಲಾ ಚಿತ್ರಗಳ ತೌಲನಿಕ ನೋಟವನ್ನು ಸ್ಥೂಲವಾಗಿ ಕೊಡಲಾಗಿದೆ.

೪. ಸಾ.ಕೃ.ರಾಮಚಂದ್ರರಾವ್ : ಶ್ರೀತತ್ವನಿಧಿ : (ಸಂ) : ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ-೧೯೯೮

ಶ್ರೀತತ್ವನಿಧಿಯಲ್ಲಿರುವ ಚಿತ್ರಗಳ ಬಗೆಗೆ ಹೇಳುವುದಾದರೆ, ಇಲ್ಲಿನ ಚಿತ್ರಗಳು ರಾಗಮಾಲಾ ಚಿತ್ರಗಳಾಗಿದ್ದು, ಸಂಗೀತದ ರಾಗಗಳಿಗೆ ಅನುಸಾರವಾಗಿ ರಚನೆ ಮಾಡಲಾಗಿದೆ. ಸಂಗೀತದ ರಾಗಗಳನ್ನು ಕೇಳಿದಾಗ ಕೇಳುಗನ ಮೇಲೆ ಆ ರಾಗವು ಉಂಟು ಮಾಡುವ ಪರಿಣಾಮವನ್ನು ಆ ರಾಗವನ್ನು ಆಧರಿಸಿ ರಚಿಸಿದ ಚಿತ್ರವನ್ನು ನೋಡಿದಾಗಲೂ ಅದೇ ರೀತಿಯ ಪರಿಣಾಮ ಬೀರಬೇಕು ಎನ್ನುವುದು ಇಲ್ಲಿನ ಆಶಯವಾಗಿದೆ. ಈ ಸಚಿತ್ರ ಗ್ರಂಥದಲ್ಲಿ ಒಂದೊಂದು ರಾಗಕ್ಕೆ ಸಂಬಂಧಿಸಿದಂತೆ ಪ್ರತ್ಯೇಕವಾದ ಚಿತ್ರಕೃತಿಗಳನ್ನು ರಚಿಸಲಾಗಿದೆ. ಗಾಂಧಾರ ಸ್ವರ ಲಕ್ಷಣ, ಮಾಧ್ಯಮಸ್ವರ ಲಕ್ಷಣ, ಪಂಚಮಸ್ವರ ಲಕ್ಷಣ, ದೈವಸ್ವರ ಲಕ್ಷಣ, ಮಾಧ್ಯಮಾವಧಿರಾಗ, ಬಂಗಾಳಿ ರಾಗ, ಸೈಂಧವರಾಗ, ತೋಡಿರಾಗ, ಹಿಂದೋಳ ರಾಗ, ಲಲಿತರಾಗ, ದೇಶಕಾರಿರಾಗ ಸ್ವರೂಪ, ಹೀಗೆ ಹಲವು ರಾಗ ಮತ್ತು ರಾಗ ಲಕ್ಷಣಗಳಿಗೆ ಸಂಬಂಧಿಸಿದಂತೆ ಚಿತ್ರಗಳನ್ನು ರಚನೆ ಮಾಡಲಾಗಿದೆ. ಇಲ್ಲಿನ ಚಿತ್ರಗಳ ರೇಖಾಲಾಲಿತ್ಯ, ವರ್ಣವಿನ್ಯಾಸ ಸಂಯೋಜನೆಗಳು ಆಕರ್ಷಕವಾಗಿದ್ದು ಚಿತ್ರಕಲೆಯ ದೃಷ್ಟಿಯಿಂದ ಬಹುಮುಖ್ಯವಾಗಿವೆ. ಚಲನಶೀಲವಾದ ರೇಖೆಗಳು, ಚಿತ್ರಗಳಲ್ಲಿ ನರೂಪಿತಗೊಂಡ ನಕ್ಷೆಯ ಮಾದರಿಗಳು, ಭಾವನಾತ್ಮಕ ಅಭಿವ್ಯಕ್ತಿಗಳು, ಹಿನ್ನೆಲೆಯ ನಿಸರ್ಗ ಚಿತ್ರಣ ಮತ್ತು ವಾಸ್ತುವಿನ್ಯಾಸದ ಮಾದರಿಗಳು ಈ ಶೈಲಿಯ ಚಿತ್ರಕಾರರ ಸಾಮರ್ಥ್ಯವನ್ನು ಬಿಂಬಿಸುತ್ತವೆ. ಒಟ್ಟಾರೆಯಾಗಿ ಈ ಗ್ರಂಥವು ಚಿತ್ರಕಲಾ ಸಾಹಿತ್ಯ ಕ್ಷೇತ್ರಕ್ಕೆ ಮಾತ್ರವಲ್ಲದೆ ರಚನಾ ವಿಧಾನಗಳನ್ನು ಒಳಗೊಂಡ ತಂತ್ರಗಾರಿಕೆಯ ಬಗೆಗೂ ಉಪಯುಕ್ತ ಮಾಹಿತಿ ನೀಡುತ್ತದೆ.

**ಕಾಶ್ಯಪ ಶಿಲ್ಪ ಶಾಸ್ತ್ರಂ :**

ಭಾರತೀಯ ಪ್ರಾಚೀನ ಸಾಹಿತ್ಯ ಕ್ಷೇತ್ರದಲ್ಲಿ ಶಿಲ್ಪ ಶಾಸ್ತ್ರಗಳು ವಿಶಿಷ್ಟವಾದ ಸ್ಥಾನ ಪಡೆದುಕೊಂಡಿವೆ. ಕೆಲವು ಶಿಲ್ಪಶಾಸ್ತ್ರಗಳು ಶಿಲ್ಪ ವಿದ್ಯೆಯ ಜೊತೆಗೆ ಚಿತ್ರವಿದ್ಯೆಯನ್ನು ಕುರಿತಾಗಿ ಮಾಹಿತಿ ನೀಡುತ್ತವೆ. ಇವುಗಳಲ್ಲಿ ಪ್ರಸ್ತುತ 'ಕಾಶ್ಯಪ ಶಿಲ್ಪಶಾಸ್ತ್ರ' ಗ್ರಂಥವನ್ನು ಕನ್ನಡದಲ್ಲಿ ಜಿ.ಜ್ಞಾನಾನಂದ ಸಂಪಾದನೆ ಮಾಡಿದ್ದಾರೆ.[೫]ಕಾಶ್ಯಪ ಶಿಲ್ಪಶಾಸ್ತ್ರವು ಯಾವಾಗ ರಚನೆಯಾಗಿದೆ ಎಂಬುದರ ಬಗ್ಗೆ ವಾದ ವಿವಾದಗಳಿವೆಯಾದರೂ ಹೆಚ್ಚಿನ ವಿದ್ವಾಂಸರು ಇದು ಕ್ರಿ.ಶ. ೫ನೇ ಶತಮಾನದಲ್ಲಿ ರಚನೆಯಾಗಿರುವ ಬಗ್ಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಮೂಲವಾಗಿ ದೇವನಾಗರಿ ಲಿಪಿಯಲ್ಲಿದ್ದ ಈ ಗ್ರಂಥವನ್ನು ಕನ್ನಡಕ್ಕಿಂತಲೂ ಮುಂಚೆ ಬೇರೆ ಬೇರೆ ಭಾಷೆಯಲ್ಲಿ ಸಂಪಾದನೆ ಮಾಡಲಾಗಿದೆ. ಕನ್ನಡದಲ್ಲಿ ಈ ಗ್ರಂಥದ ಉತ್ತರಾರ್ಧ ಭಾಗವನ್ನು ಮಾತ್ರ ಮೊದಲಿಗೆ ಸಂಪಾದಿಸಿದ್ದು ಅದರಲ್ಲಿಯೇ ಚಿತ್ರಕಲೆಗೆ ಸಂಬಂಧಿಸಿದ ಮಾಹಿತಿಯು ದೊರಕುತ್ತದೆ.

ಪ್ರಸ್ತುತ ಕಾಶ್ಯಪಶಿಲ್ಪ ಶಾಸ್ತ್ರವು ಶಿಲ್ಪವಿದ್ಯೆಗೆ ಸಂಬಂಧ ಪಟ್ಟಿದ್ದಾಗಿದ್ದು ಸಾಂದರ್ಭಿಕವಾಗಿ ಚಿತ್ರಕಲೆಯ ವಿವರ ಬರುತ್ತದೆ. ಈ ಗ್ರಂಥದಲ್ಲಿ ಮುಖ್ಯವಾಗಿ ಶಿಲ್ಪವಿದ್ಯೆ, ಶಿಲ್ಪರಚನೆಯ ವಿಧಾನಗಳು, ಕಲ್ಲಿನ ಆಯ್ಕೆಯ ಕ್ರಮ, ದೇವತೆ, ಮನುಷ್ಯ, ಪ್ರಾಣಿ, ಮುಂತಾದ ವಿವಿಧ ಶಿಲ್ಪ ಮಾದರಿಗಳ ರಚನೆಯ ವಿಧಾನ, ಪ್ರತಿಯೊಂದು ಶಿಲ್ಪದ ತಾಳಮಾನ, ಭಾವಭಂಗಿ, ಅಂಗ ಪ್ರತ್ಯಂಗ, ಪ್ರಮಾಣ ಬದ್ಧತೆಗಳ ವಿಷಯವಾಗಿ ವಿವರವಾಗಿ ಹೇಳಲಾಗಿದೆ. ಇಲ್ಲಿ ನಲವತ್ತಾರು ಅಧ್ಯಾಯಗಳಲ್ಲಿ ವಿಷಯವು ಹರಡಿಕೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಪ್ರಾರ್ಥನೆ ಇದೆ. ಎರಡನೆಯ ಅಧ್ಯಾಯದಲ್ಲಿ ವಿನಾಯಕ ಮೂರ್ತಿ ಲಕ್ಷಣ ಹೇಳಲಾಗಿದೆ. ಮುಂದೆ ಅನುಕ್ರಮವಾಗಿ ಒಂದೊಂದು ಅಧ್ಯಾಯದಲ್ಲಿ ಒಂದೊಂದು ವಿಷಯಗಳನ್ನು ವಿವರಿಸಲಾಗಿದೆ.

೫. ಜಿ.ಜ್ಞಾನಾನಂದ : ಕಾಶ್ಯಪ ಶಿಲ್ಪಶಾಸ್ತ್ರಂ : (ಸಂ) : ಶಿಲ್ಪಕಲಾ ಲಲಿತಕಲಾ ಅಕಾಡೆಮಿ ಬೆಂಗಳೂರು-೧೯೯೮

ಪರಿವಾರ ದೇವತೆಗಳು, ಶಿವಲಿಂಗ ಲಕ್ಷಣಂ, ಲಿಂಗಪೀಠ ಲಕ್ಷಣಂ, ಪಾದಶೈಲಾದಿ ಲಕ್ಷಣಂ, ಲಕ್ಷಣೋದ್ಧಾರ ಲಕ್ಷಣಂ, ತಾಲಬೇಧ ಕಥನಂ, ಉತ್ತಮ ದಶತಾಲ ಪುರುಷಮಾನಂ, ಮಧ್ಯಮದಶತಾಲ ಸ್ತ್ರೀ ಮಾನ ಕಥನಂ, ಅಧಮ ದಶತಾಲೆ ಪುರುಷ ಮಾನಂ, ಉತ್ತಮ ನವತಾಲ ಲಕ್ಷಣಂ, ಮಾಧ್ಯಮ ನವತಾಲ ಲಕ್ಷಣಂ, ಅಧಮ ನವತಾಲ ಲಕ್ಷಣಂ, ಉತ್ತಮ ಅಷ್ಟತಾಲ ಲಕ್ಷಣಂ, ಉತ್ತಮ ಸಪ್ತತಾಲ ಲಕ್ಷಣಂ, ಸಕಲ ಮೂರ್ತಿ ಸ್ಥಾಪನಾ ವಿಧಿ, ಸುಖಾಸನ ಮೂರ್ತಿ ಲಕ್ಷಣಂ, ಸೋಮಸ್ಕಂದ ಮೂರ್ತಿ ಲಕ್ಷಣಂ, ಚಂದ್ರಶೇಖರ ಮೂರ್ತಿ ಲಕ್ಷಣಂ, ವೃಷಭ ವಾಹನ ಮೂರ್ತಿ ಲಕ್ಷಣಂ, ನೃತ್ಯಮೂರ್ತಿ ಲಕ್ಷಣಂ, ಗಂಗಾಧರ ಮೂರ್ತಿ ಲಕ್ಷಣಂ, ತ್ರಿಪುರಾಂತಕ ಮೂರ್ತಿ ಲಕ್ಷಣಂ, ಕಲ್ಯಾಣ ಸುಂದರ ಮೂರ್ತಿ ಲಕ್ಷಣಂ, ಅರ್ಧನಾರೀಶ್ವರ ಮೂರ್ತಿ ಲಕ್ಷಣಂ, ಗಜಸರಹಾರ ಮೂರ್ತಿ ಲಕ್ಷಣಂ, ಪಾಶುಪತ ಮೂರ್ತಿ ಲಕ್ಷಣಂ, ಕಂಕಾಳ ಮೂರ್ತಿ ಲಕ್ಷಣಂ, ಹರಿಹರಾರ್ಧ ಮೂರ್ತಿ ಲಕ್ಷಣಂ, ಭಿಕ್ಷಾಟನ ಮೂರ್ತಿ ಲಕ್ಷಣಂ, ಚಂಡೇಶಾನುಗ್ರಹ ಮೂರ್ತಿ ಲಕ್ಷಣಂ, ದಕ್ಷಿಣ ಮೂರ್ತಿ ಲಕ್ಷಣಂ, ಕಾಲಸಂಹಾರ ಮೂರ್ತಿ ಲಕ್ಷಣಂ, ಲಿಂಗೋದ್ಭವ ಮೂರ್ತಿ ಲಕ್ಷಣಂ ಎಂಬ ಅಧ್ಯಾಯಗಳು ಶಿಲ್ಪಗಳ ವಿವರಗಳನ್ನು ಒಳಗೊಂಡಿದ್ದರೆ, ಮುಂದಿನ ಅಧ್ಯಾಯಗಳು ಚಿತ್ರವಿದ್ಯೆಗೆ ಸಂಬಂಧಪಟ್ಟಿವೆ. ಮೃತ್ ಸಂಸ್ಕಾರ ಲಕ್ಷಣಂ, ಕಲ್ಕಸಂಸ್ಕಾರ ವಿಧಿ, ವರ್ಣ ಸಂಸ್ಕಾರ ಲಕ್ಷಣಂ, ಸುಧಾಕರ್ಮ ವಿಧಿ, ವರ್ಣ ಲೇಪನ ವಿಧಿ ಎಂಬ ಅಧ್ಯಾಯಗಳಲ್ಲಿ ಭಿತ್ತಿತಯಾರಿಕೆ, ಅದರ ಪರಿಕರಗಳು, ಅಂಟುತಯಾರಿಕೆ, ಬಣ್ಣ ಕುಂಚಗಳು ಮುಂತಾದ ಚಿತ್ರಕಲೆಯ ವಿವರಗಳಿವೆ.

ಈ ಪ್ರಾಚೀನ ಗ್ರಂಥದಲ್ಲಿನ ಚಿತ್ರಕಲೆಯ ವಿವರಗಳಲ್ಲಿ ಹಲವು ಸಂಗತಿಗಳು ಪ್ರಾಮುಖ್ಯತೆ ಪಡೆದುಕೊಂಡಿವೆ. ಭಿತ್ತಿತಯಾರಿಕೆಯಲ್ಲಿ ಗಾರೆ, ಮಣ್ಣು, ಉಸುಕು, ಸುಣ್ಣ, ಇವುಗಳನ್ನು ಹೇಗೆ ಸಂಗ್ರಹಿಸಬೇಕು, ಹೇಗೆ ತಯಾರಿಸಬೇಕು ಎನ್ನುವ ಬಗ್ಗೆ ತಿಳಿಸಲಾಗಿದೆ. ಅಂಟುದ್ರಾವಕದಲ್ಲಿ ಪ್ರಾಣಿಜನ್ಯ ಅಂಟು ಮತ್ತು ಸಸ್ಯಜನ್ಯ ಅಂಟುಗಳಿದ್ದು ಚಿತ್ರಶಿಲ್ಪಗಳು ಪವಿತ್ರವಾಗಿರುವುದರಿಂದ ಸಸ್ಯಜನ್ಯ ಅಂಟುಗಳನ್ನು ಮಾತ್ರ ಬಳಸಲು ಸೂಚಿಸುತ್ತದೆ. ಇದಲ್ಲದೆ ಬಣ್ಣಗಳಲ್ಲಿ ಖನಿಜ ಮೂಲದ ಬಣ್ಣಗಳು ಶ್ರೇಷ್ಟವಾಗಿದ್ದು ಅವುಗಳನ್ನು ಚಿತ್ರಕ್ಕೆ ಉಪಯೋಗಿಸಲು ತಿಳಿಸುತ್ತದೆ.

ಬಣ್ಣಗಳಲ್ಲಿ ಪಂಚವರ್ಣಗಳು ಮೂಲವರ್ಣಗಳಾಗಿದ್ದು ಅವುಗಳಿಂದ ಹಲವು ರೀತಿಯ ಮಿಶ್ರವರ್ಣಗಳನ್ನು ತಯಾರಿಸಿಕೊಳ್ಳಬಹುದಾಗಿದೆ. ಒಂದು ಬಣ್ಣದೊಡನೆ ಮತ್ತೊಂದು ಬಣ್ಣ ಬೆರೆತಾಗ ಉಂಟಾಗುವ ವರ್ಣಛಾಯೆ ಪೂರಕ ಮತ್ತು ವಿರುದ್ಧವರ್ಣಗಳಾವುವು ಎನ್ನುವ ಅಂಶಗಳು ಇಲ್ಲಿವೆ. ಒಂದೊಂದು ವರ್ಣದಲ್ಲೇ ಅನೇಕ ಛಾಯೆಗಳನ್ನು ಉಂಟುಮಾಡಬಹುದು ಮಾತ್ರವಲ್ಲದೆ ದಟ್ಟ ಮತ್ತು ತಿಳುಛಾಯೆ ಕೊಡಬಹುದು ಎನ್ನುತ್ತದೆ. ಕುಂಚಗಳ ತಯಾರಿಕೆಯ ಬಗ್ಗೆ ತಿಳಿಸುತ್ತ, ಪ್ರಾಣಿಮೂಲದ ತುಪ್ಪಳಗಳಿಂದ ತಯಾರಿಸುವ ಕುಂಚಗಳು ಶ್ರೇಷ್ಟವಾಗಿವೆ. ಮೂರು ಬಗೆಯ ಕುಂಚಗಳನ್ನು ಚಿತ್ರಕ್ಕೆ ಬಳಸಬೇಕು ಎನ್ನುವ ವಿವರ ಹೇಳುತ್ತದೆ. ಚಿತ್ರರಚನೆ ಮಾಡುವ ಕಲಾವಿದನ ಮನೋಸ್ಥಿತಿ, ಆತನಲ್ಲಿರಬೇಕಾದ ಧಾರ್ಮಿಕತೆ, ಆತನಿಗೆ ಯಾವ ಇತರ ವಿದ್ಯೆಗಳು ತಿಳಿದರಬೇಕು ಎನ್ನುವ ಅಂಶಗಳು ಇಲ್ಲಿ ಹೇಳಲ್ಪಟ್ಟಿವೆ. ಚಿತ್ರದ ವಿವರಗಳೂ ಇಲ್ಲಿವೆ. ಯಾವ ಚಿತ್ರಗಳನ್ನು ಯಾವ ಪ್ರಮಾಣದಲ್ಲಿ ಚಿತ್ರಿಸಬೇಕು? ಎನ್ನುವ ಅಂಶಗಳಲ್ಲದೆ ಅಳತೆಯ ಮಾಪನ ಅಂಗುಲದ ಬಗ್ಗೆಯೂ ಇಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಈ ಗ್ರಂಥದಲ್ಲಿನ ಚಿತ್ರಕಲಾ ವಿಷಯಗಳು ಪ್ರಮುಖವಾಗಿ ಭಿತ್ತಿಚಿತ್ರಕಲೆಗೆ ಸಂಬಂಧಿಸಿದ್ದು, ಚಿತ್ರಕಲೆ ಸಾಹಿತ್ಯದ ದೃಷ್ಟಿಯಿಂದ ಮುಖ್ಯವಾಗಿದೆ.

**ಶಿವತತ್ವ ರತ್ನಾಕರ :**

ಕೆಳದಿಯ ಬಸವ ಭೂಪಾಲನಿಂದ ಕ್ರಿ.ಶ. ೧೬೯೩–೧೭೧೫ರಲ್ಲಿ ರಚನೆಯಾದ ಶಿವತತ್ವ ರತ್ನಾಕರ ಸಂಸ್ಕೃತ ಗ್ರಂಥವನ್ನು ಶ್ರೀ. ಮಲ್ಲೇಪುರಂ ಜಿ.ವೆಂಕಟೇಶ ಕನ್ನಡದಲ್ಲಿ ಸಂಪಾದನೆ ಮಾಡಿದ್ದಾರೆ.[೬] ಬೃಹತ್ತಾದ ಈ ಗ್ರಂಥವನ್ನು ಎರಡು ಸಂಪುಟಗಳಲ್ಲಿ ಸಂಪಾದಿಸಲಾಗಿದೆ. ಪ್ರತಿಯೊಂದು ಸಂಪುಟಗಳಲ್ಲಿ ಕಲ್ಲೋಲಗಳೆಂಬ ಅಧ್ಯಾಯಗಳು ಅವುಗಳಲ್ಲಿ ಉಪ ಅಧ್ಯಾಯಗಳಾಗಿ ತರಂಗಗಳು ಮತ್ತು ಪ್ರತಿಯೊಂದು ತರಂಗದಲ್ಲಿ ಶೀರ್ಷಿಕೆ ಮತ್ತು ಉಪ ಶೀರ್ಷಿಕೆಗಳನ್ನು ಮಾಡಿಕೊಳ್ಳಲಾಗಿದೆ. ಒಟ್ಟು ಗ್ರಂಥವು ಒಂಭತ್ತು ಕಲ್ಲೋಲಗಳನ್ನು ಹೊಂದಿದ್ದು ಪ್ರಥಮ ಸಂಪುಟದಲ್ಲಿ ಆರು ಮತ್ತು ಎರಡನೆಯ ಸಂಪುಟದಲ್ಲಿ ಮೂರು ಕಲ್ಲೋಲಗಳನ್ನು ಕೊಡಲಾಗಿದೆ. ಮೊದಲನೆಯ ಸಂಪುಟದಲ್ಲಿರುವ ಆರು ಕಲ್ಲೋಲ (ಅಧ್ಯಾಯ)ಗಳಲ್ಲಿ ಒಂದನೆಯ ಕಲ್ಲೋಲದಲ್ಲಿ ಏಳು ತರಂಗಗಳಲ್ಲಿ ಶಿವಲಿಂಗ ಪ್ರಾರ್ಥನೆ, ವೀರಭದ್ರ ಪ್ರಾರ್ಥನೆ, ರೇವಣ ಸಿದ್ಧ, ಪಂಡಿತಾರಾಧ್ಯರ ಪ್ರಾರ್ಥನೆ ಗಣಪತಿ ಶಾರದೆಗೆ ನಮಿಸುವುದು, ವೇದಗಳು, ವೇದಾಂಗಗಳು, ಆಗಮಗಳು, ವಿದ್ಯಾಸ್ವರೂಪ ನಿರೂಪಣೆ, ಶಿಕ್ಷಾ, ವ್ಯಾಕರಣ, ಛಂದಸ್ಸು, ಮೀಮಾಂಸೆ ಅರವತ್ತಾಲ್ಕು ಕಲೆಗಳು, ದೃಶ್ಯ ಪ್ರಪಂಚದ ಉತ್ಪತ್ತಿಯ ವಿವರಣೆ, ಬ್ರಹ್ಮ, ಶೂನ್ಯಲಿಂಗ, ಜಂಗಮ, ಭಕ್ತ, ಪಾದೋದಕ, ವಿಶ್ವದ ಉತ್ಪತ್ತಿ, ಸೃಷ್ಟಿಕ್ರಮ ನಿರೂಪಣೆಯಂತಹ ವಿಷಯಗಳಿವೆ. ಜೊತೆಗೆ ಪ್ರಣವಲಿಂಗ, ಕಲೆಗಳ ಉತ್ಪತ್ತಿ, ಕಲಾವಿಭಾಗ, ಕಲಾಸ್ಮೃತಿ, ನಾದಸೃಷ್ಟಿ, ಶಿವನ ವಿವಧ ರೂಪ ಮತ್ತು ತತ್ವಗಳು, ಕಲಾತತ್ವಗಳು, ಪಂಚಮಹಾ ಭೂತಗಳು, ಬ್ರಹ್ಮಾಂಡ ಪಿಂಡಾಂಡಗಳ ವ್ಯವಹಾರ ಹೀಗೆ ಇನ್ನೂ ಅನೇಕ ವಿಷಯಗಳು ಹೇಳಲ್ಪಟ್ಟಿವೆ.

ಎರಡನೆಯ ಕಲ್ಲೋಲವು ಎಂಟು ತರಂಗಗಳನ್ನು ಹೊಂದಿದ್ದು ಇಲ್ಲಿ ಪ್ರಮಾಣ ಬೇಧಗಳು, ಬ್ರಹ್ಮಾಂಡ, ಧೂಳಿನ ಕಣ ತ್ರಸರೇಣು, ಎಂಟು ತ್ರಸರೇಣು ಒಂದು ರಜಸ್ಸು, ಎಂಟು ರಜಸ್ಸು ಒಂದು ವಾಲಾಗ್ರ, ಎಂಟು ವಾಲಾಗ್ರ ಒಂದು ಲಿಕ್ಷಾ ಹೀಗೆ ಮುಂದುವರಿಯುತ್ತ ಸಂಪೂರ್ಣ ಅಳತೆಯ ಮಾಪನವನ್ನು ಒಂದನೆಯ ತರಂಗಗಳಲ್ಲಿ ಹೇಳಲಾಗಿದೆ. ಇನ್ನುಳಿದಂತೆ ಇರುವ ತರಂಗಗಳಲ್ಲಿ ನರಕ ಪ್ರಭೇದಗಳ ವಿವರಣೆ, ಪೂರ್ವಜನ್ಮದ ಕರ್ಮಫಲ, ಪ್ರಾಯಶ್ಚಿತ್ತ, ಪಾತಾಳ ಲೋಕಗಳ ವಿವರಣೆ, ಭೂಲೋಕದ ವಿವರಣೆ, ಸಪ್ತಋಷಿಗಳ ಆಶ್ರಮಗಳು, ಒಂಭತ್ತು ಖಂಡ ವಿಭಾಗಗಳು, ನದಿಗಳ ಬಗೆಗೆ ವಿವರ, ಶಾಕದ್ವೀಪ ಅದರ ವಿವರಣೆ, ಹೀಗೆ ಹಲವಾರು ಅಂಶಗಳ ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಮೂರನೆಯ ಕಲ್ಲೋಲದಲ್ಲಿ ಏಳು ತರಂಗಗಳಿವೆ. ಅವುಗಳಲ್ಲಿ ಭೂಲೋಕ ಮತ್ತು ಸತ್ಯಲೋಕಗಳ ವಿವರಣೆ, ಗ್ರಹ ನಕ್ಷತ್ರಗಳ ಮಾಹಿತಿ, ಗಾಳಿ–ಮಳೆ, ಬಿಸಿಲು, ಮೋಡಗಳ ಉತ್ಪತ್ತಿ ಮತ್ತು ಚಲನಕ್ರಿಯೆಗಳು, ಮಳೆಯ ಶುಭಾ–ಶುಭ ಲಕ್ಷಣಗಳು, ಮೋಡಗಳ ಬಣ್ಣ ಮತ್ತು ಗುಣಲಕ್ಷಣಗಳು, ಮಿಂಚಿನ ವಿವರ, ಹಿಮದ ಸಂಗತಿ, ಗುಹ್ಯಲೋಕದ ವರ್ಣನೆ, ಗಂಧರ್ವರು ಮತ್ತು ಗಂಧರ್ವ ಲೋಕ, ಉತ್ತರಾಯಣ–ದಕ್ಷಿಣಾಯಣಗಳ ಲಕ್ಷಣಗಳು, ಸೂರ್ಯನಿಗೆ ಅರ್ಘ್ಯ ಕೊಡುವ ವಿಧಾನಗಳು ಹೇಳಲ್ಪಟ್ಟಿವೆ. ಹಗಲಿನ ಭಾಗಗಳು, ಋತುಗಳು, ಕಾಲಮಾನಗಳು, ದಿಕ್ಪಾಲಕರು, ಅವರ ವಾಹನಗಳು, ಧ್ರುವ ಮಂಡಲ ವರ್ಣನೆ, ಸ್ವರ್ಗಲೋಕ, ಇಂದ್ರಲೋಕಗಳ ವರ್ಣನೆ, ಶಿವನ ಕೈಲಾಸದ ವಿವರಣೆ, ಅರವತ್ನಾಲ್ಕು ಯೋಗಿನಿಯರ ಹೆಸರು ಮತ್ತು ವಿವರ, ತಪೋಲೋಕದ ವಿವರ, ವಿಷ್ಣುವಿನ ದಶಾವತಾರಗಳು, ಮುಂತಾದ ಸಂಗತಿಗಳನ್ನು ಈ ಅಧ್ಯಾಯವು ಒಳಗೊಂಡಿದೆ.

೬. ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ : ಶಿವತತ್ವರತ್ನಾಕರ : (ಸಂ) : (ಅನು) : ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ–೧೯೯೯

ನಾಲ್ಕನೆಯ ಕಲ್ಲೋಲವು ಹನ್ನೆರಡು ತರಂಗಗಳನ್ನು ಹೊಂದಿದ್ದು, ಅದರಲ್ಲಿ ಬರುವ ಕೆಲವು ವಿಷಯಗಳು ಹೀಗಿವೆ. ಬ್ರಹ್ಮಾಂಡದ ಎಲ್ಲ ಲೋಕಗಳ ವಿವರ, ಶಿಷ್ಯನಾದ ಕುಮಾರನ ಪ್ರಶ್ನೆಗಳಿಗೆ ರಾಜನ ಉತ್ತರಗಳು, ಭಾರತದ ಉತ್ತರ-ದಕ್ಷಿಣ ಪೂರ್ವ-ಪಶ್ಚಿಮ ಸೀಮೆಗಳು, ಭಾರತದ ನದಿ, ಪರ್ವತ, ಸಾಗರ, ದ್ವೀಪಗಳು, ಮೇರೆಗಳು ಹೀಗೆ ಬೇರೆ ಬೇರೆ ವಿಷಯಗಳು ಇಲ್ಲಿ ಹೇಳಲ್ಪಟ್ಟಿವೆ. ಅದೇ ರೀತಿಯಲ್ಲಿ ಅವರತ್ತೆಂಟು ಪುಣ್ಯಕ್ಷೇತ್ರಗಳು, ಶಿವಕ್ಷೇತ್ರಗಳು, ವೈಷ್ಣವ ಕ್ಷೇತ್ರಗಳು, ಯುಗಗಳ ಬಗೆಗಿನ ವಿವರಣೆಗಳು, ಮಹಾರಾಜರ ರಾಜ್ಯಭಾರಕ್ರಮ, ವರ್ಣಾಶ್ರಮದ ನಿರೂಪಣೆ, ಮಹಾಪಾತಕಗಳು ಮುಂತಾದ ವಿಷಯಗಳು ಇಲ್ಲಿ ಹೇಳಲ್ಪಟ್ಟಿವೆ.

ಐದನೆಯ ಕಲ್ಲೋಲವು ಹದಿನೈದು ತರಂಗಗಳನ್ನು ಹೊಂದಿದ್ದು, ಇದರಲ್ಲಿ ಅಡಕವಾಗಿರುವ ವಿಷಯಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ಹೇಳಲಾಗಿದೆ. ವಿದ್ಯಾರಣ್ಯ ವೃತ್ತಾಂತ, ಶಿವಗೌರಿ ವೃತ್ತಾಂತ, ಜನತಾಪದ ಸಿದ್ಧಿಯ ಬಗ್ಗೆ ಮಾಹಿತಿ, ಮೃತ ಸಂಜೀವಿನಿ ಉಪಾಯ, ಬಸವ ಭೂಪಾಲನ ಪೂರ್ವಜರ ತಾಜ್ಯಾಡಳಿತದ ಬಗ್ಗೆ ವಿವರಗಳು, ಕೆಳದಿ ರಾಜಪರಿವಾರದ ವೃತ್ತಾಂತ, ಚೌಡಪ್ಪನಿಗೆ ನಿಧಿ ಪ್ರಾಪ್ತಿಯ ವಿಷಯ, ಸುಖ ಮತ್ತು ದುಃಖದ ಸ್ವಪ್ನಗಳು, ಅವುಗಳ ಲಕ್ಷಣಗಳನ್ನು ಇಲ್ಲಿ ಹೇಳಲಾಗಿದೆ. ಇದರ ಜೊತೆಗೆ ಅಂಜನ ತಯಾರಿಸುವ ವಿಧಾನ, ರಾಜಧರ್ಮೋಪದೇಶ, ಅಗಮ್ಯ ಸ್ತ್ರೀಯರು, ಮಹಾಪಾತಕಗಳು, ಸದಾಶಿವ ಭೂಪಾಲನ ರಾಜ್ಯಭಾರ ಕ್ರಮ, ನಾಲ್ಕು ವಿಷ ಪ್ರಭೇದಗಳು, ರಾಜನಕರ್ತವ್ಯಗಳು, ಮಿತ್ರ ಲಕ್ಷಣಗಳು, ಯಾತ್ರೆಯ ಸಮಯದಲ್ಲಿ ಒಳ್ಳೆಯ ಕೆಟ್ಟ ಶಕುನಗಳು, ದೇವಾಲಯಗಳ ನಿರ್ಮಾಣ ಕ್ರಮಗಳು, ಪಟ್ಟಾಭಿಷೇಕದ ವಿವರಗಳು, ಆಸನಗಳ ವಿವರಗಳು, ಕುಂಡಲಿನೀ ಸ್ವರೂಪ, ಯುದ್ಧ ವ್ಯೂಹರಚನಾ ಕ್ರಮಗಳು, ವ್ಯಕ್ತಿಗಳ ಲಕ್ಷಣಗಳು, ಹೀಗೆ ಅನೇಕ ಅಂಶಗಳು ಇಲ್ಲಿ ಹೇಳಲ್ಪಟ್ಟಿವೆ.

ಆರನೆಯ ಕಲ್ಲೋಲವು ಇನ್ನುಳಿದ ಐದೂ ಅಧ್ಯಾಯಗಳಿಗಿಂತ ದೊಡ್ಡದಾಗಿದ್ದು, ಒಟ್ಟು ಇಪ್ಪತ್ತೇಳು ತರಂಗಗಳನ್ನು ಹೊಂದಿದೆ. ಇದರಲ್ಲಿ ಮೊದಲಿನ ಹತ್ತು ತರಂಗಗಳಲ್ಲಿ ಬರುವ ವಿಷಯಗಳು ಈ ಕೆಳಗಿನಂತಿವೆ. ವೆಂಕಪ್ಪನಾಯಕನ ದಾನವರ್ಣನೆ, ನಗರ ನಿರ್ಮಾಣ ವಿಧಾನ, ಪಟ್ಟಣಗಳಲ್ಲಿ ಆಯಾ ವರ್ಣದವರಿಗೆ ಭೂಮಿ ಹಂಚಿಕೆಯ ಕ್ರಮ, ರಾಜಭವನದ ಪ್ರಭೇದಗಳು, ವಾಸ್ತು ಪೂಜಾ ವಿಧಾನಗಳು, ರಾಜನು ಅರಮನೆ ಪ್ರವೇಶಿಸುವ ಕ್ರಿಯಾವಿಧಾನಗಳು ಹೇಳಲ್ಪಟ್ಟಿವೆ.

ಇದೇ ಅಧ್ಯಾಯದಲ್ಲಿಯೇ ಚಿತ್ರಕಲೆಗೆ ಸಂಬಂಧಿಸಿದ ವಿವರವು ಎರಡನೆ ತರಂಗದಲ್ಲಿದೆ. ಇಲ್ಲಿ ನಾಟಕಶಾಲೆ, ಚಿತ್ರಶಾಲೆಗಳ ನಿರ್ಮಾಣ, ಚಿತ್ರಕಾರನಸ್ವರೂಪ, ಭಿತ್ತಿ ತಯಾರಿಕೆ ವಿಧಾನ, ಭಿತ್ತಿ ಲೇಪನ ದ್ರವ್ಯಗಳು, ಅವುಗಳನ್ನು ತಯಾರಿಸುವ ವಿಧಾನ, ಲೇಪನ ಸಾಧನಗಳು, ಲೇಖನಿ, ಸ್ಥೂಲ-ಸೂಕ್ಷ್ಮ-ವಿಶಾಲ ಎಂಬ ಪ್ರಭೇದಗಳು, ಶುದ್ಧ ಬಣ್ಣಗಳು, ಮಿಶ್ರ ಬಣ್ಣಗಳು, ತಯಾರಿಸುವ ಕ್ರಮ, ಚಿತ್ರಗಳಿಗೆ ಬಣ್ಣ ಲೇಪಿಸುವ ವಿಧಾನ, ರೇಖಾ ಚಿತ್ರಗಳು, ಆಭರಣ ರಚನೆಗೆ ಉಪಯೋಗಿಸುವ ಕಲ್ಕದನಿರ್ಮಾಣ, ಚಿತ್ರದ ಅಳತೆಯವಿಧಾನಗಳು, ಮುಂತಾದ ಅಂಶಗಳನ್ನು ಕುರಿತು ವಿವರಿಸಲಾಗಿದೆ. ಇನ್ನುಳಿದಂತಿರುವ ತರಂಗಗಳಲ್ಲಿ ನೃತ್ಯದ ಪರಿಚಯ ಪ್ರಕಾರಗಳು, ನೃತ್ಯದ ಉತ್ಪತ್ತಿ, ಲಕ್ಷಣಗಳು, ಶಿರಸ್ಸಿನ ಭೇದಗಳು, ಸ್ಥಾಯೀಭಾವಗಳು, ನಾಸಿಕ ಪ್ರಭೇದಗಳು, ಮುಖಚಿಹ್ನೆಗಳು, ಹಸ್ತ ಕರ್ಮಗಳು, ಲಕ್ಷಣಗಳು, ದೇಹದ ವಿವಿಧ ಭಾಗಗಳ ಪ್ರಮುಖ ಲಕ್ಷಣಗಳು, ನಟನೆಗೆ ಉಪಯುಕ್ತವಾದ ಕೌಶಲಗಳು, ಅಲಂಕಾರಗಳು, ರಾಗದ ವಿವಿಧ ಲಕ್ಷಣಗಳು, ತಾಲಗಳ ನಿರೂಪಣೆ, ಉದ್ಯಾನ ನಿರ್ಮಾಣದ ವಿಧಾನಗಳು, ಮುಂತಾದ ಅಂಶಗಳ ಬಗೆಗೆ ಮೊದಲಿನ ಹತ್ತು ತರಂಗಗಳಲ್ಲಿ ವಿವರಿಸಲಾಗಿದೆ.

ನಂತರದ ಹತ್ತು ತರಂಗಗಳಲ್ಲಿ ಪೋಷಣ ವಿಧಿ, ಫಲವೃಕ್ಷಗಳನ್ನು ಬೆಳೆಸುವ ಕ್ರಮ, ಸ್ತ್ರೀಯರಲ್ಲಿರುವ ಭೇದ ಮತ್ತು ಪ್ರಮುಖ ಲಕ್ಷಣಗಳು, ಕಾಮಶಾಸ್ತ್ರದ ವಿವರಗಳು, ರತಿಯ ಬಗೆಗಳು, ರಾಜೋಪಭೋಗದ ವಿಷಯಗಳು, ಗಂಧೋಪಭೋಗದ ವಿಷಯಗಳು, ವಸ್ತ್ರೋಪಭೋಗದ ವಿಚಾರಗಳು, ಆಭರಣಗಳನ್ನು ಧರಿಸುವ ವಿವರಗಳು, ಪಾಠಶಾಲೆಯ ವಿವರಗಳು, ಭೋಜನದ ಕ್ರಮಗಳು, ಭೋಜನದ ನಂತರ ಮಾಡಬೇಕಾದ ಕರ್ತವ್ಯ ಕ್ರಮಗಳು, ಶರೀರವನ್ನು ಸದೃಡಗೊಳಿಸುವ ವಿವಿಧ ರೀತಿಯ ಕ್ರಮಗಳು, ದ್ರವ್ಯಗುಣಗಳು, ರಸೋತ್ಪತ್ತಿಯ ಇತಿಹಾಸ, ಧಾತುಗಳ ರಸಮೂಲತೆ ಮುಂತಾದ ಸಂಗತಿಗಳು ಹೇಳಲ್ಪಟ್ಟಿವೆ. ಮುಂದಿನ ಏಳು ತರಂಗಗಳಲ್ಲಿ ವಿವಿಧ ಬಗೆಯ ರೋಗಗಳು ಅವುಗಳ ಲಕ್ಷಣಗಳು, ಅವುಗಳಿಗೆ ಯೋಗ್ಯವಾದ ಔಷಧಿ ನೀಡುವುದು, ಅವುಗಳನ್ನು ತಯಾರಿಸುವುದು, ಸಂಸ್ಕಾರದ ಕ್ರಿಯೆಗಳು, ವಿಷಗಳಲ್ಲಿರುವ ಪ್ರಭೇದಗಳು, ಸರ್ಪ ಕಚ್ಚಿದರೆ ಕೊಡುವ ಮದ್ದುಗಳು, ಚಿಕಿತ್ಸಾ ಕ್ರಮಗಳು, ಶಿವಭಜನೆಯ ವ್ರತ ಮುಂತಾದ ವಿಷಯಗಳು ಪ್ರಮುಖವಾಗಿ ವ್ಯಕ್ತಗೊಂಡಿವೆ.

ಎರಡನೆಯ ಸಂಪುಟದಲ್ಲಿ ಮೂರು ಕಲ್ಲೋಲಗಳಿವೆ. ಈ ಕಲ್ಲೋಲಗಳು ಅನೇಕ ವಿಷಯಗಳನ್ನು ಒಳಗೊಂಡಿವೆ. ಅಲಂಕಾರ ಕ್ರಮ, ಇಂದ್ರಜಾಲ ವಿದ್ಯೆ ವಿಧಿವಿಧಾನಗಳು, ಕಾವ್ಯ ಸ್ವರೂಪದ ನಿರೂಪಣೆ, ನಾಯಕನ ಗುಣಲಕ್ಷಣಗಳು, ಕಾವ್ಯದ ಧ್ವನಿ, ನಾಟ್ಯ ಸ್ವರೂಪ, ಸ್ತ್ರೀಯರ ಗರ್ಭಚಿಹ್ನೆಗಳು, ಗ್ರಹ ವೀಕ್ಷಣೆ, ಸ್ತ್ರೀಲಕ್ಷಣಗಳು, ಪುರುಷ ಲಕ್ಷಣಗಳು, ಆನೆಗಳ ವೃತ್ತಾಂತ, ಕುದುರೆಗಳ ವೃತ್ತಾಂತ, ರಾಜನ ವಿಜಯ ಯಾತ್ರೆಗಳು, ಮಂತ್ರಗಳು ಮತ್ತು ಯೋಗಗಳ ಕುರಿತ ವಿವರಗಳಿವೆ. ಹೀಗೆ ಅನೇಕ ವಿಷಯಗಳನ್ನು ಒಳಗೊಂಡ ಈ ಬೃಹತ್ ಗ್ರಂಥವು ಚಿತ್ರಕಲೆಯ ದೃಷ್ಟಿಯಿಂದಲೂ ಮಹತ್ವದ್ದಾಗಿದೆ. ಆರನೆಯ ಕಲ್ಲೋಲದ ಎರಡನೆಯ ತರಂಗವು ಸಂಪೂರ್ಣ ಚಿತ್ರಕಲೆಯ ಕುರಿತಾಗಿಯೇ ಇದ್ದು, ಅನೇಕ ಮಹತ್ವದ ಸಂಗತಿಗಳನ್ನು ಒಳಗೊಂಡಿದೆ.

**ಶ್ರೀ ಬ್ರಾಹ್ಮೀಯ ಚಿತ್ರಕರ್ಮ ಶಾಸ್ತ್ರಂ :**

ಬ್ರಾಹ್ಮೀಯ ಚಿತ್ರಕರ್ಮ ಶಾಸ್ತ್ರಂ ಎಂಬ ಈ ಬೃಹತ್ ಶಿಲ್ಪಶಾಸ್ತ್ರವನ್ನು ಜಿ.ಜ್ಞಾನಾನಂದ ಸಂಪಾದನೆ ಮಾಡಿದ್ದಾರೆ.[೭] ಒಟ್ಟು ಐದು ಸಂಪುಟಗಳಲ್ಲಿ ಸಂಪಾದನೆಗೊಂಡಿರುವ ಈ ಕೃತಿಯಲ್ಲಿ ಶಿಲ್ಪ ಮತ್ತು ಚಿತ್ರಕಲೆಯ ಅನೇಕ ವಿವರಗಳಿವೆ.

ಮೊದಲನೆಯ ಸಂಪುಟದಲ್ಲಿ ವಿಷ್ಣುವಿನ ದಶಾವತಾರಗಳ ವಿಷಯ ಹೇಳಲಾಗಿದೆ. ಸಂಸ್ಕೃತ ಮೂಲ ಕೃತಿಯ ತಾತ್ಪರ್ಯದೊಂದಿಗೆ ವಿಶೇಷ ವಿವರಗಳನ್ನು ಆಯಾ ಅವತಾರಗಳ ಹಿನ್ನೆಲೆಯಲ್ಲಿ ಸಂಪಾದಕರು ನೀಡಿದ್ದಾರೆ. ಬೇರೆ ಬೇರೆ ಶಿಲ್ಪಶಾಸ್ತ್ರ ಗ್ರಂಥಗಳು, ವೈಷ್ಣವ ಸಂಹಿತೆಗಳು ಮತ್ತು ವಿವಿಧ ಪುರಾಣಗಳಿಂದ ಪೂರಕ ಮಾಹಿತಿಯನ್ನು ಸಂಗ್ರಹಿಸಿ ಆಯ್ಕೆ ಮಾಡಿ ಮೂಲದೊಂದಿಗೆ ಕೊಟ್ಟಿದ್ದಾರೆ. ಇದಕ್ಕೆ ಅನುರೂಪವಾದ ಚಿತ್ರಗಳನ್ನು ಸೂಕ್ತವಾದ ಸ್ಥಳದಲ್ಲಿ ಸೇರಿಸಿದ್ದಾರೆ. ಇದರಿಂದಾಗಿ ವಿಷಯವು ಹೆಚ್ಚು ಸ್ಪಷ್ಟಗೊಳ್ಳುತ್ತದೆ. ಈ ಸಂಪುಟದಲ್ಲಿ ಒಟ್ಟು ಎಂಭತ್ತೆರಡು ರೇಖಾ ಚಿತ್ರಗಳಿವೆ.

ಎರಡನೆಯ ಸಂಪುಟದಲ್ಲಿ ಆದಿಮೂರ್ತಿ ವಿಷ್ಣುವಿನ ಬಗೆಗೆ ಹೆಚ್ಚಿನ ವಿವರ ಕಂಡುಬರುತ್ತದೆ. ವಿಷ್ಣುವಿನ ವಿವಿಧ ರೂಪಗಳ ಮೂಲ ಇದೇ ಆಗಿದೆ. ಈತನನ್ನೆ ಆದಿವಿಷ್ಣು ಎಂಬುದಾಗಿಯೂ ಕರೆಯುತ್ತಾರೆ. ಈ ಅಧ್ಯಾಯದಲ್ಲಿ ಬರುವ ಶ್ಲೋಕಗಳೊಂದಿಗೆ ಅರ್ಥ, ವಿಶೇಷ ಅರ್ಥಗಳನ್ನು ಕೊಡಲಾಗಿದೆ. ಇಲ್ಲಿರುವ ವಿಷ್ಣುವಿನ ವಿವರಗಳಿಗೆ ಸಂಬಂಧಿಸಿದಂತೆ ಇಡೀ ಸಂಪುಟದಲ್ಲಿ ಒಟ್ಟು ಎಂಭತ್ತೆರಡು ರೇಖಾ ಚಿತ್ರಗಳಿವೆ. ಪ್ರಸ್ತುತ ಸಂಪುಟವು ಶಿಲ್ಪಶಾಸ್ತ್ರಕ್ಕೆ ವಿಶಿಷ್ಟ ಅರ್ಥಗಳನ್ನು ಕೊಡುತ್ತದೆ.

೭. ಜಿ.ಜ್ಞಾನಾನಂದ : ಶ್ರೀ ಬ್ರಾಹ್ಮೀಯ ಚಿತ್ರಕರ್ಮ ಶಾಸ್ತ್ರಂ (ಐದು ಸಂಪುಟಗಳು) : (ಸಂ) : ಸಂಸ್ಕೃತಿ ಸಾಹಿತ್ಯ ಪ್ರಸಾರ ಸಮಿತಿ, ಭಾರತಿನಗರ ಕೆ.ಜಿ.ಎಫ್-೨೦೦೦

ಶಿಲ್ಪಶಾಸ್ತ್ರವನ್ನು ಸಹಿತ ಪ್ರಾಚೀನ ಪದ್ಧತಿಯಂತೆ ವಿಜ್ಞಾನ ಎಂಬುದಾಗಿ ಪರಿಗಣಿಸಲಾಗುತ್ತಿತ್ತು ಎಂಬ ವಿಷಯ ಹೇಳಲ್ಪಟ್ಟಿದ್ದು, ವಿಜ್ಞಾನಂ ಶಿಲ್ಪಶಾಸ್ತ್ರಯೋಃ ಎನ್ನುವ ಅಂಶದ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕಲಾವಿದನು ಒಂದು ರೀತಿಯಲ್ಲಿ ವಿಜ್ಞಾನಿ ಇದ್ದಂತೆಯೆ. ಶಿಲ್ಪ ಮತ್ತು ಚಿತ್ರಕಲಾವಿದರು ಅವರ ಕ್ರಿಯಾ ಕ್ರಮಗಳು, ಬದುಕಿನ ರೀತಿ–ನೀತಿಗಳು, ಕೃತಿರಚನೆಯ ಹಿನ್ನೆಲೆ, ಕಲಾವಿದರ ಪ್ರಭಾವ ಪ್ರೇರಣೆಗಳು, ದೈವಕೃಪೆ ಇವುಗಳ ಬಗ್ಗೆ ಈ ಸಂಪುಟ ವಿವರಕೊಡುತ್ತದೆ.

ಮೂರನೆಯ ಸಂಪುಟದಲ್ಲಿ ಸ್ಥಾನಕ, ಆಸನ ಮತ್ತು ಶಯನ ಲಕ್ಷಣಗಳನ್ನು ವಿವರಿಸಲಾಗಿದೆ. ಈ ಬಗ್ಗೆ ಮೂರು ಅಧ್ಯಾಯಗಳಿವೆ. ಇದಲ್ಲದೆ ವೈಷ್ಣವಮೂರ್ತಿಗಳಯೋಗ, ಭೋಗ, ವೀರ, ಸಂಹಾರ ಎಂಬ ನಾಲ್ಕು ಪ್ರಕಾರಗಳನ್ನು ಹೇಳಲಾಗಿದೆ. ಮೂರ್ತಿ ಶಿಲ್ಪ ಮತ್ತು ಸಾಂಪ್ರದಾಯಿಕ ಚಿತ್ರ ರಚನೆಯಲ್ಲಿ ಅತ್ಯವಶ್ಯಕವಾಗಿರುವ ಈ ವಿವರಗಳು ಪ್ರತಿಯೊಬ್ಬ ಕಲಾವಿದರೂ ತಿಳಿದುಕೊಳ್ಳಬೇಕು. ಮಾತ್ರವಲ್ಲದೆ ಅವುಗಳನ್ನು ಬಿಟ್ಟು ಕೃತಿರಚನೆ ಸಾಧ್ಯವಿಲ್ಲ ಎನ್ನುವ ಅಂಶಗಳು ಇಲ್ಲಿ ಹೇಳಲ್ಪಟ್ಟಿವೆ.

ಇಂತಹ ವಿಷಯಗಳಲ್ಲದೆ ಬೇರೆ ವಿವರಗಳೂ ಈ ಸಂಪುಟದಲ್ಲಿವೆ. ಯಾವ ಕ್ರಿಯಾ ವಿಶೇಷಣವು ಮಾತಿನಿಂದ ಹೇಳಲ್ಪಡುವುದೋ ಅದಕ್ಕೆ ವಿದ್ಯಾ ಎಂದು ಹೆಸರು. ಮಾತಿನಿಂದ ಹೇಳಲಾಗದ್ದನ್ನು ಕೈಯಿಂದ ಮಾಡಿ ತೋರಿಸುವುದಕ್ಕೆ ಕಲೆ ಎನ್ನುವರು. ಶಿಲ್ಪ, ಚಿತ್ರ, ನೃತ್ಯ ಇತ್ಯಾದಿಗಳು ಮಾತಿನ ನೆರವಿಲ್ಲದೆ ರಚಿಸಲ್ಪಡುವುವು ಎಂಬಂತಹ ವಿವರಗಳು ಇಲ್ಲಿವೆ. ಜಡವಾದ ಪಾಷಾಣದಲ್ಲಿ ಪ್ರೇಮ, ಶೌರ್ಯ, ಕರುಣೆ, ಭಯ ಮುಂತಾದ ಭಾವನೆಗಳನ್ನು ತೋರಿಸುವುದು ಸುಲಭವಲ್ಲ. ಚಿತ್ರಕಾರನಗೆ ರೇಖೆ ಮತ್ತು ಬಣ್ಣಗಳು ಈ ಕೆಲಸವನ್ನು ಮಾಡಲು ನೆರವು ಕೊಡಬಹುದು. ಅದೇ ರೀತಿಯಲ್ಲಿ ಶಿಲ್ಪಿಯು ತನ್ನ ಕೃತಿಯಲ್ಲಿ ಉಳಿಯ ಹೊಡೆತಗಳಿಂದ ಭಾವನೆಗಳನ್ನು ತುಂಬಬಹುದು. ಇವೆಲ್ಲ ಕ್ರಮಗಳು ಕಲಾಕಾರನ ಕೌಶಲವೆಂದರೆ ಆತನ ಸಿದ್ಧಿಗೆ ಬೇಕಾಗಿರುವುದು ಪಾರಂಪರಿಕ ಶಾಸ್ತ್ರಗಳ ತಿಳಿವು. ಈ ಎಲ್ಲ ಅಂಶಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಕಲಾವಿದ ಕೃತಿ ರಚಿಸಬೇಕಾಗುತ್ತದೆ. ಸಂಬಂಧಿಸಿದ ಕಲಾ ಶಾಸ್ತ್ರಗಳಲ್ಲದೆ ವೇದ, ಉಪನಿಷತ್ತು, ಆಗಮಶಾಸ್ತ್ರ, ಕಾವ್ಯ, ಪುರಾಣಗಳಂತಹ ಪ್ರಾಚೀನ ಪ್ರಮುಖ ಕೃತಿಗಳ ಜ್ಞಾನವನ್ನು ಕಲಾವಿದ ಅರಿತುಕೊಂಡಿರಬೇಕು ಎನ್ನುವಂತಹ ವಿಷಯಗಳು ಈ ಮೂರನೆಯ ಸಂಪುಟದಲ್ಲಿ ಕಂಡುಬರುತ್ತವೆ. ಇದರಲ್ಲಿ ಒಟ್ಟು ೧೪೪ ರೇಖಾ ಚಿತ್ರಗಳಿವೆ.

ನಾಲ್ಕನೆಯ ಸಂಪುಟವು ದೇವಾಲಯ ನಿರ್ಮಾಣದ ಕಲಾ ಕೌಶಲವನ್ನು ಕುರಿತಾಗಿ ಹೆಚ್ಚಿನ ವಿವರ ನೀಡುತ್ತದೆ. ಇದರಲ್ಲಿ ಆಲಯಾಧಿಕರಣ ಕಾಂಡ, ಗರ್ಭಗೃಹ ಪದವಿನ್ಯಾಸ, ನವಗ್ರಹಗಳು, ಅಷ್ಟ ದಿಕ್ಪಾಲಕರು, ಆವರಣ ದೇವತೆಗಳು, ಆಗಮದ ಪ್ರಕಾರ ವೈಷ್ಣವ ದೇವಾಲಯದ ನಿರ್ಮಾಣ, ಮುಂತಾದ ವಿವರಗಳಿವೆ. ಜೊತೆಗೆ ಸಂಬಂಧಿಸಿದ ಚಿತ್ರಗಳಿದ್ದು, ಸೂರ್ಯದೇವ, ಚಂದ್ರ, ಕುಜ, ಬುಧ, ಬೃಹಸ್ಪತಿ, ಶುಕ್ರ, ಶನಿ, ರಾಹು, ಕೇತು, ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಮುಂತಾದ ದೇವತೆಗಳ ಚಿತ್ರಗಳಿವೆ.

ಐದನೆಯ ಸಂಪುಟವು ಮುಖ್ಯವಾಗಿ ಚಿತ್ರಶಿಲ್ಪಗಳ ಅಳತೆ, ಪ್ರಮಾಣ, ತಾಳಮಾನಗಳ ಕುರಿತಾಗಿ ವಿವರ ನೀಡುತ್ತದೆ. ಯಾವ ದೇವತೆಯ ಶಿಲ್ಪವನ್ನು ಯಾವ ತಾಳಮಾನದಲ್ಲಿ ನಿರ್ಮಿಸಬೇಕು, ತಲೆ, ಕೈಕಾಲು, ದೇಹ ಮತ್ತು ವಿವಿಧ ಅಂಗಾಂಗಗಳು ಎಷ್ಟು ಪ್ರಮಾಣದಲ್ಲಿರಬೇಕು ಎನ್ನುವ ಮಾಹಿತಿಯನ್ನು ನೀಡುತ್ತದೆ. ಈ ಅಂಶಗಳು ಸಾಂಪ್ರದಾಯಿಕ ಚಿತ್ರರಚನೆಗೂ ಸಂಬಂಧ ಪಡುತ್ತವೆ.

ಈ ಸಂಪುಟದಲ್ಲಿ ಮಾನಾಧಿಕರಣ ಸರ್ವತಾಲ ವಿಭಾಗ, ದ್ರವ್ಯ ಭೇದ, ವೃಕ್ಷ ಸಂಗ್ರಹಣ, ಶೂಲಸ್ಥಾಪನಾ ವಿಧಾನ, ರಜ್ಜುಬಂಧನ ವಿಧಾನ, ಮೃತ್ ಸಂಸ್ಕಾರ ವಿಧಾನಗಳನ್ನು ಹೇಳಲಾಗಿದೆ. ಜೊತೆಗೆ ಸಂಬಂಧಿಸಿದ ಚಿತ್ರಗಳಲ್ಲಿ ಮಧ್ಯಮ ದಶತಲಾಸ್ತ್ರೀ, ಊರ್ಧ್ವಸ್ತ್ರೀ, ಮಧ್ಯಮ ದಶತಲಾ ಪುರುಷ, ಮಧ್ಯಮ ದಶತಾಲ ಪುರುಷ, ಅಧಮ ದಶತಾಲ ಸ್ತ್ರೀ–ಪುರುಷರು, ಉತ್ತಮ, ಮಧ್ಯಮ, ಅಧಮ, ಪಂಚತಾಲದವರೆಗಿನ ಸ್ತ್ರೀ–ಪುರುಷರು, ಉತ್ತಮ ಚತುಸ್ತಾಲ, ಮಧ್ಯಮ ಮತ್ತು ಅಧಮ ಚತುಸ್ತಾಲ, ಕಿನ್ನರ ಮತ್ತು ರುದ್ರ ಹೀಗೆ ಅನೇಕ ಚಿತ್ರಗಳಿವೆ.

ಹೀಗೆ ಒಟ್ಟು ಐದು ಸಂಪುಟಗಳಲ್ಲಿ ಸಂಪಾದನೆಗೊಂಡಿರುವ ಶ್ರೀ ಬ್ರಾಹ್ಮೀಯ ಚಿತ್ರಕರ್ಮ ಶಾಸ್ತ್ರಂ ಎಂಬ ಈ ಕೃತಿಯು ಮೂಲವಾಗಿ ಶಿಲ್ಪಶಾಸ್ತ್ರಕ್ಕೆ ಸಂಬಂಧ ಪಟ್ಟಿದ್ದರೂ ಚಿತ್ರಕಲೆಯ ಬಗೆಗೆ ಹಲವಾರು ವಿವರಗಳು ಸಾಂದರ್ಭಿಕವಾಗಿ, ಹೇಳಲ್ಪಟ್ಟಿವೆ. ಹಾಗಾಗಿ ಇದು ಶಿಲ್ಪ ಮತ್ತು ಚಿತ್ರಕಲೆ ಎರಡೂ ಕ್ಷೇತ್ರಕ್ಕೆ ಉಪಯುಕ್ತ ಗ್ರಂಥವಾಗಿದೆ.

**ಸೌಗಂಧಿಕಾ ಪರಿಣಯ :**

ಮೈಸೂರು ಮಹಾರಾಜರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರ್‌ರಿಂದ (೧೭೯೪–೧೮೬೮) ರಚಿಸಲ್ಪಟ್ಟ ಈ ಗ್ರಂಥವನ್ನ ಎಚ್.ಎಸ್.ಶ್ರೀಮತಿಯವರು ಸಂಪಾದನೆ ಮಾಡಿದ್ದಾರೆ.[೮] ಮೈಸೂರು ಸಂಸ್ಥನದಲ್ಲಿಯೇ ರಚನೆಯಾದ ಶ್ರೀತತ್ವನಿಧಿ ಎಂಬ ಗ್ರಂಥವು ಸಂಗೀತಕ್ಕೆ ಸಂಬಂಧಿಸಿದ್ದು ಅದರಲ್ಲಿ ರಾಗಮಾಲಾ ಚಿತ್ರಗಳು ರಚನೆಯಾಗಿರುವುದನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು. ಆದರೆ ಶ್ರೀತತ್ವನಿಧಿ ಗ್ರಂಥಕ್ಕಿಂತಲೂ ಹೆಚ್ಚಿನ ಚಿತ್ರಗಳನ್ನು ಈ ಕೃತಿಯು ಹೊಂದಿದೆ. ಗ್ರಂಥದ ಮೂಲ ಬರವಣಿಗೆ ಮತ್ತು ಸಂಬಂಧಿಸಿದ ಚಿತ್ರಗಳು ಕಲ್ಲಚ್ಚಿನ ಪ್ರತಿಯಲ್ಲಿ ದೊರಕಿವೆ. ಅವುಗಳನ್ನು ವಿಶ್ಲೇಷಣೆ ಮಾಡಿ ಪ್ರಕಟಿಸಲಾಗಿದೆ.

ಸೌಗಂಧಿಕಾ ಪರಿಣಯವು ಒಂದು ಆಕರ್ಷಕ ಶೈಲಿಯ ಗದ್ಯ ಕೃತಿಯಾಗಿದ್ದು, ಸೌಗಂಧಿಕಾ ದೇವಿಯು ಸುಗಂಧರಾಜನ್ನು ವರಿಸುವ ಕಥೆಯು ಇಲ್ಲಿದೆ. ಕಥೆಯ ಹಂದರವು ಅತ್ಯಂತ ವಿಸ್ತಾರವಾಗಿದ್ದು ೩೬ ಆಶ್ವಾಸಗಳನ್ನು (ಅಧ್ಯಾಯ) ಹೊಂದಿದೆ. ಕಥಾ ನಿರೂಪಣೆಯಲ್ಲಿ ಸಾಂದರ್ಭಿಕವಾಗಿ ಚಿತ್ರಗಳನ್ನು ರಚನೆ ಮಾಡಲಾಗಿದೆ. ಶ್ರೀ ತತ್ವನಿಧಿಯಲ್ಲಿರುವ ಚಿತ್ರಗಳಿಗಿಂತ ಉತ್ತಮ ಮಟ್ಟದ ಚಿತ್ರಗಳು ಇದರಲ್ಲಿವೆ. ಈ ಗ್ರಂಥದಲ್ಲಿ ಒಟ್ಟು ೬೫೪ ಚಿತ್ರಪಟಗಳಿದ್ದು, ಚಿತ್ರಗಳ ಬಳಿಯಲ್ಲಿಯೇ ಸಂಬಂಧಿಸಿದ ವಿವರಣೆಯನ್ನೂ ಬರೆಯಲಾಗಿದೆ. ಇದರಲ್ಲಿರುವ ಒಟ್ಟು ಮೂವತ್ತಾರು ಆಶ್ವಾಸಗಳಲ್ಲಿ ೨೬ ಆಶ್ವಾಸಗಳು ಚಿತ್ರಗಳನ್ನು ಹೊಂದಿದ್ದರೆ, ಇನ್ನುಳಿದ ಹತ್ತು ಆಶ್ವಾಸಗಳಲ್ಲಿ ಚಿತ್ರಗಳಿಲ್ಲ. ಚಿತ್ರಗಳಿಲ್ಲದ ೧೦ ಆಶ್ವಾಸಗಳನ್ನು ಬೇರೆ ಕಡೆಯಿಂದ ಸಂಗ್ರಹಿಸಲಾಗಿದೆ ಎಂಬುದಾಗಿ ಸಂಪಾದಕರೇ ಹೇಳಿಕೊಂಡಿದ್ದಾರೆ.

ಸೌಗಂಧಿಕಾ ಪರಿಣಯ ಗ್ರಂಥದಲ್ಲಿರುವ ಚಿತ್ರಗಳು ರೇಖಾವಿನ್ಯಾಸ ಮತ್ತು ಸಂಯೋಜನೆಯ ದೃಷ್ಟಿಯಿಂದ ಉತ್ಕೃಷ್ಟ ಮಟ್ಟದ್ದಾಗಿವೆ. ಹಾಗಾಗಿ ಚಿತ್ರಕಲೆಯ ಹಿನ್ನೆಲೆಯಲ್ಲಿ ಈ ಕೃತಿಯು ಹೆಚ್ಚು ಮಹತ್ವ ಪಡೆದುಕೊಳ್ಳುತ್ತದೆ. ಇದರಲ್ಲಿರುವ ಚಿತ್ರಗಳ ವಿವರ ಹೀಗಿದೆ. ಒಂದನೆಯ ಆಶ್ವಾಸವು ದೇವಸ್ತುತಿಯಾಗಿದ್ದು ಅಲ್ಲಿ ಚಿತ್ರಗಳನ್ನು ರಚನೆಮಾಡಿಲ್ಲ. ಆದರೆ ಎರಡನೆಯ ಆಶ್ವಾಸದಿಂದ ಚಿತ್ರಗಳನ್ನು ಬರೆಯಲಾಗಿದೆ. ಎರಡನೆಯ ಆಶ್ವಾಸದಲ್ಲಿ ೧೪, ಮೂರನೆಯದರಲ್ಲಿ ೨, ನಾಲ್ಕರಲ್ಲಿ ೪೬, ಐದರಲ್ಲಿ ೨೯, ಆರರಲ್ಲಿ ೧೯, ಏಳರಲ್ಲಿ ೨೨, ಎಂಟರಲ್ಲಿ ೬, ಒಂಭತ್ತರಲ್ಲಿ ೪೦, ಹತ್ತನೇ

೮. ಎಚ್.ಎಸ್.ಶ್ರೀಮತಿ : ಸೌಗಂಧಿಕಾ ಪರಿಣಯ : (ಸಂ) : ಸಾಹಿತ್ಯ ಅಕಾಡೆಮಿ ನವದೆಹಲಿ–೨೦೦೪

ಆಶ್ವಾಸದಲ್ಲಿ ೪೦ ಚಿತ್ರಪಟಗಳಿವೆ. ಅದೇ ರೀತಿ ಹನ್ನೊಂದರಲ್ಲಿ ೨೨, ಹನ್ನೆರಡರಲ್ಲಿ ೨೫, ಹದಿಮೂರರಲ್ಲಿ ೩೭, ಹದಿನಾಲ್ಕರಲ್ಲಿ ೧೫, ಹದಿನೈದರಲ್ಲಿ ೩೭, ಹದಿನಾರರಲ್ಲಿ ೧೦, ಹದಿನೇಳರಲ್ಲಿ ೨೨, ಹದಿನೆಂಟರಲ್ಲಿ ೪೫, ಹತ್ತೊಂಭತ್ತರಲ್ಲಿ ೨೫, ಇಪ್ಪತ್ತರಲ್ಲಿ ೨೫, ಇಪ್ಪತ್ತೊಂದರಲ್ಲಿ ೫೨, ಇಪ್ಪತ್ತೆರಡಲ್ಲಿ೧೫, ಇಪ್ಪತ್ತಮೂರರಲ್ಲಿ ೨೨, ಇಪ್ಪತ್ತ ನಾಲ್ಕರಲ್ಲಿ ೧೨, ಇಪ್ಪತ್ತೈದರಲ್ಲಿ ೩೦ ಹಾಗೂ ಇಪ್ಪತ್ತಾರರಲ್ಲಿ ೨ ಚಿತ್ರಪಟಗಳಿವೆ.

ವಿಷಯಕ್ಕನುಸಾರವಾಗಿರುವ ಇಲ್ಲಿನ ಚಿತ್ರಗಳಲ್ಲಿ ವೈವಿಧ್ಯತೆ ಕಂಡು ಬರುತ್ತದೆ. ಸುಗಂಧರಾಜ ಮತ್ತು ಸೌಗಂಧಿಕಾ ದೇವಿಯರ ಭೇಟಿ, ಪ್ರಣಯ, ಇಂದ್ರಲೋಕದ ಸನ್ನಿವೇಶ, ಇಬ್ಬರೂ ಬೇರೆಯಾಗುವುದು, ದೇವಮಾನವರ ಕೃಪೆಯಿಂದ ಒಂದಾಗುವುದು, ಗಾಂಧರ್ವ ರೀತಿಯಲ್ಲಿ ವಿವಾಹವಾಗುವುದು, ರಾಜನ ಆಸ್ಥಾನದೃಶ್ಯ, ಬೇಟೆಯ ದೃಶ್ಯಗಳು, ಆನೆ, ಹುಲಿ, ಸಿಂಹ, ಕುದುರೆ ಮುಂತಾದ ವೈವಿಧ್ಯ ಪ್ರಾಣಿಗಳು, ಪಕ್ಷಿ ಸಂಕುಲಗಳು, ಸಸ್ಯ ಪ್ರಬೇಧಗಳು, ಹೀಗೆ ಹಲವಾರು ವಿಷಯಗಳಿಗೆ ಸಂಬಂಧಿಸಿದ ಚಿತ್ರಗಳು ಇದರಲ್ಲಿವೆ.ಈ ಗ್ರಂಥವು ಕಥಾ ನಿರೂಪಣೆಯ ವಿಷಯ ಹೊಂದಿದ್ದರೂ ಚಿತ್ರಕಲೆಯ ದೃಷ್ಟಿಯಿಂದ ಹೆಚ್ಚಿನ ಮಹತ್ವ ಪಡೆದುಕೊಳ್ಳುತ್ತದೆ ಎಂಬುದಾಗಿ ಸಂಪಾದಕರೆ ಹೇಳಿಕೊಂಡಿದ್ದಾರೆ. ಈ ಮಾತು ನಿಜವೆಂದು ಒಪ್ಪಬಹುದಾಗಿದೆ. ಪ್ರಾಚೀನ ಚಿತ್ರಕಲೆಯ, ಅದರಲ್ಲೂ ಮೈಸೂರು ಚಿತ್ರಕಲೆಯ ಬಗೆಗಿನ ವಿವರಗಳು ಈ ಕೃತಿಯಿಂದ ತಿಳಿದುಬರುತ್ತವೆ.

ಹೀಗೆ ಪ್ರಾಚೀನ ಸಂಸ್ಕೃತ ಸಾಹಿತ್ಯ ಕೃತಿಗಳ ಅನುವಾದ ಸಾಹಿತ್ಯದಲ್ಲಿ ಎಂಟು ಗ್ರಂಥಗಳನ್ನು ಪರಿಗಣಿಸಲಾಗಿದೆ. ಇದರಲ್ಲಿ ಕಶ್ಯಪಶಿಲ್ಪಶಾಸ್ತ್ರ, ಬ್ರಾಹ್ಮೀಚಿತ್ರಕರ್ಮಶಾಸ್ತ್ರ ಎಂಬ ಎರಡು ಕೃತಿಗಳು ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ್ದರೆ, ವಿಷ್ಣುಧರ್ಮೋತ್ತರ ಪುರಾಣ, ಶಿವತತ್ವರತ್ನಾಕರ, ಮಾನಸೋಲ್ಲಾಸ ಈ ಮೂರು ಗ್ರಂಥಗಳು ವಿಶ್ವಕೋಶಮಾದರಿಯಲ್ಲಿವೆ. ಶ್ರೀತತ್ವನಿಧಿ ಎಂಬುದು ಸಂಗೀತಶಾಸ್ತ್ರಕ್ಕೆ ಸಂಬಂಧಿಸಿದ್ದು, ಕಾಮಶಾಸ್ತ್ರ ಕಾಮಕಲೆಗೆ ಒಳಪಟ್ಟಿದೆ. ಸೌಂಗಂಧಿಕಾ ಪರಿಣಯವು ಕಥಾಹಿನ್ನೆಲೆಯ ಕೃತಿಯಾಗಿದೆ. ಈ ಎಲ್ಲ ಕೃತಿಗಳು ಸಾಂದರ್ಭಿಕವಾಗಿ ಚಿತ್ರಕಲೆಯ ಅಂಶಗಳನ್ನು ಒಳಗೊಂಡಿವೆ. ಅಂತಹ ಸಂಗತಿಗಳನ್ನು ಮೇಲೆ ವಿವೇಚಿಸಲಾಗಿದೆ.

**ಬ. ಇಂಗ್ಲೀಷ ಮತ್ತು ಇತರ ಭಾಷೆಯ ಸಾಹಿತ್ಯ ಕೃತಿಗಳ ಅನುವಾದ ಸಾಹಿತ್ಯ :**

ಕಲಾತತ್ವ ಕಲೆ ಎಂಬುದು ಹೇಗೆ ವ್ಯಾಪಕತ್ವವನ್ನು ಹೊಂದಿದೆಯೋ ಕಲಾತತ್ವವೂ ಸಹಿತ ಅನುಭವ ಗಮ್ಯ ಹಿನ್ನೆಲೆಯಲ್ಲಿ ವಿಶಾಲಹರವು ಪಡೆದುಕೊಂಡಿದೆ. ಕಲೆ, ಕಲಾಕೃತಿ, ರಚನಾಕಾರ ಮತ್ತು ಸಹೃದಯ ಇವುಗಳ ಸಹಸಂಬಂಧಗಳು, ಮನೋಭೂಮಿಕೆಗಳು, ಆಯಾ ನೆಲೆಯಲ್ಲಿ ವಿಶ್ಲೇಷಣೆಗೊಳಪಡಿಸಿದಾಗ ಕುತೂಹಲಕರವಾದ ಸಂಗತಿಗಳು ಹೊರಹೊಮ್ಮುತ್ತವೆ. ಪ್ರಸ್ತುತ ಕಲಾತತ್ವ ಎಂಬ ಕೃತಿಯನ್ನು ಸಿ.ಪಿ.ಕೃಷ್ಣಕುಮಾರ ಅನುವಾದ ಮಾಡಿದ್ದು[೯] ಇದರಲ್ಲಿ ಇಂತಹ ಅನೇಕ ವಿಚಾರಗಳು ಚರ್ಚಿಸಲ್ಪಟ್ಟಿವೆ. ಚಿಕ್ಕದಾದ ಈ ಕೃತಿಯಲ್ಲಿ ಕಲೆ, ಕಲಾತತ್ವ, ಅದರ ಸ್ವರೂಪ, ಸೌಂದರ್ಯಾನುಭವ, ಕಲಾಕೃತಿಯು ರಚನಾಕಾರ ಮತ್ತು ಸಹೃದಯನ ಮೇಲೆ ಉಂಟುಮಾಡುವ ಪರಿಣಾಮಗಳು, ಅವುಗಳ ಭಿನ್ನತೆಗಳು ಮುಂತಾದ ವಿಷಯಗಳನ್ನು ಸ್ಥೂಲವಾಗಿ ವಿವೇಚಿಸಲಾಗಿದೆ. ಜೊತೆಗೆ ಕಲೆ ಮತ್ತು ಕಲಾಕೃತಿಯೊಂದು ಸಮಾಜಮುಖಿಯಾಗುವ ವಿಭಿನ್ನ ದೃಷ್ಟಿಕೋನಗಳನ್ನು ಇಲ್ಲಿ ವಿಷದಪಡಿಸಲಾಗಿದೆ.

---

೯. ಸಿ.ಪಿ.ಕೃಷ್ಣಕುಮಾರ್ : ಕಲಾತತ್ವ : (ಅನು) : ಸಹ್ಯಾದ್ರಿ ಪ್ರಕಾಶನ, ಕುವೆಂಪು ವಿದ್ಯಾವರ್ಧಕ ಟ್ರಸ್ಟ ಮೈಸೂರು-೧೯೭೬.

ಕಲೆಯ ಮೂಲತತ್ವ ಸೌಂದರ್ಯ ಮತ್ತು ಸತ್ಯದ ಅನ್ವೇಷಣೆಯಲ್ಲಿದ್ದರೂ ಕಾಲ ಮತ್ತು ಸಂದರ್ಭಗಳ ದೆಸೆಯಿಂದಾಗಿ ಕಲೆಗಾಗಿ ಕಲೆ, ಸಮಾಜಕ್ಕಾಗಿ ಕಲೆ, ಬದುಕಿಗಾಗಿ ಕಲೆ ಎನ್ನುವಂತಹ ಅಭಿಪ್ರಾಯಗಳು ಹುಟ್ಟಿಕೊಂಡಿರುವುದು ಕಂಡುಬರುತ್ತದೆ. ಆಧುನಿಕ ಸಂದರ್ಭದಲ್ಲಂತೂ ಕಲೆಯ ಆಶಯ ಮತ್ತು ಪರಿಣಾಮಗಳ ಬಗೆಗೆ ಕುತೂಹಲಕರವಾದ ಚರ್ಚೆಗಳು ನಡೆದಿವೆ. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಕಲಾತತ್ವದ ಬಗ್ಗೆ ಬಹು ಗಂಭೀರ ಸಂಗತಿಗಳನ್ನು ನಾವಿಂದು ಪುನಹ ರೂಪಿಸುವ ಅವಶ್ಯಕತೆ ಇದೆ. ಇಂತಹ ಹಲವಾರು ಸಂಗತಿಗಳ ಬಗೆಗೆ ಈ ಕೃತಿಯು ಬೆಳಕು ಚೆಲ್ಲುತ್ತದೆ.

**ರಸರೇಖೆ :**

ಅಂತರಾಷ್ಟ್ರೀಯ ಖ್ಯಾತ ಕಲಾವಿದರ ಬಗ್ಗೆ ಇರುವ ಈ ಪುಸ್ತಕವನ್ನು ಮೂಲವಾಗಿ ತೆಲುಗಿನಲ್ಲಿ ಸಂಜೀವನ್ ರಚನೆ ಮಾಡಿದ್ದಾರೆ. ಅದರ ಕನ್ನಡ ಅನುವಾದವನ್ನು ಹರಿಹರಪ್ರಿಯ ಮಾಡಿದ್ದಾರೆ.[೧೦] ಇದರಲ್ಲಿ ಜಾಗತಿಕ ಕಲಾಕ್ಷೇತ್ರದಲ್ಲಿ ಹೆಸರು ಮಾಡಿದ ೧೮ ಜನ ಕಲಾವಿದರ ಸಾಧನೆ ಸಿದ್ಧಿಗಳು, ಪ್ರಶಸ್ತಿ ಬಹುಮಾನಗಳಂತಹ ಸಂಗತಿಗಳನ್ನು ತಿಳಿಸಲಾಗಿದೆ. ಜೊತೆಗೆ ಅವರ ಕಲೆ, ಕಲಾಕೃತಿ, ರಚನಾ ವಿಧಾನ, ಶೈಲಿ, ತಂತ್ರಗಾರಿಕೆ, ಪ್ರದರ್ಶನ ಮುಂತಾದ ಅಂಶಗಳನ್ನು ಸ್ಥೂಲವಾಗಿ ಬಿಂಬಿಸಲು ಪ್ರಯತ್ನಿಸಲಾಗಿದೆ. ಈ ಪುಸ್ತಕದಲ್ಲಿ ಪರಿಚಯಿಸಿರುವ ೧೮ ಜನ ಕಲಾವಿದರಲ್ಲಿ ಪ್ರಮುಖರಾದವರೆಂದರೆ, ರವೀಂದ್ರನಾಥ ಟ್ಯಾಗೋರ್, ಅಮೃತಾ ಶೇರ್‌ಗಿಲ್, ಅಸಿತ್‌ಕುಮಾರ್ ಹಲ್ದಾರ್, ಜಾರ್ಜಕೀಟ್, ಹಿರೇಕ್ಷಿಗೆ, ಗಗನೇಂದ್ರನಾಥ ಟ್ಯಾಗೋರ್, ಬ್ರೂಸ್ಟರ್ ದಂಪತಿಗಳು, ಲಾಮಾಗೋವಿಂದ, ಭಗೀರಥಿ, ರೆಹಮಾನ್ ಚುಗತಾಯ್, ಅವನೀಂದ್ರನಾಥ ಟ್ಯಾಗೋರ ನಿಕೋಲಸ್ ರೀರಿಕ್ , ಸಾಸ್ ಬ್ರನ್ನರ್, ನಂದಲಾಲ್ ಬೋಸ್, ಪಾಬ್ಲೋ ಪಿಕಾಸೋ, ಬಿರೇಶ್ವರ ಸೇನ್ ಅವರಾಗಿದ್ದಾರೆ, ಈ ಕಲಾವಿದರ ಕುರಿತು ವಿವರಗಳು ಇಲ್ಲಿ ಸಂಗ್ರಹಗೊಂಡಿವೆ. ಈ ಪುಸ್ತಕದಲ್ಲಿ ಯಾವುದೇ ಕಲಾವಿದರ ಭಾವಚಿತ್ರವಾಗಲಿ ಅಥವಾ ಕಲಾಕೃತಿಯ ಛಾಯಾಚಿತ್ರವಾಗಲಿ ಮುದ್ರಿತಗೊಂಡಿಲ್ಲ. ಕೇವಲ ಬರವಣಿಗೆ ಮಾತ್ರ ಇದೆ.

ಈ ಬರಹಗಳಲ್ಲಿ ರವೀಂದ್ರನಾಥ ಟ್ಯಾಗೋರ್ ಅವರ ಪೆನ್ನ್‌ಗಳಿಂದ ರಚಿಸಿದ ಚಿತ್ರಗಳು, ಅಮೃತಾ ಶೇರ್‌ಗಿಲ್‌ಳ ಗ್ರಾಮೀಣ ಬದುಕಿನ ಚಿತ್ರಗಳು, ಗಗನೇಂದ್ರನಾಥ ಟ್ಯಾಗೋರರ ಕ್ಯೂಬಿಜಂ ಚಿತ್ರಗಳು, ಅಬನೀಂದ್ರನಾಥ ಟ್ಯಾಗೋರರ ಬಂಗಾಳಿ ಶೈಲಿಯ ಆಧುನಿಕ ಶೈಲಿಯ ಕೃತಿಗಳು, ನಂದಲಾಲ್ ಬೋಸರ ಜನಪದ ಹಿನ್ನೆಲೆ ಮತ್ತು ಪಾರಂಪರಿಕ ಲಕ್ಷಣಗಳ ಚಿತ್ರಗಳು, ಪಾಬ್ಲೋ ಪಿಕಾಸೋನ ಕ್ಯೂಬಿಜಂ ಚಿತ್ರಗಳು, ನಿಕೋಲಸ್ ರೋರಿಚ್‌ನ ಹಿಮಾಲಯದ ಚಿತ್ರಗಳು, ಹೀಗೆ ಆಯಾ ಕಲಾವಿದರ ಪ್ರತ್ಯೇಕ ಚಿತ್ರಶೈಲಿಯ ವಿವೇಚನೆ ಮಾಡಲಾಗಿದೆ.

**ಕಲೆಯ ಅರ್ಥ :**

ವಿಶ್ವಕವಿ ರವೀಂದ್ರನಾಥ ಟ್ಯಾಗೋರರು ಕಲೆಯ ಕುರಿತು ೧೯೨೧ರಲ್ಲಿ ಬರೆದ ಇಂಗ್ಲೀಷ ಪ್ರಬಂಧ ಒಂದರ ಕನ್ನಡ ಅನುವಾದವೇ ಪ್ರಸ್ತುತ ಕೃತಿಯಾಗಿದೆ. ಇದನ್ನು ಎಚ್.ಎಸ್.ಶ್ರೀಮತಿಯವರು ಕನ್ನಡಿಸಿದ್ದಾರೆ.[೧೧] ರವೀಂದ್ರನಾತರು ಶ್ರೇಷ್ಟಕವಿ, ಬಂಗಾಳಿ ವಾಙ್ಮಯದಲ್ಲಿ ಹೊಸದೊಂದು ಚೇತನ ಅವರಿಂದ ಮೂಡಿಬಂದಿತು.

೧೦. ಹರಿಹರಪ್ರಿಯ : (ಅನು) : ರಸರೇಖೆ : ಮೈಯೂರ ಪ್ರಕಾಶನ, ಬೆಂಗಳೂರು-೧೯೭೬

೧೧. ಎಚ್.ಎಸ್.ಶ್ರೀಮತಿ : ಕಲೆಯ ಅರ್ಥ : (ಅನು) : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೮೮

ತಮ್ಮ ಇಳಿ ವಯಸ್ಸಿನಲ್ಲಿ ಚಿತ್ರರಚನೆಯಲ್ಲಿ ತೊಡಗಿ, ಅದರಲ್ಲಿಯೂ ಸಾಕಷ್ಟು ಪ್ರಸಿದ್ಧಿಯನ್ನು ಪಡೆದರು. ಮೇಲಾಗಿ ನಾಡಿನ ಹಿರಿಯ ಕಲಾವಿದರಾಗಿದ್ದ ಅಬನೀಂದ್ರನಾಥ ಟ್ಯಾಗೋರ, ಗಗನೇಂದ್ರನಾಥ ಟ್ಯಾಗೋರ್, ನಂದಲಾಲ್ ಬಸು ಇವರ ನಿಕಟ ಸಂಪರ್ಕ ಹೊಂದಿದ್ದರು. ಮೇಲಾಗಿ ಆನಂದಕುಮಾರಸ್ವಾಮಿಯಂತಹ ಕಲಾವಿಮರ್ಶಕರು ಸ್ನೇಹಿತರಾಗಿದ್ದರು. ಹಾಗಾಗಿ ಸ್ವಾಭಾವಿಕವಾಗಿಯೇ ರವೀಂದ್ರರು ಕಲೆಯ ಬಗ್ಗೆ ಬರೆದಾಗ ಅದು ಶ್ರೇಷ್ಠವೂ, ಸತ್ವಪೂರ್ಣವೂ ಆಗಿರುತ್ತದೆ.

ಇದರಲ್ಲಿ ರವೀಂದ್ರರು ಕಲೆಯ ಕುರಿತು ಬರೆಯುವಾಗ ಆಧ್ಯಾತ್ಮದ ಹಿನ್ನೆಲೆ ಮತ್ತು ವೇದ ಉಪನಿಷತ್ತುಗಳ ಉಲ್ಲೇಖಗಳನ್ನು ಕೊಡುತ್ತ ಹೋಗುತ್ತಾರೆ. ಜೊತೆಗೆ ಕಲೆ ಎಂದರೇನು? ಎನ್ನುವುದಕ್ಕೆ ವ್ಯಾಖ್ಯಾನಗಳನ್ನು ನೀಡುತ್ತಾರೆ. ಬೀಜದಿಂದ ತೀರ ಭಿನ್ನವೆ ಆದಂತೆ ಇರುವ, ಭವಿಷ್ಯದೆಡೆಗೆ ಸಾಗುವ, ಪಥದಲ್ಲಿ ಸತ್ಯದ ಅಗೋಚರ ಕಿರಣಗಳನ್ನು ಕಂಡುಕೊಳ್ಳುತ್ತ ಸಾಗುವುದೇ ಕಲೆ. ಎಂದಿಗೂ ಮುಗಿಯದ ಮಹಾ ವೈಭವವನ್ನು ತನ್ನಲ್ಲಿಯೇ ಹುದುಗಿಸಿಕೊಂಡ ಸೃಷ್ಟಿಯ ಸ್ಫೂರ್ತಿಯನ್ನು ಕಲೆ ಪ್ರತಿನಿಧಿಸುತ್ತದೆ. ರೀತಿಯಲ್ಲಿ ವೈಯಕ್ತಿಕವಿದ್ದಂತೆ ರಂಜಿಸುವಲ್ಲಿ ಸಾರ್ವತ್ರಿಕವಾಗಿದೆ. ಉತ್ಕೃಷ್ಟತೆಗೆ ಬೇಕಾದ ವಿಶಿಷ್ಟ ಪ್ರಮಾಣಗಳನ್ನು ಅದು ತನ್ನೊಳಗೆ ಅಡಕವಾಗಿಸಿಕೊಂಡಿದೆ. ಹೀಗೆ ವಿವಿಧ ಆಯಾಮಗಳನ್ನು ಕಲೆಯ ಬಗ್ಗೆ ಇಲ್ಲಿ ಕೊಡುತ್ತಾರೆ.

ಪ್ರಸ್ತುತ ಚಿಕ್ಕ ಪುಸ್ತಕವು ದೃಶ್ಯಕಲೆಯ ಬಗ್ಗೆ ಸಮಕಾಲೀನ ಮತ್ತು ಪ್ರಗತಿಪರ ಧೋರಣೆಯನ್ನು ಪ್ರತಿಬಿಂಬಿಸುವ ನಿಟ್ಟಿನಲ್ಲಿ ಮಹತ್ವ ಪಡೆದುಕೊಳ್ಳುತ್ತದೆ. ಮೊದಲು ವಿಶ್ವಭಾರತಿ ಪತ್ರಿಕೆಯಲ್ಲಿ ಪ್ರಕಟವಾದ ಈ ಪ್ರಬಂಧವನ್ನು ಕೇಂದ್ರ ಲಲಿತಕಲಾ ಅಕಾಡೆಮಿಯು ೧೯೬೯ರಲ್ಲಿ ಪ್ರತ್ಯೇಕ ಪುಸ್ತಕವಾಗಿ ಪ್ರಕಟಿಸಿತು. ನಂತರ ೧೯೮೩ರಲ್ಲಿ ಅದರ ಮರು ಪ್ರಕಟಣೆಯಾಯಿತು. ಇದನ್ನು ಕನ್ನಡಕ್ಕೆ ತರುವಾಗ ಎಷ್ಟೋ ಭಾವನಾತ್ಮಕ ವಿಚಾರಗಳು ಮರೆಯಾಗಿರಬಹುದಾದರೂ ಕಲೆಯ ಬಗೆಗಿನ ರವೀಂದ್ರರ ಅಭಿಪ್ರಾಯಗಳು ಇಲ್ಲಿ ಸ್ಪಷ್ಟವಾಗಿ ಮೂಡಿ ಬಂದಿವೆ. ಕನ್ನಡ ಚಿತ್ರಕಲಾ ಸಾಹಿತ್ಯಕ್ಕೆ ಇದೊಂದು ಗಮನಾರ್ಹ ಕೊಡುಗೆಯಾಗಿದೆ.

**ಕೆ.ಎಸ್. ಕುಲಕರ್ಣಿ :**

ಕರ್ನಾಟಕದ ಕಲಾವಿದರಲ್ಲಿ ಅನೇಕರು ರಾಜ್ಯದ ಹೊರಗೆ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡು ಸಮರ್ಥವಾಗಿ ಕೆಲಸನಿರ್ವಹಿಸಿ ರಾಜ್ಯಕ್ಕೆ ಹೆಸರು ತಂದಿದ್ದಾರೆ. ಇಂತವರ ಸಾಲಿನಲ್ಲಿ ಕೆ.ಎಸ್.ಕುಲಕರ್ಣಿಯವರು ಒಬ್ಬರು. ಇವರು ಕರ್ನಾಟಕದಲ್ಲಿ ಹುಟ್ಟಿದರೂ ಇವರ ಕಾರ್ಯಕ್ಷೇತ್ರವು ರಾಜ್ಯದ ಹೊರಗೆ ವಿಸ್ತರಿಸಿಕೊಂಡಿದೆ. ಇವರ ಕುರಿತು ನವದೆಹಲಿಯ ಕೇಂದ್ರ ಲಲಿತಕಲಾ ಅಕಾಡೆಮಿಯು[೧೨] ಪುಸ್ತಕವನ್ನು ಹೊರತಂದಿದೆ.

ಈ ಪುಸ್ತಕವು ಕೆ.ಎಸ್.ಕುಲಕರ್ಣಿಯವರ ಕಲಾಕೃತಿಗಳ ಚಿತ್ರಸಂಪುಟವಾಗಿದೆ. ಕೊನೆಯಲ್ಲಿ ಅವರ ಕಲಾ ಬದುಕಿನ ವಿವರಗಳನ್ನು ಸಂಕ್ಷಿಪ್ತವಾಗಿ ಕೊಡಲಾಗಿದೆ. ಕೆ.ಎಸ್.ಕುಲಕರ್ಣಿಯವರು ೧೯೧೬ ಏಪ್ರಿಲ್ ೭ರಂದು ಕರ್ನಾಟಕದ ಬೆಳಗಾಂವದಲ್ಲಿ ಹುಟ್ಟಿದರು. ೧೯೩೫ರಿಂದ ೪೨ರ ಅವಧಿಯಲ್ಲಿ ಮುಂಬೈನ ಜೆ.ಜೆ.ಕಲಾಶಾಲೆಯಲ್ಲಿ ಕಲೆಯ ಅಧ್ಯಯನ ಪೂರೈಸಿದರು. ೧೯೪೭ರಲ್ಲಿ ದಿಲ್ಲಿಯಲ್ಲಿ 'ಶಿಲ್ಪಚಕ್ರ' ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷರು, ೧೯೪೮ರಲ್ಲಿ ತ್ರಿವೇಣಿ ಕಲಾಸಂಗಮದ ಸ್ಥಾಪಕರೂ ಆಗಿ ಕಾರ್ಯ ನಿರ್ವಹಿಸಿದರು. ೧೯೪೯ರಲ್ಲಿ ಮೊದಲ ಬಾರಿಗೆ ಅಮೇರಿಕಾ ಯಾತ್ರೆ

---

೧೨. ಅತುಲ್ ಭಾರದ್ವಾಜ್ : ಕೆ.ಎಸ್.ಕುಲಕರ್ಣಿ : ಲಲಿತಕಲಾ ಅಕಾಡೆಮಿ, ಹೊಸದೆಹಲಿ– ೧೯೮೮

ಕೈಗೊಂಡ ಕುಲಕರ್ಣಿಯವರು ೧೯೭೩ರಿಂದ ೭೮ರ ಅವಧಿಯಲ್ಲಿ ಕೇಂದ್ರ ಲಲಿತಕಲಾ ಅಕಾಡೆಮಿಯ ಉಪಾಧ್ಯಕ್ಷರಾಗಿ ಕೆಲಸ ಮಾಡಿದರು. ೧೯೭೨ರಿಂದ ೭೮ರ ಅವಧಿಯಲ್ಲಿಯೇ ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಕಲಾವಿಭಾಗದ ಡೀನರಾಗಿ ಮತ್ತು ಉತ್ತರ ಪ್ರದೇಶದ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿಯೂ ಕೆಲಸ ನಿರ್ವಹಿಸಿದರು. ೧೯೬೯-೭೨ ಅವಧಿಯಲ್ಲಿ ನ್ಯೂಯಾರ್ಕಿನ ಕಲಾ ಕಾಲೇಜಿನಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಕೆಲಸ ನಿರ್ವಹಿಸಿದ ಇವರು ೧೯೫೦ ರಿಂದ ೬೭ರ ಅವಧಿಯಲ್ಲಿ ವಿಶ್ವದ ಅನೇಕ ದೇಶಗಳಲ್ಲಿ ಏಕವ್ಯಕ್ತಿ ಕಲಾ ಪ್ರದರ್ಶನಗಳನ್ನು ಏರ್ಪಡಿಸಿದ್ದಾರೆ.

ಸಮಕಾಲೀನ ಕಲೆಯಲ್ಲಿ ತಮ್ಮದೇ ವಿಶಿಷ್ಟ ಛಾಪು ಮೂಡಿಸಿದ ಕುಲಕರ್ಣಿಯವರ ವರ್ಣಚಿತ್ರ ಮತ್ತು ರೇಖಾಚಿತ್ರಗಳನ್ನು ಈ ಸಂಪುಟದಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಜೊತೆಗೆ ಅವರ ಶಿಲ್ಪ ಕಲಾಕೃತಿಗಳನ್ನು ಇದರಲ್ಲಿ ಕೊಟ್ಟಿರುವುದು ಅವರ ಕಲಾ ಬದುಕಿನ ಸ್ಥೂಲ ನೋಟ ಒದಗಿಸಿದಂತಾಗಿದೆ.ಪ್ರಸ್ತುತ ಚಿತ್ರ ಸಂಪುಟದಲ್ಲಿ ವಿವಿಧ ಮಾಧ್ಯಮಗಳಲ್ಲಿ ರಚಿಸಿದ ಕಲಾಕೃತಿಗಳನ್ನು ಕೊಡಲಾಗಿದೆ. ಕ್ಯಾನವಾಸ್ ಮೇಲೆ ತೈಲವರ್ಣ, ಜಲವರ್ಣ, ಕಾಗದದ ಮೇಲೆ, ಲೋಹ ಮತ್ತು ಮರ ಮಾಧ್ಯಮದ ಮೇಲೆ ವಿವಿಧ ವರ್ಣಗಳಿಂದ ಮತ್ತು ಶಾಯಿಯಿಂದ ರಚಿಸಿದ ಕೃತಿಗಳಿವೆ. ಹಾಗೆಯೇ ಕಂಚು, ಹಿತ್ತಾಳೆ ಮತ್ತು ಸಿರಾಮಿಕ್ ಕಲ್ಲಿನ ಶಿಲ್ಪಗಳನ್ನು ಈ ಸಂಪುಟದಲ್ಲಿ ಕೊಡಲಾಗಿದೆ.

ಕುಲಕರ್ಣಿಯವರ ಚಿತ್ರಶೈಲಿ, ವರ್ಣಲೇಪನ ವಿಧಾನ ಪಾಶ್ಚಾತ್ಯ ಕಲಾವಿದ ಹೆನ್ರಿಮಾಟಿಸ್ ಕಲಾಶೈಲಿಯ ಪ್ರಭಾವದಿಂದ ಕೂಡಿದ್ದರೆ, ಇವರ ಕೆಲವು ರೇಖಾಚಿತ್ರಗಳು ಪಾಲ್‌ಕ್ಲೀ ಶೈಲಿಯನ್ನು ಪ್ರತಿನಿಧಿಸುತ್ತವೆ. ಇವರ ಸೂರ್ಯಾಸ್ತ ಕೃತಿಯಲ್ಲಿ ಕೆಂಪು, ಕೇಸರಿ ಬಣ್ಣಗಳನ್ನು ಸಾಂಕೇತಿಕವಾಗಿ ಬಳಸಲಾಗಿದೆ. ಸ್ನಾನ ಮಾಡುತ್ತಿರುವ ಸ್ತ್ರೀಯರ ಕೃತಿಯಲ್ಲಿ ಇಬ್ಬರು ನಗ್ನ ಸ್ತ್ರೀಯರು ಸ್ನಾನ ಮಾಡುತ್ತಿದ್ದಾರೆ. ಒಬ್ಬಳ ಮೈಬಣ್ಣ ಹಸಿರು, ಇನ್ನೊಬ್ಬಳ ಮೈಬಣ್ಣ ನೀಲಿಯಾಗಿದೆ. ಹಿನ್ನೆಲೆಯಲ್ಲಿ ಜೇಡರ ಬಲೆಯಂತೆ ವಿನ್ಯಾಸ ರಚಿಸಲಾಗಿದೆ. ರೇಖಾಂಕನ ಎಂಬ ಕೃತಿಯು ಕಾಗದದ ಮೇಲೆ ಪೆನ್ನಿನಿಂದ ರಚಿಸಿದ ರೇಖಾಚಿತ್ರವಾಗಿದೆ. ಇದರಲ್ಲಿ ಸ್ತ್ರೀಯೋಬ್ಬಳು ನಗ್ನವಾಗಿದ್ದು ವಿರಹ ತಾಪದಿಂದ ಬಳಲುತ್ತಿದ್ದಾಳೆ. ಚಂದ್ರನು ನಗುಮುಖದಿಂದ ವೀಕ್ಷಿಸುತ್ತಿದ್ದಾನೆ. ಈ ಚಿತ್ರ ಸಂಪುಟವು ಕುಲಕರ್ಣಿಯವರ ಕಲಾಶೈಲಿ, ರಚನಾಕ್ರಮ, ಪರಿಕರಗಳು ಮತ್ತು ಕಲಾಕೃತಿಗಳ ಸ್ಥೂಲನೋಟ ಕೊಡುವುದರ ಜೊತೆಗೆ ಸಮಕಾಲೀನ ಕಲೆಯಲ್ಲಿ ಭಾರತದ ಸ್ಥಿತಿಗತಿ, ಆಗುಹೋಗುಗಳು ಮತ್ತು ಇಲ್ಲಿನ ಕಲಾವಿದರು ಸಮಕಾಲೀನ ಕಲೆಗೆ ಹೇಗೆ ಸ್ಪಂದಿಸುತ್ತಾರೆ ಎನ್ನುವ ಸಂಗತಿಗಳನ್ನು ತಿಳಿಸಿಕೊಡುವ ಪ್ರಮುಖ ಪುಸ್ತಕವಾಗಿದೆ.

**ಆಧುನಿಕ ಕಲೆ :**

ಆಧುನಿಕ ಕಲೆಯಲ್ಲಿ ಪಾಲ್‌ಕ್ಲೀ ಕಲಾವಿದನದು ಬಹುದೊಡ್ಡ ಹೆಸರು. ಪಾಶ್ಚಾತ್ಯ ಕಲಾವಲಯದಲ್ಲಿ ಆಧುನಿಕ ಕಲಾಕ್ಷೇತ್ರಕ್ಕೆ ಹೊಸ ಆಯಾಮವನ್ನು ಕೊಟ್ಟಂತೆಯೇ ತನ್ನ ರಚನೆಗಳ ಬಗ್ಗೆ ವಿಮರ್ಶಾತ್ಮಕವಾಗಿ ಬರೆದು ಸಮಾಜಕ್ಕೆ ತಿಳಿಸುವ ಪ್ರಯತ್ನ ಮಾಡಿದ್ದಾನೆ. ಈ ಹಿನ್ನೆಲೆಯಲ್ಲಿ ರಚನೆಯಾದ ಕೃತಿಯು ಪ್ರಸ್ತುತ ಪುಸ್ತಕವಾಗಿದೆ. ಇದನ್ನು ಮೂಲ ಆಂಗ್ಲಭಾಷೆಯಲ್ಲಿ ಸ್ವತಹ ಪಾಲ್‌ಕ್ಲೀ ಬರೆದಿದ್ದು, ಅದರ ಕನ್ನಡ ಅನುವಾದವನ್ನು ಶ್ರೀನಿವಾಸಮೂರ್ತಿ ಮಾಡಿದ್ದಾರೆ.[೧೩] ಈ ಕೃತಿಯು ಕಲೆಯ ಕುರಿತು ಹಲವಾರು ಸಂಗತಿಗಳನ್ನು ತಿಳಿಸಿ ಕೊಡುತ್ತದೆ. ಪಾಲ್‌ಕ್ಲೀ ಸ್ವತಹ ಕಲಾವಿದನಾಗಿರುವುದರಿಂದ ಆತನ ಬರಹಗಳು ಹೆಚ್ಚು ಪರಿಣಾಮಕಾರಿಯಾಗಿರುತ್ತವೆ.

೧೩. ಶ್ರೀನಿವಾಸ ಮೂರ್ತಿ: ಆಧುನಿಕ ಕಲೆ: ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು-೧೯೯೧

ಈ ಪುಸ್ತಕದಲ್ಲಿ ಆತನ ಅನೇಕ ವಿಶಿಷ್ಟ ಶೈಲಿಯ ಚಿತ್ರಗಳನ್ನು ಕೊಡಲಾಗಿದೆ. ತನ್ನ ಭಾವಾಭಿವ್ಯಕ್ತಿಯ ರೂಪುರೇಷೆಗಳೇನು? ಕೃತಿರಚನೆಯ ಹಿನ್ನೆಲೆಯಲ್ಲಿ ತನ್ನ ಆಂತರ್ಯದಲ್ಲಿ ಹುಟ್ಟಿಕೊಳ್ಳುವ ತುಮುಲಗಳೇನು? ಎನ್ನುವುದನ್ನು ತಿಳಿಸಿದ್ದಾನೆ. ಪಾಲ್‌ಕ್ಲೀಯ ಚಿತ್ರಶೈಲಿಯು ಇತರರಿಗಿಂತ ಭಿನ್ನವಾಗಿದ್ದು ಆತನ ಚಿತ್ರದ ಆಕಾರಗಳು ಅಖಂಡವಾಗಿರದೇ ಕಡ್ಡಿ ವಿನ್ಯಾಸದ ಹಾಗೆ ಕಂಡುಬರುತ್ತವೆ. ಇಂತಹ ಶೈಲಿಗೆ ಆತ ಸಮರ್ಥನೆಯನ್ನು ಕೊಡುತ್ತಾನೆ. ಕಲೆಯು ಸಮಾಜ ಮುಖಿಯಾಗುವಲ್ಲಿ ಕಲಾವಿದನ ಪಾತ್ರದಂತೆ ಸಹೃದಯರು ಮತ್ತು ವಿಮರ್ಶಕರ ಪಾತ್ರವೂ ಮುಖ್ಯವಾಗುತ್ತದೆ ಎನ್ನುವದನ್ನು ತಿಳಿಸುತ್ತಾನೆ. ಸೃಜನಶೀಲ ಆಲೋಚನಾ ಕ್ರಮಕ್ಕೆ ಬೇಕಾದ ಪ್ರೇರಣೆ ಪಾಲ್‌ಕ್ಲೀ ಅವನ ವಿಚಾರಗಳಲ್ಲಿದೆ. ಕಲೆಯ ಕುರಿತು ಸಂಕೀರ್ಣವಾದ ವಿಚಾರಗಳನ್ನು ಮನದಟ್ಟು ಮಾಡಿಕೊಡುವಲ್ಲಿ ಪಾಲ್‌ಕ್ಲೀ ವಿಶೇಷವಾದ ಮಾರ್ಗವನ್ನು ತನ್ನ ಬರಹದಲ್ಲಿ ರೂಪಿಸಿಕೊಂಡಿದ್ದಾನೆ. ಇದರಲ್ಲಿ ಪಾಲ್‌ಕ್ಲೀ ರಚಿಸಿದ ೨೪ ಚಿತ್ರಗಳನ್ನು ಮುದ್ರಿಸಿದ್ದಾರೆ. ಶ್ರೀನಿವಾಸಮೂರ್ತಿಯವರು ಈ ಕೃತಿಯನ್ನು ಕನ್ನಡಕ್ಕೆ ಅನುವಾದಿಸುವಾಗ ಮೂಲಕ್ಕೆ ದಕ್ಕೆಬರದಂತೆ, ಸಹಜವಾಗಿ ಓದಿಸಿಕೊಂಡು ಹೋಗುವಂತೆ ಮತ್ತು ಸೂಕ್ತವಾದ ಪಾರಿಭಾಷಿಕ ಪದಗಳನ್ನು ಬಳಸಿ ಪರಿಣಾಮಕಾರಿಯಾಗಿರುವಂತೆ ಕ್ರಮ ವಹಿಸಿದ್ದಾರೆ. ಆಧುನಿಕ ಕಲೆಯ ದೃಷ್ಟಿಯಿಂದ ಇದೊಂದು ಗಮನಾರ್ಹ ಪುಸ್ತಕವಾಗಿದೆ.

**ಆನಂದಕುಮಾರಸ್ವಾಮಿ :**

ಭಾರತೀಯ ಕಲಾ ಸಾಹಿತ್ಯ, ಕಲಾವಿಮರ್ಶೆ, ತತ್ವ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಆನಂದ ಕುಮಾರಸ್ವಾಮಿಯವರದು ಬಹುದೊಡ್ಡ ಹೆಸರು. ಹುಟ್ಟಿದ್ದು ಶ್ರೀಲಂಕಾದಲ್ಲಾದರೂ ಅವರ ಸಾಹಿತ್ಯಕೃಷಿ ಭಾರತದ ವಲಯವನ್ನು ಹೆಚ್ಚಾಗಿ ಪ್ರತಿನಿಧಿಸುತ್ತದೆ. ಅವರೊಬ್ಬ ಶ್ರೇಷ್ಠ ಚಿಂತಕರೆನ್ನುವುದು ಅವರ ವಿಚಾರಧಾರೆಯ ಬರಹಗಳಿಂದ ತಿಳಿದುಬರುತ್ತದೆ. ಹಾಗೆ ನೋಡಿದರೆ ಇ.ಬಿ.ಹ್ಯಾವೆಲ್‌ಗಿಂತ ಮೇಲ್ಮಟ್ಟದಲ್ಲಿ ನಿಲ್ಲುವ ಇವರ ಬರವಣಿಗೆಗಳು ಭಾರತೀಯ ಕಲೆಯ ಒಳತಿರುಳನ್ನು ಬಿಂಬಿಸುವಲ್ಲಿ ಸಫಲವಾಗಿವೆ. ಇಂತಹ ಮೇಧಾವಿಯ ಬಗ್ಗೆ ಇಂಗ್ಲೀಷನಲ್ಲಿ ಬರೆಯಲ್ಪಟ್ಟಿರುವ ಈ ಕೃತಿಯನ್ನು ಕೆ.ಎಸ್.ಶ್ರೀನಿವಾಸಮೂರ್ತಿಯವರು ಕನ್ನಡಕ್ಕೆ ಅನುವಾದಿಸಿದ್ದಾರೆ.[೧೪] ಪ್ರಸ್ತುತ ಕೃತಿಯಲ್ಲಿ ಆನಂದ ಕುಮಾರಸ್ವಾಮಿಯವರ ಬಾಲ್ಯ, ಶಿಕ್ಷಣ ಮತ್ತು ವೃತ್ತಿ ಬದುಕನ್ನು ಸಂಕ್ಷಿಪ್ತದಲ್ಲಿ ಹೇಳಿ, ಅವರ ವಿಚಾರಧಾರೆ ಮತ್ತು ಬರಹಗಳಿಗೆ ಹೆಚ್ಚಿನ ಮಹತ್ವ ನೀಡಲಾಗಿದೆ. ಅವರ ಸಾಹಿತ್ಯ ಕೃತಿಗಳು ಮತ್ತು ವಿಚಾರಧಾರೆಗಳನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸುವ ಪ್ರಯತ್ನ ಇಲ್ಲಿದೆ. ಈ ಕೃತಿ ಒಳಗೊಂಡಿರುವ ವಿಚಾರಗಳು ಕೆಲವು ಸಂದರ್ಭದಲ್ಲಿ ಸಾಮಾನ್ಯ ಓದುಗನಿಗೆ ನಿಲುಕದೇ ಚಿಂತನೆಗೆ ಪ್ರಚೋದಿಸುತ್ತವೆ. ಇಲ್ಲಿ ಹಲವಾರು ಸಮಕಾಲೀನ ವಿಷಯಗಳು ಕುಮಾರಸ್ವಾಮಿಯವರನ್ನು ಕೇಂದ್ರವಾಗಿಟ್ಟುಕೊಂಡು ಚರ್ಚಿಸಲ್ಪಟ್ಟಿವೆ. ಭಾರತೀಯ ನವೋದಯ ಹಿನ್ನೆಲೆಯ ಪ್ರಮುಖ ಚಿಂತಕರಲ್ಲಿ ಆನಂದಕುಮಾರಸ್ವಾಮಿಯವರೂ ಒಬ್ಬರಾಗಿದ್ದು, ಇಪ್ಪತ್ತನೇ ಶತಮಾನಕಂಡ ದೊಡ್ಡ ಕಲಾಮೀಮಾಂಸಕರು, ವಿಶಿಷ್ಟ ವ್ಯಕ್ತಿತ್ವ ಪಡೆದವರಾಗಿದ್ದಾರೆ. ಪಾಶ್ಚಾತ್ಯ ನಾಗರೀಕತೆಗೆ ಮುಖಾಮುಖಿಯಾಗಿ ಪೌರಾತ್ಯ ಸಂಸ್ಕೃತಿಯ ಸಾಧನೆಗಳನ್ನು, ಅದರಲ್ಲೂ ಭಾರತೀಯ ಸಂಸ್ಕೃತಿಯ ಆಧ್ಯಾತ್ಮಿಕ ವಿಶಿಷ್ಟತೆಯನ್ನು ಎತ್ತಿ ಹಿಡಿಯುವಲ್ಲಿ ಇವರು ಪ್ರಮುಖ ಪಾತ್ರ ವಹಿಸಿದ್ದಾರೆ. ಮಾನವನ ಸೃಜನಶೀಲತೆ, ಸಾಮೂಹಿಕ ಬದುಕಿನ ಗುಣಗಳು, ಪರಂಪರೆ, ಇತಿಹಾಸ ಮತ್ತು ಸಂಸ್ಕೃತಿಯ ಮಹತ್ವ, ಕಲಾಮೌಲ್ಯ ಮುಂತಾದ ವಿಷಯಗಳು ಈ ಕೃತಿಯಲ್ಲಿ ಒಳಗೊಂಡಿವೆ.

೧೪. ಕೆ.ಎಸ್.ಶ್ರೀನಿವಾಸಮೂರ್ತಿ : ಆನಂದಕುಮಾರಸ್ವಾಮಿ : ಅನು : ಅಕ್ಷರ ಪ್ರಕಾಶನ ಹೆಗ್ಗೋಡು-೧೯೯೫

**ಸೌಂದರ್ಯ ಶಾಸ್ತ್ರ :**

ಕಲೆಯ ಕುರಿತಾಗಿರುವ ಬರವಣಿಗೆಗಳು ಕನ್ನಡದಲ್ಲಿ ಸ್ವಲ್ಪ ಮಟ್ಟಿಗೆ ದೊರಕುತ್ತವೆಯಾದರೂ, ಕಲೆ ಮತ್ತು ಕಲಾತತ್ವ, ಕಲೆ ಮತ್ತು ಸೌಂದರ್ಯ ಇಂತಹ ವಿಷಯಗಳ ಬಗೆಗೆ ಹೆಚ್ಚಿನ ಬರವಣಿಗೆಗಳು ಕಂಡು ಬರುವುದಿಲ್ಲ. ಸೌಂದರ್ಯಶಾಸ್ತ್ರವು ಇತ್ತೀಚೆಗೆ ಪ್ರತ್ಯೇಕವಾದ ಶಿಸ್ತಿನಿಂದ ಗುರುತಿಸಲ್ಪಡುತ್ತಿದೆ. ಅದಕ್ಕನುಸಾರವಾಗಿಯೇ ಕೆಲವು ಕೃತಿಗಳೂ ರಚನೆಯಾಗುತ್ತಲಿವೆ. ಆದರೆ ಕನ್ನಡದಲ್ಲಿ ಇಂತಹ ಪ್ರಯತ್ನಗಳು ಹೆಚ್ಚಾಗಿ ನಡೆದಿಲ್ಲ. ಸೌಂದರ್ಯಶಾಸ್ತ್ರ ಎಂಬ ಈ ಕೃತಿಯನ್ನು ಕಾಶೀನಾಥ ಅಂಬಲಗೆ ಹಿಂದಿಯಿಂದ ಕನ್ನಡಕ್ಕೆ ಅನುವಾದ ಮಾಡಿದ್ದಾರೆ.[೧೫] ಇಲ್ಲಿ ಮೂಲವನ್ನು ಯಥಾವತ್ತಾಗಿ ನಕಲು ಮಾಡದೇ ಕೆಲವು ಕಡೆಗೆ ಭಾವಾನುವಾದವನ್ನು ಮಾಡಿದ್ದಾರೆ. ಚಿತ್ರಕಲೆಗೆ ಸಂಬಂಧಿಸಿದಂತೆ ಅದರ ತತ್ವ, ಸೌಂದರ್ಯಗಳ ಕುರಿತಾಗಿ ಅನೇಕ ವಿಚಾರಗಳನ್ನು ಈ ಕೃತಿಯು ಒಳಗೊಂಡಿದೆ. ಸೌಂದರ್ಯಶಾಸ್ತ್ರದ ಪರಿಚಯ, ಕಲೆಯ ಅರ್ಥ ಹಾಗೂ ಲಲಿತಕಲೆಗಳ ಸಹಸಂಬಂಧಗಳು, ಪಾಶ್ಚಾತ್ಯ ಮೀಮಾಂಸಕರು, ಗ್ರೀಕ್ ಸೌಂದರ್ಯಶಾಸ್ತ್ರ, ನವಪ್ಲೇಟೋವಾದ, ಬುದ್ಧಿವಾದಿ ಮಾರ್ಗ, ಆಂಗ್ಲ ಅನುಭವವಾದಿ ಸೌಂದರ್ಯಶಾಸ್ತ್ರ, ಜರ್ಮನ್ ಸೌಂದರ್ಯ ಶಾಸ್ತ್ರಗಳ ಬಗ್ಗೆ ಹೇಳಲಾಗಿದೆ. ಜೊತೆಗೆ ಅಭಿವ್ಯಕ್ತಿ ಸಿದ್ಧಾಂತ, ಕಲಾವಾದಿಸಿದ್ಧಾಂತ, ಮನೋವೈಜ್ಞಾನಿಕ ಸೌಂದರ್ಯಶಾಸ್ತ್ರ, ರಶಿಯಾದ ಭೌತವಾದಿ ಹಾಗೂ ಮಾರ್ಕ್ಸವಾದಿ ಸೌಂದರ್ಯಶಾಸ್ತ್ರ, ಆಧುನಿಕ ಸೌಂದರ್ಯಶಾಸ್ತ್ರ, ಭಾರತೀಯ ಸೌಂದರ್ಯಶಾಸ್ತ್ರದ ಪರಂಪರೆ, ರಸಸಿದ್ಧಾಂತ, ಧ್ವನಿಸಿದ್ಧಾಂತ, ಔಚಿತ್ಯ, ಅಲಂಕಾರ ಮುಂತಾದ ಅನೇಕ ವಿಷಯಗಳು ಇಲ್ಲಿ ಚರ್ಚಿತಗೊಂಡಿವೆ. ಕರ್ನಾಟಕ ಕಲಾ ಸಾಹಿತ್ಯಕ್ಕೆ ಇದೊಂದು ಉತ್ತಮ ಕೃತಿಯಾಗಿದ್ದು ಸೌಂದರ್ಯಶಾಸ್ತ್ರದ ಹಲವು ವಿಷಯಗಳನ್ನು ಸ್ಥೂಲವಾಗಿ ತಿಳಿಸಿಕೊಡುತ್ತದೆ.

**ಕಲೆ ಎಂದರೇನು? :**

ಕೌಂಟ್ ಲಿಯೋ ಟಾಲ್‌ಸ್ಟಾಯ್ ಅವರ ವ್ಯಕ್ತಿತ್ವ ನಾನಾ ಮುಖವಾದುದು. ಅವರ ಚಿಂತನಧಾರೆಗೆ ಹಲವು ಕವಲುಗಳು. ಸಾಹಿತ್ಯಮಾತ್ರವಲ್ಲದೆ ಇತರ ಕಲೆಗಳಲ್ಲೂ ನಿಷ್ಣಾತರಾಗಿದ್ದ ಟಾಲ್‌ಸ್ಟಾಯ್ ಕಲೆಯನ್ನು ಕುರಿತು ಸದಾ ವಿಚಾರಮಗ್ನರಾಗಿರುತ್ತಿದ್ದರು. ಕಲೆಯ ಬಗೆಗೆ ಅವರು ಅನೇಕ ಬರಹಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಮೌಲಿಕವಾದುದು ಕಲೆ ಎಂದರೇನು? ಎಂಬ ಕೃತಿ. ವಾಟ್ ಈಸ್ ಆರ್ಟ? ಎಂಬ ಈ ಕೃತಿಯ ಬೆನ್ನ ಹಿಂದೆ ಹದಿನೈದು ವರ್ಷಗಳ ಅವರ ಸುದೀರ್ಘ ಚಿಂತನ ಮಂಥನಗಳಿವೆ. ಟಾಲ್‌ಸ್ಟಾಯ್ ಅವರ ಕಲಾವಿಚಾರಗಳ ಅಮೋಘ ಕೃತಿಯಾದ ಇದನ್ನು ಸಿ.ಪಿ.ಕೆ. ಅವರು ಕಲೆ ಎಂದರೇನು? ಎಂಬ ಹೆಸರಿನಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ.[೧೬] ಕಲೆಯ ಕುರಿತು ಅನೇಕ ಅಂತರ್ಮುಖಿ ವಿಚಾರಗಳು ಈ ಕೃತಿಯಲ್ಲಿ ಅಡಕಗೊಂಡಿವೆ. ಕಲೆಯನ್ನು ಕುರಿತು ಅನನ್ಯ ಪರತಂತ್ರವಾಗಿ ಆಲೋಚಿಸಿರುವ ಟಾಲ್‌ಸ್ಟಾಯ್ ಇದರಲ್ಲಿ ಒಂದು ಸಂಪೂರ್ಣ ನೂತನವಾದ ತಳಹದಿಯನ್ನು ಒದಗಿಸಿದ್ದಾರೆ. ಅಲ್ಲದೆ ಅದಕ್ಕೊಂದು ಹೊಸ ಒರೆಗಲ್ಲನ್ನು ರೂಪಿಸಿದ್ದಾರೆ, ಕಲೆಯ ಮೂಲಗಳ ಪ್ರದೀಪ್ತ ವಿವೇಚನೆ ಇಲ್ಲಿದೆ. ಕಲೆಯ ಸ್ವರೂಪ ಮತ್ತು ಪ್ರಯೋಜನ, ಒಳ್ಳೆಯಕಲೆಗೂ ಮತ್ತು ಕೆಟ್ಟಕಲೆಗೂ ಇರುವ ಭೇದ, ಕೆಟ್ಟಕಲೆಯ ಅಪಾಯಗಳು, ಜೀವನಕ್ಕೂ ಕಲೆಗೂ ಇರುವ ಸಂಬಂಧ, ಧರ್ಮ, ವಿಜ್ಞಾನಗಳಿಗೂ ಕಲೆಗೂ ಇರುವ ನಂಟು, ಮುಂತಾದ ಪ್ರಶ್ನೋತ್ತರಗಳಿಗೆ ಟಾಲ್‌ಸ್ಟಾಯ್ ಉತ್ತರಿಸಲು ಪ್ರಯತ್ನಿಸಿದ್ದಾರೆ. ಅಲ್ಲದೆ ತಮ್ಮ ಕಾಲದವರೆಗಿನ ಸೌಂದರ್ಯಮೀಮಾಂಸೆಯನ್ನು ಕ್ರೋಡೀಕರಿಸಿದ್ದಾರೆ.

೧೫. ಡಾ.ಕಾಶೀನಾಥ ಅಂಬಲಗೆ : ಸೌಂದರ್ಯಶಾಸ : (ಅನು) : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೦
೧೬. ಸಿ.ಪಿ.ಕೆ : ಕಲೆ ಎಂದರೇನು? : (ಅನು) ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು-೨೦೦೦

ಕೆಟ್ಟಕಲೆಗಿಂತ ಕಲಾಸಾಹಿತ್ಯ ಲೇಸೆಂಬುದು ಅವರ ಅಭಿಪ್ರಾಯ. ಕಲೆ ವಿಕಾಸಕ್ಕಾಗಿ, ಸರ್ವೋದಯಕ್ಕಾಗಿ ಎಂಬುದು ಅವರ ಧೋರಣೆ. ಕಲೆ ಸ್ಪಷ್ಟವೂ,ಸರ್ವಗ್ರಾಹ್ಯವೂ ಆಗಿರಬೇಕಲ್ಲದೆ ಧರ್ಮ ನೀತಿಗಳ ಒತ್ತು ಹೊಂದಿರಬೇಕು. ಮನುಷ್ಯ-ಮನುಷ್ಯರ ನಡುವೆ ಭ್ರಾತೃತ್ವ-ಐಕ್ಯತೆ ಸ್ಥಾಪಿಸುವುದು, ಸಮಾಜವನ್ನು ಸರಿದಾರಿಯಲ್ಲಿ ನಡೆಸುವುದು ಕಲೆಯ ಕೆಲಸ. ಕಲೆಯೂ ವಿಜ್ಞಾನವೂ ಒಂದೇ. ಅವು ಪೂರಕವಾಗಿರಬೇಕು. ನಿರ್ಧಿಷ್ಟ ವರ್ಗ ಪಂಥ, ದೇಶ, ಜನಾಂಗಗಳ ಬೇಲಿ, ಭಿತ್ತಿಗಳನ್ನು ಮೀರಿ ಕಲೆಯು ವಿಶ್ವವ್ಯಾಪಕವಾಗಿರಬೇಕು. ವಿಶ್ವ ಸಾರ್ವತ್ರಿಕತೆಯು ಸತ್‌ಕಲೆಯ ಲಾಂಛನ ಎಂದು ಟಾಲ್‌ಸ್ಟಾಯ್ ಅವರ ಅಭಿಪ್ರಾಯವಾಗಿದೆ. ಈ ರೀತಿ ಕಲೆಯ ಕುರಿತು ಟಾಲ್‌ಸ್ಟಾಯ್ ಅವರ ಅನೇಕ ವಿಚಾರಗಳು ಈ ಪುಸ್ತಕದಲ್ಲಿ ವ್ಯಕ್ತಗೊಂಡಿವೆ.

ತನ್ನ ಪ್ರಜಾಪ್ರಭುತ್ವಾತ್ಮಕ ದೃಷ್ಟಿಕೋನದಿಂದ ಈ ಕೃತಿ ತನ್ನ ಕ್ರಾಂತಿಕಾರಕ ಸ್ವರೂಪವನ್ನು ಈ ಹೊತ್ತಿಗೂ ಉಳಿಸಿಕೊಂಡು ಇಂದಿನ ಸಂದರ್ಭಕ್ಕೂ ಪ್ರಸ್ತುತವಾಗಿದೆ. ಸುಮಾರು ಒಂದು ಶತಮಾನದ ಹಿಂದೆ ಟಾಲ್‌ಸ್ಟಾಯ್ ಭವಿಷತ್ ಕಲೆಯ ಬಗ್ಗೆ ಆಡಿದ ಮಾತು ಇಂದು ನಿಜವಾಗುತ್ತದೆ. ಹೀಗಾಗಿ ಈ ಕೃತಿಯಲ್ಲಿ ಟಾಲ್‌ಸ್ಟಾಯ್ ವಾದಿಯಾಗಿ ಮಾತ್ರವಲ್ಲದೆ ಪ್ರವಾದಿಯಾಗಿ ಕಾಣುತ್ತಾರೆ.

ಈ ಕೃತಿಯು ಇನ್ನೂ ಕೆಲವು ವಿಚಾರಗಳನ್ನು ನಮಗೆ ಪರೋಕ್ಷವಾಗಿ ತಿಳಿಸುತ್ತದೆ. ಕಲೆಗಾಗಿ ಕಾಲ ಮತ್ತು ದುಡಿಮೆ, ಸೌಂದರ್ಯ, ಸಿದ್ಧಾಂತಗಳು ಮತ್ತು ಲಕ್ಷಣಗಳು, ಕಲೆ ಮತ್ತು ಧರ್ಮ, ಆಳುವ ವರ್ಗ ಮತ್ತು ಸೌಂದರ್ಯ ಸಿದ್ಧಾಂತ, ಇತ್ತೀಚಿನ ಫ್ರೆಂಚ್ ಆಡಂಬರವಾದಿ ಕಲೆಗಳು, ಕಲಾಕೃತಿಗಳ ಉತ್ಪಾದನಾ ವಿಧಾನಗಳು, ಖೋಟಾಕಲೆಯ ಸ್ವರೂಪ, ಕಲೆಯ ಅಭಾವ ಮತ್ತು ವಿಕೃತಿಯ ಪರಿಣಾಮಗಳು, ವಿಜ್ಞಾನ ಮತ್ತು ಕಲೆಗಳ ಸಂಬಂಧ, ಮಾನವನ ಜೀವನ ಮತ್ತು ಕಲೆ, ಹೀಗೆ ಅಪಾರ ವ್ಯಾಪ್ತಿಯ ವಿಷಯಗಳನ್ನು ಒಳಗೊಂಡ ಅಪರೂಪದ ಒಳನೋಟಗಳು, ಅವುಗಳ ಆಧಾರಗಳು ಹಾಗೂ ಎತ್ತರದ ಪರಿಕಲ್ಪನೆ ಮತ್ತು ಚಿಂತನೆಗಳು ಈ ಕೃತಿಯಲ್ಲಿ ಮಡುಗೊಂಡಿವೆ. ಅಲ್ಲದೆ ಈ ಕೃತಿಯು ನಮ್ಮನ್ನು ಕಾವ್ಯ ಮತ್ತು ಕಲಾರಹಸ್ಯದ ಸೂಕ್ಷ್ಮ ಲೋಕಗಳಿಗೆ ಕೊಂಡೊಯ್ಯುತ್ತದೆ. ಮೀಮಾಂಸೆಯ ಮುಖ್ಯ ಕೃತಿಗಳಲ್ಲಿ ಒಂದಾದ ಇದರ ಬಗ್ಗೆ ವಿಶ್ವದ ಬಹುಪಾಲು ಚಿಂತಕರು ಇಂದಿಗೂ ಮೌಲಿಕವಾದ ಮನ್ನಣೆ ನೀಡುತ್ತಿದ್ದಾರೆ. ಇಂತಹ ಒಂದು ಅಮೂಲ್ಯ ಕಲಾ ಪುಸ್ತಕವು ಕನ್ನಡದಲ್ಲಿ ಅನುವಾದಗೊಂಡಿರುವುದು ಕನ್ನಡ ಕಲಾ ಸಾಹಿತ್ಯಕ್ಕೆ ಮಹತ್ವದ ಕೊಡುಗೆಯಾಗಿದೆ ಎನ್ನಬಹುದು.

**ಆಟ-ಮಾಟ :**

ಪ್ರಸ್ತುತ ಆಟ-ಮಾಟ ಎಂಬ ಈ ಪುಸ್ತಕವು ಪ್ರೊ.ಕೆ.ಜಿ.ಸುಬ್ರಹ್ಮಣ್ಯನ್ ಅವರ 'ದಿ ಮ್ಯಾಜಿಕ್ ಆಫ್ ಮೇಕಿಂಗ್' ಇಂಗ್ಲೀಷ ಕೃತಿಯ ಅನುವಾದವಾಗಿದೆ. ಇದನ್ನು ಕೆ.ಎಸ್.ಶ್ರೀನಿವಾಸಮೂರ್ತಿ ಕನ್ನಡಕ್ಕೆ ಅನುವಾದಿಸಿದ್ದಾರೆ.[೧೭] ಪ್ರೊ.ಕೆ.ಜಿ.ಸುಬ್ರಹ್ಮಣ್ಯನ್ ಅವರು ರಾಷ್ಟ್ರ, ಅಂತರಾಷ್ಟ್ರ ಮಟ್ಟದಲ್ಲಿ ಖ್ಯಾತರಾಗಿರುವ ಪ್ರತಿಭಾವಂತ ಕಲಾವಿದ, ಕಲಾಶಿಕ್ಷಕ ಮತ್ತು ಕಲಾ ವಿಮರ್ಶಕ. ಪದ್ಮಶ್ರೀ, ಕಾಳಿದಾಸ್ ಸನ್ಮಾನ್, ಅಬನ್-ಗಗನ್ ಪುರಸ್ಕಾರಗಳು ಸೇರಿದಂತೆ ಹಲವಾರು ಪ್ರಶಸ್ತಿ ಪುರಸ್ಕಾರಗಳು ಇವರಿಗೆ ಸಂದಿವೆ. ರವೀಂದ್ರ ಭಾರತಿ ಮತ್ತು ಬನಾರಸ್ ವಿಶ್ವವಿದ್ಯಾಲಯಗಳು ಇವರಿಗೆ ಡಿ.ಲಿಟ್ ಪದವಿ ನೀಡಿ ಗೌರವಿಸಿವೆ.

---

೧೭. ಕೆ.ಎಸ್.ಶ್ರೀನಿವಾಸಮೂರ್ತಿ :ಆಟ-ಮಾಟ : (ಅನು) : ಅಭಿನವ ಪ್ರಕಾಶನ, ಬೆಂಗಳೂರು-೨೦೦೨

ಬ್ರಿಟಿಷ್ ದೇಶದ ಶಿಷ್ಯ ವೇತನವೂ ಇವರಿಗೆ ದೊರಕಿದೆ. ಈ ರೀತಿಯಲ್ಲಿ ಪ್ರಸಿದ್ಧ ಪಡೆದ ಇವರು ಕಲೆಯ ಕುರಿತು ಹಲವಾರು ಲೇಖನ, ಪುಸ್ತಕ ಬರೆದಿದ್ದಾರಲ್ಲದೆ ವಿವಿಧ ಕಡೆಗಳಲ್ಲಿ ಪ್ರಬಂಧಗಳನ್ನು ಮಂಡಿಸಿದ್ದಾರೆ. ಇವರ ಲೇಖನಗಳು ಮತ್ತು ಭಾಷಣಗಳನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸಲಾಗಿದೆ. ಇಲ್ಲಿ ಅನುವಾದ ಮಾಡಿರುವುದು ಇವರ 'ದಿ ಮ್ಯಾಜಿಕ್ ಆಫ್ ಮೇಕಿಂಗ್' ಕೃತಿಯನ್ನು. ಇಲ್ಲಿ ಮುಖ್ಯವಾಗಿ ಕಲೆಯ ತಿರುಳನ್ನು ಜನಪದ ಕಲೆಯ ಹಿನ್ನೆಲೆಯಲ್ಲಿ ಬಿಂಬಿಸಲು ಪ್ರಯತ್ನಿಸಲಾಗಿದೆ. ಕಲೆಯಲ್ಲಿ ಕಲಾಮೌಲ್ಯ, ಉದ್ದೇಶ, ರಚನಾ ವಿಧಾನಗಳು, ಪರಿಕರಗಳು, ಅಂತಸತ್ವ, ಕಲಾವಿದ, ಕಲಾಕೃತಿ, ಸಹೃದಯ, ಸಾಮಾಜಿಕ ಆಯಾಮಗಳು ಹೀಗೆ ಹತ್ತು ಹಲವು ಸಂಗತಿಗಳು ಹೇಳಲ್ಪಟ್ಟಿವೆ.

ಇಂಗ್ಲೀಷ್ ಮತ್ತು ಇತರ ಭಾಷೆಯ ಸಾಹಿತ್ಯ ಕೃತಿಗಳಲ್ಲಿ ಇಂಗ್ಲೀಷ್, ಹಿಂದಿ, ತೆಲುಗು ಮತ್ತು ಮರಾಠಿ ಭಾಷೆಯಿಂದ ಕನ್ನಡಕ್ಕೆ ಅನುವಾದಗೊಂಡ ಕೃತಿಗಳನ್ನು ಪರಿಗಣಿಸಲಾಗಿದೆ. ಇದರಲ್ಲಿ ಬಹುಪಾಲು ಇಂಗ್ಲೀಷ್ ಕೃತಿಗಳಿವೆ. ಹೆಚ್ಚಿನವು ಕಲೆ ಕುರಿತಾಗಿಯೆ ರಚನೆಗೊಂಡ ಸಾಹಿತ್ಯಕೃತಿಗಳಾಗಿವೆ.

**ಬ. ಚಿತ್ರಕಲಾ ಇಂಗ್ಲೀಷ ಭಾಷೆಯ ಸಾಹಿತ್ಯ :**

**ಆರ್ಕಿಟೆಕ್ಚರ್ ಆಫ್ ಬಿಜಾಪೂರ :**

ಬಿಜಾಪೂರ ಸುಲ್ತಾನರ ವಾಸ್ತುಶಿಲ್ಪ ಮತ್ತು ಚಿತ್ರಕಲೆಯ ಬಗ್ಗೆ ಹಲವಾರು ಬರವಣಿಗೆಗಳು ಬಂದಿವೆ. ಇವುಗಳಲ್ಲಿ 'ಆರ್ಕಿಟೆಕ್ಚರ್ ಆಫ್ ಬಿಜಾಪೂರ' ಎಂಬ ಗ್ರಂಥವು ಮಹತ್ವದ್ದಾಗಿದೆ. ಕಾರಣ ಸುರಪುರ ನಾಯಕರ ಸಂಸ್ಥಾನದಲ್ಲಿ ಆಡಳಿತಾಧಿಕಾರಿಯಾಗಿದ್ದ, 'ಮೆಡೋಸ್ ಟೇಲರ್' ಬಿಜಾಪೂರವನ್ನು ಅಂದಿನ ದಿನಗಳಲ್ಲಿ ಸ್ವತಹ ಸಂದರ್ಶನ ಮಾಡಿ ಇದನ್ನು ಬರೆದಿದ್ದಾನೆ.[೧೮] ಆತ ಉತ್ತಮ ಬರಹಗಾರ, ಸಂಶೋಧಕನಾಗಿದ್ದನಲ್ಲದೆ ಕಲಾವಿದನೂ ಆಗಿದ್ದ ಎಂಬುದು ಗಮನಾರ್ಹವಾದ ಸಂಗತಿಯಾಗಿದೆ. ಹಾಗಾಗಿ ಕಲಾತ್ಮಕ ವಿಷಯಗಳು ಇದರಲ್ಲಿ ಹೆಚ್ಚು ಮಹತ್ವ ಪಡೆದುಕೊಂಡಿವೆ.

ಪ್ರಸ್ತುತ ಗ್ರಂಥವು ಇಂಗ್ಲೀಷ್‌ನಲ್ಲಿದ್ದು ಬಿಜಾಪೂರ ಪರಿಸರದ ಪ್ರಾಚೀನ ವಾಸ್ತು ರಚನೆಗಳನ್ನು, ನಗರ ಯೋಜನೆಯನ್ನು ಕುರಿತು ತಿಳಿಸುತ್ತದೆ. ಇಲ್ಲಿರುವ ಜಗತ್‌ಪ್ರಸಿದ್ಧ ಗೋಳಗುಮ್ಮಟ, ಬಾರಾಕಮಾನ, ಜಾಮಿಮಸೀದಿ, ಅಸರ್‌ಮಹಲ್, ಅರಮನೆಯ ಬೇರೆ ಕಟ್ಟಡಗಳು, ವಿವಿಧ ರೀತಿಯ ಸಾರ್ವಜನಿಕ ಕಟ್ಟಡಗಳು ಹೀಗೆ ಹಲವು ಬಗೆಯ ವಾಸ್ತು ರಚನೆಗಳ ಬಗ್ಗೆ ಗ್ರಂಥದಲ್ಲಿ ವಿವರಿಸಲಾಗಿದೆ. ಇವುಗಳಲ್ಲದೆ ಬಿಜಾಪೂರ ಹೊರವಲಯದಲ್ಲಿರುವ ನವರಸಪುರ ಮತ್ತು ಕುಮಟಗಿಯಲ್ಲಿನ ಅರಮನೆ ಮತ್ತು ಇತರ ಕಟ್ಟಡಗಳೂ ಸಹಿತ ಇಲ್ಲಿ ಪ್ರಸ್ತಾಪಿಸಲ್ಪಟ್ಟಿವೆ.

ಈ ಗ್ರಂಥದಲ್ಲಿ ಬಿಜಾಪೂರ ಪರಿಸರದ ವಾಸ್ತುಕಲೆಯನ್ನು ವೈಜ್ಞಾನಿಕವಾಗಿ ಬಿಂಬಿಸಲಾಗಿದ್ದು ಅದರ ಕಲಾತ್ಮಕ ಅಂಶಗಳ ಬಗೆಗೂ ಬೆಳಕು ಬೀರಲಾಗಿದೆ. ಅಸರ್‌ಮಹಲ್ ಮತ್ತು ಕುಮಟಗಿಯ ಅರಮನೆಗಳನ್ನು ಕುರಿತು ಹೇಳುವಾಗ ಅಲ್ಲಿನ ಸುಂದರವಾದ ವರ್ಣಭಿತ್ತಿ ಚಿತ್ರಗಳನ್ನು ಪ್ರಸ್ತಾಪಿಸಲಾಗಿದೆ. ಈ ಚಿತ್ರಗಳ ರಚನಾಕ್ರಮ, ವರ್ಣಗಾರಿಕೆ, ರೇಖಾವಿನ್ಯಾಸ, ವಸ್ತುವಿಷಯ, ಪ್ರಭಾವ, ಪ್ರೇರಣೆ, ಶೈಲಿ ಮತ್ತು ಪ್ರಮುಖ ಲಕ್ಷಣಗಳನ್ನು ಹೇಳಿದೆ. ಹಾಗಾಗಿ ಈ ಗ್ರಂಥವು ಚಿತ್ರಕಲೆಯ ಹಿನ್ನೆಲೆಯಲ್ಲಿಯೂ ಮಹತ್ವ ಪಡೆದುಕೊಂಡಿದೆ.

---

೧೮. ಮೆಡೋಸ್ ಟೇಲರ್ : ಆರ್ಕಿಟೆಕ್ಚರ್ ಆಫ್ ಬಿಜಾಪೂರ : ಕ್ಯಾಂಬ್ರಿಜ್ ಯುನಿವರ್ಸಿಟಿ ಪ್ರೆಸ್, ಲಂಡನ್–೧೮೬೬

**ವಿಜಯನಗರ ಆರ್ಟ್ಸ್ :**

ಕರ್ನಾಟಕವನ್ನು ಆಳಿದ ರಾಜವಂಶಗಳಲ್ಲಿ ವಿಜಯನಗರ ಅರಸರಿಗೆ ವಿಶಿಷ್ಟ ಸ್ಥಾನವಿದೆ. ತಮ್ಮ ವಿಶಾಲ ಸಾಮ್ರಾಜ್ಯದಲ್ಲಿ ಅವರು ಸಾಹಿತ್ಯ ಕಲೆಗಳನ್ನು ಹೆಚ್ಚಿನ ಪ್ರೋತ್ಸಾಹದಿಂದ ಬೆಳೆಸಿದರು. ಇಂದಿನ ಕರ್ನಟಕದ ವ್ಯಾಪ್ತಿಯಲ್ಲದೆ ತಮಿಳುನಾಡು, ಆಂಧ್ರಪ್ರದೇಶದ ಭಾಗಗಳು ಈ ಸಾಮ್ರಾಟರ ಅಧೀನದಲ್ಲಿದ್ದವು. ಅಲ್ಲೆಲ್ಲ ಇವರ ಕಲಾ ಕೊಡುಗೆಗಳು ವಿಸ್ತರಿಸಿವೆ. ವಿಜಯನಗರ ಕುರಿತು ಇತಿಹಾಸ ಹೇಳುವ ಸಂದರ್ಭದಲ್ಲಿಯೇ ವಿದ್ವಾಂಸರು ಈ ಅರಸರ ಕಲೆ ಮತ್ತು ಸಾಹಿತ್ಯ ಕುರಿತಾಗಿ ಸಂಕ್ಷಿಪ್ತ ಮಾಹಿತಿ ಕೊಡುತ್ತ ಬಂದಿದ್ದಾರೆ. ಆದರೆ ನಂತರದಲ್ಲಿ ಕೆಲವು ವಿದ್ವಾಂಸರು ವಿಜಯನಗರ ಸಾಮ್ರಾಟರ ಕಲೆ ಮತ್ತು ಸಾಹಿತ್ಯಗಳನ್ನು ಪ್ರತ್ಯೇಕವಾಗಿ ಪರಿಗಣಿಸಲು ಪ್ರಾರಂಭಿಸಿದರು. ಇದರಲ್ಲಿ ಹೆಚ್ಚಾಗಿ ಅವರ ದೇವಾಲಯ ಮತ್ತು ಶಿಲ್ಪರಚನೆಗಳ ಕುರಿತಾಗಿಯೇ ಹೆಚ್ಚಿನ ವಿವರಗಳನ್ನು ಕೊಡಲಾಗಿದೆ. ಈ ಹಿನ್ನೆಲೆಯಿಂದ ನೋಡಿದಾಗ ಪ್ರಸ್ತುತ ವಿಜಯನಗರ ಆರ್ಟ್ಸ್ ಪುಸ್ತಕವು ಮಹತ್ವದ್ದಾಗಿದೆ. ಇದನ್ನು ಆರ್.ಎನ್.ಸಾಲೆತ್ತೊರೆಯವರು ಬರೆದಿದ್ದು,[೧೯] ಇಂಗ್ಲೀಷ್ ಭಾಷೆಯಲ್ಲಿದೆ. ಇದು ವಿಜಯನಗರ ಕಲೆಯ ಬಗ್ಗೆ ಇರುವ ಪ್ರತ್ಯೇಕ ಗ್ರಂಥವಾಗಿದ್ದು, ಇದರಲ್ಲಿ ವಾಸ್ತುಕಲೆ ಮತ್ತು ಶಿಲ್ಪಕಲೆಗಳ ಜೊತೆಗೆ ಚಿತ್ರಕಲೆಯನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.ಪ್ರಸ್ತುತ ಪುಸ್ತಕದಲ್ಲಿ ವಿಜಯನಗರ ಸಾಮ್ರಾಜ್ಯದ ಮೇರೆಗಳು ವಿಸ್ತರಿಸಿದ್ದ ಆಂದ್ರಪ್ರದೇಶ ಮತ್ತು ತಮಿಳುನಾಡು ರಾಜ್ಯಗಳಲ್ಲಿನ ದೇವಾಲಯ, ಶಿಲ್ಪ, ಚಿತ್ರಗಳು ಇಲ್ಲಿ ಹೇಳಲ್ಪಟ್ಟಿವೆ. ಚಿತ್ರಕಲೆಯನ್ನು ಕುರಿತು ಹೇಳುವಾಗ ಈ ಮೇಲಿನ ಪ್ರದೇಶಗಳ ಚಿತ್ರಗಳ ಜೊತೆಗೆ ಹಂಪಿಯ ವಿರೂಪಾಕ್ಷ ದೇವಾಲಯದ ಭಿತ್ತಿ ಚಿತ್ರಗಳ ಬಗ್ಗೆ ಹೆಚ್ಚು ಒತ್ತು ಕೊಡಲಾಗಿದೆ. ಈ ಚಿತ್ರಗಳ ರಚನಾ ಕಾಲ, ಪ್ರೋತ್ಸಾಹಿಸಿದ ಅರಸರು, ಭಿತ್ತಿತಯಾರಿಕೆ, ಬಣ್ಣಗಾರಿಕೆ, ಚಿತ್ರರಚನಾ ಕ್ರಮ, ವಸ್ತುವಿಷಯಗಳು, ಚಿತ್ರಶೈಲಿ, ಪ್ರಭಾವ, ಪ್ರೇರಣೆ ಮುಂತಾದ ಸಂಗತಿಗಳನ್ನು ಇಟ್ಟುಕೊಂಡು ಚರ್ಚಿಸಲಾಗಿದೆ. ವಿಜಯನಗರ ಚಿತ್ರಕಲೆಯ ದೃಷ್ಟಿಯಿಂದ ಇದೊಂದು ಮಹತ್ವದ ಗ್ರಂಥವಾಗಿದ್ದು, ಕರ್ನಾಟಕ ಕಲಾ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಯಾಗಿದೆ.

**ಎ ಸರ್ವೆ ಆಫ್ ಪೇಂಟಿಂಗ್ಸ ಇನ್ ದಿ ಡೆಕ್ಕನ್ :**

ಭಾರತೀಯ ಚಿತ್ರಕಲೆಯ ಬಗ್ಗೆ ಸಂಶೋಧನಾತ್ಮಕ ಬರವಣಿಗೆ ಮಾಡಿದ ಪಾಶ್ಚಾತ್ಯ ವಿದ್ವಾಂಸರಲ್ಲಿ ಸ್ಟೆಲ್ಲಾಕ್ರಾಮಿಶ್ ಎಂಬ ಮಹಿಳೆ ಪ್ರಮುಖ ಸ್ಥಾನ ಪಡೆದುಕೊಂಡಿದ್ದಾಳೆ. ಭಾರತೀಯ ಪ್ರಾಚೀನ ಶಾಸ್ತ್ರ ಗ್ರಂಥಗಳ ಬಗ್ಗೆ ಅಧ್ಯಯನ ಮಾಡಿ ಅವುಗಳನ್ನು ಇಂಗ್ಲೀಷಗೆ ಅನುವಾದಿಸುವುದು ಮತ್ತು ಕೆಲವು ಗ್ರಂಥಗಳ ಬಗ್ಗೆ ವಿಮರ್ಶೆ, ವಿಶ್ಲೇಷಣೆ, ಟಿಪ್ಪಣೆ, ಟೀಕೆ, ಸಂಪಾದನೆ ಮಾಡುವುದು, ಹೀಗೆ ಬಹುವಿಧ ಕ್ರಮಗಳಿಂದ ಭಾರತೀಯ ಕಲಾಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾಳೆ. ಚಿತ್ರಕಲೆಯ ಬಹುಮುಖ್ಯ ಪ್ರಾಚೀನ ಗ್ರಂಥ ವಿಷ್ಣುಧರ್ಮೋತ್ತರವನ್ನು ಇವಳು ಇಂಗ್ಲೀಷಗೆ ಅನುವಾದಿಸಿ ಟಿಪ್ಪಣೆ ಬರೆದಿರುವುದು ಮುಖ್ಯವಾಗಿದೆ. ಈ ರೀತಿಯ ಪ್ರಾಚೀನ ಸಾಹಿತ್ಯದ ಬಗೆಗಿನ ವಿಶಿಷ್ಟ ರೀತಿಯ ಕೃಷಿಯಲ್ಲದೆ ದೇಶದ ಹಲವು ಪ್ರಮುಖ ಕಲಾನೆಲೆಗಳನ್ನು ಸಂದರ್ಶಿಸಿ ಅವುಗಳ ಬಗ್ಗೆ ಸಂಶೋಧನಾತ್ಮಕ ಬರಹಗಳನ್ನು ಮಾಡಿದ್ದಾಳೆ. ಅಜಂತಾ ಒಳಗೊಂಡಂತೆ ದಕ್ಷಿಣದ ಹಲವು ಕಲಾನೆಲೆ ಮತ್ತು ಶೈಲಿಗಳ ಬಗ್ಗೆಯೂ ಇವಳು ಸಮೀಕ್ಷೆ ನಡೆಸಿ ಸಂಶೋಧನಾತ್ಮಕ ಸಾಹಿತ್ಯ ರಚಿಸಿದ್ದಾಳೆ. ಅಂತಹ ಒಂದು ಕೃತಿಯೇ 'ಎ ಸರ್ವೆ ಆಫ್ ಪೇಂಟಿಂಗ್ಸ ಇನ್ ದಿ ಡೆಕ್ಕನ್.'[೨೦] ಸ್ಟೆಲ್ಲಾ

೧೯. ಆರ್.ಎನ್.ಸಾಲೆತ್ತೊರೆ : ವಿಜಯನಗರ ಆರ್ಟ್ಸ್ : ಬಾಂಬೆ ಯುನಿವರ್ಸಿಟಿ, ಬಾಂಬೆ- ೧೯೩೦

೨೦. ಸ್ಟೆಲ್ಲಾ ಕಾಮ್ರಿಶ್ : ಎ ಸರ್ವೆ ಆಫ್ ಪೇಂಟಿಂಗ್ಸ ಇನ್ ದಿ ಡೆಕ್ಕನ್ : ಕ್ಯಾಂಬ್ರಿಜ್ ಯುನಿವರ್ಸಿಟಿ ಪ್ರೆಸ್, ಲಂಡನ್-೧೯೩೭

ಕ್ರಾಮಿಶ್ ಅವರ ಪ್ರಮುಖ ಕೃತಿಗಳಲ್ಲಿ ಒಂದಾಗಿದೆ. ಇಂಗ್ಲೀಷನಲ್ಲಿರುವ ಈ ಕೃತಿಯಲ್ಲಿ ದಕ್ಷಿಣ ಭಾರತ ಪ್ರಾಚೀನ ಚಿತ್ರಗಳನ್ನು ಸಮೀಕ್ಷೆ ಮಾಡಿ ಅವುಗಳ ಕುರಿತು ವಿಶ್ಲೇಷಣೆ ಮಾಡಲಾಗಿದೆ. ಬಾದಾಮಿಯ ವೈಷ್ಣವ ಗುಹೆಯ ಚಾಲುಕ್ಯರ ಭಿತ್ತಿಚಿತ್ರಗಳು, ಬಿಜಾಪುರದ ಅಸರ್‌ಮಹಲ್‌ನ ಭಿತ್ತಿಚಿತ್ರಗಳು, ಕುಮಟಗಿಯ ಭಿತ್ತಿಚಿತ್ರಗಳು, ಶ್ರೀರಂಗಪಟ್ಟಣದ ಭಿತ್ತಿಚಿತ್ರಗಳು, ಆಂಧ್ರದ ಲೇಪಾಕ್ಷಿಯ ಭಿತ್ತಿಚಿತ್ರಗಳು, ಹಂಪೆಯ ವಿರೂಪಾಕ್ಷ ದೇವಾಲಯದ ಚಿತ್ರಗಳು, ಸುರಪುರದ ಚಿತ್ರಕಲೆ, ತಮಿಳುನಾಡಿನ ಹಲವು ಸ್ಥಳಗಳು, ತಂಜಾವೂರು ಬೃಹದೀಶ್ವರ ದೇವಾಲಯದ ಚಿತ್ರಗಳು, ಕಂಚಿ–ಕಾಮಾಕ್ಷಿ ದೇವಾಲಯದ ಚಿತ್ರಗಳು, ಹೀಗೆ ದಕ್ಷಿಣ ಭಾರತದ ಹಲವಾರು ಪ್ರಾಚೀನ ಚಿತ್ರನೆಲೆಗಳ ಬಗ್ಗೆ ವಿವರಗಳಿವೆ.

ಇಲ್ಲಿರುವ ವಿಷಯಗಳಲ್ಲಿ ಆಯಾನೆಲೆಗಳ ಲಕ್ಷಣ, ಚಿತ್ರಗಳಿರುವ ವಾಸ್ತು ರಚನೆಯ ವಿನ್ಯಾಸ, ದೇವಾಲಯ, ಗುಹೆ, ಮನೆ–ಮಠ, ಮಂಟಪ ಮುಂತಾದವುಗಳ ಬಗ್ಗೆ ವಿವರ, ಚಿತ್ರಗಳ ಶೈಲಿ, ರಚನಾ ಕ್ರಮ, ಪರಿಕರಗಳು, ಭಿತ್ತಿ ಸಿದ್ಧತೆ, ವರ್ಣತಯಾರಿಕೆ, ಚಿತ್ರದ ವಸ್ತುವಿಷಯಗಳು, ಮೂಲ ಧೇಯೋದ್ದೇಶಗಳು, ಅವುಗಳ ಕಾಲಮಾನ, ಹೀಗೆ ಹತ್ತು ಹಲವು ಸಂಗತಿಗಳನ್ನು ತಿಳಿಸಲಾಗಿದೆ. ಕರ್ನಾಟಕದ ಕಲಾ ಸಾಹಿತ್ಯದಲ್ಲಿ ಮೌಲಿಕ ಕೃತಿಯಾದ ಇದು ಕಲಾವಿದ್ಯಾರ್ಥಿಗಳು, ಕಲಾಬರಹಗಾರರು, ವಿಮರ್ಶಕರು, ಸಂಶೋಧಕರಿಗೆ ಮಾತ್ರವಲ್ಲದೆ ಕಲಾಪ್ರಿಯರಿಗೂ ಉಪಯುಕ್ತ ಮಾಹಿತಿ ನೀಡುವ ಗ್ರಂಥವಾಗಿದೆ.

**ದಿ ಲೆಟರ್ಸ ಆಫ್ ಫಿಲಿಪ್ ಮೆಡೋಸ್ ಟೇಲರ್ ಟು ಹೆನ್ರಿ ರೀವ್ :**

ಸುರಪುರ ಸಂಸ್ಥಾನವು ಬ್ರಿಟಿಷರ ಆಧೀನಕ್ಕೆ ಒಳಪಟ್ಟ ನಂತರ ಅಲ್ಲಿ ಬ್ರಿಟಿಷರು ಒಬ್ಬ ಆಡಳಿತಾಧಿಕಾರಿಯನ್ನು ನೇಮಿಸಿದರು. ರಾಜಾ ವೆಂಕಟಪ್ಪ ನಾಯಕನ ನಂತರ ಬ್ರಿಟಿಷರ ವಶವಾದ ಸಂಸ್ಥಾನವನ್ನು ಇದೇ ವಂಶದವರೇ ಆಳ್ವಿಕೆ ಮಾಡಿದರೂ ಸಹಿತ ಅಲ್ಲಿ ಬ್ರಿಟಿಷ್ ಆಡಳಿತಾಧಿಕಾರಿಯದೇ ಪರಮೋಚ್ಚಅಧಿಕಾರವಾಗಿತ್ತು. ಈ ವ್ಯವಸ್ಥೆಯನ್ನು ಬ್ರಿಟಿಷರು ಭಾರತದ ಹೆಚ್ಚಿನ ಸಂಸ್ಥಾನಗಳಲ್ಲಿ ಜಾರಿಗೆ ತಂದರು. ಸುರಪುರ ಸಂಸ್ಥಾನದಲ್ಲಿ ಬ್ರಿಟಿಷ್ ಆಡಳಿತಾಧಿಕಾರಿಯಾಗಿದ್ದ ಮೆಡೋಸ್ ಟೇಲರ್ ಒಬ್ಬ ದಕ್ಷ ಆಡಳಿತಗಾರನಾಗಿದ್ದು ಮಾತ್ರವಲ್ಲದೆ ಸ್ವತಹ ಕಲಾವಿದ ಮತ್ತು ಕಲಾಪ್ರಿಯನಾಗಿದ್ದ. ಈತನು ಸುರಪುರ ಸಂಸ್ಥಾನ ಮಾತ್ರವಲ್ಲದೆ ಸುತ್ತಲಿನ ಪ್ರದೇಶಗಳ ಕಲೆ ಮತ್ತು ಸಂಸ್ಕೃತಿಗಳ ಕುರಿತು ಅಧ್ಯಯನ ಮಾಡಿದನು. ಆ ಕುರಿತು ಬರವಣಿಗೆಗಳನ್ನು ಮಾಡಿದ್ದಾನೆ. ಆರ್ಕಿಟೆಕ್ಚರ್ ಆಫ್ ಬಿಜಾಪೂರ ಎಂಬುದು ಈ ಹಿನ್ನೆಲೆಯಲ್ಲಿ ಗಮನಾರ್ಹ ಕೃತಿಯಾಗಿದ್ದು ಅದರ ಬಗ್ಗೆ ಹಿಂದೆ ಹೇಳಲಾಗಿದೆ. ಇದಲ್ಲದೆ ತನ್ನ ಸಂಸ್ಥಾನ ಮತ್ತು ಸುತ್ತಲಿನ ಪ್ರದೇಶಗಳ ಕಲೆ, ಸಂಸ್ಕೃತಿ, ಪರಿಸರ ಮತ್ತು ಜನಜೀವನಗಳಿಂದ ಪ್ರಭಾವಿತನಾಗಿದ್ದು, ಮೆಡೋಸ್ ಟೇಲರ್ ಕೇವಲ ಸಾಹಿತ್ಯ ರಚನೆ ಮಾತ್ರವಲ್ಲದೆ ಇಂಗ್ಲೆಂಡಿನಲ್ಲಿರುವ ತನ್ನ ಮಿತ್ರರಿಗೆ ಇಂತಹ ಸಂಗತಿಗಳು ಅವುಗಳ ಮಹತ್ವವನ್ನು ತಿಳಿಸಿ, ಪತ್ರಗಳನ್ನು ಬರೆದಿದ್ದಾನೆ. 'ಹೆನ್ರಿ ರೀವ್' ಎಂಬಾತನಿಗೆ ಈ ಸಂಬಂಧವಾಗಿ ಹಲವಾರು ಪತ್ರಗಳನ್ನು ಮೆಡೋಸ್ ಟೇಲರ್ ಬರೆದಿದ್ದು, ಅವುಗಳನ್ನೆಲ್ಲ ಒಟ್ಟುಗೂಡಿಸಿ ಕ್ಯಾಡೆಲ್ ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದಾನೆ.[೨೧] ಇದಕ್ಕೆ 'ದಿ ಲೆಟರ್ಸ ಆಫ್ ಫಿಲಿಪ್ ಮೆಡೋಸ್ ಟೇಲರ್ ಟು ಹೆನ್ರಿ ರೀವ್' ಎಂದು ಹೆಸರಿಸಲಾಗಿದೆ.

ಈ ಸಂಪುಟದಲ್ಲಿರುವ ಪತ್ರಗಳಲ್ಲಿ ಅನೇಕ ಪತ್ರಗಳು ಈ ನಾಡಿನ ಕಲೆ ಸಂಸ್ಕೃತಿಯ ಕುರಿತಾಗಿಯೂ ಬೆಳಕು ಚೆಲ್ಲುತ್ತವೆ. ಮುಖ್ಯವಾಗಿ ಸುರಪುರ ಸಂಸ್ಥಾನದ ಕಲಾ ವಾತಾವರಣವನ್ನು

---

೨೧. ಕ್ಯಾಡೆಲ್ : ದಿ ಲೆಟರ್ಸ ಆಫ್ ಫಿಲಿಪ್ ಮೆಡೋಸ್ ಟೇಲರ್ ಟು ಹೆನ್ರಿ ರೀವ್ : ಆಕ್ಸಫೋರ್ಡ ಯುನಿವರ್ಸಿಟಿ ಪ್ರೆಸ್, ಲಂಡನ್–೧೯೪೭

ಇವು ಬಿಂಬಿಸುತ್ತವೆ. ಕಲಾ ವಾತಾವರಣವನ್ನು ಬೆಳೆಸಲು ಸಂಸ್ಥಾನದಲ್ಲಿ ತಾನು ಯಾವ ಕ್ರಮಗಳನ್ನು ತೆಗೆದುಕೊಂಡೆನು, ಯಾವ ಯಾವ ನೆಲೆಗಳಲ್ಲಿ ಚಿತ್ರ ಬರೆಸಿದೆನು, ರಾಜಕುಮಾರನಿಗೆ ಇತರ ವಿದ್ಯೆಗಳ ಜೊತೆಗೆ ಚಿತ್ರಕಲೆಯ ಬಗ್ಗೆಯೂ ತಿಳುವಳಿಕೆ ಆಸಕ್ತಿ ಮೂಡಿಸಲು ತಾನು ಹೇಗೆ ಕ್ರಮವಹಿಸಿದೆನು ಎಂಬಂತಹ ವಿವರಗಳನ್ನು ಪತ್ರದಲ್ಲಿ ಮೆಡೋಸ್ ಟೇಲರ್ ಬರೆದು ತಿಳಿಸಿದ್ದಾನೆ. ಇವುಗಳಲ್ಲದೆ ಈ ನಾಡಿನ ಜನರ ಕಲಾಪ್ರೀತಿ, ಹಬ್ಬ–ಹರಿದಿನ, ಜಾತ್ರೆ–ಉತ್ಸವಗಳಲ್ಲಿ ಇವರು ಆಚರಿಸುವ ಸಂಪ್ರದಾಯಗಳು, ಆ ಹಿನ್ನೆಲೆಯಲ್ಲಿ ಅನುಸರಿಸುವ ಕಲಾತ್ಮಕ ಆಚರಣೆಗಳು, ಚಿತ್ರರಚನೆ, ಮುಂತಾದ ಸಂಗತಿಗಳನ್ನು ತಿಳಿಸುತ್ತ ಈ ಸಂಸ್ಥಾನದಲ್ಲಿರುವ ಕಲಾವಿದರ ಬಗ್ಗೆಯೂ ಪ್ರಸ್ತಾಪಿಸಿದ್ದಾನೆ.

ಇವುಗಳ ಜೊತೆಗೆ ತಾನು ಪ್ರವಾಸ ಹೋದಲ್ಲೆಲ್ಲ ಕಂಡು ಬಂದ ಕಲಾತ್ಮಕ ಸಂಗತಿಗಳ ಬಗ್ಗೆ ಪತ್ರದಲ್ಲಿ ಬರೆದು ತನ್ನ ಮಿತ್ರ ಹೆನ್ರಿ ರೀವ್‌ನಿಗೆ ತಿಳಿಸಿದ್ದಾನೆ. ವಿಜಾಪೂರ ಪ್ರದೇಶದ ಸುಂದರ ವಾಸ್ತುರಚನೆಗಳು ಅಲ್ಲಿನ ಚಿತ್ರಕಲೆ ಬಗ್ಗೆ ಈತ ತಿಳಿಸುತ್ತಾನೆ. ಹೀಗೆ ಕಲೆಯ ಹಿನ್ನೆಲೆಯಲ್ಲಿ ಈತನ ಪತ್ರಗಳು ಮೌಲಿಕ ಮಾಹಿತಿ ನೀಡುತ್ತವೆ. ಹಾಗಾಗಿ ಕರ್ನಾಟಕ ಕಲಾ ಸಾಹಿತ್ಯದ ದೃಷ್ಟಿಯಿಂದ ಈ ಕೃತಿಯನ್ನು ಮಹತ್ವಪೂರ್ಣವಾದ ಕೃತಿ ಎಂಬುದಾಗಿ ಪರಿಗಣಿಸಬಹುದು.

**ದಿ ಅರ್ಲಿ ಹಿಸ್ಟರಿ ಆಫ್ ದಿ ಡೆಕ್ಕನ್ ಫೈನ್ ಆರ್ಟ್ಸ್ :**

ಭಾರತೀಯ ಕಲಾಕ್ಷೇತ್ರದಲ್ಲಿ ದಕ್ಷಿಣ ಭಾರತದ ಕಲಾ ಪರಂಪರೆ ಮತ್ತು ಕಲಾ ಪ್ರಕಾರಗಳಿಗೆ ಮಹತ್ವದ ಸ್ಥಾನವಿದೆ. ಈ ಹಿನ್ನೆಲೆಯಲ್ಲಿ ಲಲಿತಕಲೆಗಳಿಗೆ ಸಂಬಂಧಿಸಿದಂತೆ ಪ್ರಸ್ತುತ ಕೃತಿಯು ಮೌಲಿಕವಾದ ವಿಚಾರಗಳನ್ನು ತಿಳಿಸುತ್ತದೆ. ಈ ಕೃತಿಯಲ್ಲಿ[೨೨] ದಕ್ಷಿಣ ಭಾರತದ ಪ್ರಮುಖ ರಾಜ ಮನೆತನಗಳ ಕಾಲದಲ್ಲಿ ರಚನೆಯಾದ ಕಲೆಗಳ ಬಗ್ಗೆ ಪರಾಮರ್ಶಿಸಲಾಗಿದೆ. ದಕ್ಷಿಣ ಭಾರತದ ಬಿಜಾಪೂರ, ಬೀದರ್, ಅಹಮ್ಮದನಗರ, ಬೀರಾರ್ ಮತ್ತು ಗೋಲ್ಕೊಂಡಾ ರಾಜ್ಯಗಳು, ವಿಜಯನಗರ, ತಂಜಾವೂರು, ಮೈಸೂರು ಹಾಗೂ ಕೆಲವು ಪ್ರಾದೇಶಿಕ ಸಂಸ್ಥಾನಿಕರ ಕಾಲದ ಕಲಾರಚನೆಗಳನ್ನು ಇಲ್ಲಿ ಗಮನಿಸಲಾಗಿದೆ.

ಇಲ್ಲಿ ಮುಖ್ಯವಾಗಿ ವಾಸ್ತಕಲೆ, ಶಿಲ್ಪಕಲೆ ಮತ್ತು ಚಿತ್ರಕಲೆಯನ್ನು ಪರಿಗಣಿಸಲಾಗಿದೆ. ಇನ್ನುಳಿದ ಲಲಿತಕಲೆಗಳ ಪ್ರಕಾರಗಳನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ. ಚಿತ್ರಕಲೆಯಲ್ಲಿ ಭಿತ್ತಿಚಿತ್ರಗಳು, ಕಿರುರೂಪ ಚಿತ್ರಗಳು, ಹಸ್ತಪ್ರತಿ ಚಿತ್ರಗಳು ಮತ್ತು ರಾಜವಂಶಸ್ಥರ ವ್ಯಕ್ತಿಚಿತ್ರ ಮತ್ತು ಭಾವಚಿತ್ರಗಳನ್ನು ಪರಿಗಣಿಸಲಾಗಿದ್ದರೆ, ವಾಸ್ತುಕಲೆಯಲ್ಲಿ ಅವರ ಕಾಲದ ಅರಮನೆಗಳು, ಮನೆ–ಮಠ, ಮಂದಿರ, ಮಸೀದೆಗಳು, ಸಾರ್ವಜನಿಕ ಕಟ್ಟಡಗಳು ಮತ್ತು ಕೋಟೆ ಕೊತ್ತಲಗಳಂತಹ ರಚನೆಗಳನ್ನು ಗಮನಿಸಲಾಗಿದೆ. ಈ ಮೇಲ್ಕಂಡ ಕಲಾರಚನೆಗಳಿಗೆ ಸಂಬಂಧಿಸಿದಂತೆ ರಚನಾಕಾಲ, ವಿಧಾನ, ಶೈಲಿ, ಪ್ರಭಾವ,. ತಾಂತ್ರಿಕ ಮತ್ತು ಐತಿಹಾಸಿಕ ಮಹತ್ವ, ಸಾಂಸ್ಕೃತಿಕ ಹಿರಿಮೆ, ಪ್ರೇರಣೆ ಮತ್ತು ಲಕ್ಷಣಗಳನ್ನು ವಿವೇಚಿಸಲಾಗಿದೆ. ಡೆಕ್ಕನ್ ಕಲಾಶೈಲಿಯು ಈ ಕೃತಿಯಲ್ಲಿ ಪ್ರಮುಖವಾಗಿ ಬಿಂಬಿತವಾಗಿದ್ದು ಚಿತ್ರಕಲೆಯ ಜೊತೆಗೆ ವಾಸ್ತುಕಲೆ ಮತ್ತು ಶಿಲ್ಪಕಲೆಯೂ ಇಲ್ಲಿ ಹೇಳಲ್ಪಟ್ಟಿವೆ.

**ದಿ ಡೆವಲಪ್‌ಮೆಂಟ್ ಆಫ್ ಅರ್ಲಿ ಕಲ್ಚರ್ ಇನ್ ರಾಯಚೂರ ದೋ ಆಬ್ :**

ಕರ್ನಾಟಕದ ಅನೇಕ ಭಾಗಗಳಲ್ಲಿ ಪ್ರಾಗಿತಿಹಾಸ ಕಾಲದ ಸಂಸ್ಕೃತಿಯ ನೆಲೆಗಳಿವೆ. ಕೃಷ್ಣಾ ಮತ್ತು ತುಂಗಭದ್ರಾ ನದಿ ಕೊಳ್ಳದ ಪ್ರದೇಶಗಳು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ರಾಯಚೂರು

೨೨. ಜಿ.ಯಜದಾನಿ : ದಿ ಅರ್ಲಿ ಹಿಸ್ಟರಿ ಆಫ್ ದಿ ಡೆಕ್ಕನ್ ಫೈನ್ ಆರ್ಟ್ಸ್ : ಆಕ್ಸಫೋರ್ಡ ಯುನಿವರ್ಸಿಟಿ ಪ್ರೆಸ್, ಆಕ್ಸಫರ್ಡ–೧೯೭೨

ದೋ ಆಬ್ ಪ್ರದೇಶವು ಇಂತಹ ಪ್ರಾಗಿತಿಹಾಸ ಕಾಲದ ಸಂಸ್ಕೃತಿಯ ನೆಲೆಗಳನ್ನು ಹೊಂದಿದ ಶ್ರೀಮಂತ ಪ್ರದೇಶವಾಗಿದೆ. ಪ್ರಸ್ತುತ ಕೃತಿಯು ರಾಯಚೂರ ದೋ ಆಬ್ ಪ್ರದೇಶದ ಪ್ರಾಗಿತಿಹಾಸ ಕಾಲದ ಸಂಸ್ಕೃತಿಯನ್ನು ಕುರಿತಾಗಿದ್ದು, ಎಫ್.ಆರ್.ಅಲಚಿನ್ ಅವರು ಲಂಡನ್ ವಿಶ್ವವಿದ್ಯಾಲಯಕ್ಕೆ ಪಿ.ಎಚ್.ಡಿ. ಪದವಿಗಾಗಿ ಸಲ್ಲಿಸಲಾದ ಮಹಾಪ್ರಬಂಧವಾಗಿದೆ.[೨೩]ಈ ಸಂಶೋಧನಾ ಕೃತಿಯಲ್ಲಿ ರಾಯಚೂರು ದೋ ಆಬ್ ಪ್ರದೇಶದ ಪ್ರಾಗಿತಿಹಾಸ ಕಾಲದ ಜನವಸತಿ ನೆಲೆಗಳು, ಅವರ ಜನಜೀವನ, ನೆಲೆಗಳ ಪ್ರಕಾರಮ ಸ್ವರೂಪ, ಲಕ್ಷಣಗಳು, ಅವರ ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಗತಿಗಳನ್ನು ಪರಿಶೀಲಿಸಲಾಗಿದೆ. ಅಲ್ಲದೆ ಅವರವಾಸದ ನೆಲೆಗಳಲ್ಲಿ ಅವರು ನಿರ್ಮಿಸಿಕೊಳ್ಳುತ್ತಿದ್ದ ಕಲಾತ್ಮಕ ಮನೆಗಳು, ಸಮಾಧಿಗಳು, ಮೃತ್‌ಪಾತ್ರೆ ಮತ್ತು ಅದರಲ್ಲಿನ ಚಿತ್ರಗಳು, ಕಲಾತ್ಮಕ ಆಯುಧಗಳು, ನಿತ್ಯ ಬಳಕೆಯ ವಸ್ತುಗಳು, ಮುಂತಾದ ಅಂಶಗಳ ಬಗ್ಗೆ ವಿವೇಚಿಸಲಾಗಿದೆ. ರಾಯಚೂರು ದೋ ಆಬ್ ಪ್ರದೇಶದಲ್ಲಿ ರಚನೆಯಾದ ರಾಯಚೂರು, ಹಿರೇಬೆನಕಲ್, ಮಸ್ಕಿ, ಪಿಕ್ಕಿಹಾಳ, ತಾವರಗೆರೆ ಪ್ರದೇಶಗಳಲ್ಲಿನ ಪ್ರಾಗಿತಿಹಾಸ ಚಿತ್ರಗಳ ಬಗ್ಗೆ ಇಲ್ಲಿ ಹೇಳಲಾಗಿದೆ. ಬಯಲು ಬಂಡೆಯ ಕುಟ್ಟು ಚಿತ್ರ ಹಾಗೂ ಕೊರೆಚಿತ್ರಗಳಲ್ಲದೆ ಶಿಲಾಶ್ರಯ ತಾಣಗಳಲ್ಲಿ ರಚನೆಯಾದ ವರ್ಣಚಿತ್ರಗಳ ಚಿತ್ರಶೈಲಿ, ಪ್ರಕಾರ, ವರ್ಣವಿನ್ಯಾಸ, ವಸ್ತುವಿಷಯಗಳಂತಹ ಸಂಗತಿಗಳನ್ನು ಇಲ್ಲಿ ವಿವೇಚಿಸಲಾಗಿದೆ.

**ಆರ್ಟ ಎಕ್ಸಪೀರಿಯನ್ಸ್ :**

ಕಲೆ ಮತ್ತು ಕಲಾವಿದರ ಬಗ್ಗೆ ಕೆಲಮಟ್ಟಿಗೆ ಬರವಣಿಗೆಗಳು ಕರ್ನಾಟಕದ ಮಟ್ಟಿಗೆ ಬಂದಿದ್ದರೂ ಕಲಾವಿಮರ್ಶೆ, ಕಲಾತತ್ವಶಾಸ್ತ್ರ, ಮತ್ತು ಸೌಂದರ್ಯಶಾಸ್ತ್ರಗಳಂತಹ ವಿಚಾರಗಳಲ್ಲಿ ಹೆಚ್ಚಿನ ಪ್ರಮಾಣದ ಬರವಣಿಗೆಗಳು ಕಂಡುಬರುವುದಿಲ್ಲ. ಹಾಗಾಗಿ ಕಲಾತತ್ವ ಶಾಸ್ತ್ರಕ್ಕೆ ಸಂಬಂಧಪಟ್ಟ ಈ ಕೃತಿಯು ಇಲ್ಲಿ ಮಹತ್ವದ್ದಾಗಿದೆ. ಇದನ್ನು ಹಿರಿಯಣ್ಣ ಬರೆದಿದ್ದು[೨೪] ಇಂಗ್ಲೀಷ ಭಾಷೆಯಲ್ಲಿದೆ. ಈ ಚಿಕ್ಕ ಕೃತಿಯಲ್ಲಿ ಕಲೆ, ಕಲಾವಿದ, ಕಲೆಯ ಮೂಲತತ್ವಗಳು, ಸೌಂದರ್ಯೋಪಾಸನೆ, ರಸನಿಷ್ಪತ್ತಿ, ರೀತಿ, ಶೈಲಿ, ಪ್ರತಿಭೆ, ಔಚಿತ್ಯ, ಅಲಂಕಾರ, ಮಾನಸಿಕದೂರ, ಮುಂತಾದ ವಿಷಯಗಳು ಚರ್ಚಿಸಲ್ಪಟ್ಟಿವೆ. ಇದಲ್ಲದೆ ಕಲಾಕೃತಿ ಮತ್ತು ಕಲಾವಿದ, ಕಲೆ ಮತ್ತು ಸಮಾಜ, ಕಲಾಕೃತಿ ಮತ್ತು ಸಹೃದಯರ ಸಂಬಂಧಗಳು ಇಲ್ಲಿ ವಿವೇಚನೆಗೊಂಡಿವೆ. ಭರತನ ನಾಟ್ಯಶಾಸ್ತ್ರದ ಅಂಶಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಚಿತ್ರಕಲೆಗೆ ಅವುಗಳನ್ನು ಸಮೀಕರಿಸಿ ವಿವೇಚಿಸಲಾಗಿದೆ.

ಕಲಾನುಭವ, ಕಲಾತತ್ವ ವಿಚಾರಗಳ ಬಗ್ಗೆ ಪುಸ್ತಕಗಳೇ ಇಲ್ಲ ಎನ್ನುವ ಕೊರತೆಯ ಮಧ್ಯ ಇದೊಂದು ಮಿನುಕು ದೀಪದ ಹಾಗೆ ಗೋಚರಿಸುತ್ತದೆ. ದೀರ್ಘವಾದ ವಿವರಣೆಗಳನ್ನು ಇದು ಕೊಡದೇ ಹೋದರೂ ಕಲಾಸಾಹಿತ್ಯಕ್ಕೆ ಗಮನಾರ್ಹವಾದ ಪುಸ್ತಕವಾಗಿದೆ ಎನ್ನಬಹುದು.

**ಡೆಕ್ಕನಿ ಸ್ಕೂಲ್ ಬಿಜಾಪೂರ :**

ಬಿಜಾಪೂರ ಮುನಿಸಿಪಾಲಿಟಿಗೆ ನೂರು ವರ್ಷಗಳು ತುಂಬಿದ ಸಂದರ್ಭದಲ್ಲಿ ಈ ಕೃತಿಯನ್ನು ಹೊರತರಲಾಗಿದೆ. ಇದನ್ನು ಮೋತಿಚಂದ್ರ ಬರೆದಿದ್ದು[೨೫] ಬಿಜಾಪುರದ ಅಸರ್‌ಮಹಲ್‌ದಲ್ಲಿರುವ ಚಿತ್ರಗಳ ಕುರಿತಾಗಿ ಇದು ವಿವರಿಸುತ್ತದೆ.ಅಸರ್‌ಮಹಲ್‌ನಲ್ಲಿರುವ ಮೂರು ಕೋಣೆಗಳಲ್ಲಿ ಚಿತ್ರಗಳಿದ್ದು, ಮೊದಲೆರಡು ಕೋಣೆಗಳಲ್ಲಿ ಹೂಬಳ್ಳಿ ನಕ್ಷೆಗಳು, ಜಾಮಿತಿಕ ವಿನ್ಯಾಸಗಳಿವೆ. ಆದರೆ ಮೂರನೆಯ

೨೩. ಎಫ್.ಆರ್.ಅಲಚಿನ್ : ದಿ ಡೆವಲಪ್‌ಮೆಂಟ್ ಆಫ್ ಅರ್ಲಿ ಕಲ್ಚರ್ ಇನ್ ರಾಯಚೂರ ದೋ ಆಬ್ : (ಪಿಎಚ್‌ಡಿ ಥೀಸಿಸ್): ಲಂಡನ್ ಯುನಿವರ್ಸಿಟಿ–೧೯೫೪

೨೪. ಎಮ್.ಹಿರಿಯಣ್ಣ : ಆರ್ಟ ಎಕ್ಸಪೀರಿಯನ್ಸ್ : ಕಾವ್ಯಾಲಯ ಪಬ್ಲಿಕೇಶನ್ಸ, ಮೈಸೂರು–೧೯೫೪

೨೫. ಮೋತಿಚಂದ್ರ : ಡೆಕ್ಕನಿ ಸ್ಕೂಲ್ ಬಿಜಾಪುರ್ : ಬಿಜಾಪುರ ಮುನಿಸಿಪಾಲಿಟಿ ಸೆಂಚುನರಿ ಸವೆನಿಯರ್, ಬಿಜಾಪುರ–೧೯೫೪

ಕೋಣೆಯಲ್ಲಿ ವ್ಯಕ್ತಿಚಿತ್ರಗಳಿವೆ. ಮುಸ್ಲಿಂ ವಾಸ್ತು ರಚನೆಗಳಲ್ಲಿ ವ್ಯಕ್ತಿಚಿತ್ರಗಳಿರುವುದು ಅಪರೂಪ. ಹಾಗಾಗಿ ಇವುಗಳಿಗೆ ಮಹತ್ವವಿದೆ. ರಾಜರಾಣಿಯರು, ಅಂತಃಪುರ, ಮದುವೆ ಸಮಾರಂಭ, ನಾಮಕರಣ ಮಹೋತ್ಸವ, ವನವಿಹಾರ, ಹೀಗೆ ಅನೇಕ ವಿಷಯಗಳ ಚಿತ್ರಗಳು ಇಲ್ಲಿವೆ. ಈ ಕೃತಿಯಲ್ಲಿ ಮುಖ್ಯವಾಗಿ ಚಿತ್ರಗಳ ವಸ್ತುವಿಷಯ, ವರ್ಣಗಾರಿಕೆ, ರೇಖಾಲಾಲಿತ್ಯ, ಶೈಲಿ, ಪ್ರಭಾವ, ಪ್ರೇರಣೆ, ತಾಂತ್ರಿಕ ಅಂಶಗಳಾದ ಸಂಯೋಜನೆ, ಸ್ಥಳಾವಕಾಶ, ಚಿತ್ರದ ಮೈವಳಿಕೆ ಮುಂತಾದ ಅಂಶಗಳ ಬಗ್ಗೆಯೂ ಹೇಳಲಾಗಿದೆ. ಈ ಕೃತಿಯ ಕಲಾಸಾಹಿತ್ಯ ರಂಗದಲ್ಲಿಯೂ ಅಷ್ಟೇ ಮಹತ್ವ ಪೂರ್ಣವಾಗಿದೆ.

**ಅರ್ಲಿ ವೆಸ್ಟರ್ನ ಚಾಲುಕ್ಯ ಪೇಂಟಿಂಗ್ಸ ಫ್ರಾಮ್ ಬಾದಾಮಿ :**

ದಕ್ಷಿಣ ಭಾರತದ ಕಲೆ ಮತ್ತು ಕಲಾ ಪ್ರಕಾರಗಳ ಬಗ್ಗೆ ಹಲವಾರು ಲೇಖನ ಮತ್ತು ಪುಸ್ತಕಗಳನ್ನು ಸಿ.ಶಿವರಾಮಮೂರ್ತಿಯವರು ಬರೆದಿದ್ದು, ಅವುಗಳಲ್ಲಿ ಪ್ರಸ್ತುತ 'ಅರ್ಲಿ ವೆಸ್ಟರ್ನ ಚಾಲುಕ್ಯ ಪೇಂಟಿಂಗ್ಸ ಫ್ರಾಮ್ ಬಾದಾಮಿ' ಕೃತಿಯು ಪ್ರಮುಖವಾಗಿದೆ.[೨೬] ಇದು ಬಾದಾಮಿ ಚಾಲುಕ್ಯರ ಕಾಲದ ಚಿತ್ರಕಲೆಯ ಕುರಿತು ವಿವರ ನೀಡುತ್ತದೆ. ಇಂಗ್ಲೀಷನಲ್ಲಿರುವ ಈ ಕೃತಿಯಲ್ಲಿ ಬಾದಾಮಿಯ ವೈಷ್ಣವ ಗುಹೆಯ ಭಿತ್ತಿಚಿತ್ರಗಳ ಬಗ್ಗೆ ವಿವೇಚಿಸಲಾಗಿದೆ. ಬಾದಾಮಿ ಚಾಲುಕ್ಯರನ್ನು ಪಶ್ಚಿಮ ಚಾಲುಕ್ಯರೆಂದು ಕರೆಯಲಾಗಿದ್ದು, ಇವರಲ್ಲಿ ಹಲವಾರು ಪ್ರಮುಖ ಅರಸರು ಆಡಳಿತ ನಡೆಸಿ ಕಲಾಪ್ರಿಯರೆಂದು ಹೆಸರು ಮಾಡಿದ್ದಾರೆ. ಬಾದಾಮಿಯ ವೈಷ್ಣವ ಗುಹೆಯಲ್ಲಿ ಮಂಗಳೇಶನ ಕಾಲಕ್ಕೆ ಭಿತ್ತಿಚಿತ್ರಗಳನ್ನು ಬರೆಸಲಾಗಿದೆ. ಇಲ್ಲಿನ ಭಿತ್ತಿಚಿತ್ರಗಳು ಅಜಂತಾ ಚಿತ್ರಶೈಲಿಯ ಪ್ರಭಾವದಿಂದ ಪ್ರೇರಿತವಾಗಿದ್ದು ಹಲವು ವಿಷಯಗಳಿಗೆ ಸಂಬಂಧಿಸಿವೆ. ಇಂದ್ರನ ಸಭೆ, ನರ್ತಿಸುತ್ತಿರುವ ದೇವನರ್ತಕಿಯರು, ನರ್ತಕರು, ರಾಜನ ಒಡ್ಡೋಲಗದ ದೃಶ್ಯ, ರಾಣಿಯನ್ನು ಶೃಂಗರಿಸುತ್ತಿರುವ ಸಖಿಯರು, ಯಕ್ಷ-ಯಕ್ಷಿಯರು, ಗಂಧರ್ವರು, ಹಾರುತ್ತಿರುವ ವಿದ್ಯಾಧರರು, ಹೀಗೆ ಅನೇಕ ವಿಷಯಗಳು ಇಲ್ಲಿವೆ ಎಂದು ತಿಳಿಸುತ್ತಾರೆ. ಇದರೊಂದಿಗೆ ಇಲ್ಲಿನ ಭಿತ್ತಿಚಿತ್ರಗಳ ರಚನಾಕ್ರಮವನ್ನು ಸಂಕ್ಷಿಪ್ತವಾಗಿ ಹೇಳಿದ್ದಾರೆ. ಮೊದಲಿಗೆ ಗುಹೆಯ ಶಿಲಾಗೋಡೆಗೆ ಭಿತ್ತಿಯನ್ನು ಲೇಪಿಸಿ, ಅದರ ಮೇಲೆ ಚಿತ್ರ ಬರೆಯಲಾಗಿದೆ. ಭಿತ್ತಿಯನ್ನು ವಿಷ್ಣುಧರ್ಮೋತ್ತರ ಗ್ರಂಥದಲ್ಲಿ ಹೇಳಿರುವ ವಿವರಗಳ ಪ್ರಕಾರ ತಯಾರಿಸಿಕೊಳ್ಳಲಾಗಿದೆ ಎಂಬುದು ಇವರ ಅಭಿಪ್ರಾಯ. ನಂತರದಲ್ಲಿ ಕಲಾವಿದರು ಸ್ವತಹ ತಯಾರಿಸಿಕೊಂಡ ಪ್ರಾಕೃತಿಕ ವರ್ಣಗಳಿಂದ ಚಿತ್ರಗಳನ್ನು ರಚಿಸಿದ್ದಾರೆ ಎಂದು ಹೇಳುತ್ತ ಚಿತ್ರರಚನೆಯ ಹಂತಗಳು, ಅಳತೆ ಪ್ರಮಾಣಗಳು, ರೇಖಾವಿನ್ಯಾಸ, ವರ್ಣವಿನ್ಯಾಸ, ಸಂಯೋಜನೆಯ ತತ್ವಗಳು, ಪ್ರಭಾವ, ಪ್ರೇರಣೆ, ಚಿತ್ರಶೈಲಿ, ಚಿತ್ರಕಲಾವಿದರು ಮುಂತಾದ ವಿಷಯಗಳ ಬಗ್ಗೆ ಚರ್ಚಿಸುತ್ತಾರೆ. ಇಂದು ಬಾದಾಮಿ ವೈಷ್ಣವ ಗುಹೆಯ ಚಿತ್ರಗಳು ಸಂಪೂರ್ಣ ಹಾಳಾಗಿದ್ದು, ಈ ಗ್ರಂಥದಲ್ಲಿ ಕೆಲವು ಅಮೂಲ್ಯವಾದ ಛಾಯಾಚಿತ್ರಗಳನ್ನು ಕೊಡಲಾಗಿದೆ. ಬಾದಾಮಿ ಚಿತ್ರಗಳ ಬಗ್ಗೆ ಮೌಲಿಕವಾದ ಸಂಗತಿ ತಿಳಿಸುವ ಈ ಗ್ರಂಥ ಕರ್ನಾಟಕ ಕಲಾಸಾಹಿತ್ಯಕ್ಕೆ ಗಮನಾರ್ಹವಾದ ಸೇರ್ಪಡೆಯಾಗಿದೆ.

**ಸೌತ್ ಇಂಡಿಯನ್ ಪೇಂಟಿಂಗ್ಸ್ :**

ದಕ್ಷಿಣ ಭಾರತದ ಚಿತ್ರಕಲೆಯ ಬಗ್ಗೆ ಅನೇಕ ಜನ ವಿದ್ವಾಂಸರು ಬರೆದಿದ್ದಾರೆ. ಅವರಲ್ಲಿ ಸಿ.ಶಿವರಾಮಮೂರ್ತಿಯವರ ಗ್ರಂಥ 'ಸೌತ್ ಇಂಡಿಯನ್ ಪೇಂಟಿಂಗ್ಸ್'. ಅನೇಕ ವಿಷಯಗಳನ್ನು ತಿಳಿಸುತ್ತದೆ.[೨೭] ಈ ಕೃತಿಯಲ್ಲಿ ದಕ್ಷಿಣ ಭಾರತದಲ್ಲಿ ಪ್ರಚಲಿತದಲ್ಲಿದ್ದ ಪ್ರಾಚೀನ ಕಲಾ ಪರಂಪರೆಗಳ

೨೬. ಸಿ.ಶಿವರಾಮಮೂರ್ತಿ : ಅರ್ಲಿ ವೆಸ್ಟರ್ನ ಚಾಲುಕ್ಯ ಪೇಂಟಿಂಗ್ಸ ಫ್ರಾಮ್ ಬಾದಾಮಿ : ಲಲಿತಕಲಾ ಅಕಾಡೆಮಿ, ನ್ಯೂಡೆಲ್ಲಿ-೧೯೫೫

೨೭. ಸಿ.ಶಿವರಾಮ ಮೂರ್ತಿ : ಸೌತ್ ಇಂಡಿಯನ್ ಪೇಂಟಿಂಗ್ಸ್ : ನ್ಯಾಷನಲ್ ಮ್ಯೂಜಿಯಂ ದೆಹಲಿ-೧೯೬೮

ಬಗ್ಗೆ ವಿಶ್ಲೇಷಿಸಲಾಗಿದೆ. ದಕ್ಷಿಣದಲ್ಲಿ ಮುಸ್ಲಿಂ ಸುಲ್ತಾನರು ಪ್ರೋತ್ಸಾಹಿಸಿ ಬೆಳೆಸಿದ ಡೆಕ್ಕನ್ ಕಲಾಶೈಲಿ, ವಿಜಯನಗರ ಕಲಾಶೈಲಿ, ತಂಜಾವೂರು ಕಲಾಶೈಲಿ, ಮೈಸೂರು ಕಲಾಶೈಲಿ, ಗರುಡಾದ್ರಿ ಕಲಾಶೈಲಿ, ಮುಂತಾದವುಗಳು ಮುಖ್ಯವಾಗಿದ್ದು ಅವುಗಳ ವಿವರಣೆ ಇದೆ. ಅಲ್ಲದೆ ಬಾದಾಮಿಯ ಚಿತ್ರಗಳು, ಹಂಪೆಯ ಚಿತ್ರಗಳು, ಬಿಜಾಪೂರದ ಚಿತ್ರಗಳು ಮತ್ತು ಅವರ ಕಲಾಪರಂಪರೆಯ ಬಗ್ಗೆ ವಿವೇಚಿಸಲಾಗಿದೆ. ಇಂತಹ ಅಂಶಗಳ ಜೊತೆಗೆ ದಕ್ಷಿಣದಲ್ಲಿ ಚಿತ್ರಕಲಾ ಪರಂಪರೆಯನ್ನು ಪ್ರೋತ್ಸಾಹಿಸಿ ಬೆಳೆಸಿದ ಪ್ರಮುಖ ದೊರೆಗಳ ಇತಿಹಾಸವನ್ನು ಸ್ಥೂಲವಾಗಿ ಕಟ್ಟಿಕೊಡಲಾಗಿದೆ. ಶಾತವಾಹನರು, ಚಾಲುಕ್ಯರು, ರಾಷ್ಟ್ರಕೂಟರು, ಪಲ್ಲವರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ತಂಜಾವೂರಿನ ನಾಯಕರು, ಮೈಸೂರು ದೊರೆಗಳು, ಮರಾಠರು ಹೀಗೆ ಹಲವಾರು ಜನ ಈ ಭಾಗದ ಕಲೆಯ ಬೆಳವಣಿಗೆಗೆ ತಮ್ಮ ವಿಶಿಷ್ಟ ಕೊಡುಗೆ ನೀಡಿರುವುದನ್ನು ಇಲ್ಲಿ ಪರಿಶೀಲಿಸಲಾಗಿದೆ. ಇದರಲ್ಲಿ ಬಹುಮಟ್ಟಿಗೆ ಕರ್ನಾಟಕದ ಅರಸರ ಕೊಡುಗೆಯೇ ಗಮನಾರ್ಹವಾಗಿದ್ದರಿಂದ ಈ ಕೃತಿ ಒಂದು ದೃಷ್ಟಿಯಲ್ಲಿ ಕರ್ನಾಟಕದ ಕಲೆಯನ್ನು ಕುರಿತ ಗ್ರಂಥವೆಂದೇ ಹೇಳಬಹುದಾಗಿದೆ. ಇದರಲ್ಲಿ ಮುಖ್ಯವಾಗಿ ಪ್ರಭಾವ, ಪ್ರೇರಣೆ, ರೇಖಾಲಾಲಿತ್ಯ, ಪರಿಕರಗಳು, ಚಿತ್ರಗಳ ವಸ್ತುವಿಷಯ, ಪ್ರಕಾರ, ಶೈಲಿ, ರಚನಾವಿಧಾನ, ವರ್ಣಗಾರಿಕೆಯಂತಹ ವಿಚಾರಗಳ ಬಗ್ಗೆ ವಿವೇಚಿಸಲಾಗಿದೆ.

**ಇಂಡಿಯನ್ ಪೇಂಟಿಂಗ್ಸ್ :**

ಭಾರತೀಯ ಕಲಾಕ್ಷೇತ್ರದಲ್ಲಿ ಅನೇಕ ವಿದಸ್ವಾಂಸರು ತಮ್ಮ ಬರಹಗಳಿಂದ ಗಮನಾರ್ಹ ಸ್ಥಾನ ಗಳಿಸಿದ್ದಾರೆ. ಅಂತಹ ವಿದ್ವಾಂಸರ ಸಾಲಿಗೆ ಸಿ.ಶಿವರಾಮಮೂರ್ತಿಯವರೂ ಸೇರುತ್ತಾರೆ. ಪ್ರಸ್ತುತ 'ಇಂಡಿಯನ್ ಪೇಂಟಿಂಗ್ಸ್' ಕೃತಿಯನ್ನು ಬರೆದಿದ್ದು ಇದರಲ್ಲಿ ಭಾರತೀಯ ಚಿತ್ರಕಲೆಯ ಸ್ಥೂಲಪರಿಚಯವಿದೆ.[೨೮] ಈ ಪುಸ್ತಕದಲ್ಲಿ ಹೇಳಲ್ಪಟ್ಟಿರುವ ಚಿತ್ರಕಲಾ ವಿಷಯಗಳಲ್ಲಿ ಹೆಚ್ಚಿನ ಅಂಶಗಳು ದಕ್ಷಿಣ ಭಾರತೀಯ ಚಿತ್ರಕಲಾ ಪರಂಪರೆಗೆ ಸಂಬಂಧ ಪಟ್ಟವುಗಳಾಗಿವೆ. ಇಲ್ಲಿ ಸಾಂದರ್ಭಿಕವಾಗಿ ಕರ್ನಾಟಕದ ಚಿತ್ರಕಲಾ ಪರಂಪರೆಯ ಬಗ್ಗೆಯೂ ವಿವರಗಳಿವೆ. ಕರ್ನಾಟಕದ ಬಾದಾಮಿ, ವಿಜಯನಗರ, ಸುರಪುರ, ಮೈಸೂರು ಚಿತ್ರಕಲಾ ಶೈಲಿಗಳ ಬಗ್ಗೆ ಇಲ್ಲಿ ವಿವೇಚಿಸಲಾಗಿದೆ. ಬಾದಾಮಿಯ ವೈಷ್ಣವ ಗುಹೆಯ ಚಿತ್ರಗಳ ಕಾಲ, ಚಿತ್ರಶೈಲಿ, ಪ್ರಭಾವ, ಪ್ರೇರಣೆಗಳೊಂದಿಗೆ ಚಿತ್ರಗಳ ವಸ್ತುವಿಷಯ, ರೇಖಾಲಾಲಿತ್ಯ ಮತ್ತು ಬಣ್ಣಗಾರಿಕೆ ಬಗ್ಗೆ ಹೇಳಲಾಗಿದೆ. ಅದೇ ರೀತಿಯಲ್ಲಿ ವಿಜಯನಗರ, ಮೈಸೂರ ಚಿತ್ರಶೈಲಿಯ ಬಗ್ಗೆಯೂ ಹೇಳಲಾಗಿದೆ.

**ಪೇಂಟೆಡ್ ರಾಕ್ ಶೆಲ್ಟರ್ಸ್ ಆಫ್ ಇಂಡಿಯಾ :**

ಭಾರತದ ಆದಿಮಾನವ ಚಿತ್ರಕಲೆಯ ಬಗ್ಗೆ ವಿಶೇಷವಾಗಿ ಅಧ್ಯಯನ ಮಾಡಿರುವ ವಾಕಣಕರ ಅವರು ಆ ಕುರಿತು ಅನೇಕ ಮೌಲಿಕ ಗ್ರಂಥಗಳನ್ನು ರಚಿಸಿದ್ದಾರೆ. ಪ್ರಸ್ತುತ ಅವರ 'ಪೇಂಟೆಡ್ ರಾಕ್ ಶೆಲ್ಟರ್ಸ ಆಫ್ ಇಂಡಿಯಾ' ಗ್ರಂಥವು ಪೂನಾ ವಿಶ್ವವಿದ್ಯಾಲಯದಿಂದ ಪ್ರಕಟಗೊಂಡಿದೆ.[೨೯] ಇದು ಭಾರತದ ಆದಿಮಾನವ ಕಾಲದ ಗುಹಾವರ್ಣಚಿತ್ರಗಳ ಬಗ್ಗೆ ತಿಳಿಸುತ್ತದೆ. ಭಾರತದಾದ್ಯಂತ ಪ್ರಾಗಿತಿಹಾಸಕಾಲದ ಬಂಡೆ ಚಿತ್ರಗಳು ಕಂಡುಬಂದಿದ್ದರೂ ಮಧ್ಯಭಾರತ ಮತ್ತು ದಕ್ಷಿಣ ಭಾರತದಲ್ಲಿ ಇವುಗಳ ಪ್ರಮಾಣ ಹೆಚ್ಚಾಗಿದೆ. ಭಾರತದಲ್ಲಿ ಮಧ್ಯಪ್ರದೇಶ ರಾಜ್ಯವು ಅತಿಹೆಚ್ಚು ಚಿತ್ರನೆಲೆಗಳನ್ನು ಹೊಂದಿದ ಪ್ರದೇಶವಾಗಿದ್ದರೆ, ದಕ್ಷಿಣದಲ್ಲಿ ಕರ್ನಾಟಕವು ಇಂತಹ ಚಿತ್ರಗಳ ನೆಲೆಗಳನ್ನು

೨೮. ಸಿ.ಶಿವರಾಮ ಮೂರ್ತಿ: ಇಂಡಿಯನ್ ಪೇಂಟಿಂಗ್ಸ್ : ನ್ಯಾಷನಲ್ ಬುಕ್‌ಟ್ರಸ್ಟ್ ಆಫ್ ಇಂಡಿಯಾ ನ್ಯೂ ದೆಹಲಿ-೧೯೭೦
೨೯. ವಿ.ಎಸ್.ವಾಕಣಕರ : ಪೇಂಟೆಡ್ ರಾಕ್ ಶೆಲ್ಟರ್ಸ ಆಫ್ ಇಂಡಿಯಾ : ಪೂನಾ ಯುನಿವರ್ಸಿಟಿ ಪೂನಾ-೧೯೭೩

ಹೊಂದಿದ ರಾಜ್ಯಗಳಲ್ಲಿ ಮುಂಚೂಣಿಯಲ್ಲಿದೆ. ಈ ಕೃತಿಯಲ್ಲಿ ಭಾರತದಲ್ಲಿ ಎಲ್ಲೆಲ್ಲಿ ಆದಿಮಾನವರ ಚಿತ್ರಗಳಿರುವ ಶಿಲಾಶ್ರಯ ತಾಣಗಳಿವೆ ಎಂಬುದನ್ನು ಹೇಳಲಾಗಿದೆ. ಅದರಲ್ಲಿ ಕರ್ನಾಟಕ ಪ್ರದೇಶವೂ ಸೇರಿದೆ. ಕರ್ನಾಟಕದ ಹಿರೇಬೆನಕಲ್, ಹಂಪೆ, ಬಾದಾಮಿ, ಚಿತ್ರದುರ್ಗ, ತಾವರಗೆರೆ ಪ್ರದೇಶಗಳ ವಿವರವು ಇದರಲ್ಲಿದೆ. ಇಲ್ಲಿ ಮುಖ್ಯವಾಗಿ ಶಿಲಾಶ್ರಯ ತಾಣಗಳ ಸ್ವರೂಪ, ಚಿತ್ರಗಳ ಶೈಲಿ, ಪ್ರಕಾರ, ವರ್ಣವಿನ್ಯಾಸ, ಆಕಾರಗಳ ವಿಶ್ಲೇಷಣೆ, ವಸ್ತುವಿಷಯ, ಮುಂತಾದ ಅಂಶಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ಕರ್ನಾಟಕದ ಶಿಲಾಶ್ರಯ ತಾಣಗಳಲ್ಲಿನ ಚಿತ್ರಗಳು ಮಧ್ಯಭಾರತದ ಭಿಂಬೇಟ್ಕಾ ಚಿತ್ರಗಳಿಗಿಂತ ಭಿನ್ನವಾಗಿದ್ದು, ಶೈಲಿಯಲ್ಲಿ ಬೇರೆಯಾಗಿವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿದೆ. ಇದರ ಜೊತೆಗೆ ಆ ಕಾಲದ ಜನರ ಜೀವನ ಪದ್ಧತಿಯಲ್ಲಿ ಕಲೆಯ ಅಂಶಗಳು ಹೇಗೆ ಬೆರೆತುಕೊಂಡಿದ್ದವು ಎಂಬ ಸಂಗತಿಗಳನ್ನು ಹೇಳಲಾಗಿದೆ. ಕರ್ನಾಟಕದ ಆದಿಮಾನವ ಚಿತ್ರಗಳ ಹಿನ್ನೆಲೆಯಲ್ಲಿ ಇದೊಂದು ಮಹತ್ವ ಪೂರ್ಣವಾದ ಗ್ರಂಥವಾಗಿದ್ದು, ಕರ್ನಾಟಕ ಚಿತ್ರಕಲಾ ಸಾಹಿತ್ಯ ಕ್ಷೇತ್ರಕ್ಕೆ ಮೌಲಿಕತೆಯನ್ನು ತಂದುಕೊಟ್ಟಿದೆ.

**ಕರ್ನಾಟಕ ಪೇಂಟಿಂಗ್ಸ್ :**

ಕರ್ನಾಟಕ ಚಿತ್ರಕಲೆಯ ಬಗ್ಗೆ ಮಹತ್ವಪೂರ್ಣವಾದ ಸಾಹಿತ್ಯ ರಚಿಸಿದವರಲ್ಲಿ ಶಿವರಾಮ ಕಾರಂತ ಅವರು ಪ್ರಮುಖರಾಗಿದ್ದಾರೆ. ಕರ್ನಾಟಕದ ಪ್ರಾಚೀನ ಚಿತ್ರಕಲಾ ನೆಲೆಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂದರ್ಶಿಸಿ ಸಂಶೋಧನಾತ್ಮಕ ಬರವಣಿಗೆಯನ್ನು ಕಲಾಕ್ಷೇತ್ರದಲ್ಲಿ ನೀಡಿದ್ದಾರೆ. 'ಕರ್ನಾಟಕ ಪೇಂಟಿಂಗ್ಸ್' ಕೃತಿಯಲ್ಲಿ[೩೦] ಕರ್ನಾಟಕದ ಪ್ರಾಚೀನ ಭಿತ್ತಿಚಿತ್ರಗಳು, ಹಸ್ತಪ್ರತಿ ಚಿತ್ರಗಳ ಬಗ್ಗೆ ವಿವೇಚಿಸಲಾಗಿದೆ. ಈಕೃತಿಯಲ್ಲಿ ಹಂಪೆಯ ವಿರೂಪಾಕ್ಷ ದೇವಾಲಯ, ಶಿಬಿ ನರಸಿಂಹಸ್ವಾಮಿದೇವಾಲಯ, ನರಗುಂದ ಬಾಬಾಸಾಹೇಬನ ಅರಮನೆ, ವೆಂಕಟೇಶ್ವರ ದೇವಾಲಯ, ಗುಂಡಪ್ಪ ಹಸಬಿಯವರ ಮನೆ, ನಿಪ್ಪಾಣಿಯ ರಾಜವಾಡೆ, ಅಥಣಿಯ ಮಠಗಳಲ್ಲಿನ ಪ್ರಾಚೀನ ಭಿತ್ತಿಚಿತ್ರಗಳ ಕುರಿತು ಚರ್ಚಿಸಿದೆ. ಅದರಂತೆ ಜೈನರ ಪವಿತ್ರ ಗ್ರಂಥಗಳಾದ ಧವಳ, ಜಯಧವಳ, ಮಹಾಧವಳಗಳಲ್ಲಿನ ಹಸ್ತಪ್ರತಿ ಚಿತ್ರಗಳ ಬಗ್ಗೆಯೂ ವಿವೇಚಿಸಲಾಗಿದೆ. ಮುಖ್ಯವಾಗಿ ಈ ಕೃತಿಯಲ್ಲಿ ಚಿತ್ರನೆಲೆಗಳ ಐತಿಹಾಸಿದ ಮಹತ್ವ, ಚಿತ್ರಗಳ ಪೋಷಕರು, ಚಿತ್ರಗಳ ಸದ್ಯದ ಸ್ಥಿತಿಗತಿ, ಚಿತ್ರಶೈಲಿ, ಪ್ರಭಾವ, ಪ್ರೇರಣೆ, ಚಿತ್ರಗಳ ವಸ್ತುವಿಷಯ, ಬಣ್ಣಗಾರಿಕೆ, ರೇಖಾಲಾಲಿತ್ಯ, ಚಿತ್ರ ಸಂಯೋಜನೆ, ಕಲಾವಿದರು, ಮುಂತಾದ ಅಂಶಗಳ ಬಗ್ಗೆ ಚರ್ಚಿಸಿದೆ. ಶಿವರಾಮ ಕಾರಂತರು ವಿಶ್ವದಾದ್ಯಂತ ಅನೇಕ ದೇಶಗಳ ಕಲೆಯನ್ನು ಕಂಡವರಾಗಿದ್ದು, ಅವುಗಳೊಂದಿಗೆ ಕರ್ನಾಟಕದ ಕಲೆಯನ್ನು ಸಾಂದರ್ಭಿಕವಾಗಿ ಹೋಲಿಸುವ ಮೂಲಕ ಇದಕ್ಕೊಂದು ಮೌಲ್ಯವನ್ನು ತಂದುಕೊಟ್ಟಿದ್ದಾರೆ. ಕರ್ನಾಟಕದ ಚಿತ್ರಕಲೆಯ ಬಗ್ಗೆ ಮಹತ್ವಪೂರ್ಣವಾದ ಕೃತಿ ಇದಾಗಿದ್ದು ಕರ್ನಾಟಕ ಕಲಾಸಾಹಿತ್ಯದಲ್ಲಿ ಗಮನಾರ್ಹ ಸ್ಥಾನ ಪಡೆದುಕೊಂಡಿದೆ.

**ಇಂಡಿಯನ್ ರಾಕ್ ಪೇಂಟಿಂಗ್ಸ್ :**

ಭಾರತೀಯ ಬಂಡೆ ಚಿತ್ರಕಲೆಯ ಬಗ್ಗೆ ವಿಶೇಷವಾಗಿ ಅಧ್ಯಯನ ಮಾಡಿದ ವಿಷ್ಣು ವಾಕಣಕರ ಅವರು ಆ ಕುರಿತು ಅನೇಕ ಕೃತಿಗಳನ್ನು ರಚಿಸಿದ್ದಾರೆ. 'ಇಂಡಿಯನ್ ರಾಕ್ ಪೇಂಟಿಂಗ್ಸ್' ಕೃತಿಯು ಅವರ ಮಹತ್ವದ ಕೃತಿಗಳಲ್ಲೊಂದು.[೩೧] ಇದರಲ್ಲಿ ಭಾರತದ ಪ್ರಾಗಿತಿಹಾಸ ಚಿತ್ರಕಲೆಯ ನೆಲೆಗಳ ಬಗ್ಗೆ ವಿವೇಚಿಸಲಾಗಿದೆ.

---

೩೦. ಶಿವರಾಮ ಕಾರಂತ: ಕರ್ನಾಟಕದ ಪೇಂಟಿಂಗ್ಸ್: ಪ್ರಸಾರಾಂಗ, ಯುನಿವರ್ಸಿಟಿ ಆಫ್ ಮೈಸೂರು –೧೯೭೩

೩೧. ವ್ಹಿ.ಎಸ್.ವಾಕಣಕರ್ : ಇಂಡಿಯನ್ ರಾಕ್ ಪೇಂಟಿಂಗ್ಸ್ : ಸ್ಮಿತ್ ಸೋನಿಯನ್ ಇನ್ಸಟಿಟ್ಯೂಟ್ ವಾಷಿಂಗಟನ್ ಡಿ.ಸಿ–೧೯೭೪

ಭಾರತದಾದ್ಯಂತ ಪ್ರಾಗಿತಿಹಾಸ ಕಾಲದ ಚಿತ್ರರಚನೆಯ ನೆಲೆಗಳಿವೆ. ಮಧ್ಯಪ್ರದೇಶದ ಭಿಂಬೇಟ್ಕೆ ಭಾರತದಲ್ಲಿಯೇ ಮಹತ್ವದ ನೆಲೆಯಾಗಿದೆ. ವಾಕಣಕರವರು ಇಲ್ಲಿ ಅನೇಕ ದಿನಗಳವರೆಗೆ ನೆಲೆನಿಂತು ಚಿತ್ರಗಳ ಅಧ್ಯಯನ ಮಾಡಿದ್ದಾರೆ. ಅಲ್ಲದೆ ಭಾರತದಾದ್ಯಂತ ಹಲವಾರು ಬೆಟ್ಟ ಪ್ರದೇಶಗಳನ್ನು ಸುತ್ತಾಡಿ ಪ್ರಾಗಿತಿಹಾಸ ಕಾಲದ ಚಿತ್ರಗಳ ಬಗ್ಗೆ ಬರೆದಿದ್ದಾರೆ. ಇವರ ಈ ಸಾಧನೆಗಾಗಿಯೇ ಭಾರತ ಸರಕಾರ ಇವರಿಗೆ ಪದ್ಮಶ್ರೀ ಪ್ರಶಸ್ತಿಯನ್ನು ನೀಡಿದೆ. ಪ್ರಸ್ತುತ ಕೃತಿಯಲ್ಲಿ ಭಾರತದ ಅನೇಕ ಪ್ರಾಗಿತಿಹಾಸ ಚಿತ್ರಕಲಾ ನೆಲೆಗಳನ್ನು ಹೇಳಲಾಗಿದ್ದು ಅದರಲ್ಲಿ ಕರ್ನಾಟಕದ ಹಿರೇಬೆನಕಲ್, ಬಾದಾಮಿ, ತಾವರಗೆರೆ, ಪಿಕ್ಕಿಹಾಳ, ಮಸ್ಕಿ, ಬೆಳಗಲ್, ಕುಳ್ಳೊಳ್ಳಿ, ಮುಂತಾದ ನೆಲೆಗಳ ಬಗ್ಗೆ ಪ್ರಸ್ತಾಪಿಸಲಾಗಿದೆ. ಈ ಭಾಗದ ಚಿತ್ರಗಳಲ್ಲಿ ಗುಹಾವರ್ಣ ಚಿತ್ರಗಳು ಮತ್ತು ಬಯಲುಬಂಡೆ ಚಿತ್ರಗಳೆಂಬ ಎರಡು ಪ್ರಕಾರದ ಚಿತ್ರಗಳಿವೆ ಎಂದು ತಿಳಿಸುತ್ತಾರೆ. ಇಲ್ಲಿನ ಚಿತ್ರಗಳ ವಸ್ತುವಿಷಯವನ್ನು ವಿವರಿಸುತ್ತಾ ಬೇಟೆಯ ದೃಶ್ಯ, ಕಾಡುಕೋಣ, ಕಾಡೆಮ್ಮೆ, ಕಾಡುಹಂದಿ, ಗೂಳಿ, ಜಿಂಕೆ, ಮನುಷ್ಯಾಕೃತಿಗಳು ಹೆಚ್ಚಾಗಿ ಕಂಡುಬರುತ್ತವೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಕೃತಿಯಲ್ಲಿ ಭಾರತದ ಬೇರೆ ಬೇರೆ ಪ್ರದೇಶದ ಇಂತಹ ಚಿತ್ರಗಳಿಗೆ ಕರ್ನಾಟಕದ ಚಿತ್ರಗಳನ್ನು ತೌಲನಿಕವಾಗಿ ನೋಡಲಾಗಿದೆ.

**ಮ್ಯುರಲ್ ಪೇಂಟಿಂಗ್ಸ್ ಇನ್ ಇಂಡಿಯಾ :**

ಭಾರತೀಯ ಪುರಾತತ್ವ ಇಲಾಖೆಯಲ್ಲಿ ಅಧಿಕಾರಿಯಾಗಿದ್ದ ಜೆ.ಸಿ.ನಾಗಪಾಲ ಈ ಪುಸ್ತಕ ರಚಿಸಿದ್ದಾರೆ.[೩೨] ತಮ್ಮ ಕೆಲಸ ಕಾರ್ಯದ ನಿಮಿತ್ತ ಭಾರತದ ಅನೇಕ ಭಾಗಗಳಿಗೆ ತೆರಳಿದ ಇವರು ಆ ಪ್ರದೇಶದ ಪ್ರಾಚೀನ ಭಿತ್ತಿಚಿತ್ರಗಳ ನೆಲೆಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ, ಪೂರ್ವದಿಂದ ಪಶ್ಚಿಮದವರೆಗೆ ಎಲ್ಲ ರಾಜ್ಯಗಳಲ್ಲಿರುವ ಪ್ರಮುಖ ಚಿತ್ರನೆಲೆಗಳನ್ನು ಇವರು ಪಟ್ಟಿಮಾಡಿದ್ದಾರೆ. ತಾವು ಸಂಗ್ರಹಿಸಿದ ಮಾಹಿತಿಯನ್ನು ಪುಸ್ತಕ ರೂಪದಲ್ಲಿ ವಿಶ್ಲೇಷಣಾತ್ಮಕವಾಗಿ ಪ್ರಕಟಿಸಿದ್ದಾರೆ. ಈ ಬೃಹತ್ ಕೃತಿಯಲ್ಲಿ ಭಾರತದ ಅನೇಕ ಪ್ರದೇಶಗಳ ಪ್ರಾಚೀನ ಭಿತ್ತಿಚಿತ್ರಗಳ ಬಗ್ಗೆ ಸ್ಥೂಲ ಮಾಹಿತಿ ಕೊಡಲಾಗಿದೆ. ಅದರಲ್ಲಿ ಕರ್ನಾಟಕ ರಾಜ್ಯದ ಭಿತ್ತಿಚಿತ್ರಗಳ ಬಗ್ಗೆ ಸಹಿತ ಹೇಳಲಾಗಿದೆ. ಕರ್ನಾಟಕದ ಬಾದಾಮಿ, ಶಿಬಿ, ಶಿರಾ, ಮೈಸೂರು, ಹಂಪೆ, ಬೀದರ್, ಬಿಜಾಪೂರ, ಕುಮಟಗಿ ಭಿತ್ತಿಚಿತ್ರಗಳ ಕುರಿತಾಗಿ ಮಾಹಿತಿ ಕೊಡಲಾಗಿದೆ. ಈ ಕೃತಿಯಲ್ಲಿ ಕೊಡಲಾಗಿರುವ ವಿವರದಂತೆ ಚಿತ್ರಗಳಿರುವ ರಾಜ್ಯ, ತಾಲೂಕು, ಚಿತ್ರಗಳಿರುವ ಊರು, ನೆಲೆ, ಕಾಲಮಾನ, ಚಿತ್ರಶೈಲಿ, ವಸ್ತುವಿಷಯ, ರಚನಾ ಮಾಧ್ಯಮ, ಪ್ರಭಾವ, ಪ್ರೇರಣೆ, ಚಿತ್ರಗಳ ಸದ್ಯದ ಸ್ಥಿತಿಗತಿ ಮುಂತಾದ ಅಂಶಗಳನ್ನು ಹೇಳಲಾಗಿದೆ. ಈ ಕೃತಿಯು ಪ್ರಾಚೀನ ಭಿತ್ತಿಚಿತ್ರಕಲೆಯ ಬಗ್ಗೆ ಒಂದು ಉಪಯುಕ್ತ ಕೈಪಿಡಿಯಾಗಿದೆ. ಚಿತ್ರಗಳ ಪ್ರಾಥಮಿಕ ಮಾಹಿತಿಯು ಇದರಿಂದ ಲಭ್ಯವಾಗುತ್ತದೆ.

**ಎ ನೋಟ್ಸ ಆನ್ ಆದಿಲ್‌ಶಾಹಿ ಪೇಂಟಿಂಗ್ಸ್ :**

ಕರ್ನಾಟಕದ ಚಿತ್ರಕಲೆಯ ಬಗ್ಗೆ ಅಲ್ಪಸ್ವಲ್ಪ ಬರವಣಿಗೆ ಬಂದಿದ್ದರೂ ಇಲ್ಲಿನ ಮುಸ್ಲಿಂ ಅರಸರ ಕಾಲದ ಚಿತ್ರಕಲೆಯ ಬಗ್ಗೆ ಹೆಚ್ಚಿನ ಸಾಹಿತ್ಯ ಸೃಷ್ಟಿಗೊಂಡಿಲ್ಲ. ಈ ಹಿನ್ನೆಲೆಯಲ್ಲಿ ಆರ್.ಸಿ.ಅಗರವಾಲ್ ರಚಿಸಿದ ಈ ಕೃತಿ[೩೩] ಮಹತ್ವ ಪಡೆದುಕೊಳ್ಳುತ್ತದೆ. ಇದು ಮುಖ್ಯವಾಗಿ ಬಿಜಾಪೂರ ಆದಿಲ್‌ಶಾಹಿ ದೊರೆಗಳ ಕಾಲದ ಚಿತ್ರಕಲೆಯ ಬಗ್ಗೆ ತಿಳಿಸುತ್ತದೆ.

---

೩೨. ಜೆ.ಸಿ.ನಾಗಪಾಲ್:ಮ್ಯೂರಲ್ ಪೇಂಟಿಂಗ್ಸ್ ಇನ್ ಇಂಡಿಯಾ: ಗೇನ್ ಪಬ್ಲಿಕೇಷನ್ಸ, ನ್ಯೂದೆಹಲಿ -೧೯೭೭

೩೩. ಆರ್.ಸಿ.ಅಗರವಾಲ್: ಎ ನೋಟ್ಸ ಆನ್ ಆದಿಲ್‌ಶಾಹಿ ಪೇಂಟಿಂಗ್ಸ್: ಆರ್ಕಿಯಾಲಜಿಕಲ್ ಸ್ಟಡೀಜ್, ಮೈಸೂರು-೧೯೭೮

ದಕ್ಷಿಣ ಭಾರತದ ಮುಸ್ಲಿಂ ದೊರೆಗಳಲ್ಲಿ ಬಿಜಾಪೂರ ಸುಲ್ತಾನರು ಚಿತ್ರಕಲೆಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟು ಬೆಳೆಸಿದವರಾಗಿದ್ದಾರೆ. ಅದರಲ್ಲೂ ಡೆಕ್ಕನ್ ಕಲಾಶೈಲಿಯ ಹೆಚ್ಚಿನ ಕೃತಿಗಳು ಇವರ ಪ್ರೋತ್ಸಾಹದ ಅಡಿಯಲ್ಲೇ ರಚನೆಯಾಗಿವೆ. ಡೆಕ್ಕನ್ ಚಿತ್ರಕಲಾ ಶೈಲಿಯನ್ನು ರೂಪಿಸುವಲ್ಲಿ ಇವರ ಪಾತ್ರ ಮುಖ್ಯವಾಗಿದೆ. ಆದಿಲ್‌ಶಾಹಿ ದೊರೆಗಳಲ್ಲಿ ಅನೇಕ ಅರಸರು ಕಲಾಪ್ರೀತಿವುಳ್ಳವರು ಮಾತ್ರವಲ್ಲದೆ ಸ್ವತಹ ಕಲಾವಿದರಾಗಿದ್ದರು. ಬಿಜಾಪೂರ ಆದಿಲ್‌ಶಾಹಿಗಳ ಕಾಲಾವಧಿಯಲ್ಲಿ ಬೃಹತ್ ಪ್ರಮಾಣದ ಭಿತ್ತಿಚಿತ್ರಗಳು, ಕಿರುರೂಪ ಚಿತ್ರಗಳು, ಹಸ್ತಪ್ರತಿ ಚಿತ್ರಗಳು ಹೀಗೆ ವಿವಿಧ ಪ್ರಕಾರದ ಚಿತ್ರಗಳು ರಚನೆಯಾಗಿವೆ. ಮಾತ್ರವಲ್ಲದೆ ಪ್ರತ್ಯೇಕ ಶೈಲಿಯನ್ನು ಪ್ರತಿಬಿಂಬಿಸುತ್ತವೆ. ರಾಜರಾಣಿಯರ ಚಿತ್ರಗಳು, ಪ್ರಾಣಿ-ಪಕ್ಷಿಗಳು, ಸಾಧು-ಸಂತರು, ಯೋಗಿಣಿಯರು, ಮುಂತಾದ ವೈವಿಧ್ಯ ವಿಷಯಗಳಿವೆ. ಚಿತ್ರಶೈಲಿಯು ಮೊಗಲ್ ಮತ್ತು ರಜಪೂತ ಶೈಲಿಗಳ ಸಮ್ಮಿಶ್ರದಿಂದ ಕೂಡಿದೆ. ಇಂತಹ ಹಲವಾರು ಅಂಶಗಳನ್ನು ಈ ಕೃತಿಯಲ್ಲಿ ಹೇಳಲಾಗಿದೆ. ಇಲ್ಲಿ ಮುಖ್ಯವಾಗಿ ಆದಿಲ್‌ಶಾಹಿ ಚಿತ್ರಶೈಲಿ, ರಚನಾ ವಿಧಾನ, ವಸ್ತುವಿಷಯ, ತಂತ್ರಗಾರಿಕೆ, ಪ್ರಭಾವ, ಪ್ರೇರಣೆ, ಬೆಳವಣಿಗೆ ಮುಂತಾದ ಅಂಶಗಳ ಬಗ್ಗೆ ವಿವೇಚಿಸಲಾಗಿದೆ.

**ಟ್ರೆಡಿಷನಲ್ ಪೇಂಟಿಂಗ್ಸ್ ಆಫ್ ಕರ್ನಾಟಕ :**

ಕರ್ನಾಟಕದ ಪ್ರಾಚೀನ ಸಾಂಪ್ರದಾಯಿಕ ಚಿತ್ರಶೈಲಿಗಳ ಬಗ್ಗೆ ಇರುವ ಈ ಪುಸ್ತಕವನ್ನು ಬಿ.ವಿ.ಕೆ. ಶಾಸ್ತ್ರಿ ಮತ್ತು ಎಸ್.ಆರ್.ರಾವ್ ಕೂಡಿ ರಚನೆ ಮಾಡಿದ್ದಾರೆ.[೩೪] ಇಂಗ್ಲೀಷನಲ್ಲಿರುವ ಈ ಕೃತಿಯು ಭಿತ್ತಿಚಿತ್ರಗಳು, ಕಿರುರೂಪ ಚಿತ್ರಗಳು, ಹಸ್ತಪ್ರತಿ ಚಿತ್ರಗಳ ಬಗ್ಗೆ ತಿಳಿಸುತ್ತದೆ. ಬಾದಾಮಿಯ ಚಾಲುಕ್ಯರಿಂದ ಹಿಡಿದು ಮೈಸೂರು ಅರಸರವರೆಗೆ ವಿವಿಧ ಕಲಾಶೈಲಿಗಳು ಈ ನಾಡಿನಲ್ಲಿ ಬೆಳೆದು ಬಂದಿವೆ. ಬಾದಾಮಿ ಚಾಲುಕ್ಯರ ಕಾಲದಲ್ಲಿ ಬಾದಾಮಿಯಲ್ಲಿ ಮಾತ್ರವಲ್ಲದೆ ಅಜಂತಾದಲ್ಲಿಯೂ ಚಿತ್ರರಚನೆ ನಡೆದಿದೆ. ಬಾದಾಮಿಯ ಚಿತ್ರಗಳು ಅಜಂತೆಯ ಪ್ರಭಾವ, ಪ್ರೇರಣೆಗಳಿಂದ ಕೂಡಿದವುಗಳಾಗಿವೆ. ನಂತರದಲ್ಲಿ ಇನ್ನುಳಿದ ರಾಜವಂಶಸ್ಥರ ಕಾಲದಲ್ಲಿ ಚಿತ್ರರಚನೆಗಳು ನಡೆದರೂ ಹೊಯ್ಸಳರ ಕೊಡುಗೆಯು ಚಿತ್ರಕಲೆಯ ದೃಷ್ಟಿಯಿಂದ ಗಮನಾರ್ಹವಾಗಿದೆ. ಇವರ ಕಾಲದಲ್ಲಿ ಜೈನ ಚಿತ್ರಕಲೆಯು ಬೆಳೆದು ಪ್ರಬುದ್ಧತೆ ಹೊಂದಿತು. ಮೂಡಬಿದಿರೆ, ಶ್ರವಣಬೆಳಗೊಳ, ಕಾರ್ಕಳ ಮುಂತಾದ ಬಸದಿಗಳಲ್ಲಿ ಚಿತ್ರಗಳನ್ನು ರಚಿಸಲಾಗಿದೆ. ಮಾತ್ರವಲ್ಲದೆ ಜೈನರ ಪವಿತ್ರಗ್ರಂಥ ಧವಳ, ಜಯಧವಳ, ಮಹಾಧವಳ ಗ್ರಂಥಗಳಲ್ಲಿ ಸಾಂದರ್ಭಿಕ ಚಿತ್ರಗಳನ್ನು ಬರೆಯಲಾಗಿದೆ.

ಹೊಯ್ಸಳರ ನಂತರ ವಿಜಯನಗರ ದೊರೆಗಳು ಕರ್ನಾಟಕ ಸಾಂಪ್ರದಾಯಿಕ ಕಲೆಯನ್ನು ಪ್ರಬುದ್ಧವಾಗಿ ಬೆಳೆಯುವಂತೆ ಮಾಡಿದರಲ್ಲದೆ ಆಂಧ್ರ, ತಮಿಳುನಾಡು ಪ್ರದೇಶಗಳಿಗೂ ಈ ಕಲಾ ಶೈಲಿಯನ್ನು ವಿಸ್ತರಿಸಿದರು. ಈ ಕಾಲದಲ್ಲಿ ಅನೇಕ ದೇವಾಲಯಗಳಲ್ಲಿ ಭಿತ್ತಿಚಿತ್ರಗಳನ್ನು ರಚನೆ ಮಾಡಲಾಗಿದೆಯಲ್ಲದೆ ಹಲವಾರು ಗ್ರಂಥಗಳಲ್ಲಿ ಹಸ್ತಪ್ರತಿ ಚಿತ್ರಗಳನ್ನು ರಚಿಸಲಾಗಿದೆ. ವಿಜಯನಗರ ಪತನದ ನಂತರ ಮೈಸೂರು, ತಂಜಾವೂರು, ನಂತರದಲ್ಲಿ ಸುರಪುರ ಹೀಗೆ ಚಿಕ್ಕಪುಟ್ಟ ಸಂಸ್ಥಾನಿಕರಲ್ಲಿ ಸಾಂಪ್ರದಾಯಿಕ ಕಲೆ ಕೆಲವು ಬದಲಾವಣೆಗಳೊಂದಿಗೆ ರಚನೆಯಾಗುತ್ತ ಬಂದಿತು. ಹೀಗೆ ಕರ್ನಾಟಕದ ಸಾಂಪ್ರದಾಯಿಕ ಕಲೆಯು ಬೆಳೆದು ಬಂದ ಇತಿಹಾಸವನ್ನು ಇಲ್ಲಿ ಕೊಡಲಾಗಿದೆ. ಮುಂದಿನ ಹಂತದಲ್ಲಿ ಪ್ರತ್ಯೇಕವಾಗಿ ಒಂದೊಂದು ಶೈಲಿಗಳ ಬಗೆಗೆ ವಿವರವಾಗಿ ವಿಶ್ಲೇಷಣೆ ಮಾಡಲಾಗಿದೆ.

೩೪. ಬಿ.ವಿ.ಕೆ.ಶಾಸ್ತ್ರಿ ಮತ್ತು ಎಸ್.ಆರ್.ರಾವ್ : ಟ್ರೆಡಿಷನಲ್ ಪೇಂಟಿಂಗ್ಸ್ ಆಫ್ ಕರ್ನಾಟಕ: ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು-೧೯೮೦

**ಡೆಕ್ಕನಿ ಪೇಂಟಿಂಗ್ಸ :**

ಡೆಕ್ಕನಿ ಪೇಂಟಿಂಗ್ಸ್‌ಗಳ ಬಗ್ಗೆ ಹಲವಾರು ಜನ ವಿದ್ವಾಂಸರು ಬರೆದಿದ್ದು ಅದರಲ್ಲಿ ಸ್ಟೆಲ್ಲಾ ಕ್ರಾಮ್ರಿಶ್ಚ್, ಮಾರ್ಕ ಜಬ್ರೋವಿಸ್ಕಿ, ಆನಂದಕುಮಾರಸ್ವಾಮಿ, ಸಿ.ಶಿವರಾಮಮೂರ್ತಿ ಇವರ ಬರಹಗಳು ಗಮನಾರ್ಹವಾಗಿವೆ. ಅಧ್ಯಯನದ ತಳಹದಿಯ ಮೇಲೆ ಮಾರ್ಕ ಜಬ್ರೋವಿಸ್ಕಿಯವರು[೩೫] ೧೯೮೩ರಲ್ಲಿ ಡೆಕ್ಕನಿ ಪೇಂಟಿಂಗ್ಸ್ ಎಂಬ ಮಹತ್ವಪೂರ್ಣ ಕೃತಿಯನ್ನು ರಚನೆ ಮಾಡಿದ್ದು, ಇದು ದಖಿನ್ ಚಿತ್ರಕಲೆಯ ಬಗ್ಗೆ ತಿಳಿಸುತ್ತದೆ. ದಖಿನ್ ಚಿತ್ರಶೈಲಿಯು ದಕ್ಷಿಣ ಭಾರತದ ಮುಖ್ಯ ಐದು ಶಾಹೀ ರಾಜ್ಯಗಳಲ್ಲಿ ಬೆಳೆದು ಬಂದಿತು. ಬಿಜಾಪೂರ, ಬೀದರ್, ಗೊಲ್ಕೊಂಡಾ, ಬೀರಾರ್ ಮತ್ತು ಅಹಮ್ಮದನಗರ ಈ ಐದು ರಾಜ್ಯಗಳಲ್ಲಿ ದಖಿನ್ ಚಿತ್ರಕಲೆಯು ಬೆಳೆಯಿತಾದರೂ ಬಿಜಾಪೂರವು ಈ ಕಲೆಗೆ ಹೆಚ್ಚಿನ ಪ್ರೋತ್ಸಾಹ ನೀಡಿತು. ದಖಿನ್ ಶೈಲಿಯ ಹೆಚ್ಚಿನ ಚಿತ್ರಗಳು ಬಿಜಾಪೂರ ಸುಲ್ತಾನರ ಕಾಲದಲ್ಲಿಯೇ ರಚನೆಯಾಗಿದ್ದು ಮಾತ್ರವಲ್ಲದೆ ಇಲ್ಲಿಯ ಕೆಲವು ರಾಜರೂ ಸ್ವತಹ ಚಿತ್ರಕಲಾವಿದರಾಗಿದ್ದರು. ದಖಿನ್ ಚಿತ್ರಕಲೆಯು ಮುಸ್ಲಿಂ ಅರಸರ ಪ್ರೋತ್ಸಾಹದಲ್ಲಿ ಬೆಳೆದು ಬಂದಿದ್ದು, ಉತ್ತರ ಭಾರತದ ಮೊಗಲ್ ಚಿತ್ರಕಲೆಗೆ ದಕ್ಷಿಣ ಭಾರತದಲ್ಲಿ ಸಂವಾದಿಯಾಗಿ ರೂಪುಗೊಂಡಿತು. ದಖಿನ್ ಚಿತ್ರಶೈಲಿಯು ಸಹಿತ ಮೊಗಲ್ ಕಲೆಯಂತೆ ಪರ್ಶಿಯನ್ ಅಂಶಗಳಿಂದ ಕೂಡಿದ್ದರೂ ಇದರಲ್ಲಿ ಸ್ಥಳೀಯ ಹಿಂದೂ ಅಂಶಗಳು ಹೆಚ್ಚಾಗಿ ಕಂಡುಬರುತ್ತವೆ. ದಖಿನ್ ಚಿತ್ರಗಳು, ಕಾಗದ, ಬಟ್ಟೆ, ಹಸ್ತಪ್ರತಿ, ಲೋಹ, ಹೀಗೆ ವಿವಿಧ ಮಾಧ್ಯಮದ ಮೇಲೆ ರಚನೆಯಾಗಿದ್ದು ವಿಷಯ ವೈವಿಧ್ಯತೆಯಿಂದ ಕೂಡಿವೆ. ಇದರಲ್ಲಿ ಚಿತ್ರಶೈಲಿ, ವಸ್ತುವಿಷಯ, ಪ್ರಭಾವ, ಪ್ರೇರಣೆ, ರಚನಾಕ್ರಮಗಳಲ್ಲದೆ ಆ ಕಾಲದ ಕಲಾವಿದರ ಕುರಿತೂ ಚರ್ಚಿಸಲಾಗಿದೆ.

**ಮಾಸ್ಟರ್ ಪೀಸಸ್ ಆಫ್ ವಿಜಯನಗರ ಆರ್ಟ :**

ವಿಜಯನಗರ ಸಾಮ್ರಾಜ್ಯವು ಕಲೆ ಸಾಹಿತ್ಯದ ಆಗರವಾಗಿದ್ದು ಅನೇಕ ಸುಂದರವಾದ ಮಹತ್ವಪೂರ್ಣವಾದ ಕಲಾಕೃತಿಗಳು ರಚನೆಯಾಗಿವೆ. ವಿಶ್ವಪ್ರಸಿದ್ಧವಾದ ದೇವಾಲಯಗಳು ಇಲ್ಲಿವೆ. ವಾಸ್ತುಶಿಲ್ಪಕಲೆ ಮಾತ್ರವಲ್ಲದೆ ಚಿತ್ರಕಲೆಯಲ್ಲಿಯೂ ವಿಶಿಷ್ಟವಾದ ಕೃತಿಗಳು ಇಲ್ಲಿವೆ. ಇಲ್ಲಿರುವ ಗಮನಾರ್ಹ ಕೃತಿಗಳಲ್ಲಿ ಕೆಲವನ್ನು ಆಯ್ದು ಅವುಗಳ ಬಗ್ಗೆ ವಿಶ್ಲೇಷಣಾತ್ಮಕವಾದ ಬರವಣಿಗೆಯನ್ನು ಈ ಕೃತಿಯಲ್ಲಿ ಎಸ್.ರಾಜಶೇಖರ್‌ಅವರು ಮಾಡಿದ್ದಾರೆ.[೩೬] 'ಮಾಸ್ಟರ್ ಪೀಸಸ್ ಆಫ್ ವಿಜಯನಗರ ಆರ್ಟ' ಎಂಬ ಕೃತಿಯಲ್ಲಿ ಚಿತ್ರ ಮತ್ತು ಶಿಲ್ಪಕಲಾಕೃತಿಗಳ ಬಗ್ಗೆ ವಿವೇಚಿಸಲಾಗಿದೆ. ಚಿತ್ರಗಳಲ್ಲಿ ವಿರುಪಾಕ್ಷ ದೇವಾಲಯದ ಮೇಲ್ಛಾವಣಿಯಲ್ಲಿರುವ ಭಿತ್ತಿಚಿತ್ರಗಳಲ್ಲಿ ಕೆಲವನ್ನು ಆಯ್ದುಕೊಳ್ಳಲಾಗಿದೆ. ಗಿರಿಜಾ ಕಲ್ಯಾಣ, ಮನ್ಮಥವಿಜಯ, ಅರ್ಜುನನು ಮೀನಿನ ಕಣ್ಣಿಗೆ ಬಾಣವನ್ನು ಹೊಡೆಯುತ್ತಿರುವುದು ಈ ಚಿತ್ರಗಳನ್ನು ಆಯ್ದುಕೊಳ್ಳಲಾಗಿದೆ. ಅಲ್ಲದೆ ಲೇಪಾಕ್ಷಿಯಲ್ಲಿ ಕೆಲವು ಚಿತ್ರಗಳನ್ನೂ ಪರಿಗಣಿಸಲಾಗಿದೆ. ಈ ಚಿತ್ರಗಳ ಹಲವು ವಿವರಗಳು ಇಲ್ಲಿ ವಿವೇಚಿಸಲ್ಪಟ್ಟಿವೆ. ಚಿತ್ರದ ಅಳತೆ, ಕಾಲಮಾನ, ರಚನಾ ವಿಧಾನ, ಚಿತ್ರಶೈಲಿ, ವಸ್ತುವಿಷಯ, ಪ್ರಭಾವ, ಪ್ರೇರಣೆ, ಬಣ್ಣಗಾರಿಕೆ, ರೇಖಾಲಾಲಿತ್ಯ ಮುಂತಾದ ಅಂಶಗಳು ಇಲ್ಲಿ ಹೇಳಿವೆ. ಇದಲ್ಲದೆ ಭಾರತದ ಬೇರೆ ಬೇರೆ ಪ್ರದೇಶದ ಚಿತ್ರಗಳ ಜೊತೆಗೆ ಇವುಗಳನ್ನು ತೌಲನಿಕವಾಗಿ ವಿವೇಚಿಸಲಾಗಿದೆ.

---

೩೫. ಮಾರ್ಕ ಜಬ್ರೋವಿಸ್ಕಿ : ಡೆಕ್ಕನಿ ಪೇಂಟಿಂಗ್ಸ್ : ರೋಲಿ ಬುಕ್ ಇಂಟರ್‌ನ್ಯಾಷನಲ್, ನ್ಯೂ ದೆಹಲಿ-೧೯೮೩

೩೬. ಎಸ್.ರಾಜಶೇಖರ್ : ಮಾಸ್ಟರ್ ಪೀಸಸ್ ಆಫ್ ವಿಜಯನಗರ ಆರ್ಟ : ತಾರಾಪೋರವಾಲಾ ಪಬ್ಲಿಕೇಷನ್ಸ, ೨೧೦ ನರೋಜಿರೋಡ್, ಮುಂಬೈ-೧೯೮೩

**ಡ್ಯಾನ್ಸ ಆ್ಯಂಡ್ ಅದರ್ ಫೈನ್ ಆರ್ಟ್ಸ್ ಇನ್ ಕರ್ನಾಟಕ ಸ್ಕಲ್ಪಚರ್ ಆ್ಯಂಡ್ ಪೇಂಟಿಂಗ್ :**

ಕರ್ನಾಟಕದ ಶಿಲ್ಪ ಮತ್ತು ಚಿತ್ರಕಲಾ ಕೃತಿಗಳಲ್ಲಿ ನೃತ್ಯದ ಭಾವಭಂಗಿಗಳು, ಸಂಗೀತದ ವಾದ್ಯ ಪರಿಕರಗಳು ಹಾಗೂ ಇನ್ನಿತರ ದೃಶ್ಯಾತ್ಮಕ ಲಲಿತಕಲೆಗಳ ಸಂಗತಿಗಳು ಪ್ರಾಚೀನ ಕಾಲದಿಂದಲೇ ವ್ಯಕ್ತಗೊಳ್ಳುತ್ತ ಬಂದಿವೆ. ಇಂತಹ ಅಂಶಗಳನ್ನು ಒಂದೆಡೆ ಸಂಗ್ರಹಿಸಿ ವಿಶ್ಲೇಷಿಸುವ ಪ್ರಯತ್ನ ಈ ಕೃತಿಯಲ್ಲಿದೆ. ಈ ಕೃತಿಯನ್ನು ಎಮ್.ಎಸ್.ಚೂಡಾಮಣಿಯವರು ಬರೆದಿದ್ದು,[೩೭] ಕರ್ನಾಟಕದ ಶಿಲ್ಪ ಮತ್ತು ಚಿತ್ರ ಕಲಾಕೃತಿಗಳಲ್ಲಿನ ನೃತ್ಯದ ಅಂಶಗಳನ್ನು ಪ್ರಮುಖವಾಗಿ ಇದರಲ್ಲಿ ಪರಿಗಣಿಸಲಾಗಿದೆ. ಕರ್ನಾಟಕದ ಶಿಲ್ಪಗಳಲ್ಲಿ ಬಾದಾಮಿ, ಐಹೊಳೆ, ಪಟ್ಟದಕಲ್ಲು ದೇವಾಲಯಗಳ ಶಿಲ್ಪಗಳು, ವಿಜಯನಗರ ಸಾಮ್ರಾಜ್ಯದ ಭವ್ಯ ದೇವಾಲಯಗಳು ಮತ್ತು ಬೇಲೂರು ಹಳೇಬೀಡುಗಳಂತಹ ಕಲಾತ್ಮಕ ದೇವಾಲಯಗಳಲ್ಲಿನ ಶಿಲ್ಪಗಳಲ್ಲಿ ವಿವಿಧ ಬಗೆಯ ನೃತ್ಯ ಪ್ರಕಾರದ ಭಾವಭಂಗಿಗಳಿವೆ. ಬಾದಾಮಿಯ ನಟರಾಜ ಶಿಲ್ಪವು ಹದಿನೆಂಟು ಬಗೆಯ ನೃತ್ಯಭಂಗಿಯನ್ನು ಪ್ರತಿನಿಧಿಸುತ್ತದೆ ಎಂಬುದರ ಜೊತೆಗೆ ಇಲ್ಲಿಯೇ ಇತ್ತೆಂದು ಹೇಳುವ ವಾತಾಪಿ ಗಣಪತಿಯು ಕರ್ನಾಟಕ ಸಂಗೀತದ ಮೂಲದೊಂದಿಗೆ ಗುರುತಿಸಿಕೊಂಡಿದೆ. ಅದೇ ರೀತಿ ಬೇಲೂರು ಚನ್ನಕೇಶವ ದೇವಾಲಯದ ಶಿಲಾಬಾಲಿಕೆಯರ ಪ್ರತಿಮೆಗಳು ನಾಟ್ಯಸರಸ್ವತಿ ಶಾಂತಲಾದೇವಿಯ ಸಂಕೇತ ಎಂದು ಭಾವಿಸಲಾಗುತ್ತಿದೆ. ಈ ಮೂರ್ತಿಗಳು ನಾಟ್ಯದ ವಿವಿಧಭಂಗಿಗಳನ್ನು ವ್ಯಕ್ತಪಡಿಸುತ್ತಿರುವುದುಸೋಜಿಗ. ವಿಜಯನಗರದಲ್ಲಿನ ವಿಠ್ಠಲದೇವಾಲಯ, ಮಹಾನವಮಿದಿಬ್ಬ, ಅಚ್ಯುತರಾಯ ದೇವಾಲಯ, ಹಜಾರರಾಮ ದೇವಾಲಯಗಳಲ್ಲಿ ನಾಟ್ಯದ ಅನೇಕ ಮಾದರಿಗಳು ಕಂಡುಬರುತ್ತವೆ. ಚಿತ್ರಕಲೆಯಲ್ಲಿಯೂ ಇಂತಹ ಅಂಶಗಳಿವೆ. ಬಾದಾಮಿಯ ಗುಹಾಲಯದ ಚಿತ್ರ, ಮೈಸೂರು ಶೈಲಿಯ ಚಿತ್ರಗಳು, ಡೆಕ್ಕನಿ ಚಿತ್ರಗಳು, ಹೀಗೆ ಹಲವಾರು ಚಿತ್ರಗಳಲ್ಲಿ ನಾಟ್ಯ ಮತ್ತು ಸಂಗೀತ ಸಂಬಂಧವಾದ ಸಂಗತಿಗಳಿವೆ. ಅವುಗಳನ್ನೆಲ್ಲ ಇಲ್ಲಿ ವಿವೇಚನೆಗೆ ಅಳವಡಿಸಲಾಗಿದೆ.

**ದಿ ಶಿಬಿ ಮ್ಯೂರಲ್ಸ್ :**

ಕರ್ನಾಟಕ ರಾಜ್ಯದ ಅನೇಕ ಕಡೆಗಳಲ್ಲಿ ಪ್ರಾಚೀನ ಕಾಲದ ಭಿತ್ತಿಚಿತ್ರಗಳ ನೆಲೆಗಳಿವೆ. ಉತ್ತರದ ಬೀದರ್‌ನಿಂದತೊಡಗಿ ದಕ್ಷಿಣದ ಚಾಮರಾಜನಗರದವರೆಗೆ, ಪೂರ್ವದ ಬಳ್ಳಾರಿಯಿಂದತೊಡಗಿ ಪಶ್ಚಿಮದ ಕಾರವಾರದವರೆಗೆ ವ್ಯಾಪಿಸಿರುವ ಪ್ರದೇಶಗಳಲ್ಲಿ ಚಿತ್ರಗಳ ನೆಲೆಗಳು ಚದುರಿದಂತೆ ನೆಲೆಗೊಂಡಿವೆ. ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು ಮತ್ತು ಮೈಸೂರು ದೊರೆಗಳು ಬರೆಸಿದ ಚಿತ್ರಗಳ ಜೊತೆಗೆ ಚಿಕ್ಕ-ಪುಟ್ಟ ಸಂಸ್ಥಾನಿಕರು, ಪ್ರಾಂತಾಧಿಕಾರಿಗಳು, ಅಧಿಕಾರಿಗಳು, ಊರಿನಗೌಡ, ದೇಸಾಯಿ, ಶ್ರೀಮಂತ ವ್ಯಕ್ತಿಗಳು ಬರೆಸಿದ ಚಿತ್ರಗಳು ನಾಡಿನ ಅನೇಕ ದೇವಾಲಯ, ಮಠ, ಅರಮನೆ, ಸಾರ್ವಜನಿಕ ಕಟ್ಟಡಗಳು ಮುಂತಾದ ನೆಲೆಗಳಲ್ಲಿವೆ. ಇದರಂತೆ ಶಿಬಿ ನರಸಿಂಹಸ್ವಾಮಿ ದೇವಾಲಯದಲ್ಲಿ ಪ್ರಾಚೀನ ಭಿತ್ತಿಚಿತ್ರಗಳು ರಚನೆಯಾಗಿದ್ದು ಅವುಗಳ ಬಗ್ಗೆ ಆರ್. ರಾಮಕೃಷ್ಣ ಬರೆದಿದ್ದಾರೆ.[೩೮]ಈ ಪುಸ್ತಕದಲ್ಲಿ ಶಿಬಿ ನರಸಿಂಹಸ್ವಾಮಿ ದೇವಾಲಯದ ಸಾಂಸ್ಕೃತಿಕ, ಧಾರ್ಮಿಕ ಮತ್ತು ಐತಿಹಾಸಿಕ ಮಹತ್ವದ ಜೊತೆಗೆ ಅದರ ಕಲಾತ್ಮಕ ವಿನ್ಯಾಸವನ್ನು ಹೇಳಲಾಗಿದೆ. ನಂತರ ಎರಡನೆಯ ಹಂತದಲ್ಲಿ ಈ ದೇವಾಲಯದ ಭಿತ್ತಿ ಮತ್ತು ಮೇಲ್ಛಾವಣಿಯಲ್ಲಿ ರಚನೆಯಾದ ವರ್ಣಚಿತ್ರಗಳ ಬಗ್ಗೆ ವಿವೇಚಿಸಲಾಗಿದೆ.

೩೭. ಎಮ್.ಎಸ್.ಚೂಡಾಮಣಿ : ಡ್ಯಾನ್ಸ ಆ್ಯಂಡ್ ಅದರ್ ಫೈನ್ ಆರ್ಟ್ಸ್ ಇನ್ ಕರ್ನಾಟಕ ಸ್ಕಲ್ಪಚರ್ ಆ್ಯಂಡ್ ಪೇಂಟಿಂಗ್ : ಮೈಸೂರು ಯುನಿವರ್ಸಿಟಿ, ಮೈಸೂರು-೧೯೮೫

೩೮. ಆರ್.ರಾಮಕೃಷ್ಣ : ದಿ ಶಿಬಿ ಮ್ಯೂರಲ್ಸ್ : ಸವೇನೀಯರ್ ಕಮಿಟಿ, ಶಿಬಿ ಟೆಂಪಲ್ಸ್-೧೯೮೮

ಇಲ್ಲಿ ಮುಖ್ಯವಾಗಿ ಚಿತ್ರಗಳ ರಚನೆಯ ಕಾಲಮಾನ, ಪೋಷಕರು, ಚಿತ್ರಗಳ ವಸ್ತುವಿಷಯ, ವರ್ಣಗಾರಿಕೆ, ರೇಖಾಲಾಲಿತ್ಯ, ಚಿತ್ರಶೈಲಿ, ಸಂಯೋಜನೆ, ಪ್ರಭಾವ, ಪ್ರೇರಣೆ ಮತ್ತು ಸಾಂಸ್ಕೃತಿಕ ಅಂಶಗಳನ್ನು ಕುರಿತು ಚರ್ಚಿಸಲಾಗಿದೆ. ಶಿಬಿ ದೇವಾಲಯದ ಚಿತ್ರಗಳು ಕರ್ನಾಟಕದ ಕಲಾ ಪರಂಪರೆಯಲ್ಲಿ ಮುಖ್ಯ ಪಾತ್ರವಹಿಸಿದ್ದು ಅವುಗಳ ಬಗ್ಗೆ ಹಲವಾರು ಅಂಶಗಳನ್ನು ಬಿಂಬಿಸುವ ಈ ಕೃತಿಯು ಕರ್ನಾಟಕದ ಕಲಾ ಸಾಹಿತ್ಯದ ದೃಷ್ಟಿಯಿಂದ ಮಹತ್ವದ್ದಾಗಿದೆ.

**ಪೇಂಟಿಂಗ್ಸ್ ಆಫ್ ಸೇಂಟ್ ಅಲಾಯಿಸೆಸ್ ಚರ್ಚ :**

ಪ್ರಾಚೀನ ಭಿತ್ತಿಚಿತ್ರಗಳು ಈ ನಾಡಿನ ಅಮೂಲ್ಯ ಸಂಪತ್ತಾಗಿದ್ದು, ಅವುಗಳಲ್ಲಿ ಹೆಚ್ಚಿನವುಗಳು ಇಂದು ನಾಶವಾಗಿ ಹೋಗುತ್ತಿವೆ. ಆದರೆ ನಮ್ಮ ಸಂಸ್ಕೃತಿಯ ಬಹುಮುಖ್ಯ ಅಂಗವಾಗಿರುವ ಅವುಗಳನ್ನು ನಾಶವಾಗದಂತೆ ತಡೆಯುವುದು, ಮುಂದಿನ ಪೀಳಿಗೆಗೆ ಅವುಗಳನ್ನು ಉಳಿಸಿ ಕೊಡುವುದು, ಇನ್ನಿತರ ಕ್ರಮಗಳಿಂದ ಅವುಗಳನ್ನು ಉಳಿಸಿಕೊಳ್ಳುವ ಪ್ರಯತ್ನಗಳು ಇಂದು ನಡೆಯಬೇಕಿದೆ. ಈ ಹಿನ್ನೆಲೆಯಲ್ಲಿ ಅಂತಹ ಚಿತ್ರಗಳ ಬಗ್ಗೆ ಅಧ್ಯಯನ ನಡೆಸಿ ಅವುಗಳ ಕುರಿತು ಬರೆಯುವುದು ಒಂದು ರೀತಿಯಾದರೆ, ಹಾಳಾಗುತ್ತಿರುವ ಚಿತ್ರಗಳನ್ನು ರಾಸಾಯನಿಕ ದ್ರವಗಳಿಂದ ಸ್ವಚ್ಚಗೊಳಿಸಿ, ಮತ್ತೆ ಬಣ್ಣಲೇಪನ ಮಾಡುವುದು, ನಂತರ ಸಂರಕ್ಷಣೆಗಾಗಿ ರಾಸಾಯನಿಕ ಲೇಪಿಸುವ ಕ್ರಮಗಳು ಮತ್ತೊಂದು ಬಗೆಯಾಗಿವೆ. ಪ್ರಸ್ತುತ ಕೃತಿಯು ಮಂಗಳೂರಿನ ಸೇಂಟ್ ಅಲಾಯಿಸೆಸ್ ಚರ್ಚನಲ್ಲಿರುವ ಕ್ರಿ.ಶ.೧೮ನೆಯ ಶತಮಾನದ ಭಿತ್ತಿಚಿತ್ರಗಳನ್ನು ಸಂರಕ್ಷಿಸಿದ ಬಗ್ಗೆ ವಿವರ ನೀಡುತ್ತದೆ.[೩೯] ಹಾಳಾಗುತ್ತಿದ್ದ ಈ ಚಿತ್ರಗಳನ್ನು ಎಂತಹ ಕ್ರಮಗಳಿಂದ ಸ್ವಚ್ಚಗೊಳಿಸಿ, ಪುನರ್‌ರೂಪಿಸಿ ಹೊಸ ಆಯಾಮವನ್ನು ಮೂಲಕ್ಕೆ ಧಕ್ಕೆ ಬರದಂತೆ ನೀಡಲಾಯಿತು ಎನ್ನುವ ಸಂಗತಿಗಳು ಹೇಳಲ್ಪಟ್ಟಿವೆ. ಮುಖ್ಯವಾಗಿ ಸೇಂಟ್ ಅಲಾಯಿಸೆಸ್ ಚರ್ಚನ ಕ್ರೈಸ್ತ ಚಿತ್ರಗಳು, ಅವುಗಳನ್ನು ರಚಿಸಿದ ಕಲಾವಿದರು, ಅವು ಹಾಳಾಗುತ್ತಿರುವ ಬಗೆ, ಅವುಗಳ ಸಂರಕ್ಷಣೆಯ ಕ್ರಮಗಳು, ಅಲ್ಲಿನ ಕ್ಯಾನವಾಸ್ ಚಿತ್ರಗಳ ಸಂರಕ್ಷಣೆ, ಭಿತ್ತಿಚಿತ್ರಗಳ ಭಿತ್ತಿ ಹಾಳಾಗಿರುವುದು, ಅದನ್ನು ಆಧುನಿಕ ರೀತಿಯಲ್ಲಿ ಪುನಃ ಸೃಷ್ಟಿಸುವುದು ಮುಂತಾದ ವಿಷಯಗಳನ್ನು ಹೇಳಿದೆ. ಅಲ್ಲದೆ ಹಾಳಾದ ಸ್ವರೂಪದಲ್ಲಿದ್ದ ಮೊದಲಿನ ಚಿತ್ರ ಮತ್ತು ಸಂರಕ್ಷಣೆಯ ನಂತರ ಉತ್ತಮಗೊಂಡ ಅದೇ ಚಿತ್ರದ ಛಾಯಾಚಿತ್ರಗಳನ್ನು ಜೊತೆಯಲ್ಲಿ ಮುದ್ರಿಸಲಾಗಿದ್ದು ಇದರಿಂದ ಸಂರಕ್ಷಣೆಗೊಳಪಡಿಸಿದಾಗ ಅದರ ಪರಿಣಾಮಗಳೇನು ಎಂಬ ಸಂಗತಿಗಳು ಸ್ಪಷ್ಟವಾಗಿ ಗೋಚರಿಸುತ್ತವೆ.

**ಬೀದರ್, ಇಟ್ಸ ಹಿಸ್ಟರೀ ಆ್ಯಂಡ್ ಮಾನ್ಯೂಮೆಂಟ್ಸ್ :**

ಬೀದರ್ ಪ್ರದೇಶವನ್ನು ಆಳಿದ ಬಹಮನಿ ಸುಲ್ತಾನರು ಈ ಪ್ರದೇಶವನ್ನು ಒಂದು ಕಲಾತ್ಮಕ ನೆಲೆಯನ್ನಾಗಿ ಮಾಡಿದ್ದಾರೆ. ಬೃಹತ್ ಅರಮನೆಗಳು, ಸಮಾಧಿ ಭವನಗಳು, ಮಸೀದೆಗಳು, ಮದರಸಾಗಳು, ಸಾರ್ವಜನಿಕ ಕಟ್ಟಡಗಳು, ಕೋಟೆಕೊತ್ತಲಗಳಂತಹ ವಾಸ್ತುರಚನೆಯನ್ನು ಕಲಾತ್ಮಕವಾಗಿ ರಚನೆಮಾಡಿ ಅವುಗಳಲ್ಲಿ ವರ್ಣಚಿತ್ರ ಬರೆಯಿಸಿ ಅಲಂಕರಣ ಮಾಡಿದ್ದಾರೆ. ಇಂತಹ ಸಂಗತಿಗಳು ಪ್ರಸ್ತುತ ಪುಸ್ತಕದಲ್ಲಿ ಅಡಕವಾಗಿವೆ. ಜಿ.ಯಜದಾನಿಯವರು ಬರೆದ ಈ ಕೃತಿಯಲ್ಲಿ[೪೦]ಬೀದರ್ ಪ್ರದೇಶವನ್ನು ಆಳಿದ ಅರಸರ ಇತಿಹಾಸದ ಜೊತೆಗೆ ಅವರು ನಿರ್ಮಿಸಿದ ಕಲಾತ್ಮಕ ವಾಸ್ತುರಚನೆಗಳ ಬಗ್ಗೆ ವಿವೇಚಿಸಲಾಗಿದೆ.

---

೩೯. ಪಿ.ಅಗರವಾಲ್ : ಪೇಂಟಿಂಗ್ಸ್ ಆಫ್ ಸೇಂಟ್ ಅಲಾಯಿಸೆಸ್ ಚರ್ಚ : ಇಂಡಿಯನ್ ಕನ್‌ಜರವೇಷನ್ ಇನ್ಸಟಿಟ್ಯೂಟ್, ಲಖನೌ–೧೯೯೪

೪೦. ಜಿ.ಯಜದಾನಿ : ಇಟ್ಸ ಹಿಸ್ಟರೀ ಆ್ಯಂಡ್ ಮಾನ್ಯೂಮೆಂಟ್ಸ್ : ಮೋತಿಲಾಲ್ ಬನಾರಸೀದಾಸ್ ಪಬ್ಲಿಷರ್, ಪ್ರೈ ಲಿಮಿಟೆಡ್ ದೆಹಲಿ–೧೯೯೫

ಈ ಕೃತಿಯು ಬೀದರ್ ಮತ್ತು ಸುತ್ತಮುತ್ತಲಿನ ಪ್ರದೇಶಗಳ ವಾಸ್ತುರಚನೆಗಳ ಗ್ಗೆ ತಿಳಿಸುತ್ತದೆ. ಬೀದರ್ ಕೋಟೆ ಅಲ್ಲಿನ ಕಲಾತ್ಮಕ ಕಟ್ಟಡಗಳು, ರಂಗೀನ ಮಹಲ್ ಅದರಲ್ಲಿನ ಚಿತ್ರಕಲೆ, ಮಹಮ್ಮದ ಗವಾನನ ಮದರ್‌ಸಾ, ಅದರಲ್ಲಿನ ಕಲಾತ್ಮಕ ನಕ್ಷೆಗಳು ಇಲ್ಲಿ ಹೇಳಲ್ಪಟ್ಟಿವೆ. ಅಲ್ಲದೆ ಬೀದರ್ ಸಮೀಪವಿರುವ ಅಸ್ತೂರಿನಲ್ಲಿ ಬಹಮನಿ ಸಾಮ್ರಾಟರ ಕಲಾತ್ಮಕ ಸಮಾಧಿ ಭವನಗಳಿದ್ದು ಅವುಗಳ ಬಗ್ಗೆಯೂ ಇಲ್ಲಿ ಹೇಳಲಾಗಿದೆ. ಇಲ್ಲಿನ ಮೂರು ಕಟ್ಟಡಗಳಲ್ಲಿ ವರ್ಣಚಿತ್ರಗಳಿದ್ದು ಅವು ಪರ್ಶಿಯನ್ ಪ್ರಭಾವದಿಂದ ಪ್ರೇರಿತವಾಗಿವೆ. ನೀಲವರ್ಣ, ಕೆಂಪು ಮತ್ತು ಹಸಿರು ಇಲ್ಲಿ ಮುಖ್ಯವಾಗಿ ಬಳಕೆಯಾಗಿವೆ. ಕೆಲವು ಕಡೆಗೆ ಜಾಮಿತಿಕ ಸುಳಿವುಗಳಿದ್ದರೆ, ಮತ್ತೆ ಕೆಲವು ಕಡೆಗೆ ಹೂಬಳ್ಳಿಯ ನಕ್ಷೆ, ಕುರಾನಿನ ವಾಕ್ಯಗಳನ್ನು ಬರೆದಿದ್ದು ಕಂಡುಬರುತ್ತದೆ. ಇಂತಹ ಅನೇಕ ವಿಚಾರಗಳು ಈ ಕೃತಿಯಲ್ಲಿ ಹೇಳಲ್ಪಟ್ಟಿವೆ. ಇದೊಂದು ಇತಿಹಾಸಕ್ಕೆ ಸಂಬಂಧಪಟ್ಟ ಪುಸ್ತಕವಾಗಿದ್ದರೂ ಇದರಲ್ಲಿರುವ ಕಲಾತ್ಮಕ ಅಂಶಗಳಿಂದ ಕಲಾಸಾಹಿತ್ಯದ ದೃಷ್ಟಿಯಿಂದಲೂ ಅಷ್ಟೇ ಪ್ರಮುಖವಾಗಿದೆ.

**ದಿ ಲಿವಿಂಗ್ ಲೈನ್ಸ್ :**

ಚಿತ್ರಕಲೆಯಲ್ಲಿ ರೇಖೆಗೆ ಮಹತ್ವದ ಸ್ಥಾನವಿದೆ. ಚಿತ್ರರಚನೆ ಆರಂಭವಾಗುವುದೇ ರೇಖೆಯ ಮೂಲಕ. ಪ್ರಾಗಿತಿಹಾಸ ಕಾಲದ ಚಿತ್ರಗಳು ರೇಖೆಯ ಮಹತ್ವವನ್ನು ಬಿಂಬಿಸುತ್ತವೆ. ಪ್ರಾಚೀನ ಭಿತ್ತಿಚಿತ್ರಗಳು, ಕಿರುರೂಪ ಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಜನಪದ ಚಿತ್ರಗಳು ರೇಖೆಯ ವಿನ್ಯಾಸಗಳಿಂದಲೇ ಜೀವಂತಿಕೆಯನ್ನು ಪಡೆದುಕೊಂಡಿವೆ. ಇಂದಿಗೂ ಹಲವಾರು ಜನ ಕಲಾವಿದರು ರೇಖೆಯ ಹದವರಿತ ಬಳಕೆಯಿಂದ ಕಲಾಕ್ಷೇತ್ರದಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಕೆ.ಕೆ.ಹೆಬ್ಬಾರರ ಮಾತನಾಡುವ ರೇಖೆಗಳು ಅವರ ಚಿತ್ರಕ್ಕೆ ಮೌಲ್ಯ ತಂದುಕೊಟ್ಟಿವೆ. ಹೀಗೆ ಚಿತ್ರಕಲೆಯಲ್ಲಿ ಮಹತ್ವ ಪಡೆದುಕೊಂಡಿರುವ ರೇಖಾಚಿತ್ರಗಳನ್ನು ಶಂಕರ ಪಾಟೀಲರೂ ಪ್ರಬುದ್ಧವಾಗಿ ರಚನೆ ಮಾಡಿದ್ದಾರೆ. ಶಂಕರ ಪಾಟೀಲರು ತಮ್ಮ ರೇಖಾ ವಿನ್ಯಾಸದ ಚಿತ್ರಗಳಿಗೆ ವಿವಿಧ ಕ್ಷೇತ್ರಗಳ ವಿದ್ವಾಂಸರಿಂದ ಅಭಿಪ್ರಾಯ ಸಂಗ್ರಹಿಸಿ ಅವುಗಳನ್ನು ಒಟ್ಟಾಗಿ ಪ್ರಸ್ತುತ ಕೃತಿಯಲ್ಲಿ ಪ್ರಕಟಿಸಿದ್ದಾರೆ.[೪೧] ಈ ಕೃತಿಯಲ್ಲಿ ಅಂತಹ ವಿದ್ವಾಂಸರ ಅಭಿಪ್ರಾಯಗಳು ಸಂಗ್ರಹಗೊಂಡಿವೆ. ಇಂಗ್ಲೀಷ ಭಾಷೆಯಲ್ಲಿರುವ ಈ ಪುಸ್ತಕವು ಶಂಕರ ಪಾಟೀಲರ ರೇಖಾಚಿತ್ರಗಳನ್ನು ಮಾತ್ರ ಒಳಗೊಂಡಿದೆ. ಅವರ ರೇಖಾಚಿತ್ರಗಳನ್ನು ಕುರಿತಾಗಿ ಡಾ.ಎಚ್.ಎಮ್.ಮರುಳಸಿದ್ಧಯ್ಯ. ಸಾಯಿ ಪರಾಂಜಪೆ, ಮುಲ್ಕರಾಜ ಆನಂದ, ಶಿವರಾಮ ಕಾರಂತ, ಜಿ.ಎಸ್.ಶಿವರುದ್ರಪ್ಪ, ನಾಡಕರ್ಣಿ, ವ್ಹಿ. ಎಮ್.ಸೋಲಾಪುರಕರ, ಚನ್ನವೀರಕಣವಿ, ವಿಜಯ ಚಂದ್ರ, ಎಮ್.ಎಫ್.ಹುಸೇನ, ಪಿ.ಲಂಕೇಶ, ಯಶವಂತ ಚಿತ್ತಾಲ, ಎಸ್.ಕೆ.ರಾಮಚಂದ್ರರಾವ್, ಮುಂತಾದ ವಿದ್ವಾಂಸರು ಅಭಿಪ್ರಾಯಗಳನ್ನು ಬರೆದಿದ್ದಾರೆ. ಪ್ರತಿಯೊಂದು ಪುಟಕ್ಕೂ ಒಂದೊಂದು ರೇಖಾಚಿತ್ರ ಅದರ ಕೆಳಗೆ ವಿದ್ವಾಂಸರ ಅಭಿಪ್ರಾಯಗಳನ್ನು ಕೊಡಲಾಗಿದೆ.

**ಪ್ರೀ, ಪ್ರೋಟೋ, ಆ್ಯಂಡ್ ಅರ್ಲಿ ಹಿಸ್ಟಾರಿಕ್ ಕಲ್ಚರ್ ಆಫ್ ಕೃಷ್ಣಾ-ತುಂಗಭದ್ರಾ ವ್ಯಾಲಿ :**

ಕರ್ನಾಟಕದ ಕೃಷ್ಣಾ ಮತ್ತು ತುಂಗಭದ್ರಾ ನದಿ ಕೊಳ್ಳಗಳು ಪ್ರಾಚೀನ ಮಾನವನ ಶಿಲಾಯುಗ ಕಾಲದ ಅನೇಕ ನೆಲೆಗಳನ್ನು ಹೊಂದಿದೆ. ಪ್ರಸ್ತುತ ಕೃತಿಯನ್ನು ಬಿ.ಸುಬ್ರಹ್ಮಣ್ಯಂ ಬರೆದಿದ್ದು[೪೨] ಕೃಷ್ಣಾ ಮತ್ತು ತುಂಗಭದ್ರಾ ಕೊಳ್ಳದ ಪ್ರಾಚೀನ ಜನವಸತಿನೆಲೆಗಳ ಬಗ್ಗೆ ವಿವರಿಸಲಾಗಿದೆ.

---

೪೧. ಶಂಕರ ಪಾಟೀಲ : ದಿ ಲಿವಿಂಗ್ಸ ಲೈನ್ಸ್ : ಪ್ರಗತಿ ಪ್ರಕಾಶನ, ದಾವಣಗೆರೆ-೧೯೯೬

೪೨. ಬಿ.ಸುಬ್ರಹ್ಮಣ್ಯಂ : ಪ್ರೀ, ಪ್ರೋಟೋ, ಆ್ಯಂಡ್ ಅರ್ಲಿ ಹಿಸ್ಟಾರಿಕ್ ಕಲ್ಚರ್ ಆಫ್ ಕೃಷ್ಣಾ-ತುಂಗಭದ್ರಾ ವ್ಯಾಲಿ : ಸಿ.ಪಿ.ಗೌತಮ : ಭಾರತೀಯ ಕಲಾಪ್ರಕಾಶನ, ನಾರಂಗ ಕಾಲೋನಿ, ದೆಹಲಿ-೧೯೯೭

ಈ ಕೃತಿಯಲ್ಲಿ ಕೃಷ್ಣಾ ಮತ್ತು ತುಂಗಭದ್ರಾ ಕೊಳ್ಳದ ಹಳೆ ಶಿಲಾಯುಗ, ಹೊಸ ಶಿಲಾಯುಗ ಮತ್ತು ಇತಿಹಾಸ ಆರಂಭ ಕಾಲದ ನೆಲೆಗಳ ಬಗ್ಗೆ ವಿವೇಚಿಸಲಾಗಿದೆ. ವಾಸದ ನೆಲೆಗಳ ಸ್ವರೂಪ, ಲಕ್ಷಣ, ಆ ಜನರ ಜೀವನ ವಿಧಾನ, ಸಂಸ್ಕೃತಿ ಇವುಗಳ ಜೊತೆಗೆ ಅವರ ಕಲಾ ಬದುಕನ್ನು ತಿಳಿಸಲಾಗಿದೆ. ಶಿಲಾಯುಗ ಕಾಲದ ಕಲಾತ್ಮಕ ಕಲ್ಲಿನ ಆಯುಧಗಳು, ಬಯಲುಬಂಡೆ ಮತ್ತು ಶಿಲಾಗುಹೆಗಳಲ್ಲಿ ರಚನೆಮಾಡಿದ ಚಿತ್ರರಚನೆಗಳು, ನಂತರದ ಹಂತದಲ್ಲಿ ಅವರ ವಾಸದನೆಲೆಗಳು ಬದಲಾವಣೆಗೊಂಡ ರೀತಿ, ಗುಡಿಸಲುಗಳಂತಹ ವಿನ್ಯಾಸಗಳು, ಕಲಾತ್ಮಕ ಸಮಾಧಿಗಳು, ಕಲ್ಲಿನ ಚಪ್ಪಟೆ ಮುಚ್ಚಿಗೆಗಳು, ಮೃತ್ ಪಾತ್ರೆಗಳು, ಅವುಗಳ ಮೇಲೆ ಬರೆದ ಸುಂದರವಾದ ವರ್ಣಚಿತ್ರಗಳು ಮುಂತಾದ ಕಲಾತ್ಮಕ ಅಂಶಗಳನ್ನು ಇಲ್ಲಿ ವಿವೇಚಿಸಲಾಗಿದೆ. ಈ ಕೃತಿಯು ಪ್ರಾಚೀನ ಸಂಸ್ಕೃತಿಗೆ ಸಂಬಂಧಿಸಿದ್ದರೂ ಇದರಲ್ಲಿ ಸಾಂದರ್ಭಿಕವಾಗಿ ಆ ಕಾಲದ ಕಲೆಯ ವಿಚಾರಗಳು ಚರ್ಚಿಸಲ್ಪಟ್ಟಿವೆ. ಇದು ವಿಶೇಷವಾಗಿ ಕೃಷ್ಣಾ ಮತ್ತು ತುಂಗಭದ್ರಾ ಕೊಳ್ಳಪ್ರದೇಶದ ಪ್ರಾಚೀನ ಕಲಾ ಪರಂಪರೆಯ ಬಗ್ಗೆ ಸ್ಥೂಲವಾಗಿ ತಿಳಿಸುವ ಗ್ರಂಥವಾಗಿದೆ.

**ಕೆ.ವೆಂಕಟಪ್ಪ :**

ಕರ್ನಾಟಕದ ಪ್ರಸಿದ್ಧ ಕಲಾವಿದ ಕೆ.ವೆಂಕಟಪ್ಪನವರ ಬಗ್ಗೆ ಕನ್ನಡದಲ್ಲಿ ಹಲವಾರು ಪುಸ್ತಕಗಳು ಬಂದಿವೆ. ಅದೇ ಹಿನ್ನೆಲೆಯಲ್ಲಿ ಎಸ್.ಕೆ.ರಾಮಚಂದ್ರರಾವ್ ಇಂಗ್ಲೀಷನಲ್ಲಿ ಕೆ.ವೆಂಕಟಪ್ಪನವವರ ಬಗ್ಗೆ ಈ ಪುಸ್ತಕ ರಚಿಸಿದ್ದಾರೆ.[೪೩] ಇದು ಕನ್ನಡದಲ್ಲಿ ಬಂದ ಪುಸ್ತಕಗಳಿಗಿಂತ ಭಿನ್ನವಾಗಿಲ್ಲ. ಒಂದೇ ಧಾಟಿಯಲ್ಲಿ ವಿಷಯಗಳನ್ನು ನಿರೂಪಿಸಲಾಗಿದೆ. ಬಾಲ್ಯ, ಕಲಾಶಿಕ್ಷಣ, ಕಲಾಬದುಕು ಮತ್ತು ಕೃತಿಗಳ ವಿಮರ್ಶೆ ಹೀಗೆ ಮುಖ್ಯ ಘಟ್ಟಗಳಲ್ಲಿ ವಿಷಯ ಬಿಂಬಿಸಲಾಗಿದೆ. ಈ ಕಿರು ಪುಸ್ತಕದಲ್ಲಿ ಕಲಾವಿದ ವೆಂಕಟಪ್ಪ ಅವರ ಜನನ, ಬಾಲ್ಯ, ಕಲಾಶಿಕ್ಷಣ, ಕಲಾಬದುಕುಗಳನ್ನು ಸ್ಥೂಲವಾಗಿ ವಿವೇಚಿಸುವುದರ ಜೊತೆಗೆ ಮೈಸೂರಿನಲ್ಲಿಯ ಪ್ರಾರಂಭಿಕ ದಿನಗಳು, ಬೆಂಗಾಲ ಕಲಾಶೈಲಿ, ಹಿಮಾಲಯದ ಪರಿಸರದಲ್ಲಿ, ಕೊನೆಯ ದಿನಗಳ ಮೈಸೂರಿನ ವಾಸ, ಅವರ ಕಲಾಶೈಲಿ, ಕಲಾಕೃತಿಯ ರಚನೆಯ ವಿಧಾನ, ಕಲಾಗ್ಯಾಲರಿ, ಅವರ ಕಲಾಕೃತಿಯ ವಿಶ್ಲೇಷಣೆ ಅದರಲ್ಲಿ ಶಿಲ್ಪಗಳು, ಉಬ್ಬು ಶಿಲ್ಪಫಲಕಗಳು, ವರ್ಣಚಿತ್ರಗಳು, ನಿಸರ್ಗ ಚಿತ್ರಗಳ ವಿಶೇಷತೆ ಮುಂತಾದ ವಿಷಯಗಳನ್ನು ಇಲ್ಲಿ ಬಿಂಬಿಸಲಾಗಿದೆ. ಪ್ರಸ್ತುತ ಕೃತಿಯು ನಿರೂಪಣೆಯಲ್ಲಿ ಏಕತಾನತೆಯನ್ನು ಹೊಂದಿದ್ದು, ವ್ಯಕ್ತಿ ಪರಿಚಯವನ್ನು ಕೊಡುವ ಸಿದ್ಧ ಮಾದರಿಯನ್ನು ಬಳಸಿಕೊಂಡಂತೆ ತೋರುತ್ತದೆ. ಸ್ವಾತಂತ್ರ್ಯ ಪೂರ್ವದ ಕಲಾಪರಿಸ್ಥಿತಿ, ಬಂಗಾಲ ಕಲಾ ಚಳುವಳಿಯ ಪಾತ್ರ, ವೆಂಕಟಪ್ಪನವರ ಕೃತಿಗಳ ವರ್ಣವೈಖರಿ, ರೇಖಾವಿನ್ಯಾಸ, ಸಂಯೋಜನೆ ಮತ್ತು ವಸ್ತುವಿಷಯಗಳ ಬಗ್ಗೆಯೇ ಹೆಚ್ಚಿನ ಮಹತ್ವ ನೀಡಲಾಗಿದೆ.

**ಮ್ಯೂರಲ್ ಪೇಂಟಿಂಗ್ಸ್ ಆಫ್ ಸಿಬಿ :**

ಕನ್ನಡನಾಡು ಕಲೆಯ ದೃಷ್ಟಿಯಿಂದ ಬಹುಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಇಲ್ಲಿ ಹಲವಾರು ಕಲಾಪ್ರಕಾರಗಳು ಬೆಳೆದುಕೊಂಡು ಬಂದಿವೆ. ಪ್ರಾಚೀನ ಭಿತ್ತಿಚಿತ್ರ ಪ್ರಕಾರವು ಇಲ್ಲಿ ಪ್ರಬುದ್ಧವಾಗಿ ಬೆಳೆದಿದೆ. ಹಲವಾರು ದೇವಾಲಯಗಳು ಪ್ರಾಚೀನ ಭಿತ್ತಿಚಿತ್ರಗಳಿಂದ ಅಲಂಕೃತಗೊಂಡಿವೆ. ಅಂತಹ ಒಂದು ದೇವಾಲಯವು ಸಿಬಿಯಲ್ಲಿದೆ. ವೀಣಾಶೇಖರ್ ಇಲ್ಲಿನ ಚಿತ್ರಗಳ ಬಗ್ಗೆ ವಿಶೇಷವಾಗಿ ಅಧ್ಯಯನ ಮಾಡಿ ಇಂಗ್ಲೀಷನಲ್ಲಿ ಪ್ರಸ್ತುತ ಕೃತಿಯನ್ನು ಪ್ರಕಟಿಸಿದ್ದಾರೆ.[೪೪] ಧರ್ಮ ಮತ್ತು ಕಲೆ,

೪೩. ಎಸ್.ಕೆ.ರಾಮಚಂದ್ರರಾವ್ : ಕೆ.ವೆಂಕಟಪ್ಪ: ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು -೧೯೯೮
೪೪. ವೀಣಾಶೇಖರ್ : ಮ್ಯೂರಲ್ ಪೇಂಟಿಂಗ್ಸ ಆಫ್ ಸಿಬಿ:ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನೆ ಸಂಸ್ಥೆ, ಕೆಳದಿ-೧೯೯೯

ಸಿಬಿಯ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ನರಸಿಂಹ ಮತ್ತು ವೈಷ್ಣವತೆ, ಬೆಳೆದು ಬಂದ ಹಿನ್ನೆಲೆ, ಶಿಬಿ ದೇವಾಲಯದ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಶೈಲಿ, ನರಸಿಂಹ ದೇವಾಲಯದ ಭಿತ್ತಿಚಿತ್ರಗಳು, ವಸ್ತುವಿಷಯಗಳು, ವರ್ಣವಿನ್ಯಾಸ, ಶೈಲಿ ಮತ್ತು ತಾಂತ್ರಿಕತೆಯಂತಹ ವಿಷಯಗಳು ಚರ್ಚಿತಗೊಂಡಿವೆ.

**ವಿಜಯ ಸಿಂಧೂರ :**

ನಾಡಿನ ಸಮಕಾಲೀನ ಕಲಾವಿದರಲ್ಲಿ ಪ್ರಖ್ಯಾತರಾದ ವಿಜಯ ಸಿಂಧೂರ ಕರ್ನಾಟಕದ ಕಲಾಕ್ಷೇತ್ರದಲ್ಲಿ ತಮ್ಮದೇ ವಿಶಿಷ್ಟ ಛಾಪು ಮೂಡಿಸಿದ್ದಾರೆ. ನೈಜಶೈಲಿಯ ವ್ಯಕ್ತಿಚಿತ್ರ ಮತ್ತು ಭಾವಚಿತ್ರಗಳಿಗೆ ಹೊಸ ಆಯಾಮ ನೀಡಿದ ಇವರು ಆಧುನಿಕ ಶೈಲಿಯಲ್ಲಿಯೂ ಕೃತಿರಚನೆ ಮಾಡುವಲ್ಲಿ ತಮ್ಮತನವನ್ನು ಗುರುತಿಸಿಕೊಂಡಿದ್ದಾರೆ. ಪ್ರಸ್ತುತ ಸಂಪುಟವು ವಿಜಯ ಸಿಂಧೂರರ ವರ್ಣಚಿತ್ರ ಮತ್ತು ರೇಖಾಚಿತ್ರಗಳ ಕುರಿತಾಗಿದೆ.[೪೫] ಇದನ್ನು ಸ್ವತಹ ಕಲಾವಿದರೆ ತಮ್ಮ ಉತ್ತಮ ಕೃತಿಗಳನ್ನು ಆಯ್ದು ಪ್ರಕಟಿಸಿದ್ದಾರೆ. ಇದರಲ್ಲಿ ಸಿಂಧೂರರ ವರ್ಣಚಿತ್ರಗಳು, ರೇಖಾಚಿತ್ರಗಳನ್ನು ಕೊಡಲಾಗಿದೆ. ವರ್ಣಚಿತ್ರದಲ್ಲಿ ಭಾವಚಿತ್ರಗಳು, ಸಂಯೋಜನಾಚಿತ್ರಗಳು, ಸ್ಥಿರಚಿತ್ರಗಳು, ನವ್ಯಕಲಾಶೈಲಿಯ ಕೃತಿಗಳು, ಶಿಲ್ಪದ ಚಿತ್ರಗಳು ಒಳಗೊಂಡಿವೆ. ರೇಖಾಚಿತ್ರದಲ್ಲಿ ಬಾಲಕ, ಸಾಧು, ಮಹಿಳೆ, ಜಿಂಕೆಗಳು, ಯಕ್ಷಗಾನ ವೇಷಗಾರರು, ಬಾಲಕಿ, ನೃತ್ಯಗಾತಿಯರು ಮುಂತಾದ ಚಿತ್ರಗಳಿವೆ.

ಪ್ರಸ್ತುತ ಸಂಪುಟವು ಕಲಾವಿದರೊಬ್ಬರ ಕಲಾಕೃತಿಗಳ ಬಗ್ಗೆ ಬಂದಂತಹ ಹೊಸಬಗೆಯ ಪರಿಚಯ ಪುಸ್ತಕವಾಗಿದೆ. ಉತ್ಕೃಷ್ಟ ಮಟ್ಟದ ಛಾಯಾಚಿತ್ರಗಳು, ಪ್ರಿಂಟಿಂಗ್‌ನಲ್ಲಿ ಬಳಸಿದ ಆಧುನಿಕ ತಂತ್ರಗಾರಿಕೆ ವರ್ಣಕಲಾಕೃತಿಗಳನ್ನು ನೈಜತೆಗೆ ಹತ್ತಿರದಿಂದ ನೋಡಿದ ಅನುಭವ ಒದಗಿಸುತ್ತದೆ. ಕಲಾವಿದರೊಬ್ಬರ ಕಲೆ ಮತ್ತು ಕಲಾಶೈಲಿ ತಿಳಿಯುವ ಹಿನ್ನೆಲೆಯಲ್ಲಿ ಇಂತಹ ಸಂಪುಟಗಳ ಅವಶ್ಯಕತೆ ಇದೆ ಎನ್ನಬಹುದು. ಕಲಾವಿದರೊಬ್ಬರ ಕೃತಿಗಳನ್ನು ಹೀಗೆ ಸಂಪುಟ ರೂಪದಲ್ಲಿ ಹೊರತರುವುದು ಪಾಶ್ಚಾತ್ಯ ಪ್ರಭಾವವಾಗಿದ್ದು, ಕರ್ನಾಟಕಕ್ಕೂ ಇದೀಗ ಕಾಲಿಟ್ಟಿದೆ ಎನ್ನಬಹುದು. ಆಯಾ ಕಲಾಕೃತಿಗಳ ಕೆಳಗೆ ಅದರ ಶೀರ್ಷಿಕೆ, ರಚನಾ ಮಾಧ್ಯಮ, ಅಳತೆ ಮತ್ತು ಬೆಲೆಗಳನ್ನು ನಮೂದಿಸಲಾಗಿದೆ.

**ಎಸ್.ಎನ್.ಸ್ವಾಮಿ ಪೇಂಟಿಂಗ್ಸ್ :**

ಸ್ಥಪತಿ ನಂಜುಂಡಸ್ವಾಮಿ (ಎಸ್.ಎನ್.ಸ್ವಾಮಿ) ಕರ್ನಾಟಕ ಕಲಾಕ್ಷೇತ್ರದಲ್ಲಿ ಗಮನಾರ್ಹ ಹೆಸರು ಮಾಡಿದ ಕಲಾವಿದ. ಸಾಂಪ್ರದಾಯಿಕ ಕಲಾ ಮನೆತನದಲ್ಲಿ ಹುಟ್ಟಿದ ಇವರು ಬಾಲ್ಯದಿಂದಲೇ ಕಲೆಯ ಗೀಳು ಅಂಟಿಸಿಕೊಂಡಿದ್ದರು. ೧೯೦೭ರಲ್ಲಿ ಕೊಳ್ಳೆಗಾಲದಲ್ಲಿ ಹುಟ್ಟಿದ ಸ್ವಾಮಿ ಕಲೆಯನ್ನು ಕಲಿಯಲು ೧೯೨೭ರಲ್ಲಿ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಕಲಾಶಾಲೆಯನ್ನು ಸೇರಿದರು. ಇಲ್ಲಿ ಅಲ್ಲದರಚಿನ್ ಮತ್ತು ಕೇಶವಯ್ಯ ಇವರ ಕೆಳಗೆ ಅಧ್ಯಯನ ಮಾಡಿದ ಸ್ವಾಮಿ ಹೆಚ್ಚಿನ ಕಲಿಕೆಗೆ ಮುಂಬೈನ ಪ್ರಖ್ಯಾತ ಸರ್.ಜೆ.ಜೆ.ಕಲಾಶಾಲೆಗೆ ಸೇರಿದರು. ತಮ್ಮ ಕಲಾ ಬದುಕಿನಲ್ಲಿ ಅನೇಕ ಗಮನಾರ್ಹ ಕೃತಿಗಳನ್ನು ರಚಿಸಿದ ಎಸ್.ಎಸ್.ಸ್ವಾಮಿಯವರು ಮೈಸೂರು ಮಹಾರಾಜರಾದ ನಾಲ್ಕನೆಯ ಕೃಷ್ಣರಾಜ ಒಡೆಯರ್ ಪ್ರೀತಿಗೆ ಪಾತ್ರರಾಗಿದ್ದರು. ಇವರಿಂದ ಅರಮನೆಯಲ್ಲಿನ ಕಲ್ಯಾಣ ಮಂಟಪದಲ್ಲಿ ವಿಜಯದಶಮಿಯ ಮೆರವಣಿಗೆಯ ಭಿತ್ತಿಚಿತ್ರವನ್ನು ಬರೆಯಿಸಿದರು. ಸ್ವಾಮಿಯವರು ಹೆಚ್ಚಾಗಿ ಭಾರತೀಯ ಸಂಪ್ರದಾಯವನ್ನು ತಮ್ಮ ಚಿತ್ರಗಳಲ್ಲಿ ತರಲು ಪ್ರಯತ್ನಿಸಿದರೂ ಸಹಿತ ರವಿವರ್ಮನಿಗಿಂತಲೂ

೪೫. ವಿಜಯ ಸಿಂಧೂರ : ವಿಜಯ ಪಬ್ಲಿಕೇಷನ್ಸ್, ಕೋಷ್ಟಿಗಲ್ಲಿ ಜಮಖಂಡಿ-೧೯೯೯

ಭಿನ್ನವಾದ ಶೈಲಿಯನ್ನು ಅಳವಡಿಸಿಕೊಂಡರು. ರಾಮ, ದುರ್ಗೆ, ಕೃಷ್ಣ ಕುರಿತ ಇವರ ಚಿತ್ರಗಳು ಪ್ರಖ್ಯಾತವಾಗಿವೆ. ಕರ್ನಾಟಕದ ಚಿತ್ರಕಲೆಯಲ್ಲಿ ಮಹತ್ವದ ಸ್ಥಾನಗಳಿಸಿದ ಸ್ವಾಮಿಯವರ ಆಯ್ದು ಚಿತ್ರಗಳ ಸಂಪುಟವನ್ನು ಕರ್ನಾಟಕ ಜನಪದ ಅಕಾಡೆಮಿಯು ಹೊರತಂದಿದೆ.[೪೬] ಈ ಚಿತ್ರ ಸಂಪುಟವನ್ನು ಇಂಗ್ಲೀಷ ಭಾಷೆಯಲ್ಲಿ ಹೊರತಂದಿದ್ದು ಇದಕ್ಕೆ ಎಸ್.ಕೆ.ರಾಮಚಂದ್ರರಾವ್ ಅವರು ಪೀಠಿಕೆ ಬರೆದಿದ್ದಾರೆ.

ಈ ಚಿತ್ರ ಸಂಪುಟದಲ್ಲಿ ಎಸ್.ಎನ್.ಸ್ವಾಮಿಯವರ ವರ್ಣಚಿತ್ರಗಳು, ರೇಖಾಚಿತ್ರಗಳು ಮತ್ತು ಮಿಶ್ರ ಮಾಧ್ಯಮದ ಕೃತಿಗಳ ಛಾಯಾಚಿತ್ರಗಳನ್ನು ಕೊಡಲಾಗಿದೆ. ಇಲ್ಲಿ ಅವರ ಅರವತ್ತು ವರ್ಣಚಿತ್ರಗಳು ಮತ್ತು ಅಷ್ಟೇ ಸಂಖ್ಯೆಯ ರೇಖಾಚಿತ್ರಗಳು ಪ್ರಕಟಗೊಂಡಿವೆ. ವರ್ಣಚಿತ್ರಗಳಲ್ಲಿ ಮೆರವಣಿಗೆ, ಮಂಚದ ಮೇಲೆ ಕುಳಿತ ಮಹಿಳೆ, ಹಳ್ಳಿಯ ದೇವಾಲಯ, ಚಿತ್ರದುರ್ಗದ ಮದಕರಿನಾಯಕ, ಕಮ್ಮಟದುರ್ಗದ ಕುಮಾರರಾಮ, ತಾಯಿ-ಮಗು, ಮಹಿಷಾಸುರಮರ್ದಿನಿ, ಅಕ್ಕಮಹಾದೇವಿ, ನೃತ್ಯಗಣಪತಿ, ಕಾಲಭೈರವ, ಬಾಲಕೃಷ್ಣ, ಭೀಮ ಮುಂತಾದವುಗಳು ಪ್ರಮುಖವಾಗಿವೆ. ರೇಖಾಚಿತ್ರಗಳಲ್ಲಿ ಮದುವೆ ಸಂದರ್ಭದ ದೃಶ್ಯಗಳು, ತೊಟ್ಟಿಲು ಶಾಸ್ತ್ರ, ಮರವನ್ನು ಪೂಜಿಸುವ ಸ್ತ್ರೀಯರು, ಚಿತ್ರಾಂಗದೆ ಅರ್ಜುನನ ನೆನಪಿನಲ್ಲಿರುವುದು, ಮಹದೇಶ್ವರ ಸ್ವಾಮಿ ಪವಡಿಸಿರುವುದು, ಪಾರ್ಕಿನಲ್ಲಿರುವ ಪ್ರೇಮಿಗಳು, ಹಳ್ಳಿಯ ಮಾರುಕಟ್ಟೆ, ರಾಜದರ್ಬಾರು, ರೈಲು ಪ್ರಯಾಣಿಕರು, ವೀರಭದ್ರ ದೇವರುಗಳ ಚಿತ್ರಗಳಲ್ಲದೆ ಕುವೆಂಪು, ಕೃಷ್ಣ, ನೆಹರೂ, ಸರೋಜಿನಿ ನಾಯ್ಡು, ಡಿ.ಜವರೇಗೌಡ ಇವರ ಭಾವಚಿತ್ರಗಳೂ ಪ್ರಖ್ಯಾತವಾಗಿವೆ. ಚಿತ್ರಸಂಪುಟದ ಕೊನೆಯಲ್ಲಿ ಎಸ್.ಎನ್.ಸ್ವಾಮಿಯವರ ಕಲೆ ಮತ್ತು ಕಲಾ ಬದುಕಿನ ಬಗ್ಗೆ ಗಣ್ಯರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಕೊಡಲಾಗಿದೆ. ಇದರಲ್ಲಿ ಬಿ.ಎಲ್.ಶಂಕರ್, ಪ್ರಭುಶಂಕರ್, ಎಸ್.ಗೋಪಾಲನ್, ಎಸ್.ಆರ್.ಅಯ್ಯಂಗಾರ್, ಬಿ.ಎಚ್.ರಾಮಚಂದ್ರ ತಾವು ಕಂಡಂತೆ ಸ್ವಾಮಿ ಮತ್ತು ಅವರ ಕಲೆಯ ಬಗ್ಗೆ ಸ್ಥೂಲವಾಗಿ ಬರೆದಿದ್ದಾರೆ. ಈ ಚಿತ್ರ ಸಂಪುಟವು ಉತ್ತಮ ಮುದ್ರಣ, ಗುಣಮಟ್ಟದ ಛಾಯಾಚಿತ್ರ ಇವುಗಳಿಂದಾಗಿ ತನ್ನ ಶ್ರೇಷ್ಠತೆಯನ್ನು ಉಳಿಸಿಕೊಂಡಿದೆ.

ಇಂಗ್ಲೀಷ್ ಭಾಷೆಯ ಚಿತ್ರಕಲಾ ಸಾಹಿತ್ಯದಲ್ಲಿ ವೈವಿಧ್ಯತೆ ಇದೆ. ಕಲಾಪ್ರಕಾರಗಳು, ಕಲಾನೆಲೆಗಳು, ಕಲಾವಿದರು, ಕಲಾವಿಮರ್ಶೆ, ತಾಂತ್ರಿಕತೆ ಹೀಗೆ ಹಲವು ಆಯಾಮಗಳಿಗೆ ಸಂಬಂಧಿಸಿದ ಕೃತಿಗಳು ಇಲ್ಲಿವೆ. ಕಲಾಪ್ರಕಾರಗಳಲ್ಲಿ ಚಿತ್ರಕಲೆಯ ಜೊತೆಗೆ ಶಿಲ್ಪಕಲೆ ಮತ್ತು ವಾಸ್ತುಕಲೆಗಳನ್ನು ಪರಿಗಣಿಸಲಾಗಿದೆ. ಇಲ್ಲಿ ಪರಿಗಣಿಸಿರುವ ಹೆಚ್ಚಿನ ಕೃತಿಗಳು ದಕ್ಷಿಣ ಭಾರತದ ಕಲೆಯನ್ನು ಕುರಿತು ವಿಶೇಷ ಮಾಹಿತಿಯನ್ನು ನೀಡುತ್ತವೆ. ಅದರಲ್ಲೂ ಡೆಕ್ಕನ್ ಚಿತ್ರಕಲೆ ಬಗ್ಗೆ ಪ್ರಮುಖ ಮಾಹಿತಿ ಇಲ್ಲಿದೆ.

**೩. ಚಿತ್ರಕಲಾ ಪ್ರವಾಸ ಸಾಹಿತ್ಯ :**

ಚಿತ್ರಕಲಾ ಸಾಹಿತ್ಯದಲ್ಲಿ ಪ್ರವಾಸಸಾಹಿತ್ಯವು ಇತ್ತೀಚೆಗೆ ರೂಪಗೊಳ್ಳತೊಡಗಿದೆ. ಹಾಗಾಗಿ ಅದರ ಪ್ರಮಾಣ ತೀರಾ ಕಡಿಮೆ ಎನ್ನಬಹುದು. ಕಲಾವಿದರು ಕಲೆಯ ಹಿನ್ನೆಲೆಯಲ್ಲಿ ಪ್ರವಾಸ ಸಾಹಿತ್ಯ ರಚನೆಮಾಡಿದಾಗ ಅದು ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಈ ಹಿನ್ನೆಲೆಯಲ್ಲಿ ರಾಜ್ಯ ಲಲಿತಕಲಾ ಅಕಾಡಮಿಯು ನಾಲ್ಕೈದು ಪುಸ್ತಕಗಳನ್ನು ಕಲಾವಿದರಿಂದ ಬರೆಸಿದೆ. ಇದನ್ನು ಹೊರತುಪಡಿಸಿಯೂ ಕನ್ನಡದಲ್ಲಿ ಚಿತ್ರಕಲಾ ಪ್ರವಾಸ ಸಾಹಿತ್ಯವು ಬೇರೆ ಪ್ರವಾಸ ಸಾಹಿತ್ಯಗಳಲ್ಲಿ ಸಾಂದರ್ಭಿಕವಾಗಿ ಮೂಡಿಬಂದಿದೆ. ಈ ಎಲ್ಲ ಬಗೆಯ ಚಿತ್ರಕಲಾ ಪ್ರವಾಸ ಸಾಹಿತ್ಯವನ್ನು ಈ ಕೆಳಗಿನಂತೆ ಪರಿಶೀಲಿಸಲಾಗಿದೆ.

---

೪೬. ಎಸ್.ಎನ್.ಸ್ವಾಮಿ ಪೇಂಟಿಂಗ್ಸ್ : ಜಾನಪದ ಅಕಾಡೆಮಿ ಬೆಂಗಳೂರು-೨೦೦೦

**ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ :**

ಕನ್ನಡದ ಶ್ರೇಷ್ಠ ಕವಿಗಳು, ಬರಹಗಾರರು, ಜ್ಞಾನಿಗಳ ಸಾಲಿನಲ್ಲಿ ಜಿ.ಎಸ್. ಶಿವರುದ್ರಪ್ಪನವರು ಮೊದಲ ಪಂಕ್ತಿಯಲ್ಲಿ ನಿಲ್ಲುತ್ತಾರೆ. ಇವರು ರಚಿಸಿದ ಸಾಹಿತ್ಯ ವಾಂಙ್ಮಯದಲ್ಲಿ ಪ್ರವಾಸ ಸಾಹಿತ್ಯವೂ ಸೇರಿದೆ. ರಶಿಯಾದ ರಾಜಧಾನಿ 'ಮಾಸ್ಕೋದಲ್ಲಿ ಇಪ್ಪತ್ತೆರಡು ದಿನಗಳು' ಇದ್ದುದಕ್ಕಾಗಿ ಅವರು ಈ ಪ್ರವಾಸ ಕಥನಕ್ಕೆ ಅದೇ ಹೆಸರನ್ನು ಕೊಟ್ಟಿದ್ದಾರೆ.[೪೭] ಇದು ಮಾಸ್ಕೋದ ಕಥನ ಪ್ರವಾಸವಾದರೂ ಆ ಮೂಲಕ  ರಶಿಯಾದ ಜನಜೀವನ ಮತ್ತು ಸಂಸ್ಕೃತಿಯನ್ನು ಬಿಂಬಿಸಿದೆ. ಈ ಪ್ರವಾಸ ಕಥನದಲ್ಲಿ ರಶಿಯಾ ದೇಶದ ಜನಜೀವನ, ಇತಿಹಾಸ, ಸಾಹಿತ್ಯ, ಸಂಗೀತ, ಕಲೆ, ವಾಸ್ತುಶಿಲ್ಪ, ರಾಜಕೀಯ, ಧಾರ್ಮಿಕ, ಸಾಮಾಜಿಕ ಹೀಗೆ ಹಲವಾರು ಸಂಗತಿಗಳು ವ್ಯಕ್ತಗೊಂಡಿವೆ. ಹಾಗಿದ್ದರೂ ಇಲ್ಲಿ ಕಲಾ ವಿಚಾರಗಳನ್ನು ಮಾತ್ರ ಪರಿಶೀಲಿಸಲಾಗುವುದು.

ಈ ಕೃತಿಯಲ್ಲಿ ಒಟ್ಟು ಇಪ್ಪತ್ತೇಳು ಅಧ್ಯಾಯಗಳಲ್ಲಿ ಬೇರೆ ಬೇರೆ  ತಲೆಬರಹದಡಿಯಲ್ಲಿ ವಿಷಯ ನಿರೂಪಣೆಗೊಂಡಿದೆ. ಇವುಗಳಲ್ಲಿ ಅಲ್ಲಲ್ಲಿ ಸಾಂದರ್ಭಿಕವಾಗಿ ಚಿತ್ರಕಲೆ ಮತ್ತು ಶಿಲ್ಪಕಲೆಯಂತಹ ಸಂಗತಿಗಳು ಹೇಳಲ್ಪಟ್ಟಿವೆ. ಮಾಸ್ಕೋ ಮತ್ತು ಸುತ್ತಮುತ್ತಲಿನ ಪರಿಸರದಲ್ಲಿ ಶಿವರುದ್ರಪ್ಪನವರು ತಾವು ನೋಡಿದ ಸ್ಥಳಗಳನ್ನು ವರ್ಣಿಸುತ್ತಾರೆ. ದಿನಾಂಕ: ೦೭-೦೯-೧೯೭೨ ರಂದು ಪುಸ್ಕಿನ್ ಆರ್ಟ ಗ್ಯಾಲರಿಯನ್ನು ಸಂದರ್ಶಿಸಿದ ವಿವರ ಕೊಡುತ್ತಾರೆ. ಇಲ್ಲಿ ಶಿಲ್ಪಕಲಾ ವಿಭಾಗ ಮತ್ತು ಚಿತ್ರಕಲಾ ವಿಭಾಗಗಳನ್ನೂ ಪ್ರತ್ಯೇಕವಾಗಿ ಮಾಡಲಾಗಿದೆ. ಚಿತ್ರಕಲಾ  ವಿಭಾಗದಲ್ಲಿ ಒಂದೊಂದು ದೇಶದ ಪ್ರಖ್ಯಾತ ಕಲಾವಿದರ ಕೃತಿಗಳನ್ನು ಪ್ರತ್ಯೇಕವಾಗಿ ಇರಿಸಲಾಗಿದೆ. ಫ್ರೆಂಚ್, ಇಟಾಲಿಯನ್ ಚಿತ್ರಗಳು ಹೆಚ್ಚು ಮೌಲಿಕವಾಗಿವೆ. ಎಸ್ಕಿಮೋ ಆದಿವಾಸಿಗಳ  ಕಲಾವಿಭಾಗ, ಈಜಿಪ್ತ ಪ್ರಾಚೀನ ಕಲಾವಿಭಾಗ ಇಲ್ಲಿನ ಮಹತ್ವದ ವಿಭಾಗಗಳಾಗಿವೆ. ಮಾಸ್ಕೋ ನಗರದ ಮತ್ತೊಂದು ಕಲಾಗ್ಯಾಲರಿ ತ್ರಿತ್ಯಾಕೋವ್ ಆರ್ಟಗ್ಯಾಲರಿ ಎಂಬುದಾಗಿದೆ. ಇದು ದೊಡ್ಡ ಗ್ಯಾಲರಿಯಾಗಿದ್ದು ನೂರಾರು ಕೊಠಡಿಗಳನ್ನು ಹೊಂದಿದೆ. ಓಡುತ್ತಾ ನೋಡಿದರೂ ಸುಮಾರು ಮೂರುತಾಸು ಮಾಸ್ಕೊ ನಗರದ ಮತ್ತೊಂದು ಕಲಾಗ್ಯಾಲರಿ ತ್ರಿತ್ಯಾಕೋವಾ ಆರ್ಟ ಗ್ಯಾಲರಿ ಎಂಬುದಾಗಿದೆ. ಇದು ದೊಡ್ಡ ಗ್ಯಾಲರಿಯಾಗಿದ್ದು, ನೂರಾರು ಕೊಠಡಿಗಳನ್ನು ಹೊಂದಿದೆ. ಓಡುತ್ತಾ ನೋಡಿದರೂ ಸುಮಾರು ಮೂರು ತಾಸು ಸಮಯ ಬೇಕು. ಇಲ್ಲಿ ರಶಿಯಾದ ಇತಿಹಾಸ, ರಶಿಯಾದ ವಿವಿಧ  ಪ್ರಾಂತ್ಯಗಳ ಸಂಸ್ಕೃತಿ, ಆ ದೇಶದ ಜನಪದ, ಆಧುನಿಕ ಕ್ರಾಂತಿ, ಐತಿಹಾಸಿಕ ವ್ಯಕ್ತಿಗಳಿಗೆ ಸಂಬಂಧಿಸಿದ ಚಿತ್ರಗಳು ಮತ್ತು ಶಿಲ್ಪಗಳನ್ನು ಪ್ರದರ್ಶಿಸಲಾಗಿದೆ.

ಮಾಸ್ಕೋ ನಗರದ ಹೃದಯ ಭಾಗದಲ್ಲಿ ಕೆಂಪುಚೌಕವಿದೆ. ಇಲ್ಲಿ ಅನೇಕ ಐತಿಹಾಸಿಕ ಮತ್ತು ಕ್ರಾಂತಿಕಾರರ ಶಿಲ್ಪಗಳನ್ನು ನೈಜಶೈಲಿಯಲ್ಲಿ ರಚನೆ ಮಾಡಲಾಗಿದೆ. ಕ್ರೆಮ್ಲಿನ್ನಿನ ಭಾಗದಲ್ಲಿ ಕೆಲವು ಕೆಥಿಡ್ರಿಲ್‌ಗಳಿದ್ದು ಈ ಪೂಜಾಮಂದಿರಗಳು ಜಾರ್ ದೊರೆಗಳ ಕಾಲಕ್ಕೆ ಸೇರಿವೆ. ಇವುಗಳ ಒಳಭಾಗದ ಗೋಡೆಗಳು ಬೈಬಲ್ಲಿನ ವರ್ಣಚಿತ್ರಗಳಿಂದ ಅಲಂಕೃತಗೊಂಡಿವೆ. ಮಾಸ್ಕೋ ನಗರದಲ್ಲಿ ಪ್ರವಾಸಿಗರ ಮನಸೂರೆಗೊಳ್ಳುವ ತಾಣಗಳಲ್ಲಿ ಲೆನಿನ್ ಮ್ಯೂಜಿಯಂ ಮತ್ತು ಕ್ರಾಂತಿ ಮ್ಯೂಜಿಯಂಗಳಾಗಿವೆ. ಲೆನಿನ್ ಮ್ಯೂಜಿಯಂ  ಮೂವತ್ತು ದೊಡ್ಡ ಕೋಣೆಗಳನ್ನು ಹೊಂದಿದ್ದು, ಲೆನಿನ್ ಬದುಕಿಗೆ ಸಂಬಂಧಿಸಿದ ಸಾವಿರಾರು ಚಿತ್ರಶಿಲ್ಪಗಳು ಇಲ್ಲಿ ರಚನೆಯಾಗಿವೆ.

---

೪೭. ಜಿ.ಎಸ್.ಶಿವರುದ್ರಪ್ಪ : ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ : ಶಾರದಾ ಪ್ರಕಾಶನ, ಗಾಂಧಿನಗರ, ಬೆಂಗಳೂರು-೧೯೭೩

ಕ್ರಾಂತಿ ಮ್ಯೂಜಿಯಂನಲ್ಲಿರುವ ವಿವಿಧ ಕೋಣೆಗಳಲ್ಲಿ ಲೆನಿನ್ ನಾಯಕತ್ವದಲ್ಲಿ ನಡೆದ ರಶಿಯಾ ಕ್ರಾಂತಿಯನ್ನು ಬಿಂಬಿಸುವ ಹಲವಾರು ಶಿಲ್ಪಚಿತ್ರಗಳನ್ನು ರಚನೆ ಮಾಡಲಾಗಿದೆ. ನೈಜಗಾತ್ರದ ಶಿಲ್ಪಚಿತ್ರಗಳು ನೋಡುಗರನ್ನು ಬೆರಗುಗೊಳಿಸುತ್ತವೆ. ದಿನಾಂಕ: ೧೬-೦೯-೧೯೭೨ ರಂದು ಜಿ.ಎಸ್.ಶಿವರುದ್ರಪ್ಪನವರು ಇಲ್ಲಿನ 'ಓ ಸ್ಟೆನ್‌ಕಿನೊ ಅರಮನೆ'ಯನ್ನು ಸಂದರ್ಶಿಸಿದ್ದು, ಅದರ ವಿವರಣೆ ಕೊಡುತ್ತಾರೆ. ಕ್ರಿ.ಶ. ೧೭೯೭ರಲ್ಲಿ ರಾಜನಾದ 'ಕೌಂತ್‌ಷೆರಿಮತ್ಯೆಯೇವ್' ಎಂಬಾತನಿಂದ ಕಟ್ಟಿಸಲಾಗಿದೆ. ಅದನ್ನು ಇಂದು ಮ್ಯೂಜಿಯಂ ಆಗಿ ಪರಿವರ್ತಿಸಲಾಗಿದೆ. ಈ ಅರಮನೆಯ ಹಲವಾರು ಕೋಣೆಗಳು, ಅವುಗಳ ಗೋಡೆ ಛಾವಣಿಗಳನ್ನು ವರ್ಣಚಿತ್ರಗಳಿಂದ ಅಲಂಕರಿಸಿದ್ದಾರೆ. ಅಲ್ಲಲ್ಲಿ ರಾಜವಂಶಜರ ಶಿಲ್ಪ ಕಲಾಕೃತಿಗಳನ್ನು ನಿಲ್ಲಿಸಲಾಗಿದೆ. ಈ ಅರಮನೆಯ ವಿವಿಧ ಕೊಠಡಿಗಳನ್ನು ಪ್ರತ್ಯೇಕ ವಿಭಾಗಗಳಾಗಿ ವಿಂಗಡಿಸಿ ಒಂದು ವ್ಯವಸ್ಥಿತಿ ಮ್ಯೂಜಿಯಂ ಆಗಿ ಮಾಡಲಾಗಿದೆ. ಗ್ರೀಕ್ ಪ್ರತಿಮೆಗಳು, ಜಗತ್ತಿನ ಪ್ರಸಿದ್ಧ ವರ್ಣಚಿತ್ರಗಳು ಇಲ್ಲಿನ ಸಂಗ್ರಹದಲ್ಲಿವೆ. ಕ್ರೆಮ್ಲಿನ್ ಅರಮನೆಯ ಬದಿಯಲ್ಲಿರುವ 'ಆರ್ಮರಿ' ಎಂಬ ಭಾಗದಲ್ಲಿ ಜಾರ್ ಚಕ್ರವರ್ತಿಗಳ ವೈಭವವನ್ನು ಬಿಂಬಿಸುವ ಅರಮನೆಗಳಿವೆ. ಇಲ್ಲಿ ಆ ಕಾಲದ ಶಿಲ್ಪಚಿತ್ರಗಳಲ್ಲದೆ ರಾಜರು ಉಪಯೋಗಿಸುತ್ತಿದ್ದ ಎಲ್ಲ ವಸ್ತುಗಳನ್ನೂ ಕಾಯ್ದಿರಿಸಲಾಗಿದೆ.

ರಶಿಯಾದ ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರಾದ ಲಿಯೋ ಟಾಲ್‌ಸ್ಟಾಯ್ ಅವರನೆನಪಿಗಾಗಿಯೇ ಒಂದು 'ಟಾಲ್‌ಸ್ಟಾಯ್ ಮ್ಯೂಜಿಯಂ' ಸ್ಥಾಪಿಸಲಾಗಿದೆ. ಇಲ್ಲಿ ಅವರ ನಿತ್ಯದ ಉಪಯೋಗಿ ವಸ್ತುಗಳು, ಅವನ ಕೃತಿಗಳು, ಬದುಕಿನ ವಿವಿಧ ಘಟನೆಗಳನ್ನು ಸಾರುವ ಚಿತ್ರಗಳು, ಮಿತ್ರರು, ತಂದೆ-ತಾಯಿ, ಪತ್ನಿ ಹೀಗೆ ಹಲವಾರು ಜನರ ಚಿತ್ರಗಳನ್ನು ರಚಿಸಿಡಲಾಗಿದೆ. 'ಬಾಲ್‌ಷೋಯ್ ನಾಟಕ ಗೃಹ'ವು ಮಾಸ್ಕೋದಲ್ಲಿ ಪ್ರಖ್ಯಾತವಾಗಿದ್ದು ಇಲ್ಲಿ ನಿತ್ಯ ನಾಟಕಗಳ ಪ್ರದರ್ಶನ ನಡೆಯುತ್ತದೆ. ಒಂದು ಪ್ರದರ್ಶನ ನೋಡಲು ಜಿ.ಎಸ್.ಶಿವರುದ್ರಪ್ಪ ಅವರೂ ಇಲ್ಲಿಗೆ ಹೋಗಿದ್ದು, ಅಲ್ಲಿನ ವೈಭವವನ್ನು ಬೆರಗಾಗಿ ಬಣ್ಣಿಸುತ್ತಾರೆ. ನಮ್ಮ ಹಳೆಯ ಪುರಾಣಗಳಲ್ಲಿ ಬರುವ ಇಂದ್ರಸಭಾ, ದೇವಲೋಕದ ದೃಶ್ಯಗಳಂತೆ ಇದೆ. ಅದರ ಮೇಲ್ಛಾವಣಿ, ಕಂಬ, ಕಮಾನು, ಕಿಟಕಿ, ಬಾಗಿಲುಗಳಲ್ಲದೆ ಎಲ್ಲ ಗೋಡೆ ಮತ್ತು ಕುಳಿತುಕೊಳ್ಳುವ ಆಸನಗಳು ಸಹಿತ ವರ್ಣಚಿತ್ರಗಳಿಂದ ಅಲಂಕೃತವಾಗಿವೆ. ಇಲ್ಲಿ ರಶಿಯಾದ ಪ್ರಸಿದ್ಧ ನಾಟಕಗಳಿಂದ ಆಯ್ದ ಪ್ರಸಂಗಗಳನ್ನು ಚಿತ್ರಿಸಲಾಗಿದೆ. ಈ ನಾಟ್ಯ ಮಂದಿರ ಕ್ರಿ.ಶ.೧೭೮೦ ಕ್ಕಿಂತಲೂ ಪೂರ್ವದಲ್ಲಿ ಜಾರ್ ದೊರೆಗಳ ಕಾಲಕ್ಕೆ ನಿರ್ಮಾಣವಾಗಿದೆ. ಇಲ್ಲಿ ಲೆನಿನ್ ಲೈಬ್ರರಿಯೂ ಒಂದು ಕಲಾತ್ಮಕ ಕಟ್ಟಡವಾಗಿದ್ದು ಇದರ ಅನೇಕ ಭಾಗಗಳಲ್ಲಿ ವರ್ಣಚಿತ್ರಗಳನ್ನು ರಚಿಸಲಾಗಿದೆ. ನದಿ ತೀರದಲ್ಲಿರುವ 'ಆರ್‌ಖಾನ್‌ಗೆಲ್‌ಸ್ಕೊಯಿ' ಅರಮನೆಯು ಮತ್ತೊಂದು ಸುಂದರ ಸ್ಥಳ. ಇದು ಜಾರ್ ದೊರೆಗಳಿಗೆ ಸೇರಿದ್ದಾಗಿದೆ. ಈ ಬೃಹತ್ ಅರಮನೆಯನ್ನು ಈಗ ಮ್ಯೂಜಿಯಂ ಆಗಿ ಮಾಡಲಾಗಿದೆ. ಈ ಅರಮನೆಯಲ್ಲಿಯೇ ಮೂಲವಾಗಿ ಚಿತ್ರಶಿಲ್ಪಗಳನ್ನು ರಚಿಸಲಾಗಿದ್ದು ನಂತರ ಮ್ಯೂಜಿಯಂ ಆಗಿ ಪರಿವರ್ತಿಸಿದ ಮೇಲೆ ಅನೇಕ ಕಲಾಕೃತಿಗಳನ್ನು ಸಂಗ್ರಹಿಸಲಾಗಿದೆ. ದೊಡ್ಡದಾದ ಚಿತ್ರಗಳು, ಅಮೃತಶಿಲೆಗಳ ಶಿಲ್ಪಗಳು, ಇನ್ನಿತರ ಕಲಾವಸ್ತುಗಳನ್ನು ಇಲ್ಲಿ ಕಾಯ್ದಿಡಲಾಗಿದೆ. ಮಾಸ್ಕೋ ವಿಶ್ವವಿದ್ಯಾಲಯದ ಜನಪದ ವಿಭಾಗದಲ್ಲಿ ಒಂದು ಪ್ರತ್ಯೇಕ ಕಲಾ ಗ್ಯಾಲರಿಯಿದೆ. ಆದೇಶದ ಜಾನಪದ ಕ್ಷೇತ್ರಕ್ಕೆ ಸಂಬಂಧಿಸಿದ ವಸ್ತುಗಳು, ವೇಷಭೂಷಣಗಳು, ಸಾಹಿತ್ಯ, ವಾದ್ಯಗಳು, ಇನ್ನಿತರ ಹಲವಾರು ಪರಿಕರಗಳ ಜೊತೆಗೆ ಚಿತ್ರಶಿಲ್ಪಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿನ ಜಾನಪದ ಚಿತ್ರಕಲೆಯ ಸಂಗ್ರಹವು ಮೋಹಕವಾಗಿದೆ ಎಂದು ತಿಳಿಸುತ್ತಾರೆ.

ಮಾಸ್ಕೋದ ಟೆಲಿವಿಷನ್ ಗೋಪುರವು ಪ್ರವಾಸಿಗರ ಮತ್ತೊಂದು ಕೌತುಕವಾಗಿದೆ. ಈ ಗೋಪುರವು ಪ್ರಪಂಚದ ಅತ್ಯಂತ ಎತ್ತರದ ಗೋಪುರವಾಗಿದ್ದು ಮಾಸ್ಕೋದ ಸೋಜಿಗ ಎನ್ನುತ್ತಾರೆ. ಇದು ೧೭೫೦ ಅಡಿಗಳಷ್ಟು ಎತ್ತರವಿದ್ದು, ೧೬೫ ಅಡಿ ಸುತ್ತಳತೆ ಹೊಂದಿದೆ. ಈ ಗೋಪುರದ ೧೧೦೦ನೇ ಅಡಿಯ ಎತ್ತರದಲ್ಲಿ 'ಸಪ್ತಮ ಸ್ವರ್ಗ' ಎಂಬ (ರೆಸ್ಟೋರೆಂಟ್) ಉಪಹಾರ ಗೃಹವಿದೆ. ಇದರ ಮೂರು ಕೊಠಡಿಗಳು ನಿರಂತರವಾಗಿ ನಿಧಾನ ಗತಿಯಲ್ಲಿ ತಿರುಗುವಂತೆ ಮಾಡಲಾಗಿದೆ. ಹಾಗಾಗಿ ಇಲ್ಲಿ ಉಪಹಾರ ಸೇವಿಸುವ ಪ್ರವಾಸಿಗರಿಗೆ ಎಲ್ಲ ಕಡೆಯಿಂದಲೂ ಸುಂದರ ದೃಶ್ಯಗಳು ಕಂಡುಬರುತ್ತವೆ. ಇದಕ್ಕಿಂತಮಹತ್ವದ್ದಾದ ಸಂಗತಿ ಎಂದರೆ ಈ ಉಪಹಾರ ಗೃಹದ ಈ ಮೂರು ಕೋಣೆಗಳು ಅಮೃತಶಿಲೆಯ ಶಿಲ್ಪಗಳಿಂದ ಅಲಂಕೃತವಾಗಿದೆಯಲ್ಲದೆ ಗೋಡೆ, ಕಮಾನುಗಳು ವರ್ಣಚಿತ್ರಗಳಿಂದ ತುಂಬಿಕೊಂಡಿವೆ. ಹೊರಗಿನ ದೃಶ್ಯ ನೋಡಿ ಬೇಸರಿಸಿಕೊಂಡ ಪ್ರವಾಸಿಗರಿಗೆ ಒಳಗಿನ ಈ ಚಿತ್ರಗಳು ಮುದನೀಡುತ್ತವೆ. ಈ ಕಲಾತ್ಮಕ ಉಪಹಾರ ಗೃಹವನ್ನು ನೋಡಿದ ಮರುದಿನ ಮಾಸ್ಕೋದಲ್ಲಿನ 'ರಷ್ಯಾ ಹೋಟೆಲ್'ನೋಡಿದ್ದಾಗಿ ತಿಳಿಸುತ್ತಾರೆ. ಈ ರಷ್ಯಾ ಹೋಟೆಲ್ ವಿಸ್ತಾರದಲ್ಲಿ ಇಡೀ ಯುರೋಪಿನ್ಲೇ ಮೊದಲ ಸ್ಥಾನದಲ್ಲಿದೆ. ಇಲ್ಲಿನ ಕೆಲವು ಕೋಣೆಗಳೂ ವರ್ಣಚಿತ್ರ ಮತ್ತು ಶಿಲ್ಪಗಳಿಂದ ಅಲಂಕೃತಗೊಂಡಿವೆ.

ಮಾಸ್ಕೋದಿಂದ ೫೦ ಕಿ.ಮೀ. ದೂರದಲ್ಲಿರುವ 'ಜಗೋರ್ಸ್ಕ' ಎಂಬ ಸ್ಥಳದಲ್ಲಿ ಅನೇಕ ಪ್ರಾಚೀನ ಚರ್ಚುಗಳು, ಪೂಜಾಮಂದಿರಗಳು ಇವೆ. ಇವುಗಳಲ್ಲಿ ಒಳಭಾಗದ ಗೋಡೆಗಳ ಮೇಲೆ ಛಾವಣಿಯ ಒಳಭಾಗದಲ್ಲಿ ಕ್ರೈಸ್ತಧರ್ಮಕ್ಕೆ ಸಂಬಂಧಿಸಿದ ಭಿತ್ತಿಚಿತ್ರಗಳನ್ನು ರಚಿಸಲಾಗಿದೆ. ಇವುಗಳಲ್ಲಿ ಕೆಲವು ಚರ್ಚಿನ ಚಿತ್ರಗಳು ನಾಶವಾಗಿವೆ. ಹೀಗೆ ರಶಿಯಾದ ತಮ್ಮ ಪ್ರವಾಸ ಕಾಲದಲ್ಲಿ ಅಲ್ಲಿನ ಹಲವಾರು ಸ್ಥಳಗಳನ್ನು ಸಂದರ್ಶಿಸಿ ಅವುಗಳ ಕುರಿತು ಈ ಪುಸ್ತಕದಲ್ಲಿ ಬರೆದಿದ್ದಾರೆ. ಬೇರೆ ಬೇರೆ ಆಯಾಮಗಳಿಗೆ ಸಂಬಂಧಿಸಿದ ವಿವರಗಳು ಇಲ್ಲಿದ್ದರೂ ಕೇವಲ ಕಲೆಗೆ ಸಂಬಂಧಿಸಿದ ಸಂಗತಿಗಳನ್ನು ಮಾತ್ರ ಇಲ್ಲಿ ಗಮನಿಸಲಾಗಿದೆ. ಸಾಹಿತ್ಯ ವಲಯದಲ್ಲಿ ಪ್ರವಾಸ ಸಾಹಿತ್ಯದಲ್ಲಿ ಗಮನಾರ್ಹ ಕೃತಿಯಾದ ಈ ಪುಸ್ತಕ ಕಲಾಸಾಹಿತ್ಯದಲ್ಲೂ ಗಮನಾರ್ಹವಾಗಿದೆ ಎಂಬುದು ಇಲ್ಲಿನ ಕಲಾ ವಿಚಾರಗಳಿಂದ ತಿಳಿದುಬರುತ್ತದೆ. ರಶಿಯಾ ದೇಶದ ಕಲೆಯನ್ನು ಸ್ಥೂಲವಾಗಿ ಇದು ತಿಳಿಸುತ್ತದೆ.

**ಅಪೂರ್ವ ಪಶ್ಚಿಮ :**

ಪ್ರವಾಸ ಸಾಹಿತ್ಯದಲ್ಲಿ ಶಿವರಾಮ ಕಾರಂತರ ಸಾಹಿತ್ಯಕ್ಕೆ ವಿಶೇಷ ಸ್ಥಾನವಿದೆ. ಇತರ ವಿಷಯಗಳೊಂದಿಗೆ ಆಯಾ ಪ್ರದೇಶಗಳ ಕಲಾವಿಚಾರಗಳನ್ನು ಪರಿಣಾಮಕಾರಿಯಾಗಿ ಬಿಂಬಿಸುವಲ್ಲಿ ಇವರು ಹೆಚ್ಚಿನ ಕಾಳಜಿವಹಿಸುತ್ತಾರೆ. ಇತರ ಸಾಹಿತಿಗಳು, ಬರಹಗಾರರು, ಸಾಂದರ್ಭಿಕವಾಗಿ, ಸಹಜವಾಗಿ ಎಂಬಂತೆ ಅಲ್ಲಿನ ಕಲಾವಿಚಾರಗಳನ್ನು ಹೇಳಿದರೆ ಇವರು ಕಲೆ ಬಗ್ಗೆ ಪ್ರತ್ಯೇಕ ವಿವರಗಳನ್ನು ನೀಡುತ್ತಾರೆ. ಹಾಗಾಗಿ ಕಾರಂತರ ಬರಹಗಳಲ್ಲಿ ಕಲೆಯ ಒಳನೋಟಗಳು ಅಡಕವಾಗಿರುತ್ತವೆ.

ಶಿವರಾಮ ಕಾರಂತರ ಯುರೋಪ ಪ್ರವಾಸ ಕುರಿತಾಗಿರುವ ಪ್ರಸ್ತುತ 'ಅಪೂರ್ವ ಪಶ್ಚಿಮ' ಕೃತಿಯು ಪಶ್ಚಿಮ ದೇಶಗಳ ಕಲಾವಿಚಾರಗಳನ್ನು ಬಿಂಬಿಸುತ್ತದೆ.[೪೮] ಇಂಗ್ಲೆಂಡ, ನಾರ್ವೆ, ಸ್ವೀಡನ್, ಹಾಲೆಂಡ್, ಪ್ಯಾರಿಸ್, ರೋಮ್ ಹೀಗೆ ವಿವಿಧ ದೇಶಗಳ ಕಲೆಗಳು ಇಲ್ಲಿ ಹೇಳಲ್ಪಟ್ಟಿವೆ.

---

೪೮. ಶಿವರಾಮ ಕಾರಂತ : ಅಪೂರ್ವ ಪಶ್ಚಿಮ : ರಾಜಲಕ್ಷ್ಮೀ ಪ್ರಕಾಶನ, ಬಳೆಪೇಟೆ,ಬೆಂಗಳೂರು-೧೯೯೭

ಈ ಸಾಹಿತ್ಯ ಕೃತಿಯಲ್ಲಿ ಒಟ್ಟು ೨೩ ಅಧ್ಯಾಯಗಳಲ್ಲಿ ವಿಷಯ ನಿರೂಪಣೆಗೊಂಡಿದೆ. ಆಯಾ ಸ್ಥಳವನ್ನು ಸಂದರ್ಶಿಸಿದಾಗ ಕಂಡುಬರುವ ವಿಚಾರಗಳೊಂದಿಗೆ ಅಲ್ಲಿನ ಕಲಾವಿಚಾರಗಳನ್ನು ಸಾಂದರ್ಭಿಕವಾಗಿ ಸಂಕ್ಷಿಪ್ತವಾಗಿ ಹೇಳಿ ನಂತರ ಕೆಲವು ಮುಖ್ಯ ಕಲಾ ಸಂಗತಿಗಳನ್ನು ಪ್ರತ್ಯೇಕ ಅಧ್ಯಾಯಗಳಲ್ಲಿ ವಿವೇಚಿಸಿದ್ದಾರೆ. ಇಲ್ಲಿ ಹೇಳಲಾದ ಕಲಾವಿಚಾರಗಳಲ್ಲಿ ಚಿತ್ರ, ಶಿಲ್ಪ, ವಾಸ್ತುಶಿಲ್ಪ ಮತ್ತು ಕಲಾವಿದರು, ಕಲಾ ಸಾಹಿತ್ಯ ಹೀಗೆ ಹಲವಾರು ಸಂಗತಿಗಳು ಸೇರಿವೆ. ಅವುಗಳ ಸ್ಥೂಲ ವಿವರಗಳನ್ನು ಕೊಡಲಾಗಿದೆ. ಇಂಗ್ಲೆಂಡಿನ 'ಚೆದ್ದರ್‌ಗಾರ್ಜ' ಎಂಬ ಶಿಲಾಗುಹೆಗಳು ಸ್ವಾಭಾವಿಕವಾಗಿ ನಿರ್ಮಿತವಾದ ರಚನೆಗಳು. ಇಲ್ಲಿ ಪ್ರಾಗಿತಿಹಾಸ ಕಾಲದ ಚಿತ್ರಗಳಿವೆಯಲ್ಲದೆ ಅವುಗಳ ಹೊರಭಾಗದಲ್ಲಿ ಆಧುನಿಕ ವರ್ಣಲೇಪನದಿಂದ ಅಲಂಕರಿಸಲಾಗಿದೆ. ಇಂಗ್ಲೆಂಡಿನ ಕೆಲವು ಪ್ರಾಚೀನ ಚರ್ಚುಗಳು ಅಲ್ಲಿನ ಪುರಾತನ ವಾಸ್ತುಶೈಲಿಯನ್ನು ಪ್ರತಿಬಿಂಬಿಸುವುದರ ಜೊತೆಗೆ ಹಳೆಕಾಲದ ವರ್ಣಭಿತ್ತಿ ಚಿತ್ರಗಳನ್ನು ಹೊಂದಿದ ಮೋಹಕ ತಾಣಗಳಾಗಿವೆ. ಈ ಪ್ರಾಚೀನ ಕಲಾತ್ಮಕ ಚರ್ಚುಗಳಲ್ಲಿ ವೆಸ್ಟಮಿನಿಸ್ಟರ್, ಎಬ್ಬಿ, ಸೇಂಟ್‌ಪಾಲ್ ಕೆಥೆಡ್ರಿಲ್ ಮುಖ್ಯವಾಗಿವೆ. ಗೋಥಿಕ್ ಶೈಲಿಯಲ್ಲಿ ರಚನೆಯಾಗಿರುವ ಈ ಚರ್ಚುಗಳ ಒಳಭಾಗದಲ್ಲಿ ಕ್ರೈಸ್ತಧರ್ಮಕ್ಕೆ ಸಂಬಂಧಿಸಿದ ವರ್ಣ ಭಿತ್ತಿಚಿತ್ರಗಳಿವೆ.

ಲಂಡನ್‌ದ ಪ್ರಾಚೀನ ಮತ್ತು ಚರಿತ್ರಾರ್ಹ ವಾಸ್ತು ರಚನೆಗಳಲ್ಲಿ 'ಪಾರ್ಲಿಮೆಂಟ್ ಮಂದಿರ' ಮುಖ್ಯವಾಗಿದೆ. ಇಲ್ಲಿನ ಕೆಲವು ಗೋಡೆಗಳು ಚಿತ್ರಗಳಿಂದ ಅಲಂಕರಿಸಿದ್ದರೆ, ಅಲ್ಲಲ್ಲಿ ಶಿಲೆ, ಮರ, ಲೋಹ ಶಿಲ್ಪಗಳನ್ನು ನಿಲ್ಲಿಸಲಾಗಿದೆ. ಇಂಗ್ಲೆಂಡಿನ ಮತ್ತೊಂದು ಪ್ರಮುಖ ಪ್ರವಾಸಿತಾಣ 'ಮೇಡಮ್ ಟ್ಯೂಸೆಡ್'ಳ ಮೇಣದಮೂರ್ತಿಗಳ ಸಂಗ್ರಹ. ಈ ಮಹಿಳೆ ಫ್ರೆಂಚ್ ದೇಶದವಳು. ಇಲ್ಲಿ ಜಗತ್ತಿನ ಮಹಾಪುರುಷರ ವಿಗ್ರಹಗಳನ್ನು ಮೇಣದಲ್ಲಿ ಮಾಡಲಾಗಿದೆ. ಮೇರಿ ಎಂಟೋನಿ, ಲೂಯಿ, ನೆಪೋಲಿಯನ್, ಎಡ್ವರ್ಡ, ಎಲಿಜಬೆತ್, ಗ್ಲಾಡ್‌ಸ್ಟೋನ್, ಡಿಸ್ರೇಲಿ, ಕ್ರಾಮ್‌ವೆಲ್, ಈಡನ್, ಮಾರಿಸನ್, ಎಟ್ಲಿ. ಲಿಂಕನ್, ವಿಲ್ಸನ್, ರೂಸ್‌ವೆಲ್ಟ, ಗಾಂಧೀಜಿ, ಜಿನ್ನಾ, ನೆಹರೂ, ಶೆಕ್ಸಪೀಯರ್, ಖ್ಯಾತ ಕ್ರಿಕೆಟಿಗರು ಹೀಗೆ ಪ್ರಪಂಚದ ಹಲವಾರು ವ್ಯಕ್ತಿ ಮತ್ತು ಘಟನೆಗಳನ್ನು ಬಿಂಬಿಸುವ ಮೇಣದಮೂರ್ತಿಗಳು ಇಲ್ಲಿವೆ. ಚಿತ್ರಕಲಾ ದೃಷ್ಟಿಯಿಂದ ಇಂಗ್ಲೆಂಡಿನ 'ನ್ಯಾಷನಲ್ ಗ್ಯಾಲರಿ' (ರಾಷ್ಟ್ರೀಯ ಸಂಗ್ರಹಾಲಯ) ಮುಖ್ಯವಾಗಿದೆ. ಇಲ್ಲಿ ಹೆಚ್ಚಾಗಿ ಯುರೋಪಿನ ಮಧ್ಯಯುಗದ ಚಿತ್ರಕಾರರ ಕೃತಿಗಳಿವೆ. ಕ್ರಿ.ಶ. ೧೪ನೇ ಶತಮಾನದ ವೆನಿಸ್ ಚಿತ್ರಕಾರ 'ಪಾವ್ಲುವೆರೋ'ವಿನ ವೆನಿಸ್ ಕಾಲುವೆ, ಬಾನು, ನೆಲ, ಜಲ, ಚಿತ್ರಗಳಿವೆ. ಅದರಂತೆ 'ಕೆನಲಿಟೊ' ಅವನ ಹಲವಾರು ಕೃತಿಗಳಿವೆ. ಹಾಲಂಡ್, ಡಚ್ ದೇಶದ ಚಿತ್ರಕಾರರ ಚಿತ್ರಗಳು ಇಲ್ಲಿ ಪ್ರತ್ಯೇಕ ಕೋಣೆಗಳಲ್ಲಿವೆ. ರೆಂಬ್ರಾಂಟನ ಕೆಲವು ಶ್ರೇಷ್ಠ ಕೃತಿಗಳು ಇಲ್ಲಿವೆ. ಮುರಿಲ್ಲೋ, ವೆಲಾಸ್ಕತ್ ಚಿತ್ರಗಳು, ಜಾನ್‌ವಾನ್ ಐಕ್ ಮತ್ತು ರೂಬೆನ್ಸ್ ಇವರ ಚಿತ್ರಗಳನ್ನು ಇಲ್ಲಿ ಕಾದಿರಿಸಿದೆ. ಅದರಂತೆ ಮೋನೆಟ್, ಮಾನೆಟ್, ಶಿನಾವಿ, ಸೇಜಾನ್‌ಪಾಲ್, ಹೊಗಾರ್ಟ, ವಿಸ್ಲರ್, ಗೈನ್ಸ ಬರೋ, ರೇನಾಲ್ಡ್, ಟರ್ನರ್, ಕಾನಸ್ಟೇಬಲ್ ಮುಂತಾದವರ ಚಿತ್ರಕಲಾ ಕೃತಿಗಳು ಈ ಸಂಗ್ರಹಾಲಯದಲ್ಲಿವೆ.

ಶಿಲ್ಪ ವಿಭಾಗದಲ್ಲಿ ಫ್ರೆಂಚ್ ಶಿಲ್ಪಿ ರೋಡಿನ್ ಮತ್ತು ಇಂಗ್ಲೆಂಡಿನ ಎಪ್ಸಿಟನ್ ಇವರ ಹಲವಾರು ಕೃತಿಗಳಿವೆ. ಇಂಗ್ಲೆಂಡಿನ ಮತ್ತೊಂದು ಹೆಸರಾಂತ ಕಲಾಗ್ಯಾಲರಿ 'ಸರ್ ಹೆನ್ರಿ ವಾಲೇಸ್ ಮ್ಯೂಜಿಯಂ' ಇಲ್ಲಿಯೂ ಅನೇಕ ಯುರೋಪಿಯನ್ ಚಿತ್ರಕಾರರ ಸಂಗ್ರಹವಿದೆ. ಇವುಗಳಲ್ಲದೆ ಲಂಡನ್‌ನಲ್ಲಿ ಹತ್ತಾರು ನಾಟಕ ಮಂದಿರಗಳಿವೆ. ಇಲ್ಲಿ ನಿತ್ಯವೂ ನಾಟಕ ಪ್ರದರ್ಶನಗಳು ನಡೆಯುತ್ತಿದ್ದು ಈ

ನಾಟಕ ಶಾಲೆಗಳು ಸಹಿತ ಚಿತ್ರ ಶಿಲ್ಪಗಳಿಂದ ಅಲಂಕಾರಗೊಂಡಿವೆ. ಬ್ರಿಟಿಷ್ ಮ್ಯೂಜಿಯಂ ಪಾಶ್ಚಾತ್ಯ ಮ್ಯೂಜಿಯಂಗಳಲ್ಲಿ ಪ್ರಮುಖವಾಗಿದೆ. ಸಾವಿರಾರು ಕೊಠಡಿಗಳನ್ನು ಹೊಂದಿದ ಬೃಹತ್ ಅರಮನೆಯಂತಿರುವ ಈ ಮ್ಯೂಜಿಯಂದಲ್ಲಿ ಪ್ರಾಚೀನ ಕಲೆ, ಸಂಸ್ಕೃತಿಗಳಿಗೆ ಸಂಬಂಧಿಸಿದ ಬಹುದೊಡ್ಡ ಸಂಗ್ರಹವೇ ಇದೆ. ಲಂಡನ್ ನಗರದ ಕೇಂದ್ರ ಭಾಗದಲ್ಲಿರುವ ಈ ಬ್ರಿಟಿಷ್ ಮ್ಯೂಜಿಯಂ ವೇಗವಾಗಿ ನೋಡಲಿಕ್ಕಾಗಿಯೇ ಎಂಟುದಿನಗಳಾದರೂ ಬೇಕು. ಶಿಲ್ಪವಿಭಾಗ, ಚಿತ್ರ ವಿಭಾಗ, ಜನಪದ ವಿಭಾಗ, ಹೀಗೆ ವಿವಿಧ ಭಾಗಗಳು ಇಲ್ಲಿ ಪ್ರತ್ಯೇಕವಾಗಿವೆ. ಗ್ರೀಕ್ ಶಿಲ್ಪವಿಭಾಗದಲ್ಲಿ ಗ್ರೀಕ್ ದೇವತೆ ವೀನಸ್, ಪ್ಲೇಟೋ, ಅರಿಸ್ಟಾಟಲ್ ಶಿಲ್ಪಗಳಲ್ಲದೆ ಗ್ರೀಸ್‌ನ ಪ್ರಸಿದ್ಧ ದೇವಾಲಯ ಪಾರ್ಥೆನಾನದ ಅಲಂಕಾರಕ್ಕಾಗಿ ಬಳಸಿದ ಶಿಲ್ಪಕೃತಿಗಳನ್ನು ಇಲ್ಲಿ ತಂದರಿಸಿದ್ದಾರೆ. ಅದರಂತೆ ಪರ್ಶಿಯನ್ ಪ್ರಾಚೀನ ಶಿಲ್ಪಗಳ ವಿಭಾಗ, ಪ್ರಾಚೀನ ಈಜಿಪ್ತ ಶಿಲ್ಪವಿಭಾಗ, ರೋಮನ್ ಶಿಲ್ಪವಿಭಾಗಗಳಲ್ಲದೆ ಜಪಾನ್ ಮತ್ತು ಭಾರತೀಯ ಪ್ರಾಚೀನ ಶಿಲ್ಪಗಳೂ ಇಲ್ಲಿ ಸಂಗ್ರಹಗೊಂಡಿವೆ.

ಪ್ರಾಚೀನ ಆದಿವಾಸಿ ವಿಭಾಗದಲ್ಲಿ ಮಾರ್ಶೆಲ್ ದ್ವೀಪ ವಾಸಿಗಳು, ಸೋಮೊವಾದವರು, ಭಾರತದ ಹಲವಾರು ಆದಿವಾಸಿಗಳ ಬಗೆಗಿನ ವಸ್ತುಗಳು, ಶಿಲ್ಪಚಿತ್ರಗಳು ಇಲ್ಲಿವೆ. ಅಲ್ಲದೆ ಭಾರತದ ಐತಿಹಾಸಿಕ ಕಾಲದ ಶಿಲ್ಪಚಿತ್ರಗಳೂ ಈ ಮ್ಯೂಜಿಯಂದಲ್ಲಿವೆ. ಮೌರ್ಯರು, ಶಾತವಾಹನರು, ಕುಶಾನರು, ಮೊಗಲರು, ಗುಪ್ತರು, ವಿಜಯನಗರ, ಬಹಮನಿಗಳು, ಮೈಸೂರು ಅರಸರು, ಸುರಪುರ ಸಂಸ್ಥಾನಿಕರು, ಬಿಜಾಪೂರದ ಆದಿಲ್‌ಶಾಹಿಗಳು ಹೀಗೆ ಅನೇಕ ಅರಸು ಮನೆತನಗಳ ಕಾಲದ ವಿವಿಧ ಬಗೆಯ ಕಲಾವಸ್ತುಗಳು ಈ ಮ್ಯೂಜಿಯಂನಲ್ಲಿ ಸಂಗ್ರಹಗೊಂಡಿವೆ.

ನಾರ್ವೆ ದೇಶದ ಓಸ್ಲೋ ನಗರದಲ್ಲಿರುವ 'ವೀಗಲೆಂಡ್ ಪಾರ್ಕ' ಒಂದು ಕಲಾತ್ಮಕವಾದ ಸುಂದರ ಸ್ಥಳವಾಗಿದೆ. ಇಲ್ಲಿ ಆ ದೇಶದ ಖ್ಯಾತ ಶಿಲ್ಪಿಯಾಗಿದ್ದ ವೀಗ್‌ಲೆಂಡ್ ಗಸ್ಟಾವ್ ಎಂಬುವನ ಸವಿನೆನಪಿಗಾಗಿ ಈ ಪಾರ್ಕ್ ಸ್ಥಾಪನೆ ಮಾಡಲಾಗಿದೆ. ಈ ಪಾರ್ಕ್‌ನಲ್ಲಿ ವೀಗ್‌ಲೆಂಡ್ ನಿರ್ಮಿಸಿದ ಸುಮಾರು ಐದುನೂರಕ್ಕೂ ಹೆಚ್ಚು ಶಿಲ್ಪಗಳನ್ನು ಪ್ರದರ್ಶಿಸಲಾಗಿದೆ. ಈ ಶಿಲ್ಪ ಸಂಗ್ರಹದಲ್ಲಿ ವಿವಿಧ ಬಗೆಯ ಶಿಲ್ಪಗಳಿವೆ. ಚಿಕ್ಕವರು, ದೊಡ್ಡವರು, ಮುದುಕರು, ಮಧ್ಯಮಯಸ್ಕರು, ಬಾಲಕರು, ಬಾಲಕಿಯರು, ಒಂಟಿವ್ಯಕ್ತಿ, ಗುಂಪು ಶಿಲ್ಪಗಳು ಹೀಗೆ ವೈವಿಧ್ಯ ಸಂಯೋಜನೆಯಲ್ಲಿ ಶಿಲ್ಪ ನಿರ್ಮಿಸಲಾಗಿದೆ. ಇವುಗಳನ್ನು ಶಿಲೆ, ಮರ ಮತ್ತು ಲೋಹಗಳಿಂದ ರಚಿಸಲಾಗಿದೆ.

ಓಸ್ಲೋ ನಗರದ ಮತ್ತೊಂದು ಪ್ರವಾಸಿ ಆಕರ್ಷಣೆಯ ಸ್ಥಳವೆಂದರೆ ಅಲ್ಲಿನ 'ಜನಪದ ಮ್ಯೂಜಿಯಂ' ಈ ದೊಡ್ಡದಾದ ಮ್ಯೂಜಿಯಂನಲ್ಲಿ ಪ್ರಮುಖವಾಗಿ ಎರಡು ಭಾಗ ಮಾಡಲಾಗಿದೆ. ಒಂದು ಬಹಿರಂಗ ಪ್ರದರ್ಶನ ಮತ್ತು ಇನ್ನೊಂದು ಆಂತರಿಕ ಪ್ರದರ್ಶನ. ಬಹಿರಂಗ ಪ್ರದರ್ಶನದಲ್ಲಿ ನಾರ್ವೆ ದೇಶದಲ್ಲಿ ಹಿಂದಿನ ಶತಮಾನಗಳಲ್ಲಿ ರೂಢಿಯಲ್ಲಿದ್ದ ಮನೆ, ಮಠ, ಅರಮನೆ, ಗುಡಿಸಲು, ಮುಂತಾದ ವಾಸದನೆಲೆಗಳನ್ನು ಅವುಗಳೊಳಗಿನ ಸಾಧನ ಸಲಕರಣೆಗಳೊಂದಿಗೆ ಹಾಗೆಯೇ ತಂದುನೆಟ್ಟಿದ್ದಾರೆ. ಬೃಹತ್ ಯಂತ್ರಗಳ ಆಧುನಿಕ ತಂತ್ರಜ್ಞಾನದಿಂದ ಇಡೀ ಮನೆಗಳನ್ನೇ ತಳದಿಂದ ಎತ್ತಿಕೊಂಡು ಬಂದು ಇಲ್ಲಿ ಸ್ಥಾಪಿಸಿರುವುದು ಸೋಜಿಗವನ್ನುಂಟು ಮಾಡುತ್ತದೆ. ಇವುಗಳಲ್ಲಿ ಕೆಲವು ಮನೆ ಮತ್ತು ಚರ್ಚಿನ ಕಟ್ಟಡಗಳ ಗೋಡೆಗಳು ಪ್ರಾಚೀನ ಕಾಲದ ಭಿತ್ತಿಚಿತ್ರಗಳಿಂದ ಅಲಂಕೃತಗೊಂಡಿವೆ. ಎರಡನೆಯದಾದ ಆಂತರಿಕ ಪ್ರದರ್ಶನದಲ್ಲಿ ಕಟ್ಟಡದ ಒಳಭಾಗದಲ್ಲಿ ಆ ದೇಶದ ಜನಪದಕ್ಕೆ ಸಂಬಂಧಿಸಿದ ವಸ್ತುಗಳು, ಚಿತ್ರಶಿಲ್ಪಗಳನ್ನು ಪ್ರದರ್ಶಿಸಲಾಗಿದೆ.

ಸ್ವೀಡನ್ ದೇಶದಲ್ಲಿ ಪ್ರತಿನಗರದ ಪುರಭವನಗಳನ್ನು ವಿಶೇಷ ರೀತಿಯಲ್ಲಿ ಕಲಾತ್ಮಕವಾಗಿ ಕಟ್ಟಲಾಗಿದೆ. ಇವುಗಳಲ್ಲಿ ಪಿಂಗಾಣಿ ಕಲ್ಲಿನಿಂದ ಮೋಸಾಯಿಕ್ ಶಿಲೆಗಳಿಂದ ಅಲಂಕರಿಸಲಾಗಿದೆಯೆಲ್ಲದೆ ಕೆಲವು ಪುರಭವನಗಳಲ್ಲಿ ವರ್ಣಭಿತ್ತಿಚಿತ್ರಗಳನ್ನು ರಚಿಸಲಾಗಿದೆ. ಸ್ಟಾಕ್‌ಹೋಮ್ ನಗರದಲ್ಲಿರುವ 'ರಾಷ್ಟ್ರೀಯ ಮ್ಯೂಜಿಯಂ' ಶಿಲ್ಪಚಿತ್ರಗಳ ಬಹುದೊಡ್ಡ ಸಂಗ್ರಹ ಹೊಂದಿದೆ. ಇಲ್ಲಿನ ಚಿತ್ರಗಳಲ್ಲಿ ಯುರೋಪಿನ ಅನೇಕ ಖ್ಯಾತ ಚಿತ್ರಕಾರರ ಕೃತಿಗಳಲ್ಲದೆ ಸ್ವೀಡನ್ ದೇಶದ ಸ್ಥಳೀಯ ಕಲಾವಿದರ ಕೃತಿಗಳನ್ನು ಪ್ರದರ್ಶಿಸಲಾಗಿದೆ. ರೆಂಬ್ರಾಂಟ್‌ನ ಚಿತ್ರಗಳು ಇಲ್ಲಿ ಮುಖ್ಯವಾಗಿವೆ. ಎಂಡರ್ಸನ್ ಜಾನ್ಸ್, ಜಾಕೋಬ ಜೋರ್ಡನ್, ಜ್ಯೂಡಿಲ್ ಲಿಸ್ಟರ್, ಜೋರ್‌ಸ್ಟ್ರಿಗ್‌ಬರ್ಗ ಮುಂತಾದವರ ಕೃತಿಗಳು ಇಲ್ಲಿವೆ.

ಡೆನ್‌ಮಾರ್ಕ ದೇಶದ ರಾಜಧಾನಿ ಕೋಪನ್ ಹೆಗನ್‌ದಲ್ಲಿರುವ ಗ್ಲಿಪೊಟಕ್ ಎಂಬ ಮ್ಯೂಜಿಯಂ ಆ ನಗರದಲ್ಲಿ ಪ್ರಸಿದ್ಧ ಮ್ಯೂಜಿಯಂ. ಇದನ್ನು ಕಾರ್ಲ್ಸ್‌ಬರ್ಗ್ ಎಂಬ ಸರಾಯಿ ತಯಾರಕನು ತನ್ನ ಕಾರ್ಖಾನೆಯಿಂದ ಬಂದ ಲಾಭದಿಂದ ಕಟ್ಟಿಸಿದ್ದಾನೆ. ಇದು ಎರಡು ಅಂತಸ್ತುಗಳುಳ್ಳ ಭವ್ಯಕಟ್ಟಡ. ಮೇಲ್ಭಾಗದಲ್ಲಿ ಚಿತ್ರವಿಭಾಗವಿದ್ದರೆ, ಕೆಳಭಾಗದಲ್ಲಿ ಶಿಲ್ಪವಿಭಾಗವಿದೆ. ಶಿಲ್ಪವಿಭಾಗದಲ್ಲಿ ಮಾನವಗಾತ್ರದ ಶಿಲ್ಪಗಳನ್ನು ರಚಿಸಲಾಗಿದ್ದು, ಇವುಗಳೆಲ್ಲ ಶಿಲೆ, ಲೋಹ, ಮರ, ಹಾಗೂ ಮಣ್ಣಿನಿಂದ ರಚನೆಯಾಗಿವೆ. ಇವುಗಳಲ್ಲಿ ಖ್ಯಾತ ಶಿಲ್ಪಿ ರೋಡಿನ್‌ನ ಕೃತಿಗಳು ಸೇರಿವೆ. ಕೆಲವು ಹಾಲುಗಲ್ಲಿನ ಶಿಲ್ಪಗಳು ಇವೆ. ಈ ಸಂಗ್ರಹಾಲಯದ ಮೇಲ್ಭಾಗದ ಚಿತ್ರವಿಭಾಗದಲ್ಲಿ ಹೆಚ್ಚಿನ ಚಿತ್ರಗಳಿಲ್ಲದೆ ಕೆಲವೇ ಆಯ್ದ ಪ್ರಸಿದ್ಧ ಕಲಾವಿದರ ಚಿತ್ರಗಳಿವೆ. ಸಿ. ಜಾನ್‌ಪಾಲ್, ಪಾಲ್‌ಗಾಗಿನ್, ಹೆನ್ರಿ ಮಾಟಸ್ ಮತ್ತು ವ್ಯಾನ್‌ಗಾಗ್ ಇವರ ಕೃತಿಗಳು ಮುಖ್ಯವಾಗಿವೆ. ಕೋಪನ್ ಹೇಗನ್ ನಗರದ ಆಕರ್ಷಣೆಗಳಲ್ಲಿ ಅಲ್ಲಿನ ಮಾನವಕುಲ ವಿಜ್ಞಾನದ ಮ್ಯೂಜಿಯಂ ಪ್ರಮುಖವಾಗಿದೆ. ವಿಷಯ ಸಂಗ್ರಹದ ದೃಷ್ಟಿಯಲ್ಲಿ ಬ್ರಿಟೀಷ್ ಮ್ಯೂಜಿಯಂನ್ನು ಮೀರಿಸುವ ಈ ಸಂಗ್ರಹಾಲಯವು ಎರಡುನೂರಕ್ಕಿಂತ ಹೆಚ್ಚಿನ ಕೊಠಡಿಗಳನ್ನು ಹೊಂದಿದೆ. ಈ ಮಾನವಕುಲ ವಿಜ್ಞಾನದ ಮ್ಯೂಜಿಯಂನಲ್ಲಿ ಅದರ ಹೆಸರಿಗೆ ತಕ್ಕಂತೆ ಮಾನವ ಕುಲ ಹೇಗೆ ಬೆಳೆದುಬಂತು ಎಂಬುದರ ಬಗ್ಗೆ ಚಿತ್ರಶಿಲ್ಪಗಳ ಮಾದರಿಗಳನ್ನಲ್ಲದೆ ಆಯಾ ಸಂಸ್ಕೃತಿಯಲ್ಲಿ ಲಭ್ಯವಾದ ವಸ್ತುಗಳನ್ನು ತಂದು ಇರಿಸಿದ್ದಾರೆ. ಇಲ್ಲಿ ತಮ್ಮ ಡೆನ್ಮಾರ್ಕ ದೇಶದ ಪ್ರಾಚೀನ ಸಂಸ್ಕೃತಿಯಲ್ಲದೆ ಜಗತ್ತಿನ ಪ್ರಮುಖ ನಾಗರಿಕತೆಯನ್ನು ಬಿಂಬಿಸಲಾಗಿದೆ. ಎಸ್ಕಿಮೋ ಸಂಸ್ಕೃತಿ, ಗ್ರೀಕ್ ಸಂಸ್ಕೃತಿ, ಈಜಿಪ್ತ ನೈಲ್ ನದಿ ಸಂಸ್ಕೃತಿ, ಮೆಸೊಪೆಟೋಮಿಯಾ, ಬೆಬಿಲೋನಿಯನ್, ಚೀನಾ, ಜಪಾನ ಸಂಸ್ಕೃತಿಗಳಲ್ಲದೆ ಭಾರತದ ಸಿಂಧೂ ಸಂಸ್ಕೃತಿಯೂ ಇಲ್ಲಿದೆ. ಹೀಗೆ ಜಗತ್ತಿನ ಪ್ರಾಚೀನ ಸಂಸ್ಕೃತಿಗಳನ್ನು ಇಲ್ಲಿ ಚಿತ್ರಶಿಲ್ಪಗಳ ಮೂಲಕ ಕಟ್ಟಿಕೊಡಲಾಗಿದೆ. ಭಾರತದ ದ್ರಾವಿಡ ಶೈಲಿಯ ಶಿಲ್ಪಗಳು ಮೊಗಲಕಾಲದ ಚಿತ್ರಗಳು, ಗಾಂಧಾರಾ ಶಿಲ್ಪಗಳು, ಗುಪ್ತರ ಕಾಲದ ವಿಗ್ರಹಗಳು ಹೀಗೆ ವಿವಿಧ ವಸ್ತುಗಳು ಇಲ್ಲಿವೆ. ಪ್ರಪಂಚದ ಪ್ರಮುಖ ಮ್ಯೂಜಿಯಂನಲ್ಲಿ ಇದೂ ಒಂದಾಗಿದೆ. ಜರ್ಮನ್ ದೇಶದ 'ಹ್ಯಾಮ್‌ಬರ್ಗ್ ಆರ್ಟ ಮ್ಯೂಜಿಯಂ' ಆಕರ್ಷಕವಾದ ಸಂಗ್ರಹಾಲಯ. ಇಲ್ಲಿ ಜರ್ಮನರ ಪ್ರಾಚೀನ ಮತ್ತು ಆಧುನಿಕ ಚಿತ್ರಕಲಾವಿದರ ಪ್ರತ್ಯೇಕವಿಭಾಗಗಳಿವೆ. ಆಧುನಿಕ ಕೃತಿಗಳಲ್ಲಿ ಸ್ವಲ್ಪಮಟ್ಟಿನ ಫ್ರೆಂಚ್ ಪ್ರಭಾವ ಕಂಡುಬರುತ್ತದೆ. ಈ ಸಂಗ್ರಹಾಲಯದಲ್ಲಿ ಮುಖ್ಯವಾಗಿ ಆಲ್ಬರ್ಟ್‌ಡ್ಯೂರರ್, ಫ್ರಾಂಕೆ ಇವರ ಚಿತ್ರಗಳು ಹೆಚ್ಚಿನ ಸಂಖ್ಯೆಯಲ್ಲಿವೆ.ಹಾಲಂಡ್ ದೇಶದ ಲೈಡನ್ ಹಳ್ಳಿಯಲ್ಲಿ ವ್ಯಾಪಾರಿ ಸಂಘದವರು ಒಂದು ಚಿತ್ರಕಲಾ ಪ್ರದರ್ಶನ ಗ್ಯಾಲರಿಯನ್ನು ಸ್ಥಾಪಿಸಿ, ಅಲ್ಲಿ ಇತರ ಪ್ರಸಿದ್ಧ ಕಲಾಕೃತಿಗಳೊಂದಿಗೆ ಆ ದೇಶದ ಲೂಕಾಸನ್ ಕಲಾಕೃತಿಗಳನ್ನು ಮುಖ್ಯವಾಗಿ ಸಂಗ್ರಹಿಸಿದ್ದಾರೆ.

ಲೂಕಾಸ್ ರಚಿಸಿದ ಕ್ರಿಸ್ತನ ಜನನ, ಪೌರಾಣಿಕ ಚಿತ್ರಗಳು ಇಲ್ಲಿವೆ. ಇದೆ ಊರಿನ ರಿಕ್ಸ್ ಮ್ಯೂಜಿಯಂನಲ್ಲಿ ಭಾರತದೇಶದ ಸಂಸ್ಕೃತಿಗೆ ಸಂಬಂಧಿಸಿದ ಶಿಲ್ಪಚಿತ್ರಗಳ ದೊಡ್ಡ ಸಂಗ್ರಹವಿದೆ. ಬೌದ್ಧಜಾತಕ, ಹಿಂದೂ ಪುರಾಣಗಳಿಗೆ ಸಂಬಂಧಿಸಿದ ದೇವತೆಗಳ ಅನೇಕ ಪ್ರತಿಮೆಗಳಿವೆ. ವೀರಭದ್ರ, ಗಣೇಶ, ಬ್ರಹ್ಮ, ದುರ್ಗಾ, ಮಹಾಕಾಳಿ, ಭೈರವೇಶ್ವರ, ವಿಷ್ಣು, ಗರುಡ, ಆಂಜನೇಯ, ಭೀಮ, ರಾವಣ ಹೀಗೆ ವಿವಿಧ ಶಿಲ್ಪಗಳಿವೆ. ಕೆಲವು ಶಿಲೆಯಿಂದ ನಿರ್ಮಿಸಿದ್ದಾರೆ ಇನ್ನು ಕೆಲವು ಮರದಿಂದ ನಿರ್ಮಿಸಿದ್ದಾರೆ. ಮರದ ಶಿಲ್ಪಗಳಿಗೆ ವರ್ಣಲೇಪನ ಮಾಡಲಾಗಿದೆ. ಈ ರಿಕ್ಸ್ ಮ್ಯೂಜಿಯಂನಲ್ಲಿ ಭಾರತ ಮಾತ್ರವಲ್ಲದೆ ಚೀನಾ, ಜಪಾನ, ಇಂಡೋನೇಶಿಯಾ, ಜಾವಾ, ಸುಮಾತ್ರಾ ಹೀಗೆ ಪ್ರಪಂಚದ ಅನೇಕ ದೇಶಗಳ ಸಂಸ್ಕೃತಿಗಳನ್ನು ಬಿಂಬಿಸುವ ಶಿಲ್ಪಚಿತ್ರಗಳ ಸಂಗ್ರಹಗಳಿವೆ. ಹಾಲೆಂಡಿನ ಹೇಗ್ ನಗರದಲ್ಲಿರುವ ಹೇಗ್ ಮ್ಯೂಜಿಯಂ ಪ್ರಸಿದ್ಧ ಚಿತ್ರಕಾರರ ಕೃತಿಗಳನ್ನು ಒಳಗೊಂಡ ಕಲಾಗ್ಯಾಲರಿಯಾಗಿದೆ. ರೆಂಬ್ರಾಂಟ್, ಜಾನ್‌ವರ್ಮಿರ್, ಪ್ರಾನ್ಸ್‌ಹಾಲ್ ಇವರ ಅನೇಕ ಮೂಲ ಕೃತಿಗಳಿವೆ. ಜುಡಿತ್‌ಲಿಸ್ಟರ್, ವಿನ್ಸೆಂಟ್ ವ್ಯಾನ್‌ಗಾಗ್ ಕೃತಿಗಳು ಇಲ್ಲಿವೆ. ಹೇಗ್ ನಗರದ ಮತ್ತೊಂದು ಕಲಾಗ್ಯಾಲರಿ 'ಮಾರ್ಟಿಸ್ ಮ್ಯೂಜಿಯಂ' ಇದು ಚಿಕ್ಕದಾದರೂ ಖ್ಯಾತನಾಮರ ಚಿತ್ರಗಳನ್ನು ಒಳಗೊಂಡಿದೆ. ರೆಂಬ್ರಾಂಟ್‌ನ ಸ್ಟಿಲ್‌ಲೈಫ್ ಚಿತ್ರಗಳ ವಿಶೇಷ ಸಂಗ್ರಹ ಇಲ್ಲಿದೆ. ಆತನ ಹಲವಾರು ಮೂಲ ಸ್ಟಿಲ್‌ಲೈಫ್ ಚಿತ್ರಗಳನ್ನು ಇಲ್ಲಿ ಸಂಗ್ರಹಿಸಿಡಲಾಗಿದೆ.

ಬೆಲ್ಜಿಯಂ ರಾಜಧಾನಿ ಬ್ರಸಲ್ಸ್ ನಗರವು ಚರ್ಚುಗಳಿಗೆ ಪ್ರಸಿದ್ಧವಾಗಿದೆ. ಇಲ್ಲಿನ ಹಲವಾರು ಚರ್ಚುಗಳಲ್ಲಿ ಸೆನ್‌ಮಿಶೆಲ್ ಚರ್ಚ್, ಸುಮೆ ಸಬಲಾನ್‌ಗಳು ಮುಖ್ಯವಾಗಿವೆ. ಈ ಚರ್ಚುಗಳ ಗೋಡೆಗಳು ವರ್ಣಭಿತ್ತಿಚಿತ್ರಗಳಿಂದ ಅಲಂಕರಿಸಿದ್ದರೂ ಅಂತಹ ಪ್ರಸಿದ್ಧರ ಕೃತಿಗಳು ಇಲ್ಲಿಲ್ಲ. ಬ್ರಸಲ್ ನಗರದಿಂದ ಸುಮಾರು ಮೂವತ್ತೈದು ಕಿ. ಮಿ. ದೂರದಲ್ಲಿರುವ ಗೆಮಟ್ ಎಂಬ ಊರಿನಲ್ಲಿ ಹಲವಾರು ಪ್ರಾಚೀನ ಚರ್ಚುಗಳಿವೆ. ಇವುಗಳಲ್ಲಿ ಸೇಂಟ್‌ಬಾಪ್ಸ್ ಎಂಬುದು ಎಲ್ಲಕ್ಕಿಂತ ಭವ್ಯವಾಗಿದೆ. ಇದು ಕ್ರಿ. ಶ. ಹದಿಮೂರನೆಯ ಶತಮಾನದಲ್ಲಿ ರಚನೆಯಾಗಿದ್ದು ವಿಶಾಲವಾದ ಜಾಗದಲ್ಲಿ ಸ್ಥಾಪಿಸಲ್ಪಟ್ಟಿದೆ.ಈ ಒಂದೇ ಚರ್ಚಿನ ಅಂಗಳದಲ್ಲಿ ಮತ್ತೆ ಹಲವಾರು ಚಿಕ್ಕಪುಟ್ಟ ಚರ್ಚುಗಳು ನಿರ್ಮಿಸಿವೆ. ಮುಖ್ಯ ಚರ್ಚಿನಲ್ಲಿ ಅನೇಕ ಶಿಲ್ಪ ಮತ್ತು ಚಿತ್ರಕಲಾಕೃತಿಗಳು ರಚನೆಯಾಗಿವೆ. ಇಲ್ಲಿನ ಭಿತ್ತಿಚಿತ್ರಗಳಲ್ಲಿ ಲೇಡನ್‌ನ ಖ್ಯಾತಕಲಾವಿದ ಲುಕಾಸ್ ಬರೆದ ಚಿತ್ರಗಳು, ಪೀಟರ್‌ಪಾಲ್ ರೂಬೆನ್ಸ್ ಜಾನ್‌ವಾನ್‌ಐಕ್ ಅವನ ಸಹೋದರ ಹರ್ಬರ್ಟ ವಾನ್‌ಐಕ್ ಅವರು ಬರೆದ ಕೃತಿಗಳಿವೆ.

ಬೆಲ್ಜಿಯಂ ದೇಶದ ಮತ್ತೊಂದು ಗಮನಾರ್ಹ ಸ್ಥಳವೆಂದರೆ ಮ್ಯುಸೆ-ಡಿ-ಆರ್ಟ ಎನ್ಸಿಯೆಂಟ್ ಎಂಬ ಕಲಾಗ್ಯಾಲರಿಯಾಗಿದೆ. ಇದು ಅನೇಕ ಪ್ರಸಿದ್ಧ ಚಿತ್ರಕಲಾವಿದರ ಕೃತಿಗಳನ್ನು ಹೊಂದಿದೆ. ಈ ದೇಶದ ಖ್ಯಾತ ಚಿತ್ರಕಾರ ಪೀಟರ್‌ಪಾಲ್ ರೂಬೆನ್ಸನ ಕೃತಿಗಳಿಗಾಗಿಯೇ ಒಂದು ಪ್ರತ್ಯೇಕ ವಿಭಾಗ ತೆರೆಯಲಾಗಿದೆ. ಈ ವಿಭಾಗದಲ್ಲಿ ಮೂರು ಕೊಠಡಿಗಳು ಆತನ ಚಿತ್ರಗಳಿಂದ ತುಂಬಿವೆ. ೩೦ ರಿಂದ ೪೦ ಅಡಿ ವಿಶಾಲವಾದ ಕ್ಯಾನವಾಸ್ ಚಿತ್ರಗಳನ್ನು ಆತ ಇಲ್ಲಿ ರಚಿಸಿದ್ದಾನೆ. ಮತ್ತೊಂದು ಭಾಗದಲ್ಲಿ ಜಾಕೋಲ್ ಜೋರ್ಡೆನ್ ಬರೆದ ಚಿತ್ರಗಳಿದ್ದರೆ, ಮತ್ತೊಂದರಲ್ಲಿ ಲಾಕಾಂಚ್ ಎಂಬುವನ ಚಿತ್ರಗಳಿವೆ. ಮತ್ತೊಂದು ಕೊಠಡಿ ರೆಂಬ್ರಾಂಟ್‌ನ ಕೃತಿಗಳಿಗಾಗಿ ಮೀಸಲಾಗಿದೆ. ಈ ಕಲಾಗ್ಯಾಲರಿ ಬ್ರಸಲ್ ನಗರದಲ್ಲಿದ್ದು, ಇಲ್ಲಿಯೇ 'ಪ್ಯಾಲೇಸ್ ಆಫ್ ಜಸ್ಟಿಸ್' ಎಂಬ ಪ್ರಾಚೀನ ಅರಮನೆ ಮತ್ತು ಹಲವಾರು ಚರ್ಚುಗಳು ಕಲಾತ್ಮಕವಾಗಿದ್ದು ಅವೆಲ್ಲ ಚಿತ್ರಶಿಲ್ಪಗಳಿಂದ ಅಲಂಕರಿಸಲ್ಪಟ್ಟಿವೆ. ಫ್ರಾನ್ಸ್ ದೇಶದಲ್ಲಿ ಹಲವಾರು ಕಲಾಗ್ಯಾಲರಿಗಳು ವಿಶ್ವಪ್ರಸಿದ್ಧ ಪಡೆದಿವೆ.

ಈ ಪೈಕಿ ಪ್ಯಾರೀಸ್, ನೀಸ್ ನಗರಗಳಲ್ಲಿ ಹೆಚ್ಚಿನವು ಕಂಡುಬರುತ್ತವೆ. ನೀಸ್ ನಗರದಲ್ಲಿರುವ ರಾಜಕುಮಾರನ ಅರಮನೆಯೊಂದು ಸುಂದರ ಸ್ಥಳವಾಗಿದೆ. ಇದು ಕ್ರಿ. ಶ. ೧೩ನೇ ಶತಮಾನದ ಕಟ್ಟಡವಾಗಿದ್ದು, ಇದರ ಪ್ರತಿಯೊಂದು ಕೋಣೆಗಳು ವರ್ಣಭಿತ್ತಿಚಿತ್ರಗಳಿಂದ ತುಂಬಿಕೊಂಡಿವೆ. ಈ ಅರಮನೆಯ ಆವರಣದಲ್ಲಿರುವ ಒಂದು ಚರ್ಚ್‌ಕೂಡಾ ವರ್ಣಚಿತ್ರಗಳಿಂದ ಅಲಂಕರಿಸಲ್ಪಟ್ಟಿದೆ. ಪ್ಯಾರಿಸ್‌ನ ಹಳೆಕಾಲದ ಚರ್ಚುಗಳಲ್ಲಿ 'ನೋಸ್ಟರ್ ಡಾಮ್ ಕೆಥೆಡ್ರಿಲ್' ಚರಿತ್ರಾರ್ಹ ಕಟ್ಟಡವಾಗಿದೆ. ಗಾಥಿಕ್ ಶೈಲಿಯಲ್ಲಿ ರಚನೆಯಾದ ಇದರ ಒಳಭಾಗದ ಗೋಡೆ, ಮೇಲ್ಛಾವಣೆಗಳು ವರ್ಣಚಿತ್ರಗಳಿಂದ ಅಲಂಕರಿಸಲ್ಪಟ್ಟಿವೆ. ಇಲ್ಲಿನ ಮತ್ತೊಂದು ಚರ್ಚ್ 'ಮೆಡಲೀನ್' ಇದರ ವಾಸ್ತುಶೈಲಿಯು ಗ್ರೀಕ್ ದೇವಾಲಯದ ಮಾದರಿಯನ್ನು ಹೋಲುತ್ತಿದ್ದು, ಇದರ ಒಳಭಾಗವು ಚಿತ್ರಗಳಿಂದ ಅಲಂಕರಿಸಿದೆ. ಇವುಗಳಲ್ಲದೆ ಪ್ಯಾಲೇಸ್ ಡಿ ಜಸ್ಟೀಸ್, ಸೈಂಟ್ ಚಾಪೇಲ್, ಓಪೇರಾಹೌಸ್ ಕಟ್ಟಡಗಳು ಪ್ರಾಚೀನ ಕಲಾತ್ಮಕ ಕಟ್ಟಡಗಳಾಗಿದ್ದು ಚಿತ್ರಶಿಲ್ಪಗಳಿಂದ ಅಲಂಕರಿಸಲ್ಪಟ್ಟಿವೆ. ಪ್ಯಾರಿಸ್ ಕಲಾವೈಭವವನ್ನು ಬಿಂಬಿಸುವಲ್ಲಿ ಲೂವ್ರ ಮ್ಯೂಜಿಯಂ ಮತ್ತು ವರ್ಸಲೆ ಅರಮನೆಗಳು ಪ್ರಮುಖಪಾತ್ರವಹಿಸುತ್ತವೆ. ಲೂವ್ರ್ ಕಲಾಗ್ಯಾಲರಿಯು ಇಂಗ್ಲೀಷ್‌ನ H ಆಕಾರದಲ್ಲಿದ್ದು, ನಲವತ್ತು ಎಕರೆ ವಿಸ್ತೀರ್ಣಹೊಂದಿದೆ. ಇದರ ನಿರ್ಮಾಣ ಅನೇಕ ಶತಮಾನಗಳಲ್ಲಿ ನಡೆದಿದೆ. ಇಲ್ಲಿ ವಿಶ್ವಪ್ರಸಿದ್ಧ ಚಿತ್ರಶಿಲ್ಪಗಳ ಸಂಗ್ರಹಗಳಿವೆ.

ವರ್ಸಲೆ ಅರಮನೆಯು ಹದಿನಾಲ್ಕನೆಯ ಲೂಯಿ ಅರಸನ ರಾಜವೈಭವವನ್ನು ಪ್ರತಿನಿಧಿಸುವ ವಾಸ್ತುರಚನೆಯಾಗಿದೆ. ಇದನ್ನು ಮ್ಯೂಜಿಯಂ ಆಗಿ ಪರಿವರ್ತಿಸಲಾಗಿದ್ದರೂ ಯಾವುದೇ ಹೊರಗಿನ ವಸ್ತು ತಂದಿರಿಸದೆ ಅಲ್ಲಿನ ಕಲಾಕೃತಿಗಳನ್ನೆ ಉಳಿಸಿಕೊಳ್ಳಲಾಗಿದೆ. ಗ್ರೋಸ್, ರಿನಾಲ್ಡ್, ಹೊರೇಸ್, ವರ್ನೆ ಇವರುಗಳು ಬರೆದ ಬೃಹತ್ ಚಿತ್ರಗಳು ಇಲ್ಲಿವೆ. ಫ್ರಾನ್ಸ ದೇಶದ ಸಮರವೈಭವವನ್ನು ಕೈಕೈ ಕದನದಿಂದತೊಡಗಿ ಆಧುನಿಕ ಫಿರಂಗಿಗಳ ವರೆಗೆ ಯುದ್ಧದ ವಿವಿಧ ಘಟ್ಟಗಳನ್ನು ಇಲ್ಲಿ ಚಿತ್ರದ ಮೂಲಕ ಬಿಂಬಿಸಲಾಗಿದೆ. ನೆಪೋಲಿಯನ್‌ನ ವಿಜಯಚಿತ್ರಣ ಇಲ್ಲಿನ ದೃಶ್ಯಗಳಲ್ಲಿ ಮೂಡಿಬಂದಿದೆ.

ಪ್ಯಾರಿಸ್‌ನ ವರ್ಸಲೆ ಅರಮನೆಗಿಂತ ಲೂವ್ರ್ ಗ್ಯಾಲರಿಗೆ ಹೆಚ್ಚಿನ ಪ್ರಾಧಾನ್ಯತೆ ಇದೆ. ವಿಶ್ವಪ್ರಸಿದ್ಧ ಚಿತ್ರ ಮೊನಾಲಿಸಾ ಕಲಾಕೃತಿ ಇದೆ ಕಲಾಗ್ಯಾಲರಿಯಲ್ಲಿದೆ. ಇದಲ್ಲದೆ ಪ್ರಸಿದ್ಧ ಕಲಾವಿದರ ಹಲವಾರು ಮೂಲಕಲಾಕೃತಿಗಳು ಇಲ್ಲಿವೆ. ಟೊಸಿಪಿ, ವ್ಯಾನ್‌ಗಾಗ್, ಸಿಜಾನ್ ಪಾಲ್, ಸೂಸಾನ್, ಎಂಡ್ರೆ ಡಿರೈನ್, ರೆನ್ವಾರ್, ರಿನಾಯರ್, ಗಾಗಿನ್ ಪಾಲ್, ಹೆನ್ರಿ ರೂಸೋ ಮುಂತಾದ ಕಲಾವಿದ ಕೃತಿಗಳು ಇಲ್ಲಿವೆ. ಈ ಲೂವ್ರ್ ಗ್ಯಾಲರಿಯಲ್ಲಿ ಚಿತ್ರವಿಭಾಗವಲ್ಲದೆ ಶಿಲ್ಪವಿಭಾಗವೂ ಇದ್ದು ಪ್ರಪಂಚದ ನಾನಾದೇಶಗಳ ಪ್ರಸಿದ್ಧ ಶಿಲ್ಪಗಳು ಇಲ್ಲಿವೆ.

ಪ್ಯಾರಿಸ್‌ನಲ್ಲಿ ಮ್ಯುಸಿಗಿಮೆ ಮ್ಯೂಜಿಯಂ ಪೌರಾತ್ಯ ಕಲಾದೃಷ್ಟಿಯಿಂದ ಹೆಚ್ಚು ಮಹತ್ವದ್ದಾಗಿದೆ. ಇಲ್ಲಿ ಪೌರಾತ್ಯದೇಶಗಳಾದ ಕಾಂದಹಾರ್, ಭಾರತ, ಬರ್ಮ, ಸಯಾಮ್, ಚೀನಾ, ಜಪಾನ್, ಶ್ರೀಲಂಕಾ, ಇಂಡೋನೇಷಿಯಾ ಮುಂತಾದ ದೇಶಗಳ ಕಲಾಸಂಪತ್ತನ್ನು ಕಾಯ್ದಿರಿಸಲಾಗಿದೆ. ಚಿತ್ರ, ಶಿಲ್ಪ, ಅಲಂಕಾರಿಕ ವಸ್ತುಗಳು, ಹಸ್ತಪ್ರತಿ ಚಿತ್ರಗಳು, ವಸ್ತ್ರ-ಒಡವೆಗಳು, ಆಯುಧ, ದಿನಬಳಕೆ ವಸ್ತುಗಳು ಹೀಗೆ ಸಂಸ್ಕೃತಿಗೆ ಸಂಬಂಧಿಸಿದ ಹಲವಾರು ವಸ್ತುಗಳಿವೆ. ಭಾರತದ ವಿಭಾಗದಲ್ಲಿ ತ್ರಿಮೂರ್ತಿ, ವಿಷ್ಣು, ಹುಲಿಯನ್ನು ಕೊಲ್ಲುತ್ತಿರುವ ಸಳನ ವಿಗ್ರಹಗಳಲ್ಲದೆ ಲೋಕೇಶ್ವರ, ತಾರಾ ವಿಗ್ರಹಗಳಿವೆ. ಅಲ್ಲದೆ ರಾಮಸುಗ್ರೀವರ ಸಖ್ಯವನ್ನು ತೋರಿಸುವ ಚಿತ್ರ, ಸ್ಕಂದ, ಗಣೇಶ ಇವರ ಚಿತ್ರಗಳು ಇಲ್ಲಿವೆ. ಅಜಂತಾದ ಗುಹಾಲಯಗಳಲ್ಲಿನ ಭಿತ್ತಿಚಿತ್ರಗಳನ್ನು ಪ್ರತಿಮಾಡಿಸಿ ಇಲ್ಲಿ ಕಾದಿರಿಸಲಾಗಿದೆ.

ಇಟಲಿ ದೇಶದ ಮಿಲಾನ್ ನಗರದಲ್ಲಿರುವ ಡುಮೊ ಎಂಬ ಹಳೆಕಾಲದ ಕೆಥೆಡ್ರಿಲ್ ಕ್ರಿ.ಶ.೧೩ನೇ ಶತಮಾನದಲ್ಲಿ ನಿರ್ಮಾಣವಾದ ವಾಸ್ತುರಚನೆಯಾಗಿದೆ. ಇದರ ಒಳಭಾಗದಲ್ಲಿ ಕ್ರೈಸ್ತ ಪುರಾಣವನ್ನೆಲ್ಲ ಗೋಡೆಗಳ ಮೇಲೆ ವರ್ಣದಿಂದ ಚಿತ್ರಿಸಲಾಗಿದೆ. ಒಂದೊಂದು ಸಾಲಿನಲ್ಲಿ ೧೨೦ ಚಿತ್ರಗಳಂತೆ ೧೨ ಸಾಲುಗಳಲ್ಲಿ ಚಿತ್ರಗಳನ್ನು ಬರೆಯಲಾಗಿದೆ. ಇವೆಲ್ಲ ದೊಡ್ಡ ಚಿತ್ರಗಳಾಗಿವೆ. ಸಾನ್‌ಮಾರ್ಕೊ ಎಂಬ ಸ್ಥಳದಲ್ಲಿರುವ ಸಾನ್‌ಮಾರ್ಕೊ ಇಗರ್ಜಿಯಲ್ಲಿ ಹದಿಮೂರು ಮತ್ತು ಹದಿನಾಲ್ಕನೆ ಶತಮಾನದ ನೂರಾರು ವರ್ಣಚಿತ್ರಗಳಿವೆ. ಇವು ವೆನಿಸ್‌ನ ಪ್ರಾಚೀನ ಸಂಸ್ಕೃತಿಯನ್ನು ಬಿಂಬಿಸುವ ಕೃತಿಗಳಾಗಿವೆ. ಇಟಲಿ ದೇಶದ ವೆನಿಸ್‌ನಲ್ಲಿರುವ ಡೋಗೆ ಅರಮನೆ ಸುಂದರವಾದ ಸ್ಥಳವಾಗಿದೆ. ಹಲವಾರು ಅಂತಸ್ತುಗಳನ್ನು ಹೊಂದಿದ ಇದನ್ನು ಈಗ ಕಲಾಗ್ಯಾಲರಿಯಾಗಿ ಮಾಡಲಾಗಿದೆ. ಈ ಅರಮನೆಯ ಛಾವಣಿ ಮತ್ತು ಗೋಡೆಗಳ ಮೇಲೆ ವಿಶ್ವಪ್ರಸಿದ್ಧ ಚಿತ್ರಕಾರರು ಬರೆದ ಭಿತ್ತಿಚಿತ್ರಗಳಿವೆ. ಪಾವಲೋ, ವೆರೋನಿಸ್, ಟಿಂಟೆರೆಟೋ, ಥಿತಾನ್ ಇವರ ಕೃತಿಗಳು ಇಲ್ಲಿವೆ. ವೆನಿಸ್‌ನಿಂದ ಸ್ವಲ್ಪ ದೂರದಲ್ಲಿ ಪಾಡುವಾ ಎಂಬ ಊರಿದೆ. ಹಳೆಕಾಲದಲ್ಲಿ ಈ ಸ್ಥಳ ಅನೇಕ ಚಿತ್ರಕಾರರಿಗೆ ಹೆಸರಾಗಿತ್ತು. ಇಲ್ಲಿ ಪಾಡುವಾ ಎಂಬ ಪ್ರತ್ಯೇಕ ಚಿತ್ರಕಲಾಶೈಲಿ ಹುಟ್ಟಿಕೊಂಡಿತು. ಇಲ್ಲಿಂದ ತುಸು ದೂರದಲ್ಲಿರುವ ರೆವೆನಾ ಪಟ್ಟಣದಲ್ಲಿ ಪ್ರಖ್ಯಾತವಾದ ಗಾಜಿನಚಿತ್ರಗಳು ತಯಾರಾಗುತ್ತವೆ.

ಇಟಲಿಯ ಫ್ಲಾರೆನ್ಸ್ ನಗರದಲ್ಲಿ ಹಲವಾರು ಗ್ಯಾಲರಿ ಮತ್ತು ಚರ್ಚುಗಳಿವೆ. ಮೆಡೋನಾ, ಡುಮೋಕೆಥೆಡ್ರಿಲ್, ಸಾನ್‌ಸ್ಪಿರಿಟೋ, ಸಾನ್‌ಕ್ರೋಸೋ ಚರ್ಚುಗಳು ಪ್ರಖ್ಯಾತವಾಗಿದ್ದು ಭವ್ಯವಾದ ಚಿತ್ರಕಲಾಕೃತಿಗಳನ್ನು ಹೊಂದಿವೆ. ಗ್ಯಾಲರಿಗಳಲ್ಲಿ 'ಉಫೀಜಿ ಗ್ಯಾಲರಿ' ಪ್ರಖ್ಯಾತವಾಗಿದ್ದು ವಿಶ್ವಶ್ರೇಷ್ಠ ಕಲಾವಿದರ ಕೃತಿಗಳನ್ನು ಹೊಂದಿದೆ. ಫಿಲಿಪ್ಪೋಲಿಪಿ, ಬೊಟ್ಟಿಸೆಲ್ಲಿ, ಲಿಯೋನಾರ್ಡೋ-ಡ-ವಿನ್ಸಿ, ರಾಫೆಲ್, ಗಿರ‍್ಲಾಂಡೋ, ಮೈಕಲ್ ಎಂಜೆಲೋ, ವೆರೋನಿಸ್, ಎಂಡ್ರಿಯಾಡೆಲ್ ಸಾರ್ಟೋ, ತಿಥಾನ್‌ಮುರಿಲ್ಲೋ ಮುಂತಾದವರ ಚಿತ್ರಗಳು ಇಲ್ಲಿವೆ.

ಉಫಿಜಿ ಗ್ಯಾಲರಿಯಿಂದ ಒಂದು ಕಿ.ಮಿ.ದೂರದಲ್ಲಿ 'ಹಾತಿ ಅರಮನೆ' ಎಂಬ ಮತ್ತೊಂದು ಕಲಾಗ್ಯಾಲರಿ ಇದೆ. ಇದು ಆಧುನಿಕ ಚಿತ್ರಕಲಾ ಗ್ಯಾಲರಿಯಾಗಿದೆ. ರೋಮ್ ನಗರವು ಕಲಾವಿದರಿಗೆ ಮುದನೀಡುವ ಸ್ಥಳವಾಗಿದ್ದು ಇಲ್ಲಿ ಹಲವಾರು ಚರ್ಚುಗಳು ಚಿತ್ರಕಲೆಗಳಿಂದ ಅಲಂಕರಿಸಿವೆ. ಇವುಗಳಲ್ಲಿ ಸೆಂಟಪೀಟರ್ ಬೆಸಿಲಿಕಾ, ಸೇಂಟ್ ಪಾಲ್ ಬೆಸಿಲಿಕಾ, ಗಿವೋನಿ ಬೆಸಿಲಿಕಾ, ಸೇಂಟ್ ಮಾಗಿಯೋರಿ ಬೆಸಿಲಿಕಾ ಮುಖ್ಯವಾಗಿವೆ. ಇವೆಲ್ಲ ಪ್ರಾಚೀನಕಾಲದ ವರ್ಣಭಿತ್ತಿಚಿತ್ರಗಳನ್ನು ಹೊಂದಿವೆ. ಸಿಸ್ಟೇನ್ ಚಾಪೆಲ್ ಸಮೀಪ ಇರುವ 'ವೆಟಿಕನ್ ಮ್ಯೂಜಿಯಂ' ವಿಶ್ವಪ್ರಸಿದ್ಧವಾಗಿದೆ. ಇಲ್ಲಿ ಹಲವಾರು ಶಿಲ್ಪ, ಚಿತ್ರಕಲಾಕೃತಿಗಳು ಸಂಗ್ರಹಗೊಂಡಿವೆ. ಮಹಾಚಿತ್ರಕಾರ ರಾಫೆಲ್ ಬರೆದ ಬಹುದೊಡ್ಡ ಭಿತ್ತಿಚಿತ್ರಗಳು ಇಲ್ಲಿವೆ. ಇದೇ ಊರಿನಲ್ಲಿರುವ ಮ್ಯುಸಿಯೋ ಬೋರ್ಗಿಸೀ ಎಂಬ ಕಲಾಗ್ಯಾಲರಿಯಲ್ಲಿ ಇಟಲಿಯ ಮಧ್ಯಯುಗದ ಪ್ರಸಿದ್ಧ ಚಿತ್ರಕಲಾವಿದರ ಕೃತಿಗಳನ್ನು ಸಂಗ್ರಹಿಸಲಾಗಿದೆ. ರೋಮ್ ನಗರದಲ್ಲಿ ಆಧುನಿಕ ಚಿತ್ರಶಿಲ್ಪಗಳ ಪ್ರದರ್ಶನಕ್ಕಾಗಿ ಪ್ರತ್ಯೇಕ ಕಲಾಗ್ಯಾಲರಿ ಇದೆ. ಇಲ್ಲಿ ಬೋಲ್ಬಿನೋ, ಪರಫೆನೋ, ಸೆರಡೋರಿಯೋ, ಐರೋಲ್ಫ ವೈಲ್ಸ್ ಮುಂತಾದವರ ಕೃತಿಗಳಿವೆ. ಹೀಗೆ ವಿವಿಧ ದೇಶದ ಕಲೆಯ ಬಗ್ಗೆ ಸ್ಥೂಲವಾಗಿ ಈ ಕೃತಿಯಲ್ಲಿ ಶಿವರಾಮ ಕಾರಂತರು ತಿಳಿಸಿದ್ದಾರೆ. ಈ ಪ್ರವಾಸ ಸಾಹಿತ್ಯವು ಮುಖ್ಯವಾಗಿ ಇಂಗ್ಲೆಂಡ್, ನಾರ್ವೆ, ಸ್ವೀಡನ್, ಡೆನ್ಮಾರ್ಕ್, ಹಾಲೆಂಡ್, ಬೆಲ್ಜಿಯಂ, ಫ್ರಾನ್ಸ್, ಇಟಲಿ ಮತ್ತು ರೋಮನ್ ದೇಶಗಳ ಕಲಾಗ್ಯಾಲರಿ,ಚರ್ಚುಗಳು, ಪ್ರಾಚೀನ ಅರಮನೆಗಳು, ಕಲಾತ್ಮಕ ಕಟ್ಟಡಗಳು,

ಆ ಪ್ರದೇಶದ ಕಲಾವಾತಾವರಣ, ಕಲಾವಿದರು ಮತ್ತು ಕೃತಿಗಳ ಬಗ್ಗೆ ತಿಳಿಸುತ್ತದೆ. ಯುರೋಪ್ ದೇಶಗಳಲ್ಲಿರುವ ಪ್ರಾಚೀನ ಸ್ಮಾರಕಗಳು ಚಿತ್ರಶಿಲ್ಪಗಳಿಂದ ಅಲಂಕರಿಸಲ್ಪಟ್ಟಿವೆ. ಅಲ್ಲದೆ ತಮ್ಮ ದೇಶದ ಸಂಸ್ಕೃತಿ, ಕಲೆಗಳನ್ನೂ ಅವರು ಜೋಪಾನವಾಗಿ ಕಾಯ್ದಿಟ್ಟಿರುವುದು ಮಾದರಿಯಾಗಿದೆ. ಕಲಾಸಾಹಿತ್ಯದ ದೃಷ್ಟಿಯಿಂದ ಇದೊಂದು ಗಮನಾರ್ಹ ಕೃತಿಯಾಗಿದೆ.

**ನನ್ನ ಸಿಲೋನ್ ಸಂದರ್ಶನ :**

ಕರ್ನಾಟಕದ ಖ್ಯಾತ ಕಲಾವಿದರಾಗಿದ್ದ ಡಿ. ವಿ. ಹಾಲಭಾವಿಯವರು ಶ್ರೀಲಂಕಾ ದೇಶವನ್ನು ಪ್ರವಾಸಮಾಡಿ ತಮ್ಮ ಪ್ರವಾಸ ಕಥನವನ್ನು ನನ್ನ ಸಿಲೋನ್ ಸಂದರ್ಶನ ಎಂಬ ಹೆಸರಿನಿಂದ ಬರೆದಿದ್ದಾರೆ.[೪೯] ಶ್ರೀಲಂಕಾ ಪ್ರಾಂತ್ಯಕ್ಕೆ ಸಿಲೋನ್ ಎಂಬುದಾಗಿಯೂ ಕರೆಯಲಾಗುತ್ತದೆ. ಈ ಪುಸ್ತಕದಲ್ಲಿ ಶ್ರೀಲಂಕಾ ದೇಶದ ಪರಿಸರ, ಪ್ರಕೃತಿ ಸೌಂದರ್ಯ, ರಾಜಕೀಯ ಘಟನೆ, ಐತಿಹಾಸಿಕ ಅಂಶಗಳ ಜೋತೆಗೆ ಮುಖ್ಯವಾಗಿ ಅಲ್ಲಿನ ಕಲೆಯನ್ನು ಕುರಿತು ಹೇಳಿದ್ದಾರೆ. ಶ್ರೀಲಂಕಾ ದೇಶದ ಪ್ರಾಚೀನ ಕಲಾಪರಂಪರೆಯು ಭಾರತದಂತೆ ಬೌದ್ಧ ಮತ್ತು ಹಿಂದೂ ಧಾರ್ಮಿಕತೆಯನ್ನು ಅನುಸರಿಸಿಕೊಂಡು ಬೆಳೆದಿದೆ. ಇಲ್ಲಿ ಸಿಗೇರಿಯಾ ಪ್ರದೇಶದ ಪ್ರಾಚೀನ ಚಿತ್ರಗಳು ಅಜಂತಾದಂತೆ ಕಲ್ಲಿನಲ್ಲಿಕೊರೆದ ಗುಹಾಲಯಗಳಲ್ಲಿ ರಚನೆಯಾಗಿವೆ. ಅನೇಕ ವರ್ಷಗಳವರೆಗೂ ಇಲ್ಲಿ ಆಡಳಿತವು ಭಾರತೀಯ ರಾಜರ ಆಧೀನಕ್ಕೆ ಒಳಪಟ್ಟಿತ್ತು. ಹಾಗಾಗಿ ಇಲ್ಲಿನ ಪ್ರಾಚೀನ ವಾಸ್ತುಶಿಲ್ಪ, ಶಿಲ್ಪಕಲೆ ಮತ್ತು ಚಿತ್ರಕಲೆಗಳು ಭಾರತೀಯ ಲಕ್ಷಣಗಳಿಂದ ಕೂಡಿಕೊಂಡಿವೆ. ಸಿಲೋನಿನ ಅನೇಕ ಸ್ತೂಪಗಳು, ಚೈತ್ಯವಿಹಾರಗಳಲ್ಲಿ ಭಾರತದ ಬಾರಾಹ್ರತ್, ಸಾಂಚಿ, ಅಮರಾವತಿ, ಕಾರ್ಲೆಗಳಲ್ಲಿನ ರಚನೆಗಳ ಪ್ರಭಾವ ಗೋಚರಿಸುತ್ತದೆ. ಹೀಗೆ ಈ ದೇಶದ ಕಲಾಪರಂಪರೆಯ ಬಗ್ಗೆ ಸ್ಥೂಲವಾಗಿ ಹೇಳಿದ್ದಾರೆ. ನಂತರದಲ್ಲಿ ತಾವು ಅಲ್ಲಿ ಕಂಡ ಪ್ರಕೃತಿ ಸೌಂದರ್ಯ, ಭೇಟಿ ಮಾಡಿದ ಕಲಾವಿದರು, ಸಮಕಾಲೀನ ಕಲೆಯ ಸಂಗತಿಗಳು ಹೀಗೆ ಹಲವಾರು ವಿಷಯಗಳನ್ನು ನಿರೂಪಿಸಿದ್ದಾರೆ. ಈ ದೇಶದಲ್ಲಿ ಕ್ರಿ. ಶ. ೧೨ನೆಯ ಶತಮಾನದಲ್ಲಿ ಒಂದನೆಯ ಪರಾಕ್ರಮ ಬಾಹುವಿನ ಕಾಲದಲ್ಲಿ ಶಿಲ್ಪ, ಚಿತ್ರ ಮತ್ತು ವಾಸ್ತುಕಲೆಗಳು ತಮ್ಮ ಔನ್ನತ್ಯ ಸಾಧಿಸಿದ್ದವು ಎಂದು ಹೇಳಿದ್ದಾರೆ.

**ಪ್ರವಾಸ ಸಾಹಿತ್ಯ :**

ಕನ್ನಡದ ಖ್ಯಾತ ಬರಹಗಾರರಾದ ವಿ. ಕೃ. ಗೋಕಾಕ ಇವರ ಸಮಗ್ರ ಸಾಹಿತ್ಯವನ್ನು ಒಂದು ಕಡೆಗೆ ತರುವಲ್ಲಿ ಅನೇಕ ಸಂಪುಟಗಳನ್ನು ಪ್ರಕಟಿಸಲಾಗಿದೆ. ಅವರ ಸಮಗ್ರ ಸಾಹಿತ್ಯದ ಏಳನೆಯ ಸಂಪುಟಕ್ಕೆ ಪ್ರವಾಸ ಸಾಹಿತ್ಯ ಎಂದು ಹೆಸರಿಸಲಾಗಿದೆ.[೫೦] ಈ ಸಂಪುಟದಲ್ಲಿನ ಐದು ಭಾಗಗಳು ಪತ್ರದ ಮೂಲಕ ವಿಷಯ ನಿರೂಪಿಸಿದರೆ ಇನ್ನೆರಡು ಭಾಗಗಳು ಕವನದ ಮೂಲಕ ಪ್ರವಾಸದ ಅನುಭವಗಳನ್ನು ಕಟ್ಟಿಕೊಟ್ಟಿವೆ. ಒಟ್ಟು ಏಳು ಭಾಗಗಳಾಗಿ ಈ ಸಂಪುಟದ ವಿಷಯವನ್ನು ನಿರೂಪಿಸಲಾಗಿದೆ. ಸಮುದ್ರದಾಚೆಯಿಂದ, ಸಮುದ್ರದೀಚೆಯಿಂದ, ಬೆಲ್ಜಿಯಂ ಪ್ರವಾಸ, ವೀಸಾನಗರ, ದಿಲ್ಲಿ, ಪುಣ್ಯಭೂಮಿ ಮತ್ತು ಸಿಮ್ಲಾಸಿಂಫನಿಗಳು ಎಂದು ಏಳು ಭಾಗಗಳಿವೆ. ಈ ಪ್ರವಾಸ ಸಾಹಿತ್ಯದಲ್ಲಿ ವಿ. ಕೃ. ಗೋಕಾಕರು ತಮ್ಮ ಪ್ರವಾಸದ ಅನುಭವಗಳನ್ನು ಪತ್ರಮುಖೇನ ತಿಳಿಸಿದ್ದಾರೆ.ಅಲ್ಲಿ ತಾವುಕಂಡ ದೃಶ್ಯ, ಅಲ್ಲಿನ ಪರಿಸ್ಥಿತಿ, ಸಾಮಾಜಿಕ, ರಾಜಕೀಯ, ವ್ಯವಹಾರಿಕ ಘಟನೆಗಳಲ್ಲದೆ ಅಲ್ಲಿನ

---

೪೯. ಡಿ. ವಿ. ಹಾಲಭಾವಿ : ನನ್ನ ಸಿಲೋನ್ ಸಂದರ್ಶನ : ಸುರೇಶ ಹಾಲಭಾವಿ ಪ್ರಕಾಶನ, ಧಾರವಾಡ-೧೯೮೫

೫೦. ವಿ.ಕೃ.ಗೋಕಾಕ : ಪ್ರವಾಸ ಸಾಹಿತ್ಯ : ಐ.ಬಿ.ಎಚ್.ಪ್ರಕಾಶನ ಗಾಂಧಿನಗರ, ಬೆಂಗಳೂರು-೧೯೬೮

ಕಲೆ, ಸಾಹಿತ್ಯಗಳ ಬಗ್ಗೆಯೂ ಸಾಂದರ್ಭಿಕವಾಗಿ ತಿಳಿಸಿದ್ದಾರೆ. ಶಿಲ್ಪಕಲೆ, ಚಿತ್ರಕಲೆ, ವಾಸ್ತುಕಲೆ ಹೀಗೆ ವಿವಿಧ ಆಯಾಮಗಳನ್ನು ಅವರು ತಮ್ಮ ಪತ್ರದಲ್ಲಿ ವಿವೇಚಿಸಿದ್ದು, ಇವು ಆ ದೇಶದ ಕಲಾ ಪರಿಸ್ಥಿತಿಯನ್ನು ತಿಳಿಯುವಲ್ಲಿ ಸಹಕಾರಿಯಾಗಿವೆ. ಈ ಪ್ರವಾಸ ಸಾಹಿತ್ಯ ಸಂಪುಟದಲ್ಲಿ ಗೋಕಾಕ ಅವರು ಯಾವ ದೇಶದಲ್ಲಿ ಯಾವ ಕಲಾ ವಿಷಯದ ಬಗ್ಗೆ ಹೇಳಿದ್ದಾರೆ ಎಂಬುವುದನ್ನು ಸ್ಥೂಲವಾಗಿ ಇಲ್ಲಿ ಗಮನಿಸಿದೆ.

ಈ ಬೃಹತ್ ಸಂಪುಟದಲ್ಲಿ ಪ್ರವಾಸ ಸೌಂದರ್ಯದ ಹಲವಾರು ವಿವರಗಳು, ಅನುಭವಗಳು ಇಲ್ಲಿ ವ್ಯಕ್ತಗೊಂಡಿದ್ದರೂ ಕಲಾವಿಷಯದ ಬಗೆಗಿನ ಸಂಗತಿಗಳನ್ನು ಮಾತ್ರ ಪರಿಶೀಲಿಸಲಾಗಿದೆ. ವಿ. ಕೃ. ಗೋಕಾಕ ತಾವು ನೋಡಿದ ಸ್ಥಳಗಳಲ್ಲಿ ಮನಸ್ಸು ಅರಳಿದ ಕೆಲವು ಸ್ಥಳಗಳನ್ನು ಹೇಳುತ್ತಾರೆ. ಇಂಗ್ಲೆಂಡ್‌ನಲ್ಲಿರುವ ವೆಸ್ಟಮಿನಿಸ್ಟರ್ ಪ್ರಾರ್ಥನಾಮಂದಿರ ಅದರಲ್ಲಿನ ಶಿಲ್ಪಚಿತ್ರಗಳ ಬಗ್ಗೆ ಹೇಳುತ್ತಾ ಅದರ ಸಮೀಪವೇ ಇರುವ ಸೈನ್ಸ್ ಕಾರ್ನರ್ ಎಂಬ ಮ್ಯೂಜಿಯಂ ಬಗ್ಗೆಯೂ ಹೇಳಿದ್ದಾರೆ. ಇಲ್ಲಿ ಜಗತ್ತಿನ ಖ್ಯಾತ ಶಿಲ್ಪಿಗಳ ಮೂರ್ತಿಗಳನ್ನು ಶಿಲೆ, ಮರ ಮತ್ತು ಲೋಹಗಳಿಂದ ಮಾಡಿ ನಿಲ್ಲಿಸಿದ್ದಾರೆ. ಅದರ ನಂತರ ನೋಡಿದ ಅರಸರ ಅರಮನೆಯಲ್ಲಿ ಇಂಗ್ಲೆಂಡಿನ ಪ್ರಮುಖ ಅರಸರ ಗೋರಿ ಮತ್ತು ಅವರ ಶಿಲ್ಪಗಳನ್ನು ರಚಿಸಲಾಗಿದೆ. ಒಳಭಾಗದಲ್ಲಿ ಬಂಗಾರ ಬೆಳ್ಳಿವರ್ಣದಿಂದ ಚಿತ್ರಬರೆದು ಅಲಂಕರಿಸಲಾಗಿದೆ ಎಂದು ಹೇಳುತ್ತಾರೆ.

ಮುಂದೆ ತಾವು ಲಂಡನ್‌ನಲ್ಲಿ ದಿ. ೧೭-೧೨-೧೯೩೭ ರಂದು ಸಂರ್ಶಿಸಿದ 'ಮ್ಯಾಡಮ್ ಟ್ಯೂಸಡ್'ಳ ಮೂರ್ತಿ ಸಂಗ್ರಹಾಲಯದ ಬಗ್ಗೆ ಬರೆಯುತ್ತಾರೆ. ಈ ಮೇಣದಮೂರ್ತಿ ಸಂಗ್ರಹಾಲಯದಲ್ಲಿ ಎಲ್ಲ ಮೂರ್ತಿಗಳನ್ನು ಮೇಣದಿಂದ ಮಾಡಲಾಗಿದ್ದು, ಸಹಜವಾಗಿರುವ ಆಕಾರದಲ್ಲಿವೆ. ಇಲ್ಲಿ ಜಗತ್ತಿನ ಅನೇಕ ಪ್ರಸಿದ್ಧ ವ್ಯಕ್ತಿಗಳ ಮೂರ್ತಿಗಳನ್ನು ನಿಲ್ಲಿಸಲಾಗಿದೆ. ಗಾಂಧೀಜಿಯ ವಿಗ್ರಹವೂ ಇಲ್ಲಿದೆ. ಈ ಸಂಗ್ರಹಾಲಯವನ್ನು ಆರಂಭಿಸಿದ ಮ್ಯಾಡಮ್ ಟ್ಯೂಸಾಡ್ ಶಿಲ್ಪವಲ್ಲದೆ ಶೆಕ್ಸಪೀಯರ್, ಮಿಲ್ಟನ್‌ಚಾಸರ್, ಹೀಗೆ ಹಲವಾರು ಶಿಲ್ಪಗಳಿವೆ. ಒಂದೊಂದು ಪ್ರತ್ಯೇಕ ವಿಭಾಗಮಾಡಿ ಶಿಲ್ಪ ಮಾಡಿದ್ದಾರೆ. ಅರಸರ ವಿಭಾಗ, ಸಾಹಿತಿಗಳ ವಿಭಾಗ, ರಾಜಕಾರಣಿಗಳ ವಿಭಾಗ, ಕಲಾವಿದರ ವಿಭಾಗಗಳಲ್ಲದೆ ಪ್ರಖ್ಯಾತ ಕೊಲೆಗಡುಕರು ಮತ್ತು ದರೋಡೆಕೋರರ ಮೂರ್ತಿಗಳೂ ಇಲ್ಲಿವೆ. ಇವು ಎಷ್ಟು ನೈಜವಾಗಿವೆ ಎಂದರೆ ಜೀವಂತ ವ್ಯಕ್ತಿಗೂ ಈ ಮೇಣದ ಗೊಂಬೆಗಳಿಗೂ ವ್ಯತ್ಯಾಸವೇ ತಿಳಿಯುವುದಿಲ್ಲ.

ದಿನಾಂಕ : ೦೮-೦೧-೧೯೩೭ ರಂದು ಇಂಗ್ಲೆಂಡಿನಲ್ಲಿ ತಾವು ನೋಡಿದ ಸೈನ್ಸ್ ಮ್ಯೂಜಿಯಂ ಬಗ್ಗೆ ಹೇಳುತ್ತಾ ಇಲ್ಲಿ ವಿವಿಧ ಪ್ರಯೋಗಗಳನ್ನು ಐತಿಹಾಸಿಕ ವೈಜ್ಞಾನಿಕ ಘಟನಾವಳಿಗಳನ್ನು ಶಿಲ್ಪ ಮತ್ತು ಚಿತ್ರದ ಮೂಲಕ ರಚನೆಮಾಡಿ ಪ್ರದರ್ಶಿಸಲಾಗಿದೆ. ಇದೊಂದು ಅದ್ಭುತ ಗ್ಯಾಲರಿ ಎಂದು ತಿಳಿಸುತ್ತಾರೆ. ಇದಲ್ಲದೆ ತಾವು ವಾಸವಾಗಿದ್ದ ಕೋಣೆಯ ಹೋರಗಡೆಗೆ ನಿಲ್ಲಿಸಿದ್ದ ಜೀವಮಾದರಿ ಅಳತೆಯ ಮನುಷ್ಯ ಮತ್ತು ಪ್ರಾಣಿಶಿಲ್ಪಗಳ ಬಗ್ಗೆ ವಿವರಿಸುತ್ತ, ಅವುಗಳ ಸೌಂದರ್ಯದ ಬಗ್ಗೆ 'ಶಿಲಾಕನ್ಯೆ' ಎಂಬ ಕವನವನ್ನೇ ರಚಿಸಿದ್ದಾರೆ. ದಿನಾಂಕ : ೧೭-೦೫-೧೯೩೭ ರಂದು 'ಭಾರತೀಯ ಚಿತ್ರಕಲೆ' ವಿಷಯವಾಗಿ ಸರ್ ವಿಲಿಯಮ್ ರೋಥೆನ್ ಸೈನ್ ಎಂಬುವರು ಮಂಡಿಸಿದ ಪ್ರಬಂಧ ಕುರಿತು ವಿಶ್ಲೇಷಿಸಿದ್ದಾರೆ. ಹೀಗೆ ಹಲವು ಕಲಾಪ್ರಸಂಗಗಳನ್ನು ಸಮುದ್ರದಾಚೆಯಿಂದ ಎಂಬ ಭಾಗದಲ್ಲಿ ವಿವರಿಸಿದ್ದಾರೆ. ಸಮುದ್ರದೀಚೆಗಿನ ಪ್ರವಾಸದಲ್ಲಿ ಜಪಾನ್ ಪ್ರವಾಸಮಾಡಿದ್ದು, ಅಲ್ಲಿನ ಕಲಾಪ್ರಸಂಗಗಳು, ದೃಶ್ಯಗಳನ್ನು ಸಾಂದರ್ಭಿಕವಾಗಿ ಹೇಳಿದ್ದಾರೆ.

ಟೋಕಿಯೋ ನಗರದ ಒಂದು ಬುದ್ಧಮಂದಿರ ಸಂದರ್ಶಿಸಿದ್ದು ಅಲ್ಲಿ ಅನೇಕ ವರ್ಣಚಿತ್ರಗಳನ್ನು ಒಳಗೋಡೆ, ಹೊರಗೋಡೆಗಳಲ್ಲಿ ಬರೆಯಲಾಗಿತ್ತು. ಅಲ್ಲದೆ ಮಂದಿರದ ಹೋರಭಾಗದಲ್ಲಿ ಸಾಮುದ್ರಿಕನೊಬ್ಬ ಜನರಿಗೆ ಗಿಳಿಶಕುನ ಹೇಳುತ್ತಿದ್ದು, ಅವನಲ್ಲಿ ಹಲವಾರು ಹಸ್ತಪ್ರತಿ ವರ್ಣಚಿತ್ರಗಳಿದ್ದವು ಎಂದು ತಿಳಿಸುತ್ತಾರೆ. ಟೋಕಿಯೋ ಪಟ್ಟಣದ ಹೊರವಲಯದ ಪುರಾತನ ಅರಮನೆ ಅಲ್ಲಿನ ಶಿಲ್ಪ ಮತ್ತು ಚಿತ್ರಕಲಾ ಕೃತಿಗಳು ಸುಂದರವಾಗಿದ್ದು, ನಮ್ಮ ಭಾಗದ ವಾಡೆಗಳನ್ನು ನೆನಪಿಸುತ್ತವೆ ಎನ್ನುತ್ತಾರೆ. ಶಿಲ್ಪಚಿತ್ರಗಳಲ್ಲಿ ಹೆಚ್ಚಿನವು ಬುದ್ಧನಿಗೆ ಸಂಬಂಧಿಸಿದವುಗಳಾಗಿವೆ. ಕಿಯೋಟೋ ಪಟ್ಟಣದಲ್ಲಿನ ಮಿಯಾಕೋ ಹೋಟೇಲ್ ರಮ್ಯಸ್ಥಳವಾಗಿದ್ದು, ಇದರ ಒಳಭಾಗ, ಹೊರಭಾಗ ಬೌದ್ಧಚಿತ್ರಗಳಿಂದ ಅಲಂಕೃತಗೊಂಡು ದೇವಾಲಯದಂತೆ ಕಾಣುತ್ತಿತ್ತು. ಇದಲ್ಲದೆ ಡಾ ಓಖಾತಾ ಅವರ ಮನೆಯಲ್ಲಿ ತಾವು ನೋಡಿದ ಹಳೆಕಾಲದ ಚಿತ್ರಕೃತಿಗಳ ಸಂಗ್ರಹದ ಬಗ್ಗೆ ಇಲ್ಲಿ ಹೇಳಿದ್ದಾರೆ. ಮೇಡಮ್ ಕೊಬಾಯಾಶಿಯವರ ಸುಂದರವಾದ ಮನೆ ಅಲ್ಲಿನ ಪೀಠೋಪಕರಣಗಳು, ಊಟದ ತಟ್ಟೆ, ನೀರಿನಲೋಟ, ಅಡುಗೆ ಪಾತ್ರೆಗಳೆಲ್ಲ ವರ್ಣಚಿತ್ರಗಳಿಂದ ಅಲಂಕೃತವಾಗಿದ್ದು ಅದು ಕುತೂಹಲಕರವಾಗಿತ್ತು. ಕಿಯೋಟೋ ನಗರದ ಅದ್ಭುತಗಳಲ್ಲಿ ಅಲ್ಲಿನ ಬೌದ್ಧದೇವಾಲಯವೂ ಒಂದಾಗಿದೆ. 'ಟೆನ್ರಿವೂಜಿ' ಎಂಬ ಹೆಸರಿನ ಈ ದೇವಾಲಯವು ಈ ಬೌದ್ಧ ದೇವಾಲಯದ ಒಳಭಾಗ ಮತ್ತು ಹೊರಭಾಗದ ಗೋಡೆಗಳನ್ನು ವರ್ಣಚಿತ್ರಗಳಿಂದ ಅಲಂಕರಿಸಲಾಗಿದೆ.

ಜಪಾನ್ ದೇಶದಲ್ಲಿ ಪ್ರವಾಸಿಗರ ಆಕರ್ಷಣೆಯನ್ನು ಹೆಚ್ಚು ಸೆಳೆಯುವಲ್ಲಿ 'ಸಾಮ್ರಾಟರ ಅರಮನೆ'ಗಳು ಪ್ರಮುಖವಾಗಿವೆ. ಅರಮನೆಯು ಬೃಹತ್ ಆಕಾರದಲ್ಲಿದ್ದು, ಸುತ್ತಲೂ ಹಲವಾರು ಚಿಕ್ಕಮಟ್ಟ ಅರಮನೆಗಳು ನಿರ್ಮಿಸಿವೆ. ಇವೆಲ್ಲವು ಕಟ್ಟಿಗೆಯಿಂದಲೇ ರಚಿಸಲ್ಪಟ್ಟಿವೆ. ಎರಡನೆಯ ಮಹಾಯುದ್ಧದ ಕಾಲದಲ್ಲಿ ಹಲವು ಅರಮನೆಗಳು ಭಸ್ಮವಾಗಿದ್ದು ಅದರ ಜಾಗದಲ್ಲಿ ಮರಗಳನ್ನು ಬೆಳೆಸಲಾಗಿದೆ. ಇನ್ನೂ ಉಳಿದಿರುವ ಹಲವಾರು ಅರಮನೆಗಳಲ್ಲಿ ಅದರ ಒಳಭಾಗವನ್ನು ವರ್ಣಚಿತ್ರ ಮತ್ತು ಶಿಲ್ಪಗಳಿಂದ ಅಲಂಕಾರ ಮಾಡಲಾಗಿದೆ. ಜಪಾನೀ ಅರಸರ ರಾಜ್ಯಾಭಿಷೇಕವು ಮೊದಲಿನಿಂದ ಇಲ್ಲಿಯೇ ನಡೆಯುತ್ತ ಬಂದಿದೆ. ಇಲ್ಲಿನ ಪ್ರತಿಯೊಂದು ಕೋಣೆಗೂ ಸುಂದರ ಚಿತ್ರಗಳಿಂದ ಅಲಂಕರಿಸಲ್ಪಟ್ಟಿವೆ.

ಜಪಾನ್ ದೇಶದ ಕಿಯೋಟೋ ಬೌದ್ಧಮಂದಿರಗಳು ಕಲೆಯ ದೃಷ್ಟಿಯಿಂದ ಪ್ರಖ್ಯಾತವಾಗಿವೆ. ಕಿಯೋಟೋದಿಂದ ಸ್ವಲ್ಪದೂರದಲ್ಲಿರುವ ನಾರಾ ಎಂಬ ನಗರದಲ್ಲಿ ಹಲವಾರು ಬುದ್ಧಮಂದಿರಗಳಿವೆ. ಇವುಗಳಲ್ಲಿ ಕೆಲವು ಬೃಹತ್ತಾಗಿ ಕಲಾತ್ಮಕವಾಗಿವೆ. ಕಿಯೋಟೋದಲ್ಲಿನ 'ಸೌಂಜು ಸೌಂಗೆವ್ ದೋ', 'ಕಿಂಕಾಕೂಜಿ' ಮತ್ತು ಕೋರಿಯುಜಿ'ಗಳು ಕ್ರಮವಾಗಿ ಕ್ರಿ. ಶ. ೬೨೫, ಕ್ರಿ. ಶ. ೬೫೦, ಕ್ರಿ. ಶ. ೧೩೯೭ ರಲ್ಲಿ ನಿರ್ಮಿಸಲಾಗಿವೆ. ಇವುಗಳಲ್ಲದೆ ನಾರಾದ 'ತೋಡ್ವೆಜಿ' (ಕ್ರಿ.ಶ.೭೫೨) ಮತ್ತು 'ಕಾಸುಗಾ' ಮಂದಿರಗಳು ಪ್ರಖ್ಯಾತವಾಗಿವೆ. ಈ ಬುದ್ಧಮಂದಿರಗಳಲ್ಲಿ ಗೋಡೆಯಮೇಲೆ ವರ್ಣಭಿತ್ತಿಚಿತ್ರಗಳು ಮತ್ತು ಅಲ್ಲಲ್ಲಿ ಬುದ್ಧನ ಶಿಲ್ಪಗಳನ್ನು ರಚಿಸಲಾಗಿದೆ. ಶಿಲ್ಪಗಳಲ್ಲಿ ಶಿಲೆ, ಮರ ಮತ್ತು ಲೋಹ ಶಿಲ್ಪಗಳಿವೆ. ಇಲ್ಲಿನ ಪ್ರಾಚೀನ ಚಿತ್ರಕಲಾ ಶೈಲಿಯಲ್ಲಿ ಭಾರತೀಯ ಕಲಾಶೈಲಿಯ ಪ್ರಭಾವ ಕಂಡುಬರುತ್ತದೆ. ಇಲ್ಲಿನ ಮಂದಿರದಲ್ಲಿ ಅಜಂತೆಯ ಪದ್ಮಪಾಣಿ ಬುದ್ಧನನ್ನು ಹೋಲುವ ಚಿತ್ರವೊಂದಿದ್ದು ಕೈಯಲ್ಲಿ ಕಮಲದ ಬದಲು ಗುಲಾಬಿ ಚಿತ್ರಿಸಲಾಗಿದೆ. ಕೆಲವು ಶಿಲ್ಪಗಳು ಭಾರತೀಯ ಶೈಲಿಯನ್ನು ಪ್ರತಿಬಿಂಬಿಸುತ್ತವೆ. ಹೀಗೆ ತಮ್ಮ ಜಪಾನ್ ಪ್ರವಾಸದಲ್ಲಿನ ಕಲಾ ಸಂದರ್ಭಗಳನ್ನು ತಿಳಿಸಿದ್ದಾರೆ.

ಪುಣ್ಯಭೂಮಿ ಎಂಬ ಭಾಗದಲ್ಲಿ ಭಾರತದ ಅನೇಕ ಸ್ಥಳಗಳ ಬಗ್ಗೆ ಕವನಗಳಿವೆ. ಆಯಾ ಸ್ಥಳಗಳನ್ನು ನೋಡಿ ತಮಗಾದ ಭಾವನೆಗಳನ್ನು ಕವಿತೆಯ ಮೂಲಕ ಗೋಕಾಕರು ಇಲ್ಲಿ ಹೊರಹಾಕಿದ್ದಾರೆ. ಈ ಕವನಗಳಲ್ಲೂ ಆಯಾ ಸ್ಥಳದ ಕಲಾತ್ಮಕ ಅಂಶಗಳು ಬಿಂಬಿತಗೊಂಡಿವೆ. ಇಲ್ಲಿ ಒಟ್ಟು ಇಪ್ಪತ್ತೇಳು ಕವನಗಳಿದ್ದು ಸಿಮ್ಲಾದಿಂದ ಕನ್ಯಾಕುಮಾರಿಯ ವರೆಗಿನ ವಿವಿಧ ಸ್ಥಳಗಳ ಕಾವ್ಯಮಯ ನೋಟಗಳು ಇಲ್ಲಿವೆ. ಇವುಗಳಲ್ಲಿ ಕೆಲವು ಆ ಪ್ರದೇಶದ ಸೃಷ್ಟಿಸೌಂದರ್ಯ, ಪ್ರಕೃತಿಸಿರಿ, ವಾಸ್ತುವಿನ್ಯಾಸ, ಶಿಲ್ಪಸೌಂದರ್ಯ, ಐತಿಹಾಸಿಕತೆ, ಪೌರಾಣೀಕ ಹಿನ್ನೆಲೆ, ಸಾಮಾಜಿಕ ಆಯಾಮಗಳನ್ನು ಬಿಂಬಿಸಿದರೆ ಮತ್ತೆ ಕೆಲವು ಕಲಾಹಿನ್ನೆಲೆಗಳನ್ನು ಕಟ್ಟಿಕೊಡುತ್ತವೆ. ಕುತುಬ್‌ಮಿನಾರ್, ಅಜಂತಾ ಗವಿಗಳು, ಎಲ್ಲೋರಾ ಗವಿಗಳು, ಮೀನಾಕ್ಷಿ ದೇವಾಲಯ, ಇವುಗಳಲ್ಲಿ ಕಲಾಹಿನ್ನೆಲೆಯನ್ನು ಬಿಂಬಿಸಲಾಗಿದೆ. ಕುತುಬ್‌ಮಿನಾರ್ ಕವನದಲ್ಲಿ ಅದರ ಸ್ಥಾಪಕ, ಅದರ ವಾಸ್ತುವಿನ್ಯಾಸ, ಸೌಂದರ್ಯ ಹೇಳಿದ್ದಾರೆ. ಅಜಂತಾ ಗವಿಗಳ ಭಿತ್ತಿಚಿತ್ರಗಳ ರಚನಾಕ್ರಮ, ವಸ್ತುವಿಷಯ, ಸೌಂದರ್ಯ, ಬಣ್ಣಗಾರಿಕೆಗಳನ್ನು ಹೇಳಿದೆ. ಅಂತೆಯೇ ಎಲ್ಲೋರಾದ ಶಿಲ್ಪ ಮತ್ತು ಚಿತ್ರಗಳನ್ನು ಕವನ ರೂಪದಲ್ಲಿ ಅಭಿವ್ಯಕ್ತಪಡಿಸಲಾಗಿದೆ.

**ತಮಿಳುನಾಡಿನಲ್ಲಿ ಚಿತ್ರಕಲೆ :**

ಪ್ರವಾಸ ಸಾಹಿತ್ಯ ಹಿನ್ನೆಲೆಯಲ್ಲಿ ತಮಿಳುನಾಡು ರಾಜ್ಯವನ್ನು ಸಂದರ್ಶಿಸಿ ಅ.ಲ.ನರಸಿಂಹನ್ ಅವರು ಈ ಪುಸ್ತಕ ಮಾಡಿದ್ದಾರೆ.[೫೧] ಈ ಪುಸ್ತಕವು ತಮಿಳುನಾಡು ಪ್ರದೇಶದ ಚಿತ್ರಕಲೆಯ ಬಗ್ಗೆ ಸ್ಥೂಲವಾದ ಪರಿಚಯವನ್ನು ನೀಡುತ್ತದೆ. ಇಲ್ಲಿ ತಮಿಳುನಾಡು ಪ್ರದೇಶದ ಚಿತ್ರಕಲೆಯ ಹಲವು ಅಂಶಗಳು ಹೇಳಲ್ಪಟ್ಟಿವೆ. ಈ ರಾಜ್ಯದ ಚಿತ್ರಕಲೆ, ಅದರಲ್ಲಿ ಪ್ರಾಗಿತಿಹಾಸ ಕಾಲದ ಚಿತ್ರಕಲೆ, ಅವು ಕಂಡುಬರುವ ನೆಲೆಗಳು ಮತ್ತು ವಸ್ತುವಿಷಯಗಳನ್ನು ತಿಳಿಸಲಾಗಿದೆ. ನಂತರ ಪ್ರಾಚೀನ ಚಿತ್ರಕಲೆಯ ಪರಂಪರೆಯು ಬೆಳೆದುಬಂದ ರೀತಿ, ಇಲ್ಲಿನ ಪ್ರಾಚೀನ ಚಿತ್ರಪರಂಪರೆಯಲ್ಲಿ ಕಂಡುಬರುವ ಭಿತ್ತಿಚಿತ್ರಗಳು, ಕಿರುರೂಪ ಚಿತ್ರಗಳು, ಜನಪದ ಚಿತ್ರಗಳು, ಕಲಾಪರಂಪರೆಯನ್ನು ಪ್ರೋತ್ಸಾಹಿಸಿದ ಅರಸರು, ಅವರ ಪ್ರೋತ್ಸಾಹದ ಅಡಿಯಲ್ಲಿ ರಚಿತವಾದ ಚಿತ್ರಕೃತಿಗಳು ಹೀಗೆ ಅನೇಕ ಸಂಗತಿಗಳನ್ನು ಹೇಳಲಾಗಿದೆ.

ಈ ಪ್ರದೇಶದ ಚಿತ್ರಕಲೆಯು ಕ್ರಿ.ಶ.೬ನೇ ಶತಮಾನದಲ್ಲಿ ಪಲ್ಲವರ ಕಾಲದಲ್ಲಿಯೇ ಉಚ್ಚಮಟ್ಟವನ್ನು ತಲುಪಿತ್ತು ಎಂದು ತಿಳಿಸುತ್ತಾರೆ. ಜೊತೆಗೆ ಆ ಕಾಲದ ಚಿತ್ರಗಳು ಕಂಡುಬಂದ ನೆಲೆಗಳ ಬಗ್ಗೆ ವಿವರಿಸಿದ್ದಾರೆ. ಕಂಚಿಯ ಕೈಲಾಸನಾಥ ದೇವಾಲಯದಲ್ಲಿ ಇವರ ಕಾಲದ ಚಿತ್ರಗಳಿದ್ದು ಮಹೇಂದ್ರವರ್ಮನ ಕಾಲದಲ್ಲಿ ಇವು ರಚನೆಯಾಗಿವೆ. ಚೋಳ ದೊರೆಗಳ ಕಾಲದ ಚಿತ್ರಗಳು ಈ ರಾಜ್ಯದಲ್ಲಿದ್ದು, ತಂಜಾವೂರಿನ ಬೃಹದೀಶ್ವರ ದೇವಾಲಯದಲ್ಲಿ ಕಂಡು ಬರುತ್ತವೆ. ವಿಜಯನಗರ ಅರಸರ ಹೆಚ್ಚಿನ ಚಿತ್ರಗಳು ತಮಿಳುನಾಡು ರಾಜ್ಯದಲ್ಲಿ ಕಂಡುಬಂದಿವೆ. ತಮಿಳುನಾಡು ರಾಜ್ಯದಲ್ಲಿ ಎಲ್ಲೆಲ್ಲಿ ವಿಜಯನಗರ ಕಾಲದ ಚಿತ್ರಗಳಿವೆ ಎಂಬ ವಿವರವಾದ ಪಟ್ಟಿಯನ್ನು ಕೊಡಲಾಗಿದೆ. ಆಮೇಲೆ ನಾಯಕ ಅರಸರು ಈ ಪ್ರದೇಶವನ್ನು ಕಲಾಮಯವನ್ನಾಗಿ ಮಾಡಿದ್ದಾರೆ. ಆಧುನಿಕ ಕಲೆಯಲ್ಲಿ ಈ ರಾಜ್ಯದ ಪಾತ್ರವನ್ನು ಹೇಳುವಾಗ ಈ ರಾಜ್ಯದ ಪ್ರಮುಖ ಕಲಾವಿದರು, ಕಲಾಕೃತಿಗಳು, ಕಲಾಶಾಲೆಗಳು, ಕಲಾಸಂಸ್ಥೆಗಳು, ಕಲಾಗ್ಯಾಲರಿಗಳು, ರಾಜ್ಯದ ಕಲಾಅಕಾಡಮಿ, ಅದು ನಡೆಸುವ ಕಲಾಚಟುವಟಿಕೆಗಳು ಹೀಗೆ ವಿವಿಧ ವಿಷಯಗಳನ್ನು ಈ ಪುಸ್ತಕದಲ್ಲಿ ಸ್ಥೂಲ ರೂಪದಲ್ಲಿ ಹೇಳಲಾಗಿದೆ.

---

೫೧. ಅ.ಲ.ನರಸಿಂಹನ್ : ತಮಿಳುನಾಡಿನಲ್ಲಿ ಚಿತ್ರಕಲೆ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೨

**ಕೇರಳದ ವರ್ಣಚಿತ್ರಲೋಕ :**

ಕರ್ನಾಟಕದ ಲಲಿತಕಲಾ ಅಕಾಡಮಿಯು ನಿರ್ಧಿಷ್ಟ ಕಾರ್ಯಕ್ರಮದಡಿಯಲ್ಲಿ ಪ್ರವಾಸ ಕಲಾಸಾಹಿತ್ಯವನ್ನು ರಚನೆಮಾಡಿಸಿದ್ದು, ಆಯಾ ಪ್ರದೇಶಗಳಿಗೆ ಕಲಾಕಾರರು, ಕಲಾ ಬರಹಗಾರರನ್ನು ಕಳುಹಿಸಿ ಈ ಕೆಲಸ ನಿರ್ವಹಿಸಿದೆ. ಈ ಹಿನ್ನೆಲೆಯಲ್ಲಿ ಕೇರಳ ರಾಜ್ಯಕ್ಕೆ ಸಂಬಂಧಿಸಿದಂತೆ ವೆಂಕಟರಾಜ, ಪುಣಿಚಿತ್ತಾಯ ಮತ್ತು ಪಿ.ಎಸ್.ಪುಣಿಚಿತ್ತಾಯ ಬಂಧುಗಳು ಪ್ರವಾಸ ಕಲಾ ಸಾಹಿತ್ಯವನ್ನು ರಚಿಸಿದ್ದಾರೆ.[೫೭] ಕೇರಳ ಪ್ರಾಂತ್ಯದ ಕಲಾ ವಾತಾವರಣವನ್ನು ಸ್ಥೂಲವಾಗಿ ತಿಳಿಸಿಕೊಡುವ ಈ ಪುಸ್ತಕದಲ್ಲಿ ಆ ಪ್ರದೇಶದ ಕಲೆಯ ಬಗ್ಗೆ ಹಲವು ವಿಷಯಗಳು ಬಿಂಬಿತಗೊಂಡಿವೆ.

ಮುಖ್ಯವಾಗಿ ಈ ರಾಜ್ಯದ ಪ್ರಾಚೀನ ಚಿತ್ರಪರಂಪರೆ, ಅದರ ಐತಿಹಾಸಿಕ ಹಿನ್ನೆಲೆ, ಪಾರಂಪರಿಕ ಚಿತ್ರಕಲೆಗೆ ಪ್ರೋತ್ಸಾಹ ನೀಡಿದ ಅರಸರು, ಶ್ರೀಮಂತ ವರ್ಗದವರು, ಅಧಿಕಾರಿಗಳು, ಆ ಪ್ರದೇಶದ ಧಾರ್ಮಿಕ ಚಿತ್ರಕಲೆಯ ಸ್ವರೂಪ, ಪ್ರಾಚೀನ ಕಲಾಶೈಲಿಗಳನ್ನು ಕುರಿತು ಹೇಳಲಾಗಿದೆ. ಜೊತೆಗೆ ಈ ಭಾಗದ ಪ್ರಾಚೀನ ಭಿತ್ತಿಚಿತ್ರಗಳು, ಕಿರುರೂಪ ಚಿತ್ರಗಳು, ಜನಪದ ಚಿತ್ರಗಳು, ಮಧ್ಯಯುಗೀನ ಚಿತ್ರಗಳು, ಆಧುನಿಕ ಚಿತ್ರಕಲೆಯಂತಹ ವಿಷಯಗಳ ಬಗ್ಗೆ ಹೇಳಿದೆ. ಅಲ್ಲದೆ ಅಲ್ಲಿನ ಪ್ರಾಚೀನ ಚಿತ್ರಗಳ ರಚನಾಕ್ರಮ, ಪರಿಕರಗಳು, ಮಾಧ್ಯಮಗಳು, ಚಿತ್ರದ ನೆಲೆಗಳು, ಪ್ರಾಚೀನ ಕಲಾಕಾರರ ಬಗ್ಗೆ ವಿವರಿಸಿದೆ. ಸಮಕಾಲೀನ ಕಲಾಕ್ಷೇತ್ರದಲ್ಲಿ ಕೇರಳ ರಾಜ್ಯದ ಪಾತ್ರವನ್ನು ಬಿಂಬಿಸುವಲ್ಲಿ ಹಲವು ವಿಷಯಗಳ ಬಗ್ಗೆ ಮಾಹಿತಿ ಕೊಡಲಾಗಿದೆ. ಈ ಪ್ರದೇಶದ ಸಮಕಾಲೀನ ಕಲಾವಿದರು, ಅವರ ಕಲಾಶೈಲಿ ಮತ್ತು ಕಲಾಕೃತಿಗಳು, ಕಲಾಸಂಸ್ಥೆಗಳು, ಅವು ನಡೆಸುವ ಕಲಾಚಟುವಟಿಕೆಗಳು, ಈ ರಾಜ್ಯದ ಕಲಾ ಅಕಾಡಮಿ, ಅದು ಹಮ್ಮಿಕೊಳ್ಳುವ ಕಲೆಯ ಕುರಿತ ಕಾರ್ಯಗಳು, ಈ ರಾಜ್ಯದ ಪ್ರಸಿದ್ಧ ಚಿತ್ರಕಲಾ ಗ್ಯಾಲರಿಗಳು, ಈ ರಾಜ್ಯದ ಪ್ರಾದೇಶಿಕ ಕಲಾಶೈಲಿಗಳು, ಅವುಗಳಲ್ಲಿನ ಭಿನ್ನತೆಗಳು, ಈ ರಾಜ್ಯದ ಕಲೆಯ ಮೇಲೆ ಬೀರಿದ ಅನ್ಯಪ್ರಾಂತಗಳ ಪ್ರಭಾವ, ಈ ಪ್ರದೇಶ ಬೇರೆ ರಾಜ್ಯದ ಮೇಲೆ ಉಂಟುಮಾಡಿದ ಪರಿಣಾಮಗಳು ಹೀಗೆ ಹತ್ತು ಹಲವು ವಿಷಯಗಳು ಈ ಪುಸ್ತಕದಲ್ಲಿ ಬಿಂಬಿಸಲ್ಪಟ್ಟಿವೆ.

**ಮಧ್ಯಪ್ರದೇಶದ ಮಡಿಲಲ್ಲಿ :**

ಕಲಾಸಾಹಿತ್ಯದಲ್ಲಿ ಪ್ರವಾಸ ಸಾಹಿತ್ಯವು ತೀರಾ ವಿರಳವೆಂದೇ ಹೇಳಬಹುದು. ರಾಜ್ಯ ಲಲಿತಕಲಾ ಅಕಾಡಮಿಯು ಈ ನಿಟ್ಟಿನಲ್ಲಿ ಸ್ವಲ್ಪಮಟ್ಟಿನ ಕೆಲಸ ಮಾಡಿ ಐದಾರು ಪುಸ್ತಕಗಳನ್ನು ಬರೆಸಿದೆ. ಆಯ್ದ ವಿದ್ವಾಂಸರನ್ನು ನಿರ್ಧಿಷ್ಟ ಸ್ಥಳಗಳಿಗೆ ಧನಸಹಾಯದೊಂದಿಗೆ ಕಳುಹಿಸಿ ಆ ಪ್ರದೇಶದ ಕಲೆಯ ಬಗ್ಗೆ ಕಿರುಪುಸ್ತಕವನ್ನು ಬರೆಸಿದೆ. ಇದಲ್ಲದೆ ಪಿ.ಆರ್.ತಿಪ್ಪೇಸ್ವಾಮಿ, ಶಂಕರ ಪಾಟೀಲ, ಡಿ.ವಿ.ಹಾಲಭಾವಿ ಮತ್ತು ಕೃಷ್ಣಾನಂದ ಕಾಮತ್ ಮುಂತಾದವರು ತಾವು ಪ್ರವಾಸ ಮಾಡಿದ ಸ್ಥಳಗಳ ಬಗ್ಗೆ ಕೆಲವು ಪ್ರವಾಸ ಕಲಾಸಾಹಿತ್ಯವನ್ನು ರಚನೆಮಾಡಿದ್ದಾರೆ. ಪ್ರಸ್ತುತ ಕೃತಿಯು ಡಾ. ಕೃಷ್ಣಾನಂದ ಕಾಮತ್ ಅವರು ಮಧ್ಯಪ್ರದೇಶದ ಪ್ರವಾಸಮಾಡಿ ರಚನೆ ಮಾಡಿದ ಪುಸ್ತಕವಾಗಿದ್ದು,[೫೮] ಇದರಲ್ಲಿ ಆ ಪ್ರದೇಶದ ಕಲೆಯನ್ನು ಮುಖ್ಯವಾಗಿ ಪರಿಗಣಿಸಲಾಗಿದೆ. ಈ ಪುಸ್ತಕದಲ್ಲಿ ಕೇವಲ ಕಲೆಯನ್ನು ಮಾತ್ರ ಪರಿಗಣಿಸಿಲ್ಲ. ಆಯಾ ಪ್ರದೇಶದ ಜನಜೀವನ, ಸಂಸ್ಕೃತಿ, ರೀತಿ-ನೀತಿ, ಧಾರ್ಮಿಕ ಆಚರಣೆ, ವಿಧಿ-ಕ್ರಿಯೆಗಳು ಮುಂತಾದ ಸಂಗತಿಗಳನ್ನು ಹೇಳುವಾಗ ಅವರ ಕಲೆಯನ್ನು ಪರಿಗಣಿಸಲಾಗಿದೆ.

---

೫೭. ವೆಂಕಟರಾಜ, ಪುಣಿಚಿತ್ತಾಯ ಮತ್ತು ಪಿ.ಎಸ್.ಪುಣಿಚಿತ್ತಾಯ : ಕೇರಳದ ವರ್ಣಚಿತ್ರಲೋಕ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೩

೫೮. ಡಾ. ಕೃಷ್ಣಾನಂದ ಕಾಮತ್ : ಮಧ್ಯಪ್ರದೇಶ ಮಡಿಲಲ್ಲಿ : ಪುಸ್ತಕಾಲಯ ಪ್ರಕಾಶನ, ಜಯನಗರ, ಬೆಂಗಳೂರು-೧೯೯೩

ಒಟ್ಟು ಇಪ್ಪತ್ತನಾಲ್ಕು ಅಧ್ಯಾಯಗಳಲ್ಲಿ ಹರಡಿಕೊಂಡಿರುವ ಇಲ್ಲಿನ ವಿಷಯ ವ್ಯಾಪ್ತಿಯು ಮಧ್ಯಪ್ರದೇಶದ ಕಲಾ ವಾತಾವರಣದ ಸ್ಥೂಲ ಪರಿಚಯವನ್ನು ಮಾಡಿಕೊಡುತ್ತದೆ. ವಿವಿಧ ಬಗೆಯ ತಲೆಬರಹಗಳನ್ನು ಕೊಟ್ಟು ವಿಷಯಗಳನ್ನು ನಿರೂಪಿಸಲಾಗಿದೆ. ಯಾವ ಊರು?, ಕೀರ್ತಿಯ ಹಾದಿಯಲ್ಲಿ, ಕಲಾಂಕನ, ಚಕ್ಕರ್ ರಸ್ತೆ, ಪವಾಡ, ಜಾಮುನ ಜರಿ, ವಿಂಗಡದ ಗುಡಿ, ಜಾಂದಾ ಮೇಟಾ, ಮಾಂಜರೆಕರ್ ಕುಟುಂಬ, ನಾಗದ್ವಾರ, ರಾಣಿ ರೂಪಮತಿಯ ಮಾಂಡುನಗರ, ಜಟಾಶಂಕರ, ಭಿಲ್ಲರ ಹೋಳು, ಚಂದೇಲರ ಹಳ್ಳಿಯಲ್ಲಿ, ಚಕಡಾ ಓಟ, ಪಿಪರಿಯಾ ಪ್ರದೇಶ, ಆದಿವಾಸಿಗಳ ಹಚ್ಚೆ, ಘರೇವಾ ಕಲೆ, ಆದಿವಾಸಿ ಕಲೆ, ಗೊಂಡರು, ನರ್ಮದೆಯ ದಂಡೆ, ಕೊರ್ಕು ಜನಾಂಗ, ಮಾವಾಶಿಯರ ಜನಾಂಗ ಮತ್ತು ಆದಿವಾಸಿಗಳ ಸ್ಮಾರಕ ಎಂಬ ಅಧ್ಯಾಯಗಳಲ್ಲಿ ವಿಷಯ ನಿರೂಪಣೆಯಾಗಿದೆ.

ಮಧ್ಯಪ್ರದೇಶದ ಗ್ರಾಮೀಣ ಜನರ ಮೌಢ್ಯತೆ, ಅಲ್ಲಿನ ರಸ್ತೆ ಬದಿಯ ಚಹಾ ಅಂಗಡಿಗಳ ಸ್ಥಿತಿಗತಿ, ಗ್ರಾಮ ಜೀವನದ ರೀತಿ-ನೀತಿಗಳು, ವಸತಿ ಗೃಹಗಳ ವ್ಯವಸ್ಥೆ, ಆದಿವಾಸಿ ಸಂಶೋಧನಾಲಯಗಳನ್ನು ಕುರಿತು ಮೊದಲ ಭಾಗದಲ್ಲಿ ಹೇಳಿದ್ದಾರೆ. ಆ ಪ್ರದೇಶದ ಗ್ರಾಮೀಣ ಸಂತೆ, ಫೋಟೋ ಸ್ಟುಡಿಯೋ, ಕೆಲಸಗಾರರ ಕಲಾಭಿರುಚಿ, ಆದಿವಾಸಿಗಳ ವಸ್ತುಸಂಗ್ರಹಾಲಯ, ಜಲಪಾತಗಳ ಬಗ್ಗೆ ಮತ್ತೊಂದು ಭಾಗದಲ್ಲಿ ವಿವರಿಸಿದ್ದಾರೆ. ಅದರ ಜೊತೆಗೆ ಪ್ರಾಸಂಗಿಕವಾಗಿ ಅಲ್ಲಲ್ಲಿ ಕಲೆಯ ಕುರಿತು ಹೇಳಲಾಗಿದೆ. ಮಾಂಡುವಿನಲ್ಲಿರುವ ಭವ್ಯವಾದ, ಕಲಾತ್ಮವಾದ ಅರಮನೆ, ಅದರ ವಾಸ್ತುಶಿಲ್ಪ ಮತ್ತು ಚಿತ್ರಕಲೆಯ ಬಗ್ಗೆ ಹೇಳಿದೆ. ಮುಖ್ಯವಾಗಿ ಇಲ್ಲಿ ಚಂದೇಲ ಅರಸರ ಪ್ರಖ್ಯಾತ ದೇವಾಲಯಗಳನ್ನು ಅವುಗಳಲ್ಲಿನ ಮಿಥುನ ಶಿಲ್ಪಗಳ ಶೈಲಿ, ಪ್ರಕಾರಗಳನ್ನು ಕುರಿತು ಹೇಳಿರುವುದು ಗಮನಾರ್ಹವಾಗಿದೆ. ಖಜುರಾಹೋದ ಈ ಪ್ರಖ್ಯಾತ ದೇವಾಲಯಗಳು ವಿಶ್ವಪ್ರಸಿದ್ಧವಾಗಿದ್ದು, ಆ ರಾಜ್ಯದ ಪ್ರಮುಖ ಕಲಾ ಕೊಡುಗೆಗಳಾಗಿವೆ. ಪ್ರಾಗಿತಿಹಾಸ ಕಾಲದ ಚಿತ್ರಕಲೆಗೂ ಈ ಪ್ರದೇಶ ಖ್ಯಾತವಾಗಿದೆ. ಈ ಪುಸ್ತಕದಲ್ಲಿ ಪಿಪಾರಿಯಾ, ಮಹದೇವ ಬೆಟ್ಟ, ಮಚ್ಚಮರಿ, ಭಿಂಬೆಟ್ಕಾ ಪ್ರದೇಶದ ಬಂಡೆ ಚಿತ್ರಗಳನ್ನು ಪರಿಶೀಲಿಸಲಾಗಿದೆ. ಬಸ್ತರ್ ಜಿಲ್ಲೆಯ ಹಿತ್ತಾಳೆಯ ವಿಗ್ರಹ ತಯಾರಿಸುವ ಘರೇವಾ ಕಲೆ, ಆದಿವಾಸಿ ಜನಾಂಗಗಳಲ್ಲಿ ಪ್ರಚಲಿತದಲ್ಲಿರುವ ಚಿತ್ರಕಲೆಯನ್ನು ಸಹಿತ ಇಲ್ಲಿ ಪ್ರಸ್ತಾಪಿಸಲಾಗಿದೆ.

ಪ್ರಸ್ತುತ ಪುಸ್ತಕವು ಕಲೆಯ ಅನೇಕ ವಿಚಾರಗಳನ್ನು ತಿಳಿಸಿಕೊಡುವಲ್ಲಿ ಸಫಲವಾಗಿದೆ. ಪ್ರವಾಸ ಸಾಹಿತ್ಯವಾದರೂ ಅದನ್ನು ಓದುತ್ತಾ ಹೋದಂತೆ ಆ ಪ್ರದೇಶದ ಕಲೆಯ ವಾತಾವರಣವು ಕಣ್ಮುಂದೆ ನಿಂತಂತೆ ಭಾಸವಾಗುತ್ತದೆ. ಉತ್ತಮ ಬರವಣಿಗೆ ಶೈಲಿ, ಶಬ್ದ ಜೋಡಣೆ, ವಿಷಯದ ಬಗೆಗಿರುವ ಆಳವಾದ ಜ್ಞಾನ, ಪೂರಕ ಅನ್ಯ ಶಿಸ್ತುಗಳ ಬಗೆಗಿರುವ ಅರಿವು ಇವುಗಳಿಂದ ಸಾಧ್ಯವಾಗುತ್ತದೆ. ಕನ್ನಡದ ಕಲಾ ಸಾಹಿತ್ಯದಲ್ಲಿ ಪ್ರವಾಸ ಸಾಹಿತ್ಯದ ಹಿನ್ನೆಲೆಯಲ್ಲಿ ಇದೊಂದು ಗಮನಾರ್ಹ ಕೃತಿಯಾಗಿದೆ ಎನ್ನಬಹುದು.

**ಕಲಾವಿದ ಕಂಡ ಫ್ರಾನ್ಸ್ :**

ಪಿ.ಆರ್. ತಿಪ್ಪೇಸ್ವಾಮಿಯವರು ಹಲವು ದೇಶಗಳನ್ನು ಸುತ್ತಿ ಕಲೆಯ ಬಗೆಗೆ ಜ್ಞಾನವನ್ನು ಸಂಪಾದಿಸಿದವರು. ಮೇಲಾಗಿ ಕೆಲವು ಸಂದರ್ಭಗಳಲ್ಲಿ ತಾವು ಸುತ್ತಿದ ಪ್ರದೇಶಗಳ ಕುರಿತು ಪ್ರವಾಸ ಸಾಹಿತ್ಯವನ್ನು ರಚಿಸಿದವರಾಗಿದ್ದಾರೆ. ಪ್ರಸ್ತುತ ಪುಸ್ತಕವು[೫೪] ಇವರ ಫ್ರಾನ್ಸ್ ದೇಶದ ಪ್ರವಾಸ ಕುರಿತಾಗಿದೆ.

---

೫೪. ಪಿ.ಆರ್.ತಿಪ್ಪೇಸ್ವಾಮಿ : ಕಲಾವಿದ ಕಂಡ ಫ್ರಾನ್ಸ್ : ಮಯೂರ ಪಬ್ಲಿಕೇಷನ್ಸ್, ಬೆಂಗಳೂರು-೧೯೯೪

ಭುವನೇಶ್ವರಿ ಯಕ್ಷಗಾನ ಸೂತ್ರದ ಗೊಂಬೆಯಾಟದ ತಂಡದ ನಾಯಕನಾಗಿ ಮುಂಬೈಯಿಂದ ಫ್ರಾನ್ಸ್‌ಗೆ ತೆರಳಿದರು. ಅಲ್ಲಿ ತಾವು ಕಂಡುಂಡ ಅನುಭವಗಳನ್ನು ಕಲಾವಿಚಾರಗಳನ್ನು ಬರಹದ ರೂಪದಲ್ಲಿ ಕೊಟ್ಟಿದ್ದಾರೆ. ಫ್ರಾನ್ಸ್ ದೇಶದ ಹಳ್ಳಿಯೊಂದರಲ್ಲಿ ಇವರ ತಂಡದ ಪ್ರಥಮ ಪ್ರದರ್ಶನವನ್ನ ಏರ್ಪಡಿಸಲಾಗಿತ್ತು. ಅಲ್ಲಿ ರಾಮಾಯಣದ ಪ್ರಸಂಗವನ್ನು ಇವರ ತಂಡವು ಪ್ರದರ್ಶಿಸಿತು. ಸೂತ್ರದ ಗೊಂಬೆಗಳ ಶೈಲಿ, ಆಕಾರ, ಕುಣಿಸುವ ಚಾಕಚಕ್ಯತೆ, ಪಾತ್ರಗಳಿಗೆ ಅನುಸಾರವಾಗಿ ಸಂಗಡಿಗರು ಸಂಭಾಷಣೆ ಮಾಡುವುದು ಮತ್ತು ಹಾಡು ಹಾಡುವುದು, ಇವುಗಳಿಗೆ ಪೂರಕವಾಗಿ ಸಂಗೀತ ಸಂಯೋಜಿಸುವುದು ಮುಂತಾದ ಅಂಶಗಳು ಅಲ್ಲಿನ ಜನರಿಗೆ ಬಹಳ ಮೆಚ್ಚಿಗೆಯಾದವು. ಹಲವರು ಸ್ವತಹ ಬಂದು ಗೊಂಬೆಗಳನ್ನು ಮುಟ್ಟಿ ನೋಡಿ ಹೋದರು. ಈ ಕಲಾತ್ಮಕ ಆಟದ ಬಗ್ಗೆ ಹೆಚ್ಚಿನ ಜನರು ಆಸಕ್ತಿ ವಹಿಸಿದರು ಎಂದು ಹೇಳುತ್ತಾರೆ.

ಆ ದೇಶದ ಸ್ವಚ್ಚತೆ, ಶಿಸ್ತು, ನಿಯಮಪಾಲನೆಗೆ ಬಹಳ ಮಹತ್ವವಿದೆ ಎಂಬುದಾಗಿ ತಿಳಿಸುತ್ತಾರೆ. ಅಲ್ಲಿ ಕಸಗೂಡಿಸುವ ವ್ಯಕ್ತಿ ಮತ್ತು ಅವನ ಕಲಾಕೃತಿಗಳು, ಆ ಪ್ರದೇಶದ ಕಲಾಶೈಲಿಗಳು, ಪ್ರಾಚೀನ ಕಲಾಪರಂಪರೆ ಮುಂತಾದ ಸಂಗತಿಗಳನ್ನು ಕುರಿತು ಬರೆದಿದ್ದಾರೆ. ಅಲ್ಲದೆ ಅಲ್ಲಿನ ಪ್ರಮುಖ ಕಲಾಗ್ಯಾಲರಿಗಳು, ಪ್ರಾಕೃತಿಕ ಸೌಂದರ್ಯ, ನಗರಜೀವನ, ಅಲ್ಲಿನ ಜನರ ಕಲಾಬದುಕು, ಅವರು ಕಲೆಗೆ ಕೊಡುವ ಪ್ರೋತ್ಸಾಹ, ಸಾಮಾಜಿಕ ನೆಲೆಯಲ್ಲಿ ಕಲೆಯನ್ನು ಕುರಿತ ಚರ್ಚೆಗಳು ಹೀಗೆ ಹಲವಾರು ಸಂಗತಿಗಳನ್ನು ತಿಳಿಸಿಕೊಟ್ಟಿದ್ದಾರೆ. ಭಾರತದಿಂದ ಹೊರಡುವ ಹಂತದಿಂದ ತಿರುಗಿ ಬರುವವರೆಗೆ ತಮಗಾದ ಅನುಭವಗಳನ್ನು ವಿಮಾನ ಪ್ರಯಾಣದ ರೋಚಕ ಸಂಗತಿಗಳ ಜೊತೆಗೆ ವಿವರಿಸಿದ್ದಾರೆ. ಫ್ರಾನ್ಸ್ ದೇಶದ ಕಲಾವಾತಾವರಣ ಸ್ಥೂಲವಾಗಿ ತಿಳಿದುಕೊಳ್ಳಲು ಈ ಕೃತಿ ಸಹಕಾರಿಯಾಗಿದೆ.

**ಮಧ್ಯಪ್ರದೇಶ ಕಲೆ :**

ಮಧ್ಯಪ್ರದೇಶದ ಕಲೆ ಪುಸ್ತಕವು ಪ್ರವಾಸ ಕಲಾಸಾಹಿತ್ಯದ ಹಿನ್ನೆಲೆಯಲಲ್ಲಿ ಕೆ.ವಿ.ಸುಬ್ರಹ್ಮಣ್ಯಂರಿಂದ ರಚನೆಯಾಗಿದೆ.[೫೫] ಮಧ್ಯಪ್ರದೇಶದ ಕಲೆ ಬಗ್ಗೆ ಅನೇಕ ವಿಷಯಗಳು ಹೇಳಲ್ಪಟ್ಟಿವೆ. ಮಧ್ಯಪ್ರದೇಶವು ಕಲೆಯ ದೃಷ್ಟಿಯಿಂದ ಸಂಪದ್ಭರಿತ ಪ್ರದೇಶವಾಗಿದ್ದರು ಇಲ್ಲಿ ಅನೇಕ ಕಲಾಪ್ರಕಾರಗಳು ವಿಶೇಷವಾಗಿ ಬೆಳೆದಿವೆ. ಆದಿಮಾನವ ಕಾಲದ ಗುಹಾಚಿತ್ರಗಳು, ಐತಿಹಾಸಿಕ ಕಾಲದ ಶಿಷ್ಟಭಿತ್ತಿಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಜನಪದ ಚಿತ್ರಕಲೆ, ಆದಿವಾಸಿ ಬುಡಕಟ್ಟು ಜನರ ಚಿತ್ರಕಲೆ, ಆಧುನಿಕ ಕಲಾಪರಂಪರೆ, ಪ್ರಖ್ಯಾತ ಕಲಾಶಾಲೆಗಳು, ಕಲಾವಿದರು ಹೀಗೆ ಕಲೆಯ ಗುಚ್ಚವೇ ಇಲ್ಲಿದೆ. ಇವೆಲ್ಲವುಗಳ ಬಗ್ಗೆ ಸಾಧ್ಯವಾದಷ್ಟು ಮಟ್ಟಿಗೆ ಮಾಹಿತಿ ನೀಡಲು ಪ್ರಯತ್ನಿಸಿದ್ದಾರೆ.ಪ್ರಾಗಿತಿಹಾಸ ಕಾಲದ ಬಂಡೆಚಿತ್ರಗಳು ಮತ್ತು ಗುಹಾಚಿತ್ರಗಳಿಗೆ ಈ ರಾಜ್ಯ ಪ್ರಖ್ಯಾತವಾಗಿದೆ. ಭಾರತದಲ್ಲಿಯೇ ಅತಿ ಹೆಚ್ಚು ಇಂತಹ ಚಿತ್ರಗಳನ್ನು ಹೊಂದಿದ ಭಿಂಭೇಟ್ಕಾ ಪ್ರದೇಶ ಇಲ್ಲಿದೆ. ಇದರ ಜೊತೆಗೆ ಇನ್ನಿತರ ನೆಲೆಗಳನ್ನು ಹೆಸರಿಸಲಾಗಿದೆ. ವಾಸ್ತುಶಿಲ್ಪ ಮತ್ತು ಶಿಲೊಕಲೆಯಲ್ಲಿ ಸಾಂಚಿಯು ಕಲಾತ್ಮಕ ಸ್ತೂಪ, ಖಜುರಾಹೋದಲ್ಲಿನ ವಿಶ್ವವಿಖ್ಯಾತ ದೇವಾಲಯಗಳು, ಅಲ್ಲಿನ ಲೈಂಗಿಕ ಶಿಲ್ಪಗಳ ಕುರಿತಾಗಿ ಮಾಹಿತಿ ನೀಡಲಾಗಿದೆ. ಅದರಂತೆ ಶಿಷ್ಟ ಸಂಪ್ರದಾಯದ ಪ್ರಾಚೀನ ಭಿತ್ತಿಚಿತ್ರಗಳಲ್ಲಿ ಓರ್ಛಾಲಕ್ಷ್ಮೀ ನಾರಾಯಣ ದೇವಲಯದ ಚಿತ್ರಗಳು, ಉದಯಗಿರಿ ಮತ್ತು ಖಾಂಡಗಿರಿ ಗುಹಾಲಯಗಳಲ್ಲಿನ ಚಿತ್ರಗಳ ಬಗ್ಗೆ ಹೇಳಲಾಗಿದೆ.

೫೫. ಕೆ.ವಿ.ಸುಬ್ರಹ್ಮಣ್ಯಂ : ಮಧ್ಯಪ್ರದೇಶ ಕಲೆ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೫

ಮತ್ತು ಇನಿತರ ನೆಲೆಗಳನ್ನು ಹೆಸರಿಸಾಗಿದೆ. ನಂತರ ಬಸ್ತಾರ್‌ನ ಆದಿವಾಸಿಕಲೆ, ವಿವಿಧ ಪ್ರದೇಶದ ಜನಪದ ಚಿತ್ರಗಳು ಸ್ಥೂಲವಾಗಿ ಹೇಳಲ್ಪಟ್ಟಿವೆ. ಇವುಗಳ ಜೊತೆಗೆ ಭಾರತಭವನ, ಇಂದಿರಾಗಾಂಧಿ ರಾಷ್ಟ್ರೀಯ ಸಂಗ್ರಹಾಲಯ, ರಾಜ್ಯದ ಪ್ರಮುಖ ಕಲಾಶಾಲೆಗಳು, ಕಲಾಗ್ಯಾಲರಿಗಳು, ಅಕಾಡಮಿ ಕುರಿತಾಗಿ ವಿವರಿಸಲಾಗಿದೆ. ಹಾಗೆಯೇ ಪ್ರಮುಖ ಕಲಾವಿದರಾದ ಎನ್.ಎಸ್.ಬೇಂದ್ರೆ, ಎಸ್.ಎಚ್.ರಝಾ ಇವರ ಬಗ್ಗೆ ಹೇಳಿದೆ. ಮತ್ತು ಸಮಕಾಲೀನ ಕಲೆಯಲ್ಲಿ ಈ ರಾಜ್ಯವು ವಹಿಸುತ್ತಿರುವ ಪಾತ್ರ ಕುರಿತು ಸ್ಥೂಲ ನೋಟಕೊಡಲಾಗಿದೆ.

**ಕಲಾವಿದನ ನೆನಪುಗಳು :**

ಕರ್ನಾಟಕದ ಕಲಾವಿದರಲ್ಲಿ ವಿಶಿಷ್ಟಸಾಧನೆ ಮಾಡಿದ ಪಿ.ಆರ್.ತಿಪ್ಪೇಸ್ವಾಮಿಯವರು ಬಹುಮುಖ ವ್ಯಕ್ತಿತ್ವ ಹೊಂದಿದವರಾಗಿದ್ದಾರೆ. ಕಲಾವಿದರಾಗಿರುವಂತೆಯೇ ಕಲಾವಿಮರ್ಶಕರು, ಬರಹಗಾರರು. ಜಾನಪದ ತಜ್ಞರು, ಒಳ್ಳೆಯ ಭಾಷಣಕಾರರು ಹೀಗೆ ವಿವಿಧ ಕ್ಷೇತ್ರಗಳಲ್ಲಿ ಅವರ ಪಾಂಡಿತ್ಯ ಹರಡಿಕೊಂಡಿದೆ. ಅವರು ತಮ್ಮ ಬದುಕಿನಲ್ಲಿ ಅನೇಕ ವಿಷಯಗಳ ಕುರಿತು ಆಗಾಗ ಲೇಖನಗಳನ್ನು ಬರೆಯುತ್ತ ಬಂದಿದ್ದು, ಅವುಗಳಲ್ಲಿ ಕೆಲವು ಪ್ರಸಿದ್ಧ ದಿನಪತ್ರಿಕೆ, ವಾರಪತ್ರಿಕೆ, ಮಾಸಿಕ ಪತ್ರಿಕೆ, ವಿಶೇಷ ಸಂಚಿಕೆಗಳಲ್ಲಿ, ಸ್ಮರಣ ಸಂಚಿಕೆಗಳಲ್ಲಿ ಪ್ರಕಟಗೊಂಡಿವೆ. ಇವರು ಬರೆದ ಹಲವಾರು ಲೇಖನಗಳು ಇನ್ನೂ ಬೆಳಕು ಕಾಣದೆ ಹಾಗೇ ಉಳಿದುಕೊಂಡಿದ್ದವು. ಅಂತಹ ಎಲ್ಲ ಲೇಖನಗಳನ್ನು ಸಂಗ್ರಹಿಸಿ 'ಕಲಾವಿದನ ನೆನಪುಗಳು' ಹೆಸರಿನಲ್ಲಿ ಪ್ರಕಟಿಸಲಾಗಿದೆ.[೫೬] ಪ್ರಸ್ತುತ ಸಂಪುಟದಲ್ಲಿನ ಲೇಖನಗಳು ಒಂದೇ ಕಾಲಮಾನದಲ್ಲಿ ಬರೆದವುಗಳಾಗಿರದೆ ಆಗಾಗ ವಿವಿಧ ಕಾಲಗಳಲ್ಲಿ ತಿಪ್ಪೇಸ್ವಾಮಿಯವರಿಂದ ಬರೆಯಲ್ಪಟ್ಟಿವೆ. ಈ ಸಂಪುಟದಲ್ಲಿ ಒಟ್ಟು ೧೬೦ ಲೇಖನಗಳಿದ್ದು, ಎಲ್ಲವೂ ಕಲೆಗೆ ಸಂಬಂಧಪಟ್ಟವುಗಳಲ್ಲ, ಕಲಾವಿಷಯವಾಗಿರುವ ೬೦ ಲೇಖನಗಳು ಇದರಲ್ಲಿವೆ. ಮಹಾಯುದ್ಧದ ಪೂರ್ವಕಾಲದಿಂದ ತೊಡಗಿ ತಮ್ಮ ಬಾಳಿನ ಕೊನೆಯವರೆಗೆ ಜೀವನ ಹಾದಿಯಲ್ಲಿ ಎದುರಾದ, ಜೊತೆಯಾಗಿ ನಡೆದುಬಂದ ಅನೇಕ ವ್ಯಕ್ತಿಗಳ ನಿಕಟ ಚಿತ್ರಣ ಇಲ್ಲಿದೆ. ವ್ಯಕ್ತಿಗಳ ಅಂತರಂಗವನ್ನು ಹೊಕ್ಕುನೋಡುವ ಕೆಲಸವನ್ನು ತಿಪ್ಪೇಸ್ವಾಮಿಯವರು ಮಾಡಿದ್ದಾರೆ. ವ್ಯಕ್ತಿಗಳ ದೌರ್ಬಲ್ಯ, ಸಾಮರ್ಥ್ಯ, ಅವರ ಕನಸು, ಹೋರಾಟ, ಸಾಫಲ್ಯ,, ವೈಫಲ್ಯಗಳನ್ನು ಒಕ್ಕಣಿಸಿದ್ದಾರೆ. ಜನಜೀವನಕ್ಕೂ ಇತಿಹಾಸಕ್ಕೂ ಅವರ ಕಾಣಿಕೆ ಏನೆಂಬುದನ್ನು ಹೇಳಿದ್ದಾರೆ. ದಿವಾನ್ ಮಿರ್ಜಾ ಇಸ್ಮಾಯಿಲ್ ನಾಟ್ಯಸರಸ್ವತಿ ಜಟ್ಟಿತಾಯಮ್ಮ, ಗ್ರಾಮಾಯಣದ ರಾವ್‌ಬಹದ್ದೂರ, ರಾಷ್ಟ್ರಪ್ರೇಮಿ ಕಾರ್ಯಪ್ಪ, ಪ್ರಪಂಚದ ಪಾಪು, ದೇಜಗೌ, ಹಾಮಾನಾ, ಕಲಾವಿದ ಹೆಬ್ಬಾರ್, ಧರ್ಮಸ್ಥಳದ ಹೆಗ್ಗಡೆ, ನಿಸಾರ್ ಅಹಮ್ಮದ್, ಮಾಸ್ತಿ ವೆಂಕಟೇಶ, ಬೇಂದ್ರೆ, ಪುಟಿನ್ ಮುಂತಾದವರನ್ನು ಕಂಡು ತಮ್ಮ ಲೇಖನದಲ್ಲಿ ಕಂಡರಿಸಿದ್ದಾರೆ.

ವ್ಯಕ್ತಿಗಳಲ್ಲದೆ ಅವರು ಮಾಡಿದ ಅನೇಕ ಯಾತ್ರೆಗಳು, ಸಂದರ್ಶಿಸಿದ ಸ್ಥಳಗಳು, ಕಲಾಕ್ಷೇತ್ರಗಳ ವರ್ಣನೆ ಇಲ್ಲಿದೆ. ಪ್ಯಾರಿಸ್‌ನಲ್ಲಿ ಅವರು ಕಂಡ ಸುಂದರ ದೃಶ್ಯಗಳನ್ನು ಹಿಡಿದಿಟ್ಟಿದ್ದಾರೆ. ಹಿಮಾಲಯದ ವರ್ಣನೆ, ಕಳೆದುಹೋದ ವೈಭವದ ದಿನಗಳು, ವಿಮಾನ ಯಾತ್ರೆಯ ಅನುಭವ, ತಿರುಪತಿಯಿಂದ ಹೊರಟ ಅನುಭವ, ಸಿದ್ಧರಬೆಟ್ಟದ ಸಾಹಸ, ಮೇಲುಕೋಟೆ ವೈರಮುಡಿ ಉತ್ಸವ, ಬನಶಂಕರಿ ಜಾತ್ರೆ, ಮುಂತಾಗಿ ಅನೇಕಾನೇಕ ವಿಷಯಗಳ ಕುರಿತು ಬರೆದಿದ್ದಾರೆ. ಇವೆಲ್ಲ ಲೇಖನಗಳ ಮಧ್ಯ ಅಲ್ಲಲ್ಲಿ ಕಲಾಸಂಬಂಧಿ ಲೇಖನಗಳೂ ಇವೆ. ಇದರಲ್ಲಿ ಒಂದು ಪ್ರದೇಶದ ಕಲಾಶೈಲಿ, ಕಲಾವಿದ,

೫೬. ಪಿ.ಆರ್.ತಿಪ್ಪೇಸ್ವಾಮಿ : ಕಲಾವಿದನ ನೆನಪುಗಳು : ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು-೧೯೯೬

ಕಲಾಪ್ರಕಾರ, ಪ್ರಾಚೀನ ಪರಂಪರೆ, ಜನಪದ ಚಿತ್ರಕಲೆ, ಆಧುನಿಕ ಕಲೆ, ಹೀಗೆ ಹಲವು ರೀತಿಯಲ್ಲಿ ಕಲಾ ವಿಷಯಗಳ ಲೇಖನಗಳು ಬರೆಯಲ್ಪಟ್ಟಿವೆ. ಕಲಾವಿಷಯದ ಲೇಖನಗಳಲ್ಲಿ ಕಲಾಪ್ರೋತ್ಸಾಹ ವ್ಯಕ್ತಿಗಳ ಬಗ್ಗೆ ಸಹಿತ ಲೇಖನ ಬರೆದಿದ್ದಾರೆ. ಟಿ.ಎಂ.ಪೈ. ಅವರ ಕಲಾಪ್ರೇಮ, ಕಲಾಭಿಮಾನಿ ಬಿ.ಜಿ.ಎಲ್.ಸ್ವಾಮಿ, ಕಲಾಪ್ರೇಮಿ ಕುವೆಂಪು, ಸ್ವಚ್ಚ ಬದುಕಿನ ಕಲಾಪ್ರೇಮಿ ಚದುರಂಗ, ಕಲಾತಜ್ಞ ಮಹಾದೇವಸಿಂಗ್ ಹೀಗೆ ಕಲಾಪ್ರೋತ್ಸಾಹ ನೀಡಿದ ವ್ಯಕ್ತಿಗಳ ಬಗ್ಗೆ ಲೇಖನ ಬರೆದಿದ್ಧಾರೆ.

ಕಲಾವಿದರ ಕುರಿತಾಗಿರುವ ಲೇಖನಗಳಲ್ಲಿ ಪಿಕಾಸೋ, ರೋರಿಚ್, ಬಿ.ಪಿ.ಬಾಯಿರಿ, ಮುರಗೋಡ, ಹೆಬ್ಬಾರ, ರಾಜಶೇಕರ ಕದಂಬ, ಸಂತೋಷ, ರಘೋತ್ತಮ ಪುಟ್ಟು, ಚೌಡರೆಡ್ಡಿ, ಸೋಮಶೇಖರ ಸಾಲಿ, ವೆಂಕಟಾಚಲಂ, ಆರ್.ಎಂ.ಹಡಪದ, ಎಂಎಫ್.ಹುಸೇನ ಅವರ ಬಗೆಗೆ ಬರೆಯಲಾಗಿದೆ. ಕೇವಲ ಚಿತ್ರಕಲಾವಿದರಲ್ಲದೆ ರಂಗಭೂಮಿ ನಟರು, ಸಂಗೀತ ಕಲಾವಿದರು. ಛಾಯಾಚಿತ್ರಗಾರರ ಬಗ್ಗೆಯೂ ಲೇಖನಗಳನ್ನು ಬರೆಯುವ ಮೂಲಕ ತಮ್ಮ ಬಹುಮುಖ ಪ್ರತಿಭೆಯನ್ನು ವ್ಯಕ್ತಪಡಿಸಿದ್ದಾರೆ. ಕಲಾನೆಲೆಗಳು, ಕಲಾಕ್ಷೇತ್ರಗಳು ಮತ್ತು ಪ್ರಾಚೀನ ಭಿತ್ತಿಚಿತ್ರಗಳು, ಶಿಲ್ಪಗಳ ವಿಷಯವಾಗಿರುವ ಲೇಖನಗಳೂ ಈ ಸಂಪುಟದಲ್ಲಿವೆ. ಅವುಗಳಲ್ಲಿ ರಕ್ಷಣೆಗೆ ಇಲ್ಲದ ರಾಜರ ಶಿಲ್ಪಗಳು, ಮೇಲುಕೋಟೆ ದೇವಾಲಯದ ಭಿತ್ತಿಚಿತ್ರಗಳು, ಮಹಾಬಲಿಪುರದ ಶಿಲ್ಪಸೌಂದರ್ಯ, ಬಾದಾಮಿಯ ಗುಹಾಲಯಗಳ ಕಲಾಸೌಂದರ್ಯ, ಕಿನ್ನಾಳ ಕಲಾಪ್ರಕಾರ, ಹೊಯ್ಸಳರ ಬೇಲೂರು-ಹಳೇಬೀಡು ದೇವಾಲಯಗಳು, ಲೇಪಾಕ್ಷಿಯ ಭಿತ್ತಿಚಿತ್ರಗಳು, ಮೈಸೂರು ಸಾಂಪ್ರದಾಯಿಕ ಚಿತ್ರಕಲೆ, ಪ್ಯಾರಿಸ್‌ನಲ್ಲಿ ಮೊನಾಲಿಸಾ, ನಿಪ್ಪಾಣಿ ವಾಡೆಯ ಚಿತ್ರಗಳು, ಆದಿವಾಸಿಗಳ ಚಿತ್ರಗಳು ಎಲಿಫೆಂಟಾ ಗುಹಾಲಯ, ಅಕಾಡಮಿಯ ಕಲಾಪ್ರದರ್ಶನಗಳು, ಹೀಗೆ ಹಲವು ರೀತಿಯ ಕಲಾಲೇಖನಗಳು ಇಲ್ಲಿವೆ. ಈ ಲೇಖನಗಳಲ್ಲಿ ಕಲೆಯ ಬಗೆಗಿನ ಆಂತರಿಕ ವಿಚಾರಗಳು, ತಾಂತ್ರಿಕ ಸಂಗತಿಗಳು ಹೆಚ್ಚು ನಿಖರವಾಗಿ ಮೂಡಿಬಂದಿವೆ. ಕಾರಣ ತಿಪ್ಪೇಸ್ವಾಮಿಯವರು ಸ್ವತಹ ಒಬ್ಬ ಕಲಾವಿದರಾಗಿದ್ದು, ಕಲೆಯ ಒಳ-ಹೊರಗುಗಳನ್ನು ಬಲ್ಲವರಾಗಿದ್ದು, ಪರಿಣಾಮಕಾರಿಯಾಗಿ ಅವುಗಳನ್ನು ಇಲ್ಲಿ ಅಭಿವ್ಯಕ್ತಿಸಿದ್ದಾರೆ.

ಈ ಪುಸ್ತಕವನ್ನು ಅಲೋಕಿಸಿದಾಗ ತಿಪ್ಪೇಸ್ವಾಮಿಯವರ ಬದುಕಿನ ಅನುಭವದ ವೈವಿಧ್ಯ, ವಿಸ್ತಾರಗಳು ಅಚ್ಚರಿಗೊಳಿಸುತ್ತವೆ. ಬದುಕಿನ ಎಲ್ಲ ಭಾಗಗಳಲ್ಲಿ ಕಲಾಅಂಶಗಳನ್ನು ಗುರುತಿಸುವ ಅವರ ಬದುಕೇ ಒಂದು ಕಲಾಕೃತಿಯಾಗಿದೆ. ಇಲ್ಲಿ ಸಾಧನಶೀಲರು, ಬರಹಗಾರರು, ಆಡಳಿತ ಪಟುಗಳು, ಕಲಾವಿದರು, ಧಾರ್ಮಿಕ ವ್ಯಕ್ತಿಗಳು, ಸಾಮಾಜಿಕ ಕಾರ್ಯಕರ್ತರು, ಜೀವನದ ವಿವಿಧ ಕ್ಷೇತ್ರಗಳಲ್ಲಿ ದುಡಿದ ಮಹನೀಯರ ಆಪ್ತ ಚಿತ್ರಣದ ಲೇಖನಗಳಿವೆ. ಪ್ರವಾಸದ ಸ್ವಾರಸ್ಯಕಥನವಿದೆ.ತಿಪ್ಪೇಸ್ವಾಮಿಯವರ ಭಾಷೆ ನಿರಾಡಂಬರ, ಸುಲಲಿತ ಹಾಗೂ ಅರ್ಥವಾಹಕ, ಸುತ್ತು ಬಳಸು, ಸಂದಿಗ್ಧತೆಗಳಿಗೆ ಇಲ್ಲಿ ಅವಕಾಶ ಇಲ್ಲ. ಲೇಖಕರು ಸ್ವತಹ ಉತ್ತಮ ಪ್ರಕೃತಿ ಚಿತ್ರಕಲಾವಿದರಾಗಿರುವುದರಿಂದ ಪ್ರಕೃತಿಯನ್ನು ವರ್ಣಿಸುವಲ್ಲಿ ಪರಿಣಾಮಕಾರಿಯಾದ ಭಾವನೆಯನ್ನು ಬರಹದಲ್ಲಿ ತುಂಬಿದ್ದಾರೆ. ಇದಲ್ಲೆ ಸಂಗೀತ, ಸಾಹಿತ್ಯ, ಸಂಸ್ಕೃತಿ, ಜನಪದ ಮತ್ತು ವಿಮರ್ಶಾ ಕ್ಷೇತ್ರಗಳ ಪರಿಚಯವುಳ್ಳವರಾಗಿದ್ದು, ಇವುಗಳೆಲ್ಲದರ ಅನುಭವ ಪಾಕವನ್ನು ಇಲ್ಲಿನ ಲೇಖನಗಳಲ್ಲಿ ತುಂಬಿ ಸಿಹಿಗೊಳಿಸಿದ್ದಾರೆ. ಕಲಾಲೇಖನಗಳಂತೂ ರಚನಾ ಹಿನ್ನೆಲೆ, ತಂತ್ರಗಾರಿಕೆ, ಸಂಯೋಜನಾ ವಿನ್ಯಾಸ, ವಿಮರ್ಶಾತ್ಮಕ ದೃಷ್ಟಿಕೋನ ಇವುಗಳಿಂದಾಗಿ ಮೌಲಿಕತೆಯನ್ನು ಪಡೆದುಕೊಂಡಿವೆ.

**ಹಿಮಾಚಲದ ಹಿನ್ನೆಲೆಯಲ್ಲಿ ಪ್ರವಾಸ :**

ಈ ಕೃತಿಯು ಶಂಕರ ಪಾಟೀಲರಿಂದ ರಚನೆಯಾಗಿದ್ದು ಸಾಹಿತ್ಯ ಪರಿಷತ್ತಿನ ವತಿಯಿಂದ ಹಿಮಾಚಲ ನಾಡಿಗೆ ಪ್ರವಾಸ ಹೋಗಿಬಂದು ಕೃತಿರಚನೆ ಮಾಡಿದ್ದಾರೆ.[೫೭] ದಾವಣಗೆರೆಯ ಕಲಾಶಾಲೆಯಲ್ಲಿ ಶಿಕ್ಷಕರಾಗಿದ್ದ ಶಂಕರ ಪಾಟೀಲರು ಅನೇಕ ರೀತಿಯ ಕಲಾತ್ಮಕ ಅಂಶಗಳನ್ನು ಇದರಲ್ಲಿ ಕೊಟ್ಟಿದ್ದಾರೆ. ಆ ಭಾಗದ ಕಲಾವಾತಾವರಣವೇ ಕಣ್ಮುಂದೆ ತುಂಬಿಕೊಂಡಂತೆ ಕಲೆಯ ಸೂಕ್ಷ್ಮ ವಿವರಗಳನ್ನು ಇಲ್ಲಿ ಬಿಂಬಿಸಲು ಪ್ರಯತ್ನಿಸಿದ್ದಾರೆ. ಈ ಕೃತಿಯಲ್ಲಿ ಹಿಮಾಚಲ ಪ್ರದೇಶದ ಪ್ರಾಕೃತಿಕ ಸೌಂದರ್ಯದ ಜೊತೆಗೆ ವಿಶ್ವದಾದ್ಯಂತ ಹೆಸರು ಮಾಡಿದ ಪಹಾಡಿ, ಕಾಂಗ್ರಾ, ಛಂಬಾ, ಬಸೋಲಿ ಕಲಾಶೈಲಿಗಳ ವಿವರಗಳನ್ನು ನೀಡಿದ್ದಾರೆ. ಸ್ವತಹಃ ಈ ಕಲಾಕೇಂದ್ರಗಳಿಗೆ ತೆರಳಿ ಆ ಭಾಗದ ವಿವಿಧ ಗ್ಯಾಲರಿಗಳಿಗೆ ತೆರಳಿ ವಿಷಯ ಸಂಗ್ರಹಣೆ ಮಾಡಿದ್ದಾರೆ. ಇದಲ್ಲದೆ ಈ ಭಾಗದ ಇನ್ನಿತರ ಚಿತ್ರಕಲಾವಿದರು, ಶಿಲ್ಪಿಗಳು, ಸಾಹಿತಿಗಳು, ನಾಟಕ ಕಲಾವಿದರು, ಸಂಗೀತಗಾರರು, ಜನಪದ ಕಲಾವಿದರು ಮತ್ತು ವಿವಿಧ ಕ್ಷೇತ್ರಗಳ ವಿದ್ವಾಂಸರನ್ನು ಭೇಟಿ ಮಾಡಿ ಚರ್ಚಿಸಿ ವಿಷಯಸಂಗ್ರಹಮಾಡಿ ಕೃತಿಯಲ್ಲಿ ಅಳವಡಿಸಿದ್ದಾರೆ. ಈ ಪುಸ್ತಕದಲ್ಲಿ ಹದಿನೇಳು ಭಾಗಗಳನ್ನು ಮಾಡಿಕೊಂಡು ತಮ್ಮ ಪ್ರವಾಸದ ಅನುಭವಗಳನ್ನು ಬಿಚ್ಚಿಟ್ಟಿದ್ದಾರೆ. ಅಳಿಯದ ಆಕರ್ಷಣೆ, ಹಿಮಾಲಯ, ಕೊಲ್ಲುವವನಿಗಿಂತ ಕಾಯುವವನೆ ದೊಡ್ಡವನು, ರಾಷ್ಟ್ರಪತಿ ನಿವಾಸ, ಸ್ವರ್ಗಸೌಂದರ್ಯ, ಸತ್ಯಂ-ಶಿವಂ-ಸುಂದರಂ, ಮಣ್ಣಿನ ವಾಸನೆ, ಸಮುದ್ರದ ಅಲೆಯಂತೆ ಕಲೆ, ಹೃದಯದರ್ಶಿ ಆಕಾಶಸ್ಪರ್ಶ, ನೆಲದಲ್ಲಿ ಹೂತುಹೋದೆ, ಜೀವನ ಸ್ವೀಕೃತಿ, ಪುಣ್ಯಭೂಮಿ, ಜ್ವಾಲಾಮುಖಿ ನಿರ್ಮಾಣ, ಕಾಂಗ್ರಾ ಕಿರುಚಿತ್ರಗಳು, ಅಂದು ಭೂರಿಸಿಂಗ್ ಇದು ಓಹರಿ ಹಾಗೂ ದೇವ್, ಬುದ್ಧಿ-ಸಿದ್ಧಿ, ಭೇದ ಮರೆತು ಬೆರೆವ ಮನ ಹೀಗೆ ವಿವಿಧ ಶೀರ್ಷಿಕೆಯಡಿಯಲ್ಲಿ ವಿಷಯಗಳನ್ನು ವಿವರಿಸಲಾಗಿದೆ. ಇದಲ್ಲದೆ ಇಲ್ಲಿ ಹಿಮಾಲಯದ ಪ್ರಕೃತಿಸೌಂದರ್ಯದ ಕೆಲವು ಛಾಯಾಚಿತ್ರಗಳನ್ನು ಮತ್ತು ಅಲ್ಲಿನ ವಿದ್ವಾಂಸರೋಡನೆ ಶಂಕರ ಪಾಟೀಲರು ಚರ್ಚಿಸುತ್ತಿರುವ ಛಾಯಾಚಿತ್ರಗಳನ್ನು ಹಾಕಲಾಗಿದೆ.

ಈ ಅಧ್ಯಾಯದಲ್ಲಿ ಮೂರು ಭಾಗಗಳನ್ನು ಮಾಡಿಕೊಂಡು ಚಿತ್ರಕಲಾ ಸಾಹಿತ್ಯವನ್ನು ವಿವೇಚಿಸಲಾಗಿದೆ. ಮತ್ತೆ ಈ ಮೂರು ಭಾಗಗಳಲ್ಲಿ ಉಪವಿಭಾಗಗಳನ್ನು ಮಾಡಿಕೊಂಡು ಚರ್ಚಿಸಲಾಗಿದೆ. ಮೊದಲನೆಯದಾದ ಚಿತ್ರಕಲಾ ಅನುವಾದ ಸಾಹಿತ್ಯದಲ್ಲಿ ಪ್ರಾಚೀನ ಸಂಸ್ಕೃತ ಸಾಹಿತ್ಯ ಕೃತಿಗಳ ಅನುವಾದ ಸಾಹಿತ್ಯ, ಇಂಗ್ಲೀಷ್ ಮತ್ತು ಇತರ ಭಾಷೆಯ ಸಾಹಿತ್ಯ ಕೃತಿಗಳ ಅನುವಾದ ಸಾಹಿತ್ಯ ಎಂದು ವಿಂಗಡಿಸಿಕೊಳ್ಳಲಾಗಿದೆ.

ಎರಡನೆಯದಾದ ಇಂಗ್ಲೀಷ್ ಭಾಷೆಯ ಚಿತ್ರಕಲಾ ಸಾಹಿತ್ಯದಲ್ಲಿ ಭಾರತೀಯ ವಿದ್ವಾಂಸರು ಮತ್ತು ವಿದೇಶಿ ವಿದ್ವಾಂಸರು ಬರೆದ ಕೃತಿಗಳನ್ನು ಪರಿಗಣಿಸಲಾಗಿದೆ. ಮೂರನೆಯದಾದ ಚಿತ್ರಕಲಾ ಪ್ರವಾಸ ಸಾಹಿತ್ಯದಲ್ಲಿ ಚಿತ್ರಕಲಾವಿದರು, ಕಲಾಬರಹಗಾರರು ಪ್ರವಾಸ ಮಾಡಿ ಬರೆದ ಪುಸ್ತಕಗಳಲ್ಲದೆ, ಇನ್ನಿತರ ಸಾಹಿತ್ಯ ಕೃತಿಗಳಲ್ಲಿ ಸಾಂದರ್ಭಿಕವಾಗಿ ಬಂದ ಕಲಾಸಾಹಿತ್ಯವನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

---

೫೭. ಶಂಕರ ಪಾಟೀಲ : ಹಿಮಾಚಲದ ಹಿನ್ನೆಲೆಯಲ್ಲಿ ಪ್ರವಾಸ : ಸಾಹಿತ್ಯ ಅಕಾಡಮಿ, ನೃಪತುಂಗ ರಸ್ತೆ, ಬೆಂಗಳೂರು-೧೯೯೭

ಚಿತ್ರಕಲಾ ಅನುವಾದ ಸಾಹಿತ್ಯದಿಂದ ಹಲವಾರು ಸಂಗತಿಗಳು ತಿಳಿದುಬರುತ್ತದೆ. ಪ್ರಾಚೀನ ಸಂಸ್ಕೃತ ಸಾಹಿತ್ಯ ಕೃತಿಗಳ ಅನುವಾದದಿಂದ ಪ್ರಾಚೀನ ಭಾರತದಲ್ಲಿದ್ದ ಕಲಾಪ್ರಕಾರಗಳು, ಕಲಾವಾತಾವರಣ, ಚಿತ್ರರಚನಾಕ್ರಮಗಳು, ಚಿತ್ರಶೈಲಿ, ಪರಿಕರಗಳು, ಕಲಾವಿದರ ಬಗ್ಗೆ ತಿಳಿದುಬರುತ್ತದೆ. ಕೆಲವು ಇಂಗ್ಲೀಷ ಕೃತಿಗಳ ಅನುವಾದದಿಂದ ಪಾಶ್ಚಾತ್ಯಕಲೆ, ಕಲಾತತ್ವ, ಮೀಮಾಂಸೆ ಮತ್ತು ವಿಮರ್ಶೆಗಳು ತಿಳಿದುಬರುತ್ತವೆ. ಇಂಗ್ಲೀಷ ಭಾಷೆಯಲ್ಲಿ ರಚನೆಗೊಂಡ ಸಾಹಿತ್ಯಕೃತಿಗಳಿಂದ ಭಾರತ, ವಿಶೇಷವಾಗಿ ದಕ್ಷಿಣ ಭಾರತ ಮತ್ತು ಕರ್ನಾಟಕ ಕಲೆಯ ಬಗೆಗಿನ ಸಂಗತಿಗಳು ತಿಳಿದುಬರುತ್ತವೆ. ಪ್ರವಾಸ ಸಾಹಿತ್ಯದಲ್ಲಿ ಪಾಶ್ಚಾತ್ಯ, ಪೌರಾತ್ಯ ದೇಶಗಳು, ಭಾರತ ಮತ್ತು ಕರ್ನಾಟಕದ ಕಲೆಯ ಬಗ್ಗೆ ಹೇಳಲ್ಪಟ್ಟಿದೆ.

ಚಿತ್ರಕಲಾ ಅನುವಾದ ಸಾಹಿತ್ಯದಲ್ಲಿ ಮೊದಲನೆಯದಾದ ಪ್ರಾಚೀನ ಸಂಸ್ಕೃತ ಸಾಹಿತ್ಯ ಕೃತಿಯ ಅನುವಾದದಲ್ಲಿ ಚಿತ್ರಕಲೆಯ ದೃಷ್ಟಿಯಿಂದ ಪ್ರಮುಖವಾದ ಎಂಟು ಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಇವುಗಳಲ್ಲಿ ವಿಷ್ಣುಧರ್ಮೋತ್ತರ ಪುರಾಣ, ಮಾನಸೋಲ್ಲಾಸ, ಕಾಶ್ಯಪ ಶಿಲ್ಪಶಾಸ್ತ್ರ, ಶಿವತತ್ವ ರತ್ನಾಕರ ಇವುಗಳು ಪ್ರತ್ಯೇಕವಾದ ಅಧ್ಯಾಯಗಳನ್ನು ಚಿತ್ರಕಲೆಯ ಬಗ್ಗೆ ಹೊಂದಿದ್ದು ಸಾಮಾನ್ಯವಾಗಿ ಭಿತ್ತಿಚಿತ್ರರಚನೆಯ ಅಂಶಗಳನ್ನು ತಿಳಿಸಿಕೊಡುತ್ತವೆ. ಕಾಮಸೂತ್ರ, ಬ್ರಾಹ್ಮೀಚಿತ್ರಕರ್ಮಶಾಸ್ತ್ರ ಈ ಎರಡು ಕೃತಿಗಳು ಸಾಂದರ್ಭಿಕವಾಗಿ ಚಿತ್ರಕಲೆಯ ವಿವರಗಳನ್ನೊಳಗೊಂಡಿದ್ದರೆ, ಸೌಗಂಧಿಕಾ ಪರಿಣಯವು ಪಠ್ಯವಿಷಯಕ್ಕೆ ಪೂರಕವಾಗಿರುವ ಸಾಂದರ್ಭಿಕ ಚಿತ್ರಗಳನ್ನು ಒಳಗೊಂಡಿದೆ. ಶ್ರೀತತ್ವನಿಧಿ ಕೃತಿಯಲ್ಲಿ ಮೈಸೂರು ಶೈಲಿಯ ರಾಗಮಾಲಾ ಚಿತ್ರಗಳಿವೆ. ಈ ಎಲ್ಲ ಕೃತಿಗಳನ್ನು ಗಮನಿಸಿದಾಗ ಚಿತ್ರಕಲೆಯ ಬಗ್ಗೆ ವಿವರಗಳನ್ನೊಳಗೊಂಡ ಕೃತಿಗಳು ಮತ್ತು ಚಿತ್ರಕಲಾಕೃತಿಗಳನ್ನೊಳಗೊಂಡ ಕೃತಿಗಳೆಂಬುದಾಗಿ ಪ್ರಾಚೀನ ಸಾಹಿತ್ಯ ಕೃತಿಗಳನ್ನು ವಿಂಗಡಿಸಬಹುದು.

ಇಂಗ್ಲೀಷ್ ಭಾಷೆಯಿಂದ ಅನುವಾದಗೊಂಡ ಕೃತಿಗಳಲ್ಲಿ ಕಲಾತತ್ವ, ಕಲೆಯ ಅರ್ಥ, ಕಲೆ ಎಂದರೇನು? ಎಂಬಂತಹ ಸಂಗತಿಗಳು ಹೆಚ್ಚಾಗಿ ಬಿಂಬಿತಗೊಂಡಿದ್ದು, ಪಾಶ್ಚಾತ್ಯರು ಕಲೆಯನ್ನು ಪರಿಭಾವಿಸುವ, ವಿಮರ್ಶಿಸುವ ದೃಷ್ಟಿಕೋನಗಳನ್ನು ಇದರಿಂದ ತಿಳಿದುಕೊಳ್ಳಬಹುದು. ಕಲೆಯ ಮೂಲ ತತ್ವಸೌಂದರ್ಯ ಮತ್ತು ಸತ್ಯದ ಅನ್ವೇಷಣೆಯಲ್ಲಿದೆ ಎಂದು ಲಿಯೋ ಟಾಲ್‌ಸ್ಟಾಯ್ ಅವರು ಕಲೆ ಎಂದರೇನು? ಎಂಬ ಕೃತಿಯಲ್ಲಿ ಅಭಿಪ್ರಾಯ ವ್ಯಕ್ತಪಡಿಸುತ್ತಾರಾದರೂ ಕಾಲ ಮತ್ತು ಸಂದರ್ಭಗಳ ದೆಸೆಯಿಂದಾಗಿ ಕಲೆಗಾಗಿ ಕಲೆ, ಸಮಾಜಕ್ಕಾಗಿ ಕಲೆ, ಬದುಕಿಗಾಗಿ ಕಲೆ ಎನ್ನುವಂತಹ ಅಭಿಪ್ರಾಯಗಳು ಹುಟ್ಟಿಕೊಂಡಿರುವುದು ಕಂಡುಬರುತ್ತದೆ. ಆಧುನಿಕ ಸಂದರ್ಭದಲ್ಲಂತೂ ಕಲೆಯ ಆಶಯ ಮತ್ತು ಪರಿಣಾಮಗಳ ಬಗೆಗೆ ಕುತೂಹಲಕರವಾದ ಚರ್ಚೆಗಳು ನಡೆದಿವೆ. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತುತ ಕೃತಿಗಳು ಮಹತ್ವಪೂರ್ಣವಾದ ಮಾಹಿತಿಯನ್ನು ಒಳಗೊಂಡಿವೆ ಎಂದು ಹೇಳಬಹುದು. ಕನ್ನಡದಲ್ಲಿ ಮತ್ತು ಕರ್ನಾಟಕದಲ್ಲಿ ಈ ಬಗೆಯ ಬಹು ಗಂಭೀರವಾದ ಸಂಗತಿಗಳನ್ನು ನಾವಿಂದು ಕೃತಿಗಳ ಮೂಲಕ ರೂಪಿಸುವ ಅವಶ್ಯಕತೆ ಇದೆ ಎಂಬುದನ್ನು ಪರಿಶೀಲಿಸಬೇಕಾಗಿದೆ.

ಇಂಗ್ಲೀಷ್‌ನಲ್ಲಿ ಬಂದಂತಹ ಚಿತ್ರಕಲಾ ಸಾಹಿತ್ಯ ಕೃತಿಗಳಲ್ಲಿ ಕರ್ನಾಟಕದ ಚಿತ್ರಕಲೆಯ ಬಗ್ಗೆ ಪ್ರತ್ಯೇಕ ಕೃತಿಗಳು ರಚನೆಯಾಗಿರದೆ ಭಾರತ, ದಕ್ಷಿಣ ಭಾರತ ಮತ್ತು ವಿವಿಧ ಕಲಾ ಶೈಲಿಗಳನ್ನು ಕುರಿತು ಹೇಳುವಾಗ ಸಾಂದರ್ಭಿಕವಾಗಿ ಕರ್ನಾಟಕದ ಚಿತ್ರಕಲೆಯ ಬಗ್ಗೆ ಉಲ್ಲೇಖಗಳು ಬಂದಿವೆ. ಇಂಗ್ಲೀಷ್ ಕೃತಿಗಳಲ್ಲಿ ಕೆಲವು ಕೃತಿಗಳನ್ನು ಪಾಶ್ಚಾತ್ಯ ವಿದ್ವಾಂಸರು ಬರೆದಿದ್ದರೆ ಮತ್ತೆ ಕೆಲವು

ಕೃತಿಗಳನ್ನು ಭಾರತೀಯ ವಿದ್ವಾಂಸರು ಬರೆದಿದ್ದಾರೆ. ಪಾಶ್ಚಾತ್ಯರು ಬರೆದ ಕೃತಿಗಳಲ್ಲಿ ಕಲೆಯ ಬಗೆಗಿನ ವಿಮರ್ಶೆ, ತೌಲನಿಕತೆ, ತಾಂತ್ರಿಕ ಅಂಶಗಳು ಹೆಚ್ಚಿನ ಪ್ರಮಾಣದಲ್ಲಿದ್ದರೆ, ಭಾರತೀಯ ಲೇಖಕರು ಬರೆದ ಕೃತಿಗಳಲ್ಲಿ ಧಾರ್ಮಿಕತೆ, ಇತಿಹಾಸ, ಕಲೆಯ ಉದ್ದೇಶಗಳು, ಚಿತ್ರದ ವಸ್ತುವಿಷಯಗಳು, ರಚನಾ ಶೈಲಿಗಳಂತಹ ಸಂಗತಿಗಳು ಬೆಳಕುಕಂಡಿವೆ.

ಆರ್ಕಿಟೆಕ್ಚರ್ ಆಫ್ ಬಿಜಾಪೂರ, ಎ ಸರ್ವೆ ಆಫ್ ಪೇಂಟಿಂಗ್ಸ್ ಇನ್ ದಿ ಡೆಕ್ಕನ್, ದಿ ಲೆಟರ್ಸ್ ಆಫ್ ಫಿಲಿಪ್ ಮೆಡೋಸ್ ಟೇಲರ್ ಟು ಹೆನ್ರಿ ರೀವ್, ದಿ ಡೆವಲಪ್‌ಮೆಂಟ್ ಆಪ್ ಅರ್ಲಿಕಲ್ಚರ್ ಇನ್ ರಾಯಚೂರ ದೋ ಆಬ್, ಡೆಕ್ಕನೀ ಪೇಂಟಿಂಗ್ಸ್ ಈ ಕೃತಿಗಳು ಪಾಶ್ಚಾತ್ಯ ವಿದ್ವಾಂಸರಿಂದ ರಚನೆಗೊಂಡಿದ್ದರೆ, ವಿಜಯನಗರ ಆರ್ಟ, ದಿ ಅರ್ಲಿ ಹಿಸ್ಟರಿ ಆಫ್ ದಿ ಡೆಕ್ಕನ್ ಫೈನ್ ಆರ್ಟ, ಆರ್ಟ ಎಕ್ಸ್‌ಪೀರಿಯನ್ಸ್, ಡೆಕ್ಕನೀ ಸ್ಕೂಲ ಬಿಜಾಪೂರ, ಅರ್ಲಿ ವೆಸ್ಟರ್ನ ಚಾಲುಕ್ಯ ಪೇಂಟಿಂಗ್ಸ್ ಫ್ರಾಮ್ ಬಾದಾಮಿ, ಸೌತ್ ಇಂಡಿಯನ್ ಪೇಂಟಿಂಗ್ಸ್, ಇಂಡಿಯನ್ ಪೇಂಟಿಂಗ್ಸ್, ಪೇಂಟೆಡ್ ರಾಕ್ ಶೇಲ್ಟರ್ಸ್ ಆಫ್ ಇಂಡಿಯಾ, ಕರ್ನಾಟಕ ಪೇಂಟಿಂಗ್ಸ್ ಇಂಡಿಯನ್ ರಾಕ್ ಪೇಂಟಿಂಗ್ಸ್, ಮ್ಯೂರಲ್ ಪೇಂಟಿಂಗ್ಸ್ ಇನ್ ಇಂಡಿಯಾ, ಎ ನೋಟ್ ಆನ್ ಆದಿಲ್‌ಶಾಹೀ ಪೇಂಟಿಂಗ್ಸ್, ಟ್ರೆಡಿಶನಲ್ ಪೇಂಟಿಂಗ್ಸ್ ಆಫ್ ಕರ್ನಾಟಕ, ಮಾಸ್ಟರ್ ಪೀಸಿಸ್ ಆಫ್ ವಿಜಯನಗರ ಆರ್ಟ, ಆರ್ಟ ಆಂಡ್ ಆರ್ಕಿಟೆಕ್ಚರ್ ಇನ್ ಕರ್ನಾಟಕ, ಡ್ಯಾನ್ಸ್ ಆಂಡ್ ಅದರ್ ಫೈನ್ ಆರ್ಟ್ಸ ಇನ್ ಕರ್ನಾಟಕ ಸ್ಕಲ್ಪಚರ್ ಆಂಡ್ ಪೇಂಟಿಂಗ್ಸ್, ಶಿಬಿ ಮ್ಯೂರಲ್ಸ್, ಪೇಂಟಿಂಗ್ಸ್ ಆಫ್ ಸೇಂಟ್ ಅಲಾಯಿಸೆಸ್ ಚರ್ಚ, ಬೀದರ್ ಇಟ್ಸ್ ಹಿಸ್ಟರಿ ಆಂಡ್ ಮಾನ್ಯೂಮೆಂಟ್ಸ್, ದಿ ಲಿವೀಂಗ್ ಲೈನ್ಸ್, ಪ್ರೀ ಪ್ರೋಟೊ ಆಂಡ್ ಅರ್ಲಿ ಹಿಸ್ಟಾರಿಕ್ ಕಲ್ಚರ್ ಆಫ್ ಕೃಷ್ಣಾ ತುಂಗಭದ್ರಾ ವ್ಯಾಲಿ, ಮ್ಯೂರಲ್ ಪೇಂಟಿಂಗ್ಸ್ ಆಫ್ ಶಿಬಿ ಮುಂತಾದ ಕೃತಿಗಳು ಭಾರತೀಯ ವಿದ್ವಾಂಸರಿಂದ ರಚನೆಗೊಂಡಿವೆ.

ಪಾಶ್ಚಾತ್ಯ ವಿದ್ವಾಂಸರು ಬರೆದ ಕೃತಿಗಳಲ್ಲಿ ಭಾರತೀಯ ಕಲೆಯನ್ನು ಪಾಶ್ಚಾತ್ಯ ಕಲಾತತ್ವಗಳ ಹಿನ್ನೆಲೆಯಲ್ಲಿ ವಿಮರ್ಶಿಸಲು ಕೆಲವರು ಪ್ರಯತ್ನಿಸಿದ್ದಾರೆ. ಪರ್ಶಿಬ್ರೌನ್, ಮೆಡೋಸ್ ಟೇಲರ್, ಜೇಮ್ಸಬರ್ಗರ್, ಹಡ್ಸನ್ ಮುಂತಾದವರ ಬರವಣಿಗೆಗಳು ಈ ನಿಟ್ಟಿನಲ್ಲಿದ್ದರೆ, ಸ್ಟೆಲ್ಲಾ ಕಾಮ್ರಿಶ್ಚ್, ಇ.ಬಿ.ಹ್ಯಾವೆಲ್ ಇವರ ಬರವಣಿಗೆಗಳು ಭಾರತೀಯ ತತ್ವಶಾಸ್ತ್ರ, ಧರ್ಮ, ನಂಬಿಕೆ, ಆಚರಣೆಯಂತಹ ಸ್ಥಳೀಯ ವಿಚಾರಗಳ ಹಿನ್ನೆಲೆಯಲ್ಲಿ ಬಿಚ್ಚಿಕೊಂಡಿವೆ.

ಚಿತ್ರಕಲಾ ಪ್ರವಾಸ ಸಾಹಿತ್ಯದಲ್ಲಿ ಈಗಾಗಲೇ ಗಮನಿಸಿರುವಂತೆ ಪ್ರವಾಸ ಸಂದರ್ಭದಲ್ಲಿ ಸಾಂದರ್ಭಿಕವಾಗಿ ಕಲೆಯ ಅಂಶಗಳನ್ನು ಹೇಳಿರುವುದು ಒಂದು ರೀತಿಯಾದರೆ ಕಲಾಬರವಣಿಗೆಗಾಗಿಯೆ ಪ್ರವಾಸ ಹಮ್ಮಿಕೊಂಡು ಬರೆದಿರುವ ಕೃತಿಗಳು ಮತ್ತೊಂದು ಬಗೆಯಲ್ಲಿವೆ. ಪ್ರವಾಸ ಸಂದರ್ಭದಲ್ಲಿ ಪ್ರಾಸಂಗಿಕವಾಗಿ ಕಲೆಯ ವಿವರ ನೀಡಿರುವ ಕೃತಿಗಳಲ್ಲಿ ಶಿವರಾಮ ಕಾರಂತರ ಪ್ರವಾಸ ಸಾಹಿತ್ಯದಲ್ಲಿ ಕಂಡುಬರುವ ಚಿತ್ರಕಲೆಯ ವಿವರಗಳು ಹೆಚ್ಚು ಮೌಲಿಕವಾಗಿವೆ. ಅಪೂರ್ವ ಪಶ್ಚಿಮ ಎಂಬ ಅವರ ಕೃತಿ ಪ್ರವಾಸ ಸಾಹಿತ್ಯ ಎಂಬುದಕ್ಕಿಂತಲೂ ಪಾಶ್ಚಾತ್ಯ ದೇಶಗಳ ಕಲೆಯ ಬಗೆಗಿನ ಕಲಾ ಸಾಹಿತ್ಯ ಎಂದೇ ಪರಿಗಣಿಸಬಹುದು. ಇದರಲ್ಲಿ ಶಿವರಾಮ ಕಾರಂತರು ಪ್ರವಾಸ ಕಾಲದ ಇನ್ನಿತರ ವಿವರಗಳನ್ನು ಗೌಣವಾಗಿಸಿ ಕಲೆಯ ವಿವರಣೆಗೆ ಹೆಚ್ಚಿನ ಗಮನ ನೀಡಿದ್ದಾರೆ. ಆದರೆ ಮಧ್ಯಪ್ರದೇಶದ ಮಡಿಲಲ್ಲಿ ಕೃತಿಯಲ್ಲಿ ಕೃಷ್ಣಾನಂದ ಕಾಮತ್, ಮಾಸ್ಕೊದಲ್ಲಿ ಇಪ್ಪತ್ತೆರಡು ದಿನ ಎಂಬ ಕೃತಿಯಲ್ಲಿ ಜಿ.ಎಸ್.ಶಿವರುದ್ರಪ್ಪನವರು, ಪ್ರವಾಸ ಸಾಹಿತ್ಯ ಕೃತಿಯಲ್ಲಿ ವಿ.ಕೃ.ಗೋಕಾಕರು ಇನ್ನಿತರ ವಿವರಗಳನ್ನು

ಹೆಚ್ಚಾಗಿ ಹೇಳಿದ್ದು ಕಲಾವಿವರಗಳನ್ನು ಸಾಂದರ್ಭಿಕವಾಗಿ ಬಳಸಿಕೊಂಡಿದ್ದಾರೆ. ಕಲಾವಿದರಾದ ಡಿ.ವಿ.ಹಾಲಭಾವಿ, ಅ.ಲ.ನರಸಿಂಹನ್, ಶಂಕರ ಪಾಟೀಲ, ಪಿ.ಆರ್.ತಿಪ್ಪೇಸ್ವಾಮಿ, ಮಣಿಚಿತ್ತಾಯ್, ಕಲಾಬರಹಗಾರ ಕೆ.ವಿ.ಸುಬ್ರಹ್ಮಣ್ಯ ಇವರುಗಳು ಬರೆದ ಪ್ರವಾಸ ಸಾಹಿತ್ಯ ಕೃತಿಗಳು ಆಯಾ ಪ್ರದೇಶದ ಕಲೆಯ ವಿವರಗಳಿಗೆ ಮೀಸಲಾಗಿವೆ. ಪ್ರಾಚೀನ ಪ್ರವಾಸ ಸಾಹಿತ್ಯ ರಚನಾಕಾರರಾದ ಡೋಲಂಗೋ ಪೆಯಸ್, ಅಬ್ದುಲ್ ರಜಾಕ್, ನಿಕೋಲೋ ಕೊಂಟಿ, ಹುಯೆನ್‌ತ್ಸಾಂಗ್ ಮುಂತಾದ ವಿದೇಶಿ ಬರಹಗಾರರಲ್ಲಿನ ನಿಖರ ವಿವರಗಳು ಇವರುಗಳಲ್ಲಿಲ್ಲ. ಕಂಡದ್ದನ್ನು ನೇರವಾಗಿ ಹೇಳುವ ಅವರ ಶೈಲಿಯ ಅವಶ್ಯಕತೆ ಇಂತಹ ಕಲಾಪ್ರವಾಸ ಸಾಹಿತ್ಯದಲ್ಲಿ ಬೇಖಾಗುತ್ತದೆ. ಕನ್ನಡದ ಮಟ್ಟಿಗೆ ಕಲಾಪ್ರವಾಸ ಸಾಹಿತ್ಯದಲ್ಲಿ ಗಂಭೀರ ಪ್ರಯತ್ನಗಳ ಕೊರತೆ ಕಂಡುಬರುತ್ತದೆ.

ಭಾರತೀಯ ವಿದ್ವಾಂಸರು ಬರೆದ ಕಲಾಸಾಹಿತ್ಯವು ಪಾಶ್ಚಾತ್ಯ ಬರಹಗಾರರಿಂದ ಪ್ರೇರಣೆಗೊಂಡಿರುವ ಅಂಶಗಳು ಕಂಡುಬರುತ್ತವೆಯಾದರೂ ಅದರಲ್ಲಿ ವಿಮರ್ಶಾ ದೃಷ್ಟಿಕೋನಕ್ಕಿಂತ ವಿವರಣೆಗಳು ಹೆಚ್ಚಾಗಿವೆ. ಜಿ.ಯಜದಾನಿಯವರ ಅರ್ಲಿಹಿಸ್ಟರಿ ಆಫ್ ದಿ ಡೆಕ್ಕನ್ ಫೈನ್ ಆರ್ಟ್ಸ್, ಮೋತಿಚಂದ್ರ ಅವರ ಡೆಕ್ಕನೀ ಸ್ಕೂಲ ಬಿಜಾಪೂರ, ಸಿ.ಶಿವರಾಮಮೂರ್ತಿಯವರ ಅರ್ಲಿ ವೆಷ್ಟರ್ನ ಚಾಲುಕ್ಯ ಪೇಂಟಿಂಗ್ಸ್, ಸೌತ್ ಇಂಡಿಯನ್ ಪೇಂಟಿಂಗ್ಸ್, ಇಂಡಿಯನ್ ಪೇಂಟಿಂಗ್ಸ್, ಸಾಲೆತ್ತೊರೆಯವರ ವಿಜಯನಗರ ಆರ್ಟ, ಶಿವರಾಮ ಕಾರಂತರ ಕರ್ನಾಟಕ ಪೇಂಟಿಂಗ್ಸ್ ಮುಂತಾದ ಕೃತಿಗಳನ್ನು ಈ ನಿಟ್ಟಿನಲ್ಲಿ ಹೆಸರಿಸಬಹುದು.

ಆರ್.ಸಿ.ಅಗರವಾಲ್ ಅವರ ಎನೋತ್ಸ್ ಆನ್ ದಿ ಆದಿಲಶಾಹೀ ಪೇಂಟಿಂಗ್ಸ್, ಜೆ.ಸಿ.ನಾಗಪಾಲ್ ಅವರ ಮ್ಯೂರಲ್ ಪೇಂಟಿಂಗ್ಸ್ ಇನ್ ಇಂಡಿಯಾ, ಕೃತಿಗಳು ಭಿನ್ನರೀತಿಯಾಗಿದ್ದು ತೌಲನಿಕ ವಿವೇಚನೆಯನ್ನು ಒಳಗೊಂಡಿವೆ. ಅಗರವಾಲ್‌ರ ಕೃತಿಯಲ್ಲಿ ಬಿಜಾಪೂರ ಕಿರುರೂಪ ಚಿತ್ರಶೈಲಿಯನ್ನು ಭಾರತೀಯ ಇನ್ನಿತರ ಚಿತ್ರಶೈಲಿಗಳೊಂದಿಗೆ ತೌಲನಿಕವಾಗಿ ನೋಡಲಾಗಿದೆ. ಅದೇ ರೀತಿ ನಾಗಪಾಲರ ಕೃತಿಯಲ್ಲಿ ಭಾರತದ ಬೇರೆ ಬೇರೆ ಪ್ರದೇಶದ ಭಿತ್ತಿಚಿತ್ರಗಳನ್ನು ತೌಲನಿಕವಾಗಿ ವಿವೇಚಿಸಲಾಗಿದೆ. ಅದರಲ್ಲಿ ಕರ್ನಾಟಕದ ಪ್ರಾಚೀನ ಭಿತ್ತಿಚಿತ್ರಗಳ ಬಗ್ಗೆ ಅನೇಕ ವಿವರಗಳು ಲಭ್ಯವಾಗುತ್ತವೆ. ಈ ರೀತಿ ಕೆಲವು ಮೌಲಿಕ ವಿಚಾರಗಳು ಇಂಗ್ಲೀಷ್ ಭಾಷೆಯಲ್ಲಿ ರಚನೆಯಾದ ಚಿತ್ರಕಲಾ ಸಾಹಿತ್ಯದಿಂದ ತಿಳಿದುಬರುತ್ತವೆ.

*****

ಕರ್ನಾಟಕದ ಚಿತ್ರಕಲಾ ಸಾಹಿತ್ಯದಲ್ಲಿ ಸಂಶೋಧನಾ ಸಾಹಿತ್ಯವು ಕಿರು ಪ್ರಮಾಣದಲ್ಲಿ ಮೊದಲಿನಿಂದಲೂ ಆಗಾಗ ರಚನೆಯಾಗುತ್ತ ಬಂದಿದ್ದರೂ, ನಿರ್ಧಿಷ್ಟವಾದ ಚೌಕಟ್ಟಿನಡಿಯಲ್ಲಿ, ವಿಶ್ವವಿದ್ಯಾಲಯದ ಮಾನ್ಯತೆಯೊಂದಿಗೆ ಮತ್ತು ಪದವಿ ಹಿನ್ನೆಲೆಯಲ್ಲಿ ವ್ಯವಸ್ಥಿತವಾದ ಸಂಶೋಧನೆಯು ಇತ್ತೀಚಿನ ದಿನಗಳಲ್ಲಿ ಆರಂಭಗೊಂಡಿದೆ. ತೊಂಭತ್ತರ ದಶಕದ ಆರಂಭದ ಹೊತ್ತಿಗೆ ಡಾ.ಎಸ್.ಸಿ.ಪಾಟೀಲ ಅವರು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ 'ಕರ್ನಾಟಕದ ಜನಪದ ಚಿತ್ರಕಲೆ' ಕುರಿತು ಪಿಎಚ್.ಡಿ. ಅಧ್ಯಯನ ಮಾಡಿದ್ದು ಈ ನಿಟ್ಟಿನಲ್ಲಿ ಮೊದಲ ಪ್ರಯತ್ನವಾಗಿದೆ ಎನ್ನಬಹುದು. ಇವರಿಗಿಂತ ನಾಲ್ಕು-ಐದು ವರ್ಷಗಳ ಮೊದಲು ಡಾ.ಬಿ.ಕೆ.ಹಿರೇಮಠ ಅವರು ಹಸ್ತಪ್ರತಿ ಚಿತ್ರಕಲೆಯ ಬಗ್ಗೆ ಅಧ್ಯಯನ ಮಾಡಿದ್ದರೂ ಪ್ರತ್ಯೇಕವಾದ ಚಿತ್ರಕಲಾ ಅಧ್ಯಯನವಾಗಿರದೆ ಹಸ್ತಪ್ರತಿಗಳ ಅಧ್ಯಯನದಡಿಯಲ್ಲಿ ಅದರ ಕಲಾವಂತಿಕೆಯನ್ನು ಬಿಂಬಿಸಲು ಒಂದು ಪ್ರತ್ಯೇಕ ಅಧ್ಯಾಯವನ್ನು ಮಾತ್ರ ತಮ್ಮ ಪ್ರಬಂಧದಲ್ಲಿ ಮೀಸಲಾಗಿಟ್ಟಿದ್ದರು. ಇದಲ್ಲದೆ ಡಾ.ಎಸ್.ಸಿ.ಪಾಟೀಲ ಅವರೇ ತಮ್ಮ ಸ್ನಾತಕೋತ್ತರ ಹಂತದ ಅಧ್ಯಯನದಲ್ಲಿ ಕಿರು ಯೋಜನಾ ವರದಿ ರೂಪವಾಗಿ ಮಾಧ್ಯಮಿಕ ಶಾಲಾ ಹಂತದಲ್ಲಿ ಚಿತ್ರಕಲಾ ಶಿಕ್ಷಣ ಎಂಬ ವಿಷಯವಾಗಿ ಅಧ್ಯಯನ ಮಾಡಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ್ದರು. ಆದರೂ ನಿರ್ಧಿಷ್ಟ ಮಟ್ಟದ ಕಲಾಸಂಶೋಧನಾ ಅಧ್ಯಯನದ ಇತಿಹಾಸವು ವಿಶ್ವವಿದ್ಯಾಲಯದಲ್ಲಿ

ಡಾ.ಎಸ್.ಸಿ.ಪಾಟೀಲರ ಪಿಎಚ್.ಡಿ. ಪ್ರಬಂಧದಿಂದ ಆರಂಭಗೊಂಡಿತೆಂದು ಹೇಳಬಹುದು. ಇವರ ನಂತರ ಅನೇಕರು ಪಿಎಚ್.ಡಿ ಅಧ್ಯಯನ ಮಾಡಿದ್ದಾರೆ. ಇವರ ಮಾರ್ಗದರ್ಶನದಲ್ಲೇ ಕರ್ನಾಟಕದ ಬಹುಮಟ್ಟಿನ ಪಿಎಚ್.ಡಿ.ಗಳು ಬಂದಿವೆ. ನಂತರದಲ್ಲಿ ಎಂ.ಫಿಲ್ ಮತ್ತು ಡಿ.ಲಿಟ್. ಅಧ್ಯಯನಗಳು ಆರಂಭಗೊಂಡವು. ಇತ್ತೀಚಿಗೆ ಸ್ನಾತಕೋತ್ತರ ಪದವಿ ಮತ್ತು ಸ್ನಾತಕ ಪದವಿ ಮಟ್ಟದಲ್ಲೂ ಕಿರು ಸಂಶೋಧನಾ ಪ್ರಬಂಧಗಳನ್ನು ಇಲ್ಲವೆ ಕಿರು ಯೋಜನಾ ವರದಿಗಳನ್ನು ರಚಿಸುವ ಪರಿಪಾಠ ಆರಂಭಗೊಂಡಿದೆ. ಇದನ್ನು ವಿಶ್ವವಿದ್ಯಾಲಯ ಅನುದಾನ ಮಂಡಳಿಯೇ ಮಾನ್ಯ ಮಾಡಿದೆ. ಹಾಗಾಗಿ ಹೆಚ್ಚಿನ ಪ್ರಮಾಣದ ಸಂಶೋಧನಾ ಸಾಹಿತ್ಯವು ಕಲಾಕ್ಷೇತ್ರದಲ್ಲಿ ರಚನೆಯಾಗುವಂತಾಗಿದೆ. ಸ್ನಾತಕೋತ್ತರ ಪದವಿ ಮತ್ತು ಸ್ನಾತಕ ಪದವಿ ಮಟ್ಟದಲ್ಲಿನ ಸಂಶೋಧನಾ ಬರಹಗಳು ಅಷ್ಟೊಂದು ಗಂಭೀರ ಮಟ್ಟದಲ್ಲಿ ಕಂಡು ಬರುವುದಿಲ್ಲ. ಪಿಎಚ್.ಡಿ, ಎಂ.ಫಿಲ್. ಮತ್ತು ಡಿ.ಲಿಟ್. ಅಧ್ಯಯನಗಳು ಈ ನಿಟ್ಟಿನಲ್ಲಿ ಗಮನಾರ್ಹವಾಗಿವೆ. ಪ್ರಸ್ತುತ ಅಧ್ಯಾಯದಲ್ಲಿ ಈ ಎಲ್ಲ ಸಂಶೋಧನಾ ಪ್ರಬಂಧಗಳನ್ನು ಅಧ್ಯಯನಕ್ಕೆ ಪರಿಗಣಿಸಿದರೂ ಇಲ್ಲಿ ಮುಖ್ಯವಾಗಿ ಗಂಭೀರತೆಯ ದೃಷ್ಟಿಯಿಂದ ವಿಶ್ಲೇಷಣೆಗಾಗಿ ಪಿಎಚ್.ಡಿ, ಎಂ.ಫಿಲ್ ಮತ್ತು ಡಿ.ಲಿಟ್. ಪ್ರಬಂಧಗಳನ್ನು ಆಯ್ದುಕೊಳ್ಳಲಾಗಿದೆ. ಹಾಗಿದ್ದರೂ ಒಟ್ಟು ಅಧ್ಯಯನದ ಅನುಕೂಲದ ದೃಷ್ಟಿಯಿಂದ ಚಿತ್ರಕಲಾ ಸಂಶೋಧನಾ ಸಾಹಿತ್ಯವನ್ನು ಈ ಕೆಳಗಿನಂತೆ ವಿಂಗಡಿಸಿ ವಿವೇಚಿಸಬಹುದಾಗಿದೆ.

೧. ಪಿಎಚ್.ಡಿ. ಪ್ರಬಂಧಗಳು.

೨. ಎಂ.ಫಿಲ್. ಪ್ರಬಂಧಗಳು

೩. ಡಿ.ಲಿಟ್. ಪ್ರಬಂಧಗಳು.

**೧. ಪಿಎಚ್.ಡಿ. ಪ್ರಬಂಧಗಳು :**

ಕರ್ನಾಟಕದಲ್ಲಿ ಇದುವರೆಗೂ ಬಂದ ಪಿಎಚ್.ಡಿ. ಪ್ರಬಂಧಗಳನ್ನು ವಿಷಯಾನುಸಾರವಾಗಿ ಎರಡು ರೀತಿಯಲ್ಲಿ ವಿಂಗಡಿಸಬಹುದು.

ಅ. ಕ್ಷೇತ್ರೀಯ ಅಧ್ಯಯನಗಳು

ಬ. ವ್ಯಕ್ತಿ ಅಧ್ಯಯನಗಳು.

**ಅ. ಕ್ಷೇತ್ರೀಯ ಅಧ್ಯಯನಗಳು :**

ಈ ಪ್ರಕಾರದ ಅಧ್ಯಯನಗಳು ಸಾಮಾನ್ಯವಾಗಿ ಕಲಾಪ್ರಕಾರಗಳಿಗೆ ಸಂಬಂಧಪಟ್ಟವುಗಳಾಗಿದ್ದು, ಒಂದು ಪ್ರದೇಶ ಅಥವಾ ಕ್ಷೇತ್ರದ ವ್ಯಾಪ್ತಿಯನ್ನು ಹೊಂದಿರುತ್ತವೆ. ಅವುಗಳಲ್ಲಿ ಆ ಕಲಾಪ್ರಕಾರದ ಹಲವಾರು ಅಂಶಗಳನ್ನು ಕುರಿತು ಚರ್ಚಿಸಲಾಗುತ್ತದೆ. ಅಂತಹ ಸಂಶೋಧನಾ ಪ್ರಬಂಧಗಳು ಈ ಕೆಳಗಿನಂತಿವೆ.

**ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ :**

ಕರ್ನಾಟಕ ಸಂದರ್ಭದಲ್ಲಿ ಅದರಲ್ಲೂ ಕನ್ನಡದಲ್ಲಿ ಚಿತ್ರಕಲೆಯ ಕುರಿತಾಗಿ ಗಂಭೀರ ಅಧ್ಯಯನಗಳು ಇನ್ನೂ ಆರಂಭವಾಗಿರದ ಕಾಲದಲ್ಲಿ ಪ್ರಾಚೀನ ಸಾಹಿತ್ಯ ಮತ್ತು ಚಿತ್ರಕಲೆ ಸಂಬಂಧವಾಗಿರುವ ಕನ್ನಡ ಹಸ್ತಪ್ರತಿಗಳು ಎಂಬ ವಿಷಯವನ್ನು ಆಯ್ದುಕೊಂಡು ಪಿಎಚ್.ಡಿ.

ಅಧ್ಯಯನ ಮಾಡಿರುವುದು ಬಿ.ಕೆ.ಹಿರೇಮಠ ಅವರ ಹಿರಿಮೆ ಎಂದೇ ಹೇಳಬಹುದು.[೧] ಹಸ್ತಪ್ರತಿಗಳ ಕುರಿತಾಗಿಯೇ ಈ ಅಧ್ಯಯನವಿದ್ದರೂ ಅದರಲ್ಲಿ ಬರುವ ಚಿತ್ರಕಲೆಯ ಬಗ್ಗೆ ವಿಶ್ಲೇಷಣೆ ಮಾಡುವುದಕ್ಕಾಗಿಯೇ ಹಸ್ತಪ್ರತಿಗಳ ಕಲಾವಿನ್ಯಾಸ ಎಂಬ ಪ್ರತ್ಯೇಕ ಅಧ್ಯಾಯ ಮಾಡಿಕೊಳ್ಳಲಾಗಿದೆ. ಹಸ್ತಪ್ರತಿ ಅಧ್ಯಯನ ಕ್ಷೇತ್ರದಲ್ಲಿ ಎಷ್ಟು ಮಹತ್ವವನ್ನು ಈ ಕೃತಿ ಹೊಂದಿದೆಯೋ ಅಷ್ಟೇ ಮಹತ್ವವನ್ನು ಚಿತ್ರಕಲಾ ಅಧ್ಯಯನ ಕ್ಷೇತ್ರಕ್ಕೆ ಈ ಪ್ರಬಂಧ ದೊರಕಿಸಿಕೊಟ್ಟಿದೆ.

ಈ ಕೃತಿಯಲ್ಲಿ ಒಟ್ಟು ೧೦ ಅಧ್ಯಾಯಗಳಲ್ಲಿ ವಿಷಯ ನಿರೂಪಿಸಲಾಗಿದೆ. ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಗಳನ್ನು ಕುರಿತಾಗಿದೆ. ಹಸ್ತಪ್ರತಿ ಮತ್ತು ಅದರಲ್ಲಿರುವ ಚಿತ್ರಕಲಾ ವಿನ್ಯಾಸದ ಬಗ್ಗೆ ಯಾಕೆ ಅಧ್ಯಯನ ಕೈಗೊಳ್ಳಲಾಯಿತು? ಮತ್ತು ಅದರ ಮಹತ್ವ ಏನು? ಎಂಬಂತಹ ವಿಚಾರಗಳನ್ನು ಇಲ್ಲಿ ಹೇಳಲಾಗಿದೆ. ಎರಡನೆಯ ಅಧ್ಯಾಯವು ಹಸ್ತಪ್ರತಿ ಎಂಬುದಾಗಿದ್ದು ಇದರಲ್ಲಿ ಹಸ್ತಪ್ರತಿ ಎಂದರೇನು? ಎನ್ನುವ ಬಗ್ಗೆ ವ್ಯಾಖ್ಯಾನ ಕೊಡಲಾಗಿದೆ. ಜೊತೆಗೆ ಅದರ ಸ್ವರೂಪ ಹೇಳಲಾಗಿದೆ. ಹಸ್ತಪ್ರತಿಯ ಬಗ್ಗೆ ನಿಘಂಟುವಿನ ಅರ್ಥ, ರೂಢಿಗತ ಪದಗಳು, ವಿಶ್ವಕೋಶ ಮತ್ತು ವಿದ್ವಾಂಸರ ವಿವರಣೆ, ಹಸ್ತಪ್ರತಿಯ ಲಕ್ಷಣಗಳು ಮುಂತಾದ ಸಂಗತಿಗಳು ಈ ಅದ್ಯಾಯದಲ್ಲಿ ಚರ್ಚಿತಗೊಂಡಿವೆ. ಮೂರನೆಯ ಅಧ್ಯಾಯವು 'ಕನ್ನಡ ಹಸ್ತಪ್ರತಿ ಸಂಪತ್ತು, ವೈವಿಧ್ಯತೆ ಮತ್ತು ಪ್ರಾಚೀನತೆ' ಎನ್ನುವುದಾಗಿದೆ. ಇದರಲ್ಲಿ ಅಜ್ಞಾತಯುಗ, ಜ್ಞಾತಯುಗ, ಹಸ್ತಪ್ರತಿ ಪ್ರಾಚೀನತೆ ಎನ್ನುವ ಅಂಶಗಳ ಬಗ್ಗೆ ವಿಶೇಷವಾಗಿ ಚರ್ಚಿಸಲಾಗಿದೆ. ಈ ಮೂಲಕ ಹಸ್ತಪ್ರತಿಯ ಸ್ಥೂಲ ಇತಿಹಾಸ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಹಸ್ತಪ್ರತಿ 'ಲೇಖನ ಸಾಮಗ್ರಿ' ಎನ್ನುವ ನಾಲ್ಕನೆಯ ಅಧ್ಯಾಯದಲ್ಲಿ ಒಟ್ಟು ಸಾಮಗ್ರಿಗಳನ್ನು ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಆಧಾರ ಸಾಮಗ್ರಿ, ಆಧೇಯ ಸಾಮಗ್ರಿ, ಲೇಪನ ಸಾಮಗ್ರಿ ಎಂಬುದಾಗಿ ವಿಂಗಡಿಸಿಕೊಳ್ಳಲಾಗಿದ್ದು, ಅವುಗಳಲ್ಲಿ ಮತ್ತೆ ಉಪ ವಿಭಾಗಗಳನ್ನು ಮಾಡಿಕೊಂಡು ವಿಷಯ ವಿಶ್ಲೇಷಣೆ ಮಾಡಲಾಗಿದೆ. ಆಧಾರ ಸಾಮಗ್ರಿಯಲ್ಲಿ ಉತ್ಕೀರ್ಣ್ಯ, ಲೇಪ್ಯ, ಉಭಯ ಸಾಮಗ್ರಿ ಎಂದು ಮತ್ತೆ ಮೂರು ಬಾಗ ಮಾಡಿದ್ದರೆ, ಆಧೇಯ ಸಾಮಗ್ರಿಯಲ್ಲಿ ಉತ್ಕೀರ್ಣ ಮತ್ತು ಲೇಪಕ ಸಾಮಗ್ರಿಗಳು ಎನ್ನುವ ಎರಡು ಭಾಗ ಮಾಡಲಾಗಿದೆ. ಮತ್ತು ಮೂರನೆಯದಾದ ಲೇಪನ ಸಾಮಗ್ರಿಯಲ್ಲಿ ದ್ರವ, ಘಟನ ಮತ್ತು ಲೇಹ್ಯ ಹೀಗೆ ಮೂರು ಭಾಗ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ಐದನೆಯ ಅಧ್ಯಾಯವು ಹಸ್ತಪ್ರತಿ ವಿನ್ಯಾಸಕಾರರು ಎಂಬುದಾಗಿದ್ದು, ಇದರಲ್ಲಿ ಹಸ್ತಪ್ರತಿಯ ನಿರ್ಮಾಣದ ಹಂತಗಳು, ವಿನ್ಯಾಸಕಾರರು, ಅವರ ವೃತ್ತಿ ಚಟುವಟಿಕೆಗಳು, ಓಲೆಯವರು, ಓಲೆಗಳ ಸಂಗ್ರಹ, ಅಳಕ ತಯಾರಿಸುವ ಕೌಶಲ, ಓಲೆ ವೃತ್ತಿಕಾರರ ಉಲ್ಲೇಖ, ಬಡಿಗ, ಚಿತ್ರಕ, ಲೋಹಕಾರ, ಲಿಪಿಕಾರ, ಪ್ರಾಚೀನ ಲಿಪಿಕಾರರು, ವಸ್ತ್ರದವರು, ಬರಪೇಕಾರರು, ಮಸಿವೃತ್ತಿ ಲಿಪಿಕಾರ, ಲೇಖನ ವಿಧಾನ, ಬರಪೇಕಾರರಿಗೆ ಗೌರವ, ವೃತ್ತಿ ಸ್ಪರ್ಧೆ, ಹಸ್ತಪ್ರತಿ ನಿರ್ಮಾಣ ಚಟುವಟಿಕೆಯ ಘಟ್ಟಗಳು, ಹೀಗೆ ಅನೇಕ ವಿಷಯಗಳ ಬಗೆಗೆ ವಿವೇಚಿಸಲಾಗಿದೆ.

ಆರನೆಯ ಅಧ್ಯಾಯವು ಹಸ್ತಪ್ರತಿ ಪೋಷಣೆ, ಪ್ರಸರಣ ಮತ್ತು ಪೋಷಕರ ಕುರಿತಾಗಿದೆ. ಇಲ್ಲಿ ಯಾರು ಹಸ್ತಪ್ರತಿಗೆ ಪೋಷಣೆ ಕೊಟ್ಟು ಬೆಳೆಯಲು ಕಾರಣರಾದರು ಎನ್ನುವುದನ್ನು ಹೇಳಲಾಗಿದೆ. ಜೈನಧರ್ಮದ ಪೋಷಣೆ, ನೊಂಪಿಗಳು, ಭಟ್ಟಾರಕ ಮಠಗಳ ಕರ್ತವ್ಯ, ಜಿನಾಲಯ ಲೇಖನಾಗಾರ,

೧. ಡಾ.ಬಿ.ಕೆ.ಹಿರೇಮಠ : ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ : ವೀರಶೈವ ಅಧ್ಯಯನ ವೇದಿಕೆ ಹಿರೇಮಠ ಕಸಬಾ ಜಂಬಗಿ-೧೯೯೨

ಬಸದಿಗಳ ಆಸರೆ, ವೀರಶೈವ ಧರ್ಮದ ಪೋಷಣೆ, ಶರಣರ ಆಂದೋಲನ, ಧರ್ಮಾಭಿಮಾನಿಗಳ ಆಸರೆ, ಕೊಡೇಕಲ್ಲ ಪರಂಪರೆಗಳು, ಪೀಠಾರೋಹಣದ ಉಡುಗೊರೆ, ಶಾಸ್ತ್ರದಾನ, ಮಠಗಳ ಆಸರೆ, ಶೈವ ಮತ್ತು ವೈದಿಕ ಧರ್ಮಗಳ ಆಸರೆ, ವೈಯಕ್ತಿಕ ಹಸ್ತಪ್ರತಿ ಪೋಷಣೆ, ಹಸ್ತಪ್ರತಿಗಳ ಪ್ರಸರಣ, ಪೋಷಕರ ಉದ್ದೇಶ ಮುಂತಾದ ಸಂಗತಿಗಳ ಬಗ್ಗೆ ಇಲ್ಲಿ ಹೇಳಲ್ಪಟ್ಟಿದೆ. ಏಳನೆಯ ಅಧ್ಯಾಯವು ಹಸ್ತಪ್ರತಿಗಳ ಕಲಾವಿನ್ಯಾಸವಾಗಿದ್ದು, ಚಿತ್ರಕಲೆಯ ದೃಷ್ಟಿಯಿಂದ ಮಹತ್ವದ್ದಾಗಿದೆ. ಈ ಅಧ್ಯಾಯದಲ್ಲಿ ಹಸ್ತಪ್ರತಿಗಳ ಕಲಾವಿನ್ಯಾಸಕ್ಕೆ ಕಾರಣಗಳು, ಹಸ್ತಪ್ರತಿಗಳ ರೂಪರೇಖಾ ವಿನ್ಯಾಸ, ಹಸ್ತಪ್ರತಿಗಳ ಬರಹದ ವಿನ್ಯಾಸ, ಹಸ್ತಪ್ರತಿಗಳ ಚಿತ್ರಕಲೆಯ ವಿನ್ಯಾಸ ಎಂಬುದಾಗಿ ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ. ಮತ್ತೆ ಈ ವಿಂಗಡಣೆಯಲ್ಲಿ ಉಪ ಶೀರ್ಷಿಕೆಗಳಲ್ಲಿ ವಿಷಯಗಳನ್ನು ನಿರೂಪಣೆ ಮಾಡಿಕೊಂಡು ವಿವರಿಸುವಲ್ಲಿ ಅಧ್ಯಯನಕಾರರ ಜ್ಞಾನದ ಆಳ ಕಂಡುಬುರುವುದು.

ವಿಶಿಷ್ಟಕಲೆ ಪತ್ರಚ್ಛೇದನ, ಚಿತ್ರರಚನೆಗಳ ವಿಂಗಡಣೆ, ಅಲಂಕಾರಿಕ ನಕ್ಷಾರಚನೆಗಳು, ಸಾಂದರ್ಭಿಕ ಚಿತ್ರರಚನೆಗಳು, ಅಗತ್ಯದ ಅಲಂಕಾರ ರಚನೆಗಳು, ಉದ್ದೇಶಿತ ಅಲಂಕಾರ ರಚನೆಗಳು, ಶಾಸ್ತ್ರ ಸಂಬಂಧಿ ರಚನೆಗಳು, ಕಥಾಸಂಬಂಧಿ ಚಿತ್ರರಚನೆಗಳು ಎನ್ನುವ ಅಂಶಗಳನ್ನು ಪರಿಶೀಲಿಸಲಾಗಿದೆ. ಅಲ್ಲದೆ ವರ್ಣಚಿತ್ರಕಲೆ ವಿಭಾಗದಲ್ಲಿ ಹಿನ್ನೆಲೆ, ಚಿಕಣಿ ಚಿತ್ರಕಲೆ, ಭಾರತ ಮತ್ತು ಕರ್ನಾಟಕದಲ್ಲಿ ಬೆಳೆದ ರೀತಿ, ವರ್ಣಚಿತ್ರಗಳ ವಿಂಗಡಣೆ, ಚಿತ್ರಕಾರರ ಉಲ್ಲೇಖ, ಚಿತ್ರರಚನೆಯ ಹಂತಗಳು, ಸಿದ್ಧತಾ ರಂಗ, ಸಮತಲ ನಿರ್ಮಾಣ, ವರ್ಣಸಾಮಗ್ರಿ, ಅವುಗಳ ತಯಾರಿಕೆ, ಕುಂಚಗಳ ತಯಾರಿಕೆ, ಪ್ರಕಾರಗಳು, ಚಿತ್ರದ ವಸ್ತುವಿಷಯಗಳು, ಚಿತ್ರಕಾರನ ಸಮಸ್ಯೆಗಳು ಹೀಗೆ ಚಿತ್ರಕಲೆಯ ಹಲವು ಸಂಗತಿಗಳು ಇಲ್ಲಿ ಚರ್ಚಿಸಲ್ಪಟ್ಟಿವೆ.

ಎಂಟನೆಯ ಅಧ್ಯಾಯದಲ್ಲಿ ಹಸ್ತಪ್ರತಿ ಸಂರಕ್ಷಣಾ ಕ್ರಮಗಳು ಮತ್ತು ಆಪತ್ತುಗಳು ಎಂಬ ವಿಷಯವಾಗಿ ಚರ್ಚಿಸಲಾಗಿದ್ದು, ಪರೋಕ್ಷವಾಗಿ ಕಿರು ರೂಪ ಚಿತ್ರಶೈಲಿಯ ಆಪತ್ತು ಮತ್ತು ಸಂರಕ್ಷಣೆಯ ಬಗ್ಗೆ ಚರ್ಚಿಸಿದಂತಾಗಿದೆ. ಸಂರಕ್ಷಣೆಯಲ್ಲಿ ಅನುಸರಿಸುವ ಪರಂಪರಾಗತ ವಿಧಾನಗಳು ವೈಜ್ಞಾನಿಕ ಕ್ರಮಗಳನ್ನು ಹೇಳಲಾಗಿದೆ. ಒಂಭತ್ತನೆಯ ಅಧ್ಯಾಯದಲ್ಲಿ ಹಸ್ತಪ್ರತಿ ಅಧ್ಯಯನ ಸಮೀಕ್ಷೆ ಇದ್ದರೆ, ಹತ್ತನೆಯ ಅಧ್ಯಾಯದಲ್ಲಿ ಒಟ್ಟು ಅಧ್ಯಯನ ಫಲಿತಗಳನ್ನು ಕೊಡಲಾಗಿದೆ. ಈ ಗ್ರಂಥವು ಚಿತ್ರಕಲಾ ಅಧ್ಯಯನದ ಮಾದರಿಯನ್ನು ರೂಪಿಸುವಲ್ಲಿ ಸಹಕಾರಿಯಾಯಿತು ಎನ್ನಬಹುದು.

**ಕರ್ನಾಟಕ ಜನಪದ ಚಿತ್ರಕಲೆ :**

ಕರ್ನಾಟಕ ಚಿತ್ರಕಲಾ ಕ್ಷೇತ್ರದಲ್ಲಿ ಮೊದಲ ಪಿಎಚ್.ಡಿ. ಪ್ರಬಂಧವೆಂದು ಪರಿಗಣಿಸಲಾದ ಈ ಸಂಶೋಧನೆಯನ್ನು ಎಸ್.ಸಿ.ಪಾಟೀಲ ಅವರು ಡಾ.ಬಿ.ಆರ್. ಹಿರೇಮಠ ಅವರ ಮಾರ್ಗದರ್ಶನದಲ್ಲಿ ಕೈಗೊಂಡು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಾದರಪಡಿಸಿದ್ದಾರೆ.[೨] ೧೯೯೧ರಲ್ಲಿ ಪಿಎಚ್.ಡಿ. ಪದವಿಲಭ್ಯವಾದ ಈ ಪ್ರಬಂಧವು ೧೯೯೩ರಲ್ಲಿ ಗದುಗಿನ ತೋಂಟದಾರ್ಯ ಮಠದಿಂದ ಪ್ರಕಟಗೊಂಡಿದೆ. ಕರ್ನಾಟಕದ ಜನಪದ ಚಿತ್ರಕಲೆಯನ್ನು ಮುಖ್ಯವಾಗಿ ಇಲ್ಲಿ ಅಧ್ಯಯನಕ್ಕೆ ಆಯ್ದುಕೊಂಡಿದ್ದು, ಉತ್ತರ ಕರ್ನಾಟಕದ ಭಾಗವನ್ನು ಹೆಚ್ಚು ಕೇಂದ್ರೀಕರಿಸಿ ಅಧ್ಯಯನ ಮಾಡಲಾಗಿದೆ. ಈ ಪ್ರಬಂಧದಲ್ಲಿ ಏಳು ಅಧ್ಯಾಯಗಳನ್ನು ಮಾಡಿಕೊಂಡು ವಿಷಯ ವಿಶ್ಲೇಷಣೆ ಮಾಡಲಾಗಿದೆ. ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನಗಳೊಂದಿಗೆ ಪ್ರಸ್ತುತತೆ ಮತ್ತು

೨. ಡಾ.ಎಸ್.ಸಿ.ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ: ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಟದಾರ್ಯ ಸಂಸ್ಥಾನಮಠ, ಗದಗ-೧೯೯೩

ಮಹತ್ವಗಳನ್ನು ಹೇಳಿದೆ. ಎರಡನೆಯ ಅಧ್ಯಾಯದಲ್ಲಿ ಜನಪದ ಚಿತ್ರಕಲೆ ಮತ್ತು ಶಿಷ್ಟಪದ ಚಿತ್ರಕಲೆಗಳ ವಿಂಗಡಣೆ ಮತ್ತು ವೈಲಕ್ಷಣಗಳ ಬಗ್ಗೆ ಹೇಳಲಾಗಿದೆ. ಇದರ ಜೊತೆಗೆ ಕಲೆಯ ಅರ್ಥ ಮತ್ತು ಸ್ವರೂಪ, ಕಲೆ ಮತ್ತು ವಿದ್ಯೆ, ಕಲೆಯ ಉಗಮ ಮತ್ತು ವಿಕಾಸ, ಕಲೆಯ ಪ್ರಕಾರಗಳು, ಚಿತ್ರಕಲೆ ಮತ್ತು ಅದರ ಶ್ರೇಷ್ಠತೆ, ಚಿತ್ರಕಲೆಯ ವಿಂಗಡಣೆ ಇವುಗಳ ಬಗ್ಗೆ ವಿವೇಚನೆ ಇದೆ. ಜನಪದ ಚಿತ್ರಕಲೆಯ ಇತಿಹಾಸವನ್ನು ಎರಡನೆಯ ಅಧ್ಯಾಯದಲ್ಲಿ ಕಟ್ಟಿಕೊಡಲಾಗಿದೆ. ಇಲ್ಲಿ ಮುಖ್ಯವಾಗಿ ಮೂರು ಘಟ್ಟಗಳನ್ನಾಗಿ ಮಾಡಿಕೊಳ್ಳಲಾಗಿದೆ.

ಮೊದಲನೆಯ ಹಂತದಲ್ಲಿ ಪ್ರಾಗಿತಿಹಾಸ ಕಾಲದಲ್ಲಿ ಬೆಳೆದುಬಂದ ಬಂಡೆ ಚಿತ್ರಕಲೆಯ ನೆಲೆಗಳ ಬಗ್ಗೆ ಹೇಳಿದರೆ, ಎರಡನೆಯ ಹಂತದಲ್ಲಿ ಮನೆ, ಮಠ, ದೇವಾಲಯಗಳಲ್ಲಿ ರಚನೆಯಾಗಿರುವ ಪ್ರಾಚೀನ ಕಾಲದ ಭಿತ್ತಿಚಿತ್ರಗಳ ಕುರಿತು ವಿವೇಚಿಸಲಾಗಿದೆ. ಮತ್ತು ಮೂರನೆಯ ಘಟ್ಟದಲ್ಲಿ ಹಸ್ತಪ್ರತಿಗಳಲ್ಲಿ ಕಂಡು ಬರುವ ಚಿತ್ರಕಲೆಗಳ ಹಿನ್ನೆಲೆ ಇಟ್ಟುಕೊಂಡು ಜನಪದ ಚಿತ್ರಕಲೆಯ ಇತಿಹಾಸವನ್ನು ರೂಪಿಸಲಾಗಿದೆ. ಉತ್ತರ ಕರ್ನಾಟಕದ ಪ್ರಾಚೀನ ಚಿತ್ರಕಲೆಯ ನೆಲೆಗಳು, ಭಾರತದ ಚಿತ್ರಕಲೆ, ಕರ್ನಾಟಕದ ಪ್ರಾಚೀನ ಚಿತ್ರಕಲೆ, ಬಯಲುಬಂಡೆಯ ಮೇಲಿನ ಚಿತ್ರಗಳು, ಬಿಜಾಪುರ ಜಿಲ್ಲೆಯ ಬಯಲು ಬಂಡೆಯ ಚಿತ್ರಗಳು, ರಾಯಚೂರು ಜಿಲ್ಲೆಯ ಬಯಲು ಬಂಡೆಯ ಚಿತ್ರಗಳು, ಬಳ್ಳಾರಿಯ ಬಯಲು ಬಂಡೆಯ ಚಿತ್ರಗಳು ಎಂಬುದಾಗಿ ವಿಂಗಡಿಸಿ ವಿವೇಚಿಸಲಾಗಿದೆ. ಅದೇ ರೀತಿ ಗವಿವರ್ಣ ಚಿತ್ರಗಳ ನೆಲೆಗಳನ್ನು ವಿಂಗಡಿಸಿದೆ. ಎರಡನೆಯ ಹಂತದಲ್ಲಿ ಭಿತ್ತಿಚಿತ್ರ ನೆಲೆಗಳಲ್ಲಿ ಮನೆಗಳು, ಅರಮನೆಗಳು, ಮಠಗಳು, ಮಂದಿರಗಳು, ಗುಹಾಲಯಗಳು, ಮಸೀದಿ, ಚರ್ಚುಗಳಲ್ಲಿ ಕಂಡು ಬರುವ ಭಿತ್ತಿಚಿತ್ರಗಳೆಂದು ವರ್ಗೀಕರಿಸಿ, ಅವುಗಳ ಬಗ್ಗೆ ಚರ್ಚಿಸಲಾಗಿದೆ. ಮೂರನೆಯ ಘಟ್ಟದಲ್ಲಿ ಹಸ್ತಪ್ರತಿ ಮತ್ತು ಪ್ರಾಚೀನ ಗ್ರಂಥಗಳಲ್ಲಿ ಕಂಡು ಬರುವ ಚಿತ್ರಕಲೆಯ ಉಲ್ಲೇಖಗಳನ್ನು ಬಳಸಿಕೊಂಡು ಇತಿಹಾಸ ರೂಪಿಸುವ ಪ್ರಯತ್ನ ಮಾಡಲಾಗಿದೆ.

ಜನಪದ ಚಿತ್ರಕಲೆಯು ವಿವಿಧ ಉದ್ದೇಶಗಳ ಹಿನ್ನೆಲೆಯಲ್ಲಿ ರಚನೆಯಾಗುತ್ತಲಿದ್ದು, ಅದನ್ನು ವಿಷಯಾನುಸಾರ ವಿಂಗಡಿಸಿಕೊಂಡು, ಒಂದೊಂದು ವಿಷಯಕ್ಕೆ ಒಂದೊಂದು ಪ್ರತ್ಯೇಕ ಅಧ್ಯಾಯವನ್ನು ಮೀಸಲಿರಿಸಲಾಗಿದೆ. ಇಲ್ಲಿ ಜನಪದ ಚಿತ್ರಕಲೆಯನ್ನು ರಚನಾ ಉದ್ದೇಶಗಳ ಹಿನ್ನೆಲೆಯಲ್ಲಿ ಮೂರು ಭಾಗವಾಗಿ ವರ್ಗೀಕರಿಸಲಾಗಿದೆ. ಸೌಂದರ್ಯ ಮೂಲ ಜನಪದ ಚಿತ್ರಕಲೆ, ಧರ್ಮಮೂಲ ಜನಪದ ಚಿತ್ರಕಲೆ, ವೃತ್ತಿಮೂಲ ಜನಪದ ಚಿತ್ರಕಲೆ ಎಂದು ವಿಂಗಡಿಸಲಾಗಿದೆ. ಸೌಂದರ್ಯ ಮೂಲ ಜನಪದ ಚಿತ್ರಕಲೆ ಬಗೆಗೆ ನಾಲ್ಕನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಇಲ್ಲಿ ಸೌಂದರ್ಯ ಮೂಲ ಜನಪದ ಚಿತ್ರಕಲೆಯನ್ನು ಮತ್ತೆ ಪ್ರಯೋಜನಾ ಮೂಲ ಮತ್ತು ಮನರಂಜನಾ ಮೂಲ ಎಂಬುದಾಗಿ ವಿಂಗಡಿಸಿ ಅದರಲ್ಲಿ ಒಳಗೊಳ್ಳುವ ಜನಪದ ಚಿತ್ರಕಲಾ ಪ್ರಕಾರಗಳನ್ನು ಒಂದೊಂದಾಗಿ ವಿವೇಚಿಸಲಾಗಿದೆ. ಪ್ರಯೋಜನಾ ಮೂಲ ಜನಪದ ಚಿತ್ರಕಲೆಯು ಮಾಧ್ಯಮದ ಹಿನ್ನೆಲೆಯಲ್ಲಿ ಉಭಯ ಉದ್ದೇಶಗಳನ್ನು ಪೂರೈಸುವ ನಿಟ್ಟಿನಲ್ಲಿ ರಚಿಸಲ್ಪಡುತ್ತದೆ. ಉದಾಹರಣೆಗಾಗಿ ಹೇಳಬೇಕೆಂದರೆ, ಗೃಹಾಲಂಕಾರದ ಚಿತ್ರಕಲೆಯು ವಿವಿಧ ರೀತಿಯಲ್ಲಿ ರಚಿಸಲ್ಪಡುತ್ತದೆ. ಮನೆಯ ಹೊರಭಾಗದ ಗೋಡೆಗಳಿಗೆ ಜೇಡಿಮಣ್ಣು, ಕೆಮ್ಮಣ್ಣು, ಸಗಣಿ, ಸುಣ್ಣ ಇವುಗಳನ್ನು ಲೇಪಿಸಿ ಬಣ್ಣದ ಪಟ್ಟಿಗಳನ್ನು ಎಳೆಯುವಲ್ಲಿ ಮನೆಯ ಸೌಂದರ್ಯ ವೃದ್ಧಿಗೊಳಿಸುವುದರ ಜೊತೆಗೆ ಮನೆಯ ರಕ್ಷಣೆಯು ಇದರಲ್ಲಿ ಅಡಗಿದೆ. ಹಾಗೆಯೇ ಮನೆಯ ಒಳಭಾಗದ ಗೋಡೆಯ ಕೆಳಭಾಗ ಮತ್ತು ಜಂತಿಗೆ ಡಾಂಬರು,

ವಾರ್ನಿಸು, ಕೆಮ್ಮಣ್ಣುಗಳನ್ನು ಲೇಪಿಸುವುದರ ಹಿಂದೆ ಸೌಂದರ್ಯ ಮತ್ತು ರಕ್ಷಣೆಯ ಉದ್ದೇಶಗಳು ಅಡಗಿಕೊಂಡಿವೆ. ಹಾಗಾಗಿ ಇಲ್ಲಿ ಪ್ರಯೋಜನಾ ಮೂಲ ಜನಪದ ಚಿತ್ರಕಲೆಯನ್ನು ಈ ಎರಡೂ ದೃಷ್ಟಿಕೋನಗಳಿಂದ ಅಧ್ಯಯನಕ್ಕೊಳಪಡಿಸಲಾಗಿದೆ. ಇದರಲ್ಲಿ ಗೃಹಾಲಂಕಾರದ ಚಿತ್ರ ವಿನ್ಯಾಸ, ಹಚ್ಚೆ ಚಿತ್ರಕಲೆ, ಮದರಂಗಿ ಚಿತ್ರಕಲೆ, ತಾಳೆಗರಿ, ಕಡತ, ರಟ್ಟಿನ ಮೇಲಿನ ಚಿತ್ರಕಲೆ, ನೀಲಿ ಹೊತ್ತಿಗೆ, ಗಿಳಿ ಶಕುನದ ಚಿತ್ರಕಲೆ, ಕೌದಿ ಚಿತ್ರಕಲೆ, ಕಸೂತಿ ಚಿತ್ರಕಲೆ, ನೇಯ್ಗೆ ಚಿತ್ರಕಲೆ ಮುಂತಾದವು ಅಧ್ಯಯನಕ್ಕೊಳಪಟ್ಟಿವೆ. ಹಾಗೆಯೇ ಸೌಂದರ್ಯ ಮೂಲ ಜನಪದ ಚಿತ್ರಕಲೆಯಲ್ಲಿ ಮತ್ತೊಂದು ಭಾಗವಾದ ಮನರಂಜನಾ ಮೂಲ ಚಿತ್ರಕಲೆಯಲ್ಲಿ ಮನೆಯ ಒಳಾಂಗಣದ ಆಟಗಳಲ್ಲಿ ಚಿತ್ರಕಲೆ, ಮನೆಯ ಹೊರಾಂಗಣದ ಆಟಗಳಲ್ಲಿ ಚಿತ್ರಕಲೆ ಎಂದು ವರ್ಗೀಕರಿಸಿ ವಿವೇಚಿಸಲಾಗಿದೆ. ಇಲ್ಲಿ

ಮೊದಲನೆಯದಾದ ಮನೆಯ ಒಳಾಂಗಣದ ಆಟಗಳಲ್ಲಿ ಕಂಡು ಬರುವ ಚಿತ್ರಕಲಾ ಪ್ರಕಾರಗಳಲ್ಲಿ ಗಂಜೀಫಾ, ಪಗಡೆ ಆಟ, ಚಕಾರಮನಿ, ಹುಲಿಮನಿ, ಕೈಲಾಸಪಟಗಳಲ್ಲಿನ ಚಿತ್ರಕಲೆಗಳನ್ನು ಪರಿಗಣಿಸಿದರೆ, ಹೊರಾಂಗಣದ ಆಟಗಳಲ್ಲಿ ತೊಗಲುಗೊಂಬೆಯ ಚಿತ್ರಕಲೆ, ಸೂತ್ರದ ಗೊಂಬೆ ಚಿತ್ರಕಲೆ, ಕೀಲುಗೊಂಬೆಗಳ ಚಿತ್ರಕಲೆ, ಯಕ್ಷಗಾನ, ದೊಡ್ಡಾಟ, ಬಯಲಾಟ ಮತ್ತು ಪಾರಿಜಾತ ಆಟಗಳಲ್ಲಿನ ಮುಖವರ್ಣಿಕೆಗಳಲ್ಲಿ ಕಂಡು ಬರುವ ಚಿತ್ರಕಲಾ ವಿನ್ಯಾಸಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ಈ ಪ್ರಕಾರದ ಕಲೆಗಳಲ್ಲಿ ಮುಖ್ಯ ಉದ್ದೇಶ ಸೌಂದರ್ಯದ ಹಿನ್ನೆಲೆಯ ಜೊತೆಗೆ ಮನರಂಜನೆಯೂ ಆಗಿರುತ್ತದೆ.

ಜನಪದರ ಧಾರ್ಮಿಕ ವಿಚಾರಗಳು, ನಂಬಿಕೆ, ಆಚರಣೆಗಳು, ವಿಧಿಕ್ರಿಯೆಗಳು, ಉತ್ಸವಾದಿ ಶುಭ-ಸಮಾರಂಭಗಳಲ್ಲಿ ರಚನೆಯಾಗುವ ಧರ್ಮಮೂಲ ಜನಪದ ಚಿತ್ರಕಲೆಯ ಬಗೆಗೆ ಐದನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಇಲ್ಲಿ ಧರ್ಮಮೂಲ ಜನಪದ ಚಿತ್ರಕಲೆಯನ್ನು ಧಾರ್ಮಿಕ ಹಿನ್ನೆಲೆಯ ಜನಪದ ಚಿತ್ರಕಲೆ ಮತ್ತು ತಾಂತ್ರಿಕ ಹಿನ್ನೆಲೆಯ ಜನಪದ ಚಿತ್ರಕಲೆ ಎಂಬುದಾಗಿ ವರ್ಗೀಕರಿಸಿ ವಿವೇಚಿಸಲಾಗಿದೆ. ಧರ್ಮಮೂಲ ಜನಪದ ಚಿತ್ರಕಲೆಯಲ್ಲಿ ಧಾರ್ಮಿಕತೆಯೇ ಪ್ರಧಾನವಾದರೂ ಅವು ರಚನೆಯಾಗುವ ಧಾರ್ಮಿಕ ಆಚರಣೆ ಮತ್ತು ಆಚರಣೆಯ ಹಿನ್ನೆಲೆಯ ಸಂದರ್ಭಗಳು ಬೇರೆ ಬೇರೆಯಾಗಿರುತ್ತವೆ. ಹಾಗಾಗಿ ಧರ್ಮಮೂಲ ಜನಪದ ಚಿತ್ರಕಲೆಯನ್ನು ಮತ್ತೆ ನಾಲ್ಕು ರೀತಿಯ ಉಪ ಪ್ರಕಾರಗಳಲ್ಲಿ ವಿಂಗಡಿಸಿ ವಿವೇಚಿಸಲಾಗಿದೆ. ಹಬ್ಬ-ಹರಿದಿನಗಳಲ್ಲಿ ಚಿತ್ರಿಸುವ ಚಿತ್ರವಿನ್ಯಾಸಗಳು, ದೇವರ ಉತ್ಸವ ಜಾತ್ರೆಗಳಲ್ಲಿ ಚಿತ್ರಿಸುವ ವಿನ್ಯಾಸಗಳು, ಮದುವೆ-ಮುಂಜಿವೆಗಳಲ್ಲಿ ಚಿತ್ರಿಸುವ ಚಿತ್ರವಿನ್ಯಾಸಗಳು ಮತ್ತು ಸಂಕೀರ್ಣ ರೀತಿಯ ಜನಪದ ಚಿತ್ರವಿನ್ಯಾಸಗಳೆಂದು ಪ್ರತ್ಯೇಕಿಸಿಕೊಳ್ಳಲಾಗಿದೆ. ಇವುಗಳಲ್ಲಿ ಹಬ್ಬ-ಹರಿದಿನಗಳಲ್ಲಿ ಚಿತ್ರಿಸುವ ಜನಪದ ಚಿತ್ರಕಲೆಯ ಗುಂಪಿನಲ್ಲಿ ಮನೆಗಳ ಒಳಭಾಗ ಮತ್ತು ಹೊರಭಾಗದ ವರ್ಣಅಲಂಕಾರ, ಬಣ್ಣದ ಜೋರು ಬಿಡುವುದು, ಸ್ವಸ್ತಿಕ, ಅಧಿಕಚಿಹ್ನೆ, ಪಾಂಡವರ ಸಾಂಕೇತಿಕ ಚಿತ್ರ ಬರೆಯುವುದು, ಬಾಗಿಲಿಗೆ ತೇರಿನಾಕೃತಿ ರಚಿಸುವುದು, ಮಾಡು-ಗೂಡುಗಳಿಗೆ ಬಣ್ಣದ ಅಲಂಕಾರ ಮಾಡುವುದು ಹೀಗೆ ಹಲವಾರು ಪ್ರಕಾರಗಳನ್ನು ಹೇಳಲಾಗಿದೆ. ಇದಲ್ಲದೆ ಬೆಳದಿಂಗಳ ಚಿತ್ರಕಲೆ, ಶೀಗಿ ಚಿತ್ರಕಲೆ, ಹಸೆ ಚಿತ್ರಕಲೆ, ದೀಪಾವಳಿಯಲ್ಲಿ ಪಾಂಡವರ ಚಿತ್ರ ಬರೆಯುವುದು ಮುಂತಾದವುಗಳನ್ನು ಹೇಳಿದೆ.ವಸ್ತುಗಳಲ್ಲಿನ ಕಲಾವಿನ್ಯಾಸದಲ್ಲಿ ರಂಟೆ, ಕುಂಟೆ, ನೇಗಿಲು, ನೊಗ-ಬಂಡಿಗಳು, ಎತ್ತಿಗೆ ಹಾಕುವ ಅಲಂಕಾರಿಕ ಸಾಮಾನುಗಳು, ಬಾರುಕೋಲು, ಕೂರಿಗೆ, ಮುಂತಾದವುಗಳನ್ನು ಪರಿಗಣಿಸಿದ್ದರೆ, ಕೃಷಿಯೇತರ ಉಪಕರಣಗಳಲ್ಲಿ ತೊಟ್ಟಿಲು, ಮಂಚ,

ಕೂಡ್ರುವ ಮಣೆ, ಒನಕೆ, ಅಡ್ಡಣಿಗೆ, ಈಳಿಗೆಮಣೆ, ಹೋಳಿಗೆಮಣೆ, ಲಟ್ಟಣಿಗೆ, ದೇವರ ಉತ್ಸವ ಜಾತ್ರೆಗಳಲ್ಲಿ ಚಿತ್ರಿಸುವ ವಿನ್ಯಾಸಗಳಲ್ಲಿ ದೇವಸ್ಥಾನಗಳನ್ನು ಸುಣ್ಣ, ಬಣ್ಣಗಳಿಂದ, ಚಿತ್ರ ವಿನ್ಯಾಸಗಳಿಂದ ಅಲಂಕರಿಸುವುದು, ದೇವರನ್ನು ಅಲಂಕರಿಸುವುದು, ತೇರನ್ನು ಅಲಂಕರಿಸುವ ಕ್ರಮಗಳನ್ನು ಹೇಳಲಾಗಿದೆ. ಮದುವೆ-ಮುಂಜಿವೆಗಳಲ್ಲಿನ ಚಿತ್ರಗಳಲ್ಲಿ ಮದುಮಕ್ಕಳು ಕುಳಿತುಕೊಳ್ಳುವ ಕಟ್ಟೆಯ ಮೇಲೆ ಮತ್ತು ಹಿಂದಿನ ಗೋಡೆಯನ್ನು ಚಿತ್ರಗಳಿಂದ ಅಲಂಕರಿಸುವುದು, ಮನೆ, ಬಾಗಿಲು, ಯಜ್ಞ ಕಟ್ಟೆಗಳನ್ನು ಶೃಂಗರಿಸುವುದು, ಬಾಸಿಂಗ ಅಲಂಕರಿಸುವುದು, ಹೀಗೆ ಅನೇಕ ಕ್ರಮಗಳನ್ನು ವಿವೇಚಿಸಲಾಗಿದೆ. ಸಂಕೀರ್ಣ ರೀತಿಯ ಚಿತ್ರ ವಿನ್ಯಾಸಗಳಲ್ಲಿ ಹಾಲಕ್ಕಿ ಜನಾಂಗದವರ ಹಸೆ ಚಿತ್ರಕಲೆ, ಸುಗ್ಗಿಕಾಲದ ಚಿತ್ರಕಲೆ, ದೇವರ ಜಗಲಿಯ ಮೇಲಿನ ಚಿತ್ರಕಲೆ, ಗದ್ದಿಗೆಯ ಮೇಲಿನ ಚಿತ್ರಕಲೆ, ತುಳಸಿಕಟ್ಟೆ ಮೇಲಿನ ಚಿತ್ರಕಲೆ ವಿನ್ಯಾಸಗಳನ್ನು ಪರಿಗಣಿಸಲಾಗಿದೆ.

ತಾಂತ್ರಿಕ ಹಿನ್ನೆಲೆಯ ಜನಪದ ಚಿತ್ರಕಲೆಯು ನಂಬಿಕೆ, ಆಚರಣೆಗಳ ಹಿನ್ನೆಲೆಯಲ್ಲಿ ದೈವತ್ವಕ್ಕೆ ಪರ್ಯಾಯವಾದ ಭಿನ್ನಮಾರ್ಗವನ್ನು ರೂಪಿಸಿಕೊಂಡು ಬೆಳೆದು ಬಂದುದಾಗಿದೆ. ಇಲ್ಲಿ ಮುಖ್ಯವಾಗಿ ದೆವ್ವ, ಭೂತ, ಪಿಶಾಚಿಗಳ ಚೇಷ್ಟೆ ನಿವಾರಣೆಗಾಗಿ ತಾಯಿತಗಳಲ್ಲಿ ಬರೆಯುವ ಚಿತ್ರವಿನ್ಯಾಸಗಳು, ನೆದರು ತೆಗೆಯಲು ನೆದರು ನಿವಾರಣಾ ಚಿತ್ರ ಬರೆಯುವುದು, ಸರ್ಪಹುಣ್ಣಿಗೆ ತಡೆ ಹಾಕಲು ಬರೆಯುವ ಕೆಂಪು ಹುರಿ ಮಂಜಿನ ಚಿತ್ರವಿನ್ಯಾಸ, ಗಣಜಲಿ ರೋಗ ನಿವಾರಣೆಗೆ ಎಲೆಯ ಚಿತ್ರ ಬರೆಸುವುದು, ಹೆರಿಗೆಯು ಬೇಗನೇ ಆಗಲು ಚಕ್ರಬಿಂಬದ ಚಿತ್ರ ರಚಿಸುವುದು, ಹೆರಿಗೆಯ ನಂತರ ಶೆಟಿಗೆವ್ವನ ಚಿತ್ರ ರಚಿಸುವುದು ಇಂತಹ ಸಂಗತಿಗಳನ್ನು ಇಲ್ಲಿ ಚರ್ಚಿಸಲಾಗಿದೆ. ಇದೇ ಗುಂಪಿನಲ್ಲಿ ಮುಖ್ಯವಾಗಿ ರಂಗೋಲಿ ಕಲೆಯನ್ನು ಮೊದಲನೆಯದಾಗಿ ಚರ್ಚೆಗೆ ಒಳಪಡಿಸಲಾಗಿದೆ. ಈ ರಂಗೋಲಿ ಕಲೆಯು ಧಾರ್ಮಿಕ ಉದ್ದೇಶಗಳು ಮಾತ್ರವಲ್ಲದೇ ತಾಂತ್ರಿಕ ಆಚರಣೆಗಳ ಹಿನ್ನೆಲೆಯಲ್ಲಿಯೂ ಪ್ರಮುಖವಾಗಿ ಬಳಸಲ್ಪಡುವುದರಿಂದ ಅದನ್ನು ಇಲ್ಲಿ ತಾಂತ್ರಿಕ ಹಿನ್ನೆಲೆಯ ಚಿತ್ರಕಲೆಯಲ್ಲಿ ವಿವೇಚಿಸಲಾಗಿದೆ. ದೇವರ ಮುಂದೆ, ಮನೆಯ ಬಾಗಿಲಿನ ಮುಂದೆ, ಧಾರ್ಮಿಕ ಪವಿತ್ರತೆಯ ಭಾವನೆಯಿಂದ ಹಾಕಲ್ಪಡುವ ರಂಗೋಲಿಯು ಮೋಡಿಯಾಟ, ಮಾಟ-ಮಂತ್ರ, ಭೂತಾರಾಧನೆ ಮಾತ್ರವಲ್ಲದೇ ಶ್ರಾದ್ಧಾ ಮತ್ತು ದಿನಕರ್ಮಗಳಂತಹ ಅಮಂಗಳ ಕಾರ್ಯಗಳಲ್ಲೂ ವಿಭಿನ್ನವಾಗಿ ಚಿತ್ರಿಸಲ್ಪಡುತ್ತದೆ. ಹಾಗಾಗಿ ಇದನ್ನು ತಾಂತ್ರಿಕ ಹಿನ್ನೆಲೆಯಲ್ಲಿ ಪರಿಗಣಿಸಲಾಗಿರುವುದು ಸೂಕ್ತವಾಗಿದೆ. ಇಲ್ಲಿ ರಂಗೋಲಿ ಕಲೆಯ ಬಗೆಗಿನ ವಿವೇಚನೆಯಲ್ಲಿ ಅದರ ರಚನಾ ಉದ್ದೇಶ ರಚನಾ ವಿಧಾನ, ಪರಿಕರಗಳು, ಸಂದರ್ಭಗಳ ಜೊತೆಗೆ ಈ ಕಲೆಯ ಪ್ರಕಾರಗಳು, ಶೈಲಿ, ಪ್ರಭಾವ, ಪ್ರೇರಣೆ ಮತ್ತು ಪ್ರಾದೇಶಿಕ ಅಂಶಗಳನ್ನು ಬಿಂಬಿಸುವ ಪ್ರಯತ್ನ ಕಂಡುಬರುತ್ತದೆ.

ಜನಪದರು ತಮ್ಮ ವೃತ್ತಿ ಬದುಕನ್ನೇ ಒಂದು ಕಲಾಕೃತಿಯಾಗಿ ರೂಪಿಸಿಕೊಳ್ಳುವಷ್ಟರ ಮಟ್ಟಿಗೆ ತಮ್ಮ ಕೆಲಸಗಳಲ್ಲಿ ಸೌಂದರ್ಯ ಪ್ರಜ್ಞೆಯನ್ನು ಮೈಗೂಡಿಸಿಕೊಂಡು ಬಂದವರಾಗಿದ್ದಾರೆ. ಜನಪದರ ಚಿತ್ರಕಲಾ ಪ್ರಕಾರದಲ್ಲಿ ವೃತ್ತಿಮೂಲ ಜನಪದ ಚಿತ್ರಕಲೆ ಎಂಬುದಾಗಿ ಪ್ರತ್ಯೇಕ ವರ್ಗೀಕರಣ ಮಾಡಿಕೊಳ್ಳಲಾಗಿದ್ದು, ಆರನೆಯ ಅಧ್ಯಾಯದಲ್ಲಿ ಅದರ ಬಗ್ಗೆ ವಿವೇಚಿಸಲಾಗಿದೆ. ಜನಪದರು ತಮ್ಮ ದಿನನಿತ್ಯದ ಉಪಯೋಗಿ ವಸ್ತುಗಳು ಸುಂದರವಾಗಿರಬೇಕು ಎನ್ನುವ ಉದ್ದೇಶಗಳಿಂದ ಅವುಗಳ ಮೇಲೆ ಬಣ್ಣದ ಚಿತ್ರವಿನ್ಯಾಸಗಳನ್ನು ರೂಪಿಸುತ್ತ ಬಂದಿರುವುದು ಒಂದು ಬಗೆಯಾದರೆ, ಕಲೆಯನ್ನೇ ತಮ್ಮ ಬದುಕಿನ ಮೂಲ ವೃತ್ತಿಯಾಗಿ ಮಾಡಿಕೊಂಡವರು ಮತ್ತೊಂದು ರೀತಿಯಾಗಿದೆ. ಹಾಗಾಗಿ ವೃತ್ತಿಮೂಲ ಜನಪದ ಚಿತ್ರಕಲೆಯನ್ನು ಇಲ್ಲಿ ಮತ್ತೆ ವೃತ್ತಿಯಲ್ಲಿ ಕಲೆಯ ಆರೋಪ, ಕಲೆಯನ್ನೇ

ವೃತ್ತಿ ಮಾಡಿಕೊಂಡವರು ಎಂದು ಎರಡು ರೀತಿಯಲ್ಲಿ ವರ್ಗೀಕರಿಸಲಾಗಿದೆ. ವೃತ್ತಿಯಲ್ಲಿ ಕಲೆಯ ಅಂಶವನ್ನು ತಂದುಕೊಂಡು ತಮ್ಮ ಉಪಕರಣ ಹಾಗೂ ಬದುಕನ್ನು ಕಲಾತ್ಮಕವಾಗಿ ಮಾಡಿಕೊಂಡ ಅನೇಕ ಕಸುಬುಗಳ ಜನರು ಕಂಡುಬರುತ್ತಾರೆ. ಈ ಗುಂಪಿನಲ್ಲಿ ಕೃಷಿ ಪ್ರಧಾನ ವಸ್ತುಗಳಲ್ಲಿ ಕಲಾವಿನ್ಯಾಸ, ಕೃಷಿಯೇತರ ಗೃಹೋಪಯೋಗಿ ಉಪಕರಣಗಳಲ್ಲಿ ಕಲಾವಿನ್ಯಾಸ ಎಂದು ಎರಡು ರೀತಿಯಲ್ಲಿ ವಿವೇಚಿಸಲಾಗಿದೆ. ಕೃಷಿ ಪ್ರಧಾನ ಗಡಿಗೆ, ಕುಡಿಕೆ, ತತ್ರಾಣಿ, ಬೀಸುಕಲ್ಲು, ಮುಂತಾದ ಕಲಾತ್ಮಕ ಸಾಮಗ್ರಿಗಳನ್ನು ಅಧ್ಯಯನಕ್ಕೆ ಪರಿಗಣಿಸಿ, ಅವುಗಳ ರಚನಾ ವಿಧಾನ, ಬಣ್ಣಗಾರಿಕೆ, ಕಲಾವಿದರ ಬಗೆಗೆ ವಿವೇಚಿಸಲಾಗಿದೆ.

ಕಲೆಯನ್ನೇ ವೃತ್ತಿಮಾಡಿಕೊಂಡ ಜನಾಂಗಗಳು ಹಲವು ಬಗೆಯ ಕಲಾತ್ಮಕ ವಸ್ತುಗಳನ್ನು ನಿರ್ಮಿಸುವ ಮೂಲಕ ಜನಪದ ಕಲಾಲೋಕವನ್ನು ಶ್ರೀಮಂತಗೊಳಿಸಿದ್ದಾರೆ. ಇಲ್ಲಿ ಕಲಘಟಗಿ ತೊಟ್ಟಿಲು ತಯಾರಿಕೆ, ಹುಬ್ಬಳ್ಳಿ ಸೀರೆಗಳಿಗೆ ಬಣ್ಣ ಹಾಕುವುದು, ಗೋಕಾಕ ಕಟ್ಟಿಗೆಯ ಅಲಂಕಾರಿಕ ವಸ್ತುಗಳ ತಯಾರಿಕೆ, ಮುತ್ತಗಿಯ ದೊಡ್ಡಾಟ ವಸ್ತ್ರಾಲಂಕಾರ ವೃತ್ತಿ, ತೊನಶ್ಯಾಳ ದೇವರ ಮೂರ್ತಿಗೆ ಬಣ್ಣ ಬರೆಯುವವರು, ತಾಳಿಕೋಟೆ ದುರಗ-ಮುರಗಿ ಮತ್ತು ಗಿಳಿ ಶಕುನ ಚಿತ್ರ ಬರೆಯುವವರು, ಕಿನ್ನಾಳ ಅಲಂಕರಣ ಉಪಕರಣಗಳ ತಯಾರಕರು ಮುಂತಾದವರನ್ನು ಅವರ ಕಲಾವೃತ್ತಿಯೊಂದಿಗೆ ಅಧ್ಯಯನಕ್ಕೊಳಪಡಿಸಲಾಗಿದೆ. ಇಲ್ಲಿ ಈ ಕಲಾ ಪ್ರಕಾರಗಳ ಕಲಾವಿದರು, ಅವರ ಕಲಾಕೃತಿ ರಚನಾ ವಿಧಾನ, ಪರಿಕರಗಳ ಶೈಲಿ, ತಂತ್ರಗಾರಿಕೆ, ಪ್ರಭಾವ, ಪ್ರೇರಣೆ ಮತ್ತು ಸ್ಥೂಲವಾದ ಐತಿಹಾಸಿಕ ಹಿನ್ನೆಲೆಯನ್ನು ಕೊಡಲು ಪ್ರಯತ್ನಿಸಲಾಗಿದೆ. ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು ಒಟ್ಟು ಅಧ್ಯಯನ ಫಲಿತಗಳನ್ನು ಕೊಡಲಾಗಿದೆ.

ಈ ಪ್ರಬಂಧದಲ್ಲಿ ಜನಪದ ಕಲೆಯ ಜೊತೆಗೆ ಒಟ್ಟು ಚಿತ್ರಕಲಾ ಕ್ಷೇತ್ರದ ಹಲವಾರು ಅಂಶಗಳು ಮೊದಲ ಬಾರಿಗೆ ವೈಜ್ಞಾನಿಕ ಹಿನ್ನೆಲೆಯಲ್ಲಿ ಬೆಳಕು ಕಂಡವು. ಜೊತೆಗೆ ಮುಂದಿನ ಇಂತಹ ಗಂಭೀರ ಅಧ್ಯಯನಗಳಿಗೆ ಮಾರ್ಗದರ್ಶಿಯಾಗಿ, ಅಧ್ಯಯನ ವಿಧಾನಗಳನ್ನು ರೂಪಿಸಿಕೊಳ್ಳುವಲ್ಲಿ ಸಹಕಾರಿಯಾಗಿದೆ. ಜನಪದ ಹಿನ್ನೆಲೆಯಲ್ಲಿ ಕರ್ನಾಟಕದ ಹಲವಾರು ಕಲಾ ಪ್ರಕಾರಗಳು ಇಲ್ಲಿ ಸ್ಥೂಲರೂಪದಲ್ಲಿ ಹೇಳಲ್ಪಟ್ಟಿದ್ದು, ಕರ್ನಾಟಕದ ಬಹುಮಟ್ಟಿನ ಕಲಾಪ್ರಕಾರಗಳ ಅಧ್ಯಯನಕ್ಕೆ ಆಕಾರ ಗ್ರಂಥವಾಗಿಯೂ ಇದು ರೂಪುಗೊಂಡಿದೆ ಮೌಲಿಕವಾದ ಸ್ಥಾನ ಪಡೆದುಕೊಂಡಿದೆ.

**ಕರ್ನಾಟಕದ ಭಿತ್ತಿಚಿತ್ರ ಪರಂಪರೆ :**

'ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು' ಎಂಬ ಸಂಶೋಧನಾ ಪ್ರಬಂಧವನ್ನು ಅ.ಲ.ನರಸಿಂಹನ್‌ರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿ ಪಿಎಚ್.ಡಿ. ಪಡೆದುಕೊಂಡಿದ್ದಾರೆ. ಈ ಪ್ರಬಂಧವನ್ನು ಸಂಸ್ಕರಿಸಿ 'ಕರ್ನಾಟಕದ ಭಿತ್ತಿಚಿತ್ರಪರಂಪರೆ' ಹೆಸರಿನಿಂದ ರಾಜ್ಯ ಲಲಿತಕಲಾ ಅಕಾಡಮಿ ಪ್ರಕಟಿಸಿದೆ.[೩] ಈ ಪ್ರಬಂಧದಲ್ಲಿ ಒಟ್ಟು ಎಂಟು ಅಧ್ಯಾಯಗಳಲ್ಲಿ ವಿಷಯ ನಿರೂಪಣೆಗೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಮಹತ್ವ ಮತ್ತು ಅವಶ್ಯಕತೆಗಳನ್ನು ಹೇಳಲಾಗಿದೆ. ಸಾಹಿತ್ಯದಲ್ಲಿ ಚಿತ್ರಕಲೆಯ ಅಂಶಗಳು, ಶಾಸ್ತ್ರಗ್ರಂಥಗಳಲ್ಲಿ ಪ್ರತಿಮಾಲಕ್ಷಣಗಳು, ಅಳತೆಯ ವಿಧಾನ, ನವಸ್ಥಾನಗಳು, ಶಾಪಾಶಯ, ಚಿತ್ರದೋಷ, ಶಾಸ್ತ್ರಗ್ರಂಥಗಳ ಬಳಕೆ, ವಿದೇಶಿ ಪ್ರವಾಸಿಗರು ಕರ್ನಾಟಕದ ಚಿತ್ರಕಲೆಯ ಬಗ್ಗೆ ಹೇಳಿರುವುದನ್ನು ಕುರಿತು ವಿವೇಚಿಸಲಾಗಿದೆ.

೩. ಅ.ಲ.ನರಸಿಂಹನ್ : ಕರ್ನಾಟಕ ಭಿತ್ತಿಚಿತ್ರ ಪರಂಪರೆ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೮

ಎರಡನೆಯ ಅಧ್ಯಾಯದಲ್ಲಿ ಕಲಾಚಿಂತನೆಗಳ ಬಗ್ಗೆ ಹೇಳಲಾಗಿದೆ. ಲಾಕ್ಷಣಿಕರಮತ, ಧಾರ್ಮಿಕತೆ, ಚಿತ್ರಗಳಲ್ಲಿ ಸಾಮಾಜಿಕ ಅಂಶಗಳು, ಅನುಕರಣೆ, ಭಾರತೀಯಮತ, ಚಿತ್ರಕಲೆ ಮತ್ತು ನೀತಿ, ಚಿತ್ರಕಲೆಯಲ್ಲಿ ಜನಪದೀಯ ಅಂಶಗಳು, ಪ್ರಬೇಧಗಳು, ಚಿತ್ರದ ವಸ್ತು ಮತ್ತು ಬಳಕೆ, ಚಿತ್ರಗಳಲ್ಲಿ ಜನಜೀವನ ಚಿತ್ರಣ ಇಂತಹ ಸಂಗತಿಗಳನ್ನು ವಿಶ್ಲೇಷಿಸಲಾಗಿದೆ.

ಮೂರನೆಯ ಅಧ್ಯಾಯವು ಚಿತ್ರಕಲೆಯಲ್ಲಿ ಧಾರ್ಮಿಕ ಅಂಶಗಳು ಎಂಬುದಾಗಿದೆ. ಇದರಲ್ಲಿ ಬೌದ್ಧಧರ್ಮದ ಚಿತ್ರಗಳು, ಜೈನಧರ್ಮ, ಶೈವಧರ್ಮ, ವೈಷ್ಣವಧರ್ಮ, ಇಸ್ಲಾಂಧರ್ಮ, ಕ್ರೈಸ್ತಧರ್ಮದ ಚಿತ್ರಗಳನ್ನು ವಿವೇಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಲಲಿತಕಲೆಗಳೊಂದಿಗೆ ಸಹಸಂಬಂಧ ಹೊಂದಿದ ಕಲಾಪ್ರಕಾರಗಳ ಬಗ್ಗೆ ಹೇಳಲಾಗಿದೆ. ನೃತ್ಯ, ಸಂಗೀತ, ಕ್ರೀಡೆ, ಗಂಜೀಫಾ, ಶಿಲ್ಪಕಲೆ, ವಾಸ್ತುಕಲೆ, ಚಿತ್ರಶಿಲ್ಪಗಳಲ್ಲಿ ವಾಸ್ತುವಿನ ಅಂಶಗಳು ಹೀಗೆ ಉಪಶೀರ್ಷಿಕೆಗಳಲ್ಲಿ ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಇತಿಹಾಸ ಮತ್ತು ಚಿತ್ರಕಲೆ ವಿಷಯದ ಬಗ್ಗೆ ವಿವೇಚನೆ ಮಾಡಲಾಗಿದೆ. ಇದರಲ್ಲಿ ಪ್ರಮುಖವಾಗಿ ಇತಿಹಾಸದಲ್ಲಿ ನಡೆದ ಪ್ರಮುಖ ಯುದ್ಧಗಳು ಚಿತ್ರಕಲೆಯಲ್ಲಿ ಹೇಗೆ ಅಭಿವ್ಯಕ್ತಗೊಂಡಿವೆ ಎಂಬುದನ್ನು ಹೇಳಲಾಗಿದೆ. ರಕ್ಕಸತಂಗಡಗಿ ಯುದ್ಧ, ಮೈಸೂರು ಯುದ್ಧ, ಪೊಲೈಯೂರಿನ ಯುದ್ಧ, ನರಗುಂದ ಬಾಬಾಸಾಹೇಬ ಬ್ರಿಟೀಷರ ಜೊತೆ ನಡೆಸಿದ ಯುದ್ಧಗಳ ವಿವರ ಕೊಡಲಾಗಿದೆ. ಚಿತ್ರಕಲೆಯಲ್ಲಿ ಬೇಟೆಯ ದೃಶ್ಯಗಳ ಬಗ್ಗೆ ವಿವೇಚಿಸಲಾಗಿದೆ. ಚಿತ್ರಕಲೆಯಲ್ಲಿ ಆಯುಧಗಳು, ಗುರಾಣಿಗಳು, ಪತಾಕೆಗಳ ಬಗ್ಗೆ ಹೇಳಲಾಗಿದೆ.

ಆರನೆಯ ಅಧ್ಯಾಯದಲ್ಲಿ ಕಲಾಪರಿಕರಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಬಣ್ಣದ ಮೂಲಗಳು, ಪಂಚವರ್ಣಗಳು, ಮೂಲಬಣ್ಣಗಳು, ಮಿಶ್ರಬಣ್ಣಗಳು, ಕುಂಚಗಳು, ಅಂಟುದ್ರಾವಕಗಳು ಭಿತ್ತಿ ಮತ್ತು ಇತರ ತಯಾರಿಕೆ, ಚಿತ್ರಸಂಯೋಜನೆ, ಆಕೃತಿಗಳು, ಕಥಾನಿರೂಪಣೆಯ ಚಿತ್ರಗಳು, ಕಥಾಚಿತ್ರಮಾಲಿಕೆ, ಭಿತ್ತಿಚಿತ್ರಗಳು, ಇತರ ಫಲಕಗಳು, ಹಲಗೆ, ಕಾಗದ, ಚರ್ಮ, ರಕ್ಷಣೆ, ಭೂದೃಶ್ಯ, ಭಾವಚಿತ್ರ ಈ ಎಲ್ಲ ಅಂಶಗಳನ್ನು ವಿಶ್ಲೇಷಣೆ ಮಾಡಲಾಗಿದೆ.

ಏಳನೆಯ ಅಧ್ಯಾಯವು ಕಲೆ ಮತ್ತು ಕಲಾವಿದ ಇದರಲ್ಲಿ ಚಿತ್ರಕಲಾ ಶೈಲಿಗಳು ಮತ್ತು ಕಲಾವಿದರ ಕುರಿತು ವಿವೇಚಿಸಲಾಗಿದೆ. ಕಲಾಶೈಲಿಗಳಲ್ಲಿ ಬಾದಾಮಿ ಗುಹೆಚಿತ್ರ, ಶ್ರೀರಂಗಪಟ್ಟಣ, ಹಂಪೆ, ದಖನಿ ಚಿತ್ರಶೈಲಿ ಇವುಗಳನ್ನು ಕುರಿತು ಹೇಳಿದೆ. ಈ ಕಲಾವಿದ, ವಂಶ, ಸಾಮಾಜಿಕ ಸ್ಥಾನ, ಶಾಸ್ತ್ರಗ್ರಂಥಗಳಲ್ಲಿ ಕಲಾವಿದರ ಹೆಸರುಗಳು, ಸಂಭಾವನೆ, ಗೌರವ, ಬಿರುದು, ಕಲಾಶಿಕ್ಷಣ, ಕಾವ್ಯಗಳಲ್ಲಿ ಕಲಾವಿದ, ಗುರುಕುಲ ಪದ್ಧತಿ, ಪಠ್ಯವಿಷಯಗಳು, ಪಠ್ಯಕ್ರಮ, ಚಿತ್ರಗಳ ಕಾಲ, ವಿಜಯನಗರ, ಶ್ರವಣಬೆಳಗೋಳ, ನರಗುಂದ ಚಿತ್ರಗಳ ರಚನಾಕಾರ, ಚಿತ್ರಗಳಲ್ಲಿ ನಂಬಿಕೆ, ಆಚರಣೆ, ವಿಧಿಕ್ರಿಯೆ, ರಂಗೋಲಿ, ಮಾಂತ್ರಿಕ ಆಚರಣೆಯನ್ನು ಕುರಿತು ವಿಶ್ಲೇಷಿಸಲಾಗಿದೆ.

ಎಂಟನೆಯ ಅಧ್ಯಾಯವು ಉಪಸಂಹಾರವಾಗಿದ್ದು, ಏಳೂ ಅಧ್ಯಾಯಗಳ ಫಲಿತಗಳನ್ನು ಒಳಗೊಂಡಿದೆ. ಪ್ರಸ್ತುತ ಪ್ರಬಂಧವು ಒಂದು ನಿರ್ಧಿಷ್ಟ ವಿಷಯದ ಬಗ್ಗೆ ಮಾಹಿತಿ ನೀಡದೆ ಎಲ್ಲ ವಿಷಯಗಳನ್ನು ಸ್ಥೂಲವಾಗಿ ಹೇಳುವ ಪ್ರಯತ್ನದಲ್ಲಿ ಗೊಂದಲಮೂಡಿಸುತ್ತದೆ. ಪ್ರಬಂಧವು ಚಿತ್ರಕಲೆಯ ಕುರಿತಾಗಿದ್ದರೂ ಚಿತ್ರಕಲೆಗೆ ಸಂಬಂಧಪಡದ ಅನೇಕ ವಿಷಯಗಳು ಇದರಲ್ಲಿ ಹೇಳಲ್ಪಟ್ಟಿವೆ.

**'ಹಿಂದುಸ್ತಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು :**

ಚಿತ್ರಕಲೆ ಮತ್ತು ಸಂಗೀತ ಈ ಎರಡೂ ಕ್ಷೇತ್ರಗಳು ಪ್ರತ್ಯೇಕ ಅಧ್ಯಯನ ಶಿಸ್ತುಗಳನ್ನು ಹೊಂದಿದ ಕಲಾ ಪ್ರಕಾರಗಳಾಗಿವೆ. ಹಲವು ಸಂದರ್ಭಗಳಲ್ಲಿ ಒಂದು ಇನ್ನೊಂದರ ಮೇಲೆ ಪ್ರಭಾವ, ಪ್ರೇರಣೆ ಬೀರಿದ್ದು ಇತಿಹಾಸದಿಂದ ಕಂಡು ಬರುತ್ತದೆ. ಚಿತ್ರಕಲಾವಿದರು ಸಂಗೀತದ ಪರಿಣಾಮಗಳನ್ನು ತಮ್ಮ ಕಲಾಕೃತಿಗಳ ಮೂಲಕ ತರಲು ಪ್ರಯತ್ನಿಸುವ ಅಂಶಗಳು ಭಾರತದಲ್ಲಿ ಬಹಳ ಹಿಂದಿನಿಂದಲೇ ನಡೆದಿವೆ. ಈ ರೀತಿಯ ಸಂಗೀತ ಮತ್ತು ಚಿತ್ರಕಲೆ ಸಂಗೀತದ ಅಂಶಗಳನ್ನು ಬಳಸಿಕೊಂಡು ರಚನೆಯಾದ ಚಿತ್ರಗಳಿಗೆ 'ರಾಗಮಾಲಾ ಚಿತ್ರಗಳು' ಎಂದು ಕರೆಯಲಾಗುತ್ತದೆ. ಇಂತಹ ಕಲಾಕೃತಿಗಳ ಅಧ್ಯಯನವು ಸಂಗೀತ ಮತ್ತು ಚಿತ್ರಕಲೆ ಎರಡೂ ಶಿಸ್ತುಗಳ ಬಗೆಗಿನ ಅಧ್ಯಯನವಾಗುತ್ತದೆ. ಈ ಹಿನ್ನೆಲೆಯಲ್ಲಿ ಸಂಪದಾಭಟ್ ಅವರು ಬಿ.ವಿ.ಕೆ. ಶಾಸ್ತ್ರಿ ಅವರ ಮಾರ್ಗದರ್ಶನದಲ್ಲಿ ಕೈಗೊಂಡು ಪೂರೈಸಿದ ಹಿಂದುಸ್ತಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು' ಎನ್ನುವ ಅಧ್ಯಯನವು[೪]ಎರಡು ಕಲಾ ಪ್ರಕಾರಗಳ ಸಂಯುಕ್ತ ಅಧ್ಯಯನವಾಗಿದೆ ಎನ್ನಬಹುದು.

ಈ ಪ್ರಬಂಧವು ಒಟ್ಟು ಎಂಟು ಅಧ್ಯಾಯಗಳಲ್ಲಿ ಹರಡಿಕೊಂಡಿದೆ. ಅಧ್ಯಯನದ ಉದ್ದೇಶ, ಮಹತ್ವ, ಸಂಗೀತ ಮತ್ತು ಚಿತ್ರಕಲೆಗಳ ಸ್ಥೂಲ ಇತಿಹಾಸ, ಪ್ರಕಾರಗಳು, ಎರಡೂ ಕಲೆಗಳ ಸಹ ಸಂಬಂಧಗಳು, ರಾಗಮಾಲಾ ಕಲಾಕೃತಿಗಳು ಹೀಗೆ ಅನೇಕ ವಿಷಯಗಳು ಚರ್ಚಿತಗೊಂಡಿವೆ. ಭಾಷೆ ಎನ್ನುವ ಸಂಪರ್ಕ ಮಾಧ್ಯಮವನ್ನು ಕಂಡುಕೊಳ್ಳುವ ಮೊದಲು ಮಾನವ ಆಂತರಿಕ ಪ್ರೇರಣೆಗಳನ್ನು ಸಂಜ್ಞೆಗಳ ಮೂಲಕ ವ್ಯಕ್ತಪಡಿಸುತ್ತಿದ್ದನು. ಕ್ರಮೇಣ ಪರಿಸರದ ಪ್ರಭಾವದಿಂದ ನಾದ ಅಥವಾ ಧ್ವನಿತರಂಗಗಳ ಮೂಲಕ ತಿಳಿಸಲು ಪ್ರಯತ್ನಿಸಿದನು. ಇದೇ ಭಾಷೆಯ ಮೂಲಕ್ಕೆ ಕಾರಣವಾಯಿತಲ್ಲದೆ ಮುಂದೆ ಧ್ವನಿಯ ಏರಿಳಿತ ತರಂಗಗಳು ಸಂಗೀತದ ನಾದಲೋಕದ ಹುಟ್ಟಿಗೂ ಕಾರಣವಾಗಿರಬೇಕು ಎನ್ನುವ ಅಂಶಗಳನ್ನು ತಿಳಿಸುತ್ತಾರೆ. ಅದೇ ರೀತಿ ಪ್ರಕೃತಿಯಲ್ಲಿ ಕಂಡ ದೃಶ್ಯಗಳನ್ನು ಅಭಿವ್ಯಕ್ತಿಸುವ ಹಿನ್ನೆಲೆಯಲ್ಲಿ ಮತ್ತು ಮಾತಿಗೆ ಮುಂಚಿನ ದಿನಗಳಲ್ಲಿ ಅಭಿಪ್ರಾಯ ಮತ್ತು ಅನಿಸಿಕೆಗಳನ್ನು ತಿಳಿಸುವ ಹಿನ್ನೆಲೆಯಲ್ಲಿಯೂ ಚಿತ್ರಕಲೆ ಹುಟ್ಟಿಕೊಂಡಿರಬೇಕು ಎಂಬುದಾಗಿ ಇಲ್ಲಿ ಅಭಿಪ್ರಾಯ ಪಡಲಾಗಿದೆ. ಹೀಗೆ ಮಾನವ ಜೀವನದಲ್ಲಿ ಪ್ರಮುಖ ಸ್ಥಾನವಹಿಸಿದ ಸಂಗೀತ ಮತ್ತು ಚಿತ್ರಕಲಾ ಪ್ರಕಾರಗಳು ಪರಿವರ್ತನೆ ಹೊಂದಿದವು ಎಂಬುದಾಗಿ ತಿಳಿಸುತ್ತಾ ಕಲೆಯ ಪರಿಕಲ್ಪನೆ ಮತ್ತು ೬೪ ಕಲೆಗಳ ಬಗೆಗೆ ಮೊದಲ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಎಡರನೆಯ ಅಧ್ಯಾಯದಲ್ಲಿ ಸಂಗೀತದ ಪ್ರಭಾವ ಕುರಿತಾಗಿ ವಿವೇಚಿಸಲಾಗಿದೆ. ಇಲ್ಲಿ ಭಾರತೀಯ ಸಂಗೀತವನ್ನು ಮಾರ್ಗ ಸಂಗೀತ, ದೇಶೀ ಸಂಗೀತ ಎಂಬುದಾಗಿ ಎಡರು ರೀತಿಯಲ್ಲಿ ವಿಂಗಡಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮಾರ್ಗ ಸಂಗೀತದ ಬಗೆಗಿನ ವಿವರ ಕೊಡುತ್ತ ಋಷಿ ಮುನಿಗಳ ದೈವ ಸಾಕ್ಷಾತ್ಕಾರದ ಹಿನ್ನೆಲೆಯಲ್ಲಿ ಇದನ್ನು ಪರಿಭಾವಿಸಲಾಗಿದೆ. ಮಾರ್ಗ ಸಂಗೀತವು ಕಟ್ಟು-ನಿಟ್ಟಿನ ನೀತಿ, ನಿಯಮಗಳನ್ನು ಹೊಂದಿದ್ದು, ಸ್ವತಂತ್ರ ಪ್ರವೃತ್ತಿಯು ಇಲ್ಲಿ ವ್ಯರ್ಜವಾಗಿದೆ. ಆದರೆ ದೇಶೀ ಸಂಗೀತವು ಜನ ಸಾಮಾನ್ಯರ ಮನರಂಜನೆಗಾಗಿ ನಿರ್ಮಿತಗೊಂಡಿದ್ದು ಇಲ್ಲಿ ಮಾರ್ಗ ಸಂಗೀತದ ಹಾಗೆ ಕಟ್ಟು ನಿಟ್ಟಾದ ರೀತಿ-ನೀತಿ, ನಿಯಮಗಳಿಲ್ಲ. ಇಲ್ಲಿ ಕಲಾವಿದನ ತಕ್ಷಣದ ಭಾವೋತ್ಪನ್ನ ಕ್ರಿಯೆಗೆ ಹೆಚ್ಚಿನ ಮಹತ್ವ ಇದೆ ಎಂಬಂತಹ ವಿಚಾರಗಳನ್ನು ಇಲ್ಲಿ ತಿಳಿಸಲಾಗಿದೆ.

೪. ಸಂಪದಾಭಟ್ : ಹಿಂದುಸ್ತಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು : ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಪಿಎಚ್.ಡಿ. ಪ್ರಬಂಧ-೧೯೯೯

ಇದಲ್ಲದೆ ಭಾರತದಲ್ಲಿ ಸಂಗೀತ ಬೆಳೆದುಬಂದ ಇತಿಹಾಸವನ್ನು ಸ್ಥೂಲವಾಗಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಈ ಹಿನ್ನೆಲೆಯಲ್ಲಿ ವೇದ ಕಾಲದಲ್ಲಿ ಸಂಗೀತ ಮತ್ತು ಪುರಾಣ ಕಾಲದಲ್ಲಿ ಸಂಗೀತ, ಮಹಾಕಾವ್ಯಗಳ ಕಾಲದಲ್ಲಿ ಸಂಗೀತ, ಕ್ರಿ.ಪೂ. ದಿನಗಳಲ್ಲಿ ಸಂಗೀತ, ಮಧ್ಯಕಾಲದಲ್ಲಿ ಸಂಗೀತ, ಆಧುನಿಕ ಕಾಲದಲ್ಲಿ ಸಂಗೀತ, ಭರತನ ನಾಟ್ಯಶಾಸ್ತ್ರದಲ್ಲಿ ಸಂಗೀತ ಎಂಬುದಾಗಿ ಘಟ್ಟಗಳನ್ನು ಮಾಡಿಕೊಂಡು ಅದರ ಇತಿಹಾಸದ ಮಹತ್ವವನ್ನು ಬಿಂಬಿಸಲಾಗಿದೆ. ಇದು ಒಂದು ಗಮನಾರ್ಹ ಪ್ರಯತ್ನವಾಗಿದೆ.

ಚಿತ್ರಕಲೆಯ ನೆಲೆ, ಹಿನ್ನೆಲೆಗಳನ್ನು ಹೇಳಲು ಪ್ರತ್ಯೇಕ ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿದ್ದು, ಮೂರನೆಯ ಅಧ್ಯಾಯವನ್ನು ಇದಕ್ಕಾಗಿ ಮೀಸಲಿರಿಸಲಾಗಿದೆ. ಚಿತ್ರಕಲೆಯ ಆರಂಭಿಕ ಕುರುಹುಗಳನ್ನು ಆದಿಮಾನವರ ಗುಹಾಚಿತ್ರಗಳಿಂದ ಗುರುತಿಸಲಾಗಿದ್ದು, ಪ್ರಾಚೀನ ಗುಹಾ ಚಿತ್ರಗಳ ಉಲ್ಲೇಖಕೊಡಲಾಗಿದೆ. ಮುಂದೆ ನದಿ ತೀರದ ನಾಗರೀಕತೆಯಲ್ಲಿ ಬೆಳೆದ ಚಿತ್ರಕಲೆ, ಕ್ರಿ.ಪೂ. ಶತಮಾನಗಳಲ್ಲಿ ಬೆಳೆದ ಚಿತ್ರಕಲೆ, ಸಿಂಧೂ ನಾರಗೀಕತೆಯ ಕಾಲದಲ್ಲಿ ಚಿತ್ರಕಲೆ, ಅಜಂತಾ-ಎಲ್ಲೋರಾಗಳಲ್ಲಿನ ಚಿತ್ರಕಲೆ, ಮೌರ್ಯರು, ಕುಶಾನರು, ಶಾತವಾಹನರು, ಗುಪ್ತರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು, ಮೊಗಲರು, ಮೈಸೂರು ಒಳಗೊಂಡಂತೆ ವಿವಿಧ ಸಂಸ್ಥಾನಿಕರ ಕಾಲದಲ್ಲಿ ಚಿತ್ರಕಲೆ ಹೇಗೆ ಬೆಳೆಯಿತು ಎಂಬುದರ ಸ್ಥೂಲ ಇತಿಹಾಸ ಕೊಡಲಾಗಿದೆ. ಇಲ್ಲಿ ಮುಖ್ಯವಾಗಿ ರಾಜಸ್ತಾನದ ರಜಪೂತರು, ಮೊಗಲರು, ದಖನಿ ಸುಲ್ತಾನರು, ಮೈಸೂರು, ತಂಜಾವೂರಿನ ಚಿತ್ರಕಲಾ ಬೆಳವಣಿಗೆಗೆ ಹೆಚ್ಚು ಪ್ರಾಶಸ್ತ್ಯ ಕೊಡಲಾಗಿದೆ. ಕಾರಣ ಸಂಗೀತಕ್ಕೆ ಸಂಬಂಧಿಸಿದ ರಾಗಮಾಲಾ ಚಿತ್ರಗಳು ಇಲ್ಲಿ ರಚನೆಯಾಗಿರುವುದಾಗಿದೆ. ಇದರೊಂದಿಗೆ ಚಿತ್ರಕಲೆಯ ವಿವರಗಳನ್ನು ಹೊಂದಿದ ಪ್ರಾಚೀನ ಶಾಸ್ತ್ರ ಗ್ರಂಥಗಳು, ರಾಗಮಾಲಾ ಚಿತ್ರಕಲೆಯ ಇತಿಹಾಸ, ಭಾರತದ ಕಿರುರೂಪ ಚಿತ್ರಕಲೆಯ ವಿವಿಧ ಶೈಲಿಗಳು, ರಾಗ-ರಾಗಿಣಿಯರ ಚಿತ್ರಗಳ ಮಹತ್ವ ಮುಂತಾದ ಸಂಗತಿಗಳನ್ನು ಇಲ್ಲಿ ಹೇಳಲಾಗಿದೆ.

ಮುಂದಿನ ಅಧ್ಯಾಯವು ಸಂಗೀತ ಕ್ಷೇತ್ರವನ್ನು ಕುರಿತಾಗಿದೆ. ರಾಗವು ಸಂಗೀತದಲ್ಲಿ ಪ್ರಧಾನವಾಗಿದ್ದು ಭಾರತೀಯ ಸಂಗೀತದ ಆತ್ಮ ಎಂಬುದಾಗಿ ಇಲ್ಲಿ ಪರಿಗಣಿಸಲಾಗಿದೆ. ಇಲ್ಲಿ ರಾಗದ ಪರಿಕಲ್ಪನೆ, ಸ್ವರೂಪ, ಪ್ರಕಾರ, ವ್ಯಾಖ್ಯೆಗಳನ್ನು ಕೊಟ್ಟು, ಕೇಳುಗರ ಮನಸ್ಸಿನ ಮೇಲೆ ರಾಗ ಬೀರುವ ಪರಿಣಾಮಗಳನ್ನು ಹೇಳಲಾಗಿದೆ. ಇದಲ್ಲದೆ ಸ್ವರವರ್ಣಗಳ ರಚನೆ, ರಾಗಗಳ ವರ್ಗೀಕರಣ, ರಾಗ-ರಾಗಿಣಿಗಳ ಸ್ವರೂಪ, ವಿವಿಧ ರಾಗಗಳು, ಪ್ರತಿಮಾಶಾಸ್ತ್ರದಲ್ಲಿನ ವಿವರಗಳ ಬಗ್ಗೆ ಚರ್ಚಿಸಲಾಗಿದೆ. ಅಲ್ಲದೆ ರಾಗ-ರಾಗಿಣಿಯರ ಚಿತ್ರಕಲೆ, ಅದಕ್ಕೆ ಅನುಸಾರವಾಗಿ ರಚನೆಯಾಗುವ ನಾಯಕ-ನಾಯಕಿಯರ ಚಿತ್ರಗಳು, ಅದರ ಪ್ರಭಾವ, ಶೈಲಿ, ಪ್ರೇರಣೆ, ಭಾರತದಲ್ಲಿ ರಾಗ-ರಾಗಿಣಿಯರ ಚಿತ್ರಗಳು ಬೆಳೆದು ಬಂದ ರೀತಿಗಳನ್ನು ವಿವೇಚಿಸಲಾಗಿದೆ.

ಹಿಂದುಸ್ತಾನಿ ಸಂಗೀತ ಪದ್ಧತಿಯಲ್ಲಿ ರಾಗಗಳು ಮತ್ತು ಋತುಮಾನಗಳಿಗೆ ಆಂತರಿಕ ಸಂಬಂಧಗಳನ್ನು ಕಲ್ಪಿಸಲಾಗಿದ್ದು, ಈ ಕುರಿತು ಐದನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಮೂರು ಕಾಲಗಳಿಗೆ ಅನುಸಾರವಾಗಿ ರೂಪುಗೊಂಡಿರುವ ಆರು ಋತುಗಳಾದ ವಸಂತ, ಗ್ರೀಷ್ಮ, ಶಿಶಿರ, ಹೇಮಂತ, ಶರದ್ ಮತ್ತು ವರ್ಷ ಋತುಗಳು ಸಂಗೀತದೊಂದಿಗಿನ ಅವಿನಾಭಾವ ಪರಿಣಾಮಗಳನ್ನು ವಿವೇಚಿಸಲಾಗಿದೆ. ಇಲ್ಲಿ ಈ ಆರು ಋತುಗಳಿಗೆ ಅನುಸಾರವಾಗಿ ರಾಗಶ್ರೀ, ಹಿಂಡೋಲಾ, ಭೈರವಿ, ಪಂಚಮಿ, ಮೇಘ ಮತ್ತು ನಟನಾರಾಯಣ ಎಂಬ ಆರು ರಾಗಗಳನ್ನು ಋತುಗಳ ಸಂಬಂಧಗಳ

ಹಿನ್ನೆಲೆಯಲ್ಲಿ ವಿವೇಚಿಸಿದೆ. ಇಲ್ಲಿ ಪ್ರತಿಯೊಂದು ರಾಗದ ಲಕ್ಷಣಗಳು, ಸ್ವರೂಪ, ಸಂದರ್ಭ, ವಿವರಣೆ, ಅರ್ಥವ್ಯಾಪ್ತಿ ಮತ್ತು ವ್ಯಾಖ್ಯಾನಗಳೊಂದಿಗೆ ಯಾವ ರಾಗ ಯಾವ ಋತುವಿಗೆ ಸಂಬಂಧಿಸಿದೆ ಎನ್ನುವ ವಿವರ ಕೊಡಲಾಗಿದೆ. ಇಂತಹ ವಿವರಗಳ ಜೊತೆಗೆ ಯಾವಯಾವ ಚಿತ್ರಶೈಲಿಗಳಲ್ಲಿ ಋತುಮಾನಗಳಿಗೆ ಸಂಬಂಧಿಸಿದ ಸಂಗೀತ ಪ್ರಧಾನ ಚಿತ್ರಗಳಿವೆ. ಅವುಗಳ ಸ್ವರೂಪವೇನು? ಚಿತ್ರದ ರೇಖಾವಿನ್ಯಾಸ, ಬಣ್ಣಗಾರಿಕೆ, ವಸ್ತುವಿಷಯ ಸಂಯೋಜನಾ ರೀತಿ, ಪ್ರಭಾವ, ಪ್ರೇರಣೆ ಮತ್ತು ಪ್ರಮುಖ ಲಕ್ಷಣಗಳನ್ನು ಬಿಂಬಿಸಲಾಗಿದೆ. ಈ ಸಂದರ್ಭಗಳಲ್ಲಿ ಕಾಂಗ್ರಾ, ಬುಂದಿ, ಪಹಾಡಿ, ಮೇವಾರ ಶೈಲಿಗಳಲ್ಲಿನ ಋತುಮಾನದ ಸಂಗೀತ ಪ್ರಧಾನ ಚಿತ್ರಗಳನ್ನು ಉಲ್ಲೇಖಿಸಲಾಗಿದೆ. ಕರ್ನಾಟಕದಲ್ಲಿ ದಖನಿ ಚಿತ್ರಶೈಲಿ, ಸುರಪುರ ಶೈಲಿ, ಮೈಸೂರು ಶೈಲಿಗಳಲ್ಲಿ ಇಂತಹ ಚಿತ್ರಗಳಿದ್ದು ಅವನ್ನು ಹೆಸರಿಸಲಾಗಿದೆ.

ರಾಗಮಾಲಾ ಚಿತ್ರಗಳು ಚಿತ್ರಕಲಾ ಕ್ಷೇತ್ರದಲ್ಲಿ ಮಾತ್ರವಲ್ಲದೇ ಸಂಗೀತ ಕ್ಷೇತ್ರದಲ್ಲೂ ಗಮನಾರ್ಹ ಕಲಾಕೃತಿಗಳಾಗಿದ್ದು, ಇವುಗಳ ಬಗ್ಗೆ ಆರನೆಯ ಅಧ್ಯಾಯದಲ್ಲಿ ಪ್ರತ್ಯೇಕವಾಗಿ ವಿವೇಚಿಸಲಾಗಿದೆ. ರಾಗಮಾಲಾ ಚಿತ್ರಕಲೆ ಅರ್ಥವ್ಯಾಪ್ತಿ, ಸ್ವರೂಪ, ಈ ಚಿತ್ರಗಳ ನೆಲೆಗಳು, ವಸ್ತುವಿಷಯಗಳು, ಸಂಯೋಜನಾ ರೀತಿಗಳು, ಬಣ್ಣ ಮತ್ತು ರೇಖಾವಿನ್ಯಾಸದಂತಹ ಸಂಗತಿಗಳು ಇಲ್ಲಿ ಬಿಂಬಿತವಾಗಿವೆ. ಜೊತೆಗೆ ರಾಗಮಾಲಾ ಚಿತ್ರಗಳು ನೋಡುಗರ ಮೇಲೆ ಉಂಟುಮಾಡುವ ಪರಿಣಾಮಗಳು ಇಲ್ಲಿ ಹೇಳಲ್ಪಟ್ಟಿವೆ. ಸಂಗೀತ ಮತ್ತು ರಾಗಮಾಲಾ ಚಿತ್ರಕಲೆಯ ಬಗ್ಗೆ ವಿವರಗಳಿರುವ ಪ್ರಾಚೀನ ಗ್ರಂಥಗಳ ಕುರಿತು ಏಳನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಇವುಗಳಲ್ಲಿ ಕೆಲವು ಗ್ರಂಥಗಳಲ್ಲಿ ರಾಗಮಾಲಾ ಚಿತ್ರಗಳು ಮತ್ತು ಸಂಗೀತದ ಬಗ್ಗೆ ಸಾಹಿತ್ಯಕ ವಿವರಣೆಗಳು ಮಾತ್ರ ಇದ್ದರೆ, ಇನ್ನು ಕೆಲವು ಗ್ರಂಥಗಳಲ್ಲಿ ಸಾಹಿತ್ಯಕ ವಿವರಣೆಗಳ ಜೊತೆಗೆ ಸಂಬಂಧಿಸಿದ ರಾಗಮಾಲಾ ಚಿತ್ರಗಳು ರಚನೆಯಾಗಿವೆ. ವಿಷ್ಣುಧರ್ಮೋತ್ತರ, ಮಾನಸೋಲ್ಲಾಸ, ಶಿವತತ್ವರತ್ನಾಕರ, ಶಿಲ್ಪರತ್ನ, ಕಾಶ್ಯಪಶಿಲ್ಪಶಾಸ್ತ್ರ, ಸಮರಾಂಗಣ ಸೂತ್ರಧಾರ, ಶ್ರೀತತ್ವನಿಧಿ ಮುಂತಾದ ಗ್ರಂಥಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಇಲ್ಲಿ ಹೆಚ್ಚಿನ ಪ್ರಾಧಾನ್ಯತೆಯನ್ನು ಶ್ರೀತತ್ವನಿಧಿ ಗ್ರಂಥಕ್ಕೆ ಕೊಡಲಾಗಿದೆ. ಎಂಟನೆಯ ಅಧ್ಯಾಯವು ಸಮಾರೋಪವಾಗಿದ್ದು ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ.

ಪ್ರಸ್ತುತ ಅಧ್ಯಯನವು ಸಂಗೀತ ಮತ್ತು ಚಿತ್ರಕಲೆ ಈ ಎರಡೂ ಕ್ಷೇತ್ರಗಳಿಗೆ ಸಂಬಂಧಿಸಿದ್ದರೂ ಹೆಚ್ಚಿನ ವಿವರವನ್ನು ಚಿತ್ರಕಲೆ ಕುರಿತಾಗಿ ಕೊಡಲಾಗಿದೆ. ರಾಗಮಾಲಾ ಚಿತ್ರಗಳಲ್ಲಿನ ರಾಗಗಳ ನಿಖರತೆ ಹಾಗೂ ಗುರುತಿಸುವಿಕೆ ಇಲ್ಲಿ ಮಾಡಲಾಗಿದೆ. ಸಂಗೀತದ ರಾಗಗಳ ಮೂಲ ವಿಚಾರಗಳನ್ನು ನಿರ್ದಿಷ್ಟ ರಾಗಗಳೊಂದಿಗೆ ಹೊಂದಿಸಿ, ಚಿತ್ರಕಲೆಯ ಮೂಲಕ ಅಭಿವ್ಯಕ್ತಿಪಡಿಸಿದ ಹಿಂದಿನವರ ಪ್ರಯತ್ನಗಳನ್ನು ಇಲ್ಲಿ ಸಾಹಿತ್ಯಕ ವಿವರಗಳೊಂದಿಗೆ ಬಿಂಬಿಸಲಾಗಿದೆ. ತಾಂತ್ರಿಕ ಹಾಗೂ ಮಾನಸಿಕ ವಿಚಾರಗಳು ಚಿತ್ರ ಮತ್ತು ಸಂಗೀತದ ಮೂಲಕ ಅಭಿವ್ಯಕ್ತಿ ಪಡೆಯುವ ವಿವರಗಳ ಬಗ್ಗೆ ಇದು ಸ್ಥೂಲ ನೋಟ ಬೀರುತ್ತದೆ.

ರಾಗಮಾಲಾ ಚಿತ್ರಗಳ ಬಗ್ಗೆ ಸಂಗೀತ ಕ್ಷೇತ್ರದ ವಿದ್ಯಾರ್ಥಿಯೊಬ್ಬರು ಇಲ್ಲಿ ಅಧ್ಯಯನ ಮಾಡಿದ್ದು ಚಿತ್ರಕಲಾಕ್ಷೇತ್ರದ ಹಲವಾರು ಮಹತ್ವದ ಸಂಗತಿಗಳು ಇಲ್ಲಿ ಕೈಬಿಟ್ಟು ಹೋಗಿವೆ. ಚಿತ್ರಕಲಾ ವಿದ್ಯಾರ್ಥಿಯೊಬ್ಬ ಸಂಗೀತದ ಜ್ಞಾನದೊಂದಿಗೆ ಇಂತಹ ಪ್ರಯತ್ನಕ್ಕೆ ತೊಡಗಿದಾಗ ಹೆಚ್ಚು ಮೌಲಿಕ ವಿಚಾರಗಳು ಹೊರಬರುವ ಸಾಧ್ಯತೆಯನ್ನು ಇಲ್ಲಿ ಕಂಡುಕೊಳ್ಳಬಹುದು.

**ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಒಂದು ಅಧ್ಯಯನ :**

ಪ್ರಸ್ತುತ ಪ್ರಬಂಧವನ್ನು ಯಾದಪ್ಪ ಪರದೇಶಿ ಇವರು ಡಾ.ಎಸ್.ಸಿ.ಪಾಟೀಲ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಸಾದರಪಡಿಸಿದ್ದಾರೆ.[೫] ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆಯನ್ನು ಕುರಿತಾಗಿರುವ ಈ ಅಧ್ಯಯನದಲ್ಲಿ ಭಿತ್ತಿ ಚಿತ್ರಕಲೆಯ ಹಲವಾರು ಅಂಶಗಳು ಬೆಳಕು ಕಂಡಿವೆ. ಈ ಅಧ್ಯಯನವು ಒಟ್ಟು ಎಂಟು ಅಧ್ಯಾಯಗಳನ್ನು ಹೊಂದಿದ್ದು, ಆರುನೂರು ಪುಟಗಳಲ್ಲಿ ವಿಷಯ ನಿರೂಪಣೆಗೊಂಡಿದೆ. ಒಂದೊಂದು ಅಧ್ಯಾಯವು ಭಿತ್ತಿ ಚಿತ್ರಕಲೆಯ ಒಂದೊಂದು ಕವಲುಗಳ ಬಗ್ಗೆ ಬೆಳಕು ಬೀರುತ್ತವೆ. ಒಂದನೆಯ ಅಧ್ಯಾಯದಲ್ಲಿ ಭಿತ್ತಿ ಚಿತ್ರಕಲೆಯ ಇತಿಹಾಸ ಕಟ್ಟಿಕೊಡಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಭಿತ್ತಿ ಸಿದ್ಧತೆ ಮತ್ತು ಅದರ ಪರಿಕರಗಳ ಬಗ್ಗೆ ತಿಳಿಸಲಾಗಿದ್ದರೆ, ನಾಲ್ಕನೆಯ ಅಧ್ಯಾಯದಲ್ಲಿ ಚಿತ್ರರಚನಾ ಪರಿಕರಗಳು ಮತ್ತು ಚಿತ್ರರಚನಾ ವಿಧಾನಗಳ ಬಗ್ಗೆ ವಿವೇಚಿಸಲಾಗಿದೆ. ಐದನೆಯ ಅಧ್ಯಾಯದಲ್ಲಿ ಉತ್ತರ ಕರ್ನಾಟಕದ ಭಿತ್ತಿಚಿತ್ರಗಳನ್ನು ವಿಷಯಾನುಸಾರವಾಗಿ ವಿಂಗಡಿಸಿ ಅಧ್ಯಯನ ಮಾಡಿದ್ದು, ಆರನೆಯ ಅಧ್ಯಾಯದಲ್ಲಿ ಈ ಕಲಾ ಪ್ರಕಾರದ ಪೋಷಕರು ಮತ್ತು ಕಲಾವಿದರ ಬಗ್ಗೆ ಚರ್ಚಿಸಲಾಗಿದೆ. ಏಳನೆಯ ಅಧ್ಯಾಯದಲ್ಲಿ ಭಿತ್ತಿ ಚಿತ್ರಕಲೆಯ ಆಪತ್ತುಗಳು ಮತ್ತು ಸಂರಕ್ಷಣಾ ವಿಧಾನಗಳ ಬಗ್ಗೆ ವಿವೇಚಿಸಿದ್ದಾರೆ. ಎಂಟನೆಯ ಅಧ್ಯಾಯದಲ್ಲಿ ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ. ಈ ಅದ್ಯಾಯಗಳಲ್ಲಿ ಹರಡಿಕೊಂಡ ಪ್ರಸ್ತುತ ಮಹಾಪ್ರಬಂಧದ ಕೆಲವು ಮುಖ್ಯಾಂಶಗಳು ಈ ಕೆಳಗಿನಂತಿವೆ.

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಮಹತ್ವವನ್ನು ತಿಳಿಸುತ್ತ ಇದನ್ನು ಏಕೆ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ ಎನ್ನುವ ಸಂಗತಿಗಳನ್ನು ಬಿಂಬಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆಯ ಸ್ಥೂಲ ಇತಿಹಾಸವನ್ನು ಕಾಲಮಾನಕ್ಕನುಸಾರವಾಗಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಚಿತ್ರಕಲೆಯ ಇತಿಹಾಸ ಗುರುತಿಸುವಲ್ಲಿ ಚಿತ್ರರಚನೆಗಳು ಲಭ್ಯವಿಲ್ಲದ ಸಂದರ್ಭಗಳಲ್ಲಿ ಸಮಕಾಲೀನ ಸಾಹಿತ್ಯ ಮತ್ತು ಶಾಸನ ಬರಹಗಳ ಚಿತ್ರಕಲಾ ಉಲ್ಲೇಖಗಳನ್ನು ಬಳಸಿಕೊಳ್ಳಲಾಗಿದೆ. ಇಲ್ಲಿಮೊದಲಿಗೆ ಭಿತ್ತಿ ಚಿತ್ರಕಲೆಯ ಅರ್ಥ, ಸ್ವರೂಪಗಳನ್ನು ಹೇಳಿ ನಂತರ ಐತಿಹಾಸಿಕ ಘಟ್ಟಗಳನ್ನು ಗುರುತಿಸಲಾಗಿದೆ. ವಿಶ್ವ ಮತ್ತು ಭಾರತ ಮಟ್ಟದ ಭಿತ್ತಿ ಚಿತ್ರಕಲೆಯ ಇತಿಹಾಸವನ್ನು ಸ್ಥೂಲವಾಗಿ ಹೇಳಿ, ಕರ್ನಾಟಕದ ಈ ಬಗೆಯ ಇತಿಹಾಸಕ್ಕೆ ಗಮನ ಹರಿಸಲಾಗಿದೆ. ಕ್ರಿ.ಪೂ.೪೦,೦೦೦ ವರ್ಷಗಳ ಹಿಂದಿನ ಪ್ರಾಗಿತಿಹಾಸ ಕಾಲದ ಶಿಲಾಶ್ರಯ ಚಿತ್ರಗಳು ಕರ್ನಾಟಕದಲ್ಲಿ ಕಂಡು ಬಂದಿದ್ದು, ಭಿತ್ತಿ ಚಿತ್ರಕಲೆಯ ಪ್ರಾರಂಭಿಕ ಹಂತಗಳನ್ನು ಇವುಗಳಲ್ಲಿ ಗುರುತಿಸಬಹುದಾಗಿದೆ ಎನ್ನುವ ಅಂಶಗಳನ್ನು ಹೇಳಿದೆ.

ಮುಂದಿನ ಹಂತದಲ್ಲಿ ಶಿಷ್ಟಪದ ಚಿತ್ರಕಲೆಯ ಹಿನ್ನೆಲೆಯಲ್ಲಿ ಅನೇಕ ರಾಜ ವಂಶದವರು ಈ ನಾಡಿನ ಭಿತ್ತಿ ಚಿತ್ರಕಲೆಯ ಪರಂಪರೆಯನ್ನು ಬೆಳೆಸಿದ ಬಗ್ಗೆ ಹೇಳಲಾಗಿದೆ. ಶಾತವಾಹನರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು, ನಾಯಕರು, ಸಂಸ್ಥಾನಿಕರು, ಮಠ-ಮಾನ್ಯಗಳು, ಶ್ರೀಮಂತರು, ಅಧಿಕಾರಿಗಳು, ಊರಿನ ಪ್ರಮುಖರು, ಸಾಮಾನ್ಯ ಜನರು ಸಹಿತ ಭಿತ್ತಿ ಚಿತ್ರಕಲಾ ಪ್ರಕಾರವನ್ನು ಉಳಿಸಿ ಬೆಳೆಸುವಲ್ಲಿ ಶ್ರಮಿಸಿದ್ದಾರೆ. ಎನ್ನುವ ವಿವರಗಳನ್ನು ಇಲ್ಲಿ ಕಟ್ಟಿಕೊಡಲಾಗಿದೆ.

---

೫. ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಒಂದು ಅಧ್ಯಯನ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಅಪ್ರಕಟಿತ ಪಿಎಚ್.ಡಿ. ಪ್ರಬಂಧ-೨೦೦೦

ಭಿತ್ತಿ ಚಿತ್ರಕಲೆಯಲ್ಲಿ ಭಿತ್ತಿ ಸಿದ್ಧಗೊಳಿಸುವ ವಿಧಾನವೂ ಅಷ್ಟೇ ಮಹತ್ವವನ್ನು ಪಡೆದುಕೊಂಡಿದೆ. ಚಿತ್ರರಚನೆಯಾಗುವುದೇ ಈ ಭಿತ್ತಿಯ ಮೇಲೆ ಕಲಾವಿದರು ಇದನ್ನು ಹೆಚ್ಚಿನ ಜಾಗರೂಕತೆಯಿಂದ ನಿರ್ಮಿಸುತ್ತಿದ್ದರು. ಭಿತ್ತಿಯ ಸಿದ್ಧತೆಗೆ ಹಲವಾರು ಪರಿಕರಗಳು ಬೇಕಾಗುತ್ತಲಿದ್ದು, ಭಿತ್ತಿ ಸಿದ್ಧತೆ ಮತ್ತು ಪರಿಕರಗಳ ಬಗ್ಗೆ ಮೂರನೆಯ ಅಧ್ಯಾಯದಲ್ಲಿ ತಿಳಿಸಲಾಗಿದೆ. ಭಿತ್ತಿ ತಯಾರಿಕೆಯನ್ನು ಹೇಗೆ ಮಾಡಬೇಕು? ಯಾವ ಪರಿಕರಗಳನ್ನು ಎಷ್ಟು ಪ್ರಮಾಣದಲ್ಲಿ ಬೆರೆಸಬೇಕು ಎನ್ನುವಂತಹ ಸಂಗತಿಗಳನ್ನು ಪ್ರಾಚೀನ ಶಾಸ್ತ್ರ ಗ್ರಂಥಗಳಲ್ಲಿ ಉಲ್ಲೇಖಿಸಲಾಗಿದೆ. ಅವುಗಳ ಆಧಾರದಿಂದ ಇಲ್ಲಿ ಭಿತ್ತಿ ಸಿದ್ಧತೆ ಮಾಡುವ ವಿಧಾನವನ್ನು ವಿವೇಚಿಸಲಾಗಿದೆ. ವಿಷ್ಣುಧರ್ಮೋತ್ತರ, ಸಮಾರಾಂಗಣ ಸೂತ್ರಧಾರ, ಅಪರಾಜಿತ ಪ್ರಚ್ಛ, ಮಾನಸೋಲ್ಲಾಸ, ಶಿಲ್ಪರತ್ನ, ಶಿವತತ್ವರತ್ನಾಕರ, ಕಾಶ್ಯಪಶಿಲ್ಪಶಾಸ್ತ್ರ, ಮುಂತಾದ ಅನೇಕ ಗ್ರಂಥಗಳು ಭಿತ್ತಿ ಸಿದ್ಧತೆ ಮತ್ತು ಅದರ ಪರಿಕರಗಳ ಬಗ್ಗೆ ವಿವರಗಳನ್ನು ಕೊಡುತ್ತಿದ್ದು ಎಲ್ಲವೂ ಭಿನ್ನ-ಭಿನ್ನ ವಿಧಾನ ಮತ್ತು ಪರಿಕರಗಳ ಕುರಿತು ಹೇಳುತ್ತವೆ. ಇವೆಲ್ಲವುಗಳನ್ನು ಸಮೀಕರಿಸಿ ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆಯಲ್ಲಿ ಯಾವ ಯಾವ ನೆಲೆಯ ಭಿತ್ತಿಯು ಹೇಗೆ ಸಿದ್ಧಗೊಂಡಿದೆ ಎಂಬುದನ್ನು ವಿವೇಚಿಸಲಾಗಿದೆ.

ಭಿತ್ತಿ ಸಿದ್ಧಗೊಳಿಸುವ ವಿಧಾನಗಳಲ್ಲಿ ಪ್ರತಿಯೊಂದು ಗ್ರಂಥಗಳಲ್ಲಿ ಬೇರೆ ಬೇರೆ ವಿವರಗಳಿವೆ. ಸಾಮಾನ್ಯ ವಿವರದಂತೆ ಮಣ್ಣಿನ ಭಿತ್ತಿ ಮತ್ತು ಗಾರೆಯ ಭಿತ್ತಿ ಎಂಬ ಎರಡು ರೀತಿಯ ಭಿತ್ತಿಗಳನ್ನು ತಯಾರಿಸಲಾಗುವುದು. ಮೊದಲಿಗೆ ಭಿತ್ತಿಯನ್ನು ಲೇಪಿಸಬೇಕಾದ ಮೇಲ್ಮೈಯನ್ನು ಸಂಸ್ಕರಿಸಿಕೊಳ್ಳಬೇಕು. ಆಮೇಲೆ ಇಟ್ಟಿಗೆ ಪುಡಿ, ಉಸುಕು, ಸುಣ್ಣ, ಜೇಡಿಮಣ್ಣು, ಕಪ್ಪೆಚಿಪ್ಪು, ಶಂಖಚೂರ್ಣ, ವಜ್ರಲೇಪ, ಜೇನುಬೆಲ್ಲ, ಬಾಳೆಹಣ್ಣು, ಬಿಲ್ವಪತ್ರಿಕಾಯಿ, ಜೇನುಮೇಣ, ಬಿಳಿಯ ಕಲ್ಲಿನ ಪುಡಿ ಮುಂತಾದವುಗಳನ್ನು ನಿರ್ಧಿಷ್ಟಪಡಿಸಿದ ಪ್ರಮಾಣದಲ್ಲಿ ಬೆರೆಸಿ ತಿಂಗಳುಗಳವರೆಗೆ ನೆನೆಸಿಡಬೇಕು. ಈ ಮಿಶ್ರಣ ಹದಗೊಂಡಾಗ ಅದನ್ನು ಸಂಸ್ಕರಿಸಿದ ಆಧಾರಕ್ಕೆ ಲೇಪಿಸಬೇಕು. ನಂತರ ಬೇರೆ ಬೇರೆ ವಿಧಾನಗಳಿಂದ ಅದನ್ನು ನುಣುಪುಗೊಳಿಸಿ ಚಿತ್ರರಚನೆ ಮಾಡಬೇಕು. ಭಿತ್ತಿಯನ್ನು ಹೇಗೆ ಹಂತ-ಹಂತವಾಗಿ ತಯಾರಿಸಬೇಕು? ಹೇಗೆ ನುಣುಪು ಗೊಳಿಸಬೇಕು? ಯಾವ ಯಾವ ಪರಿಕರಗಳನ್ನು ಯಾವ ಸಂದರ್ಭಗಳಲ್ಲಿ ಉಪಯೋಗಿಸಬೇಕು ಎನ್ನುವಂತಹ ವಿವರಗಳನ್ನು ಕೊಡಲಾಗಿದೆ. ಭಿತ್ತಿ ತಯಾರಿಸಿದ ನಂತರ ಚಿತ್ರ ಬರೆಯುವ ಕ್ರಮವು ಆಸಕ್ತಿದಾಯಕ ಸಂಗತಿಯಾಗಿದೆ. ಅದಕ್ಕಾಗಿ ಬೇಕಾಗುವ ಬಣ್ಣ, ಕುಂಚ, ಅಂಟುದ್ರವ ಮತ್ತು ಸೀಸುಕಡ್ಡಿಗಳಂತಹ ಪರಿಕರಗಳನ್ನು ಪ್ರಾಚೀನರು ತಾವೇ ತಯಾರಿಸಿಕೊಳ್ಳುತ್ತಿದ್ದರು. ಅದರ ಬಗ್ಗೆಯೂ ಮತ್ತೊಂದು ಪ್ರತ್ಯೇಕ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಪ್ರಾಚೀನರು ಬಣ್ಣಗಳನ್ನು ಖನಿಜಮೂಲ, ಸಸ್ಯಮೂಲ, ಪ್ರಾಣಿಮೂಲಗಳಿಂದ ಪಡೆದುಕೊಳ್ಳುತ್ತಿದ್ದರು. ಹಾಗೆ ಸೀಸುಕಡ್ಡಿಯ ವರ್ತಿಕಾಗಳನ್ನು ಸುಟ್ಟ ಇದ್ದಿಲು, ಎಲುಬು, ಹೆಸರು, ಉದ್ದಿನಬೇಳೆ, ಪಾಟೀಕಲ್ಲಿನ ಪುಡಿ, ಇದ್ದಿಲಿನ ಪುಡಿ ಮತ್ತು ಕಾಡಿಗೆಯ ಕಪ್ಪು ಇವುಗಳ ಮಿಶ್ರಣಗಳಿಂದ ತಯಾರಿಸುತ್ತಿದ್ದರು. ಅಂಟು ದ್ರಾವಕಗಳನ್ನು ಸಸ್ಯಮೂಲ ಮತ್ತು ಪ್ರಾಣಿ ಮೂಲಗಳಿಂದ ಪಡೆದುಕೊಳ್ಳುತ್ತಿದ್ದರು. ಕುಂಚಗಳನ್ನು ತಯಾರಿಸಲು ಆಕಳುಕರು, ಜಿಂಕೆ, ಅಳಿಲು, ಮೇಕೆ, ಮೊಲ, ಇವುಗಳ ಕೂದಲುಗಳನ್ನು ಬಳಸುತ್ತಿದ್ದರು. ಹೀಗೆ ಯಾವ ಪರಿಕರಗಳಿಂದ ಹೇಗೆ ತಮಗೆ ಬೇಕಾದ ಚಿತ್ರರಚನಾ ಪರಿಕರಗಳನ್ನು ತಯಾರಿಸಿಕೊಳ್ಳುತ್ತಿದ್ದರು ಎನ್ನುವ ಸಂಗತಿಗಳ ಬಗ್ಗೆ ಸಮಗ್ರವಾಗಿ ವಿವೇಚಿಸಲಾಗಿದೆ.

ಭಿತ್ತಿಚಿತ್ರರಚನೆಯಲ್ಲಿ ಚಿತ್ರರಚನಾ ಹಂತವು ಮುಖ್ಯ ಘಟ್ಟವಾಗಿದೆ. ಭಿತ್ತಿಯು ಹಸಿ ಇರುವಾಗ ಚಿತ್ರ ಬರೆಯುವ ರೀತಿ ಒಂದು ಬಗೆಯಾದರೆ ಭಿತ್ತಿ ಒಣಗಿದ ನಂತರ ಚಿತ್ರ ಬರೆಯುವ ಕ್ರಮವು ಮತ್ತೊಂದು ತೆರನಾಗಿದೆ. ಇಂತಹ ಅಂಶಗಳನ್ನು ಈ ಅಧ್ಯಯನದಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ. ಉತ್ತರ ಕರ್ನಾಟಕದ ಭಿತ್ತಿ ಚಿತ್ರಗಳೆಲ್ಲವೂ ಭಿತ್ತಿ ಒಣಗಿದ ನಂತರ ರಚಿಸಲಾಗಿದ್ದು, ಅಜಂತೆಗಿಂತ ಭಿನ್ನವಾಗಿವೆ. ಚಿತ್ರರಚನೆಯನ್ನು ಒಮ್ಮೆಲೆ ಪೂರೈಸದೇ ಆರು ಹಂತಗಳಲ್ಲಿ ಮುಕ್ತಾಯಗೊಳಿಸುತ್ತಿದ್ದರು. ಚಿತ್ರರಚನೆಗಿಂತ ಮೊದಲು ಚಿತ್ರವು ಯಾವ ಪ್ರಮಾಣದಲ್ಲಿರಬೇಕು? ಯಾವ ಭಂಗಿಯಲ್ಲಿರಬೇಕು ಎನ್ನುವುದನ್ನು ನಿರ್ಧರಿಸಿಕೊಂಡು ಷಡಂಗಗಳಿಗೆ ಅನುಸಾರವಾಗಿ ಚಿತ್ರ ರಚನೆ ಮಾಡುತ್ತಿದ್ದರು. ಇಂತಹ ಚಿತ್ರರಚನೆಯ ಸೂಕ್ಷ್ಮಾತಿ ಸೂಕ್ಷ್ಮ ವಿವರಗಳನ್ನು ಇಲ್ಲಿ ಹೇಳಲಾಗಿದೆ.

ಈ ಪ್ರಬಂಧದ ಐದನೆಯ ಅಧ್ಯಾಯವು ಅಧ್ಯಯನದ ಹೃದಯ ಭಾಗವೇ ಆಗಿದೆ. ಇಲ್ಲಿ ಉತ್ತರ ಕರ್ನಾಟಕದ ಒಟ್ಟು ಭಿತ್ತಿ ಚಿತ್ರಗಳನ್ನು ಅವು ರಚನೆಯಾದ ನೆಲೆ ಮತ್ತು ವಸ್ತು ವಿಷಯಗಳಿಗೆ ಅನುಸಾರವಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಪ್ರಾಗಿತಿಹಾಸ ಭಿತ್ತಿಚಿತ್ರಕಲೆ, ಜನಪದ ಭಿತ್ತಿಚಿತ್ರಕಲೆ, ಶಿಷ್ಟಪದ  ಭಿತ್ತಿಚಿತ್ರಕಲೆ ಎಂದು ಮೂರು ರೀತಿಯಲ್ಲಿ ಕಾಲ ಮತ್ತು ಶೈಲಿಯ ಹಿನ್ನೆಲೆಯಲ್ಲಿ ವಿಂಗಡಿಸಿದೆ. ನಂತರ ಮುಖ್ಯ ಭಾಗವಾದ ಶಿಷ್ಟಪದ ಚಿತ್ರಕಲೆಯಲ್ಲಿ ಅವು ರಚನೆಯಾದ ನೆಲೆಗಳ ಆಧಾರದಲ್ಲಿ ವರ್ಗೀಕರಿಸಲಾಗಿದೆ. ಗುಹಾಲಯಗಳಲ್ಲಿ ರಚನೆಯಾದ ಚಿತ್ರಗಳು, ದೇವಾಲಯಗಳಲ್ಲಿ ರಚನೆಯಾದ ಚಿತ್ರಗಳು, ಅರಮನೆ ಮತ್ತು ವಾಡೆಗಳಲ್ಲಿ ರಚನೆಯಾದ ಚಿತ್ರಗಳು, ಮನೆಗಳಲ್ಲಿ ರಚನೆಯಾದ ಚಿತ್ರಗಳು, ಮಠಗಳಲ್ಲಿ ರಚನೆಯಾದ ಚಿತ್ರಗಳು, ಮಸೀದಿಗಳಲ್ಲಿ ರಚನೆಯಾದ ಚಿತ್ರಗಳು, ಚರ್ಚುಗಳಲ್ಲಿ ರಚನೆಯಾದ ಚಿತ್ರಗಳು ಎಂಬುದಾಗಿ ವಿಂಗಡಿಸಬಹುದಾಗಿದೆ. ಇಲ್ಲಿ ಪ್ರತಿಯೊಂದು ನೆಲೆಯ ಚಿತ್ರಗಳನ್ನು ಕುರಿತು ಹೇಳುವಾಗ ರಚನೆಯಕಾಲಮಾನ, ಅವುಗಳನ್ನು ಬರೆಸಿದ ಪೋಷಕರು, ಚಿತ್ರಗಳ ವಸ್ತುವಿಷಯ, ರಚನಾ ಶೈಲಿ, ತಂತ್ರಗಾರಿಕೆ, ವರ್ಣವಿನ್ಯಾಸ,  ರೇಖಾಲಾಲಿತ್ಯ, ಸಂಯೋಜನಾ ತತ್ವ ಇವುಗಳಲ್ಲದೆ ಚಿತ್ರರಚನೆಯ ಉದ್ದೇಶ, ಪ್ರಭಾವ, ಪ್ರೇರಣೆ, ಹೋಲಿಕೆ ಮುಂತಾದವುಗಳನ್ನು ಗಮನಿಸಲಾಗಿದೆ. ಸಾಧ್ಯವಿದ್ದಲೆಲ್ಲಾ ಬೇರೆ ನೆಲೆಗಳ ಚಿತ್ರಗಳೊಂದಿಗೆ ತೌಲನಿಕವಾಗಿ ನೋಡುವ ಪ್ರಯತ್ನ ಮಾಡಲಾಗಿದೆ.

ಪ್ರಾಚೀನ ಭಿತ್ತಿಚಿತ್ರಗಳು ನಮ್ಮ ನಾಡಿನ ಸಂಸ್ಕೃತಿಯನ್ನು ಬಿಂಬಿಸುವ ಅಮೂಲ್ಯ ಸಂಪತ್ತಾಗಿದ್ದು, ಅವು ಇಂದು ವಿವಿಧ ಆಪತ್ತುಗಳಿಗೆ ಸಿಕ್ಕು ಹಾಳಾಗುತ್ತಿವೆ. ಅವುಗಳನ್ನು ಕಾಯ್ದುಕೊಳ್ಳುವ, ಮುಂದಿನ ಪೀಳಿಗೆಗೆ ಉಳಿಸಿಕೊಂಡಿರುವ ಪ್ರಯತ್ನಗಳಾಗಬೇಕಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರಬಂಧದಲ್ಲಿ ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆಯ ಆಪತ್ತುಗಳು ಮತ್ತು ಸಂರಕ್ಷಣಾ ವಿಧಾನಗಳೆಂಬ ಪ್ರತ್ಯೇಕ ಅಧ್ಯಾಯವನ್ನೇ ಮೀಸಲಿರಿಸಲಾಗಿದೆ. ಇಲ್ಲಿ ಭಿತ್ತಿಚಿತ್ರಗಳಿಗೆ ಒದಗುವ ಆಪತ್ತುಗಳನ್ನು ವರ್ಗೀಕರಿಸಿ ವಿವೇಚಿಸಲಾಗಿದೆ. ವ್ಯಕ್ತಿಗತ ಆಪತ್ತು, ಸ್ವಾಭಾವಿಕ ಆಪತ್ತು, ಪ್ರಾಕೃತಿಕ ಆಪತ್ತು ಮತ್ತು ಪ್ರಾಣಿ-ಪಕ್ಷಿ, ಕ್ರಿಮಿ-ಕೀಟಗಳಿಂದಾಗುವ ಆಪತ್ತುಗಳೆಂದು ಭಾಗಮಾಡಿಕೊಂಡು ಮತ್ತೆ ಅದರಲ್ಲಿ ಉಪವಿಭಾಗ ಮಾಡಿಕೊಂಡು ಪ್ರಾಕೃತಿಕ ಆಪತ್ತುಗಳು, ಸ್ವಾಭಾವಿಕ ಆಪತ್ತುಗಳಲ್ಲಿ ಸವಕಳಿಯಿಂದಾಗುವ ಆಪತ್ತು, ಚಿತ್ರಗಳಿಗೆ ಬಳಸುವ ಪರಿಕರಗಳ ಕಡಿಮೆ ಗುಣಮಟ್ಟದಿಂದಾಗುವ ಆಪತ್ತುಗಳೆಂದು ವರ್ಗೀಕರಿಸಿದೆ. ಪ್ರಾಕೃತಿಕ ಆಪತ್ತುಗಳಲ್ಲಿ ನೀರು, ಬೆಂಕಿ, ಗಾಳಿ, ಭೂಕಂಪಗಳಿಂದಾಗುವ ಆಪತ್ತುಗಳೆಂದು ವಿಂಗಡಿಸಿದ್ದರೆ, ಯಾವ ಯಾವ ಪ್ರಾಣಿ-ಪಕ್ಷಿಗಳು ಮತ್ತು  ಕ್ರಿಮಿ-ಕೀಟಗಳು ಭಿತ್ತಿಚಿತ್ರಗಳಿಗೆ ಆಪತ್ತು ತರಬಲ್ಲವು ಎಂಬುದನ್ನು ಉದಾಹರಣೆಗಳ ಸಹಿತ ವಿವೇಚಿಸಲಾಗಿದೆ.

ಹೀಗೆ ವಿವಿಧ ರೀತಿಯ ಆಪತ್ತುಗಳಿಗೆ ಸಿಲುಕಿ ಹಾಳಾಗುವ ಭಿತ್ತಿಚಿತ್ರಗಳನ್ನು ಯಾವ ಕ್ರಮಗಳಿಂದ ಸಂರಕ್ಷಣೆಗೊಳಪಡಿಸಬಹುದು, ಮುಂದಿನ ಜನಾಂಗಕ್ಕೆ ಉಳಿಸಿಕೊಡಬಹುದು ಎನ್ನುವ ವಿಚಾರಗಳ ಬಗ್ಗೆ ಚರ್ಚಿಸಲಾಗಿದೆ. ಭಿತ್ತಿ ಚಿತ್ರಗಳನ್ನು ಉಳಿಸುವ ನಿಟ್ಟಿನಲ್ಲಿ ಅವುಗಳ ಛಾಯಾಚಿತ್ರ (ಫೋಟೋಗ್ರಫಿ) ಮಾಡುವುದು, ನಕಲು ಮಾಡುವುದು, ಪ್ರತಿ ಚಿತ್ರಣ ಮಾಡುವುದು, ವಿಡಿಯೋ ಶೂಟಿಂಗ್ ಮಾಡುವುದು, ಸ್ಲೈಡ್ಸಗಳನ್ನು ತಯಾರಿಸುವುದು, ಮೈಕ್ರೋಫಿಲಂನಲ್ಲಿ ಅಳವಡಿಸುವುದು, ಚಿತ್ರ ಸಂಪುಟಗಳನ್ನು ಮಾಡಿ ವಿವರ ದಾಖಲಿಸುವುದು, ಮುಂತಾದ ಕ್ರಮಗಳನ್ನು ಹೇಳಿದೆ. ಭಿತ್ತಿ ಚಿತ್ರಗಳನ್ನು ಸಂರಕ್ಷಿಸುವ ನೇರ ಕ್ರಮಗಳು ಇವಾದರೆ ಪೂರಕವಾಗಿರುವ ಕ್ರಮಗಳಿಂದಲೂ ಚಿತ್ರಗಳನ್ನು ಸಂರಕ್ಷಿಸಬಹುದು ಎಂಬ ವಿವರ ಹೇಳಿದೆ. ಪಠ್ಯಪುಸ್ತಕಗಳಲ್ಲಿ, ಇತಿಹಾಸ ಗ್ರಂಥಗಳಲ್ಲಿ ಸಂಬಂಧಿಸಿದ ಚಿತ್ರಗಳನ್ನು ಮುದ್ರಿಸುವುದು ಪೂರಕ ಕ್ರಮಗಳಾಗಿವೆ. ಹೀಗೆ ಹಲವಾರು ರೀತಿಗಳಿಂದ ಹೇಗೆ ಭಿತ್ತಿ ಚಿತ್ರಗಳನ್ನು ಸಂರಕ್ಷಿಸಬಹುದು ಎನ್ನುವ ಸಂಗತಿಗಳನ್ನು ವಿವೇಚಿಸಲಾಗಿದೆ.

ಈ ರೀತಿ ಭಿತ್ತಿಚಿತ್ರಕಲೆಯ ಮುಖ್ಯ ಅಂಶಗಳನ್ನು ಅಧ್ಯಯನಕ್ಕೊಳಪಡಿಸಿದ ಪ್ರಸ್ತುತ ಪ್ರಬಂಧದಿಂದ ಸಮಾಜ, ಸಂಸ್ಕೃತಿ ಮತ್ತು ಕಲಾಕ್ಷೇತ್ರದಲ್ಲಿ ಗಮನಾರ್ಹ ಫಲಿತಗಳು ಹೊರಬಂದಿವೆ. ನಾಡಿನ ಸಾಂಸ್ಕೃತಿಕ ಬದುಕಿನಲ್ಲಿ ಬಹುಮುಖ್ಯ ಪಾತ್ರವಹಿಸುತ್ತ ಬಂದಿರುವ ಭಿತ್ತಿಚಿತ್ರಕಲೆಯಿಂದ ಆಯಾ ಕಾಲದ ಜನಜೀವನ, ಸಂಸ್ಕೃತಿ, ಸುತ್ತಲಿನ ಪರಿಸರ, ಅವರ ಆಚರಣೆ, ಆಚಾರ, ವಿಚಾರ, ಧರ್ಮ, ನಂಬಿಕೆಗಳಂತಹ ಸಂಗತಿಗಳು ಬೆಳಕು ಕಂಡಿವೆ.

ಆ ಕಾಲದ ವಾಸ್ತುರಚನೆ, ವೇಷ-ಭೂಷಣಗಳು, ಯುದ್ಧೋಪಕರಣಗಳು, ನಿತ್ಯಬದುಕಿನ ವೈವಿಧ್ಯ ಸಾಮಾನುಗಳು, ಸಮಕಾಲೀನ ಸಸ್ಯವರ್ಗ, ಪ್ರಾಣಿವರ್ಗ, ಜಲಚರಗಳಂತಹ ವಿಚಾರಗಳು ಈ ಅಧ್ಯಯನದಿಂದ ತಿಳಿದು ಬಂದಿದೆ. ಕರ್ನಾಟಕದ ಭಿತ್ತಿಚಿತ್ರಕಲೆಯ ಕ್ರಮಾನುಗತ ಇತಿಹಾಸವನ್ನು ಕಟ್ಟಿಕೊಡುವ ಮೊದಲ ಪ್ರಯತ್ನ ಇಲ್ಲಿದೆ. ಭಿತ್ತಿ ತಯಾರಿಕೆಯ ಬಗ್ಗೆ ಕನ್ನಡದಲ್ಲಿ ಅಲ್ಪ-ಸ್ವಲ್ಪ ವಿವರಗಳು ತುಂಡು ತುಂಡಾಗಿ ಅಲ್ಲಲ್ಲಿ ಲಭ್ಯವಿದ್ದವೇ ವಿನಹ, ಪ್ರಾಚೀನರು ಚಿತ್ರರಚನೆಗಾಗಿ ಭಿತ್ತಿಯನ್ನು ಹೇಗೆ ತಯಾರಿಸಿಕೊಳ್ಳುತ್ತಿದ್ದರು? ಎಂಬ ವಿಧಾನಗಳನ್ನು ಪ್ರಾಚೀನ ಶಾಸ್ತ್ರಗ್ರಂಥಗಳ ಆಧಾರದಲ್ಲಿ ಒಟ್ಟಾಗಿ ರೂಪಿಸಲಾಗಿದೆ. ಅಲ್ಲದೆ ಯಾವ ಪ್ರಕಾರದ ಭಿತ್ತಿಗೆ ಎಂತಹ ಪರಿಕರಗಳು ಬೇಕಾಗುತ್ತವೆ ಎನ್ನುವ ವಿವರಗಳನ್ನು ಕೊಡಲಾಗಿದೆ.

ಪ್ರಾಚೀನ ಭಿತ್ತಿಚಿತ್ರರಚನೆಯ ಪರಿಕರಗಳನ್ನು ಯಾವ ಮೂಲಗಳಿಂದ ಹೇಗೆ ತಯಾರಿಸಿಕೊಳ್ಳುತ್ತಿದ್ದರು? ಎಂಬ ವಿವರಗಳನ್ನು ನೀಡಿ ಚಿತ್ರರಚನೆಯಲ್ಲಿ ಅನುಸರಿಸುತ್ತಿದ್ದ ಪ್ರಮುಖ ಆರು ಹಂತಗಳನ್ನು ಕುರಿತು ವಿವೇಚಿಸಲಾಗಿದೆ. ಉತ್ತರ ಕರ್ನಾಟಕದ ಭಿತ್ತಿ ಚಿತ್ರಗಳನ್ನು ಒಟ್ಟಾರೆಯಾಗಿ ಮೊದಲ ಬಾರಿಗೆ ನೆಲೆಯಾಧಾರಿತ, ವಿಷಯಾಧಾರಿತವಾಗಿ ವಿಂಗಡಿಸಿಕೊಂಡು ವಿಶ್ಲೇಷಿಸಲಾಗಿದೆ. ಚಿತ್ರಕಲೆಯ ತಾಂತ್ರಿಕ ಅಂಶಗಳಾದ ರೇಖೆ, ವರ್ಣವಿನ್ಯಾಸ, ಸಂಯೋಜನೆ, ನೆರಳು, ಬೆಳಕು, ಸ್ಥಳಾವಕಾಶ, ಮೈವಳಿಕೆ, ಆಕರಗಳು ರೂಪ ನಿಷ್ಠೆಯ ವಿಚಾರಗಳು, ಪ್ರಮಾಣ, ಹೀಗೆ ಹಲವಾರು ಸಂಗತಿಗಳು ಈ ಅಧ್ಯಯನದಲ್ಲಿ ಚರ್ಚಿಸಲ್ಪಟ್ಟಿವೆ.

ಇಂತಹ ಪ್ರಮುಖ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಬಂಧವು ಚಿತ್ರಕಲೆ ಕ್ಷೇತ್ರದಲ್ಲಿ ಮಹತ್ವದ ಕ್ಷೇತ್ರೀಯ ಅಧ್ಯಯನವಾಗಿದ್ದು, ಕರ್ನಾಟಕ ಕಲಾಸಾಹಿತ್ಯಕ್ಕೆ. ಸಂಶೋಧನಾ ಕ್ಷೇತ್ರಕ್ಕೆ ಗಮನಾರ್ಹ ಕೊಡುಗೆಯಾಗಿದೆ ಎಂದು ಹೇಳಬಹುದು.

**ಕರ್ನಾಟಕದ ಬುಡಕಟ್ಟು ಚಿತ್ರಕಲೆ :**

ಪ್ರಸ್ತುತ ಪ್ರಬಂಧವನ್ನು ಎಮ್.ಕೆ. ಗಿರೀಶಕುಮಾರ ಅವರು ಪ್ರೊ.ಹಿ.ಚಿ. ಬೋರಲಿಂಗಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ೨೦೦೨ರಲ್ಲಿ ಸಲ್ಲಿಸಿದ್ದಾರೆ.[೬] ಕರ್ನಾಟಕ ಚಿತ್ರಕಲಾ ಕ್ಷೇತ್ರದಲ್ಲಿ ಬುಡಕಟ್ಟು ಜನಾಂಗದ ಚಿತ್ರಕಲೆಯ ಕುರಿತು ಹೆಚ್ಚಿನ ಅಧ್ಯಯನಗಳು ನಡೆದಿಲ್ಲ. ಲೇಖನ ಮಟ್ಟದ ಬರವಣಿಗೆಯೂ ಸಹಿತ ಈ ವಿಷಯವಾಗಿ ಹೆಚ್ಚಿನ ಪ್ರಮಾಣದಲ್ಲಿ ಬಂದಿಲ್ಲ. ಈ ಹಿನ್ನೆಲೆಯಲ್ಲಿ ಬುಡಕಟ್ಟು ಜನ ಸಮುದಾಯದ ಚಿತ್ರಕಲೆಯ ಬಗ್ಗೆ ಪಿಎಚ್.ಡಿ.ಯಂತಹ ಅಧ್ಯಯನ ಮಾಡಿರುವುದು ಈ ಸಂದರ್ಭದಲ್ಲಿ ಹೆಚ್ಚು ಯೋಗ್ಯವಾಗಿದೆ. ಪ್ರಸ್ತುತ ಪ್ರಬಂಧದಲ್ಲಿ ಒಟ್ಟು ಆರು ಅಧ್ಯಾಯಗಳನ್ನು ಮಾಡಿಕೊಂಡು ವಿಷಯ ವಿಶ್ಲೇಷಣೆ ಮಾಡಲಾಗಿದೆ. ನಾಗರಿಕ ಸಮಾಜದಿಂದ ದೂರವಾಗಿ ಅವರಿಗಿಂತ ಭಿನ್ನವಾಗಿ, ಪ್ರತ್ಯೇಕ ಜೀವನಕ್ರಮವನ್ನು ರೂಢಿಸಿಕೊಂಡು ಬದುಕುತ್ತಾ, ವಿಶೇಷವಾದ ತಮ್ಮ ಸಾಂಸ್ಕೃತಿಕ ಮೌಲ್ಯಗಳನ್ನು ಇಂದಿನವರೆಗೂ ಜೀವಂತವಾಗಿ ಉಳಿಸಿಕೊಂಡು ಬಂದಿರುವ ಒಂದು ಗುಂಪಿನ ಅಥವಾ ಸಮುದಾಯದ ಜನರನ್ನು ಬುಡಕಟ್ಟು ಎಂದು ಈ ಪ್ರಬಂಧದಲ್ಲಿ ಗುರುತಿಸಿ ಅವರ ಕಲೆಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಕರ್ನಾಟಕದಲ್ಲೂ ವಿಶಿಷ್ಟ ಆಚರಣೆಗಳನ್ನು ಹೊಂದಿದ ಹಲವಾರು ಬುಡಕಟ್ಟು ಜನ ಸಮುದಾಯಗಳಿವೆ. ಈ ಜನಾಂಗದವರು ರಚಿಸುವ ಚಿತ್ರಕಲೆ ಇತರ ಜನಾಂಗದವರಿಗಿಂತ ಭಿನ್ನವಾಗಿರುವುದು ಮಾತ್ರವಲ್ಲದೇ ಪ್ರಾಕೃತಿಕ ಅಂಶಗಳಿಂದ ಪ್ರೇರಿತ-ಗೊಂಡಿರುತ್ತದೆ. ಇವರು ಹಲವು ಸಂದರ್ಭಗಳಲ್ಲಿ ಚಿತ್ರರಚನೆ ಮಾಡುತ್ತಾರೆ. ಹಬ್ಬ ಹರಿದಿನ, ಜಾತ್ರೆ, ಉತ್ಸವ, ಮದುವೆ-ಮುಂಜಿವೆ, ಇನ್ನಿತರ ಶುಭ ಸಮಾರಂಭಗಳಲ್ಲಿ ಚಿತ್ರರಚನೆ ಮಾಡುವ ಬುಡಕಟ್ಟು ಜನರು ಧಾರ್ಮಿಕ ಅಂಶಗಳಿಂದ ಹೊರತಾದ ಸೌಂದರ್ಯಾನುಭವದ ಅಭಿವ್ಯಕ್ತಿಯನ್ನು ತಮ್ಮ ಚಿತ್ರಕಲೆಯಲ್ಲಿ ತಂದುಕೊಂಡಿದ್ದಾರೆ. ಪ್ರಮುಖವಾಗಿ ರೇಖಾವಿನ್ಯಾಸದಿಂದ ಕೂಡಿರುವ ಇವರ ಚಿತ್ರಕಲೆಯಲ್ಲಿ ಬಣ್ಣದ ಬೆಡಗು ರೇಖೆಯ ವೈವಿಧ್ಯತೆಯಿಂದಲೇ ಗೋಚರಿಸುತ್ತದೆ ಎಂಬಂತಹ ವಿವರಗಳೊಂದಿಗೆ ಬುಡಕಟ್ಟು ಚಿತ್ರಕಲೆಯ ಅಧ್ಯಯನದ ಮಹತ್ವ ಉದ್ದೇಶ ಮತ್ತು ಅಗತ್ಯತೆಗಳನ್ನು ಬಿಂಬಿಸಲಾಗಿದೆ.

ಕಲೆಯ ಉಗಮ, ಚಿತ್ರಕಲೆಯ ಪ್ರಾರಂಭಿಕ ಘಟ್ಟ, ಬೆಳವಣಿಗೆ, ಐತಿಹಾಸಿಕ ಚಿತ್ರಕಲೆ, ಆಧುನಿಕ ಚಿತ್ರಕಲೆ, ಜನಪದ ಚಿತ್ರಕಲೆ; ಶಿಷ್ಟಪದ ಚಿತ್ರಕಲೆ, ಬುಡಕಟ್ಟು ಚಿತ್ರಕಲೆ, ಹೀಗೆ ವಿಭಾಗ ಮಾಡಿಕೊಂಡು ಉಳಿದೆಲ್ಲ ಕಲಾ ಪ್ರಕಾರಗಳಿಗಿಂತ ಬುಡಕಟ್ಟು ಚಿತ್ರಕಲೆ ಹೇಗಿ ಭಿನ್ನವಾಗಿದೆ, ಅದರ ಸ್ವರೂಪ, ಲಕ್ಷಣಗಳೇನು? ಭಾರತದಲ್ಲಿ ಯಾವ ಯಾವ ರಾಜ್ಯಗಳಲ್ಲಿ ಯಾವ ಬುಡಕಟ್ಟು ಜನಾಂಗದ ಕಲೆಯು ಪ್ರಖ್ಯಾತವಾಗಿದೆ ಎನ್ನುವ ಅಂಶಗಳನ್ನು ಎರಡನೆಯ ಅಧ್ಯಾಯದಲ್ಲಿ ಹೇಳಲಾಗಿದೆ. ಬುಡಕಟ್ಟು ಸಮುದಾಯದ ಜೀವನ ಪದ್ಧತಿಯಂತೆ ಅವರ ಕಲಾ ಪ್ರಕಾರಗಳೂ ಸಹಿತ ಪ್ರಕೃತಿಯ ಭೌತಿಕ ಮತ್ತು ತಾತ್ವಿಕ ನೆಲೆಗಟ್ಟಿನ ವಿಚಾರಗಳಿಗೆ ಸಂಬಂಧಪಟ್ಟಿರುತ್ತವೆ. ಹಾಗಾಗಿ ಅವರ ಸುತ್ತಲಿನ ಪರಿಸರ, ಭೂಪ್ರದೇಶ, ಸಸ್ಯವರ್ಗ, ಪ್ರಾಣಿವರ್ಗ, ಜಲಚರಗಳು, ಅವರ ಆಚಾರ, ವಿಚಾರ, ನಂಬಿಕೆ, ಆಚರಣೆ, ಸಂಸ್ಕೃತಿಗಳಂತಹ ಸಂಗತಿಗಳನ್ನು ಚಿತ್ರಕಲೆಯ ಹಿನ್ನೆಲೆಯಲ್ಲಿ ಮೂರನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

---

೬. ಎಮ್.ಕೆ.ಗಿರೀಶಕುಮಾರ : ಕರ್ನಾಟಕದ ಬುಡಕಟ್ಟು ಚಿತ್ರಕಲೆ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಅಪ್ರಕಟಿತ ಪ್ರಬಂಧ-೨೦೦೨

ಬುಡಕಟ್ಟು ಚಿತ್ರಕಲೆಯು ರಚನಾ ಹಿನ್ನೆಲೆಯ ದೃಷ್ಟಿಯಿಂದ ಪರಿಕರಗಳ ದೃಷ್ಟಿಯಿಂದ, ಚಿತ್ರದ ವಸ್ತುವಿಷಯಗಳ ದೃಷ್ಟಿಯಿಂದ ಇತರ ಚಿತ್ರಕಲಾ ಪ್ರಕಾರಗಳಿಗಿಂತ ಭಿನ್ನವಾಗಿದೆ. ತಾವು ವಾಸಿಸುವ ಗುಡಿಸಲು, ಅದರ ಬಿದಿರಿನ ಗೋಡೆಗೆ ಮಣ್ಣು ಲೇಪಿಸಿ, ಚಿತ್ರ ಬರೆಯುತ್ತಾರೆ. ಬಿದಿರಿನ ಬುಟ್ಟಿಗಳನ್ನು ವಿವಿಧ ಆಕಾರ, ವಿನ್ಯಾಸದಲ್ಲಿ ರಚಿಸಿ ಅದರ ಮೇಲೆ ಜೇಡಿ ಮಣ್ಣು, ಸಗಣಿ ಲೇಪಿಸಿ ಚಿತ್ರ ಬರೆಯುತ್ತಾರೆ. ಬಿದಿರಿನ ಮೊರ (ಕಾಳನ್ನು ಹಸನುಮಾಡುವ ಸಾಧನ) ಕೃಷಿ ಉಪಕರಣಗಳ ಮೇಲೂ ಇವರು ಚಿತ್ರಿಸುತ್ತಾರೆ. ಹಾಗೆ ಮಣ್ಣಿನ ಪಾತ್ರೆಗಳು, ವೇಷ–ಭೂಷಣಗಳ ಮೇಲೆ ಚಿತ್ರಿಸುವ ಇವರು ಮನೆಯ ಹೊರಗಿನ, ಒಳಗಿನ ಕಟ್ಟೆಗಳು, ಜಗಲಿಗಳು, ಮದುವೆಯ ಸಂದರ್ಭದ ಕಟ್ಟೆಯ ಹಿಂಭಾಗ, ಗೋಡೆಯ ಮೇಲೆ ಚಿತ್ರ ಬರೆದು ಅಲಂಕರಿಸುತ್ತಾರೆ. ಈ ಮೇಲಿನ ವಿವಿಧ ಮಾಧ್ಯಮಗಳ ಮೇಲೆ ಕೆಲವು ನಿರ್ದಿಷ್ಟ ಆಚರಣೆ ಮತ್ತು ಸಂದರ್ಭಗಳಲ್ಲಿ ಮಾತ್ರ ಚಿತ್ರಿಸುವ ಇವರು ಅದಕ್ಕಾಗಿ ತಾವೇ ಪ್ರಕೃತಿ ದತ್ತವಾದ ವರ್ಣಗಳನ್ನು ತಯಾರಿಸಿ ಕೊಳ್ಳುತ್ತಾರೆ. ಈ ಬಗೆಯ ತಾತ್ವಿಕ ವಿಚಾರಗಳ ಬಗ್ಗೆ ನಾಲ್ಕನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದ್ದು, ಸಾಂಪ್ರದಾಯಿಕ ಮತ್ತು ಆಚರಣೆಗಳ ಹಿನ್ನೆಲೆಯಲ್ಲಿ ಚಿತ್ರಗಳ ವಸ್ತು ವಿಷಯಗಳನ್ನು ವಿವೇಚನೆ ಗೊಳಪಡಿಸಲಾಗಿದೆ. ಇದೇ ಅಧ್ಯಾಯದಲ್ಲಿ ಬುಡಕಟ್ಟು ಜನರ ಹಚ್ಚೆ ಚಿತ್ರಕಲೆಯ ಕುರಿತಾಗಿಯೂ ಹೇಳಲಾಗಿದೆ.

ಬುಡಕಟ್ಟು ಚಿತ್ರಕಲೆಯ ರಚನಾ ಪರಿಕರಗಳಾದ ಬಣ್ಣ, ಅಂಟುದ್ರಾವಕ, ಕುಂಚ, ಕಡ್ಡಿಗಳು, ಬಣ್ಣ ಮಿಶ್ರಗೊಳಿಸುವ ತಟ್ಟೆ, ಭಿತ್ತಿ ಸಿದ್ಧಗೊಳಿಸುವ ವಸ್ತುಗಳು ಇವೆಲ್ಲವುಗಳನ್ನು ಅವರು ತಮ್ಮ ಸುತ್ತಿನ ಪ್ರಕೃತಿಯಲ್ಲಿ ಲಭ್ಯವಾಗುವ ವಸ್ತುಗಳಿಂದಲೇ ಪಡೆದುಕೊಳ್ಳುತ್ತಾರೆ. ವಿವಿಧ ಖನಿಜ ಮೂಲದ ಮಣ್ಣಿನ ಗಟ್ಟಿ, ಬಣ್ಣದ ಕಲ್ಲು, ಹರಳುಗಳು, ವಿವಿಧ ರೀತಿಯ ಸಸ್ಯದ ಬೇರು, ಕಾಂಡ, ಹೂ, ಕಾಯಿ, ಹಣ್ಣು, ಎಲೆಗಳಿಂದ ಬಣ್ಣಗಳನ್ನು ತಯಾರಿಸಿಕೊಳ್ಳುವ ಇವರು ಅದಕ್ಕೆ ಬೆರೆಸಲು ಬೇಕಾಗುವ ಅಂಟು ದ್ರಾವಕವನ್ನು ವಿವಿಧ ಸಸ್ಯಗಳ ಕಾಂಡ, ಕಾಯಿ, ಹಣ್ಣು, ಎಲೆ, ಬೀಜಗಳಿಂದ ತಯಾರಿಸಿ ಕೊಳ್ಳುತ್ತಾರೆ. ಪ್ರಾಣಿಮೂಲದ ಅಂಟು ದ್ರಾವಕವನ್ನು ಶಿಷ್ಟ ಪರಂಪರೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಬಳಸಿದರೆ ಇವರು ಸಸ್ಯಮೂಲದ ಅಂಟನ್ನು ಮಾತ್ರ ಬಳಸುವುದು ಇವರ ಪ್ರಾಕೃತಿಕ ಪ್ರೀತಿಯ ಲಕ್ಷಣವೆನ್ನಬಹುದು. ಬಣ್ಣಗಳನ್ನು ಕಲೆಸಿಕೊಳ್ಳಲು ಮಣ್ಣಿನ ಪಾತ್ರೆ, ಟೆಂಗಿನ ಚಿಪ್ಪು, ಎಲೆಗಳಿಂದ ಮಾಡಲ್ಪಟ್ಟ ಡೊಣೆಗಳನ್ನು ಬಳಸುವ ಇವರು ಚಿತ್ರಗಳನ್ನು ಕುಂಚಗಳಿಂದ ಮತ್ತು ಹೆಚ್ಚಾಗಿ ಕಡ್ಡಿಗಳಿಂದ ಚಿತ್ರಿಸುತ್ತಾರೆ. ಚಿತ್ರರಚನೆಗೆ ಮೊದಲು ಆಧಾರವನ್ನು ಭಿತ್ತಿ ಲೇಪಿಸುವ ಮೂಲಕ ಸಂಸ್ಕರಿಸಿ ನಂತರ ಚಿತ್ರಿಸುತ್ತಾರೆ. ಇವರು ರಚಿಸುವ ಚಿತ್ರಗಳ ವಸ್ತುವಿಷಯಗಳಲ್ಲಿ ಸೂರ್ಯ, ಚಂದ್ರ, ಸ್ವಸ್ತಿಕ, ಇವುಗಳು ಸಾಮಾನ್ಯವಾಗಿದ್ದುಉಳಿದಂತೆ ಅವರ ಆಚರಣೆ, ಸಂದರ್ಭ, ನಂಬಿಕೆ, ಧಾರ್ಮಿಕತೆ ಮತ್ತು ಪರಿಸರಕ್ಕೆ ಸಂಬಂಧಿಸಿದಂತೆ ಬೇರೆ ಬೇರೆಯಾಗಿರುತ್ತವೆ.

ಈ ಪ್ರಬಂಧದ ರಚನೆಯ ಹಿನ್ನೆಲೆಯಲ್ಲಿ ಕಾರವಾರ, ಅಂಕೋಲಾ, ಕುಮಟಾ, ಹೊನ್ನಾವರ, ಭಟ್ಕಳ, ಯಲ್ಲಾಪುರ, ದಾಂಡೇಲಿ, ಹಳಿಯಾಳ, ನಾಗರಹೊಳೆ, ಹುಣಸೂರು, ಹೆಗ್ಗಡದೇವನ ಕೋಟೆ, ಬಿಳಿಗಿರಿ ರಂಗನಬೆಟ್ಟ, ಮಲೆಮಹಾದೇಶ್ವರ ಬೆಟ್ಟ, ಸಾಗರಗಳಲ್ಲಿ ಕ್ಷೇತ್ರಕಾರ್ಯ ಮಾಡಲಾಗಿದೆ. ಈ ಸ್ಥಳಗಳಲ್ಲಿನ ಹಾಲಕ್ಕಿಗಳು, ಕುಣಬಿಯರು, ಗೌಳಿಗರು, ಯರವರು, ಕಾಡು–ಕುರುಬರು, ಜೇನು ಕುರುಬರು, ಸೋಲಿಗರು, ಹಲಸರು ಮತ್ತು ದೀವರು ಎಂಬುವ ಬುಡಕಟ್ಟು ಜನಸಮುದಾಯಗಳ ಚಿತ್ರಕಲೆಯನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ.

ಪ್ರಸ್ತುತ ಕರ್ನಾಟಕದ ಬುಡಕಟ್ಟು ಚಿತ್ರಕಲೆ ಎಂಬ ಪ್ರಬಂಧದಿಂದ ಈ ಕೆಳಗಿನ ಅಂಶಗಳು ಮುಖ್ಯವಾಗಿ ಹೊರಹೊಮ್ಮಿವೆ. ನಾಗರಿಕ ಸಮಾಜದಿಂದ ದೂರವಾಗಿ ಅವರಿಗಿಂತ ಭಿನ್ನವಾಗಿ, ಪ್ರತ್ಯೇಕ ಜೀವನ ಕ್ರಮವನ್ನು ರೂಢಿಸಿಕೊಂಡು ಬದುಕುತ್ತಿರುವ ಬುಡಕಟ್ಟು ಸಮುದಾಯಗಳು ತಮ್ಮ ಸಾಂಸ್ಕೃತಿಕ ಮೌಲ್ಯಗಳನ್ನು ಇಂದಿನವರೆಗೂ ಜೀವಂತವಾಗಿ ಉಳಿಸಿಕೊಂಡು ಬಂದಿದ್ದು, ಅವುಗಳಲ್ಲಿ ಅವರ ಚಿತ್ರಕಲೆಯೂ ಒಂದಾಗಿದೆ. ಈ ಚಿತ್ರಕಲೆಯ ರಚನಾವಿಧಾನ, ಉಪಯೋಗಿಸುವ ಬಣ್ಣ, ಕುಂಚ, ಅಂಟು ದ್ರಾವಕಗಳಂತಹ ಪರಿಕರಗಳು, ಭಿತ್ತಿ ಸಿದ್ಧಗೊಳಿಸುವ ವಿಧಾನ, ಚಿತ್ರದ ವಸ್ತುವಿಷಯಗಳು, ರೇಖಾ ವಿನ್ಯಾಸ, ಬಣ್ಣಗಾರಿಕೆ, ಸಂಯೋಜನೆ, ರೀತಿ–ನೀತಿಗಳು, ಚಿತ್ರರಚಿಸುವ ಕಲಾವಿದರು, ರಚನೆಯ ಉದ್ದೇಶ, ಶೈಲಿ, ಪ್ರಭಾವ, ಪ್ರೇರಣೆ ಮುಂತಾದ ಅಂಶಗಳು ಬೆಳಕಿಗೆ ಬಂದಿವೆ.

**ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ :**

ಜನಪದ ಚಿತ್ರಕಲೆಯಂತೆ ಶಿಲ್ಪಕಲೆಯೂ ಈ ನಾಡಿನ ಜನಸಮುದಾಯ ನೀಡಿದ ಕೊಡುಗೆಗಳಲ್ಲಿ ಪ್ರಮುಖವಾಗಿದ್ದು, ಕರ್ನಾಟಕ ಜನಪದ ಶಿಲ್ಪಕಲೆ ಕುರಿತು ಶಿವಾನಂದ ಬಂಟನೂರ ಅಧ್ಯಯನ ಮಾಡಿದ್ದಾರೆ.[೭] ಈ ಅಧ್ಯಯನವನ್ನು ಡಾ.ಎಸ್.ಸಿ.ಪಾಟೀಲರ ಮಾರ್ಗದರ್ಶನದಲ್ಲಿ ನಡೆಸಲಾಗಿದ್ದು, ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ ಅಧ್ಯಯನ ಕೈಗೊಳ್ಳಲಾಗಿದೆ. ಈ ಅಧ್ಯಯನ ಪ್ರಬಂಧವು ಏಳು ಅಧ್ಯಾಯಗಳಲ್ಲಿ ಬಿಚ್ಚಿಕೊಂಡಿದೆ. ಜನಪದ ಸಂಸ್ಕೃತಿಯಲ್ಲಿ ಕಲೆಗಳ ಮಹತ್ವ ಅವು ಪ್ರವೇಶ ಪಡೆದ ಹಿನ್ನೆಲೆಯನ್ನು ಬಿಂಬಿಸುತ್ತ, ಜನಪದ ಶಿಲ್ಪಕಲೆಯು ಚಿಗುರೊಡೆದ ಬಗೆಯನ್ನು ವಿವೇಚಿಸಲಾಗಿದೆ. ಜನಪದ ಕಲೆಗಳು ಜನಪದ ಬದುಕು ಸಂಸ್ಕೃತಿಗಳ ಚೌಕಟ್ಟಿನಲ್ಲಿಯೇ ರೂಪುಗೊಂಡು ಕ್ರಮೇಣ ಧಾರ್ಮಿಕ ಆಚರಣೆಗೊಳಗಾಗಿ ಬೆಳೆದವು. ಹೀಗಾಗಿ ಪ್ರತಿಯೊಂದು ಸಂಪ್ರದಾಯಕ್ಕೂ ಸತ್ವಪೂರ್ಣ ಹಿನ್ನೆಲೆ ಇದೆ ಎಂಬ ಅಂಶಗಳನ್ನು ಕುರಿತು ಮೊದಲ ಅಧ್ಯಾಯದಲ್ಲಿ ಹೇಳಲಾಗಿದೆ. ಇದರೊಂದಿಗೆ ಜನಪದ ಶಿಲ್ಪಕಲೆಗಳ ಮಹತ್ವ, ಈ ಅಧ್ಯಯನದ ಅವಶ್ಯಕತೆ, ಉದ್ದೇಶ ಮತ್ತು ಸ್ವರೂಪಗಳ ಬಗ್ಗೆಯೂ ಇಲ್ಲಿ ಹೇಳಿದೆ. ಜನಪದ ಶಿಲ್ಪಕಲೆ ಬೆಳೆದು ಬಂದ ರೀತಿಯನ್ನು ಸ್ಥೂಲವಾಗಿ ಗುರುತಿಸುವ ಪ್ರಯತ್ನವೂ ಇಲ್ಲಿದೆ.

ಕಲಾ ಪ್ರಕಾರಗಳಲ್ಲಿ ಚಿತ್ರ, ಶಿಲ್ಪ, ವಾಸ್ತು ಕಲೆಗಳು ಪ್ರತ್ಯೇಕ ಐತಿಹಾಸಿಕ ಹಿನ್ನೆಲೆ ಹೊಂದಿವೆ. ಶಿಲ್ಪಕಲೆಯ ಐತಿಹಾಸಿಕ ಘಟ್ಟಗಳು ಕುತೂಹಲ ಭರಿತವಾಗಿದ್ದು, ಶಿಷ್ಟಪದ ಶಿಲ್ಪಕಲೆಗಿಂತ ಜನಪದ ಶಿಲ್ಪಕಲೆಯು ವಿಭಿನ್ನ ಆಯಾಮಗಳನ್ನು ಹೊಂದಿದೆ. ಇಂತಹ ವಿಚಾರಗಳು ಎರಡನೆಯ ಅಧ್ಯಾಯದಲ್ಲಿ ವಿವೇಚನೆಗೆ ಒಳಪಟ್ಟಿವೆ. ಇಲ್ಲಿ ಮೊದಲಿಗೆ ಕಲೆಯ ಅರ್ಥ, ಪರಿಕಲ್ಪನೆ, ಕಲೆಯ ವಿಧಗಳು, ಸ್ವರೂಪ, ದೃಶ್ಯಕಲೆಗಳ ಕುರಿತು ಹೇಳಿದೆ. ನಂತರ ಶಿಲ್ಪಕಲೆಯ ಪರಿಕಲ್ಪನೆ, ಅರ್ಥವ್ಯಾಪ್ತಿ ಪ್ರಕಾರಗಳನ್ನು ಹೇಳಿ, ದುಂಡುಶಿಲ್ಪ, ಉಬ್ಬುಶಿಲ್ಪಗಳ ವೈಲಕ್ಷಣಗಳನ್ನು ಬಿಂಬಿಸಿದೆ. ನಂತರ ಶಿಲ್ಪಕಲೆಯನ್ನು ವರ್ಗೀಕರಿಸಿಕೊಂಡು ಶಿಷ್ಟಪದ ಶಿಲ್ಪಕಲೆ, ಜನಪದ ಶಿಲ್ಪಕಲೆ ಎಂಬುದಾಗಿ ಅವುಗಳ ಪ್ರಮುಖ ಲಕ್ಷಣಗಳನ್ನು ಗುರುತಿಸಲಾಗಿದೆ. ಜನಪದ ಶಿಲ್ಪಕಲೆಯ ಸ್ವರೂಪ, ಲಕ್ಷಣಗಳನ್ನು ಹೇಳುತ್ತಾ ಯಾವ ಯಾವ ಆಚರಣೆ ಮತ್ತು ಸಂದರ್ಭಗಳಲ್ಲಿ ಜನಪದ ಶಿಲ್ಪಗಳು ರಚನೆಯಾಗುತ್ತವೆ ಎಂಬುದನ್ನು ಇಲ್ಲಿ ತಿಳಿಸಲಾಗಿದೆ.

೭ ಶಿವಾನಂದ ಬಂಟನೂರ : ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ :ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಪಿಎಚ್.ಡಿ. ಪ್ರಬಂಧ–೨೦೦೨

ಜನಪದ ಶಿಲ್ಪಗಳು ವಿವಿಧ ಸಂದರ್ಭಗಳಲ್ಲಿ ವಿವಿಧ ಮಾಧ್ಯಮಗಳಲ್ಲಿ ರಚನೆಯಾಗುತ್ತ ಬಂದಿದ್ದು, ಅವುಗಳು ರಚನೆಯಾಗುವ ಮಾಧ್ಯಮಗಳಿಗೆ ಅನುಸಾರವಾಗಿ ಮಣ್ಣಿನ ಮಾಧ್ಯಮದ ಜನಪದ ಶಿಲ್ಪಗಳು, ಮರ ಮಾಧ್ಯಮದ ಜನಪದ ಶಿಲ್ಪಗಳು, ಶಿಲಾ ಮಾಧ್ಯಮದ ಜನಪದ ಶಿಲ್ಪಗಳು ಮತ್ತು ಸಂಕೀರ್ಣ ಮಾಧ್ಯಮದ ಜನಪದ ಶಿಲ್ಪಗಳು ಎಂಬುದಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಿದ ಪ್ರಯತ್ನ ಇಲ್ಲಿದೆ. ಮಣ್ಣು ಮಾಧ್ಯಮದ ಜನಪದ ಶಿಲ್ಪಕಲೆಯ ವಿಶ್ಲೇಷಣೆಗೆ ಮೂರನೆಯ ಅಧ್ಯಾಯ ಮೀಸಲಿರಿಸಲಾಗಿದೆ. ಮಡಿಕೆಯ ಮಾಡುವವರಿಗೆ ಮಣ್ಣೇ ಮೊದಲು ಎನ್ನುವ ಮಾತಿನಂತೆ ಜನಪದ ಶಿಲ್ಪರಚನೆಯೂ ಮೊದಲಿಗೆ ಮಣ್ಣಿನಿಂದಲೇ ಆರಂಭವಾಗಿ ನಂತರ ಇತರ ಮಾಧ್ಯಮಗಳತ್ತ ಹೊರಳಿರಬಹುದು ಎನ್ನುವ ಅಭಿಪ್ರಾಯವನ್ನು ಇಲ್ಲಿ ಪ್ರಬಂಧಕಾರರು ವ್ಯಕ್ತಪಡಿಸುತ್ತಾರೆ. ಅಲ್ಲದೆ ಮಣ್ಣಿನ ಜನಪದ ಶಿಲ್ಪಕಲೆಯು ಹೆಚ್ಚಾಗಿ ಧರ್ಮಮೂಲವಾಗಿ ಬೆಳೆದು ಬಂದಿರುವುದುನ್ನು ಗುರುತಿಸುತ್ತಾ ಯಾವ ಯಾವ ಸಂದರ್ಭ ಮತ್ತು ಆಚರಣೆಗಳಲ್ಲಿ ಯಾವ ಬಗೆಯ ಶಿಲ್ಪಗಳು ಮಣ್ಣಿನಿಂದ ರಚನೆಯಾಗುತ್ತವೆ ಎನ್ನುವುದನ್ನು ಹೇಳಲಾಗಿದೆ. ಮಣ್ಣು ಮಾಧ್ಯಮದ ಜನಪದ ಶಿಲ್ಪಗಳಲ್ಲಿ ಮಣ್ಣೆತ್ತುಗಳಿಂದ ಆರಂಭಗೊಳ್ಳುವ ಶಿಲ್ಪರಚನೆಯ ಪರಂಪರೆಯಲ್ಲಿ ಮಣ್ಣೆತ್ತು, ಕೋಲೆಬಸವ, ಅರಳೆಲೆ ಬಸವ, ಗುಳ್ಳವ್ವ, ಗೊಗ್ಗವ್ವ, ಹುತ್ತಪ್ಪ, ಶಿರಿಯಾಳ ಶೆಟ್ಟಿ, ಜೋಕುಮಾರ, ಗುರ್ಚಿ, ಶೀಗಮ್ಮ, ಗೌರಮ್ಮ ಹೀಗೆ ಅನೇಕ ಶಿಲ್ಪಗಳು ಬರುತ್ತವೆ. ಇಲ್ಲಿ ಗಮನಾರ್ಹ ಅಂಶವೆಂದರೆ ಮಣ್ಣು ಮಾಧ್ಯಮದ ಜನಪದ ಶಿಲ್ಪಗಳು ರಚನೆಗೊಳ್ಳುವ ಕಾಲಮಾನವನ್ನು ಗಮನಿಸಿದಾಗ ಅದು ಜೂನ್‌ದಿಂದ ನವಂಬರ್‌ವರೆಗಿನ ಅವಧಿಯನ್ನು ಹೊಂದಿದೆ.

ಈ ಕಾಲದಲ್ಲಿ ಮಳೆ ಅಧಿಕವಾಗಿ ಸುರಿದು ಭೂಮಿಯ ಮಣ್ಣು ಸ್ವಾಭಾವಿಕವಾಗಿ ಹಸಿಯಾಗಿ ಜಿಗುಟಾಗಿರುವುದು. ಇದು ಪ್ರಕೃತಿಯ ಋತು ಬದಲಾವಣೆಗಳಿಗೆ ಅನುಸಾರವಾಗಿ ಜನಪದರ ಶಿಲ್ಪರಚನೆಯ ಆಚರಣೆಗಳು ನಡೆಯುತ್ತ ಬಂದಿವೆ ಎಂಬುದನ್ನು ತಿಳಿಸುತ್ತವೆ. ಈ ಮಳೆಯ ದಿನಗಳಲ್ಲಿ ಹೊಲಗಳಲ್ಲಿ ಕೆಲಸದ ಒತ್ತಡ ಕಡಿಮೆ ಇರುವ ಸಂದರ್ಭದಲ್ಲಿ ಮನೆಯಲ್ಲಿ ಕುಳಿತು ಸಮಯ ಕಳೆಯುವ ಹಿನ್ನೆಲೆಯಲ್ಲಿ ಕಲಾತ್ಮಕ ವಿಚಾರಗಳಿಗೆ ಆತನ ಮನಸು ಒಲಿದಿರಲು ಸಾಕು. ಮುಂಗಾರಿನ ಮಳೆಯ ಆರಂಭಿಕ ದಿನಗಳಲ್ಲಿ ಬರುವ ಮಣ್ಣೆತ್ತಿನ ಶಿಲ್ಪದ ಆರಾಧನೆಯು ಕೃಷಿ ಚಟುವಟಿಕೆಗಳಲ್ಲಿ ತೊಡಗುವ ಮೊದಲಿಗೆ ಎತ್ತುಗಳಿಗೆ ಪೂಜಿಸುವ ಸಂಪ್ರದಾಯದ ಸಂಕೇತವನ್ನು ಪ್ರತಿಬಿಂಬಿಸುತ್ತದೆ. ಇದಾದ ನಂತರ ಬರುವ ಗುಳ್ಳವ್ವನ ಆಚರಣೆ ಸ್ತ್ರೀ ಪ್ರಧಾನವಾಗಿದೆ. ಇಲ್ಲಿ ಸ್ತ್ರೀಯರೇ ಗುಳ್ಳವ್ವನ ಶಿಲ್ಪಗಳನ್ನು ಮಾಡುತ್ತಾರೆ. ಜಿಟಿಜಿಟಿ ಹನಿಯ ನಿರಂತರ ಮಳೆಯಲ್ಲಿ ಆಚರಿಸುವ ಈ ಸಂಪ್ರದಾಯ ನಾಲ್ಕರಿಂದ ಐದು ವಾರಗಳವರೆಗೆ ಇರುತ್ತದೆ. ಪ್ರತಿವಾರಕ್ಕೆ ಒಂದೊಂದು ಅಂತಸ್ತುಗಳಂತೆ ಗುಳ್ಳವ್ವನ ಶಿಲ್ಪರಚನೆಯನ್ನು ಹೆಚ್ಚಿಸುತ್ತ ಹೋಗುತ್ತಾರೆ. ಕುಸುಬಿ, ಗುಲಗಂಜಿ, ಜಾಲಿಹೂಗಳಿಂದ ಅಲಂಕರಿಸುವ ಈ ಶಿಲ್ಪದ ಪಕ್ಕದಲ್ಲಿಯೇ ಗೊಗ್ಗವ್ವನ ಮುಖಶಿಲ್ಪವನ್ನು ಮಾಡಿರುತ್ತಾರೆ.

ಮುಂದೆ ಪಂಚಮಿ ಹಬ್ಬದಲ್ಲಿ ರಚಿಸುವ ಹುತ್ತಪ್ಪ, ಆ ಮೇಲಿನ ಶೀಗವ್ವ, ಗೌರವ್ವ, ಗುರ್ಚಿ ಆಚರಣೆಯ ಮಣ್ಣಿನ ಜನಪದ ಶಿಲ್ಪಗಳು ಮನುಷ್ಯ ಬದುಕಿನೊಂದಿಗೆ ಮಳೆ, ಮಣ್ಣು, ಕೃಷಿ, ಫಲವತ್ತತೆ, ನಂಬಿಕೆ, ಆಚರಣೆ, ಇವುಗಳ ಅಂತರ್ ಸಂವಂಧಗಳನ್ನು ತಿಳಿಸಿಕೊಡುವ ಸಾಂಕೇತಿಕ ರಚನೆಗಳಾಗಿವೆ. ಈ ಅಧ್ಯಾಯದಲ್ಲಿ ಇಂತಹ ಶಿಲ್ಪಗಳ ಆಚರಣೆಯ ಹಿನ್ನೆಲೆಗಳೊಂದಿಗೆ ಮಣ್ಣಿನ ಮಾಧ್ಯಮದ ಶಿಲ್ಪಗಳ ರಚನಾ ಕ್ರಮ, ಸ್ವರೂಪ, ಲಕ್ಷಣ ಮತ್ತು ಪರಿಕರಗಳ ಬಗ್ಗೆಯೂ ವಿವೇಚಿಸಿದೆ.

ಮರ ಮಾಧ್ಯಮದ ಜನಪದ ಶಿಲ್ಪಗಳು ಜನಪದ ಕ್ಷೇತ್ರದಲ್ಲಿ ಉತ್ಸವ, ಆಚರಣೆಗಳ ಹಿನ್ನೆಲೆಯಲ್ಲಿ ಪ್ರಮುಖವಾಗಿದ್ದು, ಅವುಗಳ ಬಗ್ಗೆ ನಾಲ್ಕನೆಯ ಅಧ್ಯಾಯದಲ್ಲಿ ವಿವೇಚನೆ ಮಾಡಲಾಗಿದೆ. ದುರಗಮ್ಮ, ದ್ಯಾಮವ್ವ, ಮಾರಮ್ಮ, ಊರಮ್ಮ, ಹೀಗೆ ಸ್ತ್ರೀ ಪ್ರಧಾನವಾದ ಶಿಲ್ಪಗಳು ಇಲ್ಲಿ ಹೆಚ್ಚಾಗಿ ರಚನೆಯಾಗುತ್ತವೆ. ಮೆಕ್ಕೆಕಟ್ಟೆಯಉರುಗಳು ಮರ ಮಾಧ್ಯಮದ ಜನಪದ ಶಿಲ್ಪಗಳಲ್ಲಿ ವಿಶಿಷ್ಟವಾಗಿವೆ. ಮರ ಮಾಧ್ಯಮದ ಜನಪದ ಶಿಲ್ಪಗಳನ್ನು ವಿವಿಧ ರೀತಿಯ ಮರಗಳಿಂದ ತಯಾರಿಸಿ ನಂತರ ಆಕರ್ಷಕ ಬಣ್ಣಗಳಿಂದ ಲೇಪನ ಮಾಡಲಾಗುತ್ತದೆ. ಇಲ್ಲಿ ಈ ಶಿಲ್ಪಗಳಲ್ಲಿ ರಚನಾ ವಿಧಾನ, ಅವುಗಳಿಗೆ ಬಳಸುವ ಮರಗಳು, ರಚನೆಯ ಪರಿಕರಗಳು, ಕಲಾವಿದರು, ಸಂದರ್ಭ, ಮುಂತಾದ ಸಂಗತಿಗಳ ಬಗ್ಗೆ ತಿಳಿಸಲಾಗಿದೆ.

ಶಿಲ್ಪ ಎನ್ನುವ ಪರಿಕಲ್ಪನೆಯು ಶಿಲೆಯ ಹಿನ್ನೆಲೆಯಿಂದ ರೂಪುಗೊಂಡಿದ್ದು, ಜನಪದ ಶಿಲಾ ಮಾಧ್ಯಮದ ಶಿಲ್ಪಗಳ ಸ್ವರೂಪ, ಲಕ್ಷಣ, ರಚನಾ ವಿಧಾನ, ಪರಿಕರಗಳು, ಆಚರಣೆಗಳ ಹಿನ್ನೆಲೆಯನ್ನು ಐದನೆಯ ಅಧ್ಯಾಯದಲ್ಲಿ ಬಿಂಬಿಸಲಾಗಿದೆ. ಶಿಲಾ ಮಾಧ್ಯಮದ ಜನಪದ ಶಿಲ್ಪಗಳು ಪ್ರಧಾನವಾಗಿ ಧಾರ್ಮಿಕ ಹಿನ್ನೆಲೆಯಲ್ಲಿ ಬೆಳೆದು ಬಂದುದರಿಂದ ಧರ್ಮಮೂಲ ಹಿನ್ನೆಲೆಯಲ್ಲಿ ಅವುಗಳ ವಿವೇಚನೆ ಮಾಡಲಾಗಿದೆ. ವೀರಭದ್ರನ ಶಿಲ್ಪ, ಆಂಜನೇಯ ಶಿಲ್ಪ, ನಂದಿಶಿಲ್ಪ, ಲಿಂಗದಶಿಲ್ಪ, ಸಪ್ತಮಾತೃಕೆಯರ ಶಿಲ್ಪ, ವೀರಗಲ್ಲು, ನಿಷಧಿಕಲ್ಲು, ಮಾಸ್ತಿಕಲ್ಲುಗಳಲ್ಲಿನ ಶಿಲ್ಪಗಳು ವೈವಿಧ್ಯ ರೂಪದಲ್ಲಿರುವ ಈ ಮಾಧ್ಯಮದ ಶಿಲ್ಪಗಳನ್ನು ರಚನಾ ಹಿನ್ನೆಲೆ ಮತ್ತು ಆಚರಣೆಯ ಸಂದರ್ಭಗಳಿಗೆ ಅನುಸಾರವಾಗಿ ವಿವೇಚಿಸಲಾಗಿದೆ.

ಲೋಹವು ಶಿಲ್ಪರಚನೆಯ ಮತ್ತೊಂದು ಮಾಧ್ಯಮವಾಗಿದ್ದು, ಜನಪದರು ವಿವಿಧ ರೀತಿಯ ಲೋಹ ಶಿಲ್ಪಗಳನ್ನು ರಚಿಸಿದ್ದಾರೆ. ಆರನೆಯ ಅಧ್ಯಾಯದಲ್ಲಿ ಲೋಹ ಮಾಧ್ಯಮದ ಜನಪದ ಶಿಲ್ಪಗಳ ಬಗ್ಗೆ ವಿವರಿಸಲಾಗಿದೆ. ಲೋಹ ಮಾಧ್ಯಮದ ಜನಪದ ಶಿಲ್ಪಗಳು ಸೌಂದರ್ಯ, ಧಾರ್ಮಿಕತೆ ಮತ್ತು ವೃತ್ತಿಯ ಹಿನ್ನೆಲೆಯಲ್ಲಿ ಬೆಳೆದು ಬಂದಿರುವುದರಿಂದ ಈ ಪ್ರಕಾರದ ಜನಪದ ಶಿಲ್ಪಗಳನ್ನು ಸೌಂದರ್ಯಮೂಲ, ಧರ್ಮಮೂಲ ಮತ್ತು ವೃತ್ತಿಮೂಲ ಜನಪದ ಶಿಲ್ಪಕಲೆ ಎಂಬುದಾಗಿ ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ. ಲೋಹ ಶಿಲ್ಪರಚನೆಯಲ್ಲಿ ಜನಪದರು ವಿವಿಧ ಲೋಹಗಳನ್ನು ಬಳಸಿಕೊಂಡಿದ್ದಾರೆ. ತಾಮ್ರ, ಹಿತ್ತಾಳೆ, ಬಂಗಾರ, ಬೆಳ್ಳಿ, ಕಂಚು, ಸೀಸ, ಕಬ್ಬಿಣ ಮತ್ತು ಮಿಶ್ರ ಲೋಹಗಳಿಂದ ಶಿಲ್ಪಗಳನ್ನು ತಯಾರಿಸುವ ಕುರಿತು ಹೇಳಲಾಗಿದೆ. ಲೋಹ ಮಾಧ್ಯಮದಿಂದ ಶಿಲ್ಪರಚಿಸುವಲ್ಲಿ ಬೇರೆ ಬೇರೆ ವಿಧಾನಗಳಿವೆ. ಎರಕ ಹೊಯ್ಯುವುದು ಮತ್ತು ಲೋಹದ ತಗಡನ್ನು ಆಕಾರಕ್ಕೆ ತಕ್ಕಂತೆ ಸುತ್ತುವುದು ಹಾಗೂ ಲೋಹದ ಹಾಳೆಯ ಮೇಲೆ ಉಬ್ಬು ಶಿಲ್ಪಗಳನ್ನು ರಚಿಸುವ ಕ್ರಮಗಳಿವೆ. ಇವೆಲ್ಲವುಗಳನ್ನು ಬಳಸಿಕೊಂಡು ಜನಪದರು ಯಾವ ರೀತಿಯ ಶಿಲ್ಪಗಳನ್ನು ರಚಿಸಿದರು ಎಂಬಂತಹ ವಿವರಗಳು ಇಲ್ಲಿ ದಾಖಲುಗೊಂಡಿವೆ.

ಜನಪದ ಸಂಕೀರ್ಣ ಮಾಧ್ಯಮದ ಶಿಲ್ಪಗಳ ವ್ಯಾಪ್ತಿಯು ವ್ಯಾಪಕವಾಗಿದ್ದು, ಚಿಕ್ಕಮಕ್ಕಳ ಆಟಿಕೆಯಿಂದ ತೊಡಗಿ ದೇವಾಲಯದ ಗರ್ಭಗುಡಿಯ ದೇವತಾ ಮೂರ್ತಿ, ತೇರುಗಳಲ್ಲಿ ಪ್ರತಿಷ್ಠಾಪಿಸುವ ಉತ್ಸವ ಮೂರ್ತಿಗಳವರೆಗೆ ಇದರ ಹರವು ಇದೆ. ಈ ಪ್ರಕಾರದ ಶಿಲ್ಪಗಳ ಕುರಿತು ಏಳನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಸಾಮಾನ್ಯವಾಗಿ ಶಿಲ್ಪರಚನೆಗೆ ಬಳಕೆಯಾಗುವ ಮಣ್ಣು, ಮರ, ಶಿಲೆ, ಲೋಹ, ಇಂತಹ ಮಾಧ್ಯಮಗಳೊಂದಿಗೆ ಚರ್ಮ, ಕಾಗದ, ಚಿಂದಿಬಟ್ಟೆ, ಸೆಗಣಿ, ನಾರು, ಹಿಟ್ಟು, ಈ ಬಗೆಯ ಹೆಚ್ಚು ಬಾಳಿಕೆ ಬರದ ಮಾಧ್ಯಮಗಳಿಂದಲೂ ಜನಪದರು ಶಿಲ್ಪಗಳನ್ನು ರಚಿಸಿದ್ದಾರೆ. ಅವುಗಳನ್ನು ಸಂಕೀರ್ಣ ಮಾಧ್ಯಮದ ಜನಪದ ಶಿಲ್ಪಗಳು ಎಂಬುದಾಗಿ ಇಲ್ಲಿ ವಿವೇಚಿಸಲಾಗಿದೆ.

ತೊಗಲುಗೊಂಬೆಯಾಟವು ಜನಪದರ ಪ್ರಮುಖ ಮನರಂಜನೆಯ ಸಾಧನವಾಗಿದ್ದು, ಅಲ್ಲಿ ಬಳಕೆಗೊಳ್ಳುವ ತೊಗಲು ಗೊಂಬೆಗಳನ್ನು ಜನಪದ ಸಂಕೀರ್ಣ ಮಾಧ್ಯಮದಲ್ಲಿ ರಚನೆಯಾಗುವ ಚರ್ಮದ ಶಿಲ್ಪಗಳೆಂದು ಪರಿಗಣಿಸಲಾಗಿದೆ. ಅದೇ ರೀತಿ ಸೂತ್ರದ ಗೊಂಬೆಯಾಟದ ಗೊಂಬೆಗಳನ್ನು ಸಂಕೀರ್ಣ ಮಾಧ್ಯಮದಲ್ಲಿ ಸೇರಿಸಲಾಗಿದೆ. ಇವುಗಳ ರಚನೆಯಲ್ಲಿ ಕಟ್ಟಿಗೆ, ಬಟ್ಟೆ, ಬಿದಿರು, ಸೆಗಣಿ, ಕಿಟ್ಟ, ಹೀಗೆ ವಿವಿಧ ಪರಿಕರಗಳು ಬಳಕೆಯಾಗುತ್ತವೆ. ಕಿನ್ನಾಳದ ಗೊಂಬೆಗಳು, ಆಟಿಕೆಗಳು, ಅಲಂಕಾರಿಕ ಫಲಕಗಳು, ಚನ್ನಪಟ್ಟಣದ ಬಣ್ಣದ ಗೊಂಬೆಗಳು, ಚಂದಾಳ ಗೊಂಬೆಗಳು, ಬನಶಂಕರಿ ಜಾತ್ರೆಯಲ್ಲಿ ವಿಶೇಷವಾಗಿ ಸಿಗುವ ಸೆಗಣಿ ಗೊಂಬೆಗಳು ಇಲ್ಲಿ ಅಧ್ಯಯನಕ್ಕೆ ಒಳಪಟ್ಟಿವೆ. ಹಾಗೆಯೇ ಗೋಕಾಕದ ತೊಟ್ಟಿಲು, ಅಲಂಕಾರಿಕ ಫಲಪುಷ್ಪಗಳು, ತಾಳಿಕೋಟೆಯ ಜಿನಗಾರರ ಕೃತಿಗಳು ಇಲ್ಲಿ ಸಂಕೀರ್ಣ ಹಿನ್ನೆಲೆಯಲ್ಲಿ ಸೇರಿಸಲಾಗಿದೆ. ಇಲ್ಲಿಯೂ ಸೌಂದರ್ಯಮೂಲ, ಧರ್ಮಮೂಲ ಮತ್ತು ವೃತ್ತಿಮೂಲ ಸಂಕೀರ್ಣ ಮಾಧ್ಯಮದ ಜನಪದ ಶಿಲ್ಪಗಳೆಂದು ವರ್ಗೀಕರಿಸಿಕೊಂಡು ವಿವೇಚಿಸಲಾಗಿದೆ. ಕೊನೆಯ ಅಧ್ಯಾಯದಲ್ಲಿ ಒಟ್ಟು ಅಧ್ಯಯನದ ಫಲಿತಗಳಿವೆ.

ಪ್ರಸ್ತುತ ಪ್ರಬಂಧದಿಂದ ಕಲಾಕ್ಷೇತ್ರಕ್ಕೆ, ಜನಪದ ಕ್ಷೇತ್ರಕ್ಕೆ, ಶಿಲ್ಪ ಕ್ಷೇತ್ರಕ್ಕೆ ಅನೇಕ ಫಲಿತಾಂಶಗಳು ಲಭ್ಯವಾಗಿದ್ದು, ಅವು ಕೆಳಗಿನಂತಿವೆ. ಜನಪದ ಶಿಲ್ಪರಚನೆಯ ಪರಂಪರೆಯು ಮುಖ್ಯವಾಗಿ ಸೌಂದರ್ಯಮೂಲ, ಧರ್ಮಮೂಲ ಮತ್ತು ವೃತ್ತಿಮೂಲಗಳಾಗಿ ಬೆಳೆದು ಬಂದಿದೆ. ಜನಪದರು ಮಣ್ಣು, ಶಿಲೆ, ಲೋಹ, ಮರ, ಇವುಗಳೊಂದಿಗೆ ಸಂಕೀರ್ಣ ಮಾಧ್ಯಮದಲ್ಲಿಯೂ ಶಿಲ್ಪರಚನೆ ಮಾಡಿದ್ದಾರೆ. ಜನಪದರ ಶಿಲ್ಪಗಳು ಆಚರಣೆಯಲ್ಲಿ, ನಂಬಿಕೆಯಲ್ಲಿ ಮರುಹುಟ್ಟು ಪಡೆಯುತ್ತಾ ಬೆಳೆದು, ಇಂದಿಗೂ ಉಳಿದುಕೊಂಡು ಬಂದಿವೆ. ಜನಪದ ಶಿಲ್ಪಗಳ ಅಧ್ಯಯನ ಎಂದರೆ, ಅವರ ಬದುಕು ಮತ್ತು ಸಂಸ್ಕೃತಿಯ ಅಧ್ಯಯನವೇ ಆಗಿದೆ. ಈ ಅಧ್ಯಯನದಲ್ಲಿ ಜನಪದ ಶಿಲ್ಪಕಲೆಯನ್ನು ವಿವಿಧ ಮಾಧ್ಯಮಗಳ ಅನುಸಾರ ವಿಂಗಡಿಸಿ ವಿವೇಚಿಸುವುದರ ಜೊತೆಗೆ ರಚನಾ ಹಿನ್ನೆಲೆ, ಶೈಲಿ, ಪರಿಕರ, ಪ್ರಭಾವ, ಪ್ರೇರಣೆಗಳಂತಹ ಸಂಗತಿಗಳನ್ನು ಗಮನಿಸಲಾಗಿದೆ. ಅಲ್ಲದೆ ಜನಪದ ಶಿಲ್ಪಿಗಳ ಕಲಾಬದುಕು, ಸ್ಥಿತಿಗತಿಗಳನ್ನು ಬಿಂಬಿಸುವ ಪ್ರಯತ್ನ ಇಲ್ಲಿದೆ. ಹೀಗೆ ಕಲಾಕ್ಷೇತ್ರಕ್ಕೆ ಮತ್ತು ಕಲಾಸಾಹಿತ್ಯಕ್ಕೆ ಇದೊಂದು ಗಮನಾರ್ಹ ಕೊಡುಗೆಯಾಗಿದೆ ಎನ್ನಬಹುದು.

**ಕೊಪ್ಪಳ ಹಂಪಿ ಪ್ರದೇಶದ ಪ್ರಾಗಿತಿಹಾಸ ಕಾಲದ ಕಲೆ :**

ಚಿತ್ರಕಲಾ ಕ್ಷೇತ್ರದಂತೆ ಪ್ರಾಗಿತಿಹಾಸ ಅಧ್ಯಯನದಲ್ಲಿಯೂ ಆದಿಮಾನವರ ಕಾಲದ ಬಂಡೆಚಿತ್ರಗಳು ಪ್ರಮುಖವಾಗಿವೆ. ಹಲವು ಜನ ವಿದ್ವಾಂಸರು ವಿಶ್ವದಲ್ಲಿ, ಭಾರತದಲ್ಲಿ ಅಂತೆಯೇ ಕರ್ನಾಟಕದಲ್ಲಿ ಈ ಕಲಾ ಪ್ರಕಾರಗಳ ಬಗ್ಗೆ ಅಧ್ಯಯನ ಮಾಡಿದ್ದಾರಲ್ಲದೇ ಮಾಡುತ್ತಲಿದ್ದಾರೆ. ಕರ್ನಾಟಕದ ಹಂಪಿ, ಕೊಪ್ಪಳ ಪ್ರದೇಶದ ಗುಡ್ಡಬೆಟ್ಟಗಳು ಈ ಬಗೆಯ ಚಿತ್ರಕಲೆಯ ನೆಲೆಗಳನ್ನು ಹೊಂದಿದ್ದು, ಅವುಗಳ ಕುರಿತು ಶರಣಬಸಪ್ಪ ಕೋಲ್ಕಾರ ಎನ್ನುವವರು ಪಿಎಚ್.ಡಿ. ಅಧ್ಯಯನ ಮಾಡಿದ್ದಾರೆ.[೮] ೨೦೦೩ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಲಾದ ಈ ಪ್ರಬಂಧದ ಶೀರ್ಷಿಕೆಯು 'ಕೊಪ್ಪಳ ಹಂಪಿ ಪ್ರದೇಶದ ಪ್ರಾಗಿತಿಹಾಸ ಕಾಲದ ಕಲೆ' ಎಂಬುದಾಗಿದ್ದು, ವಿಶೇಷವಾಗಿ ಗವಿವರ್ಣ ಹಾಗೂ ಬಯಲು ಬಂಡೆ ಚಿತ್ರಗಳನ್ನು ಅನುಲಕ್ಷಿಸಿ ಅಧ್ಯಯನ ಮಾಡಲಾಗಿದೆ.

---

೮. ಶರಣಬಸಪ್ಪ ಕೊಲ್ಕಾರ : ಕೊಪ್ಪಳ ಹಂಪಿ ಪ್ರದೇಶದ ಪ್ರಾಗಿತಿಹಾಸದ ಕಲೆ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಪಿಎಚ್.ಡಿ. ಪ್ರಬಂಧ-೨೦೦೩

ಈ ಅಧ್ಯಯನವು ಎಂಟು ಅಧ್ಯಾಯಗಳಲ್ಲಿ ಹರಡಿಕೊಂಡು ವಿಶ್ಲೇಷಣೆಗೊಳಪಟ್ಟಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಮಹತ್ವ, ಉದ್ದೇಶ ಮತ್ತು ಪ್ರಸ್ತುತತೆಗಳನ್ನು ಹೇಳಲಾಗಿದೆ. ಜೊತೆಗೆ ಅಧ್ಯಯನ ಕೈಗೊಂಡ ವಿಧಾನ ಮತ್ತು ಸ್ವರೂಪಗಳಿವೆ. ಕಲಾಸೃಷ್ಟಿಯ ಪ್ರಕ್ರಿಯೆ ಮೊದಲುಗೊಂಡಿದ್ದು ಆದಿಮಾನವ ಹಂತದಲ್ಲಿ. ಈ ಸಂದರ್ಭದಲ್ಲಿ ಮನುಷ್ಯ ತನ್ನ ವಾಸದ ನೆಲೆಗಳಾಗಿ ಗುಡ್ಡ–ಬೆಟ್ಟಗಳ ಶಿಲಾಶ್ರಯ ಮತ್ತು ಶಿಲಾಗುಹೆಗಳನ್ನು ಆಯ್ದುಕೊಂಡು ಅಲ್ಲಿ ವಾಸ ಮಾಡುತ್ತಿದ್ದನು. ಇಲ್ಲಿಯೇ ತನ್ನ ವಿರಾಮದ ಸಮಯದಲ್ಲಿ ಗುಹೆಯ ಶಿಲಾಗೋಡೆಗಳ ಮೇಲೆ ಮತ್ತು ಗುಹೆಯ ಸಮೀಪದಲ್ಲಿ ಇದ್ದಂತಹ ಬೃಹತ್ ಬಂಡೆಗಳ ಮೇಲೆ ಚಿತ್ರರಚನೆ ಮಾಡತೊಡಗಿದನು. ಇದು ಚಿತ್ರರಚನೆಯ ಆರಂಭಿಕ ಹಂತವನ್ನು ಪ್ರತಿನಿಧಿಸುತ್ತದೆ. ಈ ಸಂದರ್ಭದಲ್ಲಿ ಆತನ ಮೂಲ ಕಸುಬು ಬೇಟೆಯಾಗಿತ್ತು. ಹಾಗಾಗಿ ಆತನ ಚಿತ್ರಗಳಲ್ಲಿ ವಿವಿಧ ಪ್ರಾಣಿಯ ಚಿತ್ರಗಳು, ಬೇಟೆಯ ದೃಶ್ಯಗಳು ಕಂಡು ಬಂದಿವೆ. ಪ್ರಾಗಿತಿಹಾಸ ಕಾಲದಲ್ಲಿ ರಚನೆಯಾದ ಈ ಚಿತ್ರಗಳಿಗೆ ಪ್ರಾಗಿತಿಹಾಸ ಕಾಲದ ಚಿತ್ರಕಲೆ ಎಂದು ಮತ್ತು ಬಂಡೆಗಳ ಮೇಲೆ ರಚನೆಯಾಗಿರುವುದರಿಂದ ಬಂಡೆ ಚಿತ್ರಗಳೆಂದೂ ಕರೆಯುತ್ತಾರೆ. ಇಂತಹ ವಿಷಯಗಳು ಎರಡನೆಯ ಅಧ್ಯಾಯದಲ್ಲಿವೆ. ಇದಲ್ಲದೆ ಇದುವರೆಗೂ ಈ ಕ್ಷೇತ್ರದಲ್ಲಿ ನಡೆದ ಅಧ್ಯಯನದ ಸಮೀಕ್ಷೆ, ಕೊಪ್ಪಳ, ಹಂಪಿ ಪ್ರದೇಶಗಳ ಭೂ ಮೇಲ್ಮೈ ಲಕ್ಷಣ, ಇಲ್ಲಿನ ಬೆಟ್ಟ–ಗುಡ್ಡಗಳ ಸ್ವರೂಪ, ಗುಹೆಗಳು ಮತ್ತು ಶಿಲಾಶ್ರಯ ತಾಣಗಳ ಸ್ವರೂಪ ಮುಂತಾದವುಗಳನ್ನು ಕುರಿತು ಹೇಳಲಾಗಿದೆ. ಕೊಪ್ಪಳ ಗುಡ್ಡದಲ್ಲಿ ಎಲ್ಲೆಲ್ಲಿ ಚಿತ್ರಗಳಿವೆ, ಹಂಪಿ ಪ್ರದೇಶದಲ್ಲಿ ಎಲ್ಲೆಲ್ಲಿ ಚಿತ್ರಗಳಿವೆ ಎನ್ನುವ ಸಂಗತಿ ಹೇಳಲಾಗಿದೆ. ಕೊಪ್ಪಳ ಜಿಲ್ಲೆಯಲ್ಲಿ ಹಿರೇಬೆನಕಲ್, ಆನೆಗೊಂದಿಗಳಲ್ಲಿ ಹೆಚ್ಚಿನ ಚಿತ್ರಗಳಿದ್ದರೆ, ಹಂಪಿ ಪ್ರದೇಶದಲ್ಲಿ ಹಂಪಿ ಸುತ್ತಲೂ ಹೆಚ್ಚಿನ ಚಿತ್ರಗಳಿವೆ. ಹೀಗೆ ನೆಲೆಗಳ ಬಗೆಗಿರುವ ವಿವರಗಳು ಈ ಅಧ್ಯಾಯದಲ್ಲಿವೆ.

ವಿಶ್ವದೆಲ್ಲೆಡೆ ಪ್ರಾಗಿತಿಹಾಸದ ಚಿತ್ರಕಲೆಯ ನೆಲೆಗಳು ಕಂಡು ಬರುತ್ತವೆ. ಹಾಗೆ ಭಾರತ, ಕರ್ನಾಟಕದಲ್ಲಿ ಎಲ್ಲೆಲ್ಲಿ ಚಿತ್ರಗಳಿವೆ. ಯಾವ ಸ್ವರೂಪದಲ್ಲಿವೆ ಎಂಬ ವಿವರವು ಮೂರನೆ ಅಧ್ಯಾಯದಲ್ಲಿದೆ. ವಿಶ್ವದಲ್ಲಿ ಫ್ರಾನ್ಸ್, ಸ್ಪೇನ್, ಆಸ್ಟ್ರೇಲಿಯಾ, ಬರ್ಮಾ, ಶ್ರೀಲಂಕಾ, ಆಫ್ರಿಕಾ, ನೈಜೀರಿಯಾ ಮುಂತಾದ ರಾಷ್ಟ್ರಗಳಲ್ಲಿ ಪ್ರಾಗಿತಿಹಾಸದ ಚಿತ್ರಗಳು ಹೆಚ್ಚಾಗಿ ಕಂಡು ಬರುತ್ತವೆ. ಭಾರತದಲ್ಲಿ ಮಧ್ಯಪ್ರದೇಶದ ಭಿಂಬೇಟ್ಕ ಪ್ರದೇಶ ಹೆಚ್ಚಿನ ಚಿತ್ರಗಳನ್ನು ಹೊಂದಿದೆ. ಪಚ್ಚಮರಿ, ಹೊಷಂಗಾಬಾದ, ಪಿಪಾರಿಯಾಗಳಲ್ಲೂ ಈ ಬಗೆಯ ಚಿತ್ರಗಳಿವೆ. ನಂತರ ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲಾ ನೆಲೆಗಳನ್ನು ಸಮೀಕ್ಷಿಸಲಾಗಿದೆ. ಕರ್ನಾಟಕದ ಉತ್ತರ ಭಾಗದಲ್ಲಿ ಇಂತಹ ಚಿತ್ರಗಳು ಹೆಚ್ಚಾಗಿದ್ದು. ಬಳ್ಳಾರಿ, ಬಾಗಲಕೋಟೆ, ರಾಯಚೂರು, ಕೊಪ್ಪಳ, ಚಿತ್ರದುರ್ಗ ಜಿಲ್ಲೆಗಳ ವ್ಯಾಪ್ತಿಯಲ್ಲಿ ಹೆಚ್ಚಿನ ಚಿತ್ರನೆಲೆಗಳಿವೆ ಎಂಬುದಾಗಿ ಇಲ್ಲಿ ತಿಳಿಸಲಾಗಿದೆ.

ಹಂಪಿ ಮತ್ತು ಕೊಪ್ಪಳ ಪ್ರದೇಶದ ಪ್ರಾಗಿತಿಹಾಸ ಕಾಲದ ಚಿತ್ರಗಳನ್ನು ಎರಡು ರೀತಿಯಲ್ಲಿ ಮುಖ್ಯವಾಗಿ ವರ್ಗೀಕರಿಸಿ ವಿವೇಚಿಸಿದ್ದು, ನಾಲ್ಕನೆಯ ಅಧ್ಯಾಯದಲ್ಲಿದೆ. ಇಲ್ಲಿ ಪ್ರಾಗಿತಿಹಾಸ ಕಾಲದಚಿತ್ರಗಳನ್ನು ಬಯಲು ಬಂಡೆಯ ಚಿತ್ರಗಳು ಮತ್ತು ಗವಿವರ್ಣಚಿತ್ರಗಳು ಎಂದು ಎರಡು ರೀತಿಯಲ್ಲಿ ವಿಂಗಡಿಸಿಕೊಂಡಿದ್ದು, ಮತ್ತೆ ಅದರಲ್ಲಿ ಉಪವಿಂಗಡೆಯನ್ನು ಮಾಡಿಕೊಳ್ಳಲಾಗಿದೆ. ಬಯಲು ಬಂಡೆಯ ಚಿತ್ರಗಳನ್ನು ವರ್ಣರಹಿತ ಚಿತ್ರಗಳೆಂದು ಗುರುತಿಸಲಾಗಿದೆ. ಇದರಲ್ಲಿ ಕುಟ್ಟಿದ ಚಿತ್ರಗಳು ಮತ್ತು ಕೊರೆದ ಚಿತ್ರಗಳು ಎಂದು ವರ್ಗೀಕರಿಸಿ ವಿವರಿಸಿದೆ. ಹಾಗೆಯೇ ಗುಹಾವರ್ಣ ಚಿತ್ರಗಳಲ್ಲಿ ರೇಖಾಚಿತ್ರಗಳು ಮತ್ತು ಚಪ್ಪಟೆ ವರ್ಣ ಲೇಪಿಸಿದ ಚಿತ್ರಗಳು ಎಂದು ವರ್ಗೀಕರಿಸಲಾಗಿದೆ.

ಪ್ರಾಗಿತಿಹಾಸ ಕಾಲದ ಚಿತ್ರಗಳಲ್ಲಿ ವಿವಿಧ ಪ್ರಾಣಿ-ಪಕ್ಷಿಗಳು, ಮನುಷ್ಯ ಚಿತ್ರಗಳು, ಬೇಟೆಯ ದೃಶ್ಯಗಳು, ನಿತ್ಯ ಜೀವನದ ದೃಶ್ಯಗಳು, ಹಲವಾರು ಮಂಡಲ ಮತ್ತು ಸಂಕೇತ ಚಿತ್ರಗಳು, ತಾಂತ್ರಿಕ ವಿಧಿಗಳಿಗೆ ಸಂಬಂಧಿಸಿದ ಚಿತ್ರಗಳು, ಕುಣಿತ, ಧಾರ್ಮಿಕ ಆಚರಣೆ, ವಿಧಿಕ್ರಿಯೆಗಳಿಗೆ ಸಂಬಂಧಿಸಿದ ಚಿತ್ರಗಳಿದ್ದು ಅವುಗಳನ್ನೆಲ್ಲ ವಿಷಯಾನುಸಾರ ವಿಂಗಡಿಸಿಕೊಂಡು ಐದನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಹಂಪಿ ಮತ್ತು ಕೊಪ್ಪಳ ಪರಿಸರದಲ್ಲಿ ಯಾವ ಯಾವ ನೆಲೆಗಳಲ್ಲಿ ಯಾವ ವಿಷಯಗಳಿಗೆ ಸಂಬಂಧಿಸಿದ ಚಿತ್ರಗಳಿವೆ ಎನ್ನುವ ಅಂಶಗಳನ್ನು ಪರಿಶೀಲಿಸಲಾಗಿದೆ. ಇದರ ಜೊತೆಗೆ ಚಿತ್ರಗಳ ವಿಷಯಗಳ ಹಿನ್ನೆಲೆಯಲ್ಲಿ ಉದ್ದೇಶಗಳನ್ನು ಬಿಂಬಿಸಲಾಗಿದೆ.

ಪ್ರಾಗಿತಿಹಾಸ ಚಿತ್ರಕಲೆಯ ಶೈಲಿ, ರಚನಾ ವಿಧಾನ, ಪರಿಕರಗಳ ಬಗ್ಗೆ ಆರನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಇವರು ಚಿತ್ರರಚನೆಗಾಗಿ ಬಳಸುತ್ತಿದ್ದ ಪರಿಕರಗಳಲ್ಲಿ ವಿವಿಧ ಬಣ್ಣಗಳು, ಚೂಪಾದ ಸಾಧನ, ಕುಂಚಗಳು, ಅಂಟು ದ್ರಾವಕಗಳು ಮುಖ್ಯವಾಗಿವೆ. ಬಯಲು ಬಂಡೆಯ ವರ್ಣರಹಿತ ಚಿತ್ರಗಳಲ್ಲಿ ಚೂಪಾದ ಸಾಧನಗಳು ಮುಖ್ಯವಾಗಿದ್ದರೆ, ಗುಹಾವರ್ಣಚಿತ್ರಗಳಲ್ಲಿ ಕೆಂಪು, ಹಳದಿ, ಬಿಳಿ ಬಣ್ಣಗಳನ್ನು ತಮ್ಮ ಚಿತ್ರಗಳಿಗಾಗಿ ಬಳಸಿದ್ದು, ಅಲ್ಲಲ್ಲಿ ಕಪ್ಪು, ಹಸಿರು, ನೀಲಿ ಬಣ್ಣಗಳು ಕಂಡು ಬರುತ್ತವೆ. ಕೆಂಪು ಬಣ್ಣವು ಅತೀ ಹೆಚ್ಚಾಗಿ ಉಪಯೋಗಿಸಲ್ಪಟ್ಟಿದ್ದು ಪ್ರಾಣಿಗಳ ರಕ್ತದಿಂದಲೂ ಇದನ್ನು ಪಡೆಯುತ್ತಿದ್ದರು ಎನ್ನುವ ವಿಚಾರಗಳಿವೆ. ಇದಲ್ಲದೆ ಕೆಂಪು ಬಣ್ಣದ ಕಲ್ಲು ಮಣ್ಣುಗಳಿಂದಲೂ ಇದನ್ನು ತಯಾರಿಸುತ್ತಿದ್ದರು. ಹಳದಿ ಬಣ್ಣಕ್ಕೆ ಅದೇ ವರ್ಣದ ಮಣ್ಣಿನಗಟ್ಟಿ, ಕಲ್ಲುಗಳನ್ನು ಬಳಸಿಕೊಳ್ಳುತ್ತಿದ್ದರೆ, ಬಿಳಿ ವರ್ಣಕ್ಕೆ ಸುಣ್ಣವನ್ನು ಸಾಮಾನ್ಯವಾಗಿ ಬಳಸಿರುವುದು ತಿಳಿಯುತ್ತದೆ. ಕುಂಚಗಳಿಗಾಗಿ ತಾವು ಕೊಂದ ಪ್ರಾಣಿಗಳ ಕೂದಲುಗಳನ್ನು ತೆಗೆದುಕೊಳ್ಳುತ್ತಿದ್ದರು. ಹಾಗೆಯೇ ಹುಲ್ಲುಗರಿಕೆ, ನಾರು ಪದಾರ್ಥಗಳು, ಗಿಡದಟೊಂಗೆಯ ಜಜ್ಜಿದ ಭಾಗಗಳು ಕುಂಚಗಳಿಗಾಗಿ ಉಪಯೋಗಿಸಲ್ಪಟ್ಟಿವೆ. ಅಂಟು ಮಾಧ್ಯಮಗಳಿಗೆ ಪ್ರಾಣಿಗಳ ರಕ್ತ, ಕೊಬ್ಬು ಮತ್ತು ಸಸ್ಯ ಸಂಬಂಧಿ ಅಂಟುಗಳನ್ನು ಬಳಸಿಕೊಳ್ಳುತ್ತಿದ್ದರು. ಇವರ ಚಿತ್ರ ಶೈಲಿಯಲ್ಲಿ ರೇಖಾವಿನ್ಯಾಸ, ಚಪ್ಪಟೆ ಬಣ್ಣಲೇಪನ, ಮೈತುಂಬಾ ರೇಖೆಗಳನ್ನು ಬರೆದುಕೊಂಡ ರೀತಿಯ ಚಿತ್ರಗಳು, ಕಡ್ಡಿಯ ವಿನ್ಯಾಸದ ಚಿತ್ರಗಳು ಹೆಚ್ಚಾಗಿ ಕಂಡುಬಂದಿವೆ. ಇಂತಹ ವಿವರಗಳು ಇಲ್ಲಿ ಹೇಳಲ್ಪಟ್ಟಿವೆ.

ಕೊಪ್ಪಳ ಮತ್ತು ಹಂಪಿ ಪ್ರದೇಶಗಳ ಪ್ರಾಗಿತಿಹಾಸ ಚಿತ್ರಕಲೆಯ ನೆಲೆಗಳು, ಅವುಗಳ ಸ್ವರೂಪ, ಸಾಂಸ್ಕೃತಿಕ ಪರಿಸರ, ಪ್ರಭಾವ, ಹೋಲಿಕೆ, ಕಾಲಮಾನ ಮುಂತಾದ ಅಂಶಗಳನ್ನು ಏಳನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಇಲ್ಲಿನ ಚಿತ್ರಗಳು ಹಳೆಯ ಶಿಲಾಯುಗ, ನೂತನ ಶಿಲಾಯುಗ, ಕಬ್ಬಿಣಯುಗ, ತಾಮ್ರಯುಗ, ಬೃಹತ್ ಶಿಲಾಯುಗದ ಕಾಲಮಾನದಲ್ಲಿ ರಚನೆಯಾಗಿದ್ದು ಭಿಂಬೇಟ್ಕ ಚಿತ್ರಗಳಿಗೆ ಹೋಲುತ್ತವೆ ಎಂದು ಇಲ್ಲಿ ತಿಳಿಸಲಾಗಿದೆ. ಎಂಟನೆಯ ಅಧ್ಯಾಯವು ಸಮಾರೋಪವಾಗಿದ್ದು ಒಟ್ಟು ಅಧ್ಯಾಯದ ಫಲಿತಗಳನ್ನು ಕೊಡಲಾಗಿದೆ. ಪ್ರಸ್ತುತ ಪ್ರಬಂಧವು ಪ್ರಾಗಿತಿಹಾಸ ಕಾಲದ ಕಲೆಯನ್ನು ಕುರಿತಾಗಿದ್ದು ವಿಶೇಷವಾಗಿ ಕೊಪ್ಪಳ ಮತ್ತು ಹಂಪಿ ಪ್ರದೇಶಗಳ ಗವಿವರ್ಣ ಹಾಗೂ ಬಯಲುಬಂಡೆ ಚಿತ್ರಗಳನ್ನು ಅನುಲಕ್ಷಿಸಿ ಅಧ್ಯಯನ ಕೈಗೊಳ್ಳಲಾಗಿದೆ. ಇಲ್ಲಿ ಪ್ರಾಗಿತಿಹಾಸ ಕಾಲದ ಚಿತ್ರಕಲೆಯ ಹಲವಾರು ಅಂಶಗಳು ಬೆಳಕಿಗೆ ಬಂದಿವೆ. ಈ ಪ್ರದೇಶದ ಚಿತ್ರಗಳ ಪ್ರಕಾರ, ಚಿತ್ರನೆಲೆಗಳ ಸ್ವರೂಪ, ಶೈಲಿ, ವಸ್ತುವಿಷಯಗಳು, ರಚನಾವಿಧಾನ, ಬಣ್ಣ ಕುಂಚಗಳ ತಯಾರಿಕೆ, ಬಣ್ಣಲೇಪನ ವಿಧಾನ, ಉದ್ದೇಶ, ಪ್ರಭಾವ, ಪ್ರೇರಣೆಗಳಂತಹ ಸಂಗತಿಗಳು ವಿವೇಚಿಸಲ್ಪಟ್ಟಿವೆ.

**ಕರ್ನಾಟಕದ ಸಮಕಾಲೀನ ಸಾಂಸ್ಕೃತಿಕ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು:**

ಚಿತ್ರಕಲೆಯಲ್ಲಿ ವಿವಿಧ ಪ್ರಕಾರಗಳಿರುವಂತೆ ಒಟ್ಟು ಕಲೆಯನ್ನು ಕುಶಲಕಲೆ ಮತ್ತು ಲಲಿತಕಲೆ ಎಂಬುದಾಗಿ ವರ್ಗೀಕರಿಸಲಾಗಿದೆ. ಅದೇ ರೀತಿ ವಾಣಿಜ್ಯ ಕಲೆ ಮತ್ತು ಲಲಿತಕಲೆ ಎಂದೂ ವಿಭಾಗಿಸಲಾಗಿದೆ. ಈ ವರ್ಗೀಕರಣ ಉಪಯೋಗಿ ಹಿನ್ನೆಲೆಯಲ್ಲಿ ಮಾಡಲಾದ ವಿಂಗಡಣೆಯೇ ಹೊರತು ಮೂಲ ಕಲಾ ಅಂಶಗಳ ಹಿನ್ನೆಲೆಯಲ್ಲಿ ಕಲೆ ಎಂಬುದು ಸಾರ್ವತ್ರಿಕವಾದ ಒಂದೇ ತತ್ವದ ಪರಿಕಲ್ಪನೆಯನ್ನು ಹೊಂದಿದೆ. ಆದರೂ ಇತ್ತೀಚಿಗೆ ಕಲೆಯಲ್ಲಿ ವಾಣಿಜ್ಯ ಕಲೆ ಮತ್ತು ಲಲಿತಕಲೆ ಎಂದು ವಿಂಗಡಣೆ ಮಾಡುವ ಮೂಲಕ ಆಯಾ ವಿಭಾಗದಲ್ಲಿ ಪ್ರತ್ಯೇಕ ಕಲಿಕೆಯ ವ್ಯವಸ್ಥೆಗಳನ್ನು ಅನುಸರಿಸಲಾಗುತ್ತಿದೆ. ಪ್ರಸ್ತುತ ಪ್ರಬಂಧವು ವಾಣಿಜ್ಯ ಕಲೆಯ ಹಿನ್ನೆಲೆಯಲ್ಲಿ ರಚನೆಯಾಗಿದೆ. ಜಿ.ಓ.ಶಿವಕುಮಾರ ಇವರು 'ಕರ್ನಾಟಕದ ಸಮಕಾಲೀನ ಸಾಂಸ್ಕೃತಿಕ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು' ಎಂಬ ವಿಷಯವನ್ನು ಆಯ್ದುಕೊಂಡು ಪಿಎಚ್.ಡಿ. ಅಧ್ಯಯನ ಮಾಡಿದ್ದಾರೆ.[೬] ಈ ಪ್ರಬಂಧದಲ್ಲಿ ಒಟ್ಟು ಏಳು ಅಧ್ಯಾಯಗಳಲ್ಲಿ ವಿಷಯ ನಿರೂಪಣೆ ಮಾಡಲಾಗಿದೆ. ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ ಮತ್ತು ವ್ಯಾಪ್ತಿಗಳನ್ನು ಹೊಂದಿದೆ. ಇಲ್ಲಿ ಈ ಪ್ರಸ್ತುತ ಅಧ್ಯಯನವನ್ನು ಏತಕ್ಕಾಗಿ ಮಾಡಲಾಗುತ್ತಿದೆ? ಇದರ ಮಹತ್ವ ಕಲಾಕ್ಷೇತ್ರದಲ್ಲಿ ಯಾವ ಸ್ವರೂಪದಲ್ಲಿ ಉಂಟಾಗುತ್ತದೆ ಎನ್ನುವ ಅಂಶಗಳನ್ನು ಹೇಳಲಾಗಿದೆ. ಜೊತೆಗೆ ಅಧ್ಯಯನದ ವ್ಯಾಪ್ತಿಯನ್ನು ಕರ್ನಾಟಕಕ್ಕೆ ಸೀಮಿತಗೊಳಿಸಿಕೊಂಡ ಕಾರಣಗಳನ್ನು ಸ್ಪಷ್ಟಪಡಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಪ್ರಮುಖ ಸಾಂಸ್ಕೃತಿಕ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ಐತಿಹಾಸಿಕ ಹಿನ್ನೆಲೆಯಲ್ಲಿ ಕುರಿತು ಚರ್ಚಿಸಲಾಗಿದೆ. ಪ್ರಾಚೀನ ಕಾಲದಿಂದ ನಡೆದುಕೊಂಡು ಬರುತ್ತಿರುವ ಸಾಂಸ್ಕೃತಿಕ ಉತ್ಸವಗಳು ಒಂದು ರೀತಿಯಲ್ಲಿ ವಾಣಿಜ್ಯ ಮೇಳಕ್ಕೆ ಸ್ಫೂರ್ತಿ ಕೊಟ್ಟಿರುವುದು ಮಾತ್ರವಲ್ಲದೇ, ಕೆಲವು ಉತ್ಸವಗಳು ವಾಣಿಜ್ಯ ಚಟುವಟಿಕೆಗಳ ಕೇಂದ್ರಗಳಾಗಿ ಪರಿವರ್ತನೆಗೊಂಡಿವೆ. ಜಾತ್ರೆಗಳು, ಹಬ್ಬ-ಹರಿದಿನಗಳು, ದಸರಾ ಉತ್ಸವಗಳಂತಹ ಕಾರ್ಯಕ್ರಮಗಳು, ಪಂಚಮಿ, ಚವತಿ, ದೀಪಾವಳಿ ಮುಂತಾದ ಸಂದರ್ಭಗಳಲ್ಲಿ ನಡೆಯುವ ಧಾರ್ಮಿಕ ಕಾರ್ಯಕ್ರಮಗಳಲ್ಲಿ ವಿವಿಧ ಬಗೆಯ ವಾಣಿಜ್ಯ ಚಟುವಟಿಕೆಗಳು ನಡೆಯುತ್ತವೆ. ದಸರಾ ಉತ್ಸವ ವಿಜಯನಗರದ ಕಾಲದಿಂದಲೂ ನಡೆಯುತ್ತ ಬಂದಿದ್ದು, ಇಂದಿಗೂ ವಾಣಿಜ್ಯ ಚಟುವಟಿಕೆಯ ಪ್ರಮುಖ ಸ್ಥಾನವಾಗಿದೆ. ಹೀಗೆ ವಿವಿಧ ಉತ್ಸವಗಳು ಹೇಗೆ ವಾಣಿಜ್ಯ ಕ್ರಿಯೆಗೆ ಪೂರಕವಾಗಿವೆ ಎಂಬ ವಿವರವನ್ನು ವಿವಿಧ ಐತಿಹಾಸಿಕ ಘಟ್ಟಗಳ ಹಿನ್ನೆಲೆಯಲ್ಲಿ ಬಿಂಬಿಸಲಾಗಿದೆ. ಇಲ್ಲಿ ಮುಖ್ಯವಾಗಿ ಜಾತ್ರೆಗಳನ್ನು ಕೇಂದ್ರವಾಗಿಟ್ಟು ಅಧ್ಯಯನ ಮಾಡಿದೆ.

ಕರ್ನಾಟಕದ ಸಮಕಾಲೀನ ಸಂದರ್ಭದ ಪ್ರಮುಖ ಸಾಹಿತ್ಯ ಉತ್ಸವಗಳು ಹಾಗೂ ಜಾತ್ರೆಗಳ ವಿವಿಧ ಪ್ರಕಾರಗಳ ಕುರಿತು ಮೂರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಜಾತ್ರೆಯ ಪ್ರಕಾರಗಳಲ್ಲಿ ದೊಡ್ಡ ಜಾತ್ರೆಗಳು, ಸಣ್ಣ ಜಾತ್ರೆಗಳು, ಒಂದು ದಿನ, ಎರಡು ದಿನ, ಐದು ದಿನ ಹೀಗೆ ತಿಂಗಳುಗಳವರೆಗೆ ನಡೆಯುವ ವಿವಿಧ ಜಾತ್ರೆಗಳನ್ನು ಇಲ್ಲಿ ಗಮನಿಸಿದೆ. ಅಲ್ಲದೇ ಜನಪದ ಸಾಹಿತ್ಯದಲ್ಲಿ ಜಾತ್ರೆ, ಗ್ರಾಮದೇವತೆ ಜಾತ್ರೆ, ಹಳ್ಳಿಜಾತ್ರೆ, ಪಟ್ಟಣದ ಜಾತ್ರೆ, ಆಧುನಿಕ ಸ್ವರೂಪದ ಜಾತ್ರೆ, ಅಲ್ಲಿ ವಾಣಿಜ್ಯ ಮೇಳಗಳ ಸ್ವರೂಪ, ಲಕ್ಷಣ, ವಹಿವಾಟುಗಳ ಜೊತೆಗೆ ಕಲಾ ಅಂಶಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

---

೬. ಜಿ.ಓ.ಶಿವಕುಮಾರ : ಕರ್ನಾಟಕದ ಸಮಕಾಲೀನ ಸಾಂಸ್ಕೃತಿಕ ಉತ್ಸವಗಳು ಮತ್ತು ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು : ಗುಲಬರ್ಗ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಪ್ರಬಂಧ

ನಾಲ್ಕನೆಯ ಅಧ್ಯಾಯದಲ್ಲಿ ಸಮಕಾಲೀನ ಸಂದರ್ಭದಲ್ಲಿ ಪ್ರಮುಖ ಹಬ್ಬಗಳ ಪ್ರಭಾವ, ಪ್ರೇರಣೆ ಹಾಗೂ ಪರಿಕಲ್ಪನೆ ಇವುಗಳ ಬಗೆಗೆ ವಿವೇಚಿಸಲಾಗಿದೆ. ಪ್ರಾಚೀನ ಕಾಲದಿಂದ ನಡೆಯುತ್ತ ಬಂದಿರುವ ಹಲವಾರು ಉತ್ಸವ, ಆಚರಣೆಗಳು ಆಧುನಿಕ ಪ್ರಭಾವ, ಪ್ರೇರಣೆಗಳಿಂದ ಹೊಸ ಆಯಾಮಗಳನ್ನು ಪಡೆದುಕೊಳ್ಳತೊಡಗಿವೆ. ವಿಜಯನಗರ ಕಾಲದಲ್ಲಿ ವೈಭವವಾಗಿ ನಡೆಯುತ್ತಿದ್ದ ದಸರಾಉತ್ಸವ ಇಂದು ಪ್ರಮುಖ ಸಾಂಸ್ಕೃತಿಕ ಹಾಗೂ ಕಲಾತ್ಮಕಉತ್ಸವವಾಗಿ ಹೊಸಪರಿಕಲ್ಪನೆಯೊಂದಿಗೆ ಆಚರಿಸಲ್ಪಡುತ್ತಿದೆ. ಮೈಸೂರಿನಲ್ಲಿ ಒಂದು ಬಗೆಯಲ್ಲಿ ದಸರಾ ಉತ್ಸವವನ್ನು ಆಚರಿಸಿದರೆ ಅದರ ಮೂಲನೆಲೆ ಹಂಪಿಯಲ್ಲಿ ಬೇರೆ ರೀತಿಯಲ್ಲಿ ಈ ಉತ್ಸವ ಆಚರಿಸಲ್ಪಡುತ್ತಿದೆ. ಜಾತ್ರೆಗಳು ಸಹಿತ ಹಿಂದಿನ ಕಾಲದಲ್ಲಿ ಧಾರ್ಮಿಕ ಅಂಶಗಳ ಸಂಗಡ ವಾಣಿಜ್ಯ ಚಟುವಟಿಕೆಯನ್ನು ಪ್ರೋತ್ಸಾಹಿಸುತ್ತ ಬಂದಿದ್ದು, ಇಂದು ಆ ಜಾತ್ರೆಗಳಲ್ಲಿ ಕಲಾವಿಚಾರಗಳು ಹೆಚ್ಚು ಸೇರ್ಪಡೆಗೊಂಡಿವೆ. ಇವುಗಳಿಗೆಲ್ಲ ಬೇರೆ ಬೇರೆ ಪ್ರಭಾವ, ಪ್ರೇರಣೆಗಳು ಕಾರಣವಾಗಿವೆ. ಅವುಗಳನ್ನೆಲ್ಲ ಇಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಐದರಲ್ಲಿ ಸೌಂದರ್ಯ ಮೂಲವಾಗಿ ಜಾತ್ರೆ, ಹಬ್ಬ, ಆಚರಣೆಗಳು ಹಾಗೂ ಸಿರಿಗಳಲ್ಲಿ ಅಲಂಕರಣ ಎಂಬ ವಿಷಯದ ಬಗ್ಗೆ ವಿವೇಚಿಸಲಾಗಿದೆ. ಜಾತ್ರೆಗಳು ಧಾರ್ಮಿಕ ಉತ್ಸವಗಳಾಗಿದ್ದರೂ ಅಲ್ಲಿ ಪೂರಕವಾಗಿ ವಾಣಿಜ್ಯ ಚಟುವಟಿಕೆಗಳು ನಡೆಯುವ ಬಗ್ಗೆ ಹಿಂದಿನ ಅಧ್ಯಾಯದಲ್ಲಿ ಗಮನಿಸಲಾಗಿದೆ. ಇಲ್ಲಿ ಜಾತ್ರೆಗಳಲ್ಲಿನ ತೇರು ಒಂದು ಕಲಾತ್ಮಕ ಅಂಶಗಳನ್ನು ಹೊಂದಿದ ಶಿಲ್ಪಕಲಾಕೃತಿಯಾಗಿದ್ದು, ಅದನ್ನು ಅನುಸರಿಸಿ ನಡೆಯುವ ಕ್ರಿಯೆಗಳೆಲ್ಲ ಸೌಂದರ್ಯ ಹಿನ್ನೆಲೆಯನ್ನು ಒಳಗೊಂಡಿರುತ್ತವೆ. ಜಾತ್ರೆಯಲ್ಲಿ ಕಟ್ಟುವ ದೇವರ ಪಟದಿಂದ ತೊಡಗಿ ತೇರು, ಅದರ ಕಳಶ, ಧ್ವಜಗಳು, ಅದರ ವರ್ಣಮಯ ಚಿತ್ರಗಳ ಅರಿವೆಗಳು, ಕೆತ್ತಿದ ಶಿಲ್ಪಗಳು, ಜನರ ಸಂಭ್ರಮ, ನಾಟಕ, ಪಾರಿಜಾತ, ಇತ್ಯಾದಿ ಅಂಶಗಳನ್ನು ಇಲ್ಲಿ ವಿವೇಚಿಸಲಾಗಿದೆ. ಸಮಕಾಲೀನ ಸಂದರ್ಭದ ಪ್ರಮುಖ ಸಂತೆಗಳು ಮತ್ತು ರಾಷ್ಟ್ರೀಯ, ಅಂರತಾಷ್ಟ್ರೀಯ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳ ಬಗ್ಗೆ ಆರನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಸಮಕಾಲೀನ ಸಂದರ್ಭದ ಪ್ರಮುಖ ಸಂತೆಗಳಲ್ಲಿ ಹಲವಾರು ಪ್ರಕಾರಗಳಿದ್ದು, ಅವುಗಳಲ್ಲಿ ಇಲ್ಲಿ ಗಮನಿಸಿದೆ. ಕೆಲವು ಸ್ಥಳಗಳಲ್ಲಿನ ಸಂತೆಗಳು ದನಗಳಿಗೆ, ಮತ್ತೆ ಕೆಲವು ಸ್ಥಳದ ಸಂತೆಗಳು, ಕುರಿ-ಆಡುಗಳಿಗೆ ಮತ್ತು ಕೆಲವು ಕಾಳು, ಕಾಯಿಪಲ್ಯೆ, ಮತ್ತೆ ಕೆಲವು ಹೂ ಹಣ್ಣುಗಳಿಗೆ ವಿಶೇಷ ಸ್ಥಾನ ಪಡೆದುಕೊಂಡಿವೆ. ಇವುಗಳೆಲ್ಲ ರಾಜ್ಯದಲ್ಲಿ ಎಲ್ಲೆಲ್ಲಿ ನಡೆಯುತ್ತವೆ ಎಂಬುದನ್ನು ಹೇಳಿ ಚರ್ಚಿಸಿದೆ. ಅದೇ ರೀತಿ ರಾಷ್ಟ್ರಮಟ್ಟ, ಅಂತರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ವಾಣಿಜ್ಯ ಮೇಳಗಳ ಸ್ವರೂಪ, ಲಕ್ಷಣ, ಅಲ್ಲಿ ಮುಖ್ಯವಾಗಿ ನಡೆಯುವ ವಾಣಿಜ್ಯ ಚಟುವಟಿಕೆಗಳು, ಅಲ್ಲಿನ ಕಲಾ ಅಂಶಗಳನ್ನು ಹೇಳಲಾಗಿದೆ. ಅಲ್ಲದೆ ಎರಡು, ಮೂರು, ನಾಲ್ಕು ವರ್ಷಗಳಿಗೊಮ್ಮೆ ನಡೆಯುವ ಕಲಾಪ್ರದರ್ಶನ, ಕಲಾ ಉತ್ಸವಗಳನ್ನು ಇಲ್ಲಿ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಂಡು ಅವುಗಳ ಬಗ್ಗೆ ವಿವೇಚಿಸಲಾಗಿದೆ. ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು, ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ.

**ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ :**

ವಜೀರಭಾಷಾ ಬಾಗಾಯತ್ 'ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ' ಒಂದು ಅಧ್ಯಯನ ಎಂಬ ವಿಷಯ ಕುರಿತಾಗಿ[೧೦] ಪಿಎಚ್.ಡಿ. ಅಧ್ಯಯನ ಮಾಡಿದ್ದಾರೆ.

೧೦. ವಜೀರಭಾಷಾ, ಬಾಗಾಯತ : ಕರ್ನಾಟಕದ ಮಿಸ್ಲಿಮ್ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ: ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಪಿಎಚ್.ಡಿ. ಪ್ರಬಂಧ-೨೦೦೪.

ಈ ಪ್ರಬಂಧದಲ್ಲಿ ಒಟ್ಟು ಒಂಭತ್ತು ಅಧ್ಯಾಯಗಳನ್ನು ಮಾಡಿಕೊಂಡು ವಿಷಯ ವಿಶ್ಲೇಷಣೆ ಮಾಡಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವೈಧಾನಿಕತೆಗಳನ್ನು ಹೇಳುತ್ತ ಪ್ರಸ್ತುತ ಅಧ್ಯಯನದ ಮಹತ್ವ, ಪ್ರಸ್ತುತತೆಗಳನ್ನು ತಿಳಿಸಲಾಗಿದೆ. ಮುಸ್ಲಿಮರು ಕಲೆ, ಸಾಹಿತ್ಯ, ಸಂಸ್ಕೃತಿಗೆ ವಿಭಿನ್ನವಾದ ಕೊಡುಗೆ ನೀಡಿದ್ದಾರೆ. ವಾಸ್ತುಕಲೆ, ಚಿತ್ರಕಲೆಗೆ ವಿಶೇಷವಾಗಿ ಪ್ರೋತ್ಸಾಹಿಸಿದ ಇವರು ಮೂರ್ತಿ ಶಿಲ್ಪಕಲೆಗೆ ಅನಾದರ ತೋರಿದರು. ಕರ್ನಾಟಕ ಪ್ರಾಂತದಲ್ಲಿ ಅನೇಕ ಮುಸ್ಲಿಮ್ ಅರಸರು ಆಳ್ವಿಕೆ ಮಾಡಿ ಇಲ್ಲಿನ ಕಲಾ ಸಂಪತ್ತನ್ನು ಹೆಚ್ಚಿಸಿದ್ದಾರೆ. ಬೀದರ್, ಗುಲಬರ್ಗಾ, ರಾಯಚೂರು, ಬಿಜಾಪುರ, ಸವಣೂರು, ಶ್ರೀರಂಗಪಟ್ಟಣ, ಮೈಸೂರುಗಳಲ್ಲಿ ಆಳಿದ ಮುಸ್ಲಿಮರು ಚಿತ್ರಕಲೆಗೆ ಪ್ರೋತ್ಸಾಹ ಕೊಟ್ಟಿದ್ದಾರೆ. ಇವರ ಕಾಲದಲ್ಲಿ ಕಲಾತ್ಮಕ ವಾಸ್ತುರಚನೆಗಳು, ಭಿತ್ತಿಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಸಂಕೀರ್ಣ ಮಾಧ್ಯಮದ ಚಿತ್ರಕಲೆಗಳು ರಚನೆಯಾಗಿದ್ದು, ಅವುಗಳನ್ನೆಲ್ಲ ವಿಷಯಾನುಸಾರ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಮುಸ್ಲಿಮ್ ಅರಸರ ಕಾಲದ ಚಿತ್ರಕಲಾ ಇತಿಹಾಸವು ಕುತೂಹಲಕರವಾಗಿದ್ದು, ಅದನ್ನು ಕ್ರಮಾನುಗತ ರೀತಿಯಲ್ಲಿ ಕಟ್ಟಿಕೊಡುವ ಪ್ರಯತ್ನ ಎರಡನೆಯ ಅಧ್ಯಾಯದಲ್ಲಿದೆ. ಕರ್ನಾಟಕದ ಮುಸ್ಲಿಮ್ ಅರಸು ಮನೆತನಗಳಾದ ಬಹಮನಿ, ಆದಿಲ್‌ಶಾಹಿ, ಬರಿದ್‌ಶಾಹಿಗಳಲ್ಲದೇ ಹೈದರಾಲಿ, ಟಿಪ್ಪುಸುಲ್ತಾನ, ಸವಣೂರಿನ ನವಾಬರ ಕಾಲದಲ್ಲಿ ಹೇಗೆ ಚಿತ್ರಕಲೆ ಬೆಳದು ಬಂದಿತು ಎನ್ನುವ ವಿಚಾರಗಳನ್ನು ಇಲ್ಲಿ ಹೇಳಲಾಗಿದೆ. ಗುಲಬರ್ಗಾದ ಬಂದೇನವಾಜ್ ದರ್ಗಾ, ಸಾತ್ಗುಂಬಜ, ಶಹಾಕಮಾಲ್ ದರ್ಗಾಗಳಲ್ಲಿ ಚಿತ್ರಗಳನ್ನು ರಚಿಸಲಾಗಿದೆ. ಬೀದರ್‌ನಲ್ಲಿ ರಂಗೀನ್ ಮಹಲ್, ಮಹಮ್ಮದ್ ಗವಾನನ ಪಾಠಶಾಲಾ, ಬೀದರ್ ಸಮೀಪದ ಅಸ್ತೂರಿನ ಸಮಾಧಿ ಭವನಗಳಲ್ಲಿ ಚಿತ್ರಗಳನ್ನು ರಚನೆ ಮಾಡಲಾಗಿದೆ. ಮುಸ್ಲಿಮ್ ಅರಸರಲ್ಲಿ ಬಿಜಾಪುರದ ಆದಿಲ್‌ಶಾಹಿಗಳು ಚಿತ್ರಕಲೆಗೆ ಹೆಚ್ಚು ಪ್ರೋತ್ಸಾಹ ಕೊಟ್ಟಿದ್ದು ತಿಳಿದು ಬರುತ್ತದೆ. ಇವರಲ್ಲಿ ಕೆಲವು ಅರಸರು ಸ್ವತಹ ಕಲಾವಿದರಾಗಿದ್ದು ಹಲವಾರು ಚಿತ್ರಗಳನ್ನು ರಚನೆ ಮಾಡಿದ್ದಾರೆ. ಇವರ ಕಾಲದಲ್ಲಿ ಭಿತ್ತಿಚಿತ್ರಗಳಲ್ಲದೇ ಹಸ್ತಪ್ರತಿ ಚಿತ್ರಕಲೆ ಕಿರುರೂಪ ಚಿತ್ರಕಲಾ ಪ್ರಕಾರಗಳು ಉಜ್ವಲವಾಗಿ ಬೆಳದು ಬಂದವು. ಇವರ ಕಾಲದಲ್ಲಿ ಬಿಜಾಪುರದ ಅಸರ್‌ಮಹಲ್, ಜಾಮಿಮಸೀದಿ, ಕುಮಟಗಿಯ ಬೇಸಿಗೆ ಅರಮನೆಯಲ್ಲಿ ಚಿತ್ರಗಳನ್ನು ರಚಿಸಲಾಗಿದೆ. ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಕಾಲದಲ್ಲಿಯೂ ಚಿತ್ರಕಲೆ ಬೆಳೆಯಿತು. ಶ್ರೀರಂಗಪಟ್ಟಣದಲ್ಲಿ ಇವರ ಕಾಲಾವಧಿಯ ಚಿತ್ರಗಳಿವೆ. ಸವಣೂರಿನ ನವೆಂಬರ್ ಕಾಲದಲ್ಲಿಯೂ ಚಿತ್ರರಚನೆ ನಡೆದಿರುವುದಕ್ಕೆ ಅಲ್ಲಿಯ ಹಳೆಯ ಅರಮನೆಯಲ್ಲಿನ ಭಿತ್ತಿಚಿತ್ರಗಳೇ ಸಾಕ್ಷಿಯಾಗಿವೆ. ಹೀಗೆ ಕರ್ನಾಟಕದ ಮುಸ್ಲಿಮ್ ಅರಸರ ಕಾಲದ ಚಿತ್ರಕಲೆ ಹೇಗೆ ಬೆಳದು ಬಂದಿತು ಎನ್ನುವ ಕುರಿತಾಗಿ ಐತಿಹಾಸಿಕ ಹಿನ್ನೆಲೆಯನ್ನು ಕಟ್ಟಿಕೊಡಲಾಗಿದೆ.

ಹಸ್ತಪ್ರತಿ ಎಂದರೇನು? ಹಸ್ತಪ್ರತಿ ಚಿತ್ರಕಲೆಯ ಅರ್ಥ, ಸ್ವರೂಪ, ನೆಲೆ, ಹಿನ್ನೆಲೆಗಳ ಜೊತೆಗೆ ಮುಸ್ಲಿಮ್ ಹಸ್ತಪ್ರತಿ ಚಿತ್ರಕಲೆಯ ಪರಿಕರಗಳು ಮತ್ತು ರಚನಾ ವಿಧಾನಗಳನ್ನು ಕುರಿತಾಗಿ ಮೂರನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಹಸ್ತಪ್ರತಿ ಚಿತ್ರಕಲೆಯ ಪರಿಕರಗಳಲ್ಲಿ ಹಸ್ತಪ್ರತಿಗಳನ್ನು ತಯಾರಿಸಲು ಬೇಕಾಗುವ ತಾಳೆಗರಿ, ಅರಿವೆ, ರಟ್ಟು, ಮರದ ಫಲಕ ಮುಂತಾದ ಮಾಧ್ಯಮಗಳಲ್ಲದೇ, ಅದರ ಮೇಲೆ ಲೇಪಿಸುವ ತೆಳು ಪದರಕ್ಕೆ ಬೇಕಾಗುವ ಶಂಖಚೂರ್ಣ, ಕಪ್ಪೆಚಿಪ್ಪಿನ ಪುಡಿ, ಮರ, ವಜ್ರಲೇಪ, ಬಿಳಿ ಸಂಗಮವರಿ ಕಲ್ಲಿನ ಪುಡಿ, ಜೇಡಿಮಣ್ಣು, ಸುಣ್ಣ, ಬಳಪದ ಕಲ್ಲಿನ ಪುಡಿ, ಮುಂತಾದವುಗಳ ಬಗ್ಗೆ ಇಲ್ಲಿ ಹೇಳಲಾಗಿದೆ. ಅದರಂತೆ ಚಿತ್ರರಚನೆಗೆ ಬೇಕಾಗುವ ಬಣ್ಣ, ಕುಂಚಗಳು, ಅಂಟುದ್ರಾವಕ, ಬಣ್ಣ ಕಲೆಸಿಕೊಳ್ಳಲು ತಟ್ಟೆ ಮುಂತಾದವುಗಳನ್ನು ಯಾವ ಮೂಲಗಳಿಂದ ಹೇಗೆ ತಯಾರಿಸಿಕೊಳ್ಳುತ್ತಿದ್ದರು

ಎನ್ನುವ ಸಂಗತಿಗಳನ್ನು ಇಲ್ಲಿ ಹೇಳಲಾಗಿದೆ. ರಚನಾವಿಧಾನದಲ್ಲಿ ಹಸ್ತಪ್ರತಿಯನ್ನು ಸಂಸ್ಕರಿಸಿಕೊಂಡು, ಅದರ ಮೇಲೆ ಭಿತ್ತಿಯ ತೆಳುಲೇಪನ ಮಾಡುವುದು. ಅದು ಒಣಗಿದ ಮೇಲೆ ಚಿತ್ರಗಳನ್ನು ಹಂತ-ಹಂತವಾಗಿ ರಚನೆ ಮಾಡಲಾಗುವುದು. ಈ ರೀತಿಯಲ್ಲಿ ಮುಸ್ಲಿಮ್ ಅರಸರ ಕಾಲದ ಹಸ್ತಪ್ರತಿ ಚಿತ್ರಕಲೆಯ ರಚನಾವಿಧಾನ ಮತ್ತು ಪರಿಕರಗಳ ಬಗ್ಗೆ ಹೇಳಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಮುಸ್ಲಿಮ್ ಅರಸರ ಕಾಲದ ಭಿತ್ತಿಚಿತ್ರಕಲೆಯನ್ನು ವಿಶ್ಲೇಷಿಸಲಾಗಿದೆ. ಮುಸ್ಲಿಮ್ ಅರಸರು ಬರೆಸಿದ ಭಿತ್ತಿಚಿತ್ರಗಳು ಬೀದರ್, ಅಸ್ತೂರು, ಕುಮಟಗಿ, ಸವಣೂರು, ಗುಲಬರ್ಗಾ ಮತ್ತು ಶ್ರೀರಂಗಪಟ್ಟಣದಲ್ಲಿ ಕಂಡು ಬರುತ್ತವೆ. ಅವುಗಳನ್ನು ಇಲ್ಲಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಒಟ್ಟಾರೆಯಾಗಿ ಈ ಕಾಲದ ಭಿತ್ತಿಚಿತ್ರಗಳನ್ನು ಅವು ರಚನೆಯಾಗಿರುವ ನೆಲೆಗಳನ್ನು ಆಧರಿಸಿ ಅರಮನೆ, ಸಮಾಧಿ, ಮಸೀದೆ, ಜಲವಿಹಾರಗಳಲ್ಲಿ ರಚಿಸಿದ ಭಿತ್ತಿಚಿತ್ರಗಳು ಎಂಬುದಾಗಿ ವಿಂಗಡಿಸಿಕೊಂಡು ವಿವೇಚಿಸಲಾಗಿದೆ. ಈ ಅಧ್ಯಾಯದಲ್ಲಿ ಭಿತ್ತಿಸಿದ್ಧತೆಯ ಪರಿಕರಗಳು, ಚಿತ್ರಕಲೆಯ ಪರಿಕರಗಳು ಎಂದು ವಿಂಗಡಿಸಿ ವಿವೇಚಿಸಿದೆ. ಭಿತ್ತಿ ಸಿದ್ಧಗೊಳಿಸಲು ಬೇಕಾಗುವ ಇಟ್ಟಿಗೆ ಪುಡಿ, ಉಸುಕು, ಜೇಡಿಮಣ್ಣು, ವಜ್ರಲೇಪ, ಶಂಖಚೂರ್ಣ, ಬೆಲ್ಲ, ನಾರುಪದಾರ್ಥ, ಜೇನುಮೇಣ, ಮುಂತಾದವುಗಳಲ್ಲದೆ ಚಿತ್ರಚನನೆಗಾಗಿ ಬೇಕಾಗುವ ಬಣ್ಣ, ಕುಂಚ, ಸೀಸು, ಅಂಟುದ್ರಾವಕ, ಇವೆಲ್ಲವುಗಳನ್ನು ಯಾವ ಮೂಲದಿಂದ ಹೇಗೆ ತಯಾರಿಸಿಕೊಳ್ಳುತ್ತಿದ್ದರು ಎನ್ನುವ ಅಂಶಗಳನ್ನು ಇಲ್ಲಿ ಹೇಳಲಾಗಿದೆ. ಜೊತೆಗೆ ಈ ಭಿತ್ತಿ ಚಿತ್ರಗಳ ರಚನಾ ಕ್ರಮದೊಂದಿಗೆ ಅವುಗಳ ಶೈಲಿ, ಪ್ರಭಾವ, ಪ್ರೇರಣೆ ಮತ್ತು ಸಂಯೋಜನಾ ರೀತಿಗಳಂತಹ ತಾಂತ್ರಿಕ ಅಂಶಗಳನ್ನು ಇಲ್ಲಿ ವಿವೇಚಿಸುವ ಪ್ರಯತ್ನ ಮಾಡಲಾಗಿದ್ದು ಬೇರೆ ಪ್ರದೇಶದ ಮುಸ್ಲಿಮ್ ಅರಸರ ಭಿತ್ತಿಚಿತ್ರಗಳೊಂದಿಗೆ ತೌಲನಿಕವಾಗಿ ವಿವೇಚಿಸಲಾಗಿದೆ.

ಈ ಪ್ರಬಂಧದ ಐದನೆಯ ಅಧ್ಯಾಯದಲ್ಲಿ ಕರ್ನಾಟಕದ ಮುಸ್ಲಿಮ್ ಅರಸರ ಕಾಲದ ಲೋಹದ ಮೇಲಿನ ಚಿತ್ರಕಲೆಯ ಬಗ್ಗೆ ವಿವರಿಸಲಾಗಿದೆ. ಲೋಹದ ಮೇಲಿನ ಚಿತ್ರಕಲೆ ವಿವಿಧ ರೀತಿಯಲ್ಲಿ ಕಂಡು ಬರುತ್ತದೆ. ಲೋಹದ ಫಲಕಗಳ ಮೇಲೆ, ಲೋಹದ ಹಾಳೆಯ ಮೇಲೆ, ಲೋಹದ ವಸ್ತುಗಳ ಮೇಲೆ ಮತ್ತು ಲೋಹದಿಂದ ಎರಕಹೊಯ್ದ ತೋಪು, ಗಂಟೆ, ಆಯುಧಗಳು, ವಾದ್ಯಗಳು ಯುದ್ಧದಲ್ಲಿ ಬಳಸುವ ಇನ್ನಿತರ ಲೋಹದ ವಸ್ತುಗಳಲ್ಲದೇ ಶಿರಸ್ತ್ರಾನ, ಕವಚಗಳ ಮೇಲೂ ಚಿತ್ರಗಳನ್ನು ಈ ಕಾಲದಲ್ಲಿ ರಚನೆ ಮಾಡಲಾಗಿದೆ. ಅವುಗಳನ್ನೆಲ್ಲ ಇಲ್ಲಿ ಅಧ್ಯಯನಕ್ಕೆ ಬಳಸಿಕೊಂಡಿದೆ. ಕರ್ನಾಟಕದ ಮುಸ್ಲಿಮ್ ಅರಸರು ಬಟ್ಟೆ ಮಾಧ್ಯಮದ ಮೇಲೆಯೂ ಚಿತ್ರರಚನೆ ಮಾಡಿ ತಮ್ಮ ಕಲಾಪ್ರೇಮವನ್ನು ತೋರ್ಪಡಿಸಿದ್ದಾರೆ. ಇದರ ಕುರಿತು ಆರನೆಯ ಅಧ್ಯಾಯದಲ್ಲಿ ವಿವೇಚನೆ ಮಾಡಲಾಗಿದೆ. ಬಟ್ಟೆಯ ಮೇಲೆ ಬಣ್ಣದ ಚಿತ್ರಗಳನ್ನು ರಚಿಸಿ ಅವುಗಳನ್ನು ಇನ್ನೂ ಹೆಚ್ಚಿನ ಅಲಂಕಾರಗೊಳಿಸಿ ಧರಿಸುವ ಪಪದ್ಧತಿಯು ಪರ್ಶಿಯನ್‌ರಲ್ಲಿ ಹೆಚ್ಚಾಗಿತ್ತು. ಅದು ಮುಸ್ಲಿಮರ ಮೂಲಕ ಭಾರತಕ್ಕೂ ನಂತರ ಕರ್ನಾಟಕಕ್ಕೂ ಆಗಮಿಸಿತು. ಈ ಪ್ರದೇಶದ ಮುಸ್ಲಿಮ್ ಅರಸರು ಸೀರೆ, ಧೋತರ, ಕುಪ್ಪಸ, ಕಮೀಜ, ಮೇಲು ಹೊದಿಕೆಗಳು ಮಾತ್ರವಲ್ಲದೇ ಹಾಸಿಗೆ, ಹೊದಿಕೆಗಳಾದ ಜಮಖಾನೆ, ಶಾಲು, ಹತ್ತಿ ಹಾಗು ರೇಷ್ಮೆ ಬಟ್ಟೆ, ರತ್ನಗಂಬಳಿಗಳ ಮೇಲೆ ಚಿತ್ರ ರಚಿಸಿದ್ದಾರೆ. ಬಟ್ಟೆ ಮೇಲೆ ರಚಿಸುವ ಕಸೂತಿ ಚಿತ್ರಕಲಾ ವಿನ್ಯಾಸವು ಇವರ ಕಾಲದಲ್ಲಿ ಜನಪ್ರಿಯವಾಗಿತ್ತು. ಬಾಗಿಲು ಪರದೆ, ಕಿಟಕಿ ಪರದೆ, ಹೀಗೆ ಹಲವಾರು ಬಟ್ಟೆಗಳ ಮೇಲೆ ಇವರು ಚಿತ್ರಗಳನ್ನು ರಚಿಸಿ ಅಲಂಕರಿಸಿದ್ದಾರೆ. ಈ ಚಿತ್ರಗಳ ವಸ್ತುವಿಷಯ ಶೈಲಿಗಳ ಬಗ್ಗೆ ಇಲ್ಲಿ ಅಧ್ಯಯನ ಮಾಡಲಾಗಿದೆ.

ಕರ್ನಾಟಕದಲ್ಲಿನ ಮುಸ್ಲಿಮ್ ಅರಸರು ಅಲಂಕಾರ ಪ್ರಿಯರಾಗಿದ್ದು, ದಿನನಿತ್ಯ ಉಪಯೋಗಿಸುವ ವಸ್ತುಗಳ ಮೇಲೆಯೂ ಚಿತ್ರ ಬರೆಸಿದ್ದಾರೆ. ಕುಂಭಕಲೆ, ಕೌಷ್ಟಕಲೆ, ಅಕ್ಷರ ಲೇಖನಕಲೆ, ಗಂಜೀಫಾ ಕಲೆ, ಮೊಸಾಯಿಕ್ ಕಲೆಗಳು ಇವರ ಕಾಲಾವಧಿಯಲ್ಲಿ ಪ್ರಚಲಿತದಲ್ಲಿದ್ದು ಅವುಗಳನ್ನೆಲ್ಲ ಕುರಿತಂತೆ 'ಸಂಕೀರ್ಣ ಮಾಧ್ಯಮದ ಚಿತ್ರಕಲೆ' ಎಂಬುದಾಗಿ ಏಳನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಮೊಸಾಯಿಕ್ ಕಲೆಯು ಅಲಂಕಾರಿಕ ಶಿಲೆಯ ಮೇಲೆ ರಚಿಸುವ ವರ್ಣಕಲೆಯಾಗಿದ್ದು, ಇದು ಮೆಸಪೊಟೋಮಿಯಾ, ಇರಾನ್ ಪ್ರಾಂತಗಳಿಂದ ಕರ್ನಾಟಕಕ್ಕೆ ಬಂದ ಇತಿಹಾಸವನ್ನು ಸ್ಥೂಲವಾಗಿ ಹೇಳಿ ಈ ಕಲಾ ಪ್ರಕಾರದ ಬಗ್ಗೆ ಮತ್ತು ಕಲಾಕೃತಿಗಳ ಬಗ್ಗೆ ಚರ್ಚಿಸಲಾಗಿದೆ. ಅಕ್ಷರ ಲೇಖನ ಕಲೆಯು ಪರ್ಶಿಯನ್‌ರ ಮೆಚ್ಚಿನ ಕಲೆಯಾಗಿದ್ದು, ಕುರಾನಿನ ಪವಿತ್ರ ವಾಕ್ಯಗಳನ್ನು ವರ್ಣಗಳಿಂದ ಬರೆದಿರುವುದು ಇಲ್ಲಿ ಕಂಡು ಬರುತ್ತದೆ. ಅಕ್ಷರ ಲೇಖನ ಕಲೆ ಬೀದರ್‌ನ ರಂಗೀನ್ ಮಹಲ್, ಬೀದರಿನ ರಂಗೀನ್ ಮಹಲ್, ಮದರ್‌ಸಾ, ಬಿಜಾಪುರದ ಅಸರ್‌ಮಹಲ್, ಗಗನ್‌ಮಹಲ್, ಮೆಹತರ್‌ಮಹಲ್, ದರಿಯಾದೌಲತ್ ಅರಮನೆ, ಸವಣೂರಿನ ನವಾಬರ ವಾಡೆಗಳಲ್ಲಿ ಕಂಡು ಬರುತ್ತದೆ. ಅದನ್ನು ಇಲ್ಲಿ ಉದಾಹರಣೆಗಳೊಂದಿಗೆ ವಿವೇಚಿಸಲಾಗಿದೆ.

ಕರ್ನಾಟಕ ಮುಸ್ಲಿಮ್ ಅರಸರ ಕಾಲದಲ್ಲಿ ರಚನೆಯಾದ ಕಲಾಕೃತಿಗಳ ಪ್ರಭಾವ, ಪ್ರೇರಣೆ ಮತ್ತು ಶೈಲಿಗಳ ಬಗ್ಗೆ ಎಂಟನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಈ ಕಾಲದ ಹಸ್ತಪ್ರತಿ ಚಿತ್ರಕಲೆ, ಕಿರುರೂಪ ಚಿತ್ರಕಲೆ, ಭಾವಚಿತ್ರಗಳು, ವ್ಯಕ್ತಿಚಿತ್ರಗಳು, ಭಿತ್ತಿಚಿತ್ರಗಳು ಹಾಗೂ ಸಂಕೀರ್ಣ ಮಾಧ್ಯಮದ ಚಿತ್ರಗಳ ಮೇಲಾದ ಪರ್ಶಿಯನ್, ಮೊಘಲ್, ಬ್ರಿಟಿಷ್ ಕಂಪನಿ ಶೈಲಿ, ಹಿಂದೂ, ಬೌದ್ಧ, ಜೈನ ಮತ್ತು ಸ್ಥಳೀಯ ಕಲಾಶೈಲಿಗಳ ಪ್ರಭಾವ ಪ್ರೇರಣೆಗಳನ್ನು ಕುರಿತು ವಿವೇಚಿಸಲಾಗಿದೆ.

ಕುಂಭಕಲೆ, ಕೌಷ್ಟಕಲೆ, ಗಂಜೀಫಕಲೆ, ಹಸ್ತಿದಂತ, ಲೇಖನಕಲೆಗಳ ಮೇಲೆ ಇಸ್ಲಾಮಿಕ್ ಸಂಸ್ಕೃತಿಯ ಪ್ರಭಾವದ ಬಗ್ಗೆ ಬಿಂಬಿಸಲಾಗಿದೆ. ಮುಸ್ಲಿಮ್ ಅರಸರ ಕಾಲದ ಚಿತ್ರಕಲಾ ಲಕ್ಷಣಗಳನ್ನು ಕುರಿತು ಹೇಳುತ್ತಾ ಮೊಗಲ್ ಕಾಲದ ಮುಸ್ಲಿಮ್ ಕಲೆಗಿಂತ ಇದು ಹೇಗೆ ಭಿನ್ನವಾಗಿದೆ ಎಂದು ಚರ್ಚಿಸಿದೆ. ಹಾಗೂ ಸಮಕಾಲೀನ ಹಿಂದೂ ಕಲಾಶೈಲಿಗಳು ಇಲ್ಲಿನ ಮುಸ್ಲಿಮ್ ಕಲೆಗಳ ಮೇಲೆ ಏನು ಪ್ರಭಾವ ಬೀರಿವೆ? ಮತ್ತು ಅವುಗಳಿಂದ ಏನುಪಡೆದುಕೊಂಡಿವೆ ಎಂಬಂತಹ ಸಂಗತಿಗಳನ್ನು ಇಲ್ಲಿ ಚಿತ್ರಕಲೆಯ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಒಂಭತ್ತನೆಯ ಅಧ್ಯಾಯವು ಸಮಾರೋಪವಾಗಿದ್ದು ಒಟ್ಟು ಅಧ್ಯಯನದ ಫಲಿತಗಳನ್ನು ಬಿಂಬಿಸಲಾಗಿದೆ. ಪ್ರಸ್ತುತ ಈ ಪ್ರಬಂಧದಿಂದ ಕರ್ನಾಟಕದ ಮುಸ್ಲಿಮ್ ಅರಸರ ಕಾಲದ ಚಿತ್ರಕಲೆಯ ಪ್ರಕಾರಗಳು, ಮಾಧ್ಯಮಗಳು, ಶೈಲಿಗಳು, ತಂತ್ರಗಾರಿಕೆ, ಪರಿಕರಗಳು, ಉದ್ದೇಶ ಮತ್ತು ಸೌಂದರ್ಯ ಪ್ರಜ್ಞೆಯ ವಿಚಾರಗಳು ಇದರಿಂದ ತಿಳಿದು ಬರುತ್ತವೆ. ಚಿತ್ರಶಿಲ್ಪಗಳ ಬಗ್ಗೆ ಅವುಗಳ ರಚನೆಯ ಬಗ್ಗೆ ವಿರೋಧಿಭಾವನೆ ತಾಳಿದ ಈ ಧರ್ಮದಲ್ಲಿ, ಇಲ್ಲಿನ ಮುಸ್ಲಿಮ್ ಅರಸರು ಅಂತಹ ನಂಬಿಕೆಗಳನ್ನು ಬದಿಗಿಟ್ಟು ಚಿತ್ರರಚನೆಯ ಕ್ರಮಕ್ಕೆ ಮುಂದಾದರು. ಇದಕ್ಕೆ ಉಂಟಾಗಿರುವ ಸಾಮಾಜಿಕ, ರಾಜಕೀಯ ಮತ್ತು ಐತಿಹಾಸಿಕ ಕಾರಣಗಳೇನು? ಅನಿವಾರ್ಯಗಳೇನು? ಎಂಬಂತಹ ವಿಚಾರಗಳು ಈ ಪ್ರಬಂಧದಿಂದ ತಿಳಿದು ಬರುವ ಪ್ರಮುಖ ಅಂಶಗಳಾಗಿವೆ. ಈ ಪ್ರಬಂಧದಿಂದ ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆಯು ಹೇಗೆ ಬೆಳೆಯಿತೆಂಬುದು ಮತ್ತು ದಖ್ಖನ್ ಚಿತ್ರಶೈಲಿಯ ಪ್ರಭಾವವು ಉಂಟಾದ ಕಾರಣಗಳು ತಿಳಿದುಬರುತ್ತವೆ.

**ಕರ್ನಾಟಕ ತೊಗಲು ಗೊಂಬೆ ಚಿತ್ರಕಲೆ, ಒಂದು ಅಧ್ಯಯನ :**

ತೊಗಲುಗೊಂಬೆಯಾಟವು ಮನರಂಜನಾ ಮೂಲವಾಗಿದ್ದು ಇಲ್ಲಿ ಶಿಲ್ಪ ಮತ್ತು ಚಿತ್ರಕಲೆಯ ಅಂಶಗಳು ಬೆರೆತುಕೊಂಡಿವೆ. ಹಾಗಾಗಿ ತೊಗಲು ಗೊಂಬೆಯ ಅಧ್ಯಯನವು ಶಿಲ್ಪಕಲೆ, ಚಿತ್ರಕಲೆ ಮತ್ತು ರಂಗಕಲೆಗಳ ಸಂಯುಕ್ತ ಅಧ್ಯಯನವೆಂದೂ ಹೇಳಬಹುದು. 'ಕರ್ನಾಟಕದ ತೊಗಲುಗೊಂಬೆ ಚಿತ್ರಕಲೆ, ಒಂದು ಅಧ್ಯಯನ' ವಿಷಯ ಕುರಿತು ಶಶಿಕಲಾ ಹೂಗಾರ ಇವರು[೧೧] ಡಾ.ಎಸ್.ಸಿ.ಪಾಟೀಲ ಅವರ ಮಾರ್ಗದರ್ಶನದಲ್ಲಿ ಅಧ್ಯಯನ ಕೈಗೊಂಡು ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೪ರಲ್ಲಿ ತಮ್ಮ ಪ್ರಬಂಧವನ್ನು ಸಲ್ಲಿಸಿದ್ದಾರೆ. ಈ ಅಧ್ಯಯನವು ಒಟ್ಟು ಎಂಟು ಅಧ್ಯಾಯಗಳಲ್ಲಿ ಹರಡಿಕೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಮಹತ್ವ ಮತ್ತು ಪ್ರಸ್ತುತತೆಗಳನ್ನು ಹೇಳಿ ವಿಧಾನ ಮತ್ತು ಸ್ವರೂಪಗಳ ಬಗ್ಗೆ ತಿಳಿಸಲಾಗಿದೆ. ಕರ್ನಾಟಕದ ಜನತೆ ತೊಗಲು ಗೊಂಬೆಗಳನ್ನು ರಚಿಸುವ ಮೂಲಕ ಕಲಾಕಾರರಾಗಿ, ಬರೆಸುವ ಮೂಲಕ ಪೋಷಕರಾಗಿ ಈ ಚಿತ್ರಕಲಾ ಪ್ರಕಾರವನ್ನು ಬೆಳೆಸಿದ್ದಾರೆ. ಈ ಕಲಾ ಪ್ರಕಾರವು ವ್ಯಕ್ತಿಯಿಂದ ವ್ಯಕ್ತಿಗೆ ಕುಟುಂಬದಿಂದ ಕುಟುಂಬಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಬೇರೆ ಬೇರೆಯಾಗಿ ಪ್ರಾದೇಶಿಕ ವಿಶೇಷತೆಗಳನ್ನು ಮೈಗೂಡಿಸಿಕೊಂಡು ಭಿನ್ನವಾಗಿ ಬೆಳೆದು ಬಂದಿದೆ. ಆಯಾ ಪ್ರದೇಶದ ಜನರ ಜೀವನ ವಿಧಾನ, ಆಚಾರ-ವಿಚಾರ, ಧಾರ್ಮಿಕ ನಂಬುಗೆ ಮುಂತಾದ ಸಂಗತಿಗಳು ತೊಗಲು ಗೊಂಬೆಯ ಚಿತ್ರಗಳ ಮೇಲೆ ಪ್ರಭಾವ ಬೀರಿ ಇವು ವೈವಿಧ್ಯಮಯವಾಗಿ ರೂಪುಗೊಳ್ಳಲು ಕಾರಣವಾಗಿವೆ ಎಂಬಂತಹ ಸಂಗತಿಗಳನ್ನು ಇಲ್ಲಿ ಹೇಳಲಾಗಿದೆ.

ಪ್ರಾಚೀನ ಪರಂಪರೆ ಹೊಂದಿದ ತೊಗಲುಗೊಂಬೆ ಚಿತ್ರಕಲೆಯ ಐತಿಹಾಸಿಕ ಹಿನ್ನೆಲೆಯನ್ನು ಎರಡನೆಯ ಅಧ್ಯಾಯದಲ್ಲಿ ಕಟ್ಟಿಕೊಡಲಾಗಿದೆ. ಇದರ ಐತಿಹಾಸಿಕ ಘಟ್ಟಗಳನ್ನು ವೇದಗಳ ಕಾಲದಲ್ಲಿ ತೊಗಲಿನ ಮೇಲೆ ಚಿತ್ರಗಳನ್ನು ರಚಿಸಬೇಕೆಂಬ ಉಲ್ಲೇಖಗಳು ದೊರಕುವ ಬಗ್ಗೆ ಹೇಳಲಾಗಿದೆ. ರಾಮಾಯಣ, ಮಹಾಭಾರತದ ಕಾಲದಲ್ಲಿ ಗೊಂಬೆಯಾಟದ ಉಲ್ಲೇಖಗಳು ದೊರಕುತ್ತವೆ. ಇದಲ್ಲದೆ ಅನೇಕ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಲಭ್ಯವಿದ್ದ ಈ ಕಲೆಯ ಬಗೆಗಿನ ವಿವರಗಳನ್ನು ಬಳಸಿಕೊಂಡು ಇದರ ಐತಿಹಾಸಿಕ ಹಿನ್ನೆಲೆಯನ್ನು ಕ್ರಮಾನುಗತ ರೀತಿಯಲ್ಲಿ ಕಟ್ಟಿಕೊಡಲಾಗಿದೆ. ಪೂರಕವಾಗಿ ಸಮಕಾಲೀನ ಶಾಸನಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

ತೊಗಲುಗೊಂಬೆ ಚಿತ್ರಕಲೆಯ ಪರಿಕರಗಳ ಕುರಿತು ಮೂರನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ತೊಗಲುಗೊಂಬೆ ರಚನೆಗೆ ಮುಖ್ಯವಾಗಿ ಪ್ರಾಣಿಗಳ ತೊಗಲು (ಚರ್ಮ) ಬೇಕಾಗುವುದು. ಜಿಂಕೆ, ಆಡು, ಆಕಳುಗಳನ್ನು ಇದಕ್ಕಾಗಿ ಹೆಚ್ಚಾಗಿ ಬಳಸುತ್ತಾರೆ. ಚರ್ಮವನ್ನು ಹದಮಾಡಿಕೊಳ್ಳಲು ಉಪ್ಪು, ಸೋಡಾಪುಡಿ, ರಾಸಾಯನಿಕ ದ್ರವಗಳು ಬೇಕು. ಚರ್ಮ ನೆನೆ ಹಾಕಲು ವಿವಿಧ ಗಾತ್ರದ ಪಾತ್ರೆಗಳು, ನೀರು, ರೋಮಗಳನ್ನು ಉಜ್ಜಿ ತೆಗೆಯಲು ಬಿರುಸಾದ ತಂತಿಗಳಂತಿರುವ ಹಿಡಿಕೆಯ ಕುಂಚಗಳು, (ಕುಂಚಿಗೆ) ಮೊಳೆಗಳು, ಸುತ್ತಿಗೆ, ದಾರಗಳು ಬೇಕು. ತೊಗಲನ್ನು ಸಂಸ್ಕರಿಸಿದ ನಂತರ ಅದನ್ನು ಒಣಗಿಸಲಾಗುತ್ತದೆ. ನಂತರ ಅದರ ಮೇಲೆ ಚಿತ್ರಿಸಲು, ಬಣ್ಣ ಲೇಪಿಸಲು, ಕತ್ತರಿಸಲು ಹೀಗೆ ವಿವಿಧ ಪರಿಕರಗಳು ಅವಶ್ಯವಾಗಿವೆ. ಚರ್ಮ ಕತ್ತರಿಸಲು ಕತ್ತರಿಗಳು, ಗೊಂಬೆಗೆ ಜೋಡಿಸಲು ಬಿದಿರುಗಳು, ಹೊಲಿಯಲು ದಾರ-ಸೂಜಿಗಳು, ಅಂಟುದ್ರಾವಕ

---

೧೧. ಶಶಿಕಲಾ ಹೂಗಾರ : ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ, ಒಂದು ಅಧ್ಯಯನ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾದ ಅಪ್ರಕಟಿತ ಪಿಎಚ್.ಡಿ. ಪ್ರಬಂಧ-೨೦೦೪.

ಮುಂತಾದ ಸಾಮಗ್ರಿಗಳು ಬೇಕಾಗುತ್ತವೆ. ಆಟದ ಸಮಯದಲ್ಲಿ ಬಿಳಿ ಪರದೆ, ಬೆಳಕಿನ ವಿನ್ಯಾಸಕ್ಕಾಗಿ ಲೈಟು, ಅಥವಾ ದ್ವೀಪಗಳು, ಕಪ್ಪು ಬಟ್ಟೆ, ವಾದ್ಯ ಸಂಗೀತದ ಪರಿಕರಗಳು ಬೇಕಾಗುತ್ತಿದ್ದು, ಇವೆಲ್ಲವುಗಳ ಬಗ್ಗೆ ವಿಂಗಡಣೆ ಮಾಡಿಕೊಂಡು ವಿವರಿಸಲಾಗಿದೆ. ಇದೇ ಅಧ್ಯಾಯದಲ್ಲಿ ಮುಂದಿನ ಭಾಗದಲ್ಲಿ ತೊಗಲುಗೊಂಬೆಯ ಚಿತ್ರರಚನಾ ಕ್ರಮವನ್ನು ಕುರಿತು ಹೇಳಲಾಗಿದೆ. ತೊಗಲನ್ನು (ಚರ್ಮ) ಆಯ್ದುಕೊಳ್ಳುವ ಹಂತದಿಂದ ತೊಡಗಿ ಆಟವನ್ನು ಪ್ರದರ್ಶಿಸುವವರೆಗೆ ಈ ಚಿತ್ರಗಳನ್ನು ಹೇಗೆ ತಯಾರಿಸುತ್ತಾರೆ ಎಂಬ ವಿವರಗಳು ಇಲ್ಲಿವೆ.

ನಾಲ್ಕನೆಯ ಅಧ್ಯಾಯದಲ್ಲಿ ತೊಗಲುಗೊಂಬೆ ಚಿತ್ರಕಲೆಯ ವಸ್ತುವಿಷಯಗಳು ಎಂದು ಪ್ರತ್ಯೇಕವಾಗಿ ವಿವೇಚಿಸಲಾಗಿದೆ. ಇಲ್ಲಿ ಕರ್ನಾಟಕ ತೊಗಲುಗೊಂಬೆಯಲ್ಲಿ ಕಂಡು ಬರುವ ಚಿತ್ರಗಳನ್ನು ವಿಷಯಾನುಸಾರ ವಿಂಗಡಿಸಿ ವಿವೇಚಿಸಲಾಗಿದೆ. ರಾಮಾಯಣ, ಮಹಾಭಾರತ, ಭಾಗವತ, ಕೃಷ್ಣಕಥೆಗಳು, ಶೈವಪುರಾಣ, ವೈಷ್ಣವ ಪುರಾಣ, ಶಾಕ್ತಪುರಾಣ, ಐತಿಹಾಸಿಕ ಘಟನೆಗಳು, ಸ್ವಾತಂತ್ರ್ಯ ಸಂಗ್ರಾಮ, ಪ್ರಚಲಿತ ಘಟನೆಗಳಿಗೆ ಸಂಬಂಧಿಸಿದ ಆಟಗಳನ್ನು ಆಡುತ್ತಿದ್ದು, ಅದರ ಚಿತ್ರಗಳು ಇರುತ್ತವೆ. ಪುರುಷ ಚಿತ್ರಗಳು, ಸ್ತ್ರೀ ಚಿತ್ರಗಳು, ದೇವತಾ ಚಿತ್ರಗಳು, ಪ್ರಾಣಿ–ಪಕ್ಷಿಗಳ ಚಿತ್ರಗಳು, ಐತಿಹಾಸಿಕ ವ್ಯಕ್ತಿಗಳ ಚಿತ್ರಗಳು, ಹೀಗೆ ವರ್ಗೀಕರಣ ಮಾಡಿಕೊಂಡು ವಿವೇಚಿಸಲಾಗಿದೆ.

ತೊಗಲುಗೊಂಬೆಗಳು ಪ್ರಾದೇಶಿಕವಾಗಿ ವೈವಿಧ್ಯತೆಯಿಂದ ಕೂಡಿರುತ್ತವೆ. ಒಂದು ಇನ್ನೊಂದರ ಮೇಲೆ ಪ್ರಭಾವ ಬೀರುವುದು ಪ್ರೇರಣೆಗಳಿಗೆ ಒಳಪಡುವುದು ನಡೆಯುತ್ತದೆ. ಐದನೆಯ ಅಧ್ಯಾಯದಲ್ಲಿ ತೊಗಲು ಗೊಂಬೆ ಚಿತ್ರಕಲೆಯ ಪ್ರಭಾವ, ಪ್ರೇರಣೆ, ಶೈಲಿಗಳ ಕುರಿತಾಗಿ ವಿವೇಚಿಸಲಾಗಿದೆ. ದಕ್ಷಿಣ ಭಾರತದ ರಾಜ್ಯಗಳಲ್ಲಿ ವಿವಿಧ ಬಗೆಯ ತೊಗಲು ಗೊಂಬೆಗಳ ಆಟಗಳು ಪ್ರಚಲಿತದಲ್ಲಿವೆ. ಅವು ಒಂದು ಇನ್ನೊಂದರ ಮೇಲೆ ಪ್ರಭಾವ ಬೀರುವುದು ಮಾತ್ರವಲ್ಲದೇ ಪ್ರೇರಣೆಗೂ ಒಳಗಾಗಿವೆ. ಅಂತಹ ಸಂಗತಿಗಳನ್ನು ಇಲ್ಲಿ ಗಮನಿಸಲಾಗಿದೆ. ಕೇರಳ, ಆಂಧ್ರಪ್ರದೇಶ, ತಮಿಳುನಾಡು, ಮಹಾರಾಷ್ಟ್ರಗಳಲ್ಲದೇ ಓರಿಸ್ಸಾ, ಬಂಗಾಲ ಪ್ರಾಂತದ ತೊಗಲು ಗೊಂಬೆಗಳನ್ನು ತೌಲನಿಕವಾಗಿ ವಿವೇಚನೆಗೆ ಬಳಸಿಕೊಳ್ಳಲಾಗಿದೆ. ಆರನೆಯ ಅಧ್ಯಾಯದಲ್ಲಿ ತೊಗಲು ಗೊಂಬೆ ಆಟದ ಪ್ರದರ್ಶನದ ವಿಧಿ–ವಿಧಾನಗಳ ಬಗ್ಗೆ ವಿವೇಚಿಸಲಾಗಿದೆ. ತೊಗಲು ಗೊಂಬೆ ಆಡಿಸುವವರನ್ನು ಕಿಳ್ಳೇಕ್ಯಾತರು, ಗೊಂಬೆರಾಮರು ಎಂದು ಕರೆಯುತ್ತಾರೆ. ಈ ಗೊಂಬೆರಾಮರು ಆಟವನ್ನು ಪ್ರದರ್ಶಿಸಬೇಕಾದ ಊರಿಗೆ ಹೋಗಿ ಅಲ್ಲಿನ ಮುಖಂಡರಿಗೆ ತಮ್ಮ ಆಟದ ಬಗೆಗಿನ ಸಂಗತಿಗಳನ್ನು ತಿಳಿಸಿ ಆಟಕ್ಕೆ ಒಪ್ಪಿಗೆ ಪಡೆಯುತ್ತಾರೆ. ಅಲ್ಲದೇ ತಮ್ಮಲ್ಲಿರುವ ವಿವಿಧ ಬಗೆಯ ಆಟಗಳನ್ನು ಅವರಿಗೆ ತಿಳಿಸಿ, ಮುಖಂಡರು ಆಯ್ಕೆ ಮಾಡಿದ ಆಟವನ್ನು ಆ ಊರಿನಲ್ಲಿ ಪ್ರದರ್ಶಿಸುತ್ತಾರೆ. ಆಟಕ್ಕಾಗಿ ವಿಶೇಷವಾದ ರಂಗಸಜ್ಜಿಕೆ ತಯಾರಿಸುತ್ತಾರೆ. ನಾಲ್ಕು ಕಡೆಗೆ ಅರಿವೆಯಿಂದ ಮುಚ್ಚಲ್ಪಟ್ಟ ಎತ್ತರದ ಸ್ಥಳದಲ್ಲಿ ಆಟ ಪ್ರದರ್ಶಿಸುತ್ತಾರೆ. ಒಂದು ಕಡೆಗೆ ಅರ್ಧಭಾಗಕ್ಕೆ ಕರಿ ಅರಿವೆ ಮತ್ತು ಅರ್ಧಭಾಗಕ್ಕೆ ಪಾರದರ್ಶಕವಾದ ಬಿಳಿ ಅರಿವೆಯನ್ನು ಜೋಡಿಸುತ್ತಾರೆ. ರಂಗಸಜ್ಜಿಕೆಯ ಒಳಭಾಗದಲ್ಲಿ ಪ್ರಖರವಾದ ಬೆಳಕನ್ನು ಉಂಟು ಮಾಡಿ ಬಿಳಿ ಪರದೆಯ ಮೇಲೆ ಗೊಂಬೆಗಳ ವಿನ್ಯಾಸ ಮೂಡುವ ಹಾಗೆ ಮಾಡಲಾಗುತ್ತದೆ.

ಜೊತೆಗೆ ವಾದ್ಯ ಸಂಗೀತವೂ ಇರುತ್ತದೆ. ಕೆಲವು ಸಂದರ್ಭದಲ್ಲಿ ಗೊಂಬೆ ಆಡಿಸುವವರೇ ಸಂಭಾಷಣೆ ಹಾಗೂ ಹಾಡುಗಳನ್ನು ಹೇಳುತ್ತಾರೆ. ವಾದ್ಯಗಳನ್ನು ಮತ್ತೊಬ್ಬರು ನುಡಿಸುತ್ತಾರೆ. ರಾತ್ರಿ ಹೊತ್ತಿನಲ್ಲಿ ಕತ್ತಲಲ್ಲಿ ಹೆಚ್ಚಾಗಿ ನಡೆಯುವ ತೊಗಲು ಗೊಂಬೆಯಾಟದ ಪ್ರದರ್ಶನ ವಿಧಿ ವಿಧಾನಗಳನ್ನು ಇಲ್ಲಿ ಕ್ರಮಾನುಸಾರವಾಗಿ ಬಿಂಬಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ತೊಗಲುಗೊಂಬೆ ಚಿತ್ರಕಲೆಯ ಕಲಾವಿದರ ಕುರಿತು ಅಧ್ಯಯನ ಮಾಡಲಾಗಿದೆ. ತೊಗಲುಗೊಂಬೆಯ ಚಿತ್ರಕಲಾವಿದರ ಐತಿಹಾಸಿಕ ವಿವರಗಳು ಅಷ್ಟಾಗಿ ಕಂಡು ಬಂದಿಲ್ಲ. ಹಾಗಾಗಿ ಐತಿಹಾಸಿಕವಾಗಿ ಕಲಾವಿದರ ಬಗ್ಗೆ ಸಂಕ್ಷಿಪ್ತವಾಗಿ ಹೇಳಿ, ಮುಖ್ಯವಾಗಿ ಈ ತೊಗಲುಗೊಂಬೆಯ ಚಿತ್ರಕಲಾವಿದರ ಸದ್ಯದ ಪರಿಸ್ಥಿತಿ, ಸ್ಥಿತಿಗತಿ, ಕೌಟುಂಬಿಕ ಹಿನ್ನೆಲೆ, ಅವರ ವಂಶ ಪರಂಪರೆಯ ಕಲಾಹಿನ್ನೆಲೆ, ಅವರು ಯಾವ ಬಗೆಯ ಗೊಂಬೆಗಳನ್ನು ತಯಾರಿಸುವರು, ಯಾವ ಆಟಗಳನ್ನು ಆಡಿಸುವರು, ಪ್ರಮುಖವಾಗಿ ಎಲ್ಲೆಲ್ಲಿ ಪ್ರದರ್ಶನಗಳನ್ನು ಕೊಟ್ಟಿದ್ದಾರೆ, ಅವರಿಗೆ ಸಂದಿರುವ ಪ್ರಶಸ್ತಿ–ಗೌರವ, ಮಾನ–ಸನ್ಮಾನಗಳು, ಅವರ ಮೇಲೆ ಉಂಟಾದ ಪ್ರಭಾವ, ಪ್ರೇರಣೆಗಳು, ಈ ಕಲೆಯಲ್ಲಿ ಕಂಡುಕೊಂಡಿರುವ ಹೊಸ ಆವಿಷ್ಕಾರಗಳು, ಸಮಕಾಲೀನ ವಲಯದಲ್ಲಿ ಅವರು ಸ್ಪಂದಿಸುತ್ತಿರುವ ರೀತಿಗಳು, ಸಾಮಾಜಿಕವಾಗಿ, ಆರ್ಥಿಕವಾಗಿ, ಈ ಕಲೆಯ ಕಲಾವಿದರು ಹೇಗೆ ಎನ್ನುವ ವಿರಗಳನ್ನು ಇಲ್ಲಿ ಮುಖ್ಯವಾಗಿ ವಿವೇಚಿಸಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ತೊಗಲು ಗೊಂಬೆ ಚಿತ್ರಕಲೆಯ ಆಪತ್ತುಗಳು ಮತ್ತು ಸಂರಕ್ಷಣೆ ವಿಧಾನಗಳ ಬಗ್ಗೆ ವಿವರಿಸಲಾಗಿದೆ. ಆಧುನಿಕ ಮನೋಭಾವ, ವೈಜ್ಞಾನಿಕ ಪ್ರಗತಿ ಮುಂತಾದವು ಜನರನ್ನು ಈ ಪರಂಪರಾಗತ ಕಲೆಯಿಂದ ವಿಮುಖರನ್ನಾಗಿ ಮಾಡಿದ್ದು ಒಂದು ಬಗೆಯಾದರೆ, ಬೆಂಕಿ, ನೀರು, ಗಾಳಿಯಂತಹ ಪ್ರಕೃತಿ ಶಕ್ತಿಗಳು ವಿವಿಧ ಸಂದರ್ಭಗಳಲ್ಲಿ ಇವುಗಳನ್ನು ನಾಶಮಾಡುತ್ತವೆ. ಅಲ್ಲದೇ ವ್ಯಕ್ತಿಗತವಾಗಿರುವ ಕೆಲವು ಕಾರ್ಯಕ್ರಮಗಳು ಈ ಕಲಾ ಪ್ರಕಾರದ ಅವನತಿಗೆ ಕಾರಣವಾಗಿವೆ.ಇಂತಹ ಅನೇಕ ಆಪತ್ತುಗಳನ್ನು ವಿಷಯಾನುಸಾರ ವಿಂಗಡಿಸಿಕೊಂಡು ವಿವೇಚಿಸಲಾಗಿದೆಯಲ್ಲದೇ ಈ ಕಲೆಯ ಸಂರಕ್ಷಣೆಯಲ್ಲಿ ಕೈಗೊಳ್ಳಬಹುದಾದ ಕ್ರಮಗಳ ಬಗ್ಗೆ ಹೇಳಲಾಗಿದೆ. ಎಂಟನೆಯ ಅಧ್ಯಾಯವು ಸಮಾರೋಪವಾಗಿದ್ದು ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ.

ಪ್ರಸ್ತುತ ಪ್ರಬಂಧವು ತೊಗಲುಗೊಂಬೆ ಚಿತ್ರಕಲೆಯ ಕುರಿತಾಗಿದ್ದು, ಇದರಿಂದ ಕಲಾಕ್ಷೇತ್ರಕ್ಕೆ, ಅನೇಕ ಮೌಲಿಕ ವಿಚಾರಗಳು ಸೇರ್ಪಡೆಗೊಂಡಿವೆ ಎನ್ನಬಹುದು. ತೊಗಲುಗೊಂಬೆಯಾಟವು ಚಿತ್ರ, ಬೆಳಕು, ನೆರಳು ಮತ್ತು ಬಣ್ಣದ ಪ್ರತಿಫಲನಗಳಿಂದುಂಟಾಗುವ ವೈಜ್ಞಾನಿಕ ಹಿನ್ನೆಲೆಯನ್ನು ಹೊಂದಿದ್ದು, ಇಂದಿನ ಚಲನಚಿತ್ರಕ್ಕೆ ಮೂಲವಾಗಿರುವಂತಿದೆ. ಆಧುನಿಕ ಚಿತ್ರಕಲಾ ಕೃತಿಗಳಂತೆ ಪರಂಪರಾಗತ ತೊಗಲು ಗೊಂಬೆ ಚಿತ್ರಗಳೂ ಚಿತ್ರಕಲಾ ಕ್ಷೇತ್ರದಲ್ಲಿ ಹೇಗೆ ಪ್ರಸ್ತುತವಾಗುತ್ತವೆ ಎಂಬುದನ್ನು ಇಲ್ಲಿ ಬಿಂಬಿಸುವ ಪ್ರಯತ್ನವಿದೆ. ಆಧುನಿಕ ಸಂದರ್ಭಗಳಲ್ಲಿ ಕೆಲವರು ತಮ್ಮ ಕಲಾಕೃತಿಯಲ್ಲಿ ತೊಗಲು ಗೊಂಬೆಗಳ ಚಿತ್ರವಿನ್ಯಾಸವನ್ನು ಬಳಸಿಕೊಂಡಿರುವುದು ಕಂಡುಬರುತ್ತದೆ. ಇಲ್ಲಿ ನಶಿಸುತ್ತಿರುವ ಈ ಕಲಾ ಪ್ರಕಾರವನ್ನು ವ್ಯವಸ್ಥಿತ ಅಧ್ಯಯನಕ್ಕೆ ಒಳಪಡಿಸಿ ಅನೇಕ ಅಂಶಗಳ ಬಗ್ಗೆ ಬೆಳಕು ಬೀರಲಾಗಿದೆ. ಈ ಕಲಾ ಪ್ರಕಾರದ ರಚನಾಕ್ರಮ, ಪರಿಕರಗಳು, ಶೈಲಿ, ಪ್ರಭಾವ, ಪ್ರೇರಣೆಗಳು, ಚಿತ್ರಗಳ ವಸ್ತು ವಿಷಯಗಳು, ಆಟಗಳ ಪ್ರಕಾರಗಳು, ಪ್ರಾದೇಶಿಕ ಲಕ್ಷಣಗಳು, ಈ ಕಲೆಯ ಕಲಾವಿದರು, ಇತಿಹಾಸ, ಸಮಕಾಲೀನ ಸಂದರ್ಭದಲ್ಲಿ ಈ ಕಲಾ ಪ್ರಕಾರದ ಸ್ಥಿತಿಗತಿ ಮುಂತಾದ ಅನೇಕ ಅಂಶಗಳ ಕುರಿತು ಇಲ್ಲಿ ಗಮನಿಸಲಾಗಿದೆ. ಈ ಅಧ್ಯಯನದಿಂದ ತೊಗಲುಗೊಂಬೆಯ ರಚನಾಕ್ರಮ, ಕಲಾವಂತಿಕೆ, ತೊಗಲುಗೊಂಬೆಗಳು ಸಮುದಾಯದ ಮೇಲೆ ಬೀರುವ ಪ್ರಭಾವಗಳು ಸಾಮಾಜಿಕ ಬದಲಾವಣೆಗಳು ಮುಂತಾದ ಸಂಗತಿಗಳು ತಿಳಿದುಬರುತ್ತವೆ.

**ಕರ್ನಾಟಕದ ರಥ ಶಿಲ್ಪಕಲೆ :**

ಭಾರತೀಯ ಸಾಂಸ್ಕೃತಿಕ ಬದುಕಿನಲ್ಲಿ ಜಾತ್ರೆ-ಉತ್ಸವಗಳು ಪ್ರಮುಖ ಸ್ಥಾನ ಪಡೆದುಕೊಂಡಂತೆ ಜಾತ್ರೆಗಳ ಅವಿಭಾಜ್ಯ ಅಂಗವಾದ ರಥ ಅಥವಾ ತೇರುಗಳು ಸಂಸ್ಕೃತಿಯ ಜೀವಂತಿಕೆಯನ್ನು ಬಿಂಬಿಸುವ ಕಲಾಕೃತಿಯಾಗಿವೆ. ಇಂತಹ ಪ್ರಮುಖ ರಥ ಶಿಲ್ಪಗಳ ಕುರಿತು ಶಿವಪ್ರಕಾಶ ತುಕ್ಕಣ್ಣವರ ಅಧ್ಯಯನ ಮಾಡಿದ್ದಾರೆ.[೧೨] ಇವರು 'ಕರ್ನಾಟಕದ ರಥ ಶಿಲ್ಪಕಲೆ ' ಎಂಬ ವಿಷಯವನ್ನು ಆಯ್ದುಕೊಂಡು ಡಾ.ಎಸ್.ಸಿ.ಪಾಟೀಲರ ಮಾರ್ಗದರ್ಶನದಲ್ಲಿ ಅಧ್ಯಯನ ಕೈಗೊಂಡು ೨೦೦೪ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ್ದಾರೆ. ಕರ್ನಾಟಕದ ರಥ ಶಿಲ್ಪಕಲೆ ಎಂಬ ಶೀರ್ಷಿಕೆ ಅಡಿಯಲ್ಲಿ ಪ್ರಮುಖವಾಗಿ ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ ಅಧ್ಯಯನ ಮಾಡಲಾಗಿದೆ.

ಈ ಪ್ರಬಂಧದಲ್ಲಿ ಒಟ್ಟು ಒಂಭತ್ತು ಅಧ್ಯಾಯಗಳಾಗಿ ವಿಷಯ ವಿಂಗಡಣೆ ಮಾಡಿಕೊಂಡು ವಿಶ್ಲೇಷಿಸಲಾಗಿದೆ. ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಮಹತ್ವ ಮತ್ತು ಅವಶ್ಯಕತೆಗಳನ್ನು ಹೇಳಿದೆ. ಮನುಷ್ಯನ ದೇಹವು ಒಂದು ರಥವಾಗಿದ್ದು, ಆತ್ಮನು ಅದರ ಸಾರಥಿ ಎಂಬ ಪರ್ಯಾಯ ಮಾತು ಇದೆ. ಈ ಹಿನ್ನೆಲೆಯಲ್ಲಿ ಆಂತರಿಕ ರಥ, ಬಾಹ್ಯ ರಥಗಳೆಂಬ ಪ್ರಭೇದಗಳನ್ನು ಜ್ಞಾನಿಗಳು ಗುರುತಿಸುತ್ತಾರೆ. ಹಾಗಾಗಿ ಅದರ ಅಧ್ಯಯನವು ಕಲಾತ್ಮಕ ಹಿನ್ನೆಲೆಯಲ್ಲಿ ನಡೆದಾಗ ಇನ್ನೂ ಹೆಚ್ಚಿನ ಕುತೂಹಲಕರವಾದ ಸಂಗತಿಗಳು ಬಿಂಬಿತವಾಗಬಲ್ಲವು ಎಂಬುದಾಗಿ ಈ ಅಧ್ಯಯನದ ಮಹತ್ವದ ಆಶಯಗಳನ್ನು ಹಂತ-ಹಂತವಾಗಿ ಇಲ್ಲಿ ತಿಳಿಸಲಾಗಿದೆ. ಜೊತೆಗೆ ಅಧ್ಯಯನದ ಸ್ವರೂಪ ಮತ್ತು ವಿಧಾನಗಳೂ ಇಲ್ಲಿ ಹೇಳಲ್ಪಟ್ಟಿವೆ.

ಎರಡನೆಯ ಅಧ್ಯಾಯದಲ್ಲಿ ರಥ ಶಿಲ್ಪಕಲೆಯ ಐತಿಹಾಸಿಕ ಹಿನ್ನೆಲೆಯನ್ನು ಕ್ರಮಾನುಗತವಾಗಿ ಕಟ್ಟಿ ಕೊಡಲು ಪ್ರಯತ್ನಿಸಲಾಗಿದೆ. ಆರಂಭಿಕವಾಗಿ ದೇವಾಲಯಗಳೇ ರಥದ ಮೂಲಗಳೆಂದು ಹೇಳಬಹುದು. ದೇವಾಲಯಗಳಲ್ಲಿನ ಗರ್ಭಗೃಹಗಳಲ್ಲಿರುವ ದೇವರುಗಳನ್ನು ಸಾಮಾನ್ಯ ಜನರ ಬಳಿಗೆ ಕೊಂಡೊಯ್ಯುವ ಒಂದು ಕ್ರಮವೇ ರಥಗಳ ನಿರ್ಮಾಣಕ್ಕೆ ಪ್ರೇರಣೆ ಒದಗಿಸಿದೆ. ಹೀಗೆ ಆರಂಭಗೊಳ್ಳುವ ರಥಶಿಲ್ಪದ ಆರಂಭಿಕ ಹಂತವು ಮುಂದೆ ವೈವಿಧ್ಯಮಯವಾಗಿ ಬೆಳವಣಿಗೆಯಾಗಿರುವುದು ಕಂಡುಬರುತ್ತದೆ. ಮತ್ತೊಂದು ರೀತಿಯಲ್ಲಿ ನೋಡಿದಾಗ ರಾಜಮಹಾರಾಜರ ಸಂಚಾರಿ ವಾಹನಗಳನ್ನು ರಥಗಳೆಂದೇ ಕರೆಯುತ್ತಿದ್ದರು. ಯುದ್ಧಗಳಲ್ಲಿ ವಿವಿಧ ರೀತಿಯಲ್ಲಿ ಬಲಿಷ್ಟವಾದ ರಥಗಳನ್ನು ಬಳಸುತ್ತಿದ್ದರು. ಸಂಚಾರಕ್ಕೆ, ಯುದ್ಧಕ್ಕೆ, ಬೇಟೆಗೆ, ಮನರಂಜನೆಗೆ ಹೀಗೆ ಬೇರೆ ಬೇರೆ ವಿನ್ಯಾಸದ ರಥಗಳನ್ನು ಪ್ರಾಚೀನ ರಾಜರು ಹೊಂದಿರುತ್ತಿದ್ದರು. ವಿಹಾರ ರಥಗಳು, ಸಂಗ್ರಾಮ ರಥಗಳು, ವೈಣಿಕ ರಥಗಳು, ನೌಕಾ ವಿಹಾರ ರಥಗಳೆಂಬುದಾಗಿ ವಿವಿಧ ವಿನ್ಯಾಸದ ರಥಗಳು ನಿತ್ಯ ಬದುಕಿನಲ್ಲಿ ಉಪಯೋಗಿಸಲ್ಪಡುತ್ತಿದ್ದವು. ಈ ಹಿನ್ನೆಲೆಯಲ್ಲಿರಥಗಳ ಐತಿಹಾಸಿಕ ವಿವರಗಳನ್ನು ಹೇಳಲಾಗಿದೆ. ಶಾತವಾಹನರ ಕಾಲದ ರಥಗಳು, ಹೊಯ್ಸಳರ ಕಾಲದ ರಥಗಳು, ವಿಜಯನಗರ ಕಾಲದ ರಥಗಳು, ಹದಿನೆಂಟನೆಯ ಶತಮಾನದ ನಂತರದ ರಥಗಳನ್ನು ಇಲ್ಲಿ ಹೇಳಲಾಗಿದೆ. ಈ ಬೆಳವಣಿಗೆಯಲ್ಲಿ ಬದಲಾಗುತ್ತ ಬಂದಿರುವ ರಥಗಳ ಸ್ವರೂಪ. ಮಾಧ್ಯಮಗಳು, ಪ್ರಕಾರಗಳು ಮತ್ತು ಶೈಲಿಗಳನ್ನು ಗುರುತಿಸಲಾಗಿದೆ.

---

೧೨. ಶಿವಪ್ರಕಾಶ ತುಕ್ಕಣ್ಣವರ : ರ್ನಾಟಕದ ರಥಶಿಲ್ಪಕಲೆ, ಒಂದು ಅಧ್ಯಯನ: ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಅಪ್ರಕಟಿತ ಪ್ರಬಂಧ-೨೦೦೪

ರಥಗಳ ತಯಾರಿಕೆಯ ಹಿನ್ನೆಲೆಯಲ್ಲಿ ಬಳಕೆಗೊಳ್ಳುವ ಪರಿಕರಗಳ ಬಗ್ಗೆ ಮೂರನೆಯ ಅಧ್ಯಾಯವು ಬೆಳಕು ಬೀರುತ್ತದೆ. ರಥಗಳ ರಚನಾ ಮಾಧ್ಯಮದ ಹಿನ್ನೆಲೆಯಲ್ಲಿ ಬೇರೆ ಬೇರೆಯಾಗಿ ಬಳಕೆಗೊಳ್ಳುವ ಪರಿಕರಗಳ ಕುರಿತು, ವಿಂಗಡಿಸಿ ಅಧ್ಯಯನ ಮಾಡಲಾಗಿದೆ. ಶಿಲಾ ಮಾಧ್ಯಮದ ರಥಗಳನ್ನು ನಿರ್ಮಿಸುವಲ್ಲಿ ಚಿಕ್ಕ ದೊಡ್ಡ ವಿವಿಧ ಗಾತ್ರದ ಉಳಿಗಳು, ಸುತ್ತಿಗೆಗಳು, ಕಲ್ಲು ಕೊರೆಯುವ ಸಾಧನಗಳು ಮುಖ್ಯವಾಗಿ ಬೇಕಾಗುತ್ತವೆ. ಕಾಷ್ಠ ಮಾಧ್ಯಮದ ರಥ ಶಿಲ್ಪದ ರಚನೆಯಲ್ಲಿಯೂ ವಿವಿಧ ಗಾತ್ರದ ಉಳಿಗಳು, ಸುತ್ತಿಗೆಗಳು, ಕಲ್ಲುಗಳು, ಕೊಡಲಿಗಳು, ಮರ ಕೊರೆಯುವ ಗರಗಸದಂತಹ ಸಾಧನಗಳು, ಮೊದಲಿಗೆ ಆಯಾ ಶಿಲ್ಪದ ರೇಖಾಚಿತ್ರ ರಚನೆ ಮಾಡಿಕೊಳ್ಳಲು ಪೆನ್ಸಿಲ್, ಕಾಗದಗಳು, ಬಿಳಿಯಾದ ಹೊಸ ಲೋಹವನ್ನು ಕಾಯಿಸುವ ಮತ್ತು ಎರಕ ಹೊಯ್ಯುವ ಪರಿಕರಗಳು ಮತ್ತು ಲೋಹದ ಹಾಳೆಯನ್ನು ಬಡಿದು ಬೇಕಾದ ಆಕಾರಕ್ಕೆ ಪರಿವರ್ತಿಸಿಕೊಳ್ಳುವ ಪರಿಕರಗಳೆಂದು ವಿಭಿನ್ನವಾಗಿರುತ್ತವೆ. ಸಂಕೀರ್ಣ ರಥಗಳ ತಯಾರಿಕೆಯ ಆಯಾ ಸಂದರ್ಭಕ್ಕೆ ಅನುಸಾರವಾಗಿ, ಪ್ರಾದೇಶಿಕ ವಿಶಿಷ್ಟತೆ, ನಂಬಿಕೆ, ಆಚರಣೆ ಮತ್ತು ಲಭ್ಯ ಪರಿಕರಗಳನ್ನು ಬಳಸಿಕೊಂಡು ತಯಾರಿಸುವುದರಿಂದ ಅವು ನಿರ್ಧಿಷ್ಟವಾಗಿ ಹೇಳಲಾಗುವುದಿಲ್ಲ. ಸಂಕೀರ್ಣ ರಥಗಳಲ್ಲಿ ಹೂವಿನ ತೇರು, ತೆಪ್ಪದ ತೇರು, ತಟ್ಟಿತೇರುಗಳಂತಹ ರಥಗಳು ಬೇರೆ ಬೇರೆ ಪರಿಕರಗಳನ್ನು ಬಳಸಿಕೊಂಡು ರಚನೆಯಾಗುತ್ತವೆ. ಈ ಎಲ್ಲ ವಿವರಗಳು ಇಲ್ಲಿ ವಿವೇಚಿಸಲ್ಪಟ್ಟಿವೆ. ರಥಗಳ ತಯಾರಿಕೆಯ ವಿಧಾನವು ಶ್ರಮದಾಯಕವಾದ ಒಂದು ಕಲಾ ಪ್ರಕ್ರಿಯೆ. ಒಂದು ರಥವನ್ನು ತಯಾರಿಸುವುದು ಒಂದು ದೇವಾಲಯವನ್ನು ನಿರ್ಮಿಸಿದಂತೆ. ರಥಗಳ ತಯಾರಿಕೆಯ ವಿಧಿವಿಧಾನಗಳು ಮತ್ತು ರಚನಾ ಕ್ರಮಗಳ ಬಗ್ಗೆ ನಾಲ್ಕನೆಯ ಅಧ್ಯಾಯದಲ್ಲಿ ಹೇಳಲಾಗಿದೆ.

ರಥ ಶಿಲ್ಪಗಳ ತಯಾರಿಕೆಯನ್ನು ಮಾಧ್ಯಮಗಳ ಅನುಸಾರ ವಿಂಗಡಿಸಿ ವಿವರಿಸಲಾಗಿದೆ. ಶಿಲಾರಥ, ಕಾಷ್ಠರಥ, ಲೋಹರಥ, ಸಂಕೀರ್ಣ ರಥ, ಹೂವಿನ ತೇರು, ತೆಪ್ಪದ ತೇರು, ತಟ್ಟಿತೇರುಗಳ ರಚನಾ ಕ್ರಮಗಳನ್ನು ಇಲ್ಲಿ ಹೇಳಲಾಗಿದೆ. ನಾಡಿದಾದ್ಯಂತ ಇರುವ ರಥಗಳನ್ನು ಮಾಧ್ಯಮಗಳನುಸಾರ ಮತ್ತು ಆಕಾರ ವಿನ್ಯಾಸಗಳಿಗನುಸಾರವಾಗಿ ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಿರುವುದು ಐದನೆಯ ಅಧ್ಯಾಯದಲ್ಲಿ ಕಂಡು ಬರುತ್ತದೆ. ಅನೇಕ ದೇವಾಲಯ, ಮಠ ಮಾನ್ಯಗಳಲ್ಲಿ ವಿವಿಧ ಶೈಲಿಯ ರಥಗಳು ಕಂಡು ಬರುತ್ತವೆ. ಅವುಗಳನ್ನು ಮೇಲೆ ಹೇಳಿದಂತೆ ಆಯಾ ವಿಂಗಡಣೆಯ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ. ರಥಗಳು ದೇವಾಲಯಗಳಂತೆ ದ್ರಾವಿಡ, ನಾಗರ ಮತ್ತು ವೇಸರ ಶೈಲಿಯಲ್ಲಿ ರಚನೆಗೊಂಡಿವೆ. ಅಲ್ಲದೆ ಚೌಕ, ಅಷ್ಟಮ, ದ್ವಾದಶ, ವರ್ತುಳ, ಚತುಷ್ಕೋನ, ಹೀಗೆ ವಿವಿಧ ವಿನ್ಯಾಸಗಳಲ್ಲಿ ಕಂಡು ಬರುತ್ತವೆ. ಪ್ರಾದೇಶಿಕ ಅಂಶಗಳು ರಥ ನಿರ್ಮಾಣದ ಹಿನ್ನೆಲೆಯ ಮೇಲೆ ಪ್ರಭಾವ ಬೀರುತ್ತವೆ. ಈ ಎಲ್ಲ ಅಂಶಗಳನ್ನು ಪರಿಗಣಿಸಿ ಇಲ್ಲಿ ಅಧ್ಯಯನ ಮಾಡಲಾಗಿದೆ.

ಶಿಲಾರಥ, ಕಾಷ್ಠರಥ, ಲೋಹರಥ, ತೆಪ್ಪದರಥ, ಹೂವಿನ ತೇರು, ತಟ್ಟಿತೇರುಗಳ ವಿಂಗಡಣೆಯಲ್ಲಿ ಆಯಾ ವಿಂಗಡಣೆಯ ರಥಗಳು ಎಲ್ಲಿ ಯಾವ ದೇವಸ್ಥಾನದಲ್ಲಿ ಕಂಡು ಬರುತ್ತವೆ ಎಂಬುದನ್ನು ಹೇಳಿ ಅವುಗಳ ಶೈಲಿ, ಅಲ್ಲಿರುವ ಶಿಲ್ಪಕೃತಿಗಳು, ಚಿತ್ರಕಲಾ ಕೃತಿಗಳು, ವರ್ಣಲೇಪನ, ಅಲಂಕಾರಿಕ ರೀತಿ, ಒಟ್ಟು ಸ್ವರೂಪಗಳ ಕುರಿತು ವಿವರಿಸಲಾಗಿದೆ. ಗಾಲಿಗಳಿಂದ ಹಿಡಿದು ಕಳಸದವರೆಗಿನ ತೇರಿನ ಒಟ್ಟು ರೂಪದಲ್ಲಿ ಕಲಾತ್ಮಕ ವಿನ್ಯಾಸಗಳೇ ತುಂಬೊಕೊಂಡಿರುತ್ತವೆ. ಗಡ್ಡಿತೇರುಗಳಾಗಲಿ, ಕಟ್ಟುವ ತೇರುಗಳಾಗಲಿ ಅಲ್ಲಿ ಶಿಲ್ಪ ಇಲ್ಲವೆ ಚಿತ್ರಕೃತಿಗಳ ಅಲಂಕರಣವಿರುತ್ತವೆ. ಗಾಲಿಗಳ ಮೇಲ್ಭಾಗದಲ್ಲಿ

ಸಿಂಹಗಳ ಸಾಲು, ನಂತರ ಆನೆ ಮತ್ತು ಮಕರಗಳು, ಅದರ ಮೇಲೆ ಶಿವ, ಶರಣರು, ಸಾಧು ಸತ್ಪುರುಷರು, ಸಂತಮಹಾಂತರು, ದೇವತೆಗಳು, ಸಿದ್ಧಪುರುಷರು, ಪ್ರಾಣಿ ಪಕ್ಷಿಗಳು, ಎಲೆ-ಬಳ್ಳಿಗಳು, ವಿವಿಧ ನಕ್ಷಾವಿನ್ಯಾಸಗಳು, ಅಷ್ಟದಿಕ್ಪಾಲಕರು, ನವಗ್ರಹಗಳು, ದ್ವಾರಪಾಲಕರು, ಗಂಧರ್ವರು, ರಾಮಾಯಣ, ಮಹಾಭಾರತ, ದಶಾವತಾರ, ಪಂಚತಂತ್ರ, ಮಿಥುನ ಶಿಲ್ಪಗಳು ರಚನೆಯಾಗಿರುತ್ತವೆ. ಕಟ್ಟುವ ತೇರುಗಳು ಉತ್ಸವ ಸಂದರ್ಭದಲ್ಲಿ ನಿರ್ಮಿತವಾಗುತ್ತಿದ್ದು, ಅದರಲ್ಲಿ ನಂದಿ, ಹನಮಂತ, ಗರುಡ, ನವಿಲು, ಮಂಗ ಒಳಗೊಂಡಂತೆ ವಿವಿಧ ಪ್ರಾಣಿ-ಪಕ್ಷಿಗಳು, ಆಯಾ ದೇವರುಗಳ ಮೂರ್ತಿಗಳು, ಋಷಿಮುನಿಗಳು, ಸಾಧು-ಸಂತರ ಶಿಲ್ಪಗಳನ್ನು ಬಣ್ಣದ ಲೇಪನದಿಂದ ಅಲಂಕರಣಗೊಳಿಸಿ ಪ್ರತಿಷ್ಠಾಪಿಸಲಾಗಿರುತ್ತದೆ. ತಟ್ಟಿತೇರುಗಳಲ್ಲಿ ಬಣ್ಣ ಬಣ್ಣದ ಚಿತ್ರಗಳಿಂದ ರಚಿಸಲ್ಪಟ್ಟ ಬಟ್ಟೆಯನ್ನು ಕಟ್ಟುತ್ತಾರೆ. ಇಲ್ಲಿಯೂ ಆಯಾ ದೇವಸ್ಥಾನದ ದೇವರು, ದ್ವಾರಪಾಲಕರು, ಹನುಮಂತ, ನಂದಿ, ಗರುಡ, ಸೂರ್ಯ-ಚಂದ್ರ, ಮುಂತಾದ ಚಿತ್ರಗಳಿರುತ್ತವೆ. ಇಂತಹ ಅನೇಕ ವಿಷಯಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. ರಥಗಳನ್ನು ನಿರ್ಮಿಸುವ ಶಿಲ್ಪಕಾರರ ಬದುಕು, ಸ್ಥಿತಿಗತಿಗಳು, ಅವರ ಆದಾಯದ ಮೂಲಗಳು, ಮುಂತಾದ ಸಂಗತಿಗಳ ಜೊತೆಗೆ ಅವರ ಕಲಾಬದುಕನ್ನು ಕಟ್ಟಿಕೊಡುವ ಪ್ರಯತ್ನ ಏಳನೆಯ ಅಧ್ಯಾಯದಲ್ಲಿದೆ. ಯಾವುದೇ ಒಂದು ಕಲಾ ಪರಂಪರೆ ಬೆಳೆಯಲು ಅದರ ಪೋಷಕರ ಪಾತ್ರ ಮಹತ್ವ ಪೂರ್ಣವಾಗಿರುತ್ತದೆ. ಪ್ರಾಚೀನ ಕಾಲದಿಂದ ಇಂದಿನವರೆಗೂ ವೈಭವಯುತವಾಗಿ ಬೆಳೆದು ಬಂದಿರುವ ರಥ ಶಿಲ್ಪಕಲೆಯ ಪರಂಪರೆಗೆ ಅದರ ಪೋಷಕರು ಬಹುಮುಖ್ಯ ಕಾರಣರಾಗಿದ್ದು ಅವರ ಬಗ್ಗೆಯೂ ಈ ಅಧ್ಯಾಯದಲ್ಲಿ ಹೇಳಲಾಗಿದೆ. ಭಾರತದಲ್ಲಿ ಸಿಂಧೂ ನಾಗರಿಕತೆಯ ಕಾಲದಿಂದ ಇಂದಿನವರೆಗೂ ಅನೇಕ ರಥಶಿಲ್ಪಗಳನ್ನು ರಾಜಮಹಾರಾಜರು, ಸಂಸ್ಥಾನಿಕರು, ಸಾಮಂತರು, ಪ್ರಮುಖರು ಮಾತ್ರವಲ್ಲದೇ ಸಾಮಾನ್ಯ ಜನರೂ ಪೋಷಿಸುತ್ತಾ ಬಂದಿದ್ದಾರೆ. ಆ ವಿವರಗಳು ಇಲ್ಲಿ ಹೇಳಲ್ಪಟ್ಟಿವೆ.

ರಥ ಶಿಲ್ಪ ಕಲಾವಿದರ ಪ್ರಾಚೀನ ಉಲ್ಲೇಖಗಳು ಹೆಚ್ಚಾಗಿ ಲಭ್ಯವಾಗಿರುವುದಿಲ್ಲವಾದರೂ ವಿಶ್ವಕರ್ಮ, ಮಯ, ಮಾಂಡವ್ಯ, ನಾರದಮುನಿಯವರ ಬಗ್ಗೆ ಪೌರಾಣಿಕ ಸಂಗತಿಗಳು ತಿಳಿಯುತ್ತವೆ. ಐತಿಹಾಸಿಕವಾಗಿ ಲಭ್ಯವಿದ್ದ ಕೆಲವು ರಥ ಶಿಲ್ಪಕಾರರ ಉಲ್ಲೇಖಗಳನ್ನು ಬಳಸಿಕೊಂಡು ಸಮಕಾಲೀನ ರಥ ಶಿಲ್ಪಕಲೆಗಳ ಬಗ್ಗೆ ಹೆಚ್ಚಿನ ಒತ್ತು ಕೊಡಲಾಗಿದೆ. ಇವರು ರಚಿಸಿದ ರಥಗಳು, ರಥಗಳ ರಚನಾ ವಿಧಾನಗಳು, ಅವರು ಪಡೆದಿರುವ ಮಾನ ಸಮ್ಮಾನಗಳು, ಪ್ರಶಸ್ತಿ ಪುರಸ್ಕಾರಗಳು, ಬಿರುದು ಬಾವಲಿಗಳು, ಶಿಕ್ಷಣದ ಹಿನ್ನೆಲೆ ಮುಂತಾದ ಅಂಶಗಳ ಬಗ್ಗೆಯೂ ಇಲ್ಲಿ ವಿವೇಚಿಸಲಾಗಿದೆ. ಎಂಟನೆಯ ಅಧ್ಯಾಯದಲ್ಲಿ ರಥ ಶಿಲ್ಪಕಲೆಯ ಆಪತ್ತುಗಳು ಮತ್ತು ಸಂರಕ್ಷಣಾ ವಿಧಾನಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಇಲ್ಲಿ ರಥಗಳು ಯಾವ ಯಾವ ಕಾರಣಗಳಿಂದ ಹಾಳಾಗುತ್ತವೆ. ಅವುಗಳನ್ನು ಹೆಚ್ಚು ಕಾಲ ಬಾಳಿಕೆ ಬರಲು ಕೈಗೊಳ್ಳಬೇಕಾದ ಕ್ರಮಗಳ ವಿವೇಚನೆ ಇಲ್ಲಿದೆ.

ಬಿಸಿಲು, ಮಳೆ, ಗಾಳಿಗಳಿಂದ ರಥಗಳನ್ನು ಸಂರಕ್ಷಿಸುವುದು, ಹುಳು, ಗೆದ್ದಲುಗಳಿಂದ ಸಂರಕ್ಷಿಸಲು ನಿಯಮಿತವಾಗಿ ಎಣ್ಣೆಯನ್ನು ಲೇಪಿಸುವುದು, ಹೀಗೆ ಎಣ್ಣೆಯನ್ನು ಲೇಪಿಸುವಾಗ ಅದರಲ್ಲಿ ಹುರಿಮಂಜು ಎಂಬ ಮಣ್ಣನ್ನು ಮಿಶ್ರಣ ಮಾಡುವುದುರಿಂದ ಅದು ಕ್ರಿಮಿ ನಾಶಕವಾಗಿ ಕೆಲಸ ಮಾಡುತ್ತದೆ. ಇಂತಹ ಕ್ರಮಗಳಲ್ಲದೇ ಕೆಲವು ರಥಗಳಿಗೆ ಉತ್ಸವದ ನಂತರ ನಿಲ್ಲಲು ಮನೆಗಳಿಲ್ಲ. ಅವುಗಳಿಗೆ ಸುಭದ್ರವಾದ ಮನೆ ನಿರ್ಮಿಸುವುದು. ಹೀಗೆ ಹಲವಾರು ಕ್ರಮಗಳನ್ನು ರಥಗಳ ಸಂರಕ್ಷಣೆಯ ಹಿನ್ನೆಲೆಯಲ್ಲಿ ಹೇಳಲಾಗಿದೆ. ಒಂಭತ್ತನೆಯ ಅಧ್ಯಾಯ ಸಮಾರೋಪವಾಗಿದ್ದು ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ.

ಪ್ರಸ್ತುತ ಪ್ರಬಂಧದಿಂದ ಕಲಾಕ್ಷೇತ್ರದ ಹಲವಾರು ಅಂಶಗಳು ಬೆಳಕು ಕಂಡಿವೆ. ದೇವಾಲಯದ ಪ್ರತೀಕವಾದ ರಥಗಳು ಶಾಸ್ತ್ರಸಮ್ಮತವಾದ ವಿಧಾನಗಳಿಂದಲೇ ರಚನೆಯಾಗುತ್ತವೆ. ರಥಗಳು ಪ್ರಾದೇಶಿಕವಾಗಿ ವಿಶೇಷ ಲಕ್ಷಣಗಳನ್ನು ಹೊಂದಿರುವುದು ಈ ಅಧ್ಯಯನದಿಂದ ತಿಳಿದು ಬರುತ್ತದೆ. ರಥಗಳು ಕೇವಲ ಶಿಲ್ಪಕಲೆಯನ್ನಷ್ಟೆ ಅಲ್ಲದೇ ಚಿತ್ರಕಲೆಯನ್ನು ಮೈಗೂಡಿಸಿಕೊಂಡು ಉಭಯ ಕಲೆಗಳನ್ನು ಬೆಳೆಸಿಕೊಂಡು ಬಂದಿವೆ.

**ಕರ್ನಾಟಕದ ಹಸ್ತಪ್ರತಿ ಚಿತ್ರಕಲೆ, ಒಂದು ಅಧ್ಯಯನ :**

ಪ್ರಾಚೀನ ಚಿತ್ರಕಲಾ ಪ್ರಕಾರಗಳಲ್ಲಿ ಭಿತ್ತಿಚಿತ್ರಗಳು ಮತ್ತು ಕಿರುರೂಪ ಚಿತ್ರಗಳನ್ನು ಹೊರತುಪಡಿಸಿ ಅತ್ಯಂತ ಪ್ರಮುಖವಾಗಿರುವ ಕಲಾಕೃತಿಗಳೆಂದರೆ ಹಸ್ತಪ್ರತಿ ಚಿತ್ರಗಳೇ ಆಗಿವೆ. ಕರ್ನಾಟಕದ ಹಸ್ತಪ್ರತಿ ಚಿತ್ರಕಲೆ, ಒಂದು ಅಧ್ಯಯನ ಎಂಬ ವಿಷಯ ಕುರಿತು ಎಚ್.ಎನ್.ಚಿತ್ರಗಾರರು ಡಾ.ಎಸ್.ಸಿ.ಪಾಟೀಲರ ಮಾರ್ಗದರ್ಶನದಲ್ಲಿ ಅಧ್ಯಯನ ಮಾಡಿದ್ದಾರೆ.[೧೩] ಈ ಪ್ರಬಂಧವು ಒಟ್ಟು ಒಂಭತ್ತು ಅಧ್ಯಾಯಗಳಲ್ಲಿ ಹರಡಿಕೊಂಡು ವಿಶ್ಲೇಷಿಸಲ್ಪಟ್ಟಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನಗಳ ಜೊತೆಗೆ ಪ್ರಸ್ತುತತೆ, ಅವಶ್ಯಕತೆಗಳನ್ನು ನಿರೂಪಿಸಲಾಗಿದೆ.

ಕರ್ನಾಟಕದ ಹಸ್ತಪ್ರತಿ ಚಿತ್ರಕಲೆಯ ಇತಿಹಾಸವನ್ನು ಕ್ರಮಬದ್ಧವಾಗಿ ಕಟ್ಟಿಕೊಡುವ ಪ್ರಯತ್ನವು ಎರಡನೆಯ ಅಧ್ಯಾಯದಲ್ಲಿದೆ. ಇಲ್ಲಿ ಭಾರತದ ಹಸ್ತಪ್ರತಿ ಚಿತ್ರಕಲೆಯ ಇತಿಹಾಸವನ್ನು ಸ್ಥೂಲವಾಗಿ ಗಮನಿಸಿ, ಕರ್ನಾಟಕದ ಹಸ್ತಪ್ರತಿಚಿತ್ರಕಲೆಯ ಇತಿಹಾಸವನ್ನು ಕ್ರಮಾನುಗತವಾಗಿ ರೂಪಿಸಲಾಗಿದೆ. ಹಸ್ತಪ್ರತಿಗಳು ಲಭ್ಯವಿಲ್ಲದ ಕಾಲಮಾನದಲ್ಲಿ ಸಮಕಾಲೀನ ಭಿತ್ತಿಚಿತ್ರಗಳು, ಶಾಸನ ಬರಹಗಳು, ಇನ್ನಿತರ ಪ್ರಾಚೀನ ಶಾಸ್ತ್ರಗ್ರಂಥಗಳ ಉಲ್ಲೇಖಗಳನ್ನು ಬಳಸಿಕೊಂಡು ಇತಿಹಾಸ ರೂಪಿಸಲಾಗಿದೆ.

ಹಸ್ತಪ್ರತಿಚಿತ್ರಕಲೆಯ ರಚನಾವಿಧಾನ ಮತ್ತು ಪರಿಕರಗಳ ಕುರಿತಾಗಿ ಮೂರನೆಯ ಅಧ್ಯಾಯಲ್ಲಿ ಹೇಳಲಾಗಿದೆ. ಹಸ್ತಪ್ರತಿಯ ಸ್ವರೂಪ, ಲಕ್ಷಣಗಳನ್ನು ವಿವಿಧ ರೀತಿಯಲ್ಲಿ ವಿಂಗಡಿಸಿಕೊಂಡಿದ್ದು ಅವುಗಳ ರಚನಾಕ್ರಮ ಮತ್ತು ಚಿತ್ರಬರೆಯುವ ವಿಧಾನಗಳನ್ನು ಪ್ರತ್ಯೇಕವಾಗಿ ವಿವೇಚಿಸಲಾಗಿದೆ. ತಾಳೆಗರಿ ಮಾಧ್ಯಮದ ಹಸ್ತಪ್ರತಿ, ಕಾಗದದ ಹಸ್ತಪ್ರತಿ, ಬಟ್ಟೆ ಮಾಧ್ಯಮದ ಹಸ್ತಪ್ರತಿ, ರಟ್ಟು ಮತ್ತು ಮರದ ಹಸ್ತಪ್ರತಿ ಎಂಬುದಾಗಿ ವರ್ಗೀಕರಿಸಲಾಗಿದೆ. ಯಾವುದೆ ಹಸ್ತಪ್ರತಿಯ ಮೇಲೆ ಚಿತ್ರಬರೆಯುವ ಮೊದಲು ಅವುಗಳನ್ನು ಸಂಸ್ಕರಿಸಿಕೊಳ್ಳಬೇಕು. ನಂತರ ಅವುಗಳ ಮೇಲೆ ತೆಳುವಾದ ಭಿತ್ತಿಯನ್ನು ಲೇಪಿಸಿ ಚಿತ್ರಬರೆಯಬೇಕು. ಆ ಮೇಲೆ ವರ್ಣಲೇಪನ ಮಾಡಿ ನೆರಳು-ಬೆಳಕಿನ ವಿನ್ಯಾಸ ಮೂಡಿಸುವುದು, ಆಕಾರಗಳಲ್ಲಿ ದುಂಡುತನವನ್ನು ತರುವುದು, ಹಿನ್ನೆಲೆ-ಮುನ್ನೆಲೆಗಳನ್ನು ಚಿತ್ರಿಸುವುದು ಹೀಗೆ ಹಲವು ರೀತಿಯಲ್ಲಿ ಪ್ರಾಚೀನರು ಹಸ್ತಪ್ರತಿಚಿತ್ರಗಳನ್ನು ರಚಿಸುತ್ತಿದ್ದ ವಿವರಗಳನ್ನು ಹೇಳಲಾಗಿದೆ. ಹಸ್ತಪ್ರತಿ ಚಿತ್ರಕಲೆಯ ಪರಿಕರಗಳನ್ನು ಇದೇ ಅಧ್ಯಾಯದಲ್ಲಿ ವಿವರಿಸಲಾಗಿದೆ. ಹಸ್ತಪ್ರತಿಗಳಿಂದ ಹಿಡಿದು ಚಿತ್ರರಚನೆಯ ವರೆಗೆ ಬಳಸಿಕೊಳ್ಳುವ ವಿವಿಧ ಪರಿಕರಗಳು ಇಲ್ಲಿ ಅಧ್ಯಯನಕ್ಕೊಳಪಟ್ಟಿವೆ.

ಕರ್ನಾಟಕದ ಹಸ್ತಪ್ರತಿ ಚಿತ್ರಕಲೆಯ ಕ್ಷೇತ್ರದಲ್ಲಿ ವಿವಿಧ ಶೈಲಿ ಮತ್ತು ವಿವಿಧ ಧರ್ಮಗಳಿಗೆ ಸಂಬಂಧಿಸಿದ ಹಸ್ತಪ್ರತಿಗಳಿದ್ದು, ಅವುಗಳನ್ನು ವಿಷಯಾನುಸಾರ, ಶೈಲಿಗನುಸಾರ ಮತ್ತು ಮತಾನುಸಾರ ವರ್ಗೀಕರಿಸಿ ವಿವೇಚಿಸಿರುವುದು ನಾಲ್ಕನೆಯ ಅಧ್ಯಾಯದಲ್ಲಿ ಕಂಡು ಬರುತ್ತದೆ. ಜನಪದ ಮೂಲದ ಹಸ್ತಪ್ರತಿ ಚಿತ್ರಕಲೆ, ಶಿಷ್ಟಪದ ಮೂಲದ ಹಸ್ತಪ್ರತಿ ಚಿತ್ರಕಲೆ ಎಂದು ವಿಂಗಡಿಸಿದ್ದು, ಇವೆರಡೂ

೧೩. ಎಚ್.ಎನ್.ಚಿತ್ರಗಾರ : ಕರ್ನಾಟಕದ ಹಸ್ತಪ್ರತಿ ಚಿತ್ರಕಲೆ, ಒಂದು ಅಧ್ಯಯನ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾದ ಅಪ್ರಕಟಿತ ಪಿಎಚ್.ಡಿ.

ಪ್ರಕಾರದ ಹಸ್ತಪ್ರತಿ ಚಿತ್ರಕಲಾ ಪ್ರಕಾರಗಳಲ್ಲಿನ ವೈಲಕ್ಷಣಗಳನ್ನು ಹೇಳಿದೆ. ಅಲ್ಲದೇ ಇವೆರಡರಲ್ಲಿ ಕಂಡುಬರುವ ವಸ್ತು ವಿಷಯಗಳು, ರೇಖಾವಿನ್ಯಾಸ, ಬಣ್ಣಗಾರಿಕೆ, ಸಂಯೋಜನಾ ರೀತಿ ಮುಂತಾದವುಗಳು ಇಲ್ಲಿ ವಿವೇಚನೆಗೊಳಪಟ್ಟಿವೆ. ಜನಪದ ಹಸ್ತಪ್ರತಿ ಚಿತ್ರಕಲಾವಿದರು ತಮ್ಮ ಸಹಜ ಅಭಿವ್ಯಕ್ತಿಯ ಮೂಲಕ ಕೃತಿ ರಚಿಸುತ್ತ ಬಂದಿದ್ದಾರೆ. ಗಿಳಿಶಕುನದ ಚಿತ್ರಗಳು, ರಾಮಕೊಂಡಡಿಗಳಲ್ಲಿನ ಭವಿಷ್ಯ ಹೇಳುವ ಚಿತ್ರಮಯ ಪುಸ್ತಕಗಳು, ಕೆಲವು ಮಾಟ, ಮಂತ್ರ, ಮೋಡಿ ವಿದ್ಯೆಯ ಬಗೆಗಿರುವ ಗ್ರಂಥ ಚಿತ್ರಗಳು ಜನಪದ ಶೈಲಿಯಲ್ಲಿವೆ. ಶಿಷ್ಟಪದ ಹಸ್ತಪ್ರತಿ ಚಿತ್ರಕಲಾ ಶೈಲಿಯಲ್ಲಿ ಅನೇಕ ಧಾರ್ಮಿಕ ಗ್ರಂಥಗಳು ಒಳಗೊಳ್ಳುತ್ತವೆ. ಈ ಹಿನ್ನೆಲೆಯಲ್ಲಿ ಶೈವ, ವೈಷ್ಣವ, ಶಾಕ್ತ, ಹಸ್ತಪ್ರತಿ ಚಿತ್ರಗಳಲ್ಲದೇ ಮುಸ್ಲಿಂ ಹಸ್ತಪ್ರತಿ ಚಿತ್ರಕಲಾ ಶೈಲಿಗಳ ಬಗ್ಗೆ ಇಲ್ಲಿ ಗಮನಿಸಿ ಅಧ್ಯಯನ ಮಾಡಲಾಗಿದೆ. ಆಯಾ ಹಸ್ತಪ್ರತಿಗಳಲ್ಲಿನ ಚಿತ್ರಗಳ ವಸ್ತು ವಿಷಯ, ಬಣ್ಣಗಾರಿಕೆ, ರೇಖಾಲಾವಣ್ಯ, ಸಂಯೋಜನೆ, ಆಕಾರಗಳ ನಿಲುವು ಭಂಗಿಗಳು, ಮೈವಳಿಕೆ, ಚಿತ್ರಶೈಲಿ ಕುರಿತಾಗಿ ವಿವೇಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಹಸ್ತಪ್ರತಿ ಚಿತ್ರಕಲೆಯ ಶೈಲಿ, ಪ್ರಭಾವ, ಪ್ರೇರಣೆ ಎಂಬುದಾಗಿ ಪ್ರತ್ಯೇಕವಾಗಿ ಚರ್ಚಿಸಲಾಗಿದೆ. ಕರ್ನಾಟಕದಲ್ಲಿನ ವಿವಿಧ ರೀತಿಯ ಹಸ್ತಪ್ರತಿ ಚಿತ್ರಗಳಲ್ಲಿ ಹಲವಾರು ಕಲಾಶೈಲಿಗಳು ಅಡಕಗೊಂಡಿವೆ. ಶೈವ, ವೈಷ್ಣವ, ಶಾಕ್ತ, ಮುಸ್ಲಿಂ ಹಸ್ತಪ್ರತಿಗಳಲ್ಲಿ ಪ್ರತ್ಯೇಕ ಚಿತ್ರಕಲಾ ಶೈಲಿಗಳನ್ನು ಗುರುತಿಸಬಹುದು. ಇವೆಲ್ಲವುಗಳ ಬಗ್ಗೆ ಇಲ್ಲಿ ಹೇಳಿದೆ. ಕರ್ನಾಟಕದ ಮೈಸೂರು ಶೈಲಿಯಲ್ಲಿ ವಿಜಯನಗರ ಮತ್ತು ನಾಯಕ ಅರಸರ ಕಲಾಲಕ್ಷಣಗಳು ಬೆರೆತುಕೊಂಡಿದ್ದರೆ, ಸುರಪುರ ಶೈಲಿಯಲ್ಲಿ ವಿಜಯನಗರ, ಆಂಧ್ರದ ಕಾಕತೀಯರು, ಪರ್ಶಿಯನ್ ಮತ್ತು ಬ್ರಿಟಿಷ್ (ಪಾಶ್ಚಾತ್ಯ) ಕಲಾಶೈಲಿಗಳ ಅಂಶಗಳು ಬೆರೆತುಕೊಂಡಿರುವ ಸಂಗತಿ ತಿಳಿದುಬರುವುದು. ಹಾಗೆಯೇ ದಖನ್ ಶೈಲಿ ಮತ್ತು ಇತರ ಮುಸ್ಲಿಂ ಚಿತ್ರಕಲೆಗಳಲ್ಲಿ ಭಾರತೀಯ ಮತ್ತು ಪರ್ಶಿಯನ್ ಕಲಾಶೈಲಿಗಳ ಸಂಗಮ ಕಂಡು ಬರುವುದು. ಈ ರೀತಿ ಕರ್ನಾಟಕದ ಹಸ್ತಪ್ರತಿ ಚಿತ್ರ ಶೈಲಿಗಳ ಮೇಲೆ ಯಾವ ಯಾವ ಶೈಲಿಗಳು ಪ್ರಭಾವ ಬೀರಿವೆ? ಯಾವುದರಿಂದ ಪ್ರೇರಣೆಗೊಂಡಿವೆ ಎನ್ನುವ ಅಂಶಗಳನ್ನು ಇಲ್ಲಿ ವಿವೇಚಿಸಲಾಗಿದೆ.ಹಸ್ತಪ್ರತಿ ಚಿತ್ರಕಲೆಯ ಪೋಷಕರು ಮತ್ತು ಕಲಾವಿದರ ಕುರಿತು ಆರನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಇಲ್ಲಿ ಮೊದಲಿಗೆ ಪೋಷಕರ ಬಗ್ಗೆ ಹೇಳಿ ನಂತರ ಕಲಾವಿದರಕುರಿತು ವಿವರಿಸಿದೆ.

ಕರ್ನಾಟಕದ ಜನತೆ ಹಸ್ತಪ್ರತಿ ಚಿತ್ರಗಳನ್ನು ರಚಿಸುವ ಮೂಲಕ ಕಲಾಕಾರರಾಗಿ, ಬರೆಸುವ ಮೂಲಕ ಪೋಷಕರಾಗಿ ಈ ಪರಂಪರೆ ನಿಲ್ಲದಂತೆ ಬೆಳೆಸಿಕೊಂಡು ಬಂದಿದ್ದಾರೆ. ರಾಜ ಮಹಾರಾಜರು, ಸಾಮಂತರು, ಸಂಸ್ಥಾನಿಕರು, ಮಂತ್ರಿ, ಅಧಿಕಾರಿಗಳು, ಊರಿನ ಪ್ರಮುಖರು, ಶ್ರೀಮಂತ ವರ್ಗದವರು, ಗೌಡರು, ದೇಸಾಯಿಗಳು, ಜನಸಾಮಾನ್ಯರು ಮಾತ್ರವಲ್ಲದೆ ಮಠಮಾನ್ಯದ ಸ್ವಾಮಿಗಳು, ಧರ್ಮಾಧಿಕಾರಿಗಳು ಹಸ್ತಪ್ರತಿ ಚಿತ್ರಕಲೆಗೆ ಪ್ರೋತ್ಸಾಹ ನೀಡಿದ್ದಾರೆ. ಶೈವರು, ಬೌದ್ಧರು, ವೈಷ್ಣವರು, ವೀರಶೈವರು, ಶಾಕ್ತಪಂಥೀಯರು, ಮುಸ್ಲಿಮರು ಈ ನಾಡಿನ ಹಸ್ತಪ್ರತಿ ಚಿತ್ರಕಲೆಗೆ ತಮ್ಮ ಕೊಡುಗೆ ನೀಡಿದ್ದಾರೆ. ಇಂತಹ ಅಂಶಗಳನ್ನು ಇಲ್ಲಿ ಹೇಳಿದೆ.ಹಸ್ತಪ್ರತಿ ಚಿತ್ರಕಲಾವಿದರ ಬಗೆಗಿನ ವಿವರಗಳು ಹೆಚ್ಚಿನ ಪ್ರಮಾಣದಲ್ಲಿ ಲಭ್ಯವಾಗಿಲ್ಲ. ಕೆಲವು ಶಾಸನ ಬರಹಗಳು, ಪ್ರಾಚೀನ ಗ್ರಂಥಗಳು, ಶಿಲ್ಪ ಮತ್ತು ಚಿತ್ರಕಲಾ ಕೃತಿಗಳಲ್ಲಿನ ಕಲಾವಿದರ ಉಲ್ಲೇಖಗಳನ್ನು ಬಳಸಿಕೊಂಡು ಹಸ್ತಪ್ರತಿ ಚಿತ್ರಕಲೆಯ ಪ್ರಾಚೀನ ಪರಂಪರೆಯನ್ನು ಬಿಂಬಿಸಲು ಪ್ರಯತ್ನಿಸಲಾಗಿದೆ. ಈ ಕಲಾವಿದರ ಕಲಾಬದುಕು, ಅವರ ಚಿತ್ರರಚನಾ ಶೈಲಿ, ಅಂದಿನ ದಿನಗಳಲ್ಲಿ ಸಮಾಜದಲ್ಲಿ ಅವರಿಗಿದ್ದ ಸ್ಥಾನಮಾನಗಳು, ಅವರ ಬಿರುದು, ಮಾನ

ಸಮ್ಮಾನಗಳು, ಚಿತ್ರರಚನೆಯ ಸಂಭಾವನೆ ಮುಂತಾದ ವಿಚಾರಣೆಗಳು ಇಲ್ಲಿ ವಿವೇಚಿಸಲ್ಪಟ್ಟಿವೆ.ಏಳನೆಯ ಅಧ್ಯಾಯದಲ್ಲಿ ಹಸ್ತಪ್ರತಿಯಲ್ಲಿನ ವಸ್ತು ವಿಷಯವನ್ನು ಆಧಾರವಾಗಿರಿಸಿ, ಅವುಗಳಲ್ಲಿನ ಆಕಾರಗಳು, ಸಂಯೋಜನಾ ರೀತಿ, ರೇಖಾಲಾಲಿತ್ಯ, ವರ್ಣವಿನ್ಯಾಸ, ಮೈವಳಿಕೆ ಮುಂತಾದ ಅಂಶಗಳನ್ನು ಮೊದಲಿಗೆ ಗಮನಿಸಿ ನಂತರ ಆ ಚಿತ್ರದಲ್ಲಿ ಕಂಡುಬರುವ ಅಲಂಕಾರ, ಔಚಿತ್ಯ, ಮಾನಸಿಕ ದೂರ, ಶೃಂಗಾರ, ಇಂತಹ ವಿಚಾರಗಳ ಬಗ್ಗೆ ಸೌಂದರ್ಯ ಮೀಮಾಂಸೆಯ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ.

ನಮ್ಮ ಪ್ರಾಚೀನ ಪರಂಪರೆಯ ಅಮೂಲ್ಯ ಸಂಪತ್ತಾದ ಹಸ್ತಪ್ರತಿಕೃತಿಗಳಿಗೆ ಉಂಟಾಗುವ ಆಪತ್ತು ಮತ್ತು ಸಂರಕ್ಷಣಾ ಕ್ರಮಗಳ ಬಗ್ಗೆ ಎಂಟನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಹಸ್ತಪ್ರತಿ ಚಿತ್ರಕಲೆಯ ಆಪತ್ತುಗಳನ್ನು ವರ್ಗೀಕರಿಸಿಕೊಂಡು ವಿಶ್ಲೇಷಿಸಲಾಗಿದೆ. ಪ್ರಾಕೃತಿಕ ಆಪತ್ತುಗಳು, ಸ್ವಾಭಾವಿಕ ಆಪತ್ತುಗಳು, ವ್ಯಕ್ತಿಗತ ಆಪತ್ತುಗಳೆಂದು ವಿಂಗಡಿಸಿಕೊಂಡಿದ್ದು, ಈ ಮೂರರಲ್ಲಿ ಮತ್ತೆ ಉಪ ವರ್ಗೀಕರಣ ಮಾಡಿಕೊಳ್ಳಲಾಗಿದೆ. ಸ್ವಾಭಾವಿಕ ಆಪತ್ತುಗಳಲ್ಲಿ ಕಾಲಮಾನದ ಪ್ರಭಾವದಿಂದ ಹಸ್ತಪ್ರತಿಗಳು ಸವಕಳಿಯಾಗಿ ನಾಶ ಹೊಂದುವುದು, ಗೆದ್ದಲು, ಹುಳು, ಜೇಡ, ಬೆಳ್ಳಿಮೀನುಗಳಂತಹ ಕೀಟಗಳು ಹತ್ತುವುದು, ಇಲ್ಲವೆ ಜಿರಳೆ, ಇಲಿ, ಹೆಗ್ಗಣಗಳಂತಹ ಕಶೇರುಕಗಳು ಕಡಿದು ನಾಶಪಡಿಸುವುದು ಮುಂತಾದವುಗಳನ್ನು ಪರಿಶೀಲಿಸಿದೆ. ಪ್ರಾಕೃತಿಕ ಆಪತ್ತುಗಳಲ್ಲಿ ನೀರು,. ಬೆಂಕಿ, ಗಾಳಿ, ಭೂಕಂಪಗಳಂತಹ ಕಾರಣಗಳನ್ನು ಹೇಳಿದೆ. ವ್ಯಕ್ತಿಗತವಾಗಿರುವ ಆಪತ್ತುಗಳಲ್ಲಿ ಉದ್ದೇಶ ಪೂರ್ವಕ ಎಸಗುವ ಆಪತ್ತುಗಳು ಮತ್ತು ಅನುದ್ದೇಶ ಪೂರ್ವಕ ನಡೆಯುವ ಆಪತ್ತುಗಳು ಎಂದು ವಿಂಗಡಿಸಲಾಗಿದೆ. ಹೀಗೆ ಹಲವಾರು ಆಪತ್ತುಗಳಿಂದ ನಾಶವಾಗುವ ಹಸ್ತಪ್ರತಿ ಚಿತ್ರಕಲೆಗಳನ್ನು ಯಾವ ರೀತಿಯಲ್ಲಿ ಸಂರಕ್ಷಣೆಗೆ ಒಳಪಡಿಸಬೇಕೆಂದ ಬಗ್ಗೆ ಇಲ್ಲಿ ವಿವೇಚಿಸಲಾಗಿದೆ. ರಾಸಾಯನಿಕ ಲೇಪಿಸುವುದು, ಹವಾ ನಿಯಂತ್ರಿತ ಕೊಠಡಿ, ಪೆಟ್ಟಿಗೆಯಲ್ಲಿ ಕಾಯ್ದಿಡುವುದು, ಅದರಲ್ಲಿನ ಚಿತ್ರಗಳನ್ನು ಛಾಯಾಚಿತ್ರ ಮಾಡಿ, ವಿಡಿಯೋ ಚಿತ್ರೀಕರಣ ಮಾಡಿ, ಸ್ಲೈಡುಗಳನ್ನು ಮಾಡಿ, ಮೈಕ್ರೋಫಿಲಂನಲ್ಲಿ ಅಳವಡಿಸುವ ಮೂಲಕ ಕಾಯ್ದಿಡಬಹುದಾಗಿದೆ. ಜೊತೆಗೆ ಜನರಿಗೆ ಅವುಗಳ ಮಹತ್ವವನ್ನು ತಿಳಿಸಿ ನಾಶ ಪಡಿಸದಂತೆ ತಡೆಯಬಹುದಾಗಿದೆ. ಹೀಗೆ ಅನೇಕ ಸಂರಕ್ಷಣಾ ಕ್ರಮಗಳು ಹೇಳಲ್ಪಟ್ಟಿವೆ. ಒಂಭತ್ತನೆಯ ಅಧ್ಯಾಯವು ಸಮಾರೋಪವಾಗಿದ್ದು, ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ. ಪ್ರಸ್ತುತ ಹಸ್ತಪ್ರತಿ ಚಿತ್ರಕಲೆಯ ಬಗ್ಗೆ ಇರುವ ಈ ಪ್ರಬಂಧದಿಂದ ಕಲಾ ಕ್ಷೇತ್ರಕ್ಕೆ, ಕಲಾಸಾಹಿತ್ಯಕ್ಕೆ ಅನೇಕ ಹೊಸ ವಿಷಯಗಳು ಸೇರ್ಪಡೆಯಾಗಿವೆ. ಕರ್ನಾಟಕ ಹಸ್ತಪ್ರತಿ ಚಿತ್ರಕಲೆ ಕನ್ನಡ ಸಾಹಿತ್ಯ, ಇತಿಹಾಸ ಮತ್ತು ಚಿತ್ರಕಲೆಗಳಾಗಿರುವ ಸಂಬಂಧದ ಕೊಂಡಿ ಹೇಗೆ ಬೆಳೆದುಕೊಂಡು ಬಂದಿದೆ ಎಂಬುವುದನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕರ್ನಾಟಕ ಹಸ್ತಪ್ರತಿ ಚಿತ್ರಕಲೆಗಳಲ್ಲಿನ ಸೌಂದರ್ಯ ಸಮೀಕ್ಷೆಯನ್ನು ಮಾಡಲಾಗಿದೆ. ಮುಖ್ಯವಾಗಿ ರೇಖಾಲಾಲಿತ್ಯ, ವರ್ಣವಿನ್ಯಾಸ, ಸಂಯೋಜನೆ ಮುಂತಾದ ವಿಚಾರಗಳು ಇಲ್ಲಿ ವಿವೇಚಿಸಲ್ಪಟ್ಟಿವೆ.

**ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು :**

ಭಾರತೀಯ ಕಲಾ ಇತಿಹಾಸದಲ್ಲಿ ಅಜಂತಾಕ್ಕೆ ದೊರಕಿದಷ್ಟು ಮಹತ್ವ ಬೇರೆ ಚಿತ್ರನೆಲೆಗಳಿಗೆ ಲಭ್ಯವಾಗಿಲ್ಲ ಎಂದರೂ ತಪ್ಪಿಲ್ಲ. ಪಾಶ್ಚಾತ್ಯರು, ಪೌರಾತ್ಯರು ಮತ್ತು ಭಾರತೀಯ ಅನೇಕ ವಿದ್ವಾಂಸರು ಅಜಂತಾ ಬಗ್ಗೆ ಅಧ್ಯಯನ ಮಾಡಿದ್ದಾರೆ. ಅದಕ್ಕಿಂತ ಭಿನ್ನವಾಗಿ 'ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು' ಕುರಿತು ಎಸ್.ವಿ. ವೆಂಕಟೇಶಯ್ಯ ಅಧ್ಯಯನ ಮಾಡಿದ್ದಾರೆ.[೧೪]

೧೪. ಎಸ್.ವಿ.ವೆಂಕಟೇಶಯ್ಯ : ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು : ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಪಿಎಚ್.ಡಿ. ಪ್ರಬಂಧ-೨೦೦೫

ಈ ಪ್ರಬಂಧವು ಆರು ಅಧ್ಯಾಯಗಳಲ್ಲಿ ಹರಡಿಕೊಂಡು ವಿಶ್ಲೇಷಿಸಲ್ಪಟ್ಟಿದೆ. ಒಂದನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಪ್ರಸ್ತುತತೆ ಮತ್ತು ಮಹತ್ವಗಳನ್ನು ಹೇಳಲಾಗಿದೆ. ಅಜಂತಾ ಚಿತ್ರಕಲೆಯ ಶೈಲಿ, ಪೋಷಕರು, ರಚನಾವಿಧಾನ, ಭಿತ್ತಿ ತಯಾರಿಕೆ, ವರ್ಣವಿನ್ಯಾಸ, ರೇಖಾಲಾಲಿತ್ಯ, ಸಂಯೋಜನಾ ರೀತಿ, ಮೈವಳಿಕೆ, ಸಾಮಾಜಿಕ ಅಂಶಗಳು, ಐತಿಹಾಸಿಕ, ಧಾರ್ಮಿಕ ವಿಚಾರಗಳು, ಇಲ್ಲಿನ ಚಿತ್ರಗಳಲ್ಲಿನ ಆಭರಣ ವೇಷ-ಭೂಷಣಗಳು, ಪೀಠೋಪಕರಣಗಳು, ಕೇಶವಿನ್ಯಾಸ ಹೀಗೆ ಹಲವು ಬಗೆಯ ಅಧ್ಯಯನಗಳು ನಡೆದಿವೆ. ಆದರೆ ಅಜಂತಾ ಚಿತ್ರಗಳಲ್ಲಿ ಕಂಡು ಬರುವ ವಾಸ್ತು ಅಂಶಗಳ ಬಗ್ಗೆ ಅಧ್ಯಯನಗಳು ಆಗದೆ ಇರುವುದನ್ನು ಗಮನಿಸಿ ಅವನ್ನು ಕೈಗೆತ್ತಿಕೊಂಡು ಪೂರೈಸಲಾಗಿದೆ. ಇಂತಹ ಅನೇಕ ವಿವರಗಳ ಜೊತೆಗೆ ಏಕೆ ಈ ಅಧ್ಯಯನ ಕೈಗೊಳ್ಳಲಾಗಿದೆ ಎನ್ನುವ ಉದ್ದೇಶಗಳನ್ನು ಮೊದಲ ಅಧ್ಯಾಯದಲ್ಲಿಯೇ ಸ್ಪಷ್ಟವಾಗಿ ತಿಳಿಸಲಾಗಿದೆ.

ಅಜಂತಾ ಗುಹಾಲಯಗಳ ಸ್ವರೂಪ, ಲಕ್ಷಣ, ರಚನಾ ವಿಧಾನ, ಐತಿಹಾಸಿಕ ಹಿನ್ನೆಲೆಗಳ ಬಗ್ಗೆ ಎರಡನೆಯ ಅಧ್ಯಾಯದಲ್ಲಿ ಹೇಳಲಾಗಿದೆ. ಈ ಗುಹಾಲಯಗಳ ರಚನಾ ಕಾಲದ ಆರಂಭ ಹಂತದಿಂದ ಅಲ್ಲಿ ಕಲಾ ಚಟುವಟಿಕೆಗಳು ನಿಲ್ಲುವವರೆಗೂ ಯಾವ ಯಾವ ಅರಸರು ಪ್ರೋತ್ಸಾಹ ಕೊಟ್ಟರು, ಯಾರ ಕಾಲಾವಧಿಯಲ್ಲಿ ಯಾವ ಗುಹೆಗಳನ್ನು ಕೆತ್ತಿ, ಕೊರೆದು ಅಲ್ಲಿ ವರ್ಣಚಿತ್ರಗಳನ್ನು ಬರೆಯಲಾಯಿತು ಎಂಬ ವಿಷಯಗಳನ್ನು ವಿವೇಚಿಸಲಾಗಿದೆ. ಅಲ್ಲದೆ ನೆಲೆಯಲ್ಲಿ ರಚನೆಯಾದ ಚೈತ್ಯ ಮತ್ತು ವಿಹಾರಗಳ ಲಕ್ಷಣಗಳು, ಚಿತ್ರಕಲೆಗೆ ಅವು ಪೂರ್ವಕವಾಗಿರುವ ಅಂಶಗಳು, ಅಲ್ಲಿನ ಶಿಲ್ಪರಚನೆಗಳು, ಯಾವ ಗುಹೆಗಳಲ್ಲಿ ಚಿತ್ರಗಳಿವೆ ಎನ್ನುವ ವಿವರಗಳು ಇಲ್ಲಿವೆ. ಐತಿಹಾಸಿಕ, ಧಾರ್ಮಿಕ ಹಾಗೂ ರಾಜಕೀಯ ಹಿನ್ನೆಲೆಯೊಂದಿಗೆ ಕಲಾ ವಾತಾವರಣವನ್ನು ಬಿಚ್ಚಿಡಲು ಪ್ರಯತ್ನಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಅಜಂತಾ ಗುಹಾಲಯಗಳ ರಚನಾಕ್ರಮ, ವಾಸ್ತುವಿನ್ಯಾಸ, ಪ್ರಕಾರಗಳು ಮತ್ತು ಪ್ರಮುಖ ಲಕ್ಷಣಗಳ ಕುರಿತು ವಿವೇಚಿಸಲಾಗಿದೆ. ಈ ಗುಹಾಲಯಗಳ ಸಮೂಹದಲ್ಲಿ ಚೈತ್ಯ ಮತ್ತು ವಿಹಾರಗಳೆಂಬ ಎರಡು ರೀತಿಯ ವಾಸ್ತು ರಚನೆಗಳಿವೆ. ಪ್ರತಿಯೊಂದು ಗುಹೆಗಳು ಭಿನ್ನವಾಗಿದ್ದು, ಒಂದಕ್ಕಿಂತ ಒಂದು ಸುಂದರವಾಗಿವೆ. ಈ ಗುಹಾಲಯಗಳ ಗೋಡೆ, ಕಂಬ, ಕಮಾನು ಮತ್ತು ಮೇಲಿನ ಛಾವಣಿಗಳಲ್ಲಿ ಅಲ್ಲಲ್ಲಿ ಬೌದ್ಧ ಧಾರ್ಮಿಕ ಶಿಲ್ಪಗಳು ರಚನೆಯಾಗಿವೆ. ಉಳಿದಂತೆ ಗೋಡೆ ಮತ್ತು ಛಾವಣಿಗಳು ವರ್ಣಚಿತ್ರಗಳಿಂದ ಅಲಂಕಾರಗೊಂಡಿವೆ. ಹೀಗೆ ಗುಹಾಲಯಗಳ ರಚನಾ ಕ್ರಮದ ಜೊತೆಗೆ ಅವುಗಳ ಧಾರ್ಮಿಕ, ಐತಿಹಾಸಿಕ ಮತ್ತು ಸಾಮಾಜಿಕ ಮಹತ್ವಗಳನ್ನು ಬಿಂಬಿಸಲಾಗಿದೆ. ಅಜಂತಾ ಚಿತ್ರಗಳಲ್ಲಿನ ವಾಸ್ತು ಅಂಶಗಳ ಬಗ್ಗೆ ನಾಲ್ಕನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಒಂದೊಂದು ಗುಹೆಯ ಚಿತ್ರಗಳಲ್ಲಿನ ವಾಸ್ತು ಅಂಶಗಳನ್ನು ಪ್ರತ್ಯೇಕವಾಗಿ ನೋಡಲಾಗಿದೆ. ಒಂದನೆಯ ಗುಹೆಯಲ್ಲಿರುವ ವರ್ಣಚಿತ್ರಗಳು ಯಾವುವು? ಯಾವ ವಿಷಯ, ವಸ್ತುಗಳನ್ನು ಆಧರಿಸಿವೆ, ವರ್ಣವಿನ್ಯಾಸ, ರೇಖಾಲಾಲಿತ್ಯ, ಸಂಯೋಜನೆಯ ರೀತಿ ಇವುಗಳನ್ನು ಸ್ಥೂಲವಾಗಿ ಹೇಳಿ, ಆಯಾ ಚಿತ್ರ ಪಟ್ಟಿಕೆಗಳಲ್ಲಿ ಯಾವ ವಾಸ್ತು ಅಂಶಗಳಿವೆ ಎಂಬ ಬಗ್ಗೆ ತಿಳಿಸಲಾಗಿದೆ. ದೇವಾಲಯದ ಮಾದರಿ, ಅರಮನೆ, ಜನಸಾಮಾನ್ಯರ ವಾಸದ ನೆಲೆಗಳು, ಅಲಂಕಾರಿಕ ಸಾರ್ವಜನಿಕ ಕಟ್ಟಡಗಳು, ಬೃಹತ್ ಸೌಧಗಳು, ರಸ್ತೆಗಳು, ಕೋಟೆಗಳು, ಮಂಟಪಗಳು, ವಿಹಾರಧಾಮಗಳು ಹೀಗೆ ಹಲವಾರು ಕಟ್ಟಡಗಳನ್ನು ಚಿತ್ರಗಳಲ್ಲಿ ಗುರುತಿಸಲಾಗಿದೆ. ಪ್ರತಿಯೊಂದು ಗುಹೆ ಮತ್ತು ಪ್ರತಿಯೊಂದು ಚಿತ್ರಗಳ ಹಿನ್ನೆಲೆಯಲ್ಲಿ ಈ ರೀತಿಯ ವಿವರಣೆ ಕೊಡಲಾಗಿದೆ.

ಅಜಂತಾ ಗುಹಾಲಯಗಳಲ್ಲಿನ ಚಿತ್ರಗಳಲ್ಲಿ ಕಂಡುಬರುವ ವಾಸ್ತು ಅಂಶಗಳ ಬಗ್ಗೆ ಎರಡು ದೃಷ್ಟಿಕೋನಗಳಿಂದ ತೌಲನಿಕವಾಗಿ ನೋಡಲಾಗಿದೆ. ಅಜಂತಾ ಗುಹಾಲಯಗಳಲ್ಲಿನ ವರ್ಣಚಿತ್ರಗಳಲ್ಲಿ ಕಂಡು ಬರುವ ವಾಸ್ತು ಅಂಶಗಳನ್ನು ಒಂದು ಗುಹೆಯ ಚಿತ್ರಕ್ಕೂ, ಇನ್ನೊಂದು ಗುಹೆಯ ಕಲಾಕೃತಿಗೂ ಹೋಲಿಸಲಾಗಿದೆ. ಇದರ ಜೊತೆಗೆ ಅಜಂತಾವನ್ನು ಹೊರತುಪಡಿಸಿ ಇನ್ನಿತರ ಚಿತ್ರಗಳಲ್ಲಿ ಕಂಡು ಬರುವ ವಾಸ್ತು ಅಂಶಗಳ ಜೊತೆಗೆ ತೌಲನಿಕವಾಗಿ ನೋಡಲಾಗಿದೆ. ಆರನೆಯ ಅಧ್ಯಾಯವು ಸಮಾರೋಪವಾಗಿದ್ದು, ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ.

ಈ ಪ್ರಬಂಧವು ಅಜಂತಾ ಚಿತ್ರಗಳಲ್ಲಿನ ವಾಸ್ತು ಅಂಶಗಳು ಎಂಬ ವಿಷಯದ ಮೂಲಕ ಪ್ರಾಚೀನ ವಾಸ್ತು ಶಿಲ್ಪದ ಮಾದರಿಗಳನ್ನು ತಿಳಿಸಿ ಕೊಡುವ ಪ್ರಮುಖ ಆಕರವಾಗಿದೆ. ಇಲ್ಲಿ ಕೇವಲ ಸಾಹಿತ್ಯಕ ವಿವರಣೆಯಿಂದ ಆಯಾಕಾಲದ ವಾಸ್ತು ರಚನೆಯನ್ನು ಕುರಿತು ವಿವರಿಸದೇ ಅದರ ಜೊತೆಗೆ ಚಿತ್ರಗಳ ಪ್ರತ್ಯಕ್ಷ ನೋಟವೂ ಲಭ್ಯವಾಗಿದೆ. ಹಾಗಾಗಿ ಇದು ಹೆಚ್ಚು ಪ್ರಸ್ತುತತೆಯನ್ನು ಪಡೆದುಕೊಳ್ಳುತ್ತದೆ.

**ರಂಗೋಲಿ ಚಿತ್ರಕಲೆ, ಒಂದು ಸಾಂಸ್ಕೃತಿಕ ಅಧ್ಯಯನ :**

ರಂಗೋಲಿ ಕಲೆಯು ಭಾರತೀಯ ಪರಂಪರೆಯಲ್ಲಿ ಮಹತ್ವದ ಸ್ಥಾನ ಪಡೆದುಕೊಂಡಿದೆ. ಪವಿತ್ರ ಮತ್ತು ಪೂಜನೀಯ ಆಚರಣೆಗಳ ಹಿನ್ನೆಲೆಯಲ್ಲಿ ರಚಿಸಲ್ಪಡುವ ರಂಗೋಲಿ ಕಲೆಯು ದೆವ್ವ, ಭೂತ, ಮಾಟ-ಮಂತ್ರಗಳು, ದುಷ್ಟ ಶಕ್ತಿಗಳ ಆರಾಧನೆಯಲ್ಲಿಯೂ ರಚಿಸಲ್ಪಡುತ್ತದೆ. ಪ್ರಾದೇಶಿಕವಾಗಿ ವಿಶಿಷ್ಟತೆಯಿಂದ ಕೂಡಿರುವ ರಂಗೋಲಿ ಕಲೆಯ ಕುರಿತು ವಿಶ್ವೇಶ್ವರಿ ತಿವಾರಿ ಅವರು ಪಿಎಚ್.ಡಿ. ಅಧ್ಯಯನ ಮಾಡಿದ್ದಾರೆ.[೧೫] 'ರಂಗೋಲಿ ಚಿತ್ರಕಲೆ, ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯವನ್ನು ಆಯ್ದುಕೊಂಡು ಪ್ರಬಂಧವನ್ನು ರಚಿಸಿ ೨೦೦೫ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ್ದಾರೆ.

ಈ ಪ್ರಬಂಧದಲ್ಲಿ ಒಟ್ಟು ಒಂಭತ್ತು ಅಧ್ಯಾಯಗಳಲ್ಲಿ ವಿಷಯ ನಿರೂಪಣೆಗೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ಮಹತ್ವ ಮತ್ತು ವ್ಯಾಪ್ತಿಗಳನ್ನು ಕುರಿತು ಹೇಳಲಾಗಿದೆ. ಎರಡನೆಯ ಅಧ್ಯಾಯದಲ್ಲಿ ರಂಗೋಲಿ ಕಲೆಯ ಹುಟ್ಟು, ಬೆಳವಣಿಗೆ ಹಾಗೂಚಾರಿತ್ರಿಕ ಹಿನ್ನೆಲೆ ಕಟ್ಟಿಕೊಡಲಾಗಿದೆ. ರಂಗೋಲಿ ಕಲೆಯು ಚಿತ್ರಕಲೆಯ ಮತ್ತೊಂದು ರೂಪವಾಗಿದ್ದು, ಆದಿಮಾನವ ಕಾಲದ ಗುಹಾ ಚಿತ್ರಗಳಲ್ಲಿ ಇದರ ಮೂಲವನ್ನು ಗುರುತಿಸಬಹುದು. ಅಂತೆಯೇ ಪ್ರಾಚೀನ ಕಾಲದ ದೇವಾಲಯಗಳ ತಳಪಾಯದ ನೀಲನಕ್ಷೆಗಳು ಒಂದು ಬಗೆಯ ರಂಗೋಲಿ ನಕ್ಷೆಗಳಾಗಿವೆ ಎಂದು ಇಲ್ಲಿ ಹೇಳಲಾಗಿದೆ. ನಂತರ ಸಿಂಧೂ ನಾಗರಿಕತೆ, ವೇದಕಾಲ, ರಾಮಾಯಣ, ಮಹಾಭಾರತಗಳ ಕಾಲ, ಕ್ರಿ.ಶ. ಆರಂಭದ ಕಾಲ, ಮಧ್ಯಯುಗ, ವಿಜಯನಗರದ ಕಾಲ, ೧೮ನೇಶತಮಾನ ಮತ್ತು ಆಧುನಿಕ ಕಾಲದಲ್ಲಿ ರಂಗೋಲಿ ಕಲೆ ಬೆಳೆದುಬಂದ ರೀತಿಯನ್ನು ಹೇಳಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ರಂಗೋಲಿ ಕಲೆಯ ವಿಧಿವಿಧಾನಗಳು ಮತ್ತು ನಂಬಿಕೆಗಳ ಬಗ್ಗೆ ವಿವೇಚಿಸಲಾಗಿದೆ. ರಂಗೋಲಿ ಕಲೆಯ ರಚನೆಯಲ್ಲಿ ವಿವಿಧ ಪರಿಕರಗಳು ಬಳಕೆಯಾಗುತ್ತಲಿದ್ದರೂ, ಬಿಳಿಯಾದ ಕಲ್ಲಿನ ಪುಡಿ ಮಹತ್ವದ್ದಾಗಿದೆ. ಅದರೊಂದಿಗೆ ಸುಣ್ಣ, ಮರಳು, ವಿವಿಧ ಬಣ್ಣದ

೧೫. ವಿಶ್ವೇಶ್ವರಿ ತಿವಾರಿ : ರಂಗೋಲಿ ಚಿತ್ರಕಲೆ, ಒಂದು ಸಾಂಸ್ಕೃತಿಕ ಅಧ್ಯಯನ : ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿಎಚ್.ಡಿ. ಪ್ರಬಂಧ-೨೦೦೫

ಮಣ್ಣಿನ ಪುಡಿ, ಬಣ್ಣದ ಹುಡಿಗಳು, ಕಾಡಿಗೆ, ಇದ್ದಿಲು ಅಂಟುದ್ರಾವಕ ಹೀಗೆ ಹಲವಾರು ಪರಿಕರಗಳು ಸಂದರ್ಭ ಮತ್ತು ಸನ್ನಿವೇಶಕ್ಕೆ ತಕ್ಕಂತೆ ಬಳಕೆಗೊಳ್ಳುತ್ತವೆ. ಇತ್ತೀಚೆಗೆ ಆಧುನಿಕರು ರಂಗೋಲಿ ಕಲೆಯಲ್ಲಿ ರಾಸಾಯನಿಕ ವರ್ಣಗಳು ಮತ್ತು ಪ್ಲಾಸ್ಟಿಕ್, ಲೋಹ, ಗಾಜುಗಳಂತಹ ಪರಿಕರಗಳನ್ನು ಬಳಸುತ್ತಿದ್ದಾರೆ. ಇಂತಹ ಎಲ್ಲ ಪರಿಕರಗಳ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ರಂಗೋಲಿ ಕಲೆಯ ಪ್ರಾದೇಶಿಕ ವಿಶಿಷ್ಟತೆಗಳನ್ನು ಹೇಳಲಾಗಿದೆ. ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು, ಕೇರಳ, ಗುಜರಾತ, ಒರಿಸ್ಸಾ, ಮಹಾರಾಷ್ಟ್ರ, ಮಧ್ಯಪ್ರದೇಶ, ಉತ್ತರಪ್ರದೇಶ, ಜಮ್ಮು-ಕಾಶ್ಮೀರ, ರಾಜಸ್ತಾನ, ಹೀಗೆ ವಿವಿಧ ರಾಷ್ಟ್ರಗಳ ರಂಗೋಲಿ ಕಲೆಯ ಪ್ರಕಾರಗಳನ್ನು ಸ್ಥೂಲವಾಗಿ ನೋಡುತ್ತ, ಕರ್ನಾಟಕದ ರಂಗೋಲಿ ಕಲೆಯೊಂದಿಗೆ ತೌಲನಿಕವಾಗಿ ಚರ್ಚಿಸಲಾಗಿದೆ.

ರಂಗೋಲಿ ಕಲೆಯ ಧಾರ್ಮಿಕ ಸಂಕೇತಗಳು ಕುರಿತು ಐದನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ರಂಗೋಲಿ ಕಲೆಯಲ್ಲಿ ಬರುವ ವಿವಿಧ ಸಂಕೇತಗಳು ಬೇರೆ ಬೇರೆ ಅರ್ಥವಂತಿಕೆಯನ್ನು ಪಡೆದುಕೊಂಡಿವೆ. ಆರುಗಂಟಿನ ರಾಮನ ತೊಟ್ಟಿಲ ರಂಗೋಲಿ ಫಲವಂತಿಕೆ ಮತ್ತು ಮಕ್ಕಳನ್ನು ಕೊಡುವ ದೈವವೆಂದು ನಂಬಲಾಗಿದೆ. ಸ್ವಸ್ತಿಕ ಮತ್ತು ಅಧಿಕ ಚಿನ್ಹೆಗಳು ಸಮೃದ್ಧಿಯನ್ನು ಕೊಡುವ ಸಂಕೇತವಾದರೆ, ವೃತ್ತಾಕಾರದ ಚಿನ್ಹೆ ಸೂರ್ಯನನ್ನು, ಅರ್ಧವೃತ್ತ ಚಂದಿರನನ್ನು ಪ್ರತಿಬಿಂಬಿಸುತ್ತದೆ. ಬೆಳದಿಂಗಳಪ್ಪನ ಪೂಜೆಯಲ್ಲಿ ಹಾಕುವ ಐದು ದಿನದ ರಂಗೋಲಿ ವಿನ್ಯಾಸಗಳು ಬೇರೆ ಬೇರೆ ಸಂಕೇತಗಳಿಂದ ಕೂಡಿದ್ದು, ಧಾರ್ಮಿಕ ಹಿನ್ನೆಲೆ ಹೊಂದಿವೆ. ಅದೇ ರೀತಿ ಶೀಗಿ ಆಚರಣೆಯ ರಂಗೋಲಿ ಚಿತ್ರಗಳು ಪ್ರತಿದಿನ ವಿಶೇಷ ಧಾರ್ಮಿಕ ಸಂಕೇತಗಳಿಂದ ಕೂಡಿವೆ. ನಾಗಮಂಡಲ, ಭೂತಾರಾಧನೆ, ಮೋಡಿ ಆಟ, ಇವುಗಳಲ್ಲಿನ ರಂಗೋಲಿ ಸಂಕೇತಗಳು ಬೇರೆ ತರದ ಅರ್ಥವಂತಿಕೆಗಳನ್ನು ಹೊಂದಿವೆ. ಇವುಗಳನ್ನೆಲ್ಲ ಇಲ್ಲಿ ಚರ್ಚೆಗೊಳಪಡಿಸಲಾಗಿದೆ. ರಂಗೋಲಿ ಚಿತ್ರಕಲೆಯ ವಸ್ತು ವಿಷಯಗಳು ಎಂಬ ಆರನೆಯ ಅಧ್ಯಾಯದಲ್ಲಿ ಈ ಕಲಾ ಪ್ರಕಾರದಲ್ಲಿ ಚಿತ್ರಿಸುವ ವಿವರಗಳ ಬಗ್ಗೆ ಹೇಳಲಾಗಿದೆ. ರಂಗೋಲಿ ಕಲೆಯ ವಸ್ತು ವಿಷಯಗಳು ಭಿನ್ನವಾಗಿರುತ್ತವೆ. ಪವಿತ್ರತೆ, ಪೂಜಾಕಾರ್ಯದ ಹಿನ್ನೆಲೆಯಲ್ಲಿ ರಚಿಸುವ ರಂಗೋಲಿಯಲ್ಲಿ ದೈವ ಮತ್ತು ದೇವತಾ ಹಿನ್ನೆಲೆಯ ಚಿತ್ರಗಳಿದ್ದರೆ, ಮಾಟ-ಮಂತ್ರ, ಮೋಡಿ ಆಟಗಳಂತಹ ಭಯಾನಕ ಆಚರಣೆಗಳಲ್ಲಿ ಹಾಕುವ ರಂಗೋಲಿಯಲ್ಲಿ ಭೀಭತ್ಸ ರೂಪಕ ಚಿತ್ರಗಳಿರುತ್ತವೆ. ಹೀಗೆ ವಿವಿಧ ಸಂದರ್ಭಗಳಲ್ಲಿ ಹಾಕುವ ರಂಗೋಲಿ ಕಲೆಯ ವಸ್ತು ವಿಷಯಗಳನ್ನು ಇಲ್ಲಿ ಹೇಳಲಾಗಿದೆ. ಶಿವ, ವಿಷ್ಣು, ಬ್ರಹ್ಮ ಕೃಷ್ಣ, ಪಾರ್ವತಿ, ಲಕ್ಷ್ಮೀ, ಗಣಪತಿ, ಆಂಜನೇಯ, ಗರುಡ, ನಂದಿ, ಈ ಚಿತ್ರಗಳಲ್ಲದೇ ಸ್ವಸ್ತಿಕ, ಶ್ರೀ, ಓಂ, ಹಸ್ತಮುದ್ರಿಕೆ, ಸೂರ್ಯ, ಚಂದ್ರ, ಇವುಗಳ ಸಾಂಕೇತಿಕ ರೂಪಗಳು ಕಂಡುಬರುತ್ತವೆ. ದುಷ್ಟಕ್ರಿಯೆ ಹಿನ್ನೆಲೆಯ ರಂಗೋಲಿಗಳಲ್ಲಿ ಚಂಡಿ, ಚಾಮುಂಡಿ, ಕಾಳಿ, ದುರ್ಗಿ, ರಾಕ್ಷಸರು, ಕಾಳಭೈರವ, ಸ್ಮಶಾನದ ಸಂಕೇತ, ತಲೆಬುರುಡೆ, ಎಲುಬುಗಳ ಸಂಕೇತ, ಹೀಗೆ ಬೇರೆ ಬೇರೆ ಚಿತ್ರಗಳಿರುತ್ತವೆ. ಇಂತಹ ಅನೇಕ ವಿಚಾರಗಳನ್ನು ಇಲ್ಲಿ ವಿವೇಚಿಸಲಾಗಿದೆ. ಜನಪದ ರಂಗೋಲಿ ಚಿತ್ರಕಲೆಯ ಸಾಂಸ್ಕೃತಿಕ ಹಿನ್ನೆಲೆಯ ಬಗೆಗೆ ಏಳನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದ್ದು, ಜನಪದ ರಂಗೋಲಿ ಮತ್ತು ಶಿಷ್ಟಪದ ರಂಗೋಲಿ ಇವುಗಳ ವೈಲಕ್ಷಣಗಳನ್ನು ಇಲ್ಲಿ ಹೇಳಲಾಗಿದೆ. ಜನಪದ ರಂಗೋಲಿ ಕಲೆಯ ಸ್ವರೂಪ. ಲಕ್ಷಣ, ರಚನಾಕ್ರಮ, ಪರಿಕರಗಳು, ರಚನಾ ಉದ್ದೇಶಗಳು ಮತ್ತು ಜನಸಮುದಾಯದೊಂದಿಗೆ ಈ ಕಲೆಯ ಸಂಪರ್ಕಗಳನ್ನು ಕುರಿತು ಚರ್ಚಿಸಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ರಂಗೋಲಿ ಕಲೆಯ ಸಂಕೇತಗಳನ್ನು ಅವುಗಳ ಅರ್ಥವಂತಿಕೆಯೊಂದಿಗೆ ವಿವೇಚಿಸುವ ಪ್ರಯತ್ನವಿದೆ. ರಂಗೋಲಿ ಕಲೆಯ ಸಾರ್ವತ್ರಿಕತೆ, ಪ್ರಾದೇಶಿಕತೆ, ವಿವಿಧ ಪ್ರದೇಶಗಳಲ್ಲಿ ಒಂದೇ ಸಂಕೇತವು ಕೊಡುವ ಭಿನ್ನ ಅರ್ಥಗಳು, ರಂಗೋಲಿ ಕಲೆಯ ವರ್ಣ ಹಿನ್ನೆಲೆಯ ಅರ್ಥ ಇವುಗಳನ್ನೆಲ್ಲ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಒಂಭತ್ತನೆಯ ಅಧ್ಯಾಯವು ಸಮಾರೋಪವಾಗಿದ್ದು, ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ. ಪ್ರಸ್ತುತ ಅಧ್ಯಯನವು ರಂಗೋಲಿ ಕಲೆಯ ಕುರಿತಾಗಿದ್ದು, ಅದರ ರಚನಾಕ್ರಮ, ಪ್ರಾದೇಶಿಕ ವಿಶೇಷತೆ, ಪರಿಕರಗಳು, ಶೈಲಿ, ತಂತ್ರಗಾರಿಕೆ, ನಂಬಿಕೆ, ಆಚರಣೆಗಳಂತಹ ಕಲಾ ವಿಚಾರಗಳನ್ನು ಬಿಂಬಿಸುತ್ತದೆ.

**ಸುರಪುರ ಶೈಲಿಯ ಚಿತ್ರಕಲೆ, ಒಂದು ಅಧ್ಯಯನ :**

ಸುರಪುರ ಶೈಲಿಯು ಕರ್ನಾಟಕದ ಪ್ರಮುಖ ಪರಂಪರಾಗತ ಕಲಾಶೈಲಿಗಳಲ್ಲಿ ಒಂದಾಗಿದ್ದು, ದಕ್ಷಿಣ ಭಾರತದಲ್ಲೇ ಹೆಸರುವಾಸಿಯಾದ ಕಲಾಶೈಲಿಯಾಗಿದೆ. ಈ ಕಲೆಯ ಕುರಿತು ಮಲ್ಲಿಕಾರ್ಜುನ ಬಾಗೋಡಿ ಇವರು 'ಸುರಪುರ ಶೈಲಿಯ ಚಿತ್ರಕಲೆ, ಒಂದು ಅಧ್ಯಯನ' ಎಂಬ ವಿಷಯವಾಗಿ ಪಿಎಚ್.ಡಿ. ಅಧ್ಯಯನವನ್ನು ಮಾಡಿದ್ದಾರೆ.[೧೬] ಈ ಪ್ರಬಂಧದಲ್ಲಿ ಒಟ್ಟು ಒಂಭತ್ತು ಅಧ್ಯಾಯಗಳಲ್ಲಿ ವಿಷಯ ನಿರೂಪಣೆಗೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವೈಧಾನಿಕತೆ ಮತ್ತು ವ್ಯಾಪ್ತಿಗಳ ಕುರಿತು ಹೇಳಲಾಗಿದೆ. ಅಧ್ಯಯನದ ಉದ್ದೇಶಗಳೊಂದಿಗೆ ಅದರ ಸಮರ್ಥನೆ, ಅದರಿಂದಾಗುವ ಪ್ರಯೋಜನಗಳ ಬಗ್ಗೆ ಸ್ಥೂಲವಾಗಿ ಹೇಳಿದೆ.

ಎರಡನೆಯ ಅಧ್ಯಾಯದಲ್ಲಿ ಸುರಪುರದ ಸಾಂಸ್ಕೃತಿಕ ಪರಿಸರ ಮತ್ತು ಸಂಸ್ಥಾನದ ಇತಿಹಾಸಗಳನ್ನು ಕುರಿತು ವಿವೇಚಿಸಲಾಗಿದೆ. ಸುರಪುರವು ವಿಜಯನಗರದ ಅಧೀನ ಸಂಸ್ಥಾನವಾಗಿದ್ದು, ತಾಳಿಕೋಟೆ ಯುದ್ಧದ ನಂತರ ಸ್ವತಂತ್ರ ಆಡಳಿತ ನಡೆಸತೊಡಗಿತು. ಹಾಗಾಗಿ ಇಲ್ಲಿ ಸಹಜವಾಗಿ ವಿಜಯನಗರದ ಪ್ರಭಾವದ ಕಲಾ ಸಂಸ್ಕೃತಿ ಬೆಳೆದು ಬಂದಿತು. ಈ ಸಂಸ್ಥಾನಿಕರಲ್ಲಿ ಅನೇಕ ದೊರೆಗಳು ಆಳ್ವಿಕೆ ಮಾಡಿದ್ದರೂ ಗಡ್ಡಿ ಪಿಡ್ಡನಾಯಕ ಮತ್ತು ರಾಜಾ ವೆಂಕಟಪ್ಪ ನಾಯಕರು ಹೆಚ್ಚು ಪ್ರಭಾವಶಾಲಿಯಾದ ಆಡಳಿತ ನೀಡಿದ್ದಾರೆ. ಈ ಸಂಸ್ಥಾನವು ಬ್ರಿಟಿಷರ ವಶವಾದ ನಂತರ ಇಲ್ಲಿಗೆ ಆಡಳಿತಾಧಿಕಾರಿಯಾಗಿ ಮೆಡೋಸ್ ಟೇಲರ್ ಎಂಬ ವ್ಯಕ್ತಿಯನ್ನು ನೇಮಿಸಲಾಯಿತು. ಈತ ಉತ್ತಮ ಆಡಳಿತಗಾರ ಮಾತ್ರವಲ್ಲದೇ ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಗಳ ಬಗ್ಗೆ ಒಲವುಳ್ಳವನಾಗಿದ್ದ. ಹಾಗಾಗಿ ಈ ಕಾಲದಲ್ಲಿ ಸುರಪುರ ಸಂಸ್ಥಾನವು ಒಳ್ಳೆಯ ಆಡಳಿತವನ್ನು ಕಂಡಿತು. ಸುರಪುರ ಸಂಸ್ಥಾನಿಕರ ಕಾಲದಲ್ಲಿ ರಾಜಧಾನಿ ಸುರಪುರ ಮಾತ್ರವಲ್ಲದೇ ಸುತ್ತಲಿನ ಪ್ರದೇಶಗಳಲ್ಲಿ ದೇವಾಲಯ, ಮಠಮಾನ್ಯಗಳು, ಸಾರ್ವಜನಿಕ ಕಟ್ಟಡಗಳನ್ನು ಕಟ್ಟಿಸಿಕೊಡಲಾಯಿತು. ಜೊತೆಗೆ ಅವುಗಳಲ್ಲಿ ಶಿಲ್ಪಮತ್ತು ಚಿತ್ರಗಳನ್ನು ಬರೆಸಲಾಯಿತು. ಇವುಗಳಲ್ಲದೇ ಈ ಕಾಲದ ಅಧಿಕಾರಿಗಳು, ಶ್ರೀಮಂತರು, ಊರಿನ ಪ್ರಮುಖರು ತಮ್ಮ ಮನೆಗಳಲ್ಲಿ ಮತ್ತು ಸ್ವಂತ ಸಂಗ್ರಹಕ್ಕಾಗಿ ಚಿತ್ರಗಳನ್ನು ಬರೆಸಿಕೊಂಡಿದ್ದಾರೆ. ಹೀಗೆ ಆ ಕಾಲದ ಆಡಳಿತ ದಕ್ಷವಾಗಿರುವುದರ ಜೊತೆಗೆ ಕಲಾ ಸಂಸ್ಕೃತಿ ಉಜ್ವಲವಾಗಿ ಬೆಳೆಯಿತು. ಸುರಪುರ ಸಂಸ್ಥಾನವು ಅಂದಿನ ದಿನಗಳಲ್ಲಿ ಕಲೆಯನ್ನು ಪ್ರೋತ್ಸಾಹಿಸಿ ಬೆಳೆಸಿದ ಪರಿಣಾಮವಾಗಿ ಇಂದು ಕಲಾವಲಯದಲ್ಲಿ ಅದರ ಹೆಸರು ಅಜರಾಮರವಾಗಿ ಉಳಿದಿದೆ. ಹೀಗೆ ಅನೇಕ ವಿಷಯಗಳು ಸಾಂಸ್ಕೃತಿಕ ಪರಿಸರ ಮತ್ತು ಸಂಸ್ಥಾನದ ಐತಿಹಾಸಿಕ ಹಿನ್ನೆಲೆಯಲ್ಲಿ ಚರ್ಚಿತಗೊಂಡಿವೆ.

---

೧೬. ಮಲ್ಲಿಕಾರ್ಜುನ ಸಿ.ಬಾಗೋಡಿ : ಸುರಪುರ ಶೈಲಿಯ ಚಿತ್ರಕಲೆ, ಒಂದು ಅಧ್ಯಯನ : ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿಎಚ್.ಡಿ. ಪ್ರಬಂಧ-೨೦೦೬

ಮೂರನೆಯ ಅಧ್ಯಾಯದಲ್ಲಿ ಸುರಪುರ ರಾಜಾಶ್ರಯ ಮತ್ತು ಚಿತ್ರಕಲೆ ಕುರಿತಾಗಿ ವಿವೇಚಿಸಲಾಗಿದೆ. ಸುರಪುರ ಸಂಸ್ಥಾನವು ಮೊದಲಿಗೆ ವಿಜಯನಗರದ ಅಧೀನ ರಾಜ್ಯವಾಗಿದ್ದು, ನಂತರದಲ್ಲಿ ಸ್ವತಂತ್ರವಾಯಿತು. ಈ ಮುಂಚಿನ ತಮ್ಮ ಯಜಮಾನ ಪ್ರಭುಗಳಾಗಿದ್ದ ವಿಜಯನಗರದ ಸಾಮ್ರಾಟರು ಕಲಾ ಪ್ರೋತ್ಸಾಹದ ನಿಟ್ಟಿನಲ್ಲಿ ಹಾಕಿಕೊಟ್ಟ ಮಾದರಿಗಳನ್ನು ಅನುಸರಿಸಿದರು. ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಯಂತಹ ವಿಚಾರಗಳಿಗೆ ಧಾರಾಳವಾಗಿದ್ದರು. ವಿಜಯನಗರ ಪತನದ ನಂತರ ಅಲ್ಲಿನ ಪ್ರಸಿದ್ಧ ಚಿತ್ರಕಲಾವಿದರ ಕುಟುಂಬವಾದ ಗರುಡಾದ್ರಿ ಮನೆತನದವರು ಸುರಪುರಕ್ಕೆ ಬಂದು ನೆಲೆಸಿದರು. ಮೂಲ ವಿಜಯನಗರ ಕಲಾಶೈಲಿಯನ್ನು ಸ್ಥಳೀಯ ಅಂಶಗಳೊಂದಿಗೆ ಸಮ್ಮಿಶ್ರಗೊಳಿಸಿ ಹೊಸದೊಂದು ಕಲಾ ಪರಂಪರೆಯನ್ನು ಗರುಡಾದ್ರಿ ಚಿತ್ರಕಲಾವಿದರು ರಚನೆ ಮಾಡಿರುವುದರಿಂದಾಗಿ ಇದಕ್ಕೆ 'ಗರುಡಾದ್ರಿ ಚಿತ್ರಕಲಾಶೈಲಿ' ಎಂಬುದಾಗಿಯೂ ಕರೆಯಲಾಗುತ್ತದೆ.

ಗರುಡಾದ್ರಿ ಚಿತ್ರಕಲಾವಿದರಲ್ಲಿ ಅನೇಕ ಜನರು ಖ್ಯಾತ ಕಲಾವಿದರಾಗಿದ್ದು, ಅವರ ಕೃತಿಗಳು ಇಂದಿಗೂ ಸುರಪುರದಲ್ಲಿ ಮತ್ತು ಬೇರೆ ಬೇರೆ ಸಂಗ್ರಹಾಲಯಗಳಲ್ಲಿ ಕಾಯ್ದಿಡಲಾಗಿದೆ. ಸುರಪುರ ಸಂಸ್ಥಾನಿಕರು ಗರುಡಾದ್ರಿ ಕಲಾವಿದರಿಗೆ ಆಸ್ಥಾನ ಕಲಾವಿದರೆಂದು ಮನ್ನಣೆ ನೀಡಿ ಹೆಚ್ಚಿನ ಪ್ರೋತ್ಸಾಹ ಕೊಟ್ಟರು. ಇವರ ಬದುಕಿಗಾಗಿಯೇ ಗ್ರಾಮವನ್ನು ಉಂಬಳಿಯಾಗಿ ಕೊಟ್ಟ ನಿದರ್ಶನಗಳಿವೆ. ರಾಜ ವಂಶಸ್ಥರಲ್ಲದೇ ಈ ಕಲಾವಿದರ ಕಡೆಯಿಂದ ಚಿತ್ರ ಬರೆಯಿಸಿ ಅವರನ್ನು ಪ್ರೋತ್ಸಾಹಿಸಿದ್ದಾರೆ. ಹೀಗೆ ಸುರಪುರ ರಾಜಾಶ್ರಯದಲ್ಲಿ ಚಿತ್ರಕಲೆ ಬೆಳೆದು ಬಂದ ಹಿನ್ನೆಲೆಯನ್ನು ಅನೇಕ ಉದಾಹರಣೆಗಳೊಂದಿಗೆ ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಸುರಪುರ ಶೈಲಿಯ ಭಿತ್ತಿಚಿತ್ರಗಳ ಬಗ್ಗೆ ವಿವೇಚಿಸಲಾಗಿದೆ. ಸುರಪುರ ದೇವಾಲಯ, ಮನೆ, ಮಠ, ಅರಮನೆ, ಸಾರ್ವಜನಿಕ ಕಟ್ಟಡಗಳು ಹೀಗೆ ಹಲವಾರು ವಾಸ್ತು ನೆಲೆಗಳಲ್ಲಿ ಚಿತ್ರರಚನೆ ಮಾಡಿರುವುದು ಕಂಡು ಬರುತ್ತದೆ. ಈ ಎಲ್ಲ ಭಿತ್ತಿ ಚಿತ್ರಗಳನ್ನು ಅವು ರಚನೆಯಾದ ನೆಲೆಗಳನ್ನು ಆಧರಿಸಿ ವಸ್ತುವಿಷಯಗಳಿಗನುಸಾರವಾಗಿ ವಿಂಗಡಿಸಿಕೊಂಡು ವಿವೇಚಿಸಲಾಗಿದೆ.

ಇಲ್ಲಿ ಭಿತ್ತಿ ಚಿತ್ರಕಲೆಯ ಅರ್ಥವ್ಯಾಪ್ತಿ, ಸ್ಥೂಲ ಇತಿಹಾಸ, ಭಿತ್ತಿ ತಯಾರಿಕೆಯ ಪರಿಕರಗಳು, ಭಿತ್ತಿ ತಯಾರಿಸುವ ವಿಧಾನ, ಬೇರೆ ಬೇರೆ ಗ್ರಂಥಗಳಲ್ಲಿ ಈ ಬಗೆಗಿರುವ ವಿವರಗಳು, ಭಿತ್ತಿಯ ಹಿನ್ನೆಲೆ ಲೇಪನ, ಹೀಗೆ ಅನೇಕ ಸಂಗತಿಗಳು ಚರ್ಚಿಸಿವೆ. ಅಲ್ಲದೇ ಭಿತ್ತಿ ಹಸಿ ಇರುವಾಗ ಚಿತ್ರ ಬರೆಯುವುದು, ಭಿತ್ತಿ ಒಣಗಿದ ಮೇಲೆ ಚಿತ್ರ ಬರೆಯುವುದು, ಭಿತ್ತಿ ಚಿತ್ರರಚನೆಯ ಕ್ರಮ, ಹಂತಗಳು, ಬಣ್ಣ, ಕುಂಚ, ಅಂಟುದ್ರಾವಕ ಮುಂತಾದ ಸಂಗತಿಗಳ ಬಗೆಗೆ ಇಲ್ಲಿ ವಿವೇಚಿಸಿದೆ.

ಐದನೆಯ ಅಧ್ಯಾಯದಲ್ಲಿ ಸುರಪುರ ಶೈಲಿಯ ಹಸ್ತಪ್ರತಿಗಳ ಕುರಿತಾಗಿ ಚರ್ಚಿಸಲಾಗಿದೆ. ಸುರಪುರ ಚಿತ್ರಶೈಲಿಯ ಹಸ್ತಪ್ರತಿಗಳು ಹೆಚ್ಚಿನ ಸಂಖ್ಯೆಯಲ್ಲಿ ಲಭ್ಯವಾಗಿಲ್ಲವಾದರೂ ಕೆಲವು ಹಸ್ತಪ್ರತಿ ಚಿತ್ರಗಳು ಉತ್ತಮ ಮಟ್ಟದಲ್ಲಿವೆ. ಚನ್ನಬಸವ ಪುರಾಣದ ಹಸ್ತಪ್ರತಿಯೊಂದು ದೊರಕಿದ್ದು, ಇದರ ಸಂಪೂರ್ಣ ಸಾಹಿತ್ಯಕ ವಿವರವನ್ನು ಚಿತ್ರಗಳಲ್ಲಿ ರಚನೆ ಮಾಡಲಾಗಿದೆ. ಸೂಕ್ಷ್ಮರೇಖೆಯ ಶಕ್ತಿಶಾಲಿ ಅಭಿವ್ಯಕ್ತಿಯಿಂದ ಕೂಡಿದ ಸುರಪುರ ಚಿತ್ರಶೈಲಿಯ ಹಸ್ತಪ್ರತಿ ಚಿತ್ರಗಳು ವಿಜಯನಗರದ ಚಿತ್ರಶೈಲಿಯನ್ನು ಹೋಲುತ್ತವೆ. ಆಕಾರಗಳು ಬಾಗಿದ ವಿನ್ಯಾಸ, ಕಿರೀಟಗಳ ಸ್ವರೂಪ, ಚಿತ್ರ ಸಂಯೋಜನೆಯ ಪದ್ಧತಿಗಳು ವಿಜಯನಗರ ಶೈಲಿಯನ್ನು ಹೋಲುತ್ತವೆ. ಅನೇಕ ಶ್ರೀಮಂತರ ಮನೆಗಳಲ್ಲಿ, ವಂಶಾವಳಿಯ ಹಸ್ತಪ್ರತಿ ಚಿತ್ರಗಳೂ ಈ ಕಾಲದಲ್ಲಿ ರಚನೆಯಾಗಿವೆ. ಅಂತಹ ಎಲ್ಲ ವಿವರಗಳನ್ನು ಇಲ್ಲಿ ವಿವೇಚಿಸಲಾಗಿದೆ.

ಸುರಪುರ ಶೈಲಿಯ ಸಂಕೀರ್ಣ ಮಾಧ್ಯಮದ ಚಿತ್ರಗಳ ಬಗ್ಗೆ ಆರನೆಯ ಅಧ್ಯಾಯದಲ್ಲಿ ಹೇಳಲಾಗಿದೆ. ಇಲ್ಲಿ ಬೇರೆ ಬೇರೆ ಶ್ರೀಮಂತರ ಮನೆಗಳಲ್ಲಿರುವ ವಿವಿಧ ಮಾಧ್ಯಮಗಳ ಮೇಲೆ ರಚನೆಯಾದ ಕಲಾಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಇದರಲ್ಲಿ ಕೆಲವು ಬಟ್ಟೆ ಮೇಲೆ ರಚಿಸಿದ್ದ, ಮತ್ತೆ ಕೆಲವು ಚಿತ್ರಗಳು ಕಾಗದ, ರಟ್ಟು, ಮರದಫಲಕ, ಲೋಹಫಲಕ, ಗಾಜಿನ ಮೇಲೆಯೂ ರಚನೆಯಾಗಿವೆ. ಅವುಗಳನ್ನೆಲ್ಲ ಇಲ್ಲಿ ಪರಿಶೀಲಿಸಿ ಅಧ್ಯಯನಕ್ಕೊಳಪಡಿಸಲಾಗಿದೆ. ಸುರಪುರ ಶೈಲಿಗಳ ಮೇಲಾದ ಪ್ರಭಾವ, ಪ್ರೇರಣೆಗಳನ್ನು ಏಳನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಸುರಪುರ ಚಿತ್ರಶೈಲಿಯ ಪ್ರತ್ಯೇಕವಾದ ಕಲಾಶೈಲಿಯಾಗಿ ರೂಪುಗೊಂಡರೂ ಇನ್ನಿತರ ಕಲಾಶೈಲಿಗಳ ಪ್ರಭಾವ, ಪ್ರೇರಣೆಗಳಿಂದ ಪುಷ್ಟಿಪಡೆದುಕೊಂಡು ಬೆಳೆದಿದೆ. ಅಂತಹ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ. ವಿಜಯನಗರ ಪ್ರದೇಶದಿಂದ ಬಂದ ಇಲ್ಲಿನ ಗರಿಡಾದ್ರಿ ಕಲಾವಿದರಲ್ಲಿ ಸಹಜವಾಗಿ ಮೂಲ ಕಲಾಶೈಲಿಯ ಅಂಶಗಳು ಕಂಡು ಬರುತ್ತವೆ. ಅಂತೆಯೇ ನಂತರದ ದಿನಗಳಲ್ಲಿ ಸ್ಥಳೀಯ ಜನಪದ ಕಲಾಶೈಲಿಗಳು, ಸುರಪುರ ಪಕ್ಕದ ಬಿಜಾಪುರ, ಗುಲಬರ್ಗಾ ಪ್ರದೇಶಗಳಲ್ಲಿದ್ದ ಮುಸ್ಲಿಂ ಕಲಾಶೈಲಿಗಳ ಪ್ರಭಾವ ಹಾಗೂ ಮರಾಠ ಪೇಶ್ವೆಗಳ ಚಿತ್ರಶೈಲಿಯ ಪ್ರೇರಣೆಗಳು ಉಂಟಾಗಿದ್ದು ಕಂಡು ಬರುತ್ತವೆ. ಇವೆಲ್ಲಕ್ಕಿಂತ ಮಿಗಿಲಾಗಿ ಮೆಡೋಸ್ ಟೇಲರ್ ಸುರಪುರ ಸಂಸ್ಥಾನದಲ್ಲಿ ಆಡಳಿತಾಧಿಕಾರಿಯಾದ ಮೇಲೆ ಪಾಶ್ಚಾತ್ಯ ಕಲೆಯ ದಟ್ಟ ಪ್ರಭಾವ ಸುರಪುರ ಚಿತ್ರಕಲೆಯ ಮೇಲೆ ಉಂಟಾಯಿತು. ಇಂತಹ ಹಲವಾರು ವಿವರಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ಸುರಪುರ ಪರಂಪರಾಗತ ಕಲಾವಿದರು ಮತ್ತು ಚಿತ್ರಗಳ ಸ್ಥಿತಿಗತಿ ಕುರಿತು ವಿವೇಚಿಸಲಾಗಿದೆ. ಮೊದಲನೆಯ ಭಾಗದಲ್ಲಿ ಸುರಪುರ ಚಿತ್ರಕಲಾವಿದರ ಬಗ್ಗೆ ಹೇಳಿದರೆ, ಎರಡನೆಯ ಭಾಗದಲ್ಲಿ ಸುರಪುರ ಚಿತ್ರಗಳ ಸ್ಥಿತಿಗತಿಗಳನ್ನು ತಿಳಿಸಿದೆ.ಸುರಪುರ ಚಿತ್ರಕಲೆಯ ಕಲಾವಿದರಲ್ಲಿ ಗರುಡಾದ್ರಿ ಮನೆತನದವರು ಪ್ರಮುಖರು. ಇವರಲ್ಲಿ ಬಾನಯ್ಯ ಗರುಡಾದ್ರಿ ಖ್ಯಾತನಾಗಿದ್ದು ಇವರ ಹಿರಿಯರು ವಿಜಯನಗರ ಆಸ್ಥಾನ ಕಲಾವಿದರಾಗಿದ್ದರು. ಅಂದಿನ ದಿನಗಳಲ್ಲಿ ಅರಸರಿಂದ ಹೆಚ್ಚಿನ ಪ್ರೋತ್ಸಾಹ ಈ ಕಲಾವಿದರಿಗಿದ್ದು, ನಂತರದ ದಿನಗಳಲ್ಲಿ ಸಂಸ್ಥಾನಿಕರು ಮತ್ತು ಊರಿನ ಶ್ರೀಮಂತರು ಇವರ ಪ್ರೋತ್ಸಾಹಕ್ಕೆ ನಿಂತದ್ದು ತಿಳಿದು ಬರುತ್ತದೆ. ಚಿತ್ರಕ್ಕಾಗಿ ಸೂಕ್ತ ಸಂಭಾವನೆ ಪಡೆಯುತ್ತಿದ್ದ ಕಲಾವಿದರ ಕುಟುಂಬದಲ್ಲಿ ಸ್ತ್ರೀಯರೂ ಕಲಾ ಕೆಲಸದಲ್ಲಿ ನೆರವಾಗುತ್ತಿದ್ದ ವಿವರಗಳನ್ನು ಇಲ್ಲಿ ಹೇಳಲಾಗಿದೆ. ಚಿತ್ರಗಳ ಸ್ಥಿತಿಗತಿ. ಮತ್ತು ಆಪತ್ತುಗಳು ಎಂಬ ಭಾಗದಲ್ಲಿ ಈ ಚಿತ್ರಗಳಿಗೆ ಒದಗುವ ಆಪತ್ತುಗಳನ್ನು ಸ್ವಾಭಾವಿಕ ಆಪತ್ತು, ಪ್ರಾಕೃತಿಕ ಆಪತ್ತು, ವ್ಯಕ್ತಿಗತ ಆಪತ್ತು, ಪ್ರಾಣಿ–ಪಕ್ಷಿಗಳಿಂದಾಗುವ ಆಪತ್ತುಗಳೆಂದು ವಿಂಗಡಿಸಿ ವಿವೇಚಿಸಲಾಗಿದೆ. ಸ್ವಾಭಾವಿಕ ಆಪತ್ತುಗಳಲ್ಲಿ ಚಿತ್ರಗಳ ಬಣ್ಣ ಉದುರಿ ಹೋಗಿ ಚಿತ್ರ ಹಾಳಾಗುವುದನ್ನು ಹೇಳಿದೆ. ಪ್ರಾಕೃತಿಕ ಆಪತ್ತಿನಲ್ಲಿ ಮಳೆ, ಗಾಳಿ, ಬೆಂಕಿಗಳಿಂದ ಚಿತ್ರಳಿಗೆ ಒದಗುವ ಹಾನಿಯನ್ನು ಪರಿಶೀಲಿಸಲಾಗಿದೆ. ವ್ಯಕ್ತಿಗತ ಆಪತ್ತಿನಲ್ಲಿ ಉದ್ದೇಶ ಪೂರ್ವಕ ಮತ್ತು ಅನುದ್ದೇಶ ಪೂರ್ವಕ ಎಂದು ವರ್ಗೀಕರಿಸಲಾಗಿದೆ. ಪ್ರಾಣಿ–ಪಕ್ಷಿಗಳಲ್ಲಿ ಮಂಗ, ಗುಬ್ಬಿ, ಬಾವಲಿ, ಜೇಡ, ಗೆದ್ದಲುಗಳು, ಜೇನುಹುಳುಗಳಿಂದ ಚಿತ್ರಗಳು ಹಾನಿಗೊಳಗಾಗುತ್ತವೆ. ಹೀಗೆ ಯಾವ ಯಾವ ಕಾರಣಗಳಿಂದಾಗಿ ಚಿತ್ರಗಳು ನಾಶವಾಗುತ್ತಿವೆ ಎಂಬುದನ್ನು ಹೇಳಿ, ಚಿತ್ರಗಳ ಸಂರಕ್ಷಣೆಗೆ ಮಾರ್ಗೋಪಾಯಗಳನ್ನು ಹೇಳಲಾಗಿದೆ. ಇಲ್ಲಿಯೂ ಪೂರಕ ಮತ್ತು ನೇರ ಕ್ರಮಗಳೆಂದು ವಿಂಗಡಿಸಿ ವಿವೇಚಿಸಲಾಗಿದೆ.

ಈ ಪ್ರಬಂಧವು ಸುರಪುರ ಚಿತ್ರಕಲೆಯ ಕುರಿತಾಗಿದ್ದು, ಆ ಕಲೆಯ ಅನೇಕ ಅಂಶಗಳನ್ನು ಬಿಂಬಿಸುತ್ತದೆ. ಸುರಪುರ ಚಿತ್ರಕಲೆಯ ಶೈಲಿ, ವಸ್ತುವಿಷಯಗಳು, ಪ್ರಕಾರಗಳು, ನೆಲೆಗಳು, ಮಾಧ್ಯಮಗಳು, ಕಲಾವಿದರ ಬಗ್ಗೆ ಹೆಚ್ಚಿನ ಮಾಹಿತಿ ನೀಡುವ ಈ ಗ್ರಂಥ ಚಿತ್ರರಚನಾ ಕ್ರಮ, ಸ್ಥಳಾವಕಾಶದ ಪರಿಕಲ್ಪನೆ, ಸಂಯೋಜನಾ ವಿನ್ಯಾಸಗಳು, ವರ್ಣಸಂಸ್ಕಾರ, ರೇಖಾ ಹರವು, ಮೈವಳಿಕೆ, ಇಂತಹ ಚಿತ್ರಕಲಾ ತಾಂತ್ರಿಕ ಅಂಶಗಳ ಬಗೆ ಮೂಕವಾಗಿದೆ. ಅಲ್ಲದೆ ಚಿತ್ರಗಳ ಸಾಂಸ್ಕೃತಿಕ ಹಿನ್ನೆಲೆ ಮತ್ತು ಮಹತ್ವಗಳನ್ನು ಪೂರಕವಾಗಿ ಅಧ್ಯಯನಕ್ಕೆ ಎತ್ತಿಕೊಂಡಿದ್ದರೆ ಇನ್ನೂ ಹೆಚ್ಚಿನ ಮೌಲಿಕತೆಯು ಉಂಟಾಗುತ್ತಿತ್ತು.

**ಕರ್ನಾಟಕದ ಐತಿಹಾಸಿಕ ದೀಪಸ್ತಂಭಗಳು :**

ದೇವಾಲಯದ ಅವಿಭಾಜ್ಯ ಅಂಗವಾಗಿರುವ ದೀಪಸ್ತಂಭಗಳು ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಗತಿಗಳ ಜೊತೆಗೆ ಕಲಾತ್ಮಕ ವಿಚಾರಗಳನ್ನು ಬಿಂಬಿಸುತ್ತವೆ. ಈ ದೀಪಸ್ತಂಭಗಳ ಬಗ್ಗೆ ಗೀತಾಂಜಲಿ ಆಚಾರ್ಯ 'ಕರ್ನಾಟಕದ ಐತಿಹಾಸಿಕ ದೀಪಸ್ತಂಭಗಳು, ಒಂದು ಅಧ್ಯಯನ' ಎಂಬ ವಿಷಯದ ಕುರಿತು ಪಿಎಚ್.ಡಿ. ಅಧ್ಯಯನ ಮಾಡಿದ್ದಾರೆ.[೧೭] ಕರ್ನಾಟಕದ ಐತಿಹಾಸಿಕ ದೀಪಸ್ತಂಭಗಳು ಈ ಅಧ್ಯಯನವು ಮೈಸೂರು ವಿಭಾಗವನ್ನು ಅನುಲಕ್ಷಿಸಿ ನಡೆಸಲಾಗಿದ್ದು, ಪೂರಕವಾಗಿ ಮತ್ತು ಸಾಂದರ್ಭಿಕವಾಗಿ ಇತರ ಪ್ರದೇಶಗಳ ದೀಪಸ್ತಂಭಗಳನ್ನು ಬಳಸಿಕೊಳ್ಳಲಾಗಿದೆ. ಈ ಪ್ರಬಂಧವು ಒಟ್ಟು ಏಳು ಅಧ್ಯಾಯಗಳಲ್ಲಿ ಹರಡಿಕೊಂಡು ವಿಶ್ಲೇಷಣೆ ಮಾಡಲ್ಪಟ್ಟಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ ಮತ್ತು ವ್ಯಾಪ್ತಿಗಳನ್ನು ತಿಳಿಸುವುದರ ಜೊತೆಗೆ ಅಧ್ಯಯನದ ಮಹತ್ವ, ಪ್ರಸ್ತುತತೆಗಳನ್ನು ಹೇಳಲಾಗಿದೆ.

ದೀಪಸ್ತಂಭಗಳ ಐತಿಹಾಸಿಕ ಹಿನ್ನೆಲೆಯನ್ನು ಎರಡನೆಯ ಅಧ್ಯಾಯದಲ್ಲಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ದೀಪಸ್ತಂಭಗಳ ಐತಿಹಾಸಿಕ ನೆಲೆ ಹಿನ್ನೆಲೆ ಎಂಬ ಈ ಅಧ್ಯಾಯದಲ್ಲಿ ದೀಪಸ್ತಂಭಗಳ ಕ್ರಮಾನುಗತ ಐತಿಹಾಸಿಕ ಹಿನ್ನೆಲೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಮೊದಲ ಘಟ್ಟದಲ್ಲಿ ಪೌರಾಣಿಕ ಹಿನ್ನೆಲೆ ಕುರಿತು ಹೇಳಿದರೆ, ಎರಡನೆ ಘಟ್ಟದಲ್ಲಿ ಚಾರಿತ್ರಿಕ ಹಿನ್ನೆಲೆ ಕಟ್ಟಿಕೊಡಲಾಗಿದೆ. ಬೇರೆ ಬೇರೆ ಪುರಾಣಗಳಲ್ಲಿ ಉಲ್ಲೇಖವಾಗಿರುವ ದೀಪಸ್ತಂಭಗಳನ್ನು ಹೇಳುವಾಗ ಅವುಗಳ ಶೈಲಿ, ಲಕ್ಷಣ, ಸ್ವರೂಪ, ಧಾರ್ಮಿಕ ಮಹತ್ವ ಮುಂತಾದವುಗಳನ್ನು ಗಮನಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ದೀಪಸ್ತಂಭಗಳ ವೈವಿಧ್ಯತೆಗಳ ಕುರಿತಾಗಿ ವಿವೇಚಿಸಲಾಗಿದೆ. ದೀಪಸ್ತಂಭ ದೇವಾಲಯದ ಆವರಣದಲ್ಲಿರುವ ಒಂದುಸ್ತಂಭ. ಇದು ದೇವಾಲಯದ ಗರ್ಭಗುಡಿಯ ಎದುರಿಗೆ ಇರುವುದು ಸಾಮಾನ್ಯವಾದರೂ ಕೆಲವುಸಂದರ್ಭಗಳಲ್ಲಿ ದೇವಾಲಯದ ಎಡಮೂಲೆ, ಬಲಮೂಲೆ, ಪಾರ್ಶ್ವ ಭಾಗಗಳಲ್ಲೂ ಸ್ಥಾಪನೆಯಾಗಿರುತ್ತವೆ. ಒಂದೊಂದು ದೀಪಸ್ತಂಭಗಳ ಮೇಲೆ ಒಂದೊಂದು ದೀಪವಿದ್ದರೆ, ಮತ್ತೆ ಕೆಲವು ದೀಪಸ್ತಂಭಗಳಲ್ಲಿ ಒಂದಕ್ಕಿಂತ ಹೆಚ್ಚಿನ ದೀಪಗಳಿರುತ್ತವೆ. ಅಲ್ಲದೆ ವಿನ್ಯಾಸದಲ್ಲಿಯೂ ವಿಭಿನ್ನತೆ ಕಂಡುಬರುತ್ತದೆ. ಕೊಳವೆಯಾಕಾರ ಮತ್ತು ಚೌಕಾಕಾರದ ಸರಳವಾಗಿರುವ ದೀಪಸ್ತಂಭಗಳಿಂದ ಹಿಡಿದು ಚತುಷ್ಕೋನ, ಪಂಚಕೋನ, ಷಟ್ಕೋನ, ಅಷ್ಟಕೋನ ಹೀಗೆ ಹಲವು ಆಕಾರಗಳಲ್ಲಿರುತ್ತವೆ. ಎತ್ತರದಲ್ಲಿ ಒಟ್ಟು ಸ್ವರೂಪದಲ್ಲಿ ಒಂದಕ್ಕಿಂತ ಒಂದು ಭಿನ್ನವಾಗಿರುತ್ತವೆ. ಇಲ್ಲಿ ದೀಪಸ್ತಂಭಗಳ ವೈವಿಧ್ಯತೆಗಳ ಕುರಿತು ವಿವೇಚಿಸಲಾಗಿದೆ.

---

೧೭. ಗೀತಾಂಜಲಿ ಆಚಾರ್ಯ : ಕರ್ನಾಟಕದ ಐತಿಹಾಸಿಕ ದೀಪಸ್ತಂಭಗಳು, ಒಂದು ಅಧ್ಯಯನ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಪಿಎಚ್.ಡಿ. ಪ್ರಬಂಧ-೨೦೦೭

ದೇವಾಲಯಗಳು ಮತ್ತು ಇತರ ಕಟ್ಟಡಗಳಂತೆ ದೀಪಸ್ತಂಭಗಳು ಪ್ರತ್ಯೇಕ ವಾಸ್ತುವಿನ್ಯಾಸ ಮತ್ತು ರಚನಾ ವಿಧಾನಗಳನ್ನು ಹೊಂದಿದ್ದು ಅವುಗಳ ಬಗ್ಗೆ ನಾಲ್ಕನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ವಾಸ್ತು ಶಾಸ್ತ್ರದಲ್ಲಿ ದೀಪಸ್ತಂಭಗಳ ರಚನೆಯ ಬಗೆಗೆ ವಿವರಗಳು ದೊರಕುತ್ತವೆ. ದೇವಾಲಯಗಳ ನಿರ್ಮಾಣ ಸಂದರ್ಭದಲ್ಲಿ ಹೇಗೆ ಪ್ರಮಾಣ, ದಿಕ್ಕು, ಧಾರ್ಮಿಕ ವಿಧಿಗಳನ್ನು ಅನುಸರಿಸಲಾಗುವುದೋ ಅದೇ ರೀತಿಯಲ್ಲಿ ದೀಪಸ್ತಂಭಗಳ ರಚನೆಯಲ್ಲಿಯೂ ಈ ಕ್ರಮಗಳನ್ನು ಅನುಸರಿಸಲಾಗುವುದು. ಯಾವ ಧಾರ್ಮಿಕ ವಿಧಿಗಳನ್ನು ಆಚರಿಸಬೇಕು? ಯಾವ ದಿಕ್ಕಿನಲ್ಲಿ ಪ್ರತಿಷ್ಠಾಪಿಸಬೇಕು? ಅದರ ಸಂದರ್ಭಗಳಾವುವು? ಮುಂತಾದ ವಿಷಯಗಳ ಬಗ್ಗೆ ಪ್ರಾಚೀನ ಗ್ರಂಥಗಳು ತಿಳಿಸುತ್ತವೆ. ಅವುಗಳಲ್ಲಿನ ಈ ಬಗೆಯ ಮಾಹಿತಿಗಳನ್ನು ಬಳಸಿಕೊಂಡು ದೀಪಸ್ತಂಭಗಳ ರಚನಾಹಿನ್ನೆಲೆ ಮತ್ತು ವಾಸ್ತು ವಿನ್ಯಾಸಗಳನ್ನು ಕುರಿತು ಹೇಳಲಾಗಿದೆ. ವಾಸ್ತುಶಾಸ್ತ್ರದ ಪ್ರಕಾರ ದೇವಾಲಯದ ಆವರಣದ ಹೊರಗೆ ಇರುವ ಬಲಿಪೀಠವು ಮಹಾದ್ವಾರದ ನಡುವೆ ಇರುವುದನ್ನು ನೋಡಬಹುದು. ದೀಪಸ್ತಂಭಗಳ ರಚನೆಯಲ್ಲಿ ಮುಖ್ಯವಾಗಿ ಬ್ರಹ್ಮಭಾಗ, ವಿಷ್ಣುಭಾಗ ಮತ್ತು ರುದ್ರಭಾಗಗಳನ್ನು ಮಾಡಲಾಗಿದೆ. ಇಂತಹ ವಿವರಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ನಾಡಿನಾದ್ಯಂತ ಇರುವ ದೀಪಸ್ತಂಭಗಳು ವಿವಿಧ ಬಗೆಯ ಮಾಧ್ಯಮಗಳಲ್ಲಿ ರಚನೆಯಾಗಿವೆ. ಮೈಸೂರು ಭಾಗದಲ್ಲಿಯೂ ಈ ಬಗೆಯ ವೈವಿಧ್ಯತೆ ಕಂಡು ಬಂದಿದ್ದು ದೀಪಸ್ತಂಭಗಳ ರಚನಾ ಮಾಧ್ಯಮಗಳನ್ನು ವಿಂಗಡಿಸಿಕೊಂಡು ಐದನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ದೀಪಸ್ತಂಭಗಳು ಮುಖ್ಯವಾಗಿ ಶಿಲೆ, ಮರ, ಲೋಹ ಮತ್ತು ಸಂಕೀರ್ಣ ಮಾಧ್ಯಮಗಳಲ್ಲಿ ರಚನೆಯಾಗಿದ್ದು ಕಂಡು ಬರುತ್ತವೆ. ಸುಂದರತೆ ಮತ್ತು ವೈವಿಧ್ಯತೆಯಲ್ಲಿ ಶಿಲಾ ದೀಪಸ್ತಂಭಗಳು ಇತರ ಮಾಧ್ಯಮದ ದೀಪಸ್ತಂಭಗಳಿಗಿಂತ ಮುಂದಿವೆ. ಆಯಾ ಭಾಗದಲ್ಲಿ ದೊರೆಯುವ ಪರಿಕರ, ಅಲ್ಲಿನ ಪರಿಸರ ಮತ್ತು ನಂಬಿಕೆ ಆಚರಣೆಗಳಿಗೆ ಅನುಸಾರವಾಗಿ ಈ ದೀಪಸ್ತಂಭಗಳು ರಚನೆಯಾಗಿವೆ. ಸಂಕೀರ್ಣ ಮಾಧ್ಯಮದ ದೀಪಸ್ತಂಭಗಳಲ್ಲಿ ಮರ,ಲೋಹ ಇಲ್ಲವೆ ಶಿಲೆ, ಮರ, ಲೋಹ ಮತ್ತು ಸಂಯುಕ್ತ ಮಾಧ್ಯಮಗಳ ಬಳಕೆ ಕಂಡು ಬರುತ್ತದೆ. ಕೆಲವು ಶಿಲಾ ದೀಪಸ್ತಂಭಗಳಲ್ಲಿ ಲೋಹದ ದೀಪಗಳನ್ನು ಅಳವಡಿಸಿದ್ದರೆ, ಮತ್ತೆ ಕೆಲವು ಕಡೆಗಳಲ್ಲಿ ಮರದ ಸ್ತಂಭಗಳಲ್ಲಿ ಲೋಹದ ದೀಪಗಳನ್ನು ಜೋಡಿಸಲಾಗಿದೆ. ಇಂತಹ ವಿವಿಧ ರೀತಿಯ ದೀಪಸ್ತಂಭಗಳನ್ನು ಕುರಿತು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಆರನೆಯ ಅಧ್ಯಾಯದಲ್ಲಿ ದೀಪಸ್ತಂಭಗಳ ಮೇಲಿನ ಶಿಲ್ಪವಿನ್ಯಾಸಗಳ ಕುರಿತು ಚರ್ಚಿಸಲಾಗಿದೆ. ದೀಪಸ್ತಂಭದ ಕೆಳಹಂತದಿಂದ ಪ್ರಾರಂಭಿಸಿ ಮೇಲಿನ ತುದಿಯವರೆಗೆ ಹಲವಾರು ಶಿಲ್ಪಗಳನ್ನು ರಚಿಸಲಾಗುತ್ತದೆ. ಆನೆ, ಸಿಂಹ, ಕುದುರೆ, ನಂದಿ ಶಿಲ್ಪಗಳು ಸಾಮಾನ್ಯವಾಗಿರುತ್ತವಾದರೂ ದೇವಾಲಯದ ಮುಖ್ಯ ದೇವರ ಸಂಬಂಧಿತವಾಗಿರುವ ಶಿಲ್ಪಗಳನ್ನು ಹೆಚ್ಚಾಗಿ ಇದರಲ್ಲಿ ರಚನೆ ಮಾಡಲಾಗುತ್ತದೆ. ವೈಷ್ಣವ ದೇವಾಲಯವಾಗಿದ್ದರೆ, ಹನುಮಂತ, ಗರುಡ, ಜಯ–ವಿಜಯ ಶಿಲ್ಪಗಳು, ಶೈವ ದೇವಾಲಯವಾಗಿದ್ದರೆ, ನಂದಿ, ಬೃಂಗಿ, ವೀರಭದ್ರ, ಇನ್ನಿತರ ಶಿಗಣಗಳ ಶಿಲ್ಪಗಳು ರಚನೆಗೊಂಡಿರುತ್ತವೆ. ಶಾಕ್ತ ದೇವಾಲಯದ ದೀಪಸ್ತಂಭದಲ್ಲಿ ಸಿಂಹ, ಆನೆ, ಹುಲಿ, ಶಿಲ್ಪಗಳಿರುತ್ತವೆ. ಇವುಗಳಲ್ಲದೆ ಅಲಂಕಾರಿಕ ಶಿಲ್ಪಗಳೂ ಇಲ್ಲಿ ರಚನೆಯಾಗಿರುತ್ತವೆ ಎಂಬುದಾಗಿ ಇಲ್ಲಿ ತಿಳಿಸಲಾಗಿದೆ. ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು, ಒಟ್ಟು ಅಧ್ಯಯನದ ಫಲಿತಗಳನ್ನು ಇಲ್ಲಿ ಕೊಡಲಾಗಿದೆ. ಈ ಪ್ರಬಂಧದಲ್ಲಿ ಧಾರ್ಮಿಕ, ಐತಿಹಾಸಿಕ, ಕಲಾತ್ಮಕ ವಿಚಾರಗಳ ಜೊತೆಗೆ ಸಾಮಾಜಿಕ ವಿವರಗಳು ಬಿಚ್ಚಿಕೊಂಡಿವೆ.

ಇದುವರೆಗೆ ಗಮನಿಸಿದ ಕ್ಷೇತ್ರೀಯ ಅಧ್ಯಯನಗಳಲ್ಲಿ ವೈವಿಧ್ಯತೆ ಇದೆ. ಕಲಾಪ್ರಕಾರಗಳು, ಕಲಾನೆಲೆಗಳು, ಕಲಾಶೈಲಿಗಳು ಪ್ರಮುಖವಾಗಿ ಇಂತಹ ಅಧ್ಯಯನಗಳಲ್ಲಿ ಬೆಳಕುಕಂಡಿವೆ. ಭಿತ್ತಿಚಿತ್ರಕಲೆ, ಕಿರುರೂಪಚಿತ್ರಕಲೆ, ಹಸ್ತಪ್ರತಿಚಿತ್ರಕಲೆ, ಜನಪದಚಿತ್ರಕಲೆ, ಶಿಲ್ಪಕಲೆ, ರಂಗೋಲಿಕಲೆ, ರಥಶಿಲ್ಪಕಲೆ, ತೊಗಲುಗೊಂಬೆಕಲೆ, ಇವುಗಳ ಬಗ್ಗೆ ಪ್ರಮುಖವಾಗಿ ಇಲ್ಲಿನ ಅಧ್ಯಯನಗಳು ಬೆಳಕುಬೀರುತ್ತವೆ. ಕ್ಷೇತ್ರೀಯ ಅಧ್ಯಯನಗಳಲ್ಲಿ ಬಹುಮುಖವಿಧದ ಸಂಗತಿಗಳು ಹೊರಹೊಮ್ಮುತ್ತವೆ. ಚಿತ್ರನೆಲೆಗಳು, ಚಿತ್ರವಿಷಯ, ಚಿತ್ರಶೈಲಿ, ತಾಂತ್ರಿಕತೆ, ಕಲಾವಿದರು, ಪ್ರಭಾವ, ಪ್ರೇರಣೆ, ಪ್ರೋತ್ಸಾಹ, ಧಾರ್ಮಿಕತೆ, ನಂಬಿಕೆ, ಆಚರಣೆಗಳಂತಹ ವಿಷಯಗಳು ಅಧ್ಯಯನಕ್ಕೊಳಪಟ್ಟಿವೆ.

**ಬ. ವ್ಯಕ್ತಿಅಧ್ಯಯನಗಳು :**

ವ್ಯಕ್ತಿಅಧ್ಯಯನಗಳು ಕ್ಷೇತ್ರೀಯ ಅಧ್ಯಯನಗಳ ಹಾಗೆ ವೈವಿಧ್ಯತೆಗಳನ್ನು ಹೊಂದಿಲ್ಲ. ನಿರ್ಧಿಷ್ಟಮಾಹಿತಿಯನ್ನು ನೀಡುವ ಈ ಅಧ್ಯಯನಗಳಲ್ಲಿ ಕಲಾವಿದರ ಜನನ, ಬಾಲ್ಯ, ತಂದೆ-ತಾಯಿ, ಸಾಂಸ್ಕೃತಿಕ ಪರಿಸರ, ಕಲಾಶಿಕ್ಷಣ, ಕಲಾಬದುಕು, ಕಲಾಶೈಲಿ, ಪ್ರಭಾವ, ಪ್ರೇರಣೆಗಳಂತಹ ಸಂಗತಿಗಳು ತಿಳಿದುಬರುತ್ತವೆ. ಅಧ್ಯಯನ ವಿಧಾನಗಳಲ್ಲಿಯೂ ಏಕರೂಪತೆಯ ವಿಧಾನ ಅನುಸರಿಸಿರುವ ವ್ಯಕ್ತಿಅಧ್ಯಯನ ಪ್ರಬಂಧಗಳು ಈ ಕೆಳಗಿನಂತಿವೆ.

**ಕಲಾವಿದ ಎಂ.ಎ.ಚೆಟ್ಟಿ, ಜೀವನ ಮತ್ತು ಕಲಾಕೃತಿಗಳು :**

ಉತ್ತರ ಕರ್ನಾಟಕ ಭಾಗದ ಶ್ರೇಷ್ಠ ಕಲಾವಿದರಲ್ಲಿ ಒಬ್ಬರಾದ ಎಂ.ಎ.ಚೆಟ್ಟಿಯವರ ಜೀವನ ಮತ್ತು ಕಲಾಕೃತಿಗಳ ಕುರಿತು ಲಕ್ಷ್ಮೀದೇವಿ ಗವಾಯಿ ಅವರು ಡಾ.ಎಸ್.ಸಿ.ಪಾಟೀಲ ಇವರ ಮಾರ್ಗದರ್ಶನದಲ್ಲಿ ಅಧ್ಯಯನ ಕೈಗೊಂಡು ೨೦೦೨ರಲ್ಲಿ ಕನ್ನಡ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದುಕೊಂಡಿದ್ದಾರೆ.[೧೮] ಈ ಪ್ರಬಂಧವು ನಾಗನೂರು ರುದ್ರಾಕ್ಷಿಮಠದಿಂದ ಪ್ರಕಟಣೆಯೂ ಆಗಿದೆ. ಈ ಅಧ್ಯಯನವು ಒಟ್ಟು ಎಂಟು ಅಧ್ಯಾಯಗಳಲ್ಲಿ ವಿಂಗಡಣೆಗೊಂಡಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ಮಹತ್ವಗಳನ್ನು ತಿಳಿಸಿದ್ದಾರೆ. ಜೊತೆಗೆ ತಮ್ಮ ಅಧ್ಯಯನದ ಸ್ವರೂಪ ಹಾಗೂ ವಿಧಾನಗಳನ್ನು ಹೇಳಿದ್ದಾರೆ. ಎರಡನೆಯ ಅಧ್ಯಾಯದಲ್ಲಿ ಎಂ.ಎ.ಚೆಟ್ಟಿಯವರ ಬಾಲ್ಯಜೀವನದ ಜೊತೆಗೆ ಅನೇಕ ಸಂಗತಿಗಳನ್ನು ತಿಳಿಸಲಾಗಿದೆ. ಗದುಗಿನ ಪೌರಾಣಿಕ, ಐತಿಹಾಸಿಕ ಮಹತ್ವ, ಕಲಾಹಿನ್ನೆಲೆ, ಚೆಟ್ಟಿಯವರ ಕೌಟುಂಬಿಕ ಹಿನ್ನೆಲೆ ಇವುಗಳನ್ನು ತಿಳಿಸಲಾಗಿದೆ. ನಂತರ ಚೆಟ್ಟಿಯವರ ಜನನ, ಬಾಲ್ಯ, ಪ್ರಾಥಮಿಕ ಶಿಕ್ಷಣ, ಮಾಧ್ಯಮಿಕ ಶಿಕ್ಷಣ, ಈ ಸಂದರ್ಭಗಳಲ್ಲಿದ್ದ ಸ್ನೇಹಿತರು, ಗುರುವೃಂದ, ಅವರ ಪ್ರಭಾವಗಳು, ಕಲಾವಿದರಾಗಿ ರೂಪುಗೊಳ್ಳಲು ಕಾರಣರಾದ ವ್ಯಕ್ತಿಗಳು, ಕಲಾ ಆಸಕ್ತಿಗೆ ಪ್ರಭಾವ ಬೀರಿದ ಅಂಶಗಳು, ಅವರ ಚಿಕ್ಕಪ್ಪನವರ ಆಶ್ರಯ, ಪರಿಶುದ್ಧ ಕಾಯಕದ ಬದುಕು, ಕೌಟುಂಬಿಕ ಜೀವನ, ಅವರ ಬಾಲ್ಯ ಜೀವನದ ಪ್ರಮುಖ ಘಟನೆಗಳನ್ನು ಈ ಅಧ್ಯಾಯದಲ್ಲಿ ಕೊಡಲಾಗಿದೆ.

ಕಲಾವಿದ ಎಂ.ಎ.ಚೆಟ್ಟಿಯವರು ಕಲಾಶಿಕ್ಷಣ ಪಡೆದುಕೊಳ್ಳಲು ಮುಂಬೈ ಜೆ.ಜೆ. ಕಲಾಶಾಲೆಗೆ ಸೇರಿಕೊಂಡಿದ್ದು, ಅಲ್ಲಿನ ವಿವರಗಳ ಬಗ್ಗೆ ಮೂರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಜೆ.ಜೆ. ಕಲಾಶಾಲೆಯಲ್ಲಿ ಕಲಾ ವ್ಯಾಸಂಗದಲ್ಲಿ, ಅಂದಿನ ದಿನಗಳಲ್ಲಿ ಪ್ರತ್ಯೇಕವಾದ ಹಲವಾರು ಕೋರ್ಸುಗಳಿದ್ದವು. ಇವರು ಡ್ರಾಯಿಂಗ್ ಮತ್ತು ಪೇಂಟಿಂಗ್ ವಿಷಯವನ್ನು ಆಯ್ದುಕೊಂಡರು.

---

೧೮. ಲಕ್ಷ್ಮೀದೇವಿ ಗವಾಯಿ : ಕಲಾವಿದ ಎಂ.ಎ.ಚೆಟ್ಟಿ, ಜೀವನ ಮತ್ತು ಕಲಾಕೃತಿಗಳು, ಒಂದು ಅಧ್ಯಯನ: ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಪ್ರಬಂಧ-೨೦೦೨

ಅಲ್ಲಿ ಖ್ಯಾತ ಕಲಾವಿದರಾದ ಕೆ.ಬಿ. ತಾಸ್ಕರ್, ಎಂ.ಎ.ದುರಂಧರ ಇವರ ಮಾರ್ಗದರ್ಶನದಲ್ಲಿ ಚಿತ್ರ ಕಲಾಭ್ಯಾಸವನ್ನು ಕೈಗೊಂಡರು. ಆ ದಿನಗಳಲ್ಲಿ ಗ್ಲಾಡ್‌ಸ್ಟೋನ್ ಸಾಲೋಮನ್ ಇವರು ಕಲಾಶಾಲೆಯ ಮುಖ್ಯಸ್ಥರಾಗಿದ್ದು ಶಿಸ್ತು, ನಿಯಮಗಳಿಗೆ ಹೆಸರಾಗಿದ್ದರು. ಇವರ ಪ್ರೀತಿಯ ಶಿಷ್ಯರಾದ ಚೆಟ್ಟಿಯವರು ಇತರ ಗುರುಗಳೊಂದಿಗೆ ಅನ್ಯೋನ್ಯವಾಗಿದ್ದರು. ಇಂತಹ ವಿಷಯಗಳ ಜೊತೆಗೆ ಆಗಿನ ಪಠ್ಯಕ್ರಮ, ಶೈಕ್ಷಣಿಕ ವಿವರ, ಪರೀಕ್ಷಾ ಪದ್ಧತಿ, ಅಧ್ಯಾಪಕವರ್ಗ, ಅವರು ಕಲೆಯನ್ನು ವಿದ್ಯಾರ್ಥಿಗಳಿಗೆ ಕಲಿಸುತ್ತಿದ್ದ ಪರಿಣಾಮಕಾರಿಯಾದ ಕ್ರಮಗಳು, ಚೆಟ್ಟಿಯವರ ಸ್ನೇಹವರ್ಗದ ಸದಸ್ಯರ ಬಗ್ಗೆ ತಿಳಿಸಲಾಗಿದೆ. ಕರ್ನಾಟಕದ ಅದರಲ್ಲೂ ಉತ್ತರ ಕರ್ನಾಟಕದ ಪ್ರಮುಖ ವೀರಶೈವ ಮಠಗಳಲ್ಲಿ ಇವರು ರಚಿಸಿದ ವರ್ಣಚಿತ್ರಗಳು ಕಂಡುಬರುತ್ತವೆ. ಚೆಟ್ಟಿಯವರು ಪಾಶ್ಚಾತ್ಯ ಶೈಲಿಯಲ್ಲಿ ಎಂ.ಎ.ಚೆಟ್ಟಿಯವರ ಕಲಾ ಬದುಕನ್ನು ನಾಲ್ಕನೆಯ ಅಧ್ಯಾಯವು ಬಿಂಬಿಸುತ್ತದೆ. ಮುಂಬೈನ ಜೆ.ಜೆ.ಕಲಾಶಾಲೆಯಿಂದ ಡಿಪ್ಲೋಮಾ ಮುಗಿಸಿಕೊಂಡು ಸೊಲ್ಲಾಪುರಕ್ಕೆ ಬಂದು ನೆಲೆಸಿದ ಚೆಟ್ಟಿಯವರು ಅಲ್ಲಿಯೇ ಕಲಾಕೃತಿರಚನೆ ಮಾಡತೊಡಗಿದರು. ಪುರಾಣಸಂಬಂಧಿ ಚಿತ್ರವನ್ನು ಮೊದಲಬಾರಿಗೆ ರಚಿಸಿದ್ದು, ತೈಲವರ್ಣ ಚಿತ್ರರಚನೆಮಾಡಿ ಅಖಿಲ ಭಾರತ ಮಟ್ಟದ ಸ್ಪರ್ಧೆಯಲ್ಲಿ ಭಾಗವಹಿಸಿ ಮೊದಲ ಸ್ಥಾನ ಗಳಿಸಿಕೊಂಡಿದ್ದು ಇಲ್ಲಿದ್ದಾಗಲೆ. ಇವರ ಕಲಾಬದುಕಿಗೆ ಮುನ್ನುಡಿ ಬರೆದಿದ್ದು ಸೊಲ್ಲಾಪುರ ನಗರವೇ ಎಂದು ಹೇಳಬಹುದು. ಈ ಮೊದಲು ಪ್ರದರ್ಶನದಲ್ಲಿ ಭಾಗವಹಿಸಿದ್ದು, ಬಹುಮಾನ ಪಡೆದುಕೊಂಡಿದ್ದು, ದೊರೆತ ಮನ್ನಣೆ ಮುಂತಾದ ಅನುಭವಗಳ ಬಗ್ಗೆ ಇಲ್ಲಿ ಹೇಳಲಾಗಿದೆ. ಕೆಲದಿನಗಳ ಬಳಿಕ ಗದುಗಿಗೆ ಆಗಮಿಸಿದ ಚೆಟ್ಟಿಯವರು ಇಲ್ಲಿನ ವಿಜಯ ಕಲಾಮಂದಿರ ಸಂಸ್ಥೆಯ ಕಲಾಶಾಲೆಯಲ್ಲಿ ಶಿಕ್ಷಕರಾಗಿ, ಉಪಪ್ರಾಚಾರ್ಯರಾಗಿ ಒಟ್ಟು ೨೫ ವರ್ಷಗಳ ಸೇವೆ ಸಲ್ಲಿಸುವ ಮೂಲಕ ಈ ಕಲಾಶಾಲೆಯ ಬೆಳವಣಿಗೆಯಲ್ಲಿ ಶ್ರೀ.ಟಿ.ಪಿ.ಅಕ್ಕಿಯವರೊಂದಿಗೆ ಕೈಜೋಡಿಸಿದರು. ವಿದ್ಯಾರ್ಥಿಗಳ ಪ್ರೀತಿಯ ಗುರುಗಳಾಗಿದ್ದ ಇವರು ಕಲಿಸುವ ವಿಷಯದಲ್ಲಿ ಪ್ರಾಮಾಣಿಕ ಮತ್ತು ಶ್ರದ್ಧೆಯುಳ್ಳವರಾಗಿದ್ದರು.

ಗದುಗಿನಲ್ಲಿ ನೆಲೆಸಿದ ಚೆಟ್ಟಿಯವರು ಕಲಾಶಾಲೆಯಲ್ಲಿ ಚಿತ್ರ ರಚಿಸುವುದು ಮಾತ್ರವಲ್ಲದೆ, ಈ ಸಂದರ್ಭದಲ್ಲಿ ಮನೆ ಮಠಗಳಿಂದ ಚಿತ್ರ ರಚಿಸಿ ಕೊಡಲು ಇವರಿಗೆ ಆಹ್ವಾನಗಳು ಬರುತ್ತಿದ್ದವು. ಇಂತಹ ಆಹ್ವಾನಗಳಲ್ಲಿ ಹೆಚ್ಚಿನವು ಭಾವಚಿತ್ರ, ವ್ಯಕ್ತಿಚಿತ್ರ ಇಲ್ಲವೆ ಶಿವಶರಣರು, ಸಂತ ಮಹಾಂತರ ಚಿತ್ರಗಳೇ ಆಗಿರುತ್ತಿದ್ದವು. ಹೀಗೆ ಗದುಗಿನಲ್ಲಿ ಚೆಟ್ಟಿಯವರು ಯಾವ ಯಾವ ಮನೆಯವರಿಗೆ, ಸಂಘ–ಸಂಸ್ಥೆಗಳಿಗೆ, ಮಠ–ಮಾನ್ಯಗಳಿಗೆ·ಎಂತಹ ಚಿತ್ರಗಳನ್ನು ರಚಿಸಿ ಕೊಟ್ಟರು ಎನ್ನುವ ವಿವರಗಳು ಈ ಅಧ್ಯಾಯದಲ್ಲಿ ಚರ್ಚಿತಗೊಂಡಿವೆ. ಚೆಟ್ಟಿಯವರು ಚಿತ್ರಕಲಾಕೃತಿಗಳನ್ನು ಮಾಧ್ಯಮಗಳಿಗೆ ಅನುಸಾರವಾಗಿ ಪೆನ್ಸಿಲ್, ಚಾರ್ಕೊಲ್, ಇಂಕ್ ಮತ್ತು ವರ್ಣ ಚಿತ್ರಗಳೆಂದು ವಿಂಗಡಿಸಿ ವಿಶ್ಲೇಷಣೆ ಮಾಡಿರುವುದು ಐದನೆಯ ಅಧ್ಯಾಯದಲ್ಲಿದೆ. ಈ ರೀತಿಯ ಮುಖ್ಯ ವಿಭಾಗಗಳಲ್ಲದೆ ಶಿರಭಾವ ಚಿತ್ರಗಳು, ವ್ಯಕ್ತಿಚಿತ್ರಗಳು, ಸ್ಥಿರಚಿತ್ರಗಳು, ವಸ್ತು ಚಿತ್ರಗಳು, ನಿಸರ್ಗ ಚಿತ್ರಗಳು, ಸಂಯೋಜನಾ ಚಿತ್ರಗಳು, ರೇಖಾಚಿತ್ರಗಳು ಎಂಬುದಾಗಿ ಉಪ ವಿಂಗಡಣೆಯನ್ನು ಮಾಡಿಕೊಂಡು ವಿವೇಚಿಸಲಾಗಿದೆ. ಅದರಂತೆ ವರ್ಣಚಿತ್ರಗಳಲ್ಲಿ, ಸಂಯೋಜನಾ ಚಿತ್ರಗಳಲ್ಲಿ ಪೌರಾಣಿಕ ಚಿತ್ರಗಳು, ದೈನಂದಿನ ಬದುಕಿನ ಚಿತ್ರಗಳು ಹೀಗೆ ವಿಷಯವಾರು ವರ್ಗೀಕರಣಗೊಳಿಸಿ ವಿವರಿಸಿದೆ. ರೇಖಾಚಿತ್ರಗಳಲ್ಲಿ ಭಾವಾಭಿವ್ಯಕ್ತಿಯ ತೀವ್ರತೆ, ಚಲನೆ, ಜೀವಂತಿಕೆಗಳ ಜೊತೆಗೆ ಲಯ, ಆನಂದ, ಅನುಕಂಪ, ವಿಸ್ಮಯ, ಸಂಚಾರ, ಜೀವನೋಲ್ಲಾಸ, ಭಯ, ಕಾತರ, ಮುಗ್ಧತೆ, ಇಂತಹ ಭಾವನೆಗಳು ಸಂದರ್ಭಾನುಸಾರ ಗೋಚರಿಸುತ್ತವೆ ಎಂದು ಹೇಳಲಾಗಿದೆ.

ವರ್ಣಚಿತ್ರಗಳಲ್ಲಿ ಇವರು ಹೆಚ್ಚಾಗಿ ಚಿತ್ರಿಸಿದ ಕೃತಿಗಳೆಂದರೆ, ಶಿವಶರಣರು ಮತ್ತು ಸಾಧು-ಸಂತರು, ಮಠದ ಸ್ವಾಮಿಗಳಿಗೆ ಸಂಬಂಧಿಸಿದ ಚಿತ್ರಗಳಾಗಿವೆ. ಇವುಗಳ ಕುರಿತು ಆರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಇವರ ಶಿವಶರಣರ ಚಿತ್ರಗಳು ಆಕರ್ಷಕವಾಗಿದ್ದು ಹೆಚ್ಚು ಜನಮನ್ನಣೆ ಗಳಿಸಿವೆ.ಕರ್ನಾಟಕದ ಅದರಲ್ಲೂ ಉತ್ತರ ಕರ್ನಾಟಕದ ಪ್ರಮುಖ ವೀರಶೈವ ಮಠಗಳಲ್ಲಿ ಇವರು ರಚಿಸಿದ ವರ್ಣಚಿತ್ರಗಳು ಕಂಡುಬರುತ್ತವೆ. ಚಿಟ್ಟಿಯವರ ಚಿತ್ರರಚನಾ ವಿಧಾನ, ಬಳಸುವ ಬಣ್ಣಗಳು, ಅವರ ಚಿತ್ರಶೈಲಿ, ಪ್ರಭಾವ, ಪ್ರೇರಣೆ, ಚಿತ್ರದ ವಸ್ತು ವಿಷಯಗಳು, ಹೀಗೆ ಹಲವಾರು ಸಂಗತಿಗಳು ಏಳನೆಯ ಅಧ್ಯಾಯದಲ್ಲಿ ಅನಾವರಣಗೊಂಡಿವೆ. ಚಿಟ್ಟಿಯವರ ಕಾಲದಲ್ಲಿ ಜನರು ನೈಜ ಚಿತ್ರಗಳನ್ನು ಹೆಚ್ಚು ಇಷ್ಟ ಪಡುತ್ತಿದ್ದರಿಂದ ಆ ಬಗೆಯ ಚಿತ್ರಗಳನ್ನೇ ಇವರು ಚಿತ್ರಿಸುತ್ತಿದ್ದರು. ಸಮಕಾಲೀನ ಕಲಾವಿದರು, ಕಲಾಗುರುಗಳ ಪ್ರಭಾವ ಇವರಿಗೆ ಆಗಿದ್ದರಿಂದ ಅವರಂತೆ ನೈಜ ಶೈಲಿಯು ಚಿತ್ರರಚನೆಯಲ್ಲಿ ಸಿದ್ಧ ಹಸ್ತರಾಗಿದ್ದರು. ವರ್ಣ ಬಳಕೆಯಲ್ಲಿ ಹಿಡಿತ ಹೊಂದಿದ ಇವರು ಪ್ರಖರ ವರ್ಣಗಳನ್ನು ಬಳಸಿದರೂ ಅದಕ್ಕೆ ಪೂರಕವಾದ ಸೌಮ್ಯವರ್ಣವನ್ನು ಪಕ್ಕದಲ್ಲಿರಿಸಿ ಇಡೀ ಕಲಾಕೃತಿ ಕಣ್ಣಿಗೆ ಹಿತವಾಗುವಂತೆ ಮಾಡುತ್ತಿದ್ದರು. ವ್ಯಕ್ತಿಚಿತ್ರ ಮತ್ತು ಭಾವಚಿತ್ರಗಳ ರಚನೆಯಲ್ಲಿ ಇವರ ಚಿತ್ರಣ ವಿಧಾನವನ್ನು ಇಲ್ಲಿ ವಿವೇಚಿಸಲಾಗಿದೆ. ಇದು ಭಾರತೀಯ ಪದ್ಧತಿ ಎಂದು ಪ್ರಬಂಧಕರು ಹೇಳುತ್ತಾರಾದರೂ ಅದು ಸರಿ ಎಂದು ಕಾಣದು. ಇವರು ಅನುಸರಿಸುತ್ತಿದ್ದ ಚಿತ್ರಣ ಪದ್ಧತಿಯು 'ವಿಕ್ಟೋರಿಯನ್' ಕಲಾ ಪದ್ಧತಿಯಾಗಿದ್ದು, ಪಾಶ್ಚಾತ್ಯ ಶೈಲಿಯ ವಿಧಾನ ಇದಾಗಿದೆ. ಇದರಜೊತೆಗೆ ಇವರ ಕಲಾಕೃತಿ ರಚನೆಯ ಮೇಲೆ ಯಾವ ಪ್ರಭಾವಗಳಾಗಿವೆ. ಕಾಲಕಾಲಕ್ಕೆ ಕಲಾ ಬದುಕಿನಲ್ಲಿ ಉಂಟಾದ ಬದಲಾವಣೆಗಳು, ಕಲಾಕೃತಿ ರಚನೆಯಲ್ಲಾದ ಮಾರ್ಪಾಟುಗಳು, ಕಲಾಶಿಕ್ಷಕ ವೃತ್ತಿಯಿಂದ ವಿಶ್ರಾಂತಿ ಹೊಂದಿದ ನಂತರ ಹೇಗೆ ಕಲಾಬದುಕನ್ನು ನಿರ್ವಹಿಸುತ್ತಾ ತಮ್ಮ ಕೊನೆ ಸಮಯದವರೆಗೂ ಕೃತಿರಚನೆ ಮಾಡಿದರು ಎಂಬಂತಹ ಸಂಗತಿಗಳು ಇಲ್ಲಿ ಹೇಳಲ್ಪಟ್ಟಿವೆ. ಎಂಟನೆಯ ಅಧ್ಯಾಯದಲ್ಲಿ ಒಟ್ಟು ಅಧ್ಯಯನದ ಫಲಿತಗಳನ್ನು ಸಮೀಕ್ಷಿಸಲಾಗಿದೆ.

**ಕಲಾವಿದ ಆರ್.ಎಂ. ಹಡಪದ, ಒಂದು ಅಧ್ಯಯನ :**

ಉತ್ತರ ಕರ್ನಾಟಕದ ಐತಿಹಾಸಿಕ ಮಹತ್ವ ಪಡೆದುಕೊಂಡ ಚಾಲುಕ್ಯರ ರಾಜಧಾನಿಯಾಗಿದ್ದ ಬಾದಾಮಿಯ ನೆಲದಿಂದ ಬೆಂಗಳೂರು ನಗರಕ್ಕೆ ವಲಸೆ ಹೋಗಿ ಅಲ್ಲಿ ಕಲಾಶಾಲೆಯೊಂದನ್ನು ಆರಂಭಿಸಿ ಯಶಸ್ವಿಯಾಗಿ ನಡೆಸುವ ಮೂಲಕ ತಮ್ಮ ಕಲಾಬದುಕನ್ನು ರೂಪಿಸಿಕೊಂಡ ಆರ್.ಎಂ. ಹಡಪದರ ಕುರಿತು ಸಿದ್ಧಲಿಂಗಸ್ವಾಮಿ ಹಿರೇಮಠ ಅವರು ಪಿಎಚ್.ಡಿ. ಅಧ್ಯಯನ ಮಾಡಿದ್ದಾರೆ.[೧೯] ಈ ಪ್ರಬಂಧವು ಒಟ್ಟು ಒಂಭತ್ತು ಅಧ್ಯಾಯಗಳಲ್ಲಿ ವಿಂಗಡಣೆಗೊಂಡು ವಿಶ್ಲೇಷಿಸಲ್ಪಟ್ಟಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ಅವಶ್ಯಕತೆಗಳನ್ನು ಕುರಿತು ಹೇಳಿದೆ.

ಬಾದಾಮಿಯ ಪರಿಸರ ಮತ್ತು ಹಡಪದರ ಬಾಲ್ಯಜೀವನಗಳ ಬಗ್ಗೆ ಎರಡನೆಯ ಅಧ್ಯಾಯದಲ್ಲಿ ಹೇಳಲಾಗಿದೆ. ಇಲ್ಲಿ ಅವರ ಜನ್ಮಸ್ಥಳವಾದ ಬಾದಾಮಿಯ ಸಾಂಸ್ಕೃತಿಕ ಮತ್ತು ಐತಿಹಾಸಿಕ ಮಹತ್ವ, ಇವರ ಕೌಟುಂಬಿಕ ಹಿನ್ನೆಲೆ ಮುಂತಾದವುಗಳನ್ನು ಹೇಳಿ ನಂತರದಲ್ಲಿ ಬಾಲ್ಯಜೀವನ, ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ, ಕಲೆಯ ಕಡೆಗೆ ಹರಿದ ಅವರ ಮನಸ್ಸು, ಬಾಲ್ಯದ ದಿನಗಳಲ್ಲಿ ಇವರು ಕೈಗೊಳ್ಳುತ್ತಿದ್ದ ಕಲಾಚಟುವಟಿಕೆಗಳು, ವಿವಿಧ ಸಂದರ್ಭಗಳಲ್ಲಿ ಮನೆಯ ಮುಂದೆ ಹಾಕುತ್ತಿದ್ದ

೧೯. ಸಿದ್ಧಲಿಂಗಸ್ವಾಮಿ ಹಿರೇಮಠ : ಕಲಾವಿದ ಆರ್.ಎಂ.ಹಡಪದರ, ಒಂದು ಅಧ್ಯಯನ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಅಪ್ರಕಟಿತ ಪಿಎಚ್.ಡಿ. ಪ್ರಬಂಧ-೨೦೦೩

ಕಲಾತ್ಮಕ ರಂಗವಲ್ಲಿಗಳು, ಇವುಗಳಿಂದ ಹಡಪದರ ಮನಸ್ಸು ಕಲೆಯ ಕಡೆಗೆ ತಿರುಗಿದ ರೀತಿಗಳನ್ನು ವಿವೇಚಿಸಲಾಗಿದೆ.ಇವುಗಳಲ್ಲದೆ ಅವರ ಬಾಲ್ಯದ ದಿನಗಳಲ್ಲಿ ಬಾದಾಮಿಯ ಗುಹಾದೇವಾಲಯಗಳು, ಕಲ್ಲು-ಬೆಟ್ಟಗಳಲ್ಲಿ ಗಿರಿ ಕಂದರಗಳಲ್ಲಿ ತಿರುಗಾಡಿದ ಅನುಭವಗಳು, ಮುಂದೆ ಅವರ ಕಲಾಬದುಕಿನಲ್ಲಿ ಇವು ಅವಿಭಾಜ್ಯ ಅಂಗಗಳಾಗಿ ರೂಪಗೊಂಡ ಬಗೆ, ಮನೆಯಲ್ಲಿ ಕುಟುಂಬ ವರ್ಗದವರ ನೀರಸ ಪ್ರತಿಕ್ರಿಯೆಗಳ ನಡುವೆಯೂ ಕಲಾಭಿರುಚಿಯನ್ನು ಬೆಳೆಸಿಕೊಂಡ ಅಂಶಗಳು ಕುತೂಹಲಕಾರಿಯಾಗಿದ್ದು ಅವೆಲ್ಲವುಗಳನ್ನು ಈ ಎರಡನೆಯ ಅಧ್ಯಾಯದಲ್ಲಿ ಬಿಂಬಿಸಲಾಗಿದೆ.

ಕೆನ್‌ಕಲಾಶಾಲೆಯ ಕುರಿತು ಮೂರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಐವತ್ತರ ದಶಕದ ಕೊನೆಯ ಹೊತ್ತಿಗೆ ಬೆಂಗಳೂರಿಗೆ ಬಂದು ನೆಲೆನಿಂತ ಹಡಪದರು ಕೆನ್‌ಕಲಾಶಾಲೆಯನ್ನು ಸ್ಥಾಪಿಸಿದರು. ಅಕಾಡೆಮಿಕ್ ಶೈಲಿಯಲ್ಲಿ ಕಲಾಶಿಕ್ಷಣ ಪಡೆದ ಹಡಪದರು ವಿದ್ಯಾರ್ಥಿಗಳಿಗೂ ಅದನ್ನೇ ಹೇಳಿಕೊಡತೊಡಗಿದರು. ಇವರು ಸ್ಥಾಪಿಸಿದ ಕೆನ್‌ಕಲಾಶಾಲೆಯು ಅಭಿವೃದ್ಧಿ ಪಥದಲ್ಲಿ ಸಾಗುತ್ತ ತನ್ನ ಬೌದ್ಧಿಕ ವರ್ಚಸ್ಸನ್ನು ವೃದ್ಧಿಸಿಕೊಂಡಿತು. ಇಲ್ಲಿ ಕಲಿತ ಅನೇಕರು ಭಾರತದ ಬೇರೆ ಬೇರೆ ಭಾಗಗಳಲ್ಲದೆ ವಿದೇಶಗಳಿಗೂ ಹೋಗಿ ಹೆಚ್ಚಿನ ಕಲಾಶಿಕ್ಷಣ ಪಡೆದು ಬಂದರು. ರಾಷ್ಟ್ರ ಮತ್ತು ಅಂರತಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಂಡಿರುವ ಈ ಕಲಾಶಾಲೆಯ ಪ್ರಸಿದ್ಧಿಯ ಹಿಂದೆ ಹಡಪದರ ಕಲಾಬದುಕಿನ ಪ್ರಾಮಾಣಿಕ ಪ್ರಯತ್ನ ಅಡಗಿದೆ ಎಂದರೂ ತಪ್ಪಿಲ್ಲ. ಇಂತಹ ಅಂಶಗಳು ಈ ಅಧ್ಯಾಯದಲ್ಲಿ ಚರ್ಚಿಸಲ್ಪಟ್ಟಿವೆ.

ಹಡಪದರ ರೇಖಾಚಿತ್ರಗಳು ಪರಂಪರೆ ಮತ್ತು ನವ್ಯತೆ ಬೆರೆತ ಸಮೃದ್ಧ ಪರಿಣಾಮಗಳಿಂದ ಕೂಡಿವೆ. ಇವರ ರೇಖಾಚಿತ್ರಗಳಲ್ಲಿ ನವ್ಯಶೈಲಿಯ ಚಿತ್ರಗಳು, ಸಾಂಪ್ರದಾಯಿಕ ಚಿತ್ರಗಳು, ಅಮೂರ್ತ ಶೈಲಿಯ ಆಕಾರಗಳು ಹೀಗೆ ವೈವಿಧ್ಯತೆ ಇದೆ. ಇವರ ನವ್ಯಶೈಲಿಯ ರೇಖಾಚಿತ್ರಗಳಲ್ಲಿ ಸಾಮಾಜಿಕ ಬದ್ಧತೆ, ಎಡಪಂಥೀಯ ಧೋರಣೆಯನ್ನು ಬಿಂಬಿಸಿದರೆ, ಸಾಂಪ್ರದಾಯಿಕ ರೇಖಾಚಿತ್ರಗಳು ಪರಂಪರೆ ಬಗೆಗಿನ ಕಾಳಜಿ, ಅಲ್ಲಿರುವ ಮೌಢ್ಯತೆಗಳ ಬಗೆಗಿನ ತಿರಸ್ಕಾರ, ಸಮುದಾಯ ಬದುಕಿನ ಮಹತ್ವಗಳನ್ನು ಸಂಕೇತಿಸುತ್ತವೆ. ಇದಲ್ಲದೇ ಶೃಂಗಾರ, ಅಲಂಕಾರ, ಬಡತನ, ಆಧುನಿಕ ಜೀವನ, ರಾಜಕೀಯ ವಿಡಂಬನೆ ಮುಂತಾದ ಅಂಶಗಳನ್ನು ಹಡಪದರ ರೇಖಾಚಿತ್ರಗಳು ಒಳಗೊಂಡಿವೆ. ಇಂತಹ ಹಲವಾರು ಅಂಶಗಳು ನಾಲ್ಕನೆಯ ಅಧ್ಯಾಯದಲ್ಲಿ ಚರ್ಚೆಗೊಳಪಟ್ಟಿವೆ.

ಹಡಪದರ ವರ್ಣಚಿತ್ರಗಳನ್ನು ಐದನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಇವರು ಸಾವಿರಾರು ವರ್ಣಚಿತ್ರಗಳನ್ನು ರಚಿಸಿದ್ದಾರೆ. ಜಲವರ್ಣ, ತೈಲವರ್ಣ, ಅಕ್ರಾಲಿಕ್, ಹುಡಿವರ್ಣ, ಪೇಸ್ಟಲ್, ಕಲರ್ ಪೆನ್ಸಿಲ್, ಬಣ್ಣದ ಇಂಕುಗಳು ಹೀಗೆ ವಿವಿಧ ವರ್ಣ ಮಾಧ್ಯಮಗಳಿಂದ ಚಿತ್ರಿಸಿದ ಇವರು ಸಂಯೋಜನಾ ಚಿತ್ರಣ, ಸ್ಥಿರಚಿತ್ರಣ, ನಿಸರ್ಗ ಚಿತ್ರಣ, ವಸ್ತು ಚಿತ್ರಣ, ವ್ಯಕ್ತಿ ಚಿತ್ರಣ, ಭಾವಚಿತ್ರಣಗಳಲ್ಲದೆ ನವ್ಯಶೈಲಿಯ ಕೃತಿಗಳನ್ನು ಚಿತ್ರಿಸಿದ್ದಾರೆ. ಇವರ ನವ್ಯಶೈಲಿಯ ವರ್ಣಚಿತ್ರಗಳು ಪ್ರಯೋಗಶೀಲತೆಗೆ ತೆರೆದುಕೊಂಡ ವಿಶಿಷ್ಟ ಶೈಲಿಯನ್ನು ಪ್ರತಿಬಿಂಬಿಸುತ್ತವೆ. ಇವರ ಕೃತಿಗಳಲ್ಲಿ ಬಾದಾಮಿ ಬೆಟ್ಟದ ಸೌಂದರ್ಯ, ಅಲ್ಲಿನ ಜನಜೀವನದ ಪ್ರಭಾವಗಳು ಕಂಡುಬರುತ್ತವೆ. ಇವರ ಒಟ್ಟು ಚಿತ್ರಗಳನ್ನು ಜಲವರ್ಣ, ತೈಲವರ್ಣ, ಪೋಸ್ಟರ್‌ವರ್ಣ, ಶಾಯಿವರ್ಣ, ಪೇಸ್ಟಲ್‌ವರ್ಣ, ಅಕ್ರಲಿಕ್‌ವರ್ಣ, ಮಿಶ್ರಮಾಧ್ಯಮದ ಚಿತ್ರಗಳು, ಭಿತ್ತಿಚಿತ್ರಗಳು ಎಂದು ವಿಂಗಡಿಸಿ ವಿಶ್ಲೇಷಣೆ ಮಾಡಿರುವುದು ಪ್ರಸ್ತುತ ಅಧ್ಯಾಯದಲ್ಲಿ ಕಂಡುಬರುತ್ತದೆ.

ಹಡಪದರು ತಮ್ಮ ಕಲಾಬದುಕಿನಲ್ಲಿ ಚಿತ್ರಗಳಲ್ಲದೆ ಶಿಲ್ಪರಚನೆ ಮತ್ತು ಗ್ರಾಫಿಕ್ಸ ಕಲಾಕೃತಿಗಳನ್ನು ರಚನೆ ಮಾಡಿದ್ದು, ಅವುಗಳ ಬಗೆಗೆ ಆರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಲಿಥೋಗ್ರಫಿ, ಎಚ್ಚಿಂಗ್ ಮತ್ತು ಲಿನೋಕಟ್ ಮಾಧ್ಯಮದ ಗ್ರಾಫಿಕ್ಸ ಕೃತಿಗಳನ್ನು ಹೆಚ್ಚಾಗಿ ರಚನೆ ಮಾಡಿದ ಹಡಪದರು ಅವುಗಳಲ್ಲಿ ತೀವ್ರ ಭಾವೋತ್ಪನ್ನ ಉಂಟು ಮಾಡುವ ಶೈಲಿಯನ್ನು ಕಂಡುಕೊಂಡಿದ್ದರು. ಮನಮುಟ್ಟುವ, ಚುರುಕಾದ, ಭಾವನಾತ್ಮಕ ಕೃತಿಗಳನ್ನು ರಚಿಸುವ ಮೂಲಕ ಹಡಪದರು ಈ ಮಾಧ್ಯಮವನ್ನು ಯಶಸ್ವಿಯಾಗಿ ದುಡಿಸಿಕೊಂಡಿದ್ದಾರೆ. ಗ್ರಾಫಿಕ್ಸ ಕಲಾಕೃತಿಯ ಅನಂತರ ಹಡಪದರ ಶಿಲ್ಪಕೃತಿಗಳ ಬಗ್ಗೆ ಇದೇ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಹಡಪದರು ಪ್ಲಾಸ್ಟರ್, ಕಂಚು, ಅಲ್ಯುಮಿನಿಯಂ, ಕಾಷ್ಟ ಮಾಧ್ಯಮಗಳಲ್ಲಿ ಶಿಲ್ಪಗಳನ್ನು ರಚನೆ ಮಾಡಿದ್ದು, ಅವುಗಳಲ್ಲಿ ಕೆಲವು ಕೃತಿಗಳು ಕೆನ್‌ಕಲಾ ಶಾಲೆಯಲ್ಲಿ ಸಂಗ್ರಹಗೊಂಡಿವೆ. ಇವರು ಹೆಚ್ಚಾಗಿ ಅಮೂರ್ತ ಶೈಲಿಯ ಶಿಲ್ಪಗಳನ್ನು ರಚನೆ ಮಾಡಿದ್ದಾರೆ. ಅವುಗಳ ಶೈಲಿ, ತಂತ್ರಾಗಾರಿಕೆ, ರಚನಾ ವಿಧಾನ, ಮಾಧ್ಯಮ, ವಸ್ತುವಿಷಯ, ಪ್ರಭಾವ ಮತ್ತು ಪ್ರೇರಣೆಗಳ ಕುರಿತು ಇಲ್ಲಿ ವಿಶ್ಲೇಷಿಸಲಾಗಿದೆ. ಕಲಾವಿದರು ಕಲಾ ಸಾಹಿತ್ಯದ ರಚನೆ ಮಾಡುವುದು ತೀರಾವಿರಳ. ಅಂತಹ ವಿರಳರ ಸಾಲಿನಲ್ಲಿ ಹಡಪದರು ಸೇರುತ್ತಾರೆ.

ಎಂಟನೆಯ ಅಧ್ಯಾಯದಲ್ಲಿ ಇವರ ಕಲಾ ಚಟುವಟಿಕೆಗಳು ಮತ್ತು ಕಲಾ ಸಾಹಿತ್ಯವನ್ನು ಕುರಿತು ಚರ್ಚಿಸಲಾಗಿದೆ. ಹಡಪದರು ಕರ್ನಾಟಕದ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿ ಕೈಗೊಂಡ ಕಾರ್ಯಗಳು, ದೇಶ–ವಿದೇಶಗಳಲ್ಲಿ ನಡೆಸಿದ ಪ್ರದರ್ಶನಗಳು, ಇತರ ಕಲಾ ಚಟುವಟಿಕೆಗಳ ಬಗೆಗಿನ ವಿವರಗಳನ್ನು ಇಲ್ಲಿ ದಾಖಲು ಮಾಡಲಾಗಿದೆ. ಹಡಪದರ ಬಗೆಗಿನ ಕಲಾ ಸಾಹಿತ್ಯವನ್ನು ಎರಡು ರೀತಿಯಲ್ಲಿ ವಿವರಿಸಲಾಗಿದೆ. ಹಡಪದರ ವ್ಯಕ್ತಿತ್ವ, ಕಲಾಕೃತಿಗಳ ಕುರಿತು ಇದುವರೆಗೂ ಪ್ರಕಟವಾಗಿರುವ ಗ್ರಂಥಗಳು ಹಾಗೂ ವಿವಿಧ ಪತ್ರಿಕೆ, ಸಂಚಿಕೆ, ಸ್ಮರಣ ಸಂಚಿಕೆಗಳಲ್ಲಿ ಬಂದಿರುವ ಲೇಖನಗಳನ್ನು ವಿಶ್ಲೇಷಿಸಲಾಗಿದೆ. ಎರಡನೆಯ ಗುಂಪಿನಲ್ಲಿ ಅವರ ಕೆಲವು ಲೇಖನಗಳು ಮತ್ತು ಭಾಷಣಗಳ ಬಗ್ಗೆ ಹೇಳಿದೆ. ಇವರು ಹೆಚ್ಚಾಗಿ ಕಲಾಸಾಹಿತ್ಯವನ್ನು ರಚನೆ ಮಾಡದಿದ್ದರೂ ಕೆಲವು ಸಂಚಿಕೆ ಮತ್ತು ಪತ್ರಿಕೆಗಳಿಗೆ ಲೇಖನಗಳನ್ನು ಬರೆದಿದ್ದಾರೆ. ಮತ್ತು ಕೆಲವು ಸಭೆಗಳಲ್ಲಿ ಮೌಲಿಕ ಭಾಷಣಗಳನ್ನು ಮಾಡಿದ್ದು, ಅವುಗಳನ್ನು ಇಲ್ಲಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಒಂಭತ್ತನೆಯ ಅಧ್ಯಾಯವು ಸಮಾರೋಪವಾಗಿದ್ದು ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ. ಪ್ರಸ್ತುತ ಪ್ರಬಂಧವು ಹಡಪದರ ಕಲೆ ಮತ್ತು ಜೀವನವನ್ನು ಬಿಂಬಿಸುತ್ತದೆ. ಇಲ್ಲಿ ಮುಖ್ಯವಾಗಿ ಅವರ ವ್ಯಕ್ತಿತ್ವ, ಕಲಾಕೃತಿರಚನೆ, ತಂತ್ರಗಾರಿಕೆ, ವರ್ಣವೈವಿಧ್ಯತೆ, ಸಮಕಾಲೀನ ಕಲಾಕ್ಷೇತ್ರಕ್ಕೆ ನೀಡಿದ ಕೊಡುಗೆ, ಹಡಪದರ ಕಲಾಕೃತಿಗಳ ವಸ್ತು ವಿಷಯ, ಒಲವು, ಸಾಮಾಜಿಕ, ಧಾರ್ಮಿಕ, ಚಿಂತನೆಗಳ ವಿವಿಧ ಮಗ್ಗಲುಗಳನ್ನು ಅಧ್ಯಯನಕ್ಕೆ ಒಳಪಡಿಸಿ ಕಲಾಸಾಹಿತ್ಯ ಕ್ಷೇತ್ರಕ್ಕೆ ತೆರೆದಿಡಲಾಗಿದೆ.

**ಎಂ.ಫಿಲ್ ಪ್ರಬಂಧಗಳು :**

ಈ ಅಧ್ಯಯನಗಳಲ್ಲಿಯೂ ಕೆಳಗಿನಂತೆ ವಿಂಗಡಿಸಬಹುದು.

ಅ. ಕ್ಷೇತ್ರೀಯ ಅಧ್ಯಯನಗಳು.

ಆ. ವ್ಯಕ್ತಿ ಅಧ್ಯಯನಗಳು.

**ಅ. ಕ್ಷೇತ್ರೀಯ ಅಧ್ಯಯನಗಳು :**

ಎಂ.ಫಿಲ್. ಅಧ್ಯಯನಗಳಲ್ಲಿ ಕ್ಷೇತ್ರೀಯ ಅಧ್ಯಯನಗಳು ಹೆಚ್ಚಿನ ಪ್ರಮಾಣದಲ್ಲಿ ನಡೆದಿಲ್ಲ. ಯಕ್ಷಗಾನ ಕಲೆ, ವಿಜಯನಗರದ ಭಿತ್ತಿಚಿತ್ರಕಲೆ ಮತ್ತು ಕಿನ್ನಾಳ ಕಲೆಯ ಬಗ್ಗೆ ಮಾತ್ರ ಅಧ್ಯಯನಗಳಾಗಿದ್ದು, ಈ ಪ್ರಕಾರದಲ್ಲಿ ಹೆಚ್ಚಿನ ಅಧ್ಯಯನಗಳು ನಡೆಯುತ್ತಲಿವೆ. ಇಲ್ಲಿಯೂ ಸಹಿತ ವ್ಯಕ್ತಿಗಳ ಬಗ್ಗೆ ಮತ್ತು ಅವರ ಕಲೆಯ ಬಗ್ಗೆ ಸೀಮಿತ ಮಾಹಿತಿಯು ದೊರಕುತ್ತದೆ.

**ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ :**

ಕರಾವಳಿ ಕರ್ನಾಟಕದ ಕಲೆಯಲ್ಲಿ ಪ್ರಮುಖವಾದ ಯಕ್ಷಗಾನ ಕಲೆಯ ಕುರಿತು ಎ.ಎಸ್. ವಿಶ್ವನಾಥ 'ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ' ಎಂಬ ಅಧ್ಯಯನ ಮಾಡಿದ್ದಾರೆ.[೨೦] ಈ ಪ್ರಬಂಧವು ಒಟ್ಟು ಒಂಭತ್ತು ಅಧ್ಯಾಯಗಳಲ್ಲಿ ಹರಡಿಕೊಂಡು ವಿಶ್ಲೇಷಿಸಲ್ಪಟ್ಟಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ ಮತ್ತು ವ್ಯಾಪ್ತಿಗಳನ್ನು ಹೇಳಿದೆ. ಎರಡನೆಯ ಅಧ್ಯಾಯದಲ್ಲಿ ಕರಾವಳಿ ಪ್ರದೇಶದ ಸಾಂಸ್ಕೃತಿಕ ಪರಿಸರ, ಕಲಾ ಹಿನ್ನೆಲೆಗಳನ್ನು ಬಿಂಬಿಸುವುದರ ಜೊತೆಗೆ ಯಕ್ಷಗಾನ ಕಲೆಯ ಇತಿಹಾಸವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಅಲ್ಲದೆ ಯಕ್ಷಗಾನ ಕಲೆಯ ಪ್ರಕಾರಗಳು, ಅದರಲ್ಲಿನ ದೃಶ್ಯಕಲಾ ಅಂಶಗಳನ್ನು ಚರ್ಚಿಸಲಾಗಿದೆ. ಮುಖವರ್ಣಿಕೆಯ ದ್ರವ್ಯಗಳು, ಬಣ್ಣಗಳ ಮೂಲಗಳು, ಬಣ್ಣಗಳನ್ನು ತಯಾರಿಸುವ ವಿಧಾನ, ಮುಖವರ್ಣಿಕೆಯ ಸಿದ್ಧತೆ, ಮುಖವರ್ಣಿಕೆಗೆ ಬೇಕಾಗುವ ವಿವಿಧ ರೀತಿಯ ತೈಲ, ವನಸ್ಪತಿ ಎಣ್ಣೆಗಳು, ವಿವಿಧ ಪಾತ್ರಗಳಿಗೆ ಅನುಸಾರವಾಗಿ ಮುಖವರ್ಣಿಕೆ ರಚಿಸುವ ಕ್ರಮ, ಹೀಗೆ ಹಲವಾರು ಅಂಶಗಳ ಬಗ್ಗೆ ಮೂರನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಯಕ್ಷಗಾನ ದೃಶ್ಯಕಲೆಯ ವಸ್ತ್ರವಿನ್ಯಾಸಗಳ ಬಗೆಗೆ ಚರ್ಚಿಸುತ್ತದೆ. ರಂಗಕಲೆಗಳಲ್ಲಿ ಯಕ್ಷಗಾನ ಕಲೆ ವಿಶೇಷವಾದ ವಸ್ತುವಿನ್ಯಾಸ ಹೊಂದಿದೆ. ಅಗಲವಾದ ನಿಲುವಂಗಿ ತಲೆಯ ಹಿಂದಿನಿಂದ ಇಳಿಬಿದ್ದಂತಹ ಪರದೆ, ಲಂಗದ ಹಾಗೆ ಇರುವ ನಿಲುವಂಗಿಯ ಕೆಳಭಾಗ, ಉದ್ದವಾದ ಶಾಲು ಆಕರ್ಷಕವಾಗಿವೆ. ತೆಂಕುತಿಟ್ಟು ಮತ್ತು ಬಡಗುತಿಟ್ಟು ಶೈಲಿಗಳು ಭಿನ್ನರೀತಿಯ ವಸ್ತ್ರವಿನ್ಯಾಸಗಳನ್ನು ಹೊಂದಿವೆ. ಇವುಗಳ ಕುರಿತು ಚರ್ಚಿಸಲಾಗಿದೆ. ಯಕ್ಷಗಾನ ರಂಗಕಲೆಯ ಮೇಲೆ ಇತರ ರಂಗಕಲಾ ಪ್ರಕಾರಗಳ ಪ್ರಭಾವವೂ ಅಲ್ಲಲ್ಲಿ ಕಂಡುಬಂದಿದ್ದು, ಇದು ವಸ್ತ್ರವಿನ್ಯಾಸಗಳ ಮೇಲೆ ಸ್ವಲ್ಪಮಟ್ಟಿನ ಪ್ರಭಾವ ಬೀರಿದೆ. ಈ ಎಲ್ಲ ಅಂಶಗಳನ್ನು ಇಲ್ಲಿ ವಿವೇಚನೆಗೊಳಪಡಿಸಲಾಗಿದೆ.

ಯಕ್ಷಗಾನ ರಂಗಕಲೆಯಲ್ಲಿ ಆಭರಣಗಳಿಗೆ ಪ್ರಮುಖ ಸ್ಥಾನವಿದೆ. ಯಕ್ಷಗಾನದ ಪಾತ್ರಗಳ ಚೆಲುವು ಮತ್ತು ಶ್ರೀಮಂತಿಕೆ ಅಡಗಿರುವುದೇ ಆಭರಣಗಳಲ್ಲಿ. ಕೊರಳಲ್ಲಿನ ವಿಭಿನ್ನ ಹಾರಗಳು, ಮುಂಗೈ, ತೋಳು, ಭುಜ, ಮಣಿಕಟ್ಟು, ಎದೆಭಾಗ, ಹೊಟ್ಟೆ, ಕಿವಿ ಹೀಗೆ ಅನೇಕ ಭಾಗಗಳಲ್ಲಿ ಧರಿಸುವ ಆಭರಣಗಳ ಬಗ್ಗೆ ಐದನೆಯ ಅಧ್ಯಾಯದಲ್ಲಿ ಹೇಳಲಾಗಿದೆ. ಪ್ರತಿಯೊಂದು ಪಾತ್ರಗಳಲ್ಲಿ ಬರುವ ಆಭರಣಗಳ ಸೌಂದರ್ಯ, ವರ್ಣವಿನ್ಯಾಸ, ಗುಣಲಕ್ಷಣ, ಒಟ್ಟಾರೆ ಕಲಾತ್ಮಕ ಅಂಶಗಳ ಕುರಿತು ಚರ್ಚಿಸಲಾಗಿದೆ. ಯಕ್ಷಗಾನ ರಂಗಕಲೆಯಲ್ಲಿ ಕಿರೀಟಗಳು ಆಕರ್ಷಕವಾದ ಕಲಾವಸ್ತುಗಳು ಮಾತ್ರವಲ್ಲದೇ, ಆ ಕಲೆಯ ಪ್ರಮುಖ ಲಕ್ಷಣವನ್ನು ಪ್ರತಿಬಿಂಬಿಸುವ ಸಂಕೇತಗಳೂ ಹೌದು. ಯಕ್ಷಗಾನ ಕಲೆಯ ಕಿರೀಟಗಳ ಬಗ್ಗೆ ಆರನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಪ್ರತಿಯೊಂದು

೨೦. ವಿಶ್ವನಾಥ ಎ.ಎಸ್ :ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪ್ರಬಂಧ–೨೦೦೩

ಪಾತ್ರಕ್ಕೆ ಬೇರೆ ಬೇರೆ ವಿನ್ಯಾಸದ ಕಿರೀಟಗಳಿರುತ್ತವೆ. ದೇವತೆ, ರಾಕ್ಷಸ, ಸ್ತ್ರೀದೇವತೆ, ಸಾಮಾನ್ಯ ವ್ಯಕ್ತಿ, ಐತಿಹಾಸಿಕ ಪಾತ್ರಗಳು, ಪೌರಾಣಿಕ ಪಾತ್ರಗಳು ವಿವಿಧ ರೀತಿಯ ಕಿರೀಟಗಳನ್ನು ಹೊಂದಿವೆ. ಇವೆಲ್ಲ ಅಂಶಗಳನ್ನು ಇಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ. ಯಕ್ಷಗಾನ ರಂಗಕಲೆಯಲ್ಲಿ ಆಟ ಪ್ರದರ್ಶಿಸುವ ಸಂದರ್ಭದ ಬಣ್ಣದ ಮನೆ, ಚೌಕಿಯ ವ್ಯವಸ್ಥೆಗಳು ಮಹತ್ವ ಪಡೆದುಕೊಂಡಿವೆ. ವೇಷಗಾರರು ಬಣ್ಣಲೇಪನ ಮಾಡಿಕೊಳ್ಳುವುದು, ವೇಷಭೂಷಣಗಳನ್ನು ಧರಿಸುವುದು, ಫಾತ್ರದ ಸಂದರ್ಭ ಮುಗಿದ ಮೇಲೆ ವಿಶ್ರಾಂತಿಗೆ ಆಗಮಿಸುವುದು, ಬಣ್ಣದ ಮನೆಗೆ ಈ ಹಂತದಲ್ಲಿ ಅದು ಪಾತ್ರಧಾರಿಗಳ ಮತ್ತು ಒಟ್ಟು ತಂಡದ ಮುಖ್ಯ ನೆಲೆಯಾಗಿರುತ್ತದೆ. ಅದನ್ನು ಪವಿತ್ರತೆಯ ದೃಷ್ಟಿಯಿಂದ ಅವರು ಕಾಣುತ್ತಾರೆ. ಅದೇ ರೀತಿ ಚೌಕಿಯಲ್ಲಿ ಆಟ ಪ್ರದರ್ಶನ ಮಾಡುತ್ತಿದ್ದು, ಅದರ ವಿವಿಧ ಭಾಗಗಳ ಬಗ್ಗೆ ಇಲ್ಲಿ ಹೇಳಲಾಗಿದೆ. ಚೌಕಿಯ ಪರಿಸರ, ದೇವರ ಸ್ಥಾನ, ಪಾತ್ರಧಾರಿಗಳ ಸ್ಥಾನ, ಹಾಸ್ಯಗಾರನ ಸ್ಥಾನ, ರಾಜ, ದೇವತೆ, ಸ್ತ್ರೀ ಪಾತ್ರಗಳ ಸ್ಥಾನಗಳನ್ನು ಹೇಳುತ್ತಾ ಒಟ್ಟಾರೆ ಚೌಕಿಯ ಕಲಾತ್ಮಕತೆಯನ್ನು ಏಳನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ಯಕ್ಷಗಾನ ಕಲೆಯ ಪ್ರದರ್ಶನ ಸಂದರ್ಭದ ಕಲಾತ್ಮಕತೆಯನ್ನು ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ಯಕ್ಷಗಾನ ಪ್ರದರ್ಶನಗೊಳ್ಳುವಾಗ ಪಾತ್ರಗಳು ಮತ್ತು ಕಥಾ ಸಂದರ್ಭಗಳು ನೇರ ಸಂಯೋಜನೆಯಿಂದಾಗಿ ಹೇಗೆ ಚಿತ್ರಾತ್ಮಕ ಪ್ರತಿಮೆಯ ರೂಪವಾಗಿ ಕಾಣುತ್ತದೆ ಎಂಬುದನ್ನು ಚರ್ಚಿಸಲಾಗಿದೆ. ಒಂಭತ್ತನೆಯ ಅಧ್ಯಾಯವು ಸಮಾರೋಪವಾಗಿದ್ದು, ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ. ಕರಾವಳಿ ಭಾಗದ ಮುಖ್ಯಕಲಾ ಪ್ರಕಾರವಾದ ಯಕ್ಷಗಾನ ಕಲೆಯ ಕುರಿತ ಈ ಪ್ರಬಂಧದಲ್ಲಿ ಆ ಕಲೆಯ ಬಗೆಗಿನ ಹಲವಾರು ಅಂಶಗಳು ಚರ್ಚಿತಗೊಂಡಿವೆ. ಯಕ್ಷಗಾನದ ಪ್ರಭೇದಗಳಾದ ತೆಂಕುತಿಟ್ಟು ಮತ್ತು ಬಡಗುತಿಟ್ಟಿನ ಮುಖವರ್ಣಿಕೆ, ವೇಷಭೂಷಣ, ಕಿರೀಟ, ಚೌಕಿಮನೆ, ಬಣ್ಣದಮನೆ ಇವುಗಳ ಕಲಾತ್ಮಕತೆಗಳನ್ನು ಕುರಿತು ವಿವೇಚಿಸಲಾಗಿದೆ. ಜೊತೆಗೆ ಪ್ರಭಾವ, ಪ್ರೇರಣೆಗಳು, ಯಕ್ಷಗಾನ ಕಲೆಯಲ್ಲಿ ಆಗಿರುವ ಮತ್ತು ಆಗುತ್ತಿರುವ ಬದಲಾವಣೆಯ ಅಂಶಗಳು, ಆಧುನಿಕ ಕಾಲಕ್ಕೆ ಈ ಕಲೆ ತೆರೆದುಕೊಂಡ ರೀತಿ ಇಂತಹ ಸಂಗತಿಗಳನ್ನು ಇಲ್ಲಿ ಚರ್ಚೆಗೊಳಪಡಿಸಲಾಗಿದೆ.

**ವಿಜಯ ನಗರದ ಭಿತ್ತಿಚಿತ್ರಕಲೆ :**

ಸುಚಿತ್ರಾ ಲಿಂಗದಹಳ್ಳಿ 'ವಿಜಯನಗರ ಭಿತ್ತಿಚಿತ್ರಕಲೆ' ವಿಷಯ ಕುರಿತು ಎಂ.ಫಿಲ್ ಅಧ್ಯಯನ ಮಾಡಿದ್ದಾರೆ.[೨೧] ಈ ಪ್ರಬಂಧವು ಒಟ್ಟು ಏಳು ಅಧ್ಯಾಯಗಳಲ್ಲಿ ಹರಡಿಕೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ ವಿಧಾನ ಮತ್ತು ವ್ಯಾಪ್ತಿಗಳ ಬಗ್ಗೆ ತಿಳಿಸುತ್ತದೆ. ಎರಡನೆಯ ಅಧ್ಯಾಯದಲ್ಲಿ ವಿಜಯನಗರದ ಸಾಂಸ್ಕೃತಿಕ ಪರಿಸರ, ಕಲಾಹಿನ್ನೆಲೆಗಳನ್ನು ಬಿಂಬಿಸಲಾಗಿದೆ. ಇವುಗಳ ಜೊತೆಗೆ ವಿಜಯನಗರದ ಕಲಾ ವಾತಾವರಣಕ್ಕೆ ಪ್ರೋತ್ಸಾಹ ನೀಡಿದ ಪ್ರಮುಖ ಅರಸರು, ರಾಜವಂಶದವರ ವಂಶಾವಳಿ, ಆಡಳಿತ ಅವರ ಧಾರ್ಮಿಕ, ಸಾಮಾಜಿಕ ಕೊಡುಗೆಗಳು, ವಾಸ್ತುಶಿಲ್ಪ, ಶಿಲ್ಪಕಲಾ ಕೊಡುಗೆಗಳು ಹೀಗೆ ಹಲವು ರೀತಿಯ ಸಂಗತಿಗಳನ್ನು ವಿವೇಚಿಸಲಾಗಿದೆ. ಭಿತ್ತಿಚಿತ್ರಕಲೆಯಲ್ಲಿ ಭಿತ್ತಿಸಿದ್ಧಗೊಳಿಸುವುದು ಮತ್ತು ಪರಿಕರಗಳು ಮುಖ್ಯವಾಗಿದ್ದು, ಮೂರನೆಯ ಅಧ್ಯಾಯದಲ್ಲಿ ಭಿತ್ತಿಸಿದ್ಧತೆ ಮತ್ತು ಪರಿಕರಗಳ ಬಗ್ಗೆ ಚರ್ಚಿಸಲಾಗಿದೆ.

---

೨೧. ಸುಚಿತ್ರಾ ಲಿಂಗದಹಳ್ಳಿ : ವಿಜಯನಗರ ಭಿತ್ತಿಚಿತ್ರಕಲೆ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ಪ್ರಬಂಧ-೨೦೦೬

ಭಿತ್ತಿಚಿತ್ರ ರಚನೆಯಲ್ಲಿ ಭಿತ್ತಿಸಿದ್ಧಗೊಳಿಸುವ ಪರಿಕರಗಳು ಮತ್ತು ಚಿತ್ರರಚನೆ ಪರಿಕರಗಳು ಎಂಬುದಾಗಿ ವಿಂಗಡಿಸಬಹುದು. ಭಿತ್ತಿಸಿದ್ಧಗೊಳಿಸಲು ಬೇಕಾಗುವ ಪರಿಕರಗಳಲ್ಲಿ ಇಟ್ಟಿಗೆ ಪುಡಿ, ಜೇಡಿಮಣ್ಣು, ಉಸುಕು, ಕಲ್ಲಿನಪುಡಿ, ಕಪ್ಪೆಚಿಪ್ಪಿನ ಪುಡಿ, ಶಂಖಚೂರ್ಣ, ವಜ್ರಲೇಪ, ಜೇನುಮೇಣ, ನಾರು ಪದಾರ್ಥ, ಹೀಗೆ ಹಲವಾರು ಬಗೆಯ ವಸ್ತುಗಳು ಬೇಕಾಗುತ್ತವೆ. ವಿಜಯನಗರ ಕಾಲದ ಭಿತ್ತಿಯನ್ನು ಯಾವ ಪರಿಕರ ಬಳಸಿಕೊಂಡು ಹೇಗೆ ತಯಾರಿಸಲಾಗಿದೆ ಎಂಬುದನ್ನು ತಿಳಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ವಿಜಯನಗರ ಭಿತ್ತಿಚಿತ್ರಕಲೆಯ ವಸ್ತು ವಿಷಯ ಕುರಿತಾಗಿದೆ. ವಿದ್ಯಾರಣ್ಯರ ಮೆರವಣಿಗೆಯ ದೃಶ್ಯ, ಮಹಾಭಾರತದ ಯುದ್ಧ, ಐತಿಹಾಸಿಕ ಯುದ್ಧ ದೃಶ್ಯ, ಮನ್ಮಥ ವಿಜಯ, ವಿಜಯೋತ್ಸವದ ಮೆರವಣಿಗೆ, ಗಿರಿಜಾಕಲ್ಯಾಣ ದೃಶ್ಯ, ರಾಮನು ಶಿವಧನಸ್ಸನ್ನು ಮುರಿಯುತ್ತಿರುವುದು, ವಿರುಪಾಕ್ಷಸ್ವಾಮಿ, ಪಂಪಾಂಬಿಕೆ, ನಾರದ, ತುಂಬುರ, ಶಿವ, ವಿಷ್ಣು, ಬ್ರಹ್ಮ, ಇತರ ದೇವತೆಗಳು, ಗಣಪತಿ, ಸರಸ್ವತಿ, ಹನುಮಂತ, ಗರುಡ, ಜಯವಿಜಯರು, ದಶಾವತಾರಗಳು, ಶಿವನ ಲೀಲೆಗಳು ಹೀಗೆ ಹತ್ತು ಹಲವು ರೀತಿಯ ವಿಷಯಗಳ ಚಿತ್ರಗಳು ಇಲ್ಲಿವೆ. ಈ ಎಲ್ಲ ಚಿತ್ರಗಳನ್ನು ವಿಷಯಾನುಸಾರ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ವಿಜಯನಗರದ ಭಿತ್ತಿಚಿತ್ರಗಳ ರಚನಾವಿಧಾನ, ಶೈಲಿ, ತಂತ್ರಗಾರಿಕೆ, ಪ್ರಭಾವಮತ್ತು ಪ್ರೇರಣೆಗಳ ಬಗ್ಗೆ ಚರ್ಚಿಸಲಾಗಿದೆ. ರೇಖಾಚಿತ್ರ ಬರೆಯುವ ಹಂತ, ನೆರಳು–ಬೆಳಕು ಚಿತ್ರಿಸುವುದು, ಹೊರ ರೇಖೆಯನ್ನು ಎಳೆಯುವುದು, ಹೀಗೆ ಹಲವು ಹಂತಗಳಲ್ಲಿ ಚಿತ್ರಿಸುವ ಪ್ರಾಚೀನರು ಕೊನೆಯಲ್ಲಿ ಚಿತ್ರಕ್ಕೆ ಕಳೆ ಕೊಡುತ್ತಿದ್ದರು ಎಂಬ ಕುರಿತು ಇಲ್ಲಿ ಚರ್ಚಿಸಲಾಗಿದೆ. ವಿಜಯನಗರ ಚಿತ್ರರಚನಾ ಶೈಲಿಯು ಹಲವು ಚಿತ್ರಶೈಲಿಗಳ ಪ್ರಭಾವ, ಪ್ರೇರಣೆಗಳಿಂದ ಬೆಳೆದು ತನ್ನದೇ ವಿಶಿಷ್ಟ ಶೈಲಿಯಾಗಿ ಬೆಳೆದು ಬಂದಿದೆ. ಇಂತಹ ಅಂಶಗಳನ್ನು ಕುರಿತು ಚರ್ಚಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ವಿಜಯನಗರ ಭಿತ್ತಿಚಿತ್ರಕಲೆಯ ಆಪತ್ತುಗಳು ಮತ್ತು ಸಂರಕ್ಷಣಾ ವಿಧಾನಗಳ ಬಗ್ಗೆ ಚರ್ಚಿಸಲಾಗಿದೆ. ವಿಜಯನಗರ ಭಿತ್ತಿಚಿತ್ರಗಳಿಗೆ ಒದಗಿರುವ ಆಪತ್ತುಗಳನ್ನು ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ವ್ಯಕ್ತಿಗತ ಆಪತ್ತುಗಳು, ಸ್ವಾಭಾವಿಕ ಆಪತ್ತುಗಳು, ಪ್ರಾಕೃತಿಕ ಆಪತ್ತುಗಳು, ಪ್ರಾಣಿ–ಪಕ್ಷಿ ಕ್ರಿಮಿ–ಕೀಟಗಳಿಂದಾಗುವ ಆಪತ್ತುಗಳೆಂದು ವರ್ಗೀಕರಿಸಿ ಚರ್ಚಿಸಲಾಗಿದ್ದು, ಅವುಗಳ ಸಂರಕ್ಷಣಾ ಕ್ರಮಗಳನ್ನು ಇಲ್ಲಿ ಹೇಳಲಾಗಿದೆ. ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು, ಒಟ್ಟು ಅಧ್ಯಯನದ ಫಲಿತಗಳಿವೆ.

ಈ ಪ್ರಬಂಧವು ವಿಜಯನಗರ ಭಿತ್ತಿಚಿತ್ರಕಲೆಯ ಬಗ್ಗೆ ಇರುವ ಅಧ್ಯಯನವಾದರೂ ವಿಶೇಷವಾಗಿ ಹಂಪಿ ವಿರುಪಾಕ್ಷ ದೇವಾಲಯದ ಭಿತ್ತಿಚಿತ್ರಗಳಿಗೆ ಅನ್ವಯಿಸಿದೆ. ವಸ್ತುವಿಷಯ, ಐತಿಹಾಸಿಕ ಹಿನ್ನೆಲೆ ಇವುಗಳಿಗೆ ಮಹತ್ವ ಕೊಟ್ಟ ಈ ಅಧ್ಯಯನದಲ್ಲಿ ಚಿತ್ರಗಳ ತಾಂತ್ರಿಕ ವಿವರಗಳನ್ನು ಕಲಾದೃಷ್ಟಿಯಿಂದಅಧ್ಯಯನ ಮಾಡುವಲ್ಲಿ ಮತ್ತು ಅವುಗಳ ಸಾಂಸ್ಕೃತಿಕ ವಿವರಗಳನ್ನು ಕಟ್ಟಿ ಕೊಡುವಲ್ಲಿನ ಕೊರತೆ ಕಂಡುಬರುತ್ತದೆ.

ಈಗಾಗಲೇ ಈ ಅಧ್ಯಯನಕ್ಕಿಂತ ಮುಂಚೆ ಈ ದೇವಾಲಯದ ಭಿತ್ತಿಚಿತ್ರಗಳ ಬಗ್ಗೆ ಅಧ್ಯಯನಗಳು ಸಾಂದರ್ಭಿಕವಾಗಿ ನಡೆದಿದ್ದು, ಅವುಗಳಿಗಿಂತ ಭಿನ್ನವಾದ ಸಾಂಸ್ಕೃತಿಕ ಮತ್ತು ಕಲಾತ್ಮಕ ಸಂಗತಿಗಳಿಗೆ ಅಧ್ಯಯನಕಾರರು ಗಮನ ಹರಿಸಿದ್ದಾರೆ. ಹೆಚ್ಚಿನ ಮೌಲಿಕತೆ ಬರುತ್ತಿತ್ತು.

**ಕಿನ್ನಾಳ ಕಲೆ :**

ಕಿನ್ನಾಳ ಕಲೆಯು ಕರ್ನಾಟಕದ ಕಲಾ ಪರಂಪರೆಯಲ್ಲಿ ವಿಶಿಷ್ಟ ಸ್ಥಾನ ಪಡೆದುಕೊಂಡಿದೆ. ಈ ಕಲೆಯ ಕುರಿತು ರವಿ ವಸಾರಾಮ ನಾಯಕ 'ಕಿನ್ನಾಳ ಕಲೆ' ಎಂಬ ವಿಷಯ ಆಯ್ದುಕೊಂಡು ಎಂ.ಫಿಲ್. ಅಧ್ಯಯನ ಮಾಡಿದ್ದಾರೆ.[೨೨] ಈ ಪ್ರಬಂಧದಲ್ಲಿ ಒಟ್ಟು ಎಂಟು ಅಧ್ಯಾಯಗಳಲ್ಲಿ ವಿಷಯ ಹರಡಿಕೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ ಮತ್ತು ವ್ಯಾಪ್ತಿಗಳ ಬಗ್ಗೆ ಹೇಳಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಕಿನ್ನಾಳ ಕಲೆಯ ಐತಿಹಾಸಿಕತೆ ಮತ್ತು ಅದು ಬೆಳೆದು ಬಂದ ರೀತಿಗಳನ್ನು ವಿವೇಚಿಸಲಾಗಿದೆ. ವಿಜಯನಗರ ಸಾಮ್ರಾಟರಲ್ಲಿ ಆಸ್ಥಾನ ಕಲಾವಿದರಾಗಿದ್ದ ಕಿನ್ನಾಳ ಕಲಾವಿದರು ವಿಜಯನಗರ ಪತನದ ನಂತರ ಕಿನ್ನಾಳಕ್ಕೆ ಬಂದು ನೆಲೆಸಿ ಕಲೆಯನ್ನೆ ಬದುಕಿನ ವೃತ್ತಿಯನ್ನಾಗಿ ಮಾಡಿಕೊಂಡರು. ವಿಜಯನಗರ ಸಾಮ್ರಾಟರಲ್ಲಿ ಅನೇಕ ಅರಸರು ಈ ಕಲಾವಿದರಿಗೆ ಪ್ರೋತ್ಸಾಹ ಪ್ರೇರಣೆಗಳನ್ನು ನೀಡಿದರು. ವಿಜಯನಗರ ಪಕ್ಕದ ಕನಕಗಿರಿಯ ನಾಯಕ ಅರಸರಲ್ಲಿಯೂ ಕೆಲವು ಕಾಲ ಕಲಾವೃತ್ತಿ ಮಾಡಿದ ಇವರು ರಾಜ್ಯದ ಅನೇಕ ಭಾಗಗಳಲ್ಲಿ ಆಹ್ವಾನದ ಮೇರೆಗೆ ಚಿತ್ರರಚನೆ ಮಾಡಿರುವ ಸಾಧ್ಯತೆ ಇದೆ. ಹೀಗೆ ಈ ಕಲೆ ಬೆಳೆದು ಬಂದ ಐತಿಹಾಸಿಕ ವಿವರಗಳನ್ನು ಕ್ರಮಾನುಗತವಾಗಿ ಕಟ್ಟಿಕೊಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕಿನ್ನಾಳ ಕಲೆಯ ಹಸ್ತಪ್ರತಿ ಚಿತ್ರಗಳ ಬಗ್ಗೆ ವಿವೇಚಿಸಲಾಗಿದೆ. ಕಿನ್ನಾಳ ಕಲೆಯ ಹಸ್ತಪ್ರತಿ ಚಿತ್ರಗಳು ಹೆಚ್ಚಾಗಿ ಸಾಹಿತ್ಯದ ವಿವರಗಳಿಗಾಗಿ, ಸಾಹಿತ್ಯ ಗ್ರಂಥಗಳಲ್ಲಿ ರಚನೆಯಾದ ಸಾಂದರ್ಭಿಕ ಚಿತ್ರಗಳಲ್ಲ. ಬದಲಾಗಿ ತಾವು ರಚಿಸುತ್ತಿದ್ದ ಭಿತ್ತಿಚಿತ್ರ, ಗೊಂಬೆ, ಶಿಲ್ಪಚಿತ್ರ, ರಥಶಿಲ್ಪ, ಆಟಿಗೆ ಶಿಲ್ಪ, ದೇವತಾಚಿತ್ರ ಮುಂತಾದವುಗಳ ಕರಡು ಚಿತ್ರಗಳಾಗಿವೆ. ಈ ಮೇಲಿನ ಪ್ರಕಾರದ ಚಿತ್ರಶಿಲ್ಪಗಳನ್ನು ರಚಿಸುವ ಮೊದಲು ಮಾದರಿಗಾಗಿ ರಚಿಸಿಕೊಂಡ ಕರಡು ಚಿತ್ರಗಳು ಇವರ ಹಸ್ತಪ್ರತಿ ಚಿತ್ರಗಳಾಗಿವೆ. ಇವುಗಳನ್ನು ಇವರು ಕಾಗದ, ರಟ್ಟು, ಅರಿವೆಗಳ ಮೇಲೆ ರಚಿಸಿದ್ದಾರೆ. ಇಂತಹ ಚಿತ್ರಗಳಲ್ಲಿ ಹೆಚ್ಚಾಗಿ ರಾಮಾಯಣ, ಮಹಾಭಾರತ, ದಶಾವತಾರ, ರಾಜ-ರಾಣಿಯರು, ಪ್ರಾಣಿ-ಪಕ್ಷಿಗಳು, ಗಿಡ-ಮರ, ಹೂ-ಬಳ್ಳಿಗಳು, ಜಾಮತಿಕ ವಿನ್ಯಾಸಗಳು, ವಿವಿಧ ದೇವತಾ ಚಿತ್ರಗಳು, ನಂದಿ, ಗರುಡ, ಹನುಮಂತ, ನಾರದ, ಶಿವ, ವಿಷ್ಣು, ಬ್ರಹ್ಮ, ಗಣಪತಿ, ಸರಸ್ವತಿ, ಹೆಚ್ಚಾಗಿ ರಚನೆಯಾಗಿವೆ. ಈ ಹಸ್ತಪ್ರತಿ ಚಿತ್ರಗಳು ರೇಖಾ ವಿನ್ಯಾಸದಲ್ಲಿದ್ದು, ಶಾಸ್ತ್ರೀಯ ವಿಧಾನದಲ್ಲಿ ತಾಳಮಾನ, ಭಾವಭಂಗಿಗಳಿಲ್ಲದೇ ಷಡಂಗಗಳಿಗೆ ಅನುಸಾರವಾಗಿ ರಚನೆಯಾಗಿವೆ. ಈ ಎಲ್ಲ ಅಂಶಗಳು ಇಲ್ಲಿ ವಿವೇಚಿಸಲ್ಪಟ್ಟಿವೆ.

ನಾಲ್ಕನೆಯ ಅಧ್ಯಾಯದಲ್ಲಿ ಕಿನ್ನಾಳ ಕಲೆಯ ಮರ ಮಾಧ್ಯಮದ ಕಲಾಕೃತಿಗಳನ್ನು ವಿಶ್ಲೇಷಿಸಲಾಗಿದೆ. ಮರ ಮಾಧ್ಯಮದ ಕಲಾಕೃತಿಗಳನ್ನು ರಚಿಸುವಲ್ಲಿ ಕಿನ್ನಾಳ ಕಲಾವಿದರದು ವಿಶೇಷ ಪರಿಣತಿಯಾಗಿದೆ. ಮಾತ್ರವಲ್ಲದೇ ಅನೇಕ ರೀತಿಯ ಕೃತಿಗಳನ್ನು ಮರದಿಂದ ರಚಿಸುತ್ತಾರೆ. ಅಲಂಕಾರಿಕ ಫಲಕಗಳು, ಸೌಂದರ್ಯ ಹಿನ್ನೆಲೆಯ ಹೂಕುಂಡ ಮತ್ತು ವಿವಿಧ ಪಾತ್ರೆಗಳು, ವೃತ್ತ, ಆಯತ, ಚೌಕೋನ, ಷಟ್ಕೋನ, ಅಷ್ಟಕೋನಗಳಲ್ಲಿ ರಚಿಸಿದ ಚಿತ್ರಮಯ ಫಲಕಗಳನ್ನು ರಚಿಸಲಾಗುವುದು. ಗ್ರಾಮದೇವತೆ ಶಿಲ್ಪಗಳು, ಆಟಿಕೆ ಶಿಲ್ಪಗಳು, ರಥಶಿಲ್ಪಗಳು, ಹೀಗೆ ಬಹುವಿಧ ಕೃತಿಗಳಿಗೆ ಮರಬಳಕೆ ಇದರಲ್ಲಿ ಕಂಡುಬರುತ್ತದೆ. ಈ ರೀತಿಯ ಅನೇಕ ಮರ ಮಧ್ಯಮದ ಕಲಾಕೃತಿಗಳ ಬಗ್ಗೆ ಹೇಳಿದೆ. ಅಲ್ಲದೆ ಅದರ ರಚನಾ ವಿಧಾನಗಳನ್ನು ತಿಳಿಸಲಾಗಿದೆ. ಮರದ ಫಲಕದ ಮೇಲೆ ಚಿತ್ರಿಸಲು ಬೇಕಾಗುವ

೨೨. ರವಿ, ವಸಾರಾಮನಾಯಕ : ಕಿನ್ನಾಳ ಕಲೆ: ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಎಂ.ಫಿಲ್. ಪ್ರಬಂಧ-೨೦೦೬

ಮರವ್ರಜ, ವಜ್ರಲೇಪ, ಹುಣಸೆಬೀಜದ ಸರಿ, ಸುಣ್ಣ, ಬಿಳಿ ಜೇಡಿಮಣ್ಣು ಮುಂತಾದವುಗಳ ಮೂಲ ಮತ್ತು ತಯಾರಿಕೆ ಬಣ್ಣಗಳ ಮೂಲ ಮತ್ತು ತಯಾರಿಕೆಗಳನ್ನು ಹೇಳಲಾಗಿದೆ. ಮಣ್ಣು, ಸೆಗಣಿ, ಬಟ್ಟೆ, ಬೆಂಡು, ಹೀಗೆ ಅನೇಕ ವಸ್ತುಗಳ ಮಿಶ್ರಣದಿಂದ ಕೆಲವು ಸಾರಿ ಇವುಗಳನ್ನು ಪ್ರತ್ಯೇಕವಾಗಿ ಕಲಾಕೃತಿ ರಚನೆಯಲ್ಲಿ ಕಿನ್ನಾಳ ಕಲಾವಿದರು ಬಳಸಿದ್ದು, ಇಂತಹ ಕೃತಿಗಳನ್ನು ಸಂಕೀರ್ಣ ಮಾಧ್ಯಮದ ಕೃತಿಗಳೆಂದು ಐದನೆಯ ಅಧ್ಯಾಯದಲ್ಲಿ ಪರಿಗಣಿಸಿ ವಿವೇಚಿಸಲಾಗಿದೆ. ಕಿನ್ನಾಳ ಕಲೆಯ ಚಿತ್ರ, ಶಿಲ್ಪ, ರೇಖಾಚಿತ್ರ, ಹಸ್ತಪ್ರತಿ ಚಿತ್ರ ಹೀಗೆ ವಿವಿಧ ಕೃತಿಗಳ ಮೇಲೆ ಹಲವಾರು ರೀತಿಯ ಪ್ರಭಾವ, ಪ್ರೇರಣೆಗಳುಂಟಾಗಿವೆ. ಅವುಗಳ ಕುರಿತು ಆರನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ವಿಜಯನಗರ ಮೂಲದಿಂದ ಬಂದ ಕಿನ್ನಾಳ ಕಲಾಶೈಲಿಯಲ್ಲಿ ವಿಜಯನಗರ ಶೈಲಿಯ ಅಂಶಗಳು ಇದ್ದಂತೆ, ಸ್ಥಳೀಯ ಜನಪದ ಚಿತ್ರಕಲೆಯ ಗುಣಲಕ್ಷಣಗಳೂ ಗೋಚರಿಸುತ್ತವೆ. ಅಲ್ಲದೆ ಕೆಲವು ಕಡೆಗೆ ಮರಾಠ ಶೈಲಿ ಮತ್ತು ಮೈಸೂರು ಶೈಲಿಯ ಪ್ರಭಾವ ಸೂಕ್ಷ್ಮವಾಗಿ ಕಂಡುಬರುತ್ತವೆ. ಇಂತಹ ಅಂಶಗಳ ಜೊತೆಗೆ ಕಿನ್ನಾಳ ಕಲೆಯ ಶೈಲಿ, ತಂತ್ರಗಾರಿಕೆ ಮತ್ತು ರಚನಾ ವಿಧಾನಗಳ ಬಗ್ಗೆ ಇಲ್ಲಿ ವಿವೇಚನೆ ಮಾಡಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಕಿನ್ನಾಳ ಕಲೆಯ ಕಲಾವಿದರ ಕುರಿತು ಚರ್ಚಿಸಲಾಗಿದೆ. ಇಲ್ಲಿ ಕಿನ್ನಾಳ ಕಲೆಯ ಕಲಾವಿದರ ಕುಟುಂಬಗಳ ಐತಿಹಾಸಿಕ ಹಿನ್ನೆಲೆ, ಹಿರಿಯ ಕಲಾವಿದರ ಪರಿಚಯ, ವಂಶಾವಳಿ, ಕಲಾವಿದರ ಹಿಂದಿನ ಮತ್ತು ಇಂದಿನ ಸ್ಥಿತಿಗತಿಗಳು, ಕಲಾವಲಯದಲ್ಲಿ ಅವರಿಗಿರುವ ಸ್ಥಾನ, ಈ ಕಲಾವಿದರಿಗೆಬಂದ ಪ್ರಶಸ್ತಿ ಬಹುಮಾನಗಳು, ಮಾನ-ಸನ್ಮಾನಗಳು, ಕಲಾ ಕೆಲಸಕ್ಕಾಗಿ ಹಿಂದಿನ ದಿನಗಳಲ್ಲಿ ಪಡೆದುಕೊಳ್ಳುತ್ತಿದ್ದ ಸಂಭಾವನೆಗಳು, ಈಗಿನ ಆರ್ಥಿಕ ಪರಿಸ್ಥಿತಿ ಹೀಗೆ ಹಲವಾರು ಅಂಶಗಳನ್ನು ವಿವೇಚಿಸಲಾಗಿದೆ. ಜೊತೆಗೆ ಈ ಕಲಾವಿದರನ್ನು ಬೆಳಕಿಗೆ ತರಲು ಶ್ರಮಿಸಿದ ಕಮಲಾದೇವಿ ಚಟ್ಟೋಪಾಧ್ಯಾಯರ ಪ್ರಯತ್ನಗಳನ್ನು ಇಲ್ಲಿ ಸ್ಥೂಲವಾಗಿ ಗಮನಸಿಲಾಗಿದೆ. ಎಂಟನೆಯ ಅಧ್ಯಾಯವು ಸಮಾರೋಪವಾಗಿದ್ದು, ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ.

ಕಿನ್ನಾಳ ಕಲೆಯನ್ನು ಕುರಿತು ಇರುವ ಈ ಪ್ರಬಂಧದಿಂದ ಕಲಾಕ್ಷೇತ್ರಕ್ಕೆ ಈ ಕಲೆಯ ಬಗೆಗಿನ ಕೆಲವಾರು ಸಂಗತಿಗಳು ತಿಳಿದು ಬರುತ್ತವೆ. ವಿಜಯನಗರ ಚಿತ್ರಶೈಲಿಯ ಮುಂದುವರಿಕೆಯಾಗಿ ಈ ಕಲೆ ಬೆಳೆಯಿತು. ಕಿನ್ನಾಳ ಕಲಾವಿದರು ಹಲವಾರು ರೀತಿಯ ಕಲಾಕೃತಿಗಳನ್ನು ವಿವಿಧ ಮಾಧ್ಯಮಗಳಲ್ಲಿ ರಚಿಸುತ್ತಾರೆ. ಇವರ ಕಲಾವೃತ್ತಿಯಲ್ಲಿ ಲಜಾವರ ಬಣ್ಣವು ಮುಖ್ಯವಾಗಿದೆ. ಈ ರೀತಿಯ ಪ್ರಮುಖ ಸಂಗತಿಗಳೊಂದಿಗೆ ಕಿನ್ನಾಳ ಕಲೆಯ ಐತಿಹಾಸಿಕತೆ, ಕಲಾ ಪರಿಕರಗಳು, ರಚನಾ ವಿಧಾನ, ಕಲಾಕೃತಿಗಳ ಪ್ರಕಾರಗಳು, ವಿವಿಧ ರಚನಾ ಮಾಧ್ಯಮಗಳು, ಶೈಲಿ, ತಂತ್ರಗಾರಿಕೆ, ಪ್ರಭಾವ, ಪ್ರೇರಣೆ, ಕಲಾವಿದರು ಹೀಗೆ ಹಲವಾರು ಸಂಗತಿಗಳು ಇಲ್ಲಿ ವಿಶ್ಲೇಷಿಸಲ್ಪಟ್ಟಿವೆ. ಆದರೆ ಕಲಾದೃಷ್ಟಿಯಿಂದ ವಿಮರ್ಶಾತ್ಮಕ ಅಧ್ಯಯನದ ಕೊರತೆ ಇಲ್ಲಿ ಕಂಡುಬರುತ್ತದೆ.

ಎಂ.ಫಿಲ್. ಅಧ್ಯಯನಗಳಲ್ಲಿರುವ ಕ್ಷೇತ್ರೀಯ ಅಧ್ಯಯನಗಳಲ್ಲಿ ಯಕ್ಷಗಾನ ಕಲೆ, ಕಿನ್ನಾಳ ಕಲೆ, ಭಿತ್ತಿಚಿತ್ರಕಲೆಗಳು ಅಧ್ಯಯನಕ್ಕೊಳಪಟ್ಟಿವೆ. ಈ ಪ್ರಬಂಧಗಳಲ್ಲಿ ಆಯಾ ಕಲಾಪ್ರಕಾರಗಳ ಬಗ್ಗೆ ಹಲವಾರು ಅಂಶಗಳು ಬೆಳಕುಕಂಡಿವೆ. ಕಲಾನೆಲೆಗಳು, ಕಲಾಶೈಲಿ, ಪ್ರಭಾವ, ಪ್ರೇರಣೆ, ಪ್ರೋತ್ಸಾಹ, ಕಲಾವಿದರು, ರಚನಾವಿಧಾನ, ಪರಿಕರಗಳು, ಚಿತ್ರಗಳ ವಸ್ತುವಿಷಯಗಳು ತಿಳಿದುಬಂದಿವೆ. ಜೊತೆಗೆ ಪೂರಕವಾಗಿ ಆಕಾಲದ ಬದುಕು, ಸಂಸ್ಕೃತಿ, ಸಾಮಾಜಿಕ ಮತ್ತು ಧಾರ್ಮಿಕ ಜೀವನ ಮುಂತಾದ ಸಂಗತಿಗಳು ಅನಾವರಣಗೊಂಡಿವೆ.

**ಬ. ವ್ಯಕ್ತಿಅಧ್ಯಯನಗಳು :**

ಈ ಪ್ರಕಾರದ ಅಧ್ಯಯನಗಳಲ್ಲಿ ಉತ್ತರ ಕರ್ನಾಟಕದ ಕಲಾವಿದರ ಬಗ್ಗೆ ಅಧ್ಯಯನಗಳು ನಡೆದಿವೆ. ಆಯಾ ಕಲಾವಿದರ ಜೀವನ ಮತ್ತು ಕಲೆಯ ಕುರಿತು ಸೀಮಿತವಾದ ಮಾಹಿತಿಯನ್ನು ಕೊಡುವ ಎಂ.ಫಿಲ್.ವ್ಯಕ್ತಿಅಧ್ಯಯನಗಳು ಕೆಳಗಿನಂತಿವೆ.

**ಚಿತ್ರಕಲಾವಿದ ಜೆ.ಎಸ್. ಖಂಡೇರಾವ್, ಒಂದು ಅಧ್ಯಯನ :**

ಮಲ್ಲಿಕಾರ್ಜುನ ಬಾಗೋಡಿಯವರು 'ಚಿತ್ರಕಲಾವಿದ ಜೆ.ಎಸ್. ಖಂಡೇರಾವ್, ಒಂದು ಅಧ್ಯಯನ' ಎಂಬ ವಿಷಯವನ್ನು ಆಯ್ದುಕೊಂಡು ಅಧ್ಯಯನ ಮಾಡಿದ್ದಾರೆ.[೨೩] ಈ ಪ್ರಬಂಧದಲ್ಲಿ ಎಂಟು ಅಧ್ಯಾಯಗಳಾಗಿ ವಿಂಗಡಿಸಿ ಖಂಡೇರಾವರ ಬದುಕು ಮತ್ತು ಕಲೆಯನ್ನು ಕಟ್ಟಿ ಕೊಡಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವೈಧಾನಿಕತೆಗಳನ್ನು ಹೇಳಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಕಲಬುರ್ಗಿಯ ಸಾಂಸ್ಕೃತಿಕ ಪರಿಸರ ಮತ್ತು ಕಲಾ ಹಿನ್ನೆಲೆಗಳನ್ನು ಹೇಳುತ್ತಾ ಖಂಡೇರಾವರ ಬಾಲ್ಯ ಜೀವನವನ್ನು ವಿವೇಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಖಂಡೇರಾವರ ಜೆ.ಜೆ. ಕಲಾಶಾಲೆಯ ಕಲಾಶಿಕ್ಷಣವನ್ನು ಕುರಿತು ತಿಳಿಸಲಾಗಿದೆ. ಮುಂಬೈಗೆ ತೆರಳಲು ಇವರು ಪಟ್ಟಂತಹ ಕಷ್ಟ-ಕಾರ್ಪಣ್ಯಗಳು, ಮನೆಯವರನ್ನು ಒಪ್ಪಿಸುವಲ್ಲಿ ಪರದಾಡಿದ ರೀತಿ, ಮುಂಬೈಯಲ್ಲಿನ ಆಗಿನ ಪರಿಸರ, ಅದು ಇವರ ಮೇಲೆ ಬೀರಿದ ಪರಿಣಾಮಗಳು, ಕಲಾಶಾಲೆಯಲ್ಲಿನ ಶಿಕ್ಷಣ ಕ್ರಮ, ಸಹಪಾಠಿ ಗೆಳೆಯರು, ಅಧ್ಯಾಪಕ ವರ್ಗ, ಅಂದಿನ ದಿನಗಳಲ್ಲಿ ಮುಂಬೈಯಲ್ಲಿ ನಡೆಯುತ್ತಿದ್ದ ಕಲೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು, ಪ್ರದರ್ಶನ ಮತ್ತು ಶಿಬಿರಗಳು, ಕಲಾ ವಾತಾವರಣ ಇವುಗಳ ಜೊತೆಗೆ ಅವರು ಸಾಧಿಸಿದ ಪ್ರಗತಿ ಮತ್ತು ಪ್ರಶಂಸೆಗಳ ಕುರಿತು ಇಲ್ಲಿ ವಿವೇಚಿಸಲಾಗಿದೆ.

ಖಂಡೇರಾವರ ಕಲಾಬದುಕನ್ನು ನಾಲ್ಕನೆಯ ಆಧ್ಯಾಯದಲ್ಲಿ ಚರ್ಚಿಸಲಾಗಿದೆ. ಕಲಬುರ್ಗಿಗೆ ಬಂದ ಇವರು ತಮ್ಮ ಕಲಾವೃತ್ತಿ ಆರಂಭಿಸಿದ್ದು, ಕಲಾಶಾಲೆಯನ್ನು ತೆರೆದಿದ್ದು, ಕೆಲವು ಕಾಲದ ನಂತರ ಅದನ್ನು ತಮ್ಮ ವಿದ್ಯಾರ್ಥಿಗೆ ವಹಿಸಿ ಕೊಟ್ಟದ್ದು, ಶರಣಬಸವೇಶ್ವರ ಸಂಸ್ಥಾನದ ಕಲಾಶಾಲೆಯಲ್ಲಿ ಚಿತ್ರಕಲಾ ಪದವಿ ಮತ್ತು ಸ್ನಾತಕೋತ್ತರ ತರಗತಿಗಳನ್ನು ಆರಂಭಿಸಿದ ಘಟ್ಟಗಳನ್ನು ಇಲ್ಲಿ ವಿವೇಚಿಸಲಾಗಿದೆ. ಹೈದರಾಬಾದ್ ಕರ್ನಾಟಕದಂತಹ ಹಿಂದುಳಿದ ಪ್ರದೇಶದಲ್ಲಿ ಕಲಾಶಾಲೆಯನ್ನು ಸ್ಥಾಪಿಸಿ ಯಶಸ್ವಿಯಾಗಿ ನಡೆಸಿದ ಬಗೆ, ಶರಣಬಸವೇಶ್ವರ ಕಲಾಶಾಲೆಯಲ್ಲಿ ನಿರ್ದೇಶಕರಾಗಿ, ಮುಖ್ಯಸ್ಥರಾಗಿ ರಚನಾತ್ಮಕ ಕೆಲಸಗಳನ್ನು ಹಮ್ಮಿಕೊಂಡ ರೀತಿಗಳನ್ನು ಇಲ್ಲಿ ಹೇಳಲಾಗಿದೆ.

ಐದನೆಯ ಅಧ್ಯಾಯದಲ್ಲಿ ಖಂಡೇರಾವ್ ಅವರ ಕಲಾಕೃತಿಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಇವರ ಕಲಾಬದುಕಿನಲ್ಲಿ ರಚಿಸಿದ ಕಲಾಕೃತಿಗಳನ್ನು ಅಧ್ಯಯನ ಕಾಲದಲ್ಲಿ ರಚಿಸಿದ ಕಲಾಕೃತಿಗಳು, ಅಧ್ಯಾಪನ ಕಾಲದಲ್ಲಿ ರಚಿಸಿದ ಕಲಾಕೃತಿಗಳು ಎಂದು ವಿಂಗಡಿಸಿನೋಡಲಾಗಿದೆ. ಅಲ್ಲದೆ ತೈಲ ಮಾಧ್ಯಮದ ಕೃತಿಗಳು, ಜಲವರ್ಣದ ಕೃತಿಗಳು, ರೇಖಾಚಿತ್ರಗಳು, ಸಮ್ಮಿಶ್ರ ಮಾಧ್ಯಮದ ಕೃತಿಗಳು ಎಂಬುದಾಗಿ ಮತ್ತು ವ್ಯಕ್ತಿಚಿತ್ರಗಳು, ಭಾವಚಿತ್ರಗಳು, ಸಂಯೋಜನಾ ಚಿತ್ರಗಳು, ನಿಸರ್ಗ ಚಿತ್ರಗಳು, ನವ್ಯಶೈಲಿಯ ವಿಂಡೋಸರಣಿಯ ಚಿತ್ರಗಳು ಎಂದು ವರ್ಗೀಕರಿಸಿ ವಿವೇಚಿಸಲಾಗಿದೆ.

---

೨೩. ಮಲ್ಲಿಕಾರ್ಜುನ ಬಾಗೋಡಿ : ಚಿತ್ರಕಲಾವಿದ ಜೆ.ಎಸ್.ಖಂಡೇರಾವ್, ಒಂದು ಅಧ್ಯಯನ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಪ್ರಬಂಧ-೨೦೦೨.

ಆರನೆಯ ಅಧ್ಯಾಯದಲ್ಲಿ ಖಂಡೇರಾವರ ಕಲಾಬದುಕು ಮತ್ತು ಕಲಾಕೃತಿಗಳ ಮೇಲಾದ ಪ್ರಭಾವ, ಪ್ರೇರಣೆಗಳ ಕುರಿತಾಗಿ ಚರ್ಚಿಸಲಾಗಿದೆ. ಖಂಡೇರಾವ್ ಅವರು ಪ್ರಕೃತಿಯಿಂದ, ಆಕಸ್ಮಿಕ ಘಟನೆಗಳಿಂದ, ಬೇರೆ ಬೇರೆ ಸಮಕಾಲೀನ ಕಲಾವಿದರಿಂದ ಪ್ರಭಾವಿತರಾಗಿ ಕೃತಿ ರಚಿಸುವುದು ಕಂಡು ಬರುತ್ತದೆ. ಭಿತ್ತಿ ಚಿತ್ರಗಳಿಗಾಗಿ ಅಜಂತಾ ಎಲ್ಲೋರಾಗಳಲ್ಲಿನ ವರ್ಣಚಿತ್ರಗಳ ಪ್ರಭಾವ ಬೀರಿದ್ದರೆ, ಭಾವಚಿತ್ರ ಮತ್ತು ವ್ಯಕ್ತಿಚಿತ್ರಗಳ ರಚನೆಯಲ್ಲಿ ಕಲಾಗುರು ದಂಡಾವತಿಮಠರು ಮತ್ತು ಎಸ್.ಎಮ್.ಪಂಡಿತರ ಪ್ರಭಾವ ಕಂಡು ಬರುತ್ತದೆ. ರಾತ್ರಿ ವೇಳೆ ಗಾಜಿನ ಮೂಲಕ ತೂರಿ ಬಂದ ಬೆಳಕಿನ ವೈವಿಧ್ಯ ವಿನ್ಯಾಸಗಳು ಅಮೂರ್ತ ಸಂಯೋಜನೆಗೆ ಸ್ಫೂರ್ತಿಯಾಗಿದ್ದರೆ, ನೈಜ ಶೈಲಿಯ ಸಂಯೋಜನಾ ಕೃತಿಗಳಿಗೆ ಎನ್.ಎಸ್.ಬೇಂದ್ರೆಯವರ ಪ್ರೇರಣೆ ಉಂಟಾಗಿರುವುದನ್ನು ಗುರುತಿಸಬಹುದು. ಇಂತಹ ವಿಚಾರಗಳು ಈ ಅಧ್ಯಾಯದಲ್ಲಿ ಚರ್ಚಿಸಲ್ಪಟ್ಟಿವೆ.

ಏಳನೆಯ ಅಧ್ಯಾಯದಲ್ಲಿ ಖಂಡೇರಾವರ ಕಲಾಬದುಕಿನ ಕಲಾ ಚಟುವಟಿಕೆಗಳನ್ನು ಕುರಿತು ಚರ್ಚಿಸಲಾಗಿದೆ. ಇಲ್ಲಿ ಅವರು ಭಾಗವಹಿಸಿದ ಕಲಾಶಿಬಿರ, ಕಾರ್ಯಾಗಾರ, ಕಲಾಪ್ರದರ್ಶನಗಳು, ಅವರಿಗೆ ಸಂದಿರುವ ಪ್ರಶಸ್ತಿ ಗೌರವಗಳು, ಅವರ ನಿರ್ದೇಶನದಲ್ಲಿ ನಡೆದ ಕಲಾಚಟುವಟಿಕೆಗಳು ಅವರ ಬಗ್ಗೆ ಬಂದ ಕಲಾಸಾಹಿತ್ಯ, ಅವರೇ ರಚಿಸಿದ ಕಲಾಸಾಹಿತ್ಯ, ಇಂತಹ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ. ಎಂಟನೆಯ ಅಧ್ಯಾಯವು ಸಮಾರೋಪವಾಗಿದ್ದು ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ.

ಈ ಎಂ.ಫಿಲ್. ಪ್ರಬಂಧವು ಖಂಡೇರಾವರ ಜೀವನ ಮತ್ತು ಕಲೆಯ ಕುರಿತು ಸ್ಥೂಲ ನೋಟಗಳನ್ನು ಕೊಡುತ್ತದೆ. ಬದುಕಿನ ಹಿನ್ನೆಲೆಯಲ್ಲಿ ಹೆಚ್ಚಿನ ಅಂಶಗಳನ್ನು ಪರಿಗಣಿಸಲಾಗಿದ್ದು, ಕಲೆ, ಕಲಾಕೃತಿ, ಕಲಾಶೈಲಿ, ತಂತ್ರಗಾರಿಕೆಯಂತಹ ವಿಷಯಗಳ ಬಗೆಗಿನ ಕೊರತೆ ಕಂಡು ಬರುತ್ತದೆ.

**ಎಂ.ವಿ.ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳು :**

ಸಿ.ಡಿ.ಜಟ್ಟೆಣ್ಣವರ 'ಎಂ.ವಿ.ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳು' ಎಂಬ ವಿಷಯವಾಗಿ ಎಂ.ಫಿಲ್. ಅಧ್ಯಯನ ಮಾಡಿದ್ದಾರೆ.[೨೪] ಈ ಪ್ರಬಂಧವು ಏಳು ಅಧ್ಯಾಯಗಳಲ್ಲಿ ವಿಶ್ಲೇಷಣೆಗೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವಿಧಾನ, ವೈಧಾನಿಕತೆಗಳನ್ನು ಹೇಳಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಮಿಣಜಗಿಯವರ ಬಾಲ್ಯ ಜೀವನ ಮತ್ತು ಅವರ ಜನ್ಮಸ್ಥಳದ ಸಾಂಸ್ಕೃತಿಕ ಪರಿಸರ, ಕಲೆಯ ಬಗೆಗಿನ ಒಲವು, ಕಲಾಹಿನ್ನೆಲೆ ಮುಂತಾದ ಅಂಶಗಳನ್ನು ಬಿಂಬಿಸಲಾಗಿದೆ. ಮಿಣಜಗಿಯವರ ವಂಶಾವಳಿ, ಸುಸಂಸ್ಕೃತ ಮನೆತನ, ತಾಯಿಯನ್ನು ಕಳೆದುಕೊಂಡ ಬಾಲಕ ತಂದೆಯ ಆಶ್ರಯದಲ್ಲಿ ಬೆಳೆಯುವುದು, ಬಾಲ್ಯದ ಕಲಾ ಆಸಕ್ತಿ ಮುಂತಾದ ವಿಚಾರಗಳು ಇಲ್ಲಿ ಹೇಳಲ್ಪಟ್ಟಿವೆ.

ಮೂರನೆಯ ಅಧ್ಯಾಯದಲ್ಲಿ ಮಿಣಜಗಿಯವರ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ, ಈ ಹಂತದಲ್ಲಿ ಕಲೆಯ ಬಗೆಗಿನ ಒಲವು ಮತ್ತು ಆ ಕುರಿತು ನಡೆಸಿದ ಚಟುವಟಿಕೆಗಳನ್ನು ಹೇಳಲಾಗಿದೆ. ಪ್ರಾಥಮಿಕ ಹಂತದಲ್ಲಿ ಎನ್.ಎ. ಕುಲಕರ್ಣಿ ಎಂಬ ಕಲಾ ಶಿಕ್ಷಕರು ಇವರಿಗೆ ಪ್ರೇರಣೆ ನೀಡಿದವರಾಗಿದ್ದು, ಹೈಸ್ಕೂಲ ಹಂತದಲ್ಲಿ ಇವರ ಕಲಾ ಅಭಿರುಚಿ ಹೆಚ್ಚಾಯಿತು. ಶಾಲೆಯ

---

೨೪. ಸಿ.ಡಿ.ಜಟ್ಟೆಣ್ಣವರ : ಎಂ.ವಿ.ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳು : ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್ ಪ್ರಬಂಧ-೨೦೦೫

ಕಲಾಚಟುವಟಿಕೆಗಳಲ್ಲಿ ಯಾವಾಗಲೂ ಇವರೇ ಮುಂದಾಗಿರುತ್ತಿದ್ದರು. ಇವರಲ್ಲಿನ ಕಲಾಸಕ್ತಿಯನ್ನು ಗಮನಿಸಿದ ಅನೇಕರು ಇವರಿಗೆ ಮುಂದೆ ಹೆಚ್ಚಿನ ಕಲಾಶಿಕ್ಷಣ ಪಡೆಯಲು ಹೇಳುತ್ತಿದ್ದರು. ಈ ಹಂತದಲ್ಲಿ ಯಾರ ಪ್ರಭಾವ ಇವರ ಮೇಲೆ ಉಂಟಾಯಿತು, ಯಾವ ಕಲಾ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಿದ್ದರು ಎನ್ನುವ ಅನೇಕ ಸಂಗತಿಗಳು ಇಲ್ಲಿ ಚರ್ಚಿಸಲ್ಪಟ್ಟಿವೆ.

ನಾಲ್ಕನೆಯ ಅಧ್ಯಾಯದಲ್ಲಿ ಮಿಣಜಗಿಯವರ ಕಲಾಶಿಕ್ಷಣ ಕುರಿತು ಚರ್ಚಿಸಲಾಗಿದೆ. ಕಲಾಶಿಕ್ಷಣಕ್ಕಾಗಿ ಇವರು ಮುಂಬೈಯನ ಸರ್.ಜೆ.ಜೆ.ಕಲಾಶಾಲೆಯಲ್ಲಿ ಅಧ್ಯಯನ ಮಾಡಲು ತೆರಳಿದರು. ನಂತರ ಇನ್ನೂ ಹೆಚ್ಚಿನ ಶಿಕ್ಷಣ ಪಡೆಯಲು ಲಂಡನ್ ರಾಯಲ್ ಕಲಾಶಾಲೆಯಲ್ಲಿ ಅಧ್ಯಯನ ಮಾಡಿದರು. ಈ ಹಂತದಲ್ಲಿ ಜೆ.ಜೆ.ಕಲಾಶಾಲೆಯಲ್ಲಿ ಕಲಾಶಿಕ್ಷಕರಾಗಿದ್ದ ರೋಘನ್ ಸ್ಪೆನ್ ಮತ್ತು ನಿರ್ದೇಶಕರಾಗಿದ್ದ ಗ್ಲಾಡ್‌ಸ್ಟೋನ್ ಸೋಲೋಮನ್ ಇವರಿಂದ ಹೆಚ್ಚಿನ ಪ್ರಭಾವಕ್ಕೆ ಒಳಗಾದರು. ಇಂಗ್ಲೆಂಡಿಗೆ ತೆರಳಲು ಇವರ ಪ್ರೇರಣೆಯೇ ಕಾರಣವಾಯಿತು. ಈ ಸಂದರ್ಭದಲ್ಲಿ ಇವರ ಅಂದಿನ ಮುಂಬೈ ಮತ್ತು ಲಂಡನ್ ವಾಸ, ಅಲ್ಲಿ ಕಲಿತ ಸಂದರ್ಭಗಳು, ಸಹಪಾಠಿ ಗೆಳೆಯರು, ಶಿಕ್ಷಕವೃಂದ, ಶಿಕ್ಷಣಕ್ರಮ, ಭಾಗವಹಿಸಿದ ಶಿಬಿರ ಪ್ರದರ್ಶನಗಳು, ಪಡೆದುಕೊಂಡ ಬಹುಮಾನ ಮತ್ತು ಪ್ರಶಸ್ತಿಗಳು, ಪ್ರಭಾವ ಬೀರಿದ ವ್ಯಕ್ತಿಗಳು ಹೀಗೆ ಹಲವಾರು ಸಂಗತಿಗಳು ಚರ್ಚಿಸಲ್ಪಟ್ಟಿವೆ.

ಐದನೆಯ ಅಧ್ಯಾಯದಲ್ಲಿ ಮಿಣಜಗಿಯವರ ಕಲಾಕೃತಿಗಳನ್ನು ಕುರಿತು ವಿವೇಚಿಸಲಾಗಿದೆ. ಮಿಣಜಗಿಯವರು ಸಾವಿರಾರು ಕಲಾಕೃತಿಗಳನ್ನು ವಿವಿಧ ಮಾಧ್ಯಮದಲ್ಲಿ ರಚಿಸಿದ್ದಾರೆ. ತೈಲವರ್ಣ, ಜಲವರ್ಣ, ಪೆನ್ಸಿಲ್, ಮಿಶ್ರ ಮಾಧ್ಯಮ ಹೀಗೆ ಹಲವು ರೀತಿಯ ಚಿತ್ರಗಳಲ್ಲದೇ ವಿವಿಧ ವಿಷಯಗಳಿಗೆ ಸಂಬಂಧಿಸಿದ ಕೃತಿಗಳೂ ಇವರಿಂದ ರಚಿಸಲ್ಪಟ್ಟಿವೆ. ವ್ಯಕ್ತಿಚಿತ್ರಗಳು, ಭಾವಚಿತ್ರಗಳು, ನಿಸರ್ಗ ಚಿತ್ರಗಳು, ಸ್ಥಿರಚಿತ್ರಗಳು, ಸಂಯೋಜನಾ ಚಿತ್ರಗಳು, ರೇಖಾ ಚಿತ್ರಗಳು ಮತ್ತು ರಾಮಾಯಣ ಚಿತ್ರಗಳು ಇವರಿಂದ ಚಿತ್ರಿಸಲ್ಪಟ್ಟಿದ್ದು, ಅವುಗಳನ್ನೆಲ್ಲ ವಿಷಯಾನುಸಾರವಾಗಿ, ಮಾಧ್ಯಮಗಳಿಗನುಸಾರವಾಗಿ ವಿಂಗಡಿಸಿ ವಿವೇಚಿಸಲಾಗಿದೆ. ಆರನೆಯ ಅಧ್ಯಾಯದಲ್ಲಿ ಮಿಣಜಗಿಯವರ ಕಲಾಬದುಕಿನ ಕೊಡುಗೆಗಳನ್ನು ವಿವೇಚಿಸಲಾಗಿದೆ. ಮುಂಬೈನಿಂದ ಹುಬ್ಬಳ್ಳಿಗೆ ಬಂದು ನೆಲೆಸಿ ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯವನ್ನು ಸ್ಥಾಪಿಸಿ, ಯಶಸ್ವಿಯಾಗಿ ನಡೆಸಿಕೊಂಡು ಬಂದರು. ಕಲಾಶಿಕ್ಷಕರಾಗಿ, ಮುಖ್ಯಸ್ಥರಾಗಿ, ಸೇವೆ ಸಲ್ಲಿಸಿದರು. ತಮ್ಮ ಬದುಕಿನುದ್ದಕ್ಕೂ ವಿವಿಧ ಬಗೆಯ ಕಲಾಕೃತಿಗಳನ್ನು ರಚಿಸಿದರೂ ರಾಗಮಾಲಾ ಚಿತ್ರಗಳು 'ಮತ್ತು ಬಾದಾಮಿಯ ಗುಹಾಚಿತ್ರಗಳ ಮೂಲಕ ಖ್ಯಾತರಾದ ಇವರ ಕೃತಿಗಳ ಮೇಲೆ ಹಲವು ರೀತಿಯ ಪ್ರಭಾವ, ಪ್ರೇರಣೆಗಳೂ ಕಾಲಕಾಲಕ್ಕೆ ಉಂಟಾಗುತ್ತ ಬಂದಿವೆ. ಅವುಗಳ ಬಗ್ಗೆಯೂ ಇಲ್ಲಿ ವಿವೇಚಿಸಲಾಗಿದೆ. ಏಳನೆಯ ಅಧ್ಯಾಯವು ಸಮಾರೋಪವಾಗಿದ್ದು ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ.

ಈ ಎಂ.ಫಿಲ್. ಪ್ರಬಂಧವು ಮಿಣಜಗಿಯವರ ಜೀವನ ಮತ್ತು ಕಲೆಯ ಬಗೆಗೆ ಹಲವು ವಿಷಯಗಳನ್ನು ತಿಳಿಸುತ್ತದೆ. ಮಿಣಜಗಿಯವರು ಕರ್ನಾಟಕದಿಂದ ಮೊದಲ ಬಾರಿಗೆ ಇಂಗ್ಲೆಂಡಿಗೆ ಚಿತ್ರಕಲೆ ಕಲಿಯಲು ಹೋದವರಾಗಿದ್ದಾರೆ. ಜಲವರ್ಣ ಮತ್ತು ತೈಲವರ್ಣಗಳೆರಡರಲ್ಲೂ ಪ್ರಭುತ್ವ ಪಡೆದಿದ್ದು ಮಿಣಜಗಿಯವರು 'ರಾಗಮಾಲಾ' ಎಂಬ ಸಂಗೀತ ಸಂಬಂಧಿ ಕೃತಿಗಳನ್ನು ರಚಿಸಿದ್ದಾರೆ. ಸಂಗೀತ, ಸಾಹಿತ್ಯ ಮತ್ತು ಚಿತ್ರಕಲೆ ಹೀಗೆ ತ್ರಿವೇಣಿಕಲಾಸಂಗಮ ಜ್ಞಾನವನ್ನು ಹೊಂದಿದ್ದ ಇವರು ಸಂಗೀತ ಅಕಾಡೆಮಿಯ ಉಪಾಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಇವರ ಕಲಾ ಸೇವೆಯನ್ನು ಮನಗಂಡು ಕರ್ನಾಟಕ ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ಪ್ರಶಸ್ತಿಯನ್ನು ಕೊಡಮಾಡಿದೆ. ಹೀಗೆ ಮಿಣಜಗಿಯವರ ಕಲಾ ಬದುಕಿನ ಬಗೆಗೆ ಹೆಚ್ಚಿನ ಗಮನ ಹರಿಸಿದ ಈ ಪ್ರಬಂಧದಲ್ಲಿ ಅವರ ಕಲೆ, ಕಲಾಕೃತಿಗಳು, ರಚನಾ ವಿಧಾನ ಮುಂತಾದ ಕಲಾ ತಾಂತ್ರಿಕ ಅಂಶಗಳು ಮತ್ತು ಕಲಾವಿಮರ್ಶೆಯ ಬಗೆಗಿನ ಕೊರತೆ ಕಂಡುಬರುತ್ತದೆ.

**ಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು :**

ಶಂಕ್ರಪ್ಪ ಕುಂದಗೋಳ ಅವರು ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು ಎಂಬ ವಿಷಯವಾಗಿ ಎಂ.ಫಿಲ್. ಅಧ್ಯಯನ ಮಾಡಿದ್ದಾರೆ.[೨೫] ಈ ಪ್ರಬಂಧವು ಒಟ್ಟು ಏಳು ಅಧ್ಯಾಯಗಳಲ್ಲಿ ಹರಡಿಕೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವೈಧಾನಿಕತೆಗಳನ್ನು ಹೇಳಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಹಾಲಭಾವಿಯವರ ಜನನ. ಬಾಲ್ಯ, ಜನ್ಮಸ್ಥಳದ ಸಾಂಸ್ಕೃತಿಕ ಮತ್ತು ಐತಿಹಾಸಿಕ ಮಹತ್ವಗಳಲ್ಲದೇ ಕಲಾ ಹಿನ್ನೆಲೆಗಳನ್ನು ಕುರಿತು ಚರ್ಚಿಸಲಾಗಿದೆ. ಜೊತೆಗೆ ಬಾಲ್ಯದ ದಿನಗಳಲ್ಲಿ ಇವರು ಕಲೆಯ ಕಡೆಗೆ ಆಕರ್ಷಿತರಾಗಲು ಕಾರಣಗಳು, ಪ್ರಭಾವ ಬೀರಿದ ವ್ಯಕ್ತಿ ಮತ್ತು ಶಕ್ತಿಗಳು, ಕೌಟುಂಬಿಕ ಹಿನ್ನೆಲೆ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣಗಳ ಬಗ್ಗೆ ಹೇಳಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಡಿ.ವಿ.ಹಾಲಭಾವಿಯವರ ಕಲಾಶಿಕ್ಷಣದ ಬಗ್ಗೆ ವಿವೇಚಿಸಲಾಗಿದೆ. ಉನ್ನತ ಕಲಾ ವ್ಯಾಸಂಗಕ್ಕಾಗಿ ಮುಂಬೈನ ಪ್ರಸಿದ್ಧ ಜೆ.ಜೆ.ಕಲಾಶಾಲೆಗೆ ಸೇರಿದ ಇವರು ಇಲ್ಲಿ ಡ್ರಾಯಿಂಗ್ ಮತ್ತು ಪೇಂಟಿಂಗ್ ವಿಷಯ ಆಯ್ದುಕೊಂಡರು. ಅಲ್ಲಿ ಅಂದಿನ ಸಂದರ್ಭದಲ್ಲಿ ಖ್ಯಾತನಾಮರಾಗಿದ್ದ ಕೆ.ಬಿ.ತಾರಸ್ಕರ, ಎಮ್.ವಿ.ದುರಂಧರ ಇವರು ಹಾಲಭಾವಿಯವರಿಗೆ ಕಲಾ ಶಿಕ್ಷಕರಾಗಿದ್ದರು. ಇವರ ಕಾಲದಲ್ಲಿ ಈ ಕಲಾಶಾಲೆಯಲ್ಲಿ ಕರ್ನಾಟಕದ ಏಳುಜನ ಕಲಾವಿದ್ಯಾರ್ಥಿಗಳು ಶ್ರೇಷ್ಠ ಕಲಾವಿದರೆಂದು ಹೆಸರು ಮಾಡಿದ್ದರು. ಇವರಿಗೆ ಸಪ್ತವರ್ಣದ ಕಲಾವಿದರೆಂದು ಕರೆಯಲಾಗುತ್ತಿತ್ತು. ಈ ಎಲ್ಲ ವಿವರಗಳು ಇಲ್ಲಿವೆ.

ನಾಲ್ಕನೆಯ ಅಧ್ಯಾಯದಲ್ಲಿ ಡಿ.ವಿ. ಹಾಲಭಾವಿಯವರು ಸ್ಥಾಪಿಸಿದ ಧಾರವಾಡದ ಕಲಾಶಾಲೆಯ ಬಗ್ಗೆ ಚರ್ಚಿಸಲಾಗಿದೆ. ಮುಂಬೈನಲ್ಲಿ ಕಲಾಶಿಕ್ಷಣ ಮುಗಿಸಿಕೊಂಡು ಧಾರವಾಡಕ್ಕೆ ಬಂದ ಇವರು ಇಲ್ಲಿ ಕಲಾಶಾಲೆಯನ್ನು ಸ್ಥಾಪಿಸಿದರು. ಉತ್ತರ ಕರ್ನಾಟಕದಲ್ಲಿ ಸ್ವಾತಂತ್ರ್ಯಪೂರ್ವ ದಿನಗಳಲ್ಲಿ ಆರಂಭಗೊಂಡ ಮೊದಲ ಕಲಾಶಾಲೆ' ಎಂಬುದಾಗಿ ಹೆಸರಾಯಿತು. ಆರಂಭಿಕ ದಿನಗಳಲ್ಲಿ ಇಲ್ಲಿನ ವಿದ್ಯಾರ್ಥಿಗಳು ಕಲಾ ಪರೀಕ್ಷೆಗಳನ್ನು ಬರೆಯಲು ಮುಂಬೈಗೆ ತೆರಳಬೇಕಿತ್ತು. ಈ ಹಂತದಲ್ಲಿ ಕಲಾಶಿಕ್ಷಣಕ್ಕೆ ವಿದ್ಯಾರ್ಥಿಗಳ ಕೊರತೆಯೂ ಸಾಕಷ್ಟಿತ್ತು. ಜೊತೆಗೆ ಆರ್ಥಿಕ ತೊಂದರೆ, ಜನ ಸಮುದಾಯದಲ್ಲಿ ಚಿತ್ರಕಲೆಗೆ ಇದ್ದ ಅನಾದರ ಇಂತಹ ಪರಿಸ್ಥಿತಿಯಲ್ಲಿ ಕಲಾಶಾಲೆಯನ್ನು ಆರಂಭಿಸಿ ಮುನ್ನಡೆಸುವುದು ಸುಲಭದ ಮಾತಾಗಿರಲಿಲ್ಲ. ಈಎಲ್ಲ ತೊಂದರೆಗಳನ್ನು ಎದುರಿಸಿ ಕಲಾಶಾಲೆಯನ್ನು ಕಟ್ಟಿ ಬೆಳೆಸಿದ ಹಾಲಭಾವಿಯವರು ಸಮಯ ಸಿಕ್ಕಾಗೆಲ್ಲ ಕಲಾಕೃತಿಗಳನ್ನು ರಚಿಸುತ್ತ ಬಂದಿದ್ದಾರೆ. ಜೊತೆಗೆ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುತ್ತಲೂ ಇದ್ದರು. ಈ ಕಲಾಶಾಲೆಯ ಆರಂಭಿಕ ದಿನಗಳು, ಅಧ್ಯಾಪಕ ವೃಂದ, ವಿದ್ಯಾರ್ಥಿಗಳು, ಶೈಕ್ಷಣಿಕ ವ್ಯವಸ್ಥೆ ಮುಂತಾದ ಅಂಶಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

---

೨೫. ಶಂಕ್ರಪ್ಪ ಕುಂದಗೋಳ : ಕಲಾವಿದ ಡಿ.ವಿ. ಹಾಲಭಾವುಯವರ ಬದುಕು ಮತ್ತು ಕಲಾಕೃತಿಗಳು: ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಎಂ.ಫಿಲ್. ಪ್ರಬಂಧ-೨೦೦೫

ಐದನೆಯ ಅಧ್ಯಾಯದಲ್ಲಿ ಹಾಲಭಾವಿಯವರ ಕಲೆ ಮತ್ತು ಕಲಾಕೃತಿಗಳ ಬಗ್ಗೆ ಚರ್ಚಿಸಲಾಗಿದೆ. ತಮ್ಮ ಕಲಾ ಬದುಕಿನುದ್ದಕ್ಕೂ ವೈವಿಧ್ಯಮಯ ಕಲಾಕೃತಿಗಳನ್ನು ರಚಿಸುತ್ತ ಬಂದಿರುವ ಹಾಲಭಾವಿಯವರ ಲಭ್ಯ ಕಲಾಕೃತಿಗಳನ್ನು ವಿಷಯಾನುಸಾರ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಭಾವಚಿತ್ರಗಳು, ವ್ಯಕ್ತಿಚಿತ್ರಗಳು, ಸಂಯೋಜನಾ ಚಿತ್ರಗಳು, ನಿಸರ್ಗ ಚಿತ್ರಗಳು, ಸ್ಥಿರಚಿತ್ರಗಳು, ರೇಖಾಚಿತ್ರಗಳು ಎಂದು ವಿಂಗಡಿಸಿ ವಿಶ್ಲೇಷಣೆ ಮಾಡಿದೆ. ಸೃಜನಶೀಲವಾದ ಸಂಯೋಜನೆಗಳು, ಆಕರ್ಷಕವಾದ ಮತ್ತು ಸಮತೋಲನದಿಂದ ಕೂಡಿದ ವರ್ಣಲೇಪನ ಮತ್ತು ಚಲನಾತ್ಮಕ ರೇಖೆಗಳು ಇವರ ಚಿತ್ರಗಳಲ್ಲಿ ಕಂಡುಬರುತ್ತವೆ. ಇಂತಹ ಅನೇಕ ಅಂಶಗಳನ್ನು ಇಲ್ಲಿ ಚರ್ಚಿಸಿದೆ. ಜೊತೆಗೆ ಇವರ ಚಿತ್ರರಚನಾ ವಿಧಾನ, ಚಿತ್ರಗಳ ವಸ್ತುವಿಷಯ, ಚಿತ್ರಶೈಲಿ, ಮುಂತಾದವುಗಳನ್ನು ಗಮನಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಹಾಲಭಾವಿಯವರ ಮೇಲಾದ ಪ್ರಭಾವ, ಕಲಾಶೈಲಿ ಮತ್ತು ಕಲಾಸಾಹಿತ್ಯದ ಬಗ್ಗೆ ವಿವೇಚನೆ ಮಾಡಲಾಗಿದೆ. ಇವರ ವರ್ಣಚಿತ್ರಗಳಲ್ಲಿ ಪಾಶ್ಚಾತ್ಯ ಪ್ರಭಾವವು ಗೋಚರಿಸುತ್ತಿದ್ದು ವಿಷಯ ನಿರೂಪಣೆಯಲ್ಲಿ ಭಾರತೀಯ ಅಂಶಗಳು ಕಂಡು ಬರುತ್ತವೆ. ರೇಖಾ ವಿನ್ಯಾಸದಲ್ಲಿ ಹೆಚ್ಚಿನ ಒಲವು ಇರುವುದಕ್ಕಿಂತಲೂ ವರ್ಣಲೇಪನ ಹಿನ್ನೆಲೆಯು ಇವರ ಕೃತಿಗಳಲ್ಲಿ ಆಕರ್ಷಕವಾಗಿರುತ್ತದೆ. ಇಂತಹ ಅಂಶಗಳು ಚರ್ಚಿಸಲ್ಪಟ್ಟಿವೆ. ಮತ್ತು ಯಾವ ಪ್ರಭಾವ ಇವರ ಕಲಾಕೃತಿಗಳ ಮೇಲಾಗಿದೆ ಮತ್ತು ಯಾವ ಪ್ರಾಚೀನ ಪರಂಪರೆಯ ಪ್ರೇರಣೆಗೆ ಒಳಗಾಗಿದ್ದಾರೆ ಎನ್ನುವ ಅಂಶಗಳನ್ನು ಗಮನಿಸಲಾಗಿದೆ.

ಕಲಾ ಸಾಹಿತ್ಯ ಕ್ಷೇತ್ರಕ್ಕೆ ಸಹಿತ ಕೊಡುಗೆ ನೀಡಿದ ಹಾಲಭಾವಿಯವರು 'ಆರ್ಟಗಿಲ್ಡ್' ಎಂಬ ಕಲಾಮಾಸ ಪತ್ರಿಕೆಯನ್ನು ಆರಂಭಿಸಿದ್ದರು. ಕಲೆಯ ಕುರಿತ ಲೇಖನಗಳು, ಸುದ್ದಿಗಳು, ಕಲಾ ಚಟುವಟಿಕೆಗಳನ್ನು ಪ್ರಕಟಿಸುತ್ತಿದ್ದ ಈ ಪತ್ರಿಕೆ ಕಲಾಪ್ರಿಯರ ಮನೆ ಮಾತಾಗಿತ್ತು. ಇದಲ್ಲದೆ ಕಾಂಟೆಪರರಿ ಆರ್ಟಿಸ್ಟ ಎಂಬ ಗ್ರಂಥ ಮತ್ತು ನನ್ನ ಸಿಲೋನ ಪ್ರವಾಸ ಎಂಬ ಪ್ರವಾಸ ಕಥನ ಬರೆದಿದ್ದಾರೆ. ಹೀಗೆ ಇವರ ಕಲಾ ಸಾಹಿತ್ಯವನ್ನು ಇಲ್ಲಿ ವಿವೇಚಿಸಲಾಗಿದೆ. ಏಳನೆಯ ಅಧ್ಯಾಯ ಸಮಾರೋಪವಾಗಿದ್ದು, ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ. ಈ ಅಧ್ಯಯನ ಪ್ರಬಂಧವು ಹಾಲಭಾವಿಯವರ ಜೀವನ ಮತ್ತು ಕಲಾಬದುಕಿನ ಬಗೆಗಿನ ಅನೇಕ ವಿವರಗಳನ್ನು ಕೊಡುತ್ತದೆ. ಇವರು ಕೇವಲ ಒಬ್ಬ ಕಲಾ ಶಿಕ್ಷಕನಾಗದೇ ಜೊತೆಗೆ ಕಲಾವಿದರಾಗಿ, ಕಲಾಸಾಹಿತಿಯಾಗಿ, ಕಲಾ ವಿಮರ್ಶಕನಾಗಿ, ಸಂಘಟಕರಾಗಿ, ಕಲಾಶಾಲೆಯ ಸಂಸ್ಥಾಪಕರಾಗಿ ಮಾಡಿದ ಕೆಲಸಗಳು ಗಮನಾರ್ಹವಾಗಿವೆ. ಇಂತಹ ಅನೇಕ ಅಂಶಗಳನ್ನು ತಿಳಿಸಿಕೊಡುತ್ತದೆ. ಎಂ.ಫಿಲ್. ವ್ಯಕ್ತಿಅಧ್ಯಯನದಲ್ಲಿ ಉತ್ತರ ಕರ್ನಾಟಕದ ಕಲಾವಿದರ ಬಗ್ಗೆ ಹೆಚ್ಚಿನ ಅಧ್ಯಯನಗಳಾಗಿರುವುದು ಕಂಡುಬರುತ್ತದೆ. ಈ ಎಲ್ಲ ಅಧ್ಯಯನಗಳು ಮುಂಬೈ ಜೆ.ಜೆ.ಕಲಾಶಾಲೆಯಲ್ಲಿ ಕಲಿತ ಕಲಾವಿದರ ಕುರಿತಾಗಿವೆ ಎನ್ನುವುದು ವಿಶೇಷ. ಇಲ್ಲಿ ಆಯಾ ಕಲಾವಿದರ ಕಲಾಬದುಕು, ಕಲಾಕೃತಿಗಳು, ಕಲಾಶೈಲಿ, ಬಾಲ್ಯ, ಶಿಕ್ಷಣ, ಪ್ರಭಾವ, ಪ್ರೇರಣೆ, ಪ್ರಶಸ್ತಿ, ಗೌರವಗಳು ಮುಂತಾದ ಸಂಗತಿಗಳು ಚರ್ಚಿಸಲ್ಪಟ್ಟಿವೆ.

**೩. ಡಿ.ಲಿಟ್. ಪ್ರಬಂಧಗಳು :**

ಡಿ.ಲಿಟ್. ಪ್ರಬಂಧಗಳು ಶೈಕ್ಷಣಿಕ ಮಟ್ಟದಲ್ಲಿ ಯಾವುದೇ ಪದವಿಯ ಮಾನದಂಡವನ್ನು ಹೊಂದಿರದೇ ಇದ್ದರೂ ಸಹಿತ ಪಿಎಚ್.ಡಿ. ಮತ್ತು ಎಂ.ಫಿಲ್. ಮಟ್ಟದ ಗಂಭೀರ ಸಂಶೋಧನೆಯ ವಿಧಾನವನ್ನು ಅನುಸರಿಸಿವೆ. ಈ ಪ್ರಬಂಧಗಳಲ್ಲಿ ಇದುವರೆಗೂ ಬಂದ ವಿಷಯಗಳನ್ನು ನೋಡಿದಾಗ

ಹೆಚ್ಚಿನ ಅಧ್ಯಯನಗಳು ಕ್ಷೇತ್ರೀಯ ಮಟ್ಟದಲ್ಲಿ ನಡೆದಿರುವುದು ತಿಳಿದುಬರುತ್ತದೆ. ಇದುವರೆಗೆ ಬಂದ ಡಿ.ಲಿಟ್. ಪ್ರಬಂಧಗಳು ಈ ಕೆಳಗಿನಂತಿವೆ.

**ಕನ್ನಡ ವೃತ್ತಿರಂಗಭೂಮಿ ಮತ್ತು ರಂಗವಿನ್ಯಾಸ :**

ರಂಗಭೂಮಿಯ ವಿವಿಧ ಆಯಾಮಗಳಲ್ಲಿ ಚಿತ್ರಕಲಾ ಸಂಗತಿಗಳು ಗೋಚರಿಸುತ್ತವೆ. ಪಾತ್ರಧಾರಿ ತಾನು ಬಣ್ಣ ಲೇಪಿಸುವಲ್ಲಿಂದ ತೊಡಗಿ ನಾಟಕದ ಪರದೆ, ಕವಾಟಗಳು, ಬಣ್ಣದ ಫಲಕ ಮತ್ತು ಬಟ್ಟೆಗಳು ಹೀಗೆ ವೈವಿಧ್ಯ ರೀತಿಯಲ್ಲಿ ಕಲಾ ಅಂಶಗಳು ಕಂಡುಬರುತ್ತವೆ. ಇಂತಹ ಅಂಶಗಳನ್ನು ಆಯ್ದುಕೊಂಡು ದೇವದಾಸ ಕಳಸದ 'ಕನ್ನಡ ವೃತ್ತಿ ರಂಗಭೂಮಿ ಮತ್ತು ರಂಗವಿನ್ಯಾಸ' ವಿಷಯದ ಕುರಿತು ಅಧ್ಯಯನ ಮಾಡಿದ್ದಾರೆ.[೨೬] ಈ ಅಧ್ಯಯನ ಪ್ರಬಂಧದಲ್ಲಿ ಒಟ್ಟು ನಾಲ್ಕು ಅಧ್ಯಾಯಗಳಲ್ಲಿ ವಿಷಯ ಹರಡಿಕೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ರಂಗಭೂಮಿಯ ಸ್ವರೂಪ ಮತ್ತು ರಂಗವಿನ್ಯಾಸದ ಬಗೆಗೆ ಹೇಳಲಾಗಿದೆ. ಭಾರತೀಯ ರಂಗಭೂಮಿ, ವಿಶ್ವರಂಗಭೂಮಿ, ಇವುಗಳ ಕುರಿತು ಸ್ಥೂಲವಾಗಿ ಹೇಳಿ, ನಂತರ ಕನ್ನಡ ರಂಗಭೂಮಿಯ ಹುಟ್ಟು ಬೆಳವಣಿಗೆ ವಿಸ್ತಾರ ಮತ್ತು ಸ್ವರೂಪಗಳನ್ನು ತಿಳಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ರಂಗಸಜ್ಜಿಕೆಯ ಸ್ವರೂಪ ಕುರಿತು ಚರ್ಚಿಸಿದೆ. ವೃತ್ತಿರಂಗಭೂಮಿ ಮತ್ತು ಹವ್ಯಾಸಿ ರಂಗಭೂಮಿ ಇವುಗಳ ರಂಗಸಜ್ಜಿಕೆಯ ಸ್ವರೂಪಗಳು ಸಾಮಾನ್ಯವಾಗಿ ಒಂದೇ ತೆರನಾಗಿ ಇದ್ದರೂ ಕೆಲವು ಮಾರ್ಪಾಟುಗಳು ಅಲ್ಲಲ್ಲಿ ಕಂಡು ಬರುತ್ತವೆ. ರಸ್ತೆ, ಮನೆ, ಅರಮನೆ, ಕಾಡು ಮುಂತಾದ ದೃಶ್ಯಗಳ ಸೀನರಿಗಳು, ಆಯುಧ, ಆಭರಣಗಳು ಹೀಗೆ ವಿವಿಧ ಕಲಾ ಪರಿಕರಗಳು ವೃತ್ತಿ ರಂಗಭೂಮಿಯಲ್ಲಿ ಶ್ರೀಮಂತವಾಗಿದ್ದರೆ, ಹವ್ಯಾಸಿ ರಂಗಭೂಮಿಯಲ್ಲಿ ಒಂದು ದಿನದ ಮಟ್ಟಿಗೆ ಮಾತ್ರ ಸಿಕ್ಕ ಪರಿಕರಗಳನ್ನು ಬಳಸಿಕೊಳ್ಳುತ್ತಾರೆ. ಇಂತಹ ಅನೇಕ ವಿಚಾರಗಳೊಂದಿಗೆ ಕನ್ನಡ ವೃತ್ತಿರಂಗಭೂಮಿಯ ರಂಗಸಜ್ಜಿಕೆಯ ಸ್ವರೂಪಗಳನ್ನು ತಿಳಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕನ್ನಡ ವೃತ್ತಿರಂಗಭೂಮಿಯ ರಂಗಾಂಗ ಸ್ವರೂಪವನ್ನು ಹೇಳಲಾಗಿದೆ. ಇಲ್ಲಿ ಮೊದಲಿಗೆ ವಿಶ್ವರಂಗಭೂಮಿ ಮತ್ತು ಭಾರತೀಯ ರಂಗಭೂಮಿಯ ರಂಗಾಂಗ ಸ್ವರೂಪಗಳನ್ನು ಸ್ಥೂಲವಾಗಿ ನೋಡಿ ನಂತರ ಕನ್ನಡ ವೃತ್ತಿರಂಗಭೂಮಿಯ ರಂಗಾಂಗ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ. ರಂಗಸಜ್ಜಿಕೆಯ ವಿವಿಧ ರೀತಿಯ ವಿನ್ಯಾಸದ ಪರದೆಗಳು, ಕವಾಟುಗಳು ಮತ್ತು ಸೀನರಿಗಳನ್ನು ಅಳವಡಿಸಿ ನಾಟಕದ ಸನ್ನಿವೇಶಗಳಿಗೆ ತಕ್ಕಂತೆ ಅವುಗಳನ್ನು ಬಳಸಿಕೊಳ್ಳುತ್ತಾರೆ. ರಸ್ತಾ ಸನ್ನಿವೇಶವು ಬಂದಾಗ ರಸ್ತೆ ಪರದೆ ಬೀಳುತ್ತದೆ. ಇದರಲ್ಲಿ ಮತ್ತೆ ಬೇರೆ ಬೇರೆ ರಸ್ತೆಯ ದೃಶ್ಯಗಳನ್ನು ಕಲಾವಿದರು ಚಿತ್ರಿಸಿರುತ್ತಾರೆ. ರಾಜ ಬೀದಿಯ ರಸ್ತೆ, ದೇವಾಲಯದ ಎದುರಿನ ರಸ್ತೆ, ದೊಡ್ಡ ನಗರಗಳ ವೈಭವದ ರಸ್ತೆ, ಸಾಮಾನ್ಯ ಊರಿನ ರಸ್ತೆ, ಹಳ್ಳಗಾಡಿನ ರಸ್ತೆ, ಕಾಡಿನ ದಾರಿ ಹೀಗೆ ವಿವಿಧ ರಸ್ತೆ ಸೀನರಿಗಳಿರುತ್ತವೆ. ಅದರಂತೆ ಮನೆಯ ದೃಶ್ಯದಲ್ಲಿ ಮಹಡಿಮನೆ, ಅರಮನೆ, ಸಾಮಾನ್ಯ ಮನೆ, ಗುಡಿಸಲು ಹೀಗೆ ವೈವಿಧ್ಯತೆ ಇದ್ದರೆ, ದೇವಾಲಯ ಮತ್ತು ಮಠ–ಮಾನ್ಯಗಳ ಚಿತ್ರಗಳುಳ್ಳ ಕವಾಟಗಳು ನಾಟಕದ ರಂಗಾಂಗದ ಭಾಗವಾಗಿರುತ್ತವೆ. ಇವುಗಳಲ್ಲದೇ ಕೋಟೆ ಗೋಡೆಗಳು, ಆಕಾಶ, ಭೂಮಿ, ಮಳೆ, ನೀರು, ಕಾಡು, ಭಾವಿ, ನದಿ, ಸಮುದ್ರ, ಉದ್ಯಾನವನ ಇಂತಹ ದೃಶ್ಯಗಳನ್ನು ತೋರಿಸಲು ಪರದೆ, ಕವಾಟು ಮತ್ತು ಸೀನರಿಗಳನ್ನು ಬಳಸುತ್ತಾರೆ. ಇಂತಹ ನಾಟಕಗಳ ಕಲಾ

೨೬. ದೇವದಾಸ.ಪ.ಕಳಸದ : ಕನ್ನಡ ವೃತ್ತಿರಂಗಭೂಮಿ ಹಾಗೂ ರಂಗವಿನ್ಯಾಸ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಡಿ.ಲಿಟ್. ಪ್ರಬಂಧ– ೨೦೦೦

ಸಾಮಗ್ರಿಗಳನ್ನು ತಯಾರಿಸಲು ಇಲಕಲ್ ಪಟ್ಟಣವು ಪ್ರಖ್ಯಾತವಾಗಿದೆ. ಇಲ್ಲಿ ಹಲವಾರು ಜನ ಕಲಾವಿದರು ಇದೇ ವೃತ್ತಿಯಿಂದ ಬದುಕುತ್ತಿದ್ದಾರೆ. ವೃತ್ತಿರಂಗಭೂಮಿಯ ರಂಗಾಂಗ ಸ್ವರೂಪದ ಈ ಕಲಾ ಸಾಮಗ್ರಿಗಳನ್ನು ರಚಿಸಲು ಬೇಕಾಗುವ ಪರಿಕರಗಳಲ್ಲಿ ಬಣ್ಣ, ಬಟ್ಟೆ, ಅಂಟುದ್ರಾವಕ ಮತ್ತು ಚಿತ್ರಿಸುವ ರೀತಿಗಳ ಬಗ್ಗೆಯೂ ಇಲ್ಲಿ ವಿವೇಚನೆ ಮಾಡಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಕನ್ನಡ ವೃತ್ತಿರಂಗಭೂಮಿಯ ರಂಗ ಪ್ರದರ್ಶನಗಳ ಬಗ್ಗೆ ವಿವೇಚಿಸಲಾಗಿದೆ. ಕರ್ನಾಟಕದಲ್ಲಿ ಇಂದು ವೃತ್ತಿರಂಗಭೂಮಿಯ ಕ್ಷೇತ್ರವು ಕ್ಷೀಣಿಸುತ್ತಿದೆ. ಕೆಲವೆ ನಾಟಕ ಕಂಪನಿಗಳು ಅಲ್ಲಲ್ಲಿ ಉಳಿದುಕೊಂಡಿವೆ. ೨೦ನೇ ಶತಮಾನದ ಆರಂಭಿಕ ದಿನಗಳಲ್ಲಿ ರಾಜ್ಯದಲ್ಲಿ ವೃತ್ತಿರಂಗಭೂಮಿಯ ಕಂಪನಿಗಳು ಹೇರಳವಾಗಿದ್ದರೂ ಉತ್ತರ ಕರ್ನಾಟಕದ ಪಾಲು ಅದರಲ್ಲಿ ಹೆಚ್ಚಾಗಿತ್ತು. ದಕ್ಷಿಣದಲ್ಲಿ ಗುಬ್ಬಿ ವೀರಣ್ಣನವರ ನಾಟಕ ಕಂಪನಿ ಖ್ಯಾತವಾಗಿದ್ದರೆ, ಉತ್ತರದಲ್ಲಿ ಅನ್ನಪೂರ್ಣೇಶ್ವರಿ ನಾಟ್ಯಸಂಘ, ಸುಳ್ಳದೇಸಾಯಿ, ಅರಿಷಿಣ ಗೋಡಿ, ಕಂದಗಲ್ ಹನಮಂತರಾಯರ ಕಂಪನಿ, ಹುಚ್ಚೇಶ್ವರ ನಾಟ್ಯ ಸಂಘ ಕಮತಗಿ, ಹೀಗೆ ಹಲವಾರು ಕಂಪನಿಗಳು ಪ್ರಸಿದ್ಧವಾಗಿದ್ದು ಅವುಗಳು ಪ್ರದರ್ಶಿಸುತ್ತಿದ್ದ ನಾಟಕಗಳು ಅವುಗಳಲ್ಲಿ ಬಳಸುತ್ತಿದ್ದ ಕಲಾಪರಿಕರಗಳ ವಿವರವನ್ನು ಇಲ್ಲಿ ಕಟ್ಟಿಕೊಡಲಾಗಿದೆ.

ಈ ಪ್ರಬಂಧವು ವೃತ್ತಿರಂಗಭೂಮಿಯ ಕಲಾ ವಿನ್ಯಾಸಗಳನ್ನು ಕುರಿತು ಮುಖ್ಯವಾಗಿ ಪರದೆಗಳು, ಕವಾಟುಗಳು, ಸೀನರಿಗಳು, ರಂಗಸಜ್ಜಿಕೆಯ ಕಲಾತ್ಮಕತೆ, ಪಾತ್ರಧಾರಿಗಳ ವೇಷಭೂಷಣ, ಮುಖವರ್ಣಿಕೆ, ಆಯುಧ ಮತ್ತು ಇನ್ನಿತರ ಪರಿಕರಗಳ ಬಗ್ಗೆ ಚರ್ಚಿಸುತ್ತದೆ. ಈ ಮೂಲಕ ಕಲಾ ಸಾಹಿತ್ಯಕ್ಕೆ ರಂಗಕಲೆಯ ಕಲಾ ವಿವರಗಳನ್ನು ನೀಡುವ ಕೃತಿಯಾಗಿ ಹೊರಹೊಮ್ಮಿದೆ.

**ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ :**

ಕರ್ನಾಟಕದ ಕರಾವಳಿ ಭಾಗವು ಕಲೆ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ಮಾತ್ರವಲ್ಲದೆ ಪ್ರಾಕೃತಿಕ ಸಂಪತ್ತಿನಿಂದಲೂ ಕೂಡಿದ ಸಮೃದ್ಧ ಪ್ರದೇಶವಾಗಿದೆ. ಇಲ್ಲಿನ ಸಂಸ್ಕೃತಿ ಹಲವಾರು ಉಪಸಂಸ್ಕೃತಿಗಳ ಹುಟ್ಟಿಗೆ ಕಾರಣವಾಗಿರುವುದಲ್ಲದೇ ಈ ಉಪಸಂಸ್ಕೃತಿಗಳ ಅಡಿಯಲ್ಲಿ ವಿವಿಧ ರೀತಿಯ ಕಲೆಗಳು ರೂಪುಗೊಂಡು ವಿಶಿಷ್ಟವಾಗಿ ಬೆಳೆದು ಬಂದಿವೆ. ಅಂತಹ ಕಲಾಪ್ರಕಾರದಲ್ಲಿ ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆಯೂ ಒಂದಾಗಿದ್ದು ಇದರ ಕುರಿತು ಆನಂದ ಕೆ. ಪೂಜಾರ ಇವರು ಡಿ.ಲಿಟ್. ಅಧ್ಯಯನವನ್ನು ಮಾಡಿದ್ದಾರೆ.[೨೭] ಈ ಅಧ್ಯಯನದಲ್ಲಿ ಒಟ್ಟು ಎಂಟು ಅಧ್ಯಾಯಗಳಲ್ಲಿ ವಿಷಯ ನಿರೂಪಣೆಗೊಂಡಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ, ವ್ಯಾಪ್ತಿಗಳ ಬಗ್ಗೆ ಹೇಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕರಾವಳಿ ಕರ್ನಾಟಕದ ಸಾಂಸ್ಕೃತಿಕ ಪರಿಸರ ಮತ್ತು ಕಲಾ ಹಿನ್ನೆಲೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಕರಾವಳಿ ಭಾಗದಲ್ಲಿ ಹಲವಾರು ಬುಡಕಟ್ಟು ಸಮುದಾಯಗಳು, ಮೇಲ್ವರ್ಗದ ಜನಾಂಗಗಳು, ಮೀನುಗಾರರು, ಒಕ್ಕಲಿಗರು, ಹೀಗೆ ವಿವಿಧ ಜನಸಮುದಾಯಗಳು ಇಲ್ಲಿ ವಾಸವಾಗಿದ್ದು, ವಿವಿಧ ಬಗೆಯ ಸಂಸ್ಕೃತಿ, ಕಲೆಗಳ ಹುಟ್ಟಿಗೆ ಕಾರ್ಣವಾಗಿದೆ. ಹಾಲಕ್ಕಿಗಳು, ಕುಣಬಿಯರು, ಗೌಳಿಗರು, ಯರವರು, ಕಾಡು ಕುರುಬರು, ಜೇನುಕುರುಬರು, ಸೋಲಿಗರು, ಹಲಸರು, ದೀವರು, ಇವರೆಲ್ಲ ತಮ್ಮದೇ ವಿಶಿಷ್ಟ ಆಚರಣೆ ಮತ್ತು ಕಲಾ ಪ್ರಕಾರಗಳನ್ನು ಅಳವಡಿಸಿಕೊಂಡಿದ್ದಾರೆ.

---

೨೭. ಆನಂದ ಪೂಜಾರ : ಕರಾವಳಿ ಕರ್ನಾಟಕದ ಕಾವಿಚಿತ್ರಕಲೆ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಡಿ.ಲಿಟ್. ಪ್ರಬಂಧ-೨೦೦೫

ಡೆಕ್ಕೆಬಲಿ, ಕಾಡ್ಯಾನಾಟ, ನಾಗಮಂಡಲ, ಬೂತದ ಕೋಲ, ಮುಂತಾದ ಆಚರಣೆಗಳು ಇಲ್ಲಿ ಕಲಾವಾತಾವರಣ ನಿರ್ಮಿಸಿವೆ. ಈ ಭಾಗದಲ್ಲಿ ಆಳಿದ ಅನೇಕ ಅರಸು ಮನೆತನಗಳು ಈ ಪರಿಸರವನ್ನು ಕಲೆಯ ಬೀಡಾಗಿ ಮಾಡಿವೆ. ಮತ್ತು ಚಂದ್ರಗಿರಿ, ಸೋದೆ, ಬೀಳಗಿ, ಭುವನಗಿರಿಗಳಲ್ಲಿ ಆಳಿದ ಸಾಮಂತರು, ಸಂಸ್ಥಾನಿಕರು ಮತ್ತು ಅಧಿಕಾರಿಗಳು ತಮ್ಮ ಕಾಲದ ಅರಮನೆ, ದೇವಾಲಯ, ಮಠ ಮಾನ್ಯಗಳನ್ನು ಕಾವಿ ಚಿತ್ರಗಳಿಂದ ಅಲಂಕರಿಸಿದ್ದಾರೆ. ಗೋವಾ ಭಾಗದಿಂದ ವಲಸೆ ಬಂದ ಕೊಂಕಣಿ ಮತಸ್ಥ ಬ್ರಾಹ್ಮಣರು ಈ ಕಲಾ ಪ್ರಕಾರಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದವರಾಗಿದ್ದಾರೆ. ಇಂತಹ ಅನೇಕ ವಿವರಗಳನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಕಾವಿ ಚಿತ್ರಕಲೆಯ ಸ್ವರೂಪ, ಪ್ರಮುಖ ಲಕ್ಷಣಗಳು ಮತ್ತು ಅರ್ಥವ್ಯಾಪ್ತಿಗಳ ಬಗೆಗೆ ಹೇಳಿದೆ. ಕಾವಿ ಚಿತ್ರಕಲೆಯು ಭಿತ್ತಿ ಚಿತ್ರಕಲೆಯ ಪ್ರಕಾರವಾಗಿದ್ದರೂ ಬಯಲು ನಾಡಿನಲ್ಲಿ ರಚನೆಯಾಗುವ ಬಹುವರ್ಣ ಭಿತ್ತಿಚಿತ್ರಗಳಿಗಿಂತ ಭಿನ್ನವಾಗಿದೆ. ಇಲ್ಲಿ ಕೆಂಪು ಬಣ್ಣ ಮಾತ್ರವಿದ್ದು, ಸ್ವರೂಪದಲ್ಲಿಯೂವ್ಯತ್ಯಾಸವಿದೆ. ಬಹುವರ್ಣ ಭಿತ್ತಿ ಚಿತ್ರಗಳ ಹಾಗೆ ದ್ವಿ ಆಯಾಮಗಳನ್ನು ಹೊಂದಿರದೆ, ಉಬ್ಬು ಶಿಲ್ಪ ಮಾದರಿಯಲ್ಲಿ ತ್ರಿ ಆಯಾಮಗಳನ್ನು ಕಾವಿ ಚಿತ್ರಕಲೆಯು ಹೊಂದಿದೆ. ಇಂತಹ ಸಂಗತಿಗಳು ಇಲ್ಲಿ ಚರ್ಚಿಸಿವೆ.

ನಾಲ್ಕನೆಯ ಅಧ್ಯಾಯದಲ್ಲಿ ಕರಾವಳಿ ಕಾವಿ ಚಿತ್ರಕಲೆಯ ನೆಲೆಗಳ ವಿಂಗಡಣೆ ಮತ್ತು ಚಿತ್ರಗಳ ವಸ್ತು ವಿಷಯಗಳ ಬಗ್ಗೆ ವಿವೇಚಿಸಲಾಗಿದೆ. ಕರಾವಳಿ ಭಾಗದ ಕಾವಿ ಚಿತ್ರಕಲೆಯನ್ನು ಅವು ರಚನೆಯಾದ ನೆಲೆಗಳಿಗೆ ಅನುಸಾರವಾಗಿ ದೇವಾಲಯಗಳಲ್ಲಿನ ಕಾವಿ ಚಿತ್ರಕಲೆ, ಮಠಗಳಲ್ಲಿನ ಕಾವಿ ಚಿತ್ರಕಲೆ, ಮನೆಗಳಲ್ಲಿನ ಕಾವಿ ಚಿತ್ರಕಲೆ, ಸಾರ್ವಜನಿಕ ಕಟ್ಟಡಗಳಲ್ಲಿನ ಕಾವಿ ಚಿತ್ರಕಲೆ ಎಂಬುದಾಗಿ ವರ್ಗೀಕರಿಸಿಕೊಂಡು ವಿವೇಚಿಸಿದೆ. ಅದರಲ್ಲಿ ಮತ್ತೆ ಉಪ ವಿಂಗಡಣೆಯನ್ನು ಮಾಡಿಕೊಳ್ಳಲಾಗಿದೆ. ದೇವಾಲಯಗಳಲ್ಲಿನ ಕಾವಿ ಚಿತ್ರಕಲೆಯಲ್ಲಿ ಶೈವ ದೇವಾಲಯಗಳಲ್ಲಿನ ಕಾವಿ ಚಿತ್ರಕಲೆ, ವೈಷ್ಣವ ದೇವಾಲಯಗಳಲ್ಲಿನ ಕಾವಿ ಚಿತ್ರಕಲೆ, ದೇವಿ ಮಂದಿರಗಳಲ್ಲಿನ ಕಾವಿ ಚಿತ್ರಕಲೆ, ಗಣಪತಿ ದೇವಾಲಯಗಳಲ್ಲಿನ ಕಾವಿ ಚಿತ್ರಕಲೆ ಮತ್ತು ಆಂಜನೇಯ ದೇವಾಲಯಗಳಲ್ಲಿನ ಕಾವಿ ಚಿತ್ರಕಲೆ ಎಂದು ವರ್ಗೀಕರಿಸಿದೆ. ಅದೇ ರೀತಿ ಮಠಗಳಲ್ಲಿನ ಕಾವಿ ಚಿತ್ರಕಲೆಯನ್ನು ಶೈವ ಮಠಗಳಲ್ಲಿನ ಕಾವಿ ಚಿತ್ರಕಲೆ, ವೈಷ್ಣವ ಮಠಗಳಲ್ಲಿನ ಕಾವಿ ಚಿತ್ರಕಲೆ ಎಂದು ವಿಂಗಡಿಸಿದೆ.

ಈ ಎಲ್ಲ ನೆಲೆಗಳಲ್ಲಿರುವ ಕಾವಿ ಚಿತ್ರಗಳನ್ನು ವಿಷಯಾನುಸಾರವಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಕಾವಿ ಚಿತ್ರಗಳಲ್ಲಿ ಹಲವಾರು ಬಗೆಯ ವಿಷಯ ವಸ್ತುಗಳಿಗೆ ಸೇರಿದ ಚಿತ್ರಗಳು ರಚನೆಯಾಗಿವೆ. ದೇವತಾ ಚಿತ್ರಗಳಲ್ಲಿ ಪುರಾಣಗಳಿಗೆ ಸಂಬಂಧಿಸಿದ ರಾಮಾಯಣ, ಮಹಾಭಾರತ, ಭಾಗವತಗಳಿಗೆ ಸಂಬಂಧಿಸಿದ ಚಿತ್ರಗಳಲ್ಲದೆ ಮನೆಯ ವಂಶಸ್ಥರು, ರಾಜ ಪರಿವಾರದವರು, ಅಧಿಕಾರಿಗಳ ಚಿತ್ರಗಳಿವೆ. ಅಲ್ಲದೆ ವಿವಿಧ ಬಗೆಯ ಪ್ರಾಣಿ–ಪಕ್ಷಿಗಳು, ಹೂಬಳ್ಳಿ ನಕ್ಷೆಗಳು, ಜಾಮತಿಕ ವಿನ್ಯಾಸಗಳು ಇಲ್ಲಿವೆ. ದಶಾವತಾರಕ್ಕೆ ಸಂಬಂಧಿಸಿದ ಚಿತ್ರಗಳು ಇಲ್ಲಿ ಹೆಚ್ಚಾಗಿವೆ. ಹಾಗೆಯೇ ದೇವಿಯ ಮಹಾತ್ಮೆ ಬಿಂಬಿಸುವ ಕೃತಿಗಳು, ಆಂಜನೇಯನ ವೈವಿಧ್ಯ ನೋಟಗಳು, ಗರುಡ, ಜಯವಿಜಯ, ನಂದಿ, ನಾರದ, ಋಷಿಮುನಿಗಳು, ಇಲ್ಲಿ ರಚನೆಯಾದ ಚಿತ್ರಗಳಲ್ಲಿ ಕಂಡು ಬರುತ್ತಾರೆ. ಈ ಎಲ್ಲ ಬಗೆಯ ಚಿತ್ರಗಳನ್ನು ಇಲ್ಲಿ ವಿವೇಚಿಸಲಾಗಿದೆ. ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆಯ ಮೇಲೆ ಹಲವಾರು ಕಲಾಶೈಲಿಗಳ ಪ್ರಭಾವ, ಪ್ರೇರಣೆಗಳುಂಟಾಗಿವೆ. ಅವುಗಳನ್ನು ಕುರಿತು ಐದನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಕರಾವಳಿ ಕಾವಿಕಲೆಯು ಮೂಲತ ಗೋವಾ ಪ್ರದೇಶದಿಂದ

ಬಂದುದಾಗಿದೆ ಎಂಬುದು ಒಂದು ನಂಬಿಕೆಯಾಗಿದ್ದು, ಆ ಭಾಗದ ಪೋರ್ಚುಗೀಜ ಕಲಾ ಪ್ರಭಾವವು ಇದರಲ್ಲಿ ಗೋಚರಿಸುವುದು. ಹಸೆ ಚಿತ್ರ ಬರೆಯುವುದು, ನಾಗಮಂಡಲ, ಡಕ್ಕೆಬಲಿ, ಭೂತಾರಾಧನೆ, ಮುಂತಾದ ಸಂದರ್ಭಗಳಲ್ಲಿನ ಚಿತ್ರವಿನ್ಯಾಸಗಳು ಈ ಮೊದಲೇ ಇಲ್ಲಿದ್ದು ಇವು ಕಾವಿಚಿತ್ರಗಳ ಮೇಲೆ ಪ್ರಭಾವ ಬೀರಿದಂತೆ ಕಂಡು ಬರುತ್ತದೆ. ಅಲ್ಲದೆ ಕಾವಿಚಿತ್ರಗಳ ಅಲಂಕರಣ, ವೇಷಭೂಷಣ, ಆಭರಣಾದಿ ವೈಭವಗಳು ಈ ಭಾಗದ ಪ್ರಸಿದ್ಧ ಕಲೆ ಯಕ್ಷಗಾನವನ್ನು ನೆನಪಿಗೆ ತರುತ್ತವೆ. ಹೀಗೆ ಹಲವಾರು ರೀತಿಯ ಪ್ರಭಾವ ಪ್ರೇರಣೆಗಳು ಕಾವಿಕಲೆಯ ಮೇಲೆ ಉಂಟಾಗಿರುವುದುನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಕಾವಿ ಚಿತ್ರಕಲಾವಿದರ ಕುರಿತು ಆರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಕಾವಿ ಚಿತ್ರರಚನೆಯ ಪರಂಪರೆ ಇಂದು ನಶಿಸುತ್ತಿದ್ದು ಈ ಕಲೆಯನ್ನು ಬಲ್ಲ ಕೆಲವೇ ಕುಟುಂಬಗಳು ಬೀಳಗಿ, ಹೊನ್ನಾವರ, ಸಿರ್ಸಿ, ಗೋಕರ್ಣ, ಕುಮಟಾ ಮತ್ತು ಅಂಕೋಲಾಗಳಲ್ಲಿ ವಾಸಿಸುತ್ತಿದ್ದಾರೆ. ಈ ಮನೆತನಗಳಲ್ಲಿರುವ ಹಿರಿಯರು ಮಾತ್ರ ಈ ಕಲೆಯ ಬಗ್ಗೆ ಅರಿವುಳ್ಳವರಾಗಿದ್ದು ಯುವ ಪೀಳಿಗೆಯು ಈ ಕಲಾ ಪರಂಪರೆಯನ್ನು ಹೊರತು  ಪಡಿಸಿದ ಇನ್ನಿತರ ಬೇರೆ ಉದ್ಯೋಗಗಳನ್ನು ಮಾಡಿಕೊಂಡಿದ್ದಾರೆ. ಈ ಕಲಾವಿದರ ಸದ್ಯದ ಸ್ಥಿತಿಗತಿ, ಸಾಮಾಜಿಕ ಪರಿಸ್ಥಿತಿ, ಕಲೆಯ ಬಗೆಗಿನ ಒಲವು ನಿಲುವುಗಳು ಹೀಗೆ ಹಲವಾರು ಅಂಶಗಳನ್ನು ಇಲ್ಲಿ ವಿವೇಚಿಸುವ ಪ್ರಯತ್ನ ಮಾಡಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಕರಾವಳಿ ಕಾವಿ ಚಿತ್ರರಚನೆಯ ಆಪತ್ತುಗಳು ಮತ್ತು ಸಂರಕ್ಷಣಾ ವಿಧಾನಗಳ ಬಗ್ಗೆ ವಿವೇಚಿಸಲಾಗಿದೆ. ಕರಾವಳಿ ಕಾವಿ ಚಿತ್ರಕಲೆಯ ಆಪತ್ತುಗಳನ್ನು ವರ್ಗಿಕರಿಸಿ ಅಧ್ಯಯನಕ್ಕೊಳಪಡಿಸಲಾಗಿದೆ. ಸ್ವಾಭಾವಿಕ ಆಪತ್ತುಗಳು, ವ್ಯಕ್ತಿಗತ ಆಪತ್ತುಗಳು, ಪ್ರಾಕೃತಿಕ ಆಪತ್ತುಗಳು ಮತ್ತು ಪ್ರಾಣಿ-ಪಕ್ಷಿಗಳಿಂದಾಗುವ ಆಪತ್ತುಗಳು ಎಂದು ವಿಂಗಡಿಸಲಾಗಿದೆ. ಎಲ್ಲ ರೀತಿಯ ಆಪತ್ತುಗಳಿಂದ ಕಾವಿ ಚಿತ್ರಗಳನ್ನು ಹೇಗೆ ಸಂರಕ್ಷಿಸಬೇಕು ಎಂಬ ಅನೇಕ ಸಂರಕ್ಷಣಾ ಕ್ರಮಗಳನ್ನು ಇಲ್ಲಿ ಹೇಳಲಾಗಿದೆ. ಎಂಟನೆಯ ಅಧ್ಯಾಯವು ಸಮಾರೋಪವಾಗಿದ್ದು ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ. ಈ ಪ್ರಬಂಧದ ಮೂಲಕ ಚಿತ್ರಕಲಾ ಕ್ಷೇತ್ರಕ್ಕೆ ಕರಾವಳಿ ಕಾವಿ ಕಲೆಯ ಬಗೆಗಿನ ಹೆಚ್ಚಿನ ಮಾಹಿತಿ ಲಭ್ಯವಾಗಿದೆ. ಕರಾವಳಿ ಕರ್ನಾಟಕ ಭಾಗದ ಕಾವಿ ಚಿತ್ರಕಲೆಯ ನೆಲೆಗಳು, ಅದರ ಸ್ವರೂಪ, ಲಕ್ಷಣ, ಪ್ರಕಾರ, ವಸ್ತುವಿಷಯಗಳು,  ರಚನಾಕ್ರಮ, ಚಿತ್ರರಚನೆಯ ಪರಿಕರಗಳು, ತಂತ್ರಗಾರಿಕೆ, ಕಲಾವಿದರು, ರಚನಾ ಉದ್ದೇಶ, ಪ್ರಾದೇಶಿಕ ವಿಶಿಷ್ಟತೆ, ಪ್ರಭಾವ, ಪ್ರೇರಣೆ, ಚಿತ್ರಶೈಲಿ, ಈ ಕಲೆಯ ಇತಿಹಾಸ, ಪ್ರೋತ್ಸಾಹಕರು, ಹೀಗೆ ಹಲವಾರು ಸಂಗತಿಗಳು ಈ ಕಲೆಯ ಕುರಿತು ತಿಳಿದುಬರುತ್ತವೆ.

**ದೃಶ್ಯಕಲೆಗಳು, ಒಂದು ತೌಲನಿಕ ಅಧ್ಯಯನ :**

ಡಿ.ಎ.ಉಪಾಧ್ಯಾಯ 'ದೃಶ್ಯಕಲೆಗಳು, ಒಂದು ತೌಲನಿಕ ಅಧ್ಯಯನ' ವಿಷಯ ಆಯ್ದುಕೊಂಡು ಡಿ.ಲಿಟ್ ಅಧ್ಯಯನ ಮಾಡಿದ್ದಾರೆ.[೨೮] ಈ ಪ್ರಬಂಧದಲ್ಲಿ ಒಟ್ಟು ಹನ್ನೆರಡು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ವಿಷಯ ನಿರೂಪಣೆ ಮಾಡಲಾಗಿದೆ. ಅಧ್ಯಯನದ ಉದ್ದೇಶ, ವಿಧಾನ ಮತ್ತು ವ್ಯಾಪ್ತಿಗಳ ಜೊತೆಗೆ ಈ ಅಧ್ಯಯನದ ಪ್ರಯೋಜನಗಳನ್ನು ಮೊದಲ ಅಧ್ಯಾಯದಲ್ಲಿ ಹೇಳಿದೆ. ಎರಡನೆಯ ಅಧ್ಯಾಯವು ಕಲೆಯ ಹುಟ್ಟು ಬೆಳವಣಿಗೆಗೆ ಸಂಬಂಧಿಸಿದ್ದಾಗಿದೆ. ಇಲ್ಲಿ ಕಲೆಯ ಉಗಮ,  ನಿಸರ್ಗದ ಪ್ರೇರಣೆ,  ಮಾನವನಲ್ಲಿ ಕಲೆಯ ಅಂಕುರ,  ಅಭಿವ್ಯಕ್ತಿಸಿದ ರೀತಿ, ಕಲೆಯ

೨೮. ಡಿ.ಎ.ಉಪಾಧ್ಯಾಯ : ದೃಶ್ಯಕಲೆಗಳು, ಒಂದು ತೌಲನಿಕ ಅಧ್ಯಯನ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಡಿ.ಲಿಟ್. ಪ್ರಬಂಧ-೨೦೦೬.

ವರ್ಗೀಕರಣ, ಚತುಷಷ್ಟಿ ಕಲೆಗಳು, ವಾತ್ಸಾಯನನ ಪ್ರಕಾರ ಕಲೆಗಳ ವರ್ಗೀಕರಣ, ಕ್ರಿಯಾಮೂಲದ ವರ್ಗೀಕರಣ, ಇಂದ್ರಿಯ ಮೂಲದ ವರ್ಗೀಕರಣ, ಮೈಗಳ ಮೂಲದ ವರ್ಗೀಕರಣ, ಅರವತ್ನಾಲ್ಕು ಕಲೆಗಳು, ಲಲಿತಕಲೆಗಳು, ದೃಶ್ಯಕಲೆಗಳು, ದೃಶ್ಯೇತರ ಕಲೆಗಳು ಎಂಬುದಾಗಿ ವಿಂಗಡಿಸಿ ವಿವೇಚಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ದೃಶ್ಯಕಲೆಗಳು ಮತ್ತು ದೃಶ್ಯೇತರ ಕಲೆಗಳ ವೈಲಕ್ಷಣಗಳನ್ನು ಹೇಳಲಾಗಿದೆ. ದೃಶ್ಯಕಲೆಗಳ ಸ್ವರೂಪ, ಲಕ್ಷಣ, ಪ್ರಕಾರ ಮುಂತಾದ ಅಂಶಗಳನ್ನು ಹೇಳಿ ಯಾವ ಯಾವ ಕಲಾ ಪ್ರಕಾರಗಳು ದೃಶ್ಯಕಲೆಗಳಲ್ಲಿ ಒಳಗೊಳ್ಳುತ್ತವೆ ಎಂಬ ಅಂಶಗಳನ್ನು ತಿಳಿಸಲಾಗಿದೆ. ಅದರ ಜೊತೆಗೆ ದೃಶ್ಯಕಲೆಯ ಸ್ಥೂಲ ಪಕ್ಷಿನೋಟ, ವರ್ಣಚಿತ್ರಕಲೆ, ಮೂರ್ತಿ ಶಿಲ್ಪಕಲೆ, ವಾಸ್ತು ಶಿಲ್ಪಕಲೆಗಳ ಬಗ್ಗೆ ವಿವೇಚಿಸುತ್ತ ಪರಸ್ಪರ ದೃಶ್ಯಕಲೆಗಳು, ಪೂರಕ ಕಲೆಗಳ ಕುರಿತು ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ದೃಶ್ಯಕಲಾವಿದನ ಬಗ್ಗೆ ವಿವೇಚನೆ ಇದೆ. ದೃಶ್ಯಕಲಾವಿದನನ್ನು ಸೃಷ್ಟಿಸಲು ಸಾಧ್ಯವಿಲ್ಲ ಎನ್ನುವ ಪ್ರಬಂಧಕಾರರು ಕಲಾವಿದರಿಗೆ ಹುಚ್ಚನ ಸ್ಥಾನ ಕಲ್ಪಿಸುತ್ತಾರೆ. ದೃಶ್ಯ ಕಲಾವಿದನ ಲಕ್ಷಣಗಳೇನು? ಆತನ ಕ್ರಿಯಾ ವಿಶೇಷಗಳೇನು? ಎಂಬಂತಹ ಅಂಶಗಳನ್ನು ಹೇಳುತ್ತ, ಕಲಾವಿದರ ಅಂದಿನ ಸ್ಥಾನ ಮತ್ತು ಇಂದಿನ ಕಲಾವಿದರ ಸ್ಥಾನಗಳ ಬಗ್ಗೆ ತೌಲನಿಕವಾಗಿ ನೋಡಿದ್ದಾರೆ. ಕಲಾವಿದ ಮತ್ತು ಕಲಾಕೃತಿ, ಕಲಾವಿದ ಮತ್ತು ಅನುಭವ, ಕಲಾವಿದ ಮತ್ತು ಅಭಿವ್ಯಕ್ತಿ, ಕಲಾವಿದ ಮತ್ತು ಸಮಾಜ, ಕಲಾವಿದ ಮತ್ತು ಸಹೃದಯ ಹೀಗೆ ವಿಭಿನ್ನ ವಿಚಾರಗಳು ಇಲ್ಲಿ ಚರ್ಚಿಸಲ್ಪಟ್ಟಿವೆ. ಈ ಪ್ರಬಂಧದ ಐದನೆಯ ಅಧ್ಯಾಯವು ಸಹೃದಯನ ಕುರಿತಾಗಿ ವಿವೇಚಿಸುತ್ತದೆ. ಸಹೃದಯ ಎಂದರೆ ಯಾರು? ಸಹೃದಯ ಮತ್ತು ಕಲಾವಿದನಲ್ಲಿರುವ ವ್ಯತ್ಯಾಸಗಳು, ಸಹೃದಯ ಮತ್ತು ಕಲಾಕೃತಿ ನಡುವಿನ ಸಂಬಂಧಗಳು, ಸಮಾಜದಲ್ಲಿ ಸಹೃದಯನ ಸ್ಥಾನ, ಸಹೃದಯನ ಪಾತ್ರ ಯಾವುದು? ಸಹೃದಯನ ಅರ್ಹತೆಗಳೇನು? ಸಹೃದಯ ಮತ್ತು ಅಭಿರುಚಿ, ಕಲಾವಲಯದಲ್ಲಿ ಸಹೃದಯ ಮತ್ತು ದೃಶ್ಯಕಲಾವಿದ, ಸಹೃದಯ ಮತ್ತು ದೃಶ್ಯಕಲೆಗಳು ಹೀಗೆ ಹಲವಾರು ದೃಷ್ಟಿಕೋನಗಳಿಂದ ವಿಶ್ಲೇಷಣೆ ಮಾಡಲಾಗಿದೆ. ಇಲ್ಲಿ ಸಹೃದಯನ ಅನುಭವ, ಅನುಭಾವಗಳನ್ನು ದೃಶ್ಯಕಲೆಗಳು ಮತ್ತು ಇತರ ಕಲಾ ಪ್ರಕಾರಗಳ ಹಿನ್ನೆಲೆಯಲ್ಲಿ ತೌಲನಿಕವಾಗಿ ನೋಡಲಾಗಿದೆ.

ಆರನೆಯ ಅಧ್ಯಾಯದಲ್ಲಿ ಶಾಸ್ತ್ರ ಮತ್ತು ದೃಶ್ಯಕಲೆಗಳ ಬಗ್ಗೆ ವಿವೇಚಿಸಲಾಗಿದೆ. ಶಾಸ್ತ್ರ ಎಂದರೇನು? ಶಾಸ್ತ್ರ ಮತ್ತು ಪ್ರಯೋಜನ, ಪ್ರಾಚೀನ ಶಾಸ್ತ್ರಗ್ರಂಥಗಳು, ಪ್ರಾಚೀನ ಶಾಸ್ತ್ರಗಳಲ್ಲಿ ಕಲಾ ವಿಷಯವನ್ನು ಹೊಂದಿದ ಶಾಸ್ತ್ರಗಳು; ಶಾಸ್ತ್ರ ಮತ್ತು ಕಲೆ, ಶಾಸ್ತ್ರ ಮತ್ತು ದೃಶ್ಯಕಲೆಗಳು, ಹೀಗೆ ವಿಭಿನ್ನ ನೆಲೆಗಳಲ್ಲಿ ವಿವೇಚಿಸಲಾಗಿದೆ.

ಏಳನೆಯ ಅಧ್ಯಾಯವು ದೃಶ್ಯಕಲೆಗಳ ಮಾಧ್ಯಮಗಳ ಬಗ್ಗೆ ಹೇಳುತ್ತದೆ. ಪ್ರಾಗಿತಿಹಾಸ ಕಾಲದಿಂದ ಇಂದಿನವರೆಗೆ ದೃಶ್ಯಕಲೆಗಳ ರಚನಾ ವಿಧಾನಗಳಲ್ಲಿ ಹಲವು ರೀತಿಯ ಮಾಧ್ಯಮಗಳು ಬಳಕೆಗೊಂಡಿವೆ. ಪ್ರಾಗಿತಿಹಾಸ ಕಾಲದಲ್ಲಿ ಬಂಡೆಯ ಮೇಲೆ ಚಿತ್ರಿಸುತ್ತಿದ್ದ ಮಾನವ ಶಿಲೆಯ ಆಯುಧಗಳನ್ನು ಕೆತ್ತಿ ಅಂದಗೊಳಿಸಿಕೊಳ್ಳುತ್ತಿದ್ದ. ನಾಗರೀಕತೆ ಬೆಳೆದಂತೆ ಚಿತ್ರರಚನೆಯ ಮಾಧ್ಯಮಗಳಲ್ಲಿ ಬಧಲಾವಣೆಗಳಾದಂತೆ ಶಿಲ್ಪರಚನೆಗಳಲ್ಲೂ ಮಾಧ್ಯಮಗಳ ಹೊಸ ಆವಿಷ್ಕಾರಗಳು ಉಂಟಾದವು. ಚಿತ್ರಕಲಾ ಕ್ಷೇತ್ರದಲ್ಲಿ ಶಿಲೆಯೊಂದಿಗೆ ಮರ, ಬಟ್ಟೆ, ಲೋಹ, ಗಾಜು, ಮಣ್ಣುಗಳು ಮಾಧ್ಯಮಗಳಾಗಿ ಬೆಳೆದರೆ, ಶಿಲ್ಪಗಳಲ್ಲೂ ಹೆಚ್ಚು ಕಡಿಮೆ ಇವೇ ಪರಿಕರಗಳು ಮುಂದುವರಿದವು. ವಾಸ್ತು ರಚನೆಗಳಲ್ಲೂ ಹಲವಾರು ಬದಲಾವಣೆಗಳು ಉಂಟಾದವು. ಇಂತಹ ವಿವರಗಳನ್ನು ಸ್ಥೂಲವಾಗಿ ಗಮನಿಸಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ದೃಶ್ಯಕಲೆಗಳಲ್ಲಿನ ಕಲ್ಪನೆಯ ಬಗ್ಗೆ ವಿವೇಚಿಸಲಾಗಿದೆ. ಚಿತ್ರರಚನೆ ಆರಂಭವಾಗಿದ್ದೇ ಕಲ್ಪನೆಯೆಂಬ ಮನೋಭೂಮಿಕೆಯ ಹಿನ್ನೆಲೆಯಲ್ಲಿ. ಆದಿಮಾನವ ತಾನು ಕಂಡ ಪ್ರಾಣಿಗಳನ್ನು ಕಲ್ಪಿಸಿಕೊಂಡು ಚಿತ್ರಿಸಿರುವ ನಿದರ್ಶನಗಳೇ ಪ್ರಾಗಿತಿಹಾಸ ಬಂಡೆ ಚಿತ್ರಗಳಾಗಿವೆ. ಹಾಗಾಗಿ ಕಲಾಕ್ಷೇತ್ರದಲ್ಲಿ ಅದರಲ್ಲೂ ದೃಶ್ಯಕಲಾ ಕ್ಷೇತ್ರದಲ್ಲಿ ಕಲ್ಪನೆ ಶಬ್ದಕ್ಕೆ ಹೆಚ್ಚು ಮಹತ್ವ ಉಂಟು. ಒಂದು ಕಲಾಕೃತಿಗೆ ಕಲಾವಿದನ ಕಲ್ಪನೆಯ ಕೂಸು ಎಂದು ಹೇಳುವಲ್ಲಿ ಅದರ ಮೌಲಿಕತೆಯನ್ನು ಗುರುತಿಸಬಹುದಾಗಿದೆ. ಇಲ್ಲಿ ಕಲ್ಪನೆ ಮತ್ತು ಕಲಾವಿದ, ಕಲ್ಪನೆ ಮತ್ತು ಚಿತ್ರಕಲೆ, ಕಲ್ಪನೆ ಮತ್ತು ದೃಶ್ಯಕಲೆಗಳು, ಕಲ್ಪನೆ ಮತ್ತು ಕಲಾಕೃತಿ ಹೀಗೆ ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡಲಾಗಿದೆ.

ಈ ಪ್ರಬಂಧದ ಒಂಭತ್ತನೆಯ ಅಧ್ಯಾಯವು ದೃಶ್ಯಕಲೆಗಳಲ್ಲಿನ ಭಾವದ ಬಗ್ಗೆ ಚರ್ಚಿಸುತ್ತದೆ. ಕಲಾವಿದನಲ್ಲಿ ಉಂಟಾದ ಭಾವದಿಂದ ಕೃತಿರಚನೆ ನಡೆದು ಸಹೃದಯನು ಅದನ್ನು ಆಸ್ವಾದಿಸುವಲ್ಲಿ ವಿವಿಧ ರೀತಿಯ ಭಾವೋತ್ಪನ್ನ ಸ್ಥಿತಿಗಳು ಉಂಟಾಗುತ್ತವೆ. ಅಂತಹ ಸಂಗತಿಗಳನ್ನು ಇಲ್ಲಿ ಚರ್ಚಿಸಲಾಗಿದೆ. ಇಲ್ಲಿ ಮುಖ್ಯವಾಗಿ ಭಾವದ ಉಗಮ, ಭಾವದ ಉಲ್ಲೇಖ, ಸ್ಥಾಯಿಭಾವ, ಸಂಚಾರಿಭಾವ, ವ್ಯಭಿಚಾರೀ ಭಾವ, ವಿಭಾವ, ಅನುಭಾವ ಮತ್ತು ರಸಭಾವಗಳ ಬಗ್ಗೆ ಚರ್ಚಿಸಲಾಗಿದೆ. ಇವುಗಳ ಜೊತೆಗೆ ಭಾವಪ್ರಭಾವ ಕಲೆಗಳು, ಭಾವ ಮತ್ತು ದೃಶ್ಯಕಲೆಗಳು, ಭಾವ ಮತ್ತು ಕಲಾಕ್ಷೇತ್ರ ಇಂತಹ ಅಂಶಗಳ ಕುರಿತು ವಿವೇಚಿಸಲಾಗಿದೆ. ಅಧ್ಯಾಯ ಹತ್ತರಲ್ಲಿ ರಸದ ಬಗ್ಗೆ ಚರ್ಚಿಸಲಾಗಿದೆ. ದೃಶ್ಯಕಲೆಗಳಲ್ಲಿ ಕೆಲವು ರಸದ ನಿಷ್ಪತ್ತಿ ಸಾಧ್ಯವಿಲ್ಲವೆಂದು ಪ್ರತಿಪಾದಿಸುವ ಪ್ರಬಂಧಕಾರರು ಅದಕ್ಕೆ ನಿದರ್ಶನಗಳನ್ನು ಕೊಡುತ್ತಾರೆ. ಈ ಅಧ್ಯಾಯದ ರಸದ ಬಗೆಗಿನ ಚರ್ಚೆಯು ದೃಶ್ಯಕಲೆಗಳಲ್ಲಿ ರಸ ಇಲ್ಲ ಎನ್ನುವ ಅಭಿಪ್ರಾಯವನ್ನು ಕೇಂದ್ರೀಕರಿಸಿ ನಡೆದಿದೆ. ಇಲ್ಲಿ ಮುಖ್ಯವಾಗಿ ರಸದ ಹುಟ್ಟು, ಅಸ್ತಿತ್ವ, ನಾಟ್ಯ ಮತ್ತು ಕಾವ್ಯಗಳಲ್ಲಿ ಮಾತ್ರ ರಸವಿದೆ ಎಂಬಂತಹ ಸಂಗತಿಗಳ ಕುರಿತು ಈ ಅಧ್ಯಾಯದಲ್ಲಿ ವಿವೇಚನೆ ಮಾಡಲಾಗಿದೆ.

ಹನ್ನೊಂದನೆಯ ಅಧ್ಯಾಯದಲ್ಲಿ ಸೌಂದರ್ಯದ ಪರಿಕಲ್ಪನೆಯ ಬಗ್ಗೆ ವಿವೇಚಿಸಲಾಗಿದೆ. ಕಲೆಯ ಮೂಲ ತತ್ವವೇ ಸೌಂದರ್ಯದ ಉಪಾಧಿಯೊಂದಿಗೆ ಬೆರೆತುಕೊಂಡಿದ್ದು, ಸಮಕಾಲೀನ ಸಂದರ್ಭದಲ್ಲಿ ಕಲೆ ಮತ್ತು ಸೌಂದರ್ಯದ ಪರಿಕಲ್ಪನೆ ಭಿನ್ನ ರೀತಿಯ ಆಯಾಮ ಪಡೆದುಕೊಂಡಿದೆ. ಈ ಹಿನ್ನೆಲೆಯಲ್ಲಿ ದೃಶ್ಯಕಲೆಗಳ ಸೌಂದರ್ಯದ ಪರಿಕಲ್ಪನೆಯನ್ನು ಇಲ್ಲಿ ಚರ್ಚೆಗೊಳಪಡಿಸಲಾಗಿದೆ. ಇಲ್ಲಿ ಮುಖ್ಯವಾಗಿ ಸೌಂದರ್ಯದ ಸ್ಥೂಲ ಪರಿಚಯ, ಸೌಂದರ್ಯವೆಂದರೇನು? ನೈಜ ಸೌಂದರ್ಯ ಯಾವುದು? ಕಲಾಸೌಂದರ್ಯದ ತಿರುಳು, ಸೌಂದರ್ಯ ಮತ್ತು ಕುರೂಪ, ಸೌಂದರ್ಯ ಮತ್ತು ದೃಶ್ಯಕಲೆಗಳು, ಹೀಗೆ ವಿಭಿನ್ನ ಆಯಾಮಗಳಲ್ಲಿ ಅಧ್ಯಯನ ಮಾಡಲಾಗಿದೆ. ಹನ್ನೆರಡನೆಯ ಅಧ್ಯಾಯವು ಸಮಾರೋಪವಾಗಿದ್ದು ಒಟ್ಟು ಅಧ್ಯಯನದ ಫಲಿತಗಳನ್ನು ಕೊಡಲಾಗಿದೆ. ಈ ಪ್ರಬಂಧವು ದೃಶ್ಯಕಲೆಗಳ ತೌಲನಿಕ ಅಧ್ಯಯನವಾಗಿದ್ದು, ಮುಖ್ಯವಾಗಿ ಚಿತ್ರ, ಶಿಲ್ಪ, ವಾಸ್ತುಕಲೆಗಳನ್ನು ದೃಶ್ಯಕಲೆಗಳೆಂದು ಪರಿಗಣಿಸಿ ಅಧ್ಯಯನ ಮಾಡಲಾಗಿದೆ. ಇಲ್ಲಿ ಚರ್ಚಿತಗೊಂಡ ಮುಖ್ಯ ಅಂಶಗಳಲ್ಲಿ ದೃಶ್ಯಕಲೆಗಳು, ಪರಸ್ಪರ ದೃಶ್ಯಕಲೆಗಳು, ಕಲಾವಿದ ಮತ್ತು ಸಹೃದಯ, ಮಾಧ್ಯಮ ಮತ್ತು ಕಲಾವಿದ, ನೈಜ ಸೌಂದರ್ಯ, ಭಾವ ಮತ್ತು ಕಲ್ಪನೆ, ದೃಶ್ಯಕಲೆಗಳಲ್ಲಿ ರಸನಿಷ್ಪತ್ತಿ, ಕಲಾ ಸೌಂದರ್ಯದ ತಿರುಳು, ಹೀಗೆ ಹಲವಾರು ಸಂಗತಿಗಳು ವಿವೇಚನೆಗೊಂಡಿವೆ. ಡಿ.ಲಿಟ್. ಪ್ರಬಂಧಗಳ ಅಧ್ಯಯನದಿಂದ ಹಲವಾರು ಅಂಶಗಳು ತಿಳಿದುಬಂದಿವೆ. ಕರಾವಳಿ ಕಾವಿ ಕಲೆಯ ರಚನಾಕ್ರಮ, ಪರಿಕರಗಳು, ಚಿತ್ರಶೈಲಿ, ಪ್ರಭಾವ, ಪ್ರೇರಣೆ ಮತ್ತು ಪ್ರಾದೇಶಿಕ ಲಕ್ಷಣಗಳು ಕಂಡುಬಂದಿವೆ.

ರಂಗಭೂಮಿಯ ಕಲಾಹಿನ್ನೆಲೆಯಲ್ಲಿ ಅಲ್ಲಿನ ಪರದೆಗಳು ಮತ್ತು ಕವಾಟುಗಳಲ್ಲಿ ರಚಿಸಲ್ಪಟ್ಟ ವರ್ಣಚಿತ್ರಗಳ ವ್ಯಾಪಕತೆ, ಉಪಯುಕ್ತತೆ, ಚಿತ್ರರಚನಾಶೈಲಿ, ಚಿತ್ರಕಲಾವಿದರು ಮುಂತಾದ ಸಂಗತಿಗಳು ತಿಳಿದುಬಂದಿವೆ. ಅದರಂತೆ ದೃಶ್ಯಕಲೆಗಳ ಸೌಂದರ್ಯ ಕುರಿತು ತೌಲನಿಕ ಅಧ್ಯಯನದ ವಿಚಾರಗಳು ಇಲ್ಲಿ ಬಿಂಬಿಸಲ್ಪಟ್ಟಿವೆ. ಕರ್ನಾಟಕದ ಚಿತ್ರಕಲಾ ಸಂಶೋಧನಾ ಸಾಹಿತ್ಯವನ್ನು ಮೇಲಿನಂತೆ ವಿಂಗಡಿಸಿ ವಿವೇಚಿಸಲಾಗಿರುವುದನ್ನು ಗಮನಿಸಿದರೆ ಹಲವಾರು ಸಂಗತಿಗಳು ತಿಳಿದುಬರುತ್ತವೆ. ಇದುವರೆಗೆ ನಡೆದ ಸಂಶೋಧನಾ ಅಧ್ಯಯನಗಳನ್ನು ವಿಷಯಾನುಸಾರವಾಗಿ ಕ್ಷೇತ್ರೀಯ ಅಧ್ಯಯನಗಳು ಮತ್ತು ವ್ಯಕ್ತಿಅಧ್ಯಯನಗಳು ಎಂದು ವಿಂಗಡಿಸಬಹುದಾಗಿದೆ. ಇದರಲ್ಲಿ ವ್ಯಕ್ತಿಅಧ್ಯಯನಗಳಲ್ಲಿ ವೈವಿಧ್ಯತೆಯ ಕೊರತೆ ಇದ್ದು, ಒಂದು ನಿರ್ಧಿಷ್ಟ ಮಾದರಿಯನ್ನು ಅನುಸರಿಸಲಾಗಿದೆ. ಆದರೆ ಕ್ಷೇತ್ರೀಯ ಅಧ್ಯಯನಗಳಲ್ಲಿ ವೈವಿಧ್ಯತೆಯ ಜೊತೆಗೆ ವಿಶಿಷ್ಟತೆಯೂ ಗೋಚರಿಸುತ್ತದೆ. ಈ ವಿಭಾಗದಲ್ಲಿ ಭಿತ್ತಿಚಿತ್ರಕಲೆ, ಕಿರುರೂಪಚಿತ್ರಕಲೆ, ಹಸ್ತಪ್ರತಿಚಿತ್ರಕಲೆ, ಜನಪದ ಚಿತ್ರಕಲೆ, ತೊಗಲುಗೊಂಬೆ ಚಿತ್ರಕಲೆ, ಯಕ್ಷಗಾನದಲ್ಲಿ ಚಿತ್ರಕಲೆ, ಪ್ರಾಗಿತಿಹಾಸ ಕಾಲದ ಚಿತ್ರಕಲೆ, ವಾಣಿಜ್ಯ ಚಿತ್ರಕಲೆ, ರಂಗೋಲಿ ಚಿತ್ರಕಲೆ, ಮುಸ್ಲಿಂ ಅರಸರ ಚಿತ್ರಕಲೆ, ವಿವಿಧ ಜನಪದ ಕಲಾಪ್ರಕಾರಗಳು ಹೀಗೆ ಹಲವಾರು ವಿಷಯಗಳ ಕುರಿತು ಅಧ್ಯಯನ ಮಾಡಲಾಗಿದೆ. ಇದರಿಂದಾಗಿ ಅನೇಕ ಸಂಗತಿಗಳು ಬೆಳಕುಕಂಡಿವೆ. ಆಯಾ ಕಲಾಪ್ರಕಾರದ ಚಿತ್ರಶೈಲಿ, ರಚನಾಕ್ರಮ, ಪರಿಕರಗಳು, ತಂತ್ರಗಾರಿಕೆ, ಪ್ರಭಾವ, ಪ್ರೇರಣೆ, ಕಲಾವಿದರು, ನಂಬಿಕೆ, ಆಚರಣೆ, ಪ್ರೋತ್ಸಾಹ, ಕಾಲಮಾನ ಮುಂತಾದ ವಿಷಯಗಳು ತಿಳಿದುಬಂದಿವೆ.

ವ್ಯಕ್ತಿಅಧ್ಯಯನಗಳಿಂದ ಹಲವಾರು ಸಂಗತಿಗಳು ಬೆಳಕುಕಂಡಿದ್ದು ಅವುಗಳಲ್ಲಿ ಕಲಾವಿದರ ಹುಟ್ಟು, ತಂದೆ-ತಾಯಿ, ಕುಟುಂಬ ವರ್ಗ, ಬಾಲ್ಯ, ಪರಿಸರ, ಶಿಕ್ಷಣ, ಕಲಾಬದುಕು, ಕಲಾಕೃತಿರಚನೆ, ಕಲಾಶೈಲಿ, ಪ್ರಭಾವ, ಪ್ರೇರಣೆ, ಪ್ರಶಸ್ತಿ ಪುರಸ್ಕಾರಗಳು, ಸಾಧನೆ ಸಿದ್ಧಿಗಳು ಮತ್ತು ಇನ್ನಿತರ ಸಾಂಸ್ಕೃತಿಕ ಹಾಗೂ ಸಾಮಾಜಿಕ ಬದುಕಿನ ವಿವರಗಳು ಇಲ್ಲಿನ ಅಧ್ಯಯನಗಳಿಂದ ತಿಳಿದುಬಂದಿದೆ. ಹೀಗೆ ಅನೇಕ ಸಂಗತಿಗಳನ್ನು ನಿರ್ಧಿಷ್ಟವಾಗಿ ಮತ್ತು ನಿಖರವಾಗಿ ಕಟ್ಟಿಕೊಡುವಲ್ಲಿ ಸಂಶೋಧನಾ ಸಾಹಿತ್ಯವು ಪ್ರಮುಖವಾಗಿದೆ. ಅದರಿಂದಾಗಿಯೆ ಇತರ ಬರಹಗಳಿಗಿಂತ ಈ ಬರವಣಿಗೆಯನ್ನು ಗಂಭೀರವಾಗಿ ಪರಿಗಣಿಸಲಾಗುತ್ತದೆ.

ಕರ್ನಾಟಕದ ಚಿತ್ರಕಲಾ ಸಂಶೋಧನಾ ಸಾಹಿತ್ಯವನ್ನು ಅವಲೋಕಿಸಿದಾಗ ಕೆಲವು ಸಂಗತಿಗಳು ತಿಳಿದುಬರುತ್ತವೆ. ಚಿತ್ರಕಲಾ ಕ್ಷೇತ್ರದಲ್ಲಿ ಸಂಶೋಧನಾ ಸಾಹಿತ್ಯವು ಕಿರು ಪ್ರಮಾಣದಲ್ಲಿ ಮೊದಲಿನಿಂದಲೂ ರಚನೆಯಾಗುತ್ತಾ ಬಂದಿದ್ದರೂ ಪದವಿ ಉದ್ದೇಶಗಳಿಗಾಗಿ ಮತ್ತು ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲಾ ಸಂಶೋಧನೆ ಆರಂಭಗೊಂಡಿದ್ದು ಎಂಭತ್ತರ ದಶಕದಲ್ಲಿ ಎನ್ನಬಹುದು. ಮೊದಲಿಗೆ ಪಿಹೆಚ್.ಡಿ. ಪದವಿಯ ಸಂಶೋಧನೆಗಳು ಆರಂಭಗೊಂಡು ನಂತರ ಡಿ.ಲಿಟ್., ಎಂ.ಫಿಲ್. ಪದವಿಗಳ ಹಿನೆಲೆಯಲ್ಲಿಯೂ ಚಿತ್ರಕಲಾ ಸಂಶೋಧನೆಗಳು ಆರಂಭಗೊಂಡವು ಇತ್ತೀಚೆಗೆ ಸ್ನಾತಕ ಪದವಿ ಮತ್ತು ಸ್ನಾತಕೋತ್ತರ ಪದವಿ ಮಟ್ಟದಲ್ಲಿಯೂ ಕಿರು ಸಂಶೋಧನಾ ವರದಿಗಳನ್ನು ಸಿದ್ಧಪಡಿಸಲಾಗುತ್ತಿದೆ. ಈ ಮೇಲಿನ ಸಂಶೋಧನಾ ಬರಹಗಳಲ್ಲಿ ಪಿಹೆಚ್.ಡಿ. ಅಧ್ಯಯನಗಳು ಅತ್ಯಂತ ಗಂಭೀರ ಸಂಶೋಧನಾ ಪ್ರಬಂಧಗಳಾಗಿವೆ. ಕರ್ನಾಟಕದಲ್ಲಿ ಚಿತ್ರಕಲಾ ಕ್ಷೇತ್ರದಲ್ಲಿ ಇದುವರೆಗೆ ವಿವಿಧ ವಿಷಯಗಳಿಗೆ ಸಂಬಂಧಿಸಿದ ಪಿಹೆಚ್.ಡಿ. ಪ್ರಬಂಧಗಳು ಬಂದಿವೆ. ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಕರ್ನಾಟಕದ ಜನಪದ ಚಿತ್ರಕಲೆ, ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ರೋರಿಚ್ ಕಲಾ ಬದುಕು

ಮತ್ತು ಕಲಕೃತಿಗಳು, ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಹಿಂದುಸ್ತಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು, ಕರ್ನಾಟಕದ ಬುಡಕಟ್ಟು ಚಿತ್ರಕಲೆ, ಕೊಪ್ಪಳ ಹಂಪಿ ಪ್ರದೇಶದ ಪ್ರಾಗೈತಿಹಾಸ ಕಾಲದ ಕಲೆ, ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು, ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಕರ್ನಾಟಕದ ತೊಗಲುಗೊಂಬೆ ಚಿತ್ರಕಲೆ, ಕರ್ನಾಟಕದ ರಥಶಿಲ್ಪಕಲೆ, ಕರ್ನಾಟಕದ ಹಸ್ತಪ್ರತಿ ಚಿತ್ರಕಲೆ, ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು, ರಂಗೋಲಿ ಚಿತ್ರಕಲೆ, ಸುರಪುರ ಶೈಲಿಯ ಚಿತ್ರಕಲೆ, ಕಲಾವಿದ ಎಂ.ಎ.ಚೆಟ್ಟಿಯವರ ಜೀವನ ಮತ್ತು ಕಲಾಕೃತಿಗಳು, ಕಲಾವಿದ ಆರ್.ಎಂ. ಹಡಪದ, ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ, ಕಲಾವಿದ ಎಸ್.ಎಂ.ಪಂಡಿತ ಈ ವಿಷಯಗಳಲ್ಲದೆ ಇಂಗ್ಲೀಷ್ ಭಾಷೆಯಲ್ಲಿ ರಚನೆಯಾದ ಮೂರು ಪ್ರಬಂಧಗಳು ಪಿಹೆಚ್.ಡಿ.ಪದವಿ ಪಡೆದುಕೊಂಡಿವೆ. ಇವುಗಳಲ್ಲಿ ಕ್ಷೇತ್ರೀಯ ಅಧ್ಯಯನಗಳು ಹೆಚ್ಚಾಗಿದ್ದು ವ್ಯಕ್ತಿಅಧ್ಯಯನಗಳು ಕಡಿಮೆ ಪ್ರಮಾಣದಲ್ಲಿವೆ. ಅಲ್ಲದೆ ಕ್ಷೇತ್ರೀಯ ಅಧ್ಯಯನಗಳಲ್ಲಿ ಕಂಡುವರುವ ವೈವಿಧ್ಯತೆ ವ್ಯಕ್ತಿ ಅಧ್ಯಯನಗಳಲ್ಲಿಲ್ಲ. ವ್ಯಕ್ತಿ ಅಧ್ಯಯನಗಳಲ್ಲಿ ಒಂದು ಸಿದ್ಧ ಮಾದರಿಯನ್ನು ಅನುಸರಿಸಿದಂತೆ ಕಂಡುಬರುತ್ತದೆ. ಮತ್ತು ತೌಲನಿಕ ಅಧ್ಯಯನದ ಕೊರತೆ ಇಲ್ಲಿದೆ. ಕ್ಷೇತ್ರೀಯ ಅಧ್ಯಯನಗಳಲ್ಲಿ ಪ್ರಾಗೈತಿಹಾಸ ಕಾಲದ ಚಿತ್ರಕಲೆ, ಪ್ರಾಚೀನ ಭಿತ್ತಿಚಿತ್ರಕಲೆ, ಹಸ್ತಪ್ರತಿ ಚಿತ್ರಕಲೆ, ಜನಪದ ಚಿತ್ರಕಲೆ, ಕಿರುರೂಪ ಚಿತ್ರಕಲೆ, ತೊಗಲುಗೊಂಬೆ ಚಿತ್ರಕಲೆ, ರಂಗೋಲಿ ಚಿತ್ರಕಲೆ, ಬುಡಕಟ್ಟು ಚಿತ್ರಕಲೆ, ಯಕ್ಷಗಾನ ಮುಖವರ್ಣಿಕೆಯ ಚಿತ್ರಕಲೆಗಳ ಬಗ್ಗೆ ಅಧ್ಯಯನಗಳಾಗಿವೆ. ಇಲ್ಲಿಯೂ ಸಹಿತ ತೌಲನಿಕ ಅಧ್ಯಯನಗಳ ಕೊರತೆ ಕಂಡುಬರುತ್ತಿದ್ದರೂ ಮುಂದಿನ ಅಧ್ಯಯನಗಳಿಗೆ ತಳಹದಿಯ ರೂಪದಲ್ಲಿ ಇವು ಸಿದ್ಧಗೊಂಡಿವೆ. ಪ್ರಾಗೈತಿಹಾಸ ಕಾಲದ ಕಲೆಯ ಬಗ್ಗೆ ಪ್ರತ್ಯೇಕವಾಗಿ ಶರಣಬಸಪ್ಪ ಕೋಲ್ಕಾರ ಅವರು ಅಧ್ಯನ ಮಾಡಿದ್ದರೂ ಅದಕ್ಕಿಂತ ಮುಂಚಿನ ಅಧ್ಯಯನಗಳಲ್ಲಿ ಸಾಂದರ್ಭಿಕವಾಗಿ ಈ ಅಂಶಗಳು ಪ್ರಸ್ತಾಪಗೊಂಡಿವೆ.

ಡಾ.ಎಸ್.ಸಿ.ಪಾಟೀಲರ ಜನಪದ ಚಿತ್ರಕಲೆ, ಅ.ಲ.ನರಸಿಂಹನ್‌ರ ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಯಾದಪ್ಪ ಪರದೇಶಿಯವರ ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ ಪ್ರಬಂಧಗಳು ಪ್ರಾಗೈತಿಹಾಸ ಕಲೆಯ ಅಂಶಗಳನ್ನು ಒಳಗೊಂಡಿವೆ. ಅದೇ ರೀತಿ ಭಿತ್ತಿಚಿತ್ರಕಲೆಯ ಬಗ್ಗೆ ಯಾದಪ್ಪ ಪರದೇಶಿಯವರು ಪ್ರತ್ಯೇಕ ಅಧ್ಯಯನ ಮಾಡಿದ್ದರೂ ಅದಕ್ಕಿಂತ ಮುಂಚೆ ಡಾ.ಎಸ್.ಸಿ.ಪಾಟೀಲರ ಜನಪದ ಚಿತ್ರಕಲೆ, ಅ.ಲ.ನರಸಿಂಹನ್‌ರ ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು ಬಿ.ಕೆ. ಹಿರೇಮಠರ ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ ಎಂಬ ಪ್ರಬಂಧಗಳಲ್ಲಿ ಭಿತ್ತಿಚಿತ್ರಕಲೆಯ ಅಂಶಗಳು ಸಾಂದರ್ಭಿಕವಾಗಿ ಪ್ರಸ್ತಾಪಗೊಂಡಿವೆ. ಇದರಂತೆ ಚಿತ್ರಗಾರ ಅವರು ಹಸ್ತಪ್ರತಿ ಚಿತ್ರಕಲೆಯ ಬಗ್ಗೆ ಪ್ರತ್ಯೇಕ ಅಧ್ಯಯನ ಮಾಡಿದ್ದರೂ ಅದಕ್ಕಿಂತ ಮುಂಚಿನ ಅಧ್ಯಯನಗಳಲ್ಲಿ ಈ ಅಂಶಗಳು ಪ್ರಸ್ತಾಪಗೊಂಡಿವೆ. ಬಿ.ಕೆ.ಹಿರೇಮಠರ ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಎಸ್.ಸಿ.ಪಾಟೀಲರ ಜನಪದ ಚಿತ್ರಕಲೆ, ಅ.ಲ.ನರಸಿಂಹನ್‌ರ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಯಾದಪ್ಪ ಪರದೇಶಿಯವರ ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ ಪ್ರಬಂಧಗಳಲ್ಲಿ ಸಾಂದರ್ಭಿಕವಾಗಿ ಪ್ರಸ್ತಾಪಗೊಂಡಿವೆ.

ಅದೇ ಪ್ರಕಾರ ಹಿಂದುಸ್ತಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು, ತೊಗಲುಗೊಂಬೆ ಚಿತ್ರಕಲೆ, ಬುಡಕಟ್ಟು ಚಿತ್ರಕಲೆ, ರಂಗೋಲಿ ಚಿತ್ರಕಲೆ ಈ ಪ್ರಬಂಧಗಳ ವಿಷಯಗಳು ಮುಂಚಿನ ಪ್ರಬಂಧಗಳಲ್ಲಿ ಸಾಂದರ್ಭಿಕವಾಗಿ ಉಲ್ಲೇಖಿಸಲ್ಪಟ್ಟಿವೆ. ಆದರ ಡಾ.ಎಸ್.ಸಿ.ಪಾಟೀಲರ ಕರ್ನಾಟಕದ

ಜನಪದ ಚಿತ್ರಕಲೆಗೆ ಸಂಬಂಧಿಸಿದ ವಿಷಯಗಳು ಯಾವುದೇ ಚಿತ್ರಕಲಾ ಪಿಹೆಚ್.ಡಿ. ಪ್ರಬಂಧಗಳಲ್ಲಿ ಉಲ್ಲೇಖಿಸಲ್ಪಡದೇ ಮೂಲ ಆಕರಗಳಿಂದ ನೇರವಾಗಿ ಮಾಹಿತಿ ಪಡೆದುಕೊಂಡು ವಿಶ್ಲೇಷಿಸಿದವುಗಳಾಗಿವೆ. ಪಿಹೆಚ್.ಡಿ. ಕ್ಷೇತ್ರೀಯ ಅಧ್ಯಯನಗಳಲ್ಲಿ ಈಗಾಗಲೆ ಹೇಳಿರುವಂತೆ ವೈವಿಧ್ಯತೆ ಇದ್ದರೂ ತೌಲನಿಕತೆ, ವಿಮರ್ಶೆ, ಸಮಕಾಲೀನ ಸಮಾಜಕ್ಕೆ ಸ್ಪಂದಿಸುವ ಚಿಂತನೆಗಳ ಕೊರತೆ ಕಂಡುಬರುತ್ತದೆ. ಕೆಲವು ಪಿಹೆಚ್.ಡಿ. ಪ್ರಬಂಧಗಳ ಕಲಾಹಿನ್ನೆಲೆ ಇರದ ವ್ಯಕ್ತಿಗಳಿಂದ ರಚನೆಯಾಗಿದ್ದು ಪ್ರಾಯೋಗಿಕ ವಿವರಗಳನ್ನು ಕಟ್ಟಿಕೊಡುವಲ್ಲಿ ವಿಫಲವಾಗಿವೆ. ಸಂಪದಾಭಟ್ ಅವರು ಸಂಗೀತ ವಿದ್ಯಾರ್ಥಿಯಾಗಿದ್ದು ಹಿಂದುಸ್ತಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು ಎಂಬ ವಿಷಯ ಕುರಿತು ಅಧ್ಯಯನ ಮಾಡಿದ್ದಾರೆ. ಇದರಲ್ಲಿ ಸಂಗೀತಕ್ಕೆ ಸಂಬಂಧಿಸಿದ ವಿವರಗಳು ಮೌಲಿಕತೆಯಿಂದ ಕೂಡಿದ್ದರೆ, ಚಿತ್ರಕಲೆಗೆ ಸಂಬಂದಿಸಿದ ಸಂಗತಿಗಳನ್ನು ವಿವೇಚಿಸುವಾಗ ಅವರು ಸೋಲುತ್ತಾರೆ. ರಾಗಮಾಲಾ ಚಿತ್ರಗಳನ್ನು ರಚಿಸುವ ಉದ್ದೇಶ, ಬಣ್ಣಗಳ ಭಾವನಾತ್ಮಕ ಪ್ರತಿಕ್ರಿಯೆಗಳು, ಅವುಗಳ ಸಾಂಕೇತಿಕ ಅರ್ಥಗಳು, ರಾಗಮಾಲಾ ಚಿತ್ರಗಳ ಐತಿಹಾಸಿಕ ಹಿನ್ನೆಲೆ, ಭಾರತದ ಯಾವ ಭಾಗಗಳಲ್ಲಿ ರಾಗಮಾಲಾ ಚಿತ್ರಗಳು ಹೆಚ್ಚಾಗಿ ರಚನೆಯಾಗುತ್ತವೆ, ಅದಕ್ಕೆ ಕಾರಣಗಳೇನು? ಮುಸ್ಲಿಂ ಚಿತ್ರಶೈಲಿಯಾದ ಡೆಕ್ಕನ್ ಚಿತ್ರಕಲೆಯಲ್ಲಿ ರಾಗಮಾಲಾ ಚಿತ್ರಗಳು ರಚನೆಯಾಗಲಿಕ್ಕೆ ಕಾರಣಗಳೇನು? ಹಿಂದುಸ್ತಾನಿ ಸಂಗೀತ, ರಾಗಮಾಲಾ ಚಿತ್ರಗಳಿಗಿರುವ ಸಂಬಂಧಗಳಂತೆ ಕರ್ನಾಟಕ ಸಂಗೀತದಲ್ಲಿ ರಾಗಮಾಲಾ ಚಿತ್ರಗಳ ಸ್ವರೂಪಗಳೇನು ಎಂಬಂತಹ ಹಲವಾರು ವಿವರಗಳನ್ನು ಕೊಡುವಲ್ಲಿ ಅಸಹಾಯಕರಾಗಿದ್ದಾರೆ. ಅಲ್ಲದೆ ಸಂಗೀತದ ರಾಗಗಳು ಮತ್ತು ಅವುಗಳ ಪ್ರಾಯೋಗಿಕ ವಿವರಗಳನ್ನು ಕೊಡುವ ಇವರು ಚಿತ್ರಕಲೆಯ ಪ್ರಾಯೋಗಿಕ ವಿವರಗಳಿಗೆ ಮೌನತಾಳುತ್ತಾರೆ. ಅದರಂತೆ ವ್ಹಿ.ಎಂ.ಬಾಗಾಯತ್ ಅವರು ಇತಿಹಾಸ ವಿದ್ಯಾರ್ಥಿಯಾಗಿದ್ದು, ಮುಸ್ಲಿಂ ಅರಸರ ಕಾಲದ ಚಿತ್ರಕಲೆಯ ಬಗ್ಗೆ ಅಧ್ಯಯನ ಮಾಡಿದ್ದಾರೆ. ಇದರಲ್ಲಿ ಐತಿಹಾಸಿಕ ಸಂಗತಿಗಳು, ಚಿತ್ರದ ಸಾಮಾನ್ಯ ವಿವರಗಳು, ವಸ್ತುವಿಷಯಗಳಂತಹ ಸಂಗತಿಗಳಿಗೆ ಹೆಚ್ಚಿನ ಗಮನ ಕೊಟ್ಟಿದ್ದಾರೆಯೆ ವಿನಹ ಮುಸ್ಲಿಂ ಅರಸರ ಕಾಲದ ಚಿತ್ರಕಲೆಯ ರಚನಾ ವಿಧಾನ, ಧ್ಯೇಯೋದ್ಧೇಶಗಳು, ಸಂಯೋಜನಾ ರೀತಿ, ಸ್ಥಳ ವಿಂಗಡಣೆ ಇನ್ನಿತರ ಚಿತ್ರಶೈಲಿಗಳಿಗಿಂತ ಇದು ಹೇಗೆ ಭಿನ್ನವಾಗಿದೆ, ಮೊಗಲ್ ಚಿತ್ರಶೈಲಿ ಮತ್ತು ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಶೈಲಿಯ ವೈಲಕ್ಷಣಗಳಲ್ಲಿರುವ ಭಿನ್ನತೆಗಳು ಇಂತಹ ಅಂಶಗಳ ಬಗ್ಗೆ ಒಟ್ಟಾರೆಯಾಗಿ ಚಿತ್ರಕಲೆಯ ತಾಂತ್ರಿಕ ವಿವರಗಳನ್ನು ಕೊಡುವಲ್ಲಿ ವಿಫಲರಾಗಿದ್ದಾರೆ. ಅದೇ ಪ್ರಕಾರ ಶರಣಬಸಪ್ಪ ಕೋಲ್ಕಾರ ಇತಿಹಾಸ ವಿದ್ಯಾರ್ಥಿಯಾಗಿದ್ದು, ಪ್ರಾಗೈತಿಹಾಸ ಚಿತ್ರಕಲೆಯ ಬಗ್ಗೆ ಸಂಶೋಧನೆ ಮಾಡಿದ್ದು, ಚಿತ್ರಕಲೆಯ ರಚನೆಗೆ ಸಂಬಂಧಿಸಿದ ತಾಂತ್ರಿಕ ಅಂಶಗಳು ತೀರಾ ಕಡಿಮೆ ಪ್ರಮಾಣದಲ್ಲಿ ಹೇಳಲ್ಪಟ್ಟಿವೆ. ಇದು ಡಿ.ಲಿಟ್. ಪ್ರಬಂಧಗಳಲ್ಲೂ ಕಂಡುಬರುತ್ತದೆ. ವಿಜ್ಞಾನ ವಿದ್ಯಾರ್ಥಿಯಾದ ಆನಂದ ಪೂಜಾರರು ಕಾವಿ ಚಿತ್ರಕಲೆ ಬಗ್ಗೆ ಅಧ್ಯಯನ ಮಾಡಿದ್ದು, ಅದರ ಪ್ರಾಯೋಗಿಕ ಮತ್ತು ತಾಂತ್ರಿಕ ಸಂಗತಿಗಳು ತೀರಾ ಕಡಿಮೆ ಪ್ರಮಾಣದಲ್ಲಿ ಹೇಳಲ್ಪಟ್ಟಿವೆ. ಆದರೆ ಕಲಾವಿದರು ಮತ್ತು ಕಲಾ ಹಿನ್ನೆಲೆಯಿಂದ ಬಂದವರು ಇಂತಹ ಸಂಶೋಧನೆಗಳನ್ನು ನಡೆಸಿದಾಗ ಹೆಚ್ಚಿನ ಪ್ರಾಯೋಗಿಕ ಮತ್ತು ತಾಂತ್ರಿಕ ವಿವರಗಳು ವ್ಯಕ್ತಗೊಂಡಿರುವುದನ್ನು ನೋಡಬಹುದು.

ಎಂ.ಫಿಲ್. ಪ್ರಬಂಧಗಳಲ್ಲಿ ವ್ಯಕ್ತಿ ಅಧ್ಯಯನಗಳು, ಕ್ಷೇತ್ರೀಯ ಅಧ್ಯಯನಗಳು ಸಮಪ್ರಮಾಣದಲ್ಲಿವೆ. ಚಿತ್ರಕಲಾವಿದ ಜೆ.ಎಸ್.ಖಂಡೇರಾವ್, ಎಂ.ವ್ಹಿ.ಮಿಣಜಗಿ, ಡಿ.ವ್ಹಿ.ಹಾಲಭಾವಿ ಇವು ವ್ಯಕ್ತಿ ಅಧ್ಯಯನಗಳಾಗಿದ್ದರೆ, ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ, ವಿಜಯನಗರ ಭಿತ್ತಿಚಿತ್ರಕಲೆ,

ಕಿನ್ನಾಳ ಕಲೆ ಇವು ಕ್ಷೇತ್ರೀಯ ಅಧ್ಯಯನಗಳಾಗಿವೆ. ಪಿಹೆಚ್.ಡಿ. ಅಧ್ಯಯನಗಳಲ್ಲಿ ಕ್ಷೇತ್ರೀಯ ಅಧ್ಯಯನಗಳು ಹೆಚ್ಚು ಮೌಲಿಕತೆಯಿಂದ ಕೂಡಿದ್ದರೆ, ಇಲ್ಲಿ ವ್ಯಕ್ತಿ ಅಧ್ಯಯನಗಳು ಉತ್ತಮ ಮಟ್ಟದಲ್ಲಿವೆ. ಕ್ಷೇತ್ರೀಯ ಅಧ್ಯಯನಗಳು ಈಗಾಗಲೇ ಪಿಹೆಚ್.ಡಿ. ಅಧ್ಯಯನಗಳಲ್ಲಿ ಪ್ರಸ್ತಾಪಗೊಂಡ ವಿಷಯಗಳ ಪ್ರತ್ಯೇಕ ಅಧ್ಯಯನಗಳಾಗಿದ್ದು ಹೊಸ ಆಯಾಮಗಳನ್ನು ಕಟ್ಟಿಕೊಡುವಲ್ಲಿ ವಿಫಲವಾಗಿವೆ.

ಡಿ.ಲಿಟ್. ಪ್ರಬಂಭಗಳಲ್ಲಿ ಬಂದಿರುವ ಮೂರೂ ಪ್ರಬಂಧಗಳು ಕ್ಷೇತ್ರೀಯ ಅಧ್ಯಯನಗಳಾಗಿವೆ. ಕನ್ನಡ ವೃತ್ತಿರಂಗಭೂಮಿ ಹಾಗೂ ರಂಗವಿನ್ಯಾಸ ಎಂಬ ವಿಷಯದ ಬಗ್ಗೆ ದೇವದಾಸ ಕಳಸದ ಎಂಬುವರು ಅಧ್ಯಯನ ಮಾಡಿದ್ದು, ನಾಟಕ ಪರದೆಗಳು, ಕವಾಟುಗಳು, ಸೀನರಿಗಳು, ಒಟ್ಟು ರಂಗವಿನ್ಯಾಸದ ಬಣ್ಣಗಾರಿಕೆಯ ಬಗ್ಗೆ ಈ ಕೃತಿಯಲ್ಲಿ ಹೇಳಿದ್ದಾರೆ. ಅದರ ಸ್ವರೂಪ, ವಿನ್ಯಾಸ, ವೈವಿಧ್ಯತೆ, ವಸ್ತುವಿಷಯಗಳನ್ನು ಬಿಂಬಿಸುವಲ್ಲಿ ಹೆಚ್ಚಿನ ಗಮನ ಕೇಂದ್ರೀಕರಿಸಿರುವ ಇವರು ಅದರ ಪರಿಕರಗಳು, ಸಿದ್ಧತಾ ವಿಧಾನ, ರಚನಾ ಕ್ರಮಗಳು, ಮಾಧ್ಯಮಗಳು, ಕಲಾವಿದರು, ಚಿತ್ರಶೈಲಿ, ಬಣ್ಣಗಾರಿಕೆ, ಸಂದರ್ಭ, ಸ್ಥಿತಿಗತಿಗಳು ಒಟ್ಟು ತಾಂತ್ರಿಕತೆಯಂತಹ ಸಂಗತಿಗಳ ಬಗ್ಗೆಯೂ ಗಮನಿಸಿದರೆ ಹೆಚ್ಚು ಮೌಲಿಕತೆ ಉಂಟಾಗುತ್ತಿತ್ತು.

ಅದೇ ಪ್ರಕಾರ ಆನಂದ ಪೂಜಾರವರು ಕರ್ನಾಟಕದ ಕರಾವಳಿ ಕಾವಿ ಚಿತ್ರಕಲೆ ಕುರಿತು ಅಧ್ಯಯನ ಮಾಡಿದ್ದು ಇಲ್ಲಿಯೂ ಹೊಸ ಆಯಾಮಗಳನ್ನು ಕಟ್ಟಿಕೊಡುವಲ್ಲಿ ವಿಫಲರಾಗಿದ್ದಾರೆ. ಅವರಿಗಿಂತ ಮೊದಲೆ ಈ ಕಲಾ ಪ್ರಕಾರದ ಬಗ್ಗೆ ಸಾಂದರ್ಭಿಕವಾಗಿ ಹೇಳಿದ ಕೃಷ್ಣಾನಂದ ಕಾಮತ್ ಮತ್ತು ಯಾದಪ್ಪ ಪರದೇಶಿ ಇವರ ಅಭಿಪ್ರಾಯಗಳನ್ನು ಮತ್ತು ವಿಂಗಡಣೆಗಳನ್ನು ಯಥಾವತ್ತಾಗಿ ಉಳಿಸಿಕೊಂಡಿರುವುದುಕಂಡುಬರುತ್ತದೆ. ವಿಷಯ ನಿರೂಪಣೆಯಲ್ಲಿ ವಿಂಗಡಣೆ ಮತ್ತು ವಿಶ್ಲೇಷಣೆಯಲ್ಲಿ ಸಹಿತ ಹೊಸತನ ಕಂಡುಬರುವುದಿಲ್ಲ. ಬಯಲು ಪ್ರದೇಶದ ಬಹುವರ್ಣ ಭಿತ್ತಿಚಿತ್ರಗಳಿಗಿಂತ ಭಿನ್ನವಾದ ಸ್ವರೂಪ ಹೊಂದಿದ ಕಾವಿಚಿತ್ರಕಲೆಯ ಅಧ್ಯಯನವು ವಿಭಿನ್ನ ನೆಲೆಯಲ್ಲಿ ನಡೆಯಬೇಕಾಗಿರುವ ಕೊರತೆ ಇಲ್ಲಿ ಕಂಡುಬರುವುದು.

ದೃಶ್ಯಕಲೆಯ ಒಂದು ತೌಲನಿಕ ಅಧ್ಯಯನ ಎಂಬ ವಿಷಯದ ಬಗ್ಗೆ ಡಿ.ಎ.ಉಪಾಧ್ಯಾಯ ಅವರು ಡಿ.ಲಿಟ್. ಅಧ್ಯಯನ ಮಾಡಿದಾರೆ. ಇದರಲ್ಲಿ ದೃಶ್ಯಕಲೆಗಳ ಕುರಿತು ಅನೇಕ ಅಂಶಗಳು ಚರ್ಚಿಸಲ್ಪಟ್ಟಿವೆ. ಅಧ್ಯಯನದ ಉದ್ದೇಶ, ಸಮರ್ಥನೆ, ವಿಧಾನ, ವ್ಯಾಪ್ತಿಗಳು, ಕಲೆಯ ಹುಟ್ಟು ಬೆಳವಣಿಗೆ, ದೃಶ್ಯಕಲೆಗಳು ಮತ್ತು ದೃಶ್ಯೇತರ ಕಲೆಗಳ ವೈಲಕ್ಷಣಗಳು, ದೃಶ್ಯಕಲಾವಿದ, ಸಹೃದಯ, ಶಾಸ್ತ್ರ ಮತ್ತು ದೃಶ್ಯಕಲೆಗಳು, ದೃಶ್ಯಕಲೆಗಳ ಮಾಧ್ಯಮಗಳು, ದೃಶ್ಯಕಲೆಗಳಲ್ಲಿನ ಕಲ್ಪನೆಗಳು, ದೃಶ್ಯಕಲೆಗಳಲ್ಲಿನ ಭಾವಗಳು, ದೃಶ್ಯಕಲೆಯಲ್ಲಿ ರಸ, ಸೌಂದರ್ಯದ ಪರಿಕಲ್ಪನೆ ಹೀಗೆ ಅನೇಕ ಸಂಗತಿಗಳ ಬಗ್ಗೆ ಇಬ್ಬರು ಚರ್ಚಿಸಿದರಾದರೂ ಕೆಲವು ಚರ್ಚೆಗಳು ಗೊಂದಲದಿಂದ ಕೂಡಿವೆ. ಇವುಗಳಿಗೆ ಕೊಟ್ಟಿರುವ ಸಕಾರಣಗಳ ಸತ್ವ ಕಡಿಮೆಯಾಗಿದ್ದು, ಸ್ಪಷ್ಟತೆಯ ಕೊರತೆಯಿಂದಾಗಿ ಗೊಂದಲಗಳು ನಿವಾರಣೆಯಾಗಬೇಕಿದೆ.

*****

ಕರ್ನಾಟಕದ ಚಿತ್ರಕಲಾ ಸಾಹಿತ್ಯದಲ್ಲಿ ಬರುವ ವ್ಯಕ್ತಿಅಧ್ಯಯನ ಸಾಹಿತ್ಯ, ಪ್ರವಾಸ ಸಾಹಿತ್ಯ, ಸಂಪಾದನಾ ಸಾಹಿತ್ಯ, ಅನುವಾದ ಸಾಹಿತ್ಯ, ಸಂಶೋಧನಾ ಸಾಹಿತ್ಯವನ್ನು ಹೊರತುಪಡಿಸಿದ ಕಲಾ ಪುಸ್ತಕಗಳನ್ನು ಇಲ್ಲಿ ಅಧ್ಯಯನಕ್ಕೆ ಎತ್ತಿಕೊಳ್ಳಲಾಗಿದೆ. ಜಾಗತಿಕ ಚಿತ್ರಕಲೆ, ಕರ್ನಾಟಕದ ಚಿತ್ರಕಲೆ, ಭಾರತೀಯ ಚಿತ್ರಕಲೆಯ ಬಗ್ಗೆ ಬಂದಿರುವ ಪುಸ್ತಕಗಳು ಇದರಲ್ಲಿವೆ. ಹತ್ತು ಹಲವು ವಿಷಯಗಳಿಗೆ ಸಂಬಂಧಪಟ್ಟ ಚಿತ್ರಕಲಾ ಸಾಹಿತ್ಯ ಕೃತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಚಿತ್ರಕಲಾ ಸಂಕೀರ್ಣ ಸಾಹಿತ್ಯವನ್ನು ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವೇಚಿಸಲಾಗಿದೆ.

೧. ಕರ್ನಾಟಕದ ಚಿತ್ರಕಲಾ ಸಾಹಿತ್ಯ

೨. ಭಾರತೀಯ ಚಿತ್ರಕಲಾ ಸಾಹಿತ್ಯ

೩. ಜಾಗತಿಕ ಚಿತ್ರಕಲಾ ಸಾಹಿತ್ಯ

೪. ಕಲಾಪ್ರಕಾರ, ಸೌಂದರ್ಯ, ವಿಮರ್ಶೆ ಮತ್ತು ಸಾಹಿತ್ಯ ಪ್ರಧಾನ ಚಿತ್ರಕಲಾ ಸಾಹಿತ್ಯ.

**೧. ಕರ್ನಾಟಕದ ಚಿತ್ರಕಲಾ ಸಾಹಿತ್ಯ :**

ಕರ್ನಾಟಕದ ಚಿತ್ರಕಲಾ ಸಾಹಿತ್ಯವನ್ನು ಇಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವೇಚಿಸಲಾಗಿದೆ.

ಅ. ಕರ್ನಾಟಕದ ಪ್ರಾಗಿತಿಹಾಸ ಮತ್ತು ಜನಪದ ಚಿತ್ರಕಲಾ ಸಾಹಿತ್ಯ.

ಬ. ಕರ್ನಾಟಕದ ಕರಕುಶಲ ಮತ್ತು ಶೈಕ್ಷಣಿಕ ಹಿನ್ನೆಲೆ ಚಿತ್ರಕಲಾ ಸಾಹಿತ್ಯ

**ಕ. ಕರ್ನಾಟಕದ ಕಲಾಪರಿಚಯ ಮತ್ತು ಕ್ಯಾಟ್‌ಲಾಗ್ ಚಿತ್ರಕಲಾ ಸಾಹಿತ್ಯ**

**ಅ. ಕರ್ನಾಟಕದ ಪ್ರಾಗಿತಿಹಾಸ ಮತ್ತು ಜನಪದ ಚಿತ್ರಕಲಾ ಸಾಹಿತ್ಯ :**

ಇಲ್ಲಿ ಪ್ರಾಗಿತಿಹಾಸ ಚಿತ್ರಕಲಾ ಸಾಹಿತ್ಯ ಮತ್ತು ಜನಪದ ಚಿತ್ರಕಲಾ ಸಾಹಿತ್ಯ ಕೃತಿಗಳನ್ನು ವಿಶ್ಲೇಷಿಸಲಾಗಿದೆ. ಪ್ರಾಗಿತಿಹಾಸ ಚಿತ್ರಕಲಾ ಸಾಹಿತ್ಯದಲ್ಲಿ ಒಂದೇ ಕೃತಿ ಪ್ರಕಟಗೊಂಡಿರುವುದು ತಿಳಿದುಬರುತ್ತದೆ. ಈ ಗುಂಪಿನಲ್ಲಿ ಒಳಗೊಳ್ಳುವ ಕೃತಿಗಳನ್ನು ಕೆಳಗಿನಂತೆ ವಿವೇಚಿಸಬಹುದು.

**ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ :**

ಕರ್ನಾಟಕವು ಪ್ರಾಗಿತಿಹಾಸ ಚಿತ್ರಕಲೆಯ ನೆಲೆಗಳನ್ನು ಹೊಂದಿರುವ ಶ್ರೀಮಂತ ಪ್ರದೇಶವಾಗಿದೆ. ಕರ್ನಾಟಕದ ಉತ್ತರ ಭಾಗವು ಹೆಚ್ಚಿನ ಚಿತ್ರನೆಲೆಗಳನ್ನು ಹೊಂದಿದ್ದು, ಇಲ್ಲಿ ಬಯಲುಬಂಡೆಯ ಚಿತ್ರಗಳು ಮತ್ತು ಗವಿವರ್ಣಚಿತ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಈ ಭಾಗದ ಅನೇಕ ಬೆಟ್ಟಗುಡ್ಡ, ಪರ್ವತ ಪ್ರದೇಶಗಳನ್ನು ಸುತ್ತಾಡಿ ಸಂಶೋಧನೆ ಮಾಡಿ ಈ ಕೃತಿಯನ್ನು ಅ.ಸುಂದರ ಅವರು ರಚನೆ ಮಾಡಿದ್ದಾರೆ.[೧] ಇದರಲ್ಲಿ ಪ್ರಾಗಿತಿಹಾಸ ಚಿತ್ರಕಲೆಯ ಕುರಿತು ಹಲವಾರು ಅಂಶಗಳು ಚರ್ಚಿತಗೊಂಡಿವೆ.

ಪ್ರಾಗಿತಿಹಾಸ ಬಂಡೆ ಚಿತ್ರಗಳಲ್ಲಿ ಎರಡು ಪ್ರಕಾರಗಳಿವೆ. ಬಯಲುಬಂಡೆಯ ಮೇಲೆ ರಚಿಸಿದ ವರ್ಣರಹಿತ ಚಿತ್ರಗಳು ಮತ್ತು ಗವಿಗಳಲ್ಲಿ ರಚನೆ ಮಾಡಿದ ವರ್ಣ ಚಿತ್ರಗಳಾಗಿವೆ. ಬಯಲು ಬಂಡೆಯ ಚಿತ್ರಗಳಲ್ಲಿ ಕುಟ್ಟಿದ, ಕೊರೆದ ಚಿತ್ರಗಳಿದ್ದರೆ, ಗವಿವರ್ಣ ಚಿತ್ರಗಳಲ್ಲಿ ರೇಖಾಚಿತ್ರಗಳು ಮತ್ತು ಚಪ್ಪಟೆ ಬಣ್ಣ ಲೇಪಿಸಿದ ಚಿತ್ರಗಳು ಕಂಡು ಬರುತ್ತವೆ. ಬಾದಾಮಿ, ಐಹೊಳೆ, ಪಟ್ಟದಕಲ್ಲು, ಗಂಗಾವತಿ, ಹಂಪಿ, ರಾಯಚೂರು, ರಾಮದುರ್ಗ, ಹಿರೇಬೆನಕಲ್, ತಾವರಗೆರೆ, ಮಸ್ಕಿ, ಪಿಕ್ಕಿಹಾಳ, ಮುಂತಾದ ನೆಲೆಗಳಲ್ಲಿ ಈ ಪ್ರಕಾರದ ಚಿತ್ರಗಳು ಕಂಡುಬರುತ್ತವೆ. ಆದಿಮಾನವರ ಈ ಚಿತ್ರಗಳ ರಚನೆಯ ಉದ್ದೇಶಗಳು ವಿವಿಧ ಬಗೆಯಲ್ಲಿವೆ. ಇಂತಹ ಹಲವಾರು ಅಂಶಗಳು ಇಲ್ಲಿ ಬಿಂಬಿತಗೊಂಡಿವೆ. ಇತಿಹಾಸ ಕಾಲದ ಗವಿವರ್ಣ ಚಿತ್ರಗಳು, ಪ್ರಕಾರಗಳು, ಹೋಲಿಕೆ ಮತ್ತು ಕಾಲಮಾನ, ಇತರ ಕಲಾಕೃತಿಗಳು, ಮೃತ್ ಪಾತ್ರೆ ಚಿತ್ರಗಳು, ಸುಡಾವೆ ಮಣ್ಣಿನ ಗೊಂಬೆಗಳ ಕುರಿತಾಗಿ ಇಲ್ಲಿ ಸ್ಥೂಲವಾಗಿ ವಿವೇಚಿಸಲಾಗಿದೆ. ಅದರಲ್ಲೂ ಪ್ರಮುಖವಾಗಿ ಸೂಕ್ಷ್ಮ ಶಿಲಾಯುಗ, ಕಬ್ಬಿಣಯುಗ, ಶಿಲಾ ಸಂಸ್ಕೃತಿಯ ಕೊನೆಯ ಹಂತದ ಚಿತ್ರಗಳ ಬಗ್ಗೆ ಉದಾಹರಣೆಗಳ ಸಹಿತ ವಿವರಿಸಲಾಗಿದೆ. ಇಲ್ಲಿ ತಾಂತ್ರಿಕ ಹಿನ್ನೆಲೆಯ ಚಿತ್ರಗಳು, ನಿತ್ಯ ಜೀವನದ ಚಿತ್ರಗಳು, ಪ್ರಾಣಿ–ಪಕ್ಷಿಗಳ ಚಿತ್ರಗಳು, ಬೇಟೆಯ ಹಿನ್ನೆಲೆಯ ಚಿತ್ರಗಳು ಎಂಬುದಾಗಿ ವಿಂಗಡಿಸಲಾಗಿದೆ. ಚಿತ್ರಶೈಲಿ, ರಚನೆಯ ತಾಂತ್ರಿಕ ಅಂಶಗಳನ್ನು ಇಲ್ಲಿ ಹೇಳಿದೆ.

---

೧. ಅ.ಸುಂದರ : ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು–೧೯೯೪.

**ಗೊಂಬೆಯಾಟ :**

ಗೊಂಬೆಯಾಟ ಕಲೆಯ ಕುರಿತಾದ ಈ ಪುಸ್ತಕವನ್ನು ರಾಮಚಂದ್ರೇಗೌಡ ಬರೆದಿದ್ದಾರೆ.[೨] ಈ ಕೃತಿಯಲ್ಲಿ ಗೊಂಬೆಯಾಟ, ಗೊಂಬೆಗಳ ತಯಾರಿಕೆ ಮತ್ತು ಅವುಗಳನ್ನು ತಯಾರಿಸುವ ಕಲಾವಿದರ ಬಗೆಗೆ ವಿವರವಿದೆ. ಗೊಂಬೆತಯಾರಕರನ್ನು ಗೊಂಬೆರಾಮರು ಎಂದು ಕರೆಯಲಾಗುತ್ತದೆ. ಕಿಳ್ಳೇಕ್ಯಾತ ಅಥವಾ ಶಿಳ್ಳೇಕ್ಯಾತ ಎಂಬುದಾಗಿಯೂ ಇವರನ್ನು ಗುರುತಿಸಲಾಗುತ್ತದೆ. ತೊಗಲುಗೊಂಬೆಗಳನ್ನು ಊರಿನ ಯಜಮಾನರು ತಮ್ಮ ಸತ್ತ ಪಿತೃಗಳ ನೆನಪಿಗಾಗಿ ದಾನ ಮಾಡುವುದು ಉಂಟು. ಇವುಗಳ ರಚನೆಯ ಹಿನ್ನೆಲೆ ಉದ್ದೇಶವನ್ನು ಇಲ್ಲಿ ಹೇಳಿದೆ. ಮೊದಲಿಗೆ ಚರ್ಮದ ಮೇಲಿನ ರೋಮಗಳನ್ನು ಉಪ್ಪು ಮತ್ತು ರಾಸಾಯನಿಕದಿಂದ ತೆಗೆದು ಸ್ವಚ್ಛಗೊಳಿಸಿ ಒಣಗಿಸಲಾಗುತ್ತದೆ. ನಂತರ ಬೇಕಾದ ಆಕಾರದಲ್ಲಿ ರೇಖಾ ವಿನ್ಯಾಸಗಳಿಂದ ಅದರ ಮೇಲೆ ಚಿತ್ರ ಬರೆದುಕೊಂಡು ಕತ್ತರಿಸಿ ಬಣ್ಣ ತುಂಬಲಾಗುತ್ತದೆ. ಹಾಗೂ ನಂತರದಲ್ಲಿ ವಿವಿಧ ವಿನ್ಯಾಸಗಳ ಕಡ್ಡಿಗಳನ್ನು ಚಿತ್ರಗಳಿಗೆ ಜೋಡಿಸಲಾಗುತ್ತದೆ. ಕಡ್ಡಿ ಜೋಡಿಸಿದ ತೊಗಲು ಗೊಂಬೆ ಚಿತ್ರಗಳು ಆಟವಾಡಿಸಲು ಯೋಗ್ಯವಾಗುತ್ತವೆ. ಹೀಗೆ ಅವುಗಳ ರಚನಾ ವಿಧಾನವನ್ನು ಸ್ಥೂಲವಾಗಿ ವಿವೇಚಿಸಲಾಗಿದೆ. ಗೊಂಬೆರಾಮರ ಬಗ್ಗೆ ಮತ್ತು ಅವುಗಳನ್ನು ಪ್ರೋತ್ಸಾಹಿಸಿದವರ ಬಗ್ಗೆ ಹೇಳಲಾಗಿದೆ. ಗೊಂಬೆಗಳನ್ನು ಕೊರೆದು ಬಣ್ಣ ಹಾಕಲು ಗೊಂಬೆರಾಮರಿಗೆ ಕೂಲಿ ಕೊಡಲಾಗುತ್ತದೆ. ಕೆಲವರು ತಮಗೆ ಬೇಕಾದ ಪಾತ್ರಗಳ ಗೊಂಬೆಗಳನ್ನು ಕೊರೆಸುತ್ತಾರೆ. ಈ ಕಿರು ಕೃತಿಯಲ್ಲಿ ಲೇಖಕರು ತೊಗಲುಗೊಂಬೆಯಾಟಕ್ಕೆ ಬಳಸುವ ಸಾಮಗ್ರಿಗಳ ಬಗ್ಗೆಯೂ ಹೇಳಿದ್ದಾರೆ. ಅದರ ಪ್ರದರ್ಶನವು ಕ್ರಿಯಾ ಪ್ರಧಾನವಾದ ದೃಶ್ಯಾತ್ಮಕ ಮತ್ತು ಶ್ರವ್ಯಾತ್ಮಕಲಾ ಪ್ರಕಾರವಾಗಿದೆ.

**ತೊಗಲು ಗೊಂಬೆಯಾಟ :**

ಗ್ರಾಮೀಣ ಪ್ರದೇಶದ ಜೀವನ ವಿಧಾನದಲ್ಲಿ ಆಟ, ಮನರಂಜನೆ ಹಾಗೂ ವಿನೋದಗಳ ಪಾತ್ರ ಮುಖ್ಯವಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಪ್ರಚಲಿತದಲ್ಲಿದ್ದ ಪ್ರಾಚೀನ ಕಲಾ ಪ್ರಕಾರಗಳಲ್ಲಿ ತೊಗಲು ಗೊಂಬೆಯಾಟವು ಮುಖ್ಯವಾಗಿದೆ. ಈ ಕಲಾ ಪ್ರಕಾರದ ಬಗ್ಗೆ ಜಯಲಕ್ಷ್ಮೀ ಆರ್. ಗೌಡ ಈ ಪುಸ್ತಕ ಬರೆದಿದ್ದಾರೆ.[೩] ಗೊಂಬೆರಾಮ ಸಂಸ್ಕೃತಿಯ ಜನಾಂಗ, ತೊಗಲು ಗೊಂಬೆ ತಯಾರಿಕೆ, ಪರಿಕರಗಳು, ಆಟದ ರೀತಿ ಮುಂತಾದ ಅಂಶಗಳ ಕುರಿತು ಈ ಕೃತಿಯಲ್ಲಿ ವಿವೇಚಿಸಲಾಗಿದೆ.

ಗೊಂಬೆರಾಮ ಸಂಸ್ಕೃತಿಯ 'ಜನರ ಮುಖ್ಯ ಕಸುಬು ತೊಗಲುಗೊಂಬೆಗಳ ತಯಾರಿಕೆ ಮತ್ತು ಅವುಗಳ ಪ್ರದರ್ಶನವಾಗಿದೆ. ಹಿಂದಿನ ದಿನಗಳಲ್ಲಿ ಈ ಜನಾಂಗದವರು ಊರಿಂದ ಊರಿಗೆ ತೆರಳಿ ಈ ಆಟವನ್ನು ಪ್ರದರ್ಶನಮಾಡಿ ಅದರಿಂದ ಬಂದ ಸಂಭಾವನೆಯಿಂದ ಜೀವನ ನಿರ್ವಹಿಸುತ್ತಿದ್ದರು. ಈ ಆಟದ ಪ್ರದರ್ಶನಕ್ಕೆ ಗೊಂಬೆಗಳನ್ನು ಕುಣಿಸಲು ಕೈಚಳಕ, ಮಾತುಗಾರಿಕೆ, ಜೊತೆಗೆ ಸಂಗೀತದ ಜ್ಞಾನಗಳು ಅವಶ್ಯವಾಗಿವೆ. ಜನರ ಮನ ಮುಟ್ಟುವಂತೆ ಪರಿಣಾಮಕಾರಿಯಾಗಿ ಆಟ ಪ್ರದರ್ಶನ ಮಾಡಲು ಈ ಅಂಶಗಳು ಪ್ರದರ್ಶನದಲ್ಲಿರಲೇ ಬೇಕು. ಈ ಕಲೆಯನ್ನು ಪ್ರದರ್ಶಿಸುವ ರಂಗಸಜ್ಜಿಕೆಯು ವಿಶಿಷ್ಟವಾಗಿರುತ್ತದೆ. ನಾಲ್ಕು ಕಂಬಗಳನ್ನು ನೆಟ್ಟ ಸ್ಥಳವನ್ನು ಸುತ್ತಲೂ ಬಟ್ಟೆ ಕಟ್ಟಿಮರೆ ಮಾಡಿರುತ್ತಾರೆ. ಒಂದು ಕಡೆಗೆ ಮಾತ್ರ ಅರ್ಧಭಾಗದಲ್ಲಿ ತೆಳುವಾದ ಪಾರದರ್ಶಕ, ಬಿಳಿ ಅರಿವೆ ಕಟ್ಟಿರುತ್ತಾರೆ. ಒಳಭಾಗದಲ್ಲಿ ಬೆಳಕನ್ನು ಇಟ್ಟುಕೊಂಡು ಬಿಳಿ ಪರದೆಯ ಮೇಲೆ ತೊಂಗಲುಗೊಂಬೆಗಳ

೨. ರಾಮಚಂದ್ರೇಗೌಡ : ಗೊಂಬೆಯಾಟ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೮೦

೩. ಜಯಲಕ್ಷ್ಮೀ ಗೌಡ : ತೊಗಲುಗೊಂಬೆಯಾಟ : ಗಿರಿದರ್ಶನ ಪ್ರಕಾಶನ, ಮೈಸೂರು-೧೯೮೭

ವಿನ್ಯಾಸಗಳನ್ನು ಮೂಡಿಸುತ್ತಾರೆ. ಈ ಎಲ್ಲ ವಿಷಯಗಳು ಈ ಕೃತಿಯಲ್ಲಿವೆ. ಇವುಗಳ ಜೊತೆಗೆ ಅವುಗಳನ್ನು ತಯಾರಿಸುವ ವಿಧಾನ, ಬಣ್ಣಗಾರಿಕೆ, ಆಟದ ವಿಧಾನಗಳೂ ಇಲ್ಲಿ ಸ್ಥೂಲವಾಗಿ ಚರ್ಚಿತಗೊಂಡಿವೆ.

**ರಂಗೋಲಿ :**

ಕಲೆಯ ಬಗ್ಗೆ ಹಲವಾರು ಪುಸ್ತಕ ಲೇಖನಗಳನ್ನು ಬರೆದ ಬಾರಕೂರು ಪರಮೇಶ್ವರ ಬಾಯಿರಿಯವರು ರಂಗೋಲಿ ಕಲೆಯ ಬಗ್ಗೆ ವಿಶೇಷ ಒಲವು ಉಳ್ಳವರಾಗಿದ್ದಾರೆ. ಇವರು ಪ್ರಜಾವಾಣಿ ಬಳಗಕ್ಕೆ ದೀಪಾವಳಿ ಸಂಚಿಕೆಯ ಉಚಿತ ಕೊಡುಗೆಗಾಗಿ ರಂಗೋಲಿ ಕಲೆಯ ಬಗ್ಗೆ ಕಿರು ಪುಸ್ತಕ ಬರೆದುಕೊಟ್ಟಿದ್ದಾರೆ.[೪] ಈ ಕೃತಿಯಲ್ಲಿ ಮೊದಲಿಗೆ 'ಜನಪದಕಲೆ ರಂಗೋಲಿ' ಎಂಬ ಲೇಖನವಿದ್ದು ಇದರಲ್ಲಿ ಜನಪದ ಹಾಡುಗಳಲ್ಲಿ ರಂಗೋಲಿ ಕಲೆಯು ಹೇಗೆ ವ್ಯಕ್ತಗೊಂಡಿದೆ ಎಂಬುದನ್ನು ವಿಶ್ಲೇಷಿಸಿದ್ದಾರೆ. ಗಂಡನ ಮನ ಒಲಿಸುವ ರಂಗೋಲಿ, ರಂಗೋಲಿ ನೋಡಿ ಮದುವೆ, ಮದುವೆ ರಂಗೋಲಿ, ರಂಗೋಲಿ ಹೂವುಗಳು, ಹಬ್ಬ-ಹುಣ್ಣಿಮೆಗಳಲ್ಲಿ ರಂಗೋಲಿ, ರಂಗೋಲಿಯ ಗ್ರಾಮ್ಯ ಶಬ್ದಗಳ ಬಗ್ಗೆ ವಿವೇಚಿಸಿದ್ದಾರೆ.

ಇನ್ನೊಂದು ಲೇಖನದಲ್ಲಿ ರಂಗೋಲಿ ಕಲೆಯ ವಿವಿಧ ಆಯಾಮಗಳು ವಿಶ್ಲೇಷಿಸಲ್ಪಟ್ಟಿವೆ. ರಂಗೋಲಿ ಕಲೆಯ ಪ್ರಾಚೀನತೆ, ಇತಿಹಾಸ, ಮಾಧ್ಯಮಗಳು, ರಚನಾ ವಿಧಾನ, ಪರಿಕರಗಳು ಶೈಲಿ, ತಂತ್ರಗಾರಿಕೆ, ಪ್ರಭಾವ, ಪ್ರೇರಣೆಗಳಂತಹ ಸಂಗತಿಗಳು ಹೇಳಲ್ಪಟ್ಟಿವೆ. ರಂಗೋಲಿ ಚಿತ್ರಕಲೆಯ ವಿವಿಧ ಶೈಲಿಗಳು, ಚಿತ್ರಗಳು, ಬಣ್ಣಲೇಪನದ ವೈವಿಧ್ಯತೆಗಳು ಇಲ್ಲಿ ಕಂಡುಬರುತ್ತವೆ. ಹಲವಾರು ಚುಕ್ಕೆಗಳ ರಂಗೋಲಿಗಳಿವೆ. ಅವುಗಳನ್ನು ಹೇಗೆ ರಚಿಸಬೇಕು, ಚುಕ್ಕೆಯಿಂದ ಮತ್ತೊಂದು ಚುಕ್ಕೆಗೆ ಇರುವ ಅಂತರ, ಒಟ್ಟು ಸ್ಥಳಾವಕಾಶದ ವಿವರ, ಪೂರಕ ಚಿತ್ರಗಳ ರಚನಾ ವಿಧಾನಗಳನ್ನು ಇಲ್ಲಿ ಹೇಳಲಾಗಿದೆ. ಮಹಿಳಾ ಪ್ರಧಾನವಾದ ರಂಗೋಲಿ ಚಿತ್ರಕಲೆಯು ಭಾರತದಾದ್ಯಂತ ಪ್ರಚಲಿತದಲ್ಲಿದ್ದು, ಪ್ರಾದೇಶಿಕ ಭಿನ್ನತೆಗಳನ್ನು ಹೊಂದಿದೆ. ಸ್ಥಳೀಯ ಸಾಂಸ್ಕೃತಿಕ ಅಂಶಗಳು, ಧಾರ್ಮಿಕ ವಿಧಿ-ವಿಧಾನಗಳು ಮತ್ತು ಆಚರಣೆಗಳು ಆಯಾ ಪ್ರದೇಶದ ರಂಗೋಲಿ ಕಲೆಯ ಮೇಲೆ ಪ್ರಭಾವ ಬೀರಿ ಅವು ಭಿನ್ನವಾಗಿ ರೂಪುಗೊಳ್ಳಲು ಕಾರಣವಾಗಿರುತ್ತವೆ. ಎನ್ನುವ ಅಂಶಗಳನ್ನು ಈ ಕೃತಿಯಲ್ಲಿ ಕಂಡುಕೊಳ್ಳಬಹುದು.

**ಕಿನ್ನಾಳದ ಚಿತ್ರಕಲೆ :**

ಕಿನ್ನಾಳದ ಚಿತ್ರಕಲೆಯ ಬಗೆಗಿರುವ ಈ ಕೃತಿಯನ್ನು ಆರ್.ಎಚ್.ಕುಲಕರ್ಣಿ ಬರೆದಿದ್ದಾರೆ.[೫] ಇದರಲ್ಲಿ ಈ ಕಲಾಪ್ರಕಾರದ ಸ್ಥೂಲ ಮಾಹಿತಿ ಇದೆ. ಕಿನ್ನಾಳವು ಒಂದು ಕಲಾ ಗ್ರಾಮವಾಗಿದ್ದು, ಇಲ್ಲಿ ಕಲೆಯನ್ನು ಅವಲಂಬಿಸಿದ ಹೆಚ್ಚಿನ ಕುಟುಂಬಗಳಿವೆ. ಕಿನ್ನಾಳದ ಚಿತ್ರಕಲಾವಿದರು ಚಿತ್ರಕಲೆ ರಚನೆಯ ಜೊತೆಗೆ ಗೊಂಬೆಗಳ ತಯಾರಿಕೆ, ಅಲಂಕಾರಿಕ ಫಲಕಗಳ ತಯಾರಿಕೆ ಮತ್ತು ವಿವಿಧ ಬಗೆಯ ಬಣ್ಣದ ಆಟಿಕೆಗಳನ್ನು ತಯಾರಿಸುತ್ತಾರೆ. ಕಿನ್ನಾಳದ ಚಿತ್ರಕಲಾವಿದರು ವಿಜಯನಗರದ ಪತ್ನನದ ನಂತರ ಇಲ್ಲಿ ಬಂದು ನೆಲೆಸಿದರು. ಸಾಂಪ್ರದಾಯಿಕ ಚಿತ್ರಶಿಲ್ಪಗಳನ್ನು ರೂಪಿಸುವ ಇವರು ಅದರ ಪಾರಂಪರಿಕ ಮೌಲ್ಯವನ್ನು ಇನ್ನೂ ಉಳಿಸಿಕೊಂಡಿದ್ದಾರೆ. ಇಲ್ಲಿನ ಕಲಾವಿದರು ತಮ್ಮ

---

೪. ಬಿ.ಪಿ.ಬಾಯಿರಿ : ರಂಗೋಲಿ : ಪ್ರಜಾವಾಣಿ ದೀಪಾವಳಿ ವಿಶೇಷ ಸಂಚಿಕೆ-೧೯೮೮

೫. ಆರ್.ಎಚ್.ಕುಲಕರ್ಣಿ : ಕಿನ್ನಾಳದ ಚಿತ್ರಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು- ೧೯೯೨

ರಚನೆಗಳಿಗಾಗಿ ಸ್ಥಳೀಯವಾಗಿರುವ ಪರಿಕರಗಳನ್ನೇ ಆಯ್ಕೆ ಮಾಡಿಕೊಳ್ಳುತ್ತಾರೆ. ಶಿಲ್ಪಗಳಿಗಾಗಿ ಹಗುರವಾದ ಕಟ್ಟಿಗೆ, ಬಣ್ಣಗಳಿಗಾಗಿ ವಿವಿಧ ಮೂಲ ಪರಿಕರಗಳು ಇವರಲ್ಲಿ ಲಭ್ಯವಿದೆ. ಹುಣಸೆಬೀಜದ ಸರಿಯನ್ನು ಇವರು ಮುಖ್ಯವಾಗಿ ಬಳಸುತ್ತಾರೆ. ಚಿತ್ರರಚನೆಯಲ್ಲಿ ಇವರು ಆಯ್ದುಕೊಳ್ಳುವ ವಸ್ತು ವಿಷಯದಲ್ಲಿ ಹೆಚ್ಚಾಗಿ ರಾಮಾಯಣ, ಮಹಾಭಾರತ, ವಿವಿಧ ಪುರಾಣಗಳಿಗೆ ಸಂಬಂಧಿಸಿದ ಘಟನೆಗಳು ಮುಖ್ಯವಾಗಿರುತ್ತವೆ. ಇತ್ತೀಚಿನ ದಿನಗಳಲ್ಲಿ ಅನೇಕ ಕಲಾ ಕುಟುಂಬಗಳು ತಮ್ಮ ಮೂಲ ವೃತ್ತಿಯನ್ನು ಬದಲಿಸಿಕೊಂಡಿವೆ. ಕಲಾವಿದರ ಸ್ಥಿತಿಗತಿ, ಈ ಕಲೆಯ ಬೆಳವಣಿಗೆ, ಮಾರುಕಟ್ಟೆ ಸೌಲಭ್ಯ ಮುಂತಾದ ವಿಷಯಗಳ ಜೊತೆಗೆ ಈ ಕಲಾಪ್ರಕಾರವು ನಶಿಸುತ್ತಿರುವ ಬಗ್ಗೆ ಲೇಖಕರು ತಿಳಿಸುತ್ತಾರೆ.

**ಶೀಗಿ ಹಾಡುಗಳು :**

ಜನಪದ ಕಲಾ ಪ್ರಕಾರಗಳಲ್ಲಿ ಶೀಗಿ ಚಿತ್ರಕಲೆಯು ವಿಶೇಷವಾಗಿದೆ. ಶೀಗಿ ಚಿತ್ರಕಲೆ ಮತ್ತು ಶೀಗಿ ಹಾಡುಗಳ ಕುರಿತಾಗಿ ರಾಜೇಂದ್ರ ಯರನಾಳೆಯವರು ಪುಸ್ತಕ ರಚನೆ ಮಾಡಿದ್ದಾರೆ.[೬] ಭಾರತೀಯ ಹಬ್ಬಗಳು ಕಲಾತ್ಮಕ ಹಿನ್ನೆಲೆಯನ್ನು ಹೊಂದಿವೆ. ಹಲವು ಹಬ್ಬಗಳಲ್ಲಿ ಚಿತ್ರಕಲೆ ರಚನೆಯಾಗುವುದರ ಜೊತೆಗೆ ಹಾಡುಗಳನ್ನು ಹಾಡಲಾಗುತ್ತದೆ. ಇಂತಹ ಆಚರಣೆಯಲ್ಲಿ ಶೀಗಿ ಆಚರಣೆಯೂ ಒಂದಾಗಿದೆ. ಬೀದರ್, ಬಾಗಲಕೋಟ, ಬೆಳಗಾಂವ, ಧಾರವಾಡ ಜಿಲ್ಲೆಗಳ ವ್ಯಾಪ್ತಿಯಲ್ಲಿ ಶೀಗಿ ಆಚರಣೆಯನ್ನು ವಿಶಿಷ್ಟವಾಗಿ ಆಚರಿಸುತ್ತಾರೆ. ಶೀಗಿ ಹುಣ್ಣಿಮೆ ಇನ್ನು ಏಳು ದಿನಗಳಿವೆ ಎನ್ನುವಾಗಲೇ ಈ ಆಚರಣೆ ಆರಂಭಗೊಳ್ಳುತ್ತದೆ. ಪ್ರತಿದಿನವೂ ಒಂದು ಬಗೆಯ ಚಿತ್ರವನ್ನು ಮನೆಯ ಗೋಡೆಯ ಮೇಲೆ ರಚನೆ ಮಾಡಿ, ಪೂಜೆಸಿ, ಆರತಿ ಮಾಡಿ ನೈವೇದ್ಯ ಅರ್ಪಿಸಲಾಗುತ್ತದೆ. ಒಂದನೇ ದಿನ ಸೂರ್ಯ-ಚಂದ್ರ, ಎರಡನೇ ದಿನ ಎಲೆ-ಬಳ್ಳಿ, ಮೂರನೆ ದಿನ ತುಳಸಿಕಟ್ಟಿ, ಕಬ್ಬಿನಬೆಳೆ, ನಾಲ್ಕನೆಯ ದಿನ ಬಾರಂಭಾವಿ, ಐದನೆಯ ದಿನ ಆಂಜನೇಯ, ಸ್ವಸ್ತಿಕ, ಆರನೆಯ ದಿನ ಹುಚ್ಚಯ್ಯ, ಏಳನೆಯ ದಿನ ತೇರನ್ನು ಚಿತ್ರಿಸಲಾಗುತ್ತದೆ.

ಬೀದರ್ ಭಾಗದಲ್ಲಿ ಮನೆಯ ಹೊರಭಾಗದ ಗೋಡೆಯ ಮೇಲೆ ಬಾಗಿಲಿನ ಪಕ್ಕಗಳಲ್ಲಿ ಚಿತ್ರರಚನೆ ಮಾಡಿದರೆ, ಇನ್ನುಳಿದ ಭಾಗಗಳಲ್ಲಿ ಮನೆಯ ಒಳಭಾಗದಲ್ಲಿ ಚಿತ್ರ ರಚನೆ ಮಾಡುತ್ತಾರೆ. ಕೆಲವು ಕಡೆಗೆ ಬಿದಿರು ಬುಟ್ಟಿ ಮತ್ತು ಮಣ್ಣಿನ ಗಡಿಗೆಯ ಮೇಲೆಯೂ ಚಿತ್ರಗಳನ್ನು ರಚಿಸುತ್ತಾರೆ. ಈ ಶೀಗಿ ಚಿತ್ರರಚನೆಯಲ್ಲಿ ಸ್ಥಳೀಯವಾಗಿ ದೊರಕುವ ಪರಿಕರಗಳಿಂದಲೇ ವರ್ಣಗಳನ್ನು ತಯಾರಿಸಿ ಕೊಳ್ಳುತ್ತಾರೆ. ಶೀಗಿ ಚಿತ್ರರಚನೆಯ ಸಂದರ್ಭದಲ್ಲಿ ಹೆಣ್ಣಮಕ್ಕಳು ಹಾಡುಗಳನ್ನು ಹೇಳುವ ಸಂಪ್ರದಾಯವಿದೆ. ಆಯಾ ಚಿತ್ರಕ್ಕೆ ಮತ್ತು ಆಯಾ ಸಂದರ್ಭಕ್ಕೆ ತಕ್ಕಂತೆ ಹಾಡುಗಳನ್ನು ಹಾಡುವ ಹೆಂಗಳೆಯರು ಮನೆಯಿಂದ ಮನೆಗೆ ರಾತ್ರಿ ಹೊತ್ತು ತೆರಳಿ ಶೀಗಿಯನ್ನು ಪೂಜಿಸುತ್ತಾರೆ. ಇವರಿಗೆ ಶೀಗಿ ಮಕ್ಕಳು ಎಂಬುದಾಗಿ ಕರೆಯುತ್ತಾರೆ. ಈ ಕೃತಿಯಲ್ಲಿ ಯಾವ ಯಾವ ಹಾಡುಗಳನ್ನು ಯಾವ ಸಂದರ್ಭದಲ್ಲಿ ಹಾಡಲಾಗುತ್ತದೆ. ಎಂಬ ಕುರಿತಾಗಿಯೂ ಮಾಹಿತಿ ಇದೆ.

**ರಂಗೋಲಿ :**

ಕನ್ನಡ ವಿಶ್ವವಿದ್ಯಾಲಯದ ನವಸಾಕ್ಷರ ಮಾಲೆಯಲ್ಲಿ ಪ್ರಕಟಿಸಿರುವ ಅನೇಕ ಕಿರು ಪುಸ್ತಕಗಳಲ್ಲಿ ಇದೂ ಒಂದಾಗಿದೆ. ಶಾಂತಿನಾಯಕ ಬರೆದ ಈ ಪುಸ್ತಕವು 'ರಂಗೋಲಿ' ಕಲೆಯ ಕುರಿತಾಗಿದೆ.[೭] ನವಸಾಕ್ಷರರನ್ನು ಅಂದರೆ ವಯಸ್ಕರ ಶಿಕ್ಷಣ ಕ್ರಮವನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಲಾದ ಈ

೬. ರಾಜೇಂದ್ರ ಯರನಾಳೆ : ಶೀಗಿ ಹಾಡುಗಳು : ಸಿದ್ಧಲಿಂಗೇಶ್ವರ ಸಾಹಿತ್ಯ ಭಂಡಾರ ವಿರಕ್ತಮಠ ಕುಶನೂರು-೧೯೯೪
೭. ಶಾಂತಿ ನಾಯಕ : ರಂಗೋಲಿ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ-೧೯೯೪

ಕೃತಿಯಲ್ಲಿ ತೀರಾ ಸರಳವಾದ ವಾಕ್ಯಗಳಲ್ಲಿ ವಿಷಯ ನಿರೂಪಿಸಲ್ಪಟ್ಟಿದ್ದು, ಇದರಲ್ಲಿನ ಚಿತ್ರಗಳು ಕೂಡಿ ಮಕ್ಕಳಿಂದ ರಚನೆಯಾದಂತೆ ಕಂಡು ಬರುತ್ತವೆ. ಈ ಪುಸ್ತಕದಲ್ಲಿ ಹೇಳಲ್ಪಟ್ಟಿರುವ ವಿಷಯಗಳಲ್ಲಿ ರಂಗೋಲಿಯ ಪ್ರಾಚೀನತೆ, ಐತಿಹಾಸಿಕ ಹಿನ್ನೆಲೆ, ಪರಿಕರಗಳು, ರಚನಾವಿಧಾನ, ಪ್ರಾದೇಶಿಕ ಗುಣಲಕ್ಷಣಗಳು, ರಂಗೋಲಿ ಪ್ರಕಾರಗಳು, ಧಾರ್ಮಿಕ ನಂಬಿಕೆ ಮತ್ತು ಆಚರಣೆಗಳು ಹೀಗೆ ಹಲವಾರು ಸಂಗತಿಗಳು ಹೇಳಲ್ಪಟ್ಟಿವೆ. ಜೊತೆಗೆ ರಂಗೋಲಿ ಚಿತ್ರಗಳನ್ನು ಕೊಡಲಾಗಿದೆ. ರಂಗೋಲಿ ಕಲಿಯಲು ಸರಳ ವಿಧಾನಗಳನ್ನು ಇಲ್ಲಿ ತಿಳಿಸಲಾಗಿದೆ. ಚುಕ್ಕೆಯನ್ನು ಇಡುವ ಕ್ರಮ, ಗೆರೆಗಳನ್ನು ಎಳೆಯುವ ರೀತಿ, ಬಣ್ಣ ತುಂಬುವ ವಿಧಾನಗಳನ್ನು ಹಂತಹಂತವಾಗಿ ತಿಳಿಸಲಾಗಿದೆ. ಅಷ್ಟದಳ, ಸ್ವಸ್ತಿಕ, ಗಣಪತಿ ಮಂಡಲ, ಸುಗ್ಗಿ ಕುಣಿತ, ಹೂವಿನ ಬುಟ್ಟಿಗಳು, ಹೊಸ್ತಿಲ ರಂಗೋಲಿ, ಬಿಲ್ವಪತ್ರೆ, ಮದುವೆ ಸಂದರ್ಭದ ರಂಗೋಲಿ, ಸೂರ್ಯನ ರಂಗೋಲಿ, ತೊಟ್ಟಿಲ ರಂಗೋಲಿ, ವಿವಿಧ ದೇವತಾ ರಂಗೋಲಿಗಳನ್ನು ಚಿತ್ರಿಸುವ ವಿಧಾನ ಹೇಳಿಕೊಡಲಾಗಿದೆ. ಕೊನೆಗೆ ರಂಗೋಲಿ ಕಲೆಯ ಮಹತ್ವ, ಸಾಂಸ್ಕೃತಿಕ ಹಿರಿಮೆಗಳನ್ನು ತಿಳಿಸಿ ಈ ಪ್ರಾಚೀನ ಕಲೆಯನ್ನು ಉಳಿಸಿ ಬೆಳೆಸುವ ಬಗೆಗಿನ ಸಲಹೆ ಸೂಚನೆಗಳನ್ನು ಕೊಡಲಾಗಿದೆ.

**ಕಾವಿ ಕಲೆ :**

ಕಾವಿಕಲಾಪ್ರಕಾರದ ಬಗ್ಗೆ ಕೃಷ್ಣಾನಂದ ಕಾಮತ್ ಪುಸ್ತಕ ರಚನೆ ಮಾಡಿದ್ದಾರೆ.[೮] ಬಿಳಿಗೋಡೆಯ ಮೇಲೆ ಲೇಪಿಸಿದ ಹಸಿ ಭಿತ್ತಿಯನ್ನು ಕೊರೆದು ಚಿತ್ರರಚಿಸಲಾಗುತ್ತದೆ. ಈ ಕಾವಿಚಿತ್ರಗಳು ಉಬ್ಬುಶಿಲ್ಪ ಮಾದರಿಯಲ್ಲಿ ಕಂಡುಬರುತ್ತವೆ. ಕಾವಿಚಿತ್ರರಚನೆಯಲ್ಲಿ ಕಾವಿ ಮಿಶ್ರಣ ತಯಾರಿಸಿಕೊಳ್ಳುವುದು ಒಂದು ಕಲಾತ್ಮಕ ಪ್ರಕ್ರಿಯೆಯಾಗಿದೆ. ಇತ್ತೀಚೆಗೆ ನಶಿಸಿ ಹೋಗುತ್ತಿರುವ ಈ ಕಲೆಯ ಬಗ್ಗೆ ಗಮನ ಹರಿಸಬೇಕಾಗಿದೆ.

ಪ್ರಸ್ತುತ ಪುಸ್ತಕದಲ್ಲಿ ಕಾವಿಕಲೆ ಎಂದರೇನು? ಕಾವಿಕಲೆಯ ಮಿಶ್ರಣ ತಯಾರಿಕೆ ಮತ್ತು ಚಿತ್ರರಚನಾ ವಿಧಾನಗಳು, ಭಿತ್ತಿಸಿದ್ಧಗೊಳಿಸುವ ಹಂತಗಳು, ವರ್ಣವಿನ್ಯಾಸ, ಪೂರ್ವಭಾವಿ ಚಿತ್ರರಚಿಸಿಕೊಳ್ಳುವ ಕ್ರಮಗಳನ್ನು ಹೇಳಲಾಗಿದೆ. ಜೊತೆಗೆ ಕಾವಿಚಿತ್ರಕಲೆ ಬೆಳೆದುಬಂದ ಸಂಕ್ಷಿಪ್ತ ಇತಿಹಾಸವನ್ನು ಹೇಳಿ ಕೆಲವು ಪ್ರಮುಖ ದೇವಾಲಯ, ಮಠ-ಮಾನ್ಯಗಳಲ್ಲಿನ ಚಿತ್ರಗಳನ್ನು ವಿವರಿಸಲಾಗಿದೆ. ಸಿರ್ಸಿಮಾರಿಕಾಂಬಾ ದೇವಾಲಯ, ಬನವಾಸಿ ಮಧುಕೇಶ್ವರ, ಹೊನ್ನಾವರ ಶ್ರೀರಾಮ ದೇವಾಲಯಗಳಲ್ಲದೆ ಕಾರವಾರ, ಗೋಕರ್ಣ, ಬೀಳಗಿ, ಬಳಲೆ, ಹೊಸಾಡ, ಸದಾಶಿವಗಡ, ಮುಂತಾದ ಪ್ರದೇಶಗಳಲ್ಲಿ ರಚನೆಯಾದ ಕಾವಿಚಿತ್ರಗಳ ಬಗ್ಗೆ ಮಾಹಿತಿ ಕೊಡಲಾಗಿದೆ. ಈ ಚಿತ್ರಗಳ ಸ್ವರೂಪ, ಸ್ಥಿತಿಗತಿ, ಶೈಲಿ, ತಂತ್ರಗಾರಿಕೆ, ಪ್ರಭಾವ, ಪ್ರೇರಣೆ, ವಸ್ತುವಿಷಯಗಳಿಗೆ ಅನುಸಾರವಾಗಿ ಅವುಗಳನ್ನು ವಿವೇಚಿಸಲಾಗಿದೆ. ಕೊನೆಯಲ್ಲಿ ಕಾವಿ ಚಿತ್ರಗಳಿರುವ ನೆಲೆಗಳ ಪಟ್ಟಿಯನ್ನು ಕೊಡಲಾಗಿದೆ.

**ಗಂಜೀಫಾ ಕಲೆ :**

ಸಾಂಪ್ರದಾಯಿಕ ಚಿತ್ರಕಲಾ ಪ್ರಕಾರದಲ್ಲಿ ಒಂದಾದ ಗಂಜೀಫಾ ಕಲಾ ಪ್ರಕಾರವು ಹಲವು ಶೈಲಿಗಳ ಸಮ್ಮಿಲನದ ಸ್ವರೂಪವೆನ್ನಬಹುದು. ಪರ್ಶಿಯನ್, ಮೊಗಲ್ ಮತ್ತು ಹಿಂದೂ ಕಲಾಶೈಲಿಯ ಸ್ಥೂಲ ಲಕ್ಷಣಗಳು ಇದರಲ್ಲಿ ಗೋಚರಿಸುತ್ತವೆ. ಗಂಜೀಫಾ ಶಬ್ದ ಬಂದದ್ದೇ ಮೊಗಲ್ ಕಾಲದಲ್ಲಿ. ಈ ಕಲೆಯು ಮೂಲವಾಗಿ ಭಾರತದ್ದೇ ಆಗಿದೆ ಎನ್ನುವ ಅಂಶವನ್ನು ಲೇಖಕರು ಈ ಕೃತಿಯಲ್ಲಿ

೮. ಕೃಷ್ಣಾನಂದ ಕಾಮತ್ : ಕಾವಿಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೪

ಹೇಳಿದ್ದಾರೆ. ಇದಲ್ಲದೆ ಗಂಜೀಫಾ ಕಲೆಯ ಬಗೆಗೆ ಇನ್ನೂ ಹಲವಾರು ಅಂಶಗಳಿರವ ಈ ಪುಸ್ತಕವನ್ನು ಸಂತೋಷಕುಮಾರ ಗುಲ್ವಾಡಿಯವರು ಬರೆದಿದ್ದಾರೆ.[೯] ಗಂಜೀಫಾ ಚಿತ್ರಕಲೆಗೆ ಮೈಸೂರು ಅರಸರ ಕಾಲದಲ್ಲಿ ಹೆಚ್ಚಿನ ಪ್ರೋತ್ಸಾಹ ದೊರಕಿತ್ತು. ಈ ಕಲಾಪ್ರಕಾರವು ಒಂದು ಆಟವಾಗಿಯೂ ಬಳಕೆಯಲ್ಲಿತ್ತು. ಮೈಸೂರು ಅರಸರು ಅತಿ ಹೆಚ್ಚು ಇಷ್ಟಪಡುತ್ತಿದ್ದ ಆಟಗಳಲ್ಲಿ ಗಂಜೀಫಾ ಆಟವೂ ಒಂದಾಗಿತ್ತು. ಇಂದಿನ ಇಸ್ಪೀಟ ಆಟದ ಮೂಲವೂ ಇದೆ ಎನ್ನಲಾಗುತ್ತದೆ. ಗಂಜೀಫಾ ಕಲೆಯ ಆಟದ ಎಲೆಗಳನ್ನು ನುರಿತ ಕಲಾವಿದರೇ ತಯಾರಿಸುತ್ತಿದ್ದರು. ರೇಖಾವಿನ್ಯಾಸ, ಬಣ್ಣಗಾರಿಕೆ, ತಯಾರಿಕೆಯ ತಂತ್ರಗಾರಿಕೆಗಳ ಕುರಿತಾಗಿ ಸ್ಥೂಲ ಮಾಹಿತಿಯು ಈ ಕೃತಿಯಲ್ಲಿದೆ.

**ರಂಗೋಲಿ :**

ರಂಗೋಲಿ ಕಲೆಯು ಪ್ರಾಚೀನವಾದ ಪರಂಪರೆ ಹೊಂದಿದ್ದು, ಭಾರತದಾದ್ಯಂತ ಪ್ರಚಲಿತದಲ್ಲಿದೆ. ಪ್ರಾದೇಶಿಕ ಭಿನ್ನತೆ ಹೊಂದಿದ ಈ ಕಲಾ ಪ್ರಕಾರವು ಮುಖ್ಯವಾಗಿ ಸ್ತ್ರೀಯರಿಂದ ರಚನೆಯಾಗುತ್ತದೆ. ರಂಗೋಲಿ ಕಲೆಯ ಬಗೆಗಿರುವ ಈ ಪುಸ್ತಕವನ್ನು ರಾಜಲಕ್ಷ್ಮೀ ವಾಸುದೇವ ಬರೆದಿದ್ದಾರೆ.[೧೦]ಈ ಚಿಕ್ಕ ಕೃತಿಯಲ್ಲಿ ರಂಗೋಲಿ ಕಲೆಯ ರೂಪುರೇಷೆ, ರಚನಾಕ್ರಮ, ಪರಿಕರಗಳು, ಪ್ರಾದೇಶಿಕ ವಿಶಿಷ್ಟತೆ, ಆಚರಣೆಯ ಹಿನ್ನೆಲೆಗಳನ್ನು ಹೇಳಲಾಗಿದೆ. ಬೇರೆ ಬೇರೆ ವರ್ಣಗಳನ್ನು ಮಿಶ್ರಗೊಳಿಸಿ ವರ್ಣಮಯ ರಂಗೋಲಿ ಹಾಕುತ್ತಾರೆ. ನೀರಿನ ಮೇಲಿನ ರಂಗೋಲಿ, ಶೇಡಿ ರಂಗೋಲಿ, ಹಾಗೂ ಪ್ರತಿಯೊಂದು ಹಬ್ಬಕ್ಕೂ ವಿವಿಧ ರೀತಿಯ ವಿನ್ಯಾಸದ ರಂಗೋಲಿಗಳನ್ನು ಹಾಕಲಾಗುತ್ತದೆ. ಈ ಕೃತಿಯಲ್ಲಿ ಯಾವ ಯಾವ ಹಬ್ಬಗಳಿಗೆ ಯಾವ ರಂಗವಲ್ಲಿ ಹಾಕಲಾಗುತ್ತದೆ ಎನ್ನುವ ವಿವರದ ಜೊತೆಗೆ ಅದರ ಚಿತ್ರವನ್ನು ಕೊಡಲಾಗಿದೆ. ಗೌರಿಹಬ್ಬ, ಗಣೇಶನ ಹಬ್ಬ, ರಾಮನವಮಿ, ಯುಗಾದಿ, ಸಂಕ್ರಾಂತಿ, ಕೃಷ್ಣ ಜನ್ಮಾಷ್ಟಮಿ, ದೀಪಾವಳಿ, ನಾಗಪಂಚಮಿ, ಹಬ್ಬಗಳಲ್ಲಿ ಹಾಕುವ ರಂಗೋಲಿಗಳನ್ನು ಕುರಿತು ಹೇಳಲಾಗಿದೆ. ಮತ್ತು ಪ್ರತಿನಿತ್ಯ ಮನೆಯ ಮುಂದೆ, ದೇವರ ಮುಂದೆ, ತುಳಸಿ ಕಟ್ಟೆಯ ಮುಂದೆ ಹಾಕುವ ರಂಗೋಲಿಯ ಮಾದರಿಗಳನ್ನು ಇಲ್ಲಿ ಚಿತ್ರಸಹಿತ ಕೊಡಲಾಗಿದೆ.

**ಗಂಜೀಫಾ ಚಿತ್ರಕಲೆ :**

ಗಂಜೀಫಾ ಚಿತ್ರ ಪ್ರಕಾರವು ವಿಶಿಷ್ಟವಾಗಿದ್ದು, ಇದರಲ್ಲಿ ಶಿಷ್ಟಪದ ಮತ್ತು ಜನಪದ ಲಕ್ಷಣಗಳು ಕಂಡುಬರುತ್ತವೆ. ಈ ಗ್ರಂಥವನ್ನು ಸಂತೋಷಕುಮಾರ ಗುಲ್ವಾಡಿಯವರು ಬರೆದಿದ್ದಾರೆ.[೧೧]ಗಂಜೀಫಾ ಕಲಾ ಪ್ರಕಾರವು ಸಾಂಪ್ರದಾಯಿಕ ಚಿತ್ರಶೈಲಿಯಾಗಿದೆ. ಆಟದ ಕಾರ್ಡುಗಳ ಮೇಲೆ ಕಿರುರೂಪದಲ್ಲಿ ಚಿತ್ರಸುವ ಈ ಚಿತ್ರಕಲೆಯಲ್ಲಿ ಹತ್ತು ಹಲವು ವಸ್ತುವಿಷಯಗಳಿರುತ್ತವೆ. ಪೌರಾಣಿಕ ಘಟನೆಗಳು, ಐತಿಹಾಸಿಕ ಘಟನೆಗಳು, ಸಾಮಾಜಿಕ ಜೀವನದ ವಿವರಗಳು, ಪ್ರಾಣಿ-ಪಕ್ಷಿಗಳು, ವಿವಿಧ ನಕ್ಷೆಯ ಮಾದರಿಗಳು ಇಲ್ಲಿ ರಚನೆಯಾಗುತ್ತವೆ. ಇಂದಿನ ಇಸ್ಪೀಟ್ ಆಟದ ಮಾದರಿಯಲ್ಲಿ ಗಂಜೀಫಾ ಕಾರ್ಡುಗಳಿಂದ ಆಟವಾಡಲಾಗುತ್ತದೆ. ಈ ಕೃತಿಯಲ್ಲಿ ಗಂಜೀಫಾ ಕಲೆಯ ಚರಿತ್ರೆ, ಸ್ವರೂಪ, ಶೈಲಿ, ವರ್ಣಗಾರಿಕೆ, ರೇಖಾವಿನ್ಯಾಸ, ಕಾರ್ಡು ತಯಾರಿಕೆ, ಚಿತ್ರರಚನಾ ವಿಧಾನಗಳ ಬಗ್ಗೆ ಸ್ಥೂಲವಾಗಿ ಹೇಳಲಾಗಿದೆ. ಜೊತೆಗೆ ಗಂಜೀಫಾ ಶೈಲಿಯ ವರ್ಣಚಿತ್ರಗಳನ್ನು ಮುದ್ರಿಸಲಾಗಿದೆ.

---

೯. ಸಂತೋಷಕುಮಾರ ಗುಲ್ವಾಡಿ : ಗಂಜೀಫಾ ಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು -೨೦೦೪

೧೦. ರಾಜಲಕ್ಷ್ಮೀ ವಾಸುದೇವ : ರಂಗೋಲಿ : ಸಂತೋಷ ಪಬ್ಲಿಕೇಷನ್ಸ, ಬೆಂಗಳೂರು-೧೯೯೫

೧೧. ಸಂತೋಷಕುಮಾರ ಗುಲ್ವಾಡಿ : ಗಂಜೀಫಾ ಚಿತ್ರಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೫

**ಗ್ರಾಮೀಣ ಚಿತ್ರಗಳು :**

ಈ ಕೃತಿಯು ಕರ್ನಾಟಕದ ಖ್ಯಾತ ಕಲಾವಿದ ಎಸ್.ಎನ್.ಸ್ವಾಮಿಯವರ ರೇಖಾಚಿತ್ರಗಳ ಸಂಪುಟವಾಗಿದೆ. ವಿಶೇಷವಾಗಿ ಅವರ ಮದುವೆ ಚಿತ್ರಗಳನ್ನು ಆಯ್ದು ಇಲ್ಲಿ ಪ್ರಕಟಿಸಲಾಗಿದೆ. ಆ ಚಿತ್ರಗಳಿಗೆ ತಕ್ಕಂತೆ ಎಸ್.ಕೆ.ರಾಮಚಂದ್ರ ರಾಯರು ವಿವರಣೆಯನ್ನು ನೀಡಿದ್ದಾರೆ.[೧೨] ಈ ಚಿತ್ರಗಳು ಮತ್ತು ಅದಕ್ಕನುಸಾರವಾಗಿ ಬರೆಯಲಾಗಿರುವ ಸಾಹಿತ್ಯವು ಗ್ರಾಮೀಣ ಪರಿಸರವನ್ನು ಬಿಂಬಿಸಿರುವುದರಿಂದ ಈ ಕೃತಿಗೆ ಗ್ರಾಮೀಣ ಚಿತ್ರಗಳು ಎಂದು ಹೆಸರಿಸಲಾಗಿದೆ. ಈ ಕೃತಿಯಲ್ಲಿ ಎಸ್.ಎನ್.ಸ್ವಾಮಿಯವರ ಮಿತ್ರರು ಮತ್ತು ಶಿಷ್ಯರು ಅವರನ್ನು ನೆನಪಿಸಿದ ಹಲವಾರು ಬರಹಗಳನ್ನು ಸೇರಿಸಲಾಗಿದೆ. ಲೇಖನಗಳಲ್ಲಿ 'ಕಲಾವಿದ ನಂಜುಂಡಸ್ವಾಮಿ ನೆನಪುಗಳು' ಲೇಖನವನ್ನು ಎಂ.ಎಸ್.ಚಂದ್ರಶೇಖರ್, 'ಕಲಾಯೋಗಿ ಎಸ್.ನಂಜುಂಡಸ್ವಾಮಿ', ಮಧುಗಿರಿ ರಾಮು ಬರೆದಿದ್ದಾರೆ. ಅಗರಂ ಕೃಷ್ಣಮೂರ್ತಿ, ಹ.ವೆಂ.ಸೀತಾರಾಮಯ್ಯ, ಎಂ.ರಾಮನರಸಯ್ಯ, ರುಮಾಲೆ ಚನ್ನಬಸಯ್ಯ, ಎಸ್.ಆರ್.ಸ್ವಾಮಿ, ಎಸ್.ಕೆ.ರಾಮಚಂದ್ರರಾವ್, ಸಿ.ಎಚ್.ಪ್ರಹ್ಲಾದರಾವ್, ಎಸ್.ಆರ್.ಅಯ್ಯಂಗಾರ್, ಬಿ.ಎಚ್.ರಾಮಚಂದ್ರ, ಎಂ.ಜೈಕುಮಾರ, ಜೋತಿ ಶಶಿಕುಮಾರ ಅವರುಗಳು ಎಸ್.ಎನ್.ಸ್ವಾಮಿಯವರ ಕುರಿತು ಲೇಖನಗಳನ್ನು ಬರೆದಿದ್ದಾರೆ. ಲೇಖನಗಳಲ್ಲಿ ವೈವಿಧ್ಯತೆ ಇಲ್ಲ. ನಾ ಕಂಡಂತೆ ಸ್ವಾಮಿಯವರು, ನಾ ಕಂಡಂತೆ ಮಿತ್ರರು, ಸಹಪಾಠಿ, ಹೀಗೆ ವಿವಿಧ ಆಯಾಮಗಳಿದ್ದರೂ ನೀರವತೆಯ ಭಾವ ಲೇಖನಗಳಲ್ಲಿದೆ. ಹಾಗಾಗಿ ಸಾಹಿತ್ಯ ದೃಷ್ಟಿಯಿಂದ ಈ ಕೃತಿ ಸಪ್ಪೆ ಎನಿಸಿದರೂ ಸ್ವಾಮಿಯವರ ಚಿತ್ರಕಲಾ ಕೃತಿಗಳಿಂದಾಗಿ ಮೌಲಿಕವಾಗಿದೆ. ಚಿತ್ರಸಂಪುಟವಾಗಿ ಇದು ಮಹತ್ವ ಪಡೆದುಕೊಳ್ಳುತ್ತದೆ ವಿನಹ ಸಾಹಿತ್ಯ ಕೃತಿಯಾಗಿ ಶ್ರೇಷ್ಠತೆಯನ್ನು ಹೊಂದಿಲ್ಲ.

**ಗಂಜೀಫಾ ಕಲೆ :**

ಪ್ರಾಚೀನ ಚಿತ್ರಕಲಾ ಪ್ರಕಾರದಲ್ಲಿ ಗಂಜೀಫಾ ಚಿತ್ರಕಲೆಯು ವಿಶಿಷ್ಟವಾಗಿದೆ. ಇದರ ಬಗ್ಗೆ ಎಂ.ಎಲ್.ಶಿವಶಂಕರ ಕೃತಿರಚಿಸಿದ್ದಾರೆ.[೧೩] ಕಲೆಯಾಗಿ, ಆಟವಾಗಿ, ಮನೋರಂಜನೆಯ ಸಾಧನವಾಗಿ ಇದು ಇತರ ಕಲಾ ಪ್ರಕಾರಗಳಿಗಿಂತ ಭಿನ್ನ ಸ್ವರೂಪವನ್ನು ಪಡೆದುಕೊಂಡಿದೆ. ಗಂಜೀಫಾ ಕಲೆಯಲ್ಲಿ ಚಿತ್ರರಚನೆ ಮಾಡಿದ ಕಾರ್ಡುಗಳನ್ನು ಇಟ್ಟುಕೊಂಡು ಆಟವಾಡಲಾಗುತ್ತದೆ. ಕನಿಷ್ಟ ಇಬ್ಬರು ವ್ಯಕ್ತಿಗಳಿಂದ ಈ ಆಟವಾಡಲು ಸಾಧ್ಯ. ಕರ್ನಾಟಕದಲ್ಲಿ ಗಂಜೀಫಾ ಕಲಾ ಪ್ರಕಾರವು ಪ್ರಾಚೀನ ಪರಂಪರೆಯನ್ನು ಹೊಂದಿದೆ. ಮೈಸೂರಿನ ದೊರೆಗಳು ಸ್ವತಹ ಈ ಆಟವನ್ನು ಆಡುತ್ತಿದ್ದರು. ಗಂಜೀಫಾ ಆಟದ ಚಿತ್ರಮಯ ಕಾರ್ಡುಗಳನ್ನು ರೂಪಿಸುವುದು ಒಂದು ಕಲಾತ್ಮಕ ಪ್ರಕ್ರಿಯೆ ಆಗಿದೆ. ಇಲ್ಲಿ ಕಲೆಯ ಜೊತೆಗೆ ತಂತ್ರಗಾರಿಕೆಯೂ ಮುಖ್ಯವಾಗಿದೆ. ಮೊದಲಿಗೆ ಕಾರ್ಡುಗಳನ್ನು ರಚಿಸಿಕೊಂಡು ಅವುಗಳ ಮೇಲೆ ಚಿತ್ರಗಳನ್ನು ವರ್ಣವಿನ್ಯಾಸದಿಂದ ರಚನೆ ಮಾಡಲಾಗುತ್ತದೆ. ಇದಕ್ಕೆ ತನ್ನದೇ ಆದ ವಿಧಿ ವಿಧಾನಗಳಿವೆ. ಪ್ರಸ್ತುತ ಕೃತಿಯಲ್ಲಿ ಇಂತಹ ಹಲವು ವಿಷಯಗಳು ಚರ್ಚಿಸಲ್ಪಟ್ಟಿವೆ. ಈ ಪುಸ್ತಕದಲ್ಲಿ ಮುಖ್ಯವಾಗಿ ಗಂಜೀಫಾ ಕಲೆಯ ಸಂಕ್ಷಿಪ್ತ ಇತಿಹಾಸ, ಗಂಜೀಫಾ ಕಲೆಯ ಪ್ರದೇಶಗಳು, ರಚನಾ ವಿಧಾನ, ಗಂಜೀಫಾ ಕಾರ್ಡುಗಳ ತಯಾರಿಕೆ, ಗಂಜೀಫಾ ಕಲೆಯ ಕಾರ್ಡುಗಳಿರುವ ವಸ್ತು ಸಂಗ್ರಹಾಲಯಗಳು, ಬಣ್ಣಗಳು, ಎಲೆಗಳ ವಿನ್ಯಾಸಗಳು, ಗಂಜೀಫಾ ಚಿತ್ರಗಳಲ್ಲಿ ರಚನೆಯಾಗುವ ವಸ್ತು ವಿಷಯಗಳನ್ನು ಕುರಿತು ಸ್ಥೂಲವಾಗಿ ಹೇಳಲಾಗಿದೆ. ಅಲ್ಲಲ್ಲಿ ಗಂಜೀಫಾ ಚಿತ್ರಗಳನ್ನು ಮುದ್ರಿಸಲಾಗಿದೆ.

೧೨. ಪ್ರೊ.ಎಸ್.ಕೆ.ರಾಮಚಂದ್ರರಾವ್ : ಗ್ರಾಮೀಣ ಚಿತ್ರಗಳು : ಕರ್ನಾಟಕ ಜನಪದ ಅಕಾಡೆಮಿ, ಬೆಂಗಳೂರು-೧೯೯೬

೧೩. ಎಂ.ಎಲ್.ಶಿವಶಂಕರ್ : ಗಂಜೀಫಾ : ಪ್ರಾಚ್ಯ ವಸ್ತುಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು -೧೯೯೬

**ಜನಪದ ಕಸೂತಿ :**

ಕನ್ನಡ ವಿಶ್ವವಿದ್ಯಾಲಯವು ಮಂಟಪಮಾಲೆ ಅಡಿಯಲ್ಲಿ ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದಂತೆ ಕಿರು ಪುಸ್ತಕಗಳನ್ನು ಹೊರತಂದಿದೆ. ಇದರಲ್ಲಿ ಕೆಲವು ಕಲೆ ಕುರಿತಾದ ಪುಸ್ತಕಗಳೂ ಇವೆ. ಪ್ರಸ್ತುತ ಕಿರುಹೊತ್ತಿಗೆ 'ಜನಪದ ಕಸೂತಿ' ಡಾ.ಮಧು ವೆಂಕಾರೆಡ್ಡಿಯವರು ಬರೆದಿದ್ದಾರೆ.[೧೪] ಜನಪದ ಕಲಾ ಪ್ರಕಾರಗಳಲ್ಲಿ ಕಸೂತಿಯು ಒಂದು ಪ್ರಮುಖ ಕಲೆಯಾಗಿದ್ದು, ಮಹಿಳಾ ಪ್ರಧಾನವಾಗಿ ಬೆಳೆದುಕೊಂಡು ಬಂದಿದೆ. ಪ್ರಾಚೀನ ಕಾಲದಿಂದ ಇಂದಿನವರೆಗೆ ಹಲವು ಆಯಾಮಗಳಲ್ಲಿ ಬೆಳೆದು ಬಂದ ಕಸೂತಿಕಲೆಯ ವಿವಿಧ ವಿಷಯಗಳು ಸ್ಥೂಲರೂಪದಲ್ಲಿ ಇಲ್ಲಿ ವ್ಯಕ್ತಗೊಂಡಿವೆ. ಇದರಲ್ಲಿ ಜನಪದಕಲೆ, ಚಿತ್ರಕಲೆ, ಜನಪದ ಚಿತ್ರಕಲೆಯ ವರ್ಗೀಕರಣ, ಕಸೂತಿ ಕಲೆಯ ಪ್ರೇರಣೆ, ಪ್ರಸರಣ, ಕಸೂತಿಹೆಣಿಗೆ, ಯಂತ್ರದ ಕಸೂತಿ, ಕರ್ನಾಟಕದ ಕಸೂತಿಪ್ರಕಾರ, ಗಾಂವಟಿ ಕಸೂತಿ, ಮುರಗಿ ಕಸೂತಿ, ನೇಗಿಕಸೂತಿ, ಮೆಂತ್ಯೆಕಸೂತಿ, ಕಸೂತಿಯ ಪರಿಕರಗಳು, ಚಿತ್ರವಿನ್ಯಾಸಗಳು, ಪ್ರಾಕೃತಿಕ ವಿಷಯಗಳು, ಧಾರ್ಮಿಕ, ಸಾಮಾಜಿಕ, ಅಲಂಕಾರಿಕ, ಇತರೆ ವಿಷಯಗಳು, ಕಸೂತಿ ರಚನೆಯ ಸಂದರ್ಭ, ಮಾಧ್ಯಮಗಳು, ನಂಬಿಕೆ, ಸಂಪ್ರದಾಯಗಳು ಹೇಳಲ್ಪಟ್ಟಿವೆ. ಜೊತೆಗೆ ಸಂಭಾವನೆ, ಕಸೂತಿಯ ವಿವಿಧ ದೃಷ್ಟಿಕೋನಗಳು, ಕಸೂತಿ, ಹಚ್ಚೆ, ರಂಗೋಲಿ ಇವುಗಳ ಸಾಮ್ಯತೆ ಸ್ಥಿತ್ಯಂತರಗಳು ವಿವೇಚಿಸಲ್ಪಟ್ಟಿವೆ.

**ಚಿತ್ತಾರ :**

ಮಲೆನಾಡು ಪ್ರದೇಶದ ಜನಪದ ಕಲೆಯ ಬಗೆಗಿರುವ ಈ ಪುಸ್ತಕವನ್ನು ನಾ.ಡಿಸೋಜಾ ಬರೆದಿದ್ದಾರೆ.[೧೫] ಇದು ಮಲೆನಾಡ ಗ್ರಾಮೀಣ ಪ್ರದೇಶದ ಜನಪದ ಚಿತ್ರಕಲೆಯನ್ನು ಕುರಿತು ಪರಿಚಯಿಸುತ್ತದೆ. ಜನಪದ  ಕಲೆ, ಅದರ ರೂಪುರೇಷೆ, ಸ್ವರೂಪ, ಲಕ್ಷಣ ಮತ್ತು ಶೈಲಿಗಳ ಬಗೆಗೆ ಮೊದಲಿಗೆ ಮಾಹಿತಿ ಕೊಡಲಾಗಿದೆ. ನಂತರದಲ್ಲಿ ರಂಗೋಲಿ ಕಲೆಯ ಬಗ್ಗೆ ಹೇಳಲಾಗಿದೆ. ಮಲೆನಾಡು ಪ್ರದೇಶದ ರಂಗೋಲಿಯ ವಿನ್ಯಾಸ, ವಸ್ತುವಿಷಯ, ಪ್ರಕಾರಗಳಲ್ಲದೆ, ರಚನಾವಿಧಾನ ಮತ್ತು ಪರಿಕರಗಳ ಬಗ್ಗೆಯೂ ಚರ್ಚಿಸಲಾಗಿದೆ.

ಹಚ್ಚೆ ಚಿತ್ರಕಲೆಯ ಬಗ್ಗೆ ಹೇಳುತ್ತ ಮಲೆನಾಡ ಪ್ರದೇಶದಲ್ಲಿ ಇದು ಬೆಳೆದ ರೀತಿ, ವೈವಿಧ್ಯತೆ, ನಂಬಿಕೆ, ಹಚ್ಚೆ ಹಾಕುವ ವಿಧಾನ, ಪ್ರಾದೇಶಿಕ ವಿಶೇಷತೆಗಳನ್ನು ಕಟ್ಟಿಕೊಡಲಾಗಿದೆ. ಅದರಂತೆ ಈ ಭಾಗದ ಭಿತ್ತಿಚಿತ್ರಗಳ ಕುರಿತು ಸ್ಥೂಲನೋಟ ಕೊಡುವ ಪ್ರಯತ್ನ ಕಂಡು ಬರುತ್ತದೆ. ಬಣ್ಣಗಾರರು ಎಂಬ ಭಾಗದಲ್ಲಿ ಈ ಪ್ರದೇಶದ ಜನಪದ ಕಲಾವಿದರ ಕಲಾಬದುಕು ಬಿಂಬಿತವಾಗಿದ್ದರೆ, ಕಲಾವಿದರು ಎಂಬ ತಲೆಬರಹದಡಿಯಲ್ಲಿ ವಿವಿಧ ಕಲಾವಿದರ ಪರಿಚಯ ಮಾಡಿಕೊಡಲಾಗಿದೆ. ಹಸೆಗೋಡೆಯ ಅಲಂಕಾರ ಕುರಿತು ಹೇಳುವಾಗ ಅದರ ರಚನಾಕ್ರಮ, ಪರಿಕರಗಳು, ವಸ್ತುವಿಷಯ ಕಲಾತ್ಮಕ ವಿನ್ಯಾಸಗಳನ್ನು ಚರ್ಚಿಸಿದ್ದಾರೆ. ಚಿತ್ತಾರದ ಹಸೆಯನ್ನು ಹೆಚ್ಚಾಗಿ ಬಿಳಿ ಬಣ್ಣದಿಂದ ರಚಿಸಲಾಗುತ್ತಿದ್ದು ಅದಕ್ಕೆ ಬಿಳಿಸುಣ್ಣ, ಅಕ್ಕಿಗಂಜಿ, ಜೇಡಿಮಣ್ಣುಗಳನ್ನು ಬಳಸುತ್ತಾರೆ. ಇಂತಹ ವಿಷಯಗಳ ಜೊತೆಗೆ ಬಣ್ಣಗಳು, ನಿಯಮಗಳು, ವಿವಿಧ ಚಿತ್ತಾರಗಳು, ಬುಟ್ಟಿ ಚಿತ್ತಾರಗಳು, ಹಳದಿ ಚಿತ್ತಾರ, ವಂಕಿಗಿಡ, ಹೆಜ್ಜೆ ವಿನ್ಯಾಸ, ಹೊಸವೇದಿಕೆ, ಹೀಗೆ ವಿಂಗಡಿಸಿಕೊಂಡು ವಿಷಯ ಪ್ರಸ್ತುತಪಡಿಸಲಾಗಿದೆ.

---

೧೪. ಡಾ.ಮಧು ವೆಂಕರೆಡ್ಡಿ : ಜನಪದ ಕಸೂತಿ : ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ–೨೦೦೦

೧೫. ನಾ.ಡಿಸೋಜಾ : ಚಿತ್ತಾರ : ರವೀಂದ್ರ ಮಸ್ತಕಾಲಯ : ಕಾರ್ಗಿಲ್ ಕಾಲೋನಿ ಶಿವಮೊಗ್ಗ– ೨೦೦೨

**ಹಸೆ :**

ಹಸೆ ಚಿತ್ರಕಲೆಯ ಕುರಿತಾದ ಈ ಕೃತಿಯನ್ನು ಬಂದಗದ್ದೆ ರಾಧಾಕೃಷ್ಣ ರಚನೆ ಮಾಡಿದ್ದಾರೆ.[೧೬] ಕರ್ನಾಟಕದ ಮಲೆನಾಡು ಭಾಗದಲ್ಲಿ ಪ್ರಚಲಿತದಲ್ಲಿರುವ ವಿವಿಧ ರೀತಿಯ ಜನಪದ ಕಲಾ ಪ್ರಕಾರಗಳಲ್ಲಿ ಹಸೆ ಚಿತ್ರಕಲೆಯು ಪ್ರಮುಖವಾಗಿದೆ. ಮದುವೆ, ಮುಂಜಿವೆ, ಹಬ್ಬ, ಜಾತ್ರೆ, ಮುಂತಾದ ಶುಭ ಸಮಾರಂಭಗಳಲ್ಲಿ ವಿಶಿಷ್ಟವಾಗಿ ರಚನೆಮಾಡುವ ಈ ಕಲಾಪ್ರಕಾರವು ಆ ಭಾಗದ ಜನರ ಸಾಂಸ್ಕೃತಿಕ ಬದುಕಿನೊಂದಿಗೆ ಬೆಸೆದುಕೊಂಡಿದೆ. ಮನೆಯ ಗೋಡೆ, ಮಂಟಪ, ಕಟ್ಟೆಗಳು, ತುಳಸಿಕಟ್ಟೆ, ಮದುವೆಯ ಸಮಾರಂಭದ ಸ್ಥಳಗಳಲ್ಲಿ, ಬಿದಿರು ಬುಟ್ಟಿಗಳ ಮೇಲೆ ಹಸೆ ಚಿತ್ರಗಳನ್ನು ರಚಿಸಲಾಗುತ್ತದೆ. ಹಸೆ ಚಿತ್ರಗಳನ್ನು ಬರೆಯಲು ಸುಣ್ಣ, ಅಕ್ಕಿಗಂಜಿ, ಅಂಟುದ್ರಾವಕ, ಇವುಗಳ ಜೊತೆಗೆ ಭಿತ್ತಿ ತಯಾರಿಸಲು ಕೆಮ್ಮಣ್ಣು, ಸೆಗಣಿ, ಜೇಡಿಮಣ್ಣುಗಳಂತಹ ಪರಿಕರಗಳನ್ನು ಉಪಯೋಗಿಸುತ್ತಾರೆ. ಕಡ್ಡಿಯ ವಿನ್ಯಾಸದಿಂದ ರಚಿಸಲಾಗುವ ಈ ಚಿತ್ರಗಳಲ್ಲಿ ರೇಖಾ ಮಾದರಿಯ ಚಿತ್ರಗಳು ಹೆಚ್ಚಾಗಿರುತ್ತವೆ.

ಹಸೆ ಚಿತ್ರಗಳ ವಿಷಯಗಳಲ್ಲಿ ರಾಮಾಯಣ, ಮಹಾಭಾರತ, ಸ್ಥಳೀಯ ನಂಬಿಕೆ, ಆಚರಣೆ, ಹನುಮಂತ, ಗರುಡ, ರಾಮನ ತೊಟ್ಟಿಲು, ಸ್ವಸ್ತಿಕ, ಬಾಸಿಂಗ, ಹೂವಿನದಂಡೆ, ತುಳಸಿಕಟ್ಟೆ, ಈಶ್ವರ, ನಂದಿ, ಸೂರ್ಯ, ಚಂದ್ರ, ಮುಂತಾದ ಚಿತ್ರಗಳಿರುತ್ತವೆ. ಬಿದಿರು ಬುಟ್ಟಿಗಳಲ್ಲಿ ಎರಡು ಬಗೆಯ ಬುಟ್ಟಿಗಳಿದ್ದು ಅವು ಆಕಾರದಲ್ಲಿ ಭಿನ್ನವಾಗಿರುತ್ತವೆ. ಅವುಗಳ ಮೇಲೆ ಭಿತ್ತಿಯ ಪದರು ಲೇಪಿಸಿ ನಂತರ ಚಿತ್ರರಚಿಸಲಾಗುವುದು. ಇವುಗಳ ಜೊತೆಗೆ ಒಟ್ಟು ಹಸೆ ಚಿತ್ರಕಲೆಯ ರಚನಾ ವಿಧಾನ, ಪರಿಕರಗಳು, ವಸ್ತುವಿಷಯ, ಶೈಲಿ, ತಾಂತ್ರಿಕತೆ ಮತ್ತು ಪ್ರಕಾರಗಳ ಬಗ್ಗೆ ಸ್ಥೂಲವಾಗಿ ಈ ಕೃತಿಯಲ್ಲಿ ಹೇಳಲಾಗಿದೆ.

**ನಾಗಾರಾಧನೆ ಮತ್ತು ಚಿತ್ರಕಲೆ :**

ಕರಾವಳಿ ಕರ್ನಾಟಕ ಭಾಗದ ವಿಶೇಷ ಕಲಾಪ್ರಕಾರದಲ್ಲಿ ನಾಗಾರಾಧನೆಯೂ ಒಂದು. ಆಚರಣೆ, ಧಾರ್ಮಿಕ ನಂಬಿಕೆ, ಪೂಜಾ ವಿಧಾನಗಳೊಂದಿಗೆ ಚಿತ್ರ ರಚನೆಯನ್ನು ತನ್ನೊಡಲೊಳಗೆ ತುಂಬಿಸಿಕೊಂಡಿರುವ ಈ ನಾಗಾರಾಧನೆಯ ಬಗ್ಗೆ ಉಪಾಧ್ಯಾಯ ಮೂಡುಬೆಳ್ಳ ಪುಸ್ತಕ ಬರೆದಿದ್ದಾರೆ.[೧೭]

ನಾಗಾರಾಧನೆಯು ಪ್ರಮುಖವಾಗಿ ಫಲವಂತಿಕೆಯ ಹಿನ್ನೆಲೆಯಲ್ಲಿ ಆಚರಿಸಲ್ಪಡುವ ಧಾರ್ಮಿಕ ಆಚರಣೆಯಾಗಿದ್ದು, ಚಿತ್ರಕಲೆ ಮುಖ್ಯ ಪಾತ್ರವಹಿಸುತ್ತದೆ. ನಾಗಾರಾಧನೆಯ ಸಂದರ್ಭದಲ್ಲಿ ಬರೆಯುವ ನಾಗಮಂಡಲಗಳು ವಿವಿಧತೆಗಳೊಡನೆ ಸೌಂದರ್ಯಶೀಲತೆ ಮತ್ತು ವರ್ಣ ವೈವಿಧ್ಯತೆ ಹೊಂದಿರುತ್ತವೆ. ಹಳದಿ, ಕೆಂಪು, ಬಿಳಿ, ಕಪ್ಪು, ಹಸಿರು, ನೀಲಿ ಹೀಗೆ ಹಲವಾರು ಬಣ್ಣಗಳ ಹುಡಿಯನ್ನು ಬಳಸಲಾಗುತ್ತದೆ. ರಂಗೋಲಿಯೊಂದಿಗೆ ವರ್ಣಗಳನ್ನು ಬೆರೆಸಿ ವರ್ಣಹುಡಿಯನ್ನು ತಯಾರಿಸಲಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಹುಡಿವರ್ಣಗಳನ್ನೇ ನೇರವಾಗಿ ನಾಗಮಂಡಲದ ಚಿತ್ರ ಬರೆಯಲು ಉಪಯೋಗಿಸುತ್ತಾರೆ. ಇನ್ನೂ ಕೆಲವು ಸಂದರ್ಭಗಳಲ್ಲಿ ಬಣ್ಣಗಳಿಂದ ಬರೆದ ನಾಗಮಂಡಲ ಚಿತ್ರಗಳನ್ನು ವಿವಿಧ ಬಗೆಯ ಹೂಗಳಿಂದ ಅಲಂಕರಿಸಲಾಗುತ್ತದೆ. ನಾಗಾರಾಧನೆಯಲ್ಲಿ ಬರೆಯುವ ನಾಗಮಂಡಲ ಚಿತ್ರಗಳಲ್ಲಿ ನಾಗರೂಪಗಳೇ ಪ್ರಮುಖವಾಗಿದ್ದರೂ ಸೂರ್ಯ, ಚಂದ್ರ, ಸ್ವಸ್ತಿಕ, ಓಂ, ಶ್ರೀ ಇಂತಹ ಸಂಕೇತಗಳು ಸಾಂದರ್ಭಿಕವಾಗಿ ಕಾಣಿಸಿಕೊಳ್ಳುತ್ತವೆ. ಇಂತಹ ಹಲವಾರು ಸಂಗತಿಗಳು ಈ ಪುಸ್ತಕದಲ್ಲಿ ವಿವೇಚಿಸಲ್ಪಟ್ಟಿವೆ. ಈ ಕೃತಿಯಲ್ಲಿ ಮುಖ್ಯವಾಗಿ ನಾಗಾರಾಧನೆಯ ಚಿತ್ರಕಲೆಯ ಉದ್ದೇಶ, ಸ್ವರೂಪ, ಲಕ್ಷಣಗಳು,

೧೬. ಬಂದಗದ್ದೆ ರಾಧಾಕೃಷ್ಣ: ಹಸೆ : ಪುಸ್ತಕ ಹೊಂಬಾಳೆ ಪ್ರಕಾಶನ, ಕೆಳದಿ, ಸಾಗರ-೨೦೦೩

೧೭. ಉಪಾಧ್ಯಾಯ ಮೂಡಬೆಳ್ಳ : ನಾಗಾರಾಧನೆ ಮತ್ತು ಚಿತ್ರಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು-೨೦೦೪

ರಚನಾ ವಿಧಾನ, ರಚನಾ ಪರಿಕರಗಳು, ಶೈಲಿ, ತಂತ್ರಗಾರಿಕೆ, ಪ್ರಭಾವ, ಪ್ರೇರಣೆಗಳಲ್ಲದೆ ನಾಗಮಂಡಲ ಬರೆಯುವ ಕಲಾವಿದರು ಮತ್ತು ನಾಗಮಂಡಲದ ನಂಬಿಕೆ ಆಚರಣೆಗಳ ಕುರಿತಾಗಿ ಚರ್ಚಿಸಲಾಗಿದೆ. ಕರಾವಳಿ ಭಾಗದ ವಿಶಿಷ್ಟ ಕಲಾಪ್ರಕಾರಗಳನ್ನು ತಿಳಿದುಕೊಳ್ಳುವಲ್ಲಿ ಈ ಪುಸ್ತಕ ಸಹಕಾರಿಯಾಗಿದೆ.

**ಚಿತ್ತಾರದ ಗೊಂಬೆ :**

ಜಾನಪದ ಕಲೆಗಳಲ್ಲಿ ತೊಗಲು ಗೊಂಬೆ ಕಲೆಯು ವಿಶೇಷ ಸ್ಥಾನ ಪಡೆದುಕೊಂಡಿದೆ. ಚಿತ್ರ ಶಿಲ್ಪ, ನಾಟಕದಂತಹ ಪ್ರದರ್ಶನ ಕಲೆಗಳನ್ನು ತನ್ನಲ್ಲಿ ಸಂಯುಕ್ತಗೊಳಿಸಿಕೊಂಡಿರುವ ಈ ಕಲಾ ಪ್ರಕಾರದ ಬಗ್ಗೆ ಡಾ.ಸಿ.ಗೋವಿಂದರಾಜು ಪುಸ್ತಕ ಬರೆದಿದ್ದಾರೆ.[೧೮]ಈ ಪುಸ್ತಕದಲ್ಲಿ ತೊಗಲುಗೊಂಬೆ ಚಿತ್ರಕಲೆಯ ವಿವಿಧ ಆಯಾಮಗಳು ಚರ್ಚಿಸಲ್ಪಟ್ಟಿವೆ. ತೊಗಲುಗೊಂಬೆ ಕಲೆಯ ಪ್ರಾಚೀನತೆ, ಐತಿಹಾಸಿಕ ಹಿನ್ನೆಲೆ, ರಚನಾ ಪರಿಕರಗಳು, ರಚನಾ ವಿಧಾನ, ಚಿತ್ರಗಳ ವಸ್ತುವಿಷಯಗಳು, ಚಿತ್ರಗಳ ಶೈಲಿ, ಪ್ರಭಾವ, ಪ್ರೇರಣೆ, ಪ್ರಾದೇಶಿಕ ಭಿನ್ನತೆಗಳಲ್ಲದೆ ಈ ಕಲೆಯ ಕಲಾವಿದರ ಬಗ್ಗೆಯೂ ಇಲ್ಲಿ ವಿವೇಚಿಸಲಾಗಿದೆ. ತೊಗಲುಗೊಂಬೆಯ ಪ್ರದರ್ಶನ ರೀತಿ, ಸಂದರ್ಭಗಳು, ಹಾಡುಗಾರಿಕೆ, ಸಂಭಾಷಣೆ, ಶೈಲಿ, ಕಥಾಪ್ರಸಂಗಗಳು ಹೀಗೆ ಹಲವಾರು ವಿವರಗಳು ಹೇಳಲ್ಪಟ್ಟಿವೆ.

ತೊಗಲುಗೊಂಬೆ ಕಲೆಯು ಬೆಳಕು ನೆರಳು ಮತ್ತು ಬಣ್ಣಗಳ ಸ್ಥಿತ್ಯಂತರಗಳಿಂದುಂಟಾಗುವ ವೈಜ್ಞಾನಿಕ ಪರಿಣಾಮವಾಗಿದೆ. ತೊಗಲುಗೊಂಬೆಗಳನ್ನು ಆಡು, ಜಿಂಕೆ, ಆಕಳು, ಎತ್ತುಗಳ ಚರ್ಮಗಳಿಂದ ತಯಾರಿಸುತ್ತಾರೆ. ಅವುಗಳ ಮೇಲೆ ನೈಸರ್ಗಿಕ ವರ್ಣ ಲೇಪನಮಾಡಿ, ಆಕಾರಕ್ಕೆ ತಕ್ಕಂತೆ ಕತ್ತರಿಸಿ ಬಿದಿರಿಗೆ ಸಿಕ್ಕಿಸಿ ಪ್ರದರ್ಶನಕ್ಕೆ ಅಣಿಗೊಳಿಸುತ್ತಾರೆ. ರಾತ್ರಿ ಸಮಯದಲ್ಲಿ ಪ್ರದರ್ಶಿತವಾಗುವ ಈ ಕಲೆಯಲ್ಲಿ ಗೊಂಬೆಯ ಪಾತ್ರಕ್ಕೆ ಅನುಸಾರವಾಗಿ ಪರದೆಯ ಹಿಂದಿರುವ ಸಹಾಯಕರು ಮಾತನಾಡುತ್ತಾರೆ. ಹಾಡು ವಾದ್ಯಗಳನ್ನು ನುಡಿಸುತ್ತಾರೆ. ರಾಮಾಯಣ, ಮಹಾಭಾರತ, ವಿವಿಧ ಪೌರಾಣಿಕ ಸಂದರ್ಭಗಳನ್ನು ಹೆಚ್ಚಾಗಿ ಪ್ರದರ್ಶಿಸುತ್ತಿದ್ದ ಇವರು ಇತ್ತೀಚೆಗೆ ಆಧುನಿಕ ಸಂದರ್ಭಕ್ಕೆ ಒಗ್ಗಿದ್ದಾರೆ. ಗೊಂಬೆ ಆಡಿಸುವ ಇವರನ್ನು ಕಿಳ್ಳೆಕ್ಯಾತರು ಇಲ್ಲವೆ ಗೊಂಬೆರಾಮರು ಎಂದೂ ಕರೆಯುತ್ತಾರೆ. ಹೀಗೆ ಹಲವಾರು ಸಂಗತಿಗಳು ಈ ಪುಸ್ತಕದಲ್ಲಿ ಹೇಳಲ್ಪಟ್ಟಿವೆ. ಚಿತ್ರಕಲಾ ಕ್ಷೇತ್ರದಲ್ಲಿ ಸಮಕಾಲೀನ ಕಲೆಯ ಸಂದರ್ಭಗಳಲ್ಲಿ ಇಂತಹ ಪ್ರಾಚೀನ ಕಲಾಪ್ರಕಾರಗಳ ತಿಳುವಳಿಕೆ ಎಷ್ಟು ಮಹತ್ವದ್ದು ಎನ್ನುವ ಅಂಶಗಳನ್ನು ಈ ಕೃತಿ ತಿಳಿಸಿಕೊಡುತ್ತದೆ.

**ಬೆಳದಿಂಗಳ ಚಿತ್ರಕಲೆ :**

ಕರ್ನಾಟಕದ ಹಬ್ಬಗಳಲ್ಲಿ ರಚನೆಯಾಗುವ ಚಿತ್ರಕಲೆಗಳಲ್ಲಿ ಬೆಳದಿಂಗಳ ಚಿತ್ರಕಲೆಗೆ ಪ್ರಮುಖ ಸ್ಥಾನವಿದೆ. ಈ ಚಿತ್ರಕಲಾ ಪ್ರಕಾರದ ಬಗ್ಗೆ ಆನಂದ ಪೂಜಾರ ಪುಸ್ತಕ ಬರೆದಿದ್ದಾರೆ.[೧೯]ಈ ಕೃತಿಯಲ್ಲಿ ಬೆಳದಿಂಗಳ ಚಿತ್ರಕಲೆಯ ಕುರಿತು ಅನೇಕ ವಿಷಯಗಳು ಚರ್ಚಿಸಲ್ಪಟ್ಟಿವೆ. ಬೆಳದಿಂಗಳ ಕಲೆಯ ಪ್ರಾಚೀನತೆ, ಐತಿಹಾಸಿಕ ಹಿನ್ನೆಲೆ, ಪ್ರಾದೇಶಿಕ ವಿಶೇಷತೆ, ರಚನಾ ಸಾಮಗ್ರಿಗಳು, ರಚನಾ ವಿಧಾನ, ರಚನಾ ಸಂದರ್ಭದ ಹಾಡುಗಳು, ವಸ್ತು ವಿಷಯಗಳು ಮತ್ತು ಚಿತ್ರಶೈಲಿಗಳ ಬಗ್ಗೆ ವಿವೇಚಿಸಲಾಗಿದೆ. ಬೆಳಧಿಂಗಳ ಚಿತ್ರಕಲೆಯನ್ನು ನಿರ್ಧಿಷ್ಟ ಸಂದರ್ಭದಲ್ಲಿ ರಚಿಸುತ್ತಾರೆ. ಭಾರತ ಹುಣ್ಣಿಮೆ ಐದು ಇಲ್ಲವೆ ಏಳು ದಿನಗಳಿದ್ದಾಗ ಚಿತ್ರ ಬರೆಯಲಾಗುತ್ತದೆ. ಪ್ರತಿಯೊಂದು ದಿನ ಬೇರೆ ಬೇರೆ ಚಿತ್ರ ರಚಿಸಲಾಗುತ್ತದೆ.

---

೧೮. ಡಾ.ಸಿ.ಗೋವಿಂದರಾಜು : ಚಿತ್ತಾರದ ಗೊಂಬೆ : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು-೨೦೦೪

೧೯. ಆನಂದ.ಕೆ.ಪೂಜಾರ : ರಂಗೋಲಿ ಚಿತ್ರಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು- ೨೦೦೪

ಪ್ರತಿ ಸಾಯಂಕಾಲ ಬೆಳದಿಂಗಳ ಚಿತ್ರಕಲೆ ಚಂದಿರನ ಬೆಳಕಿನಲ್ಲಿ ಆಹ್ಲಾದತೆಯನ್ನು ಉಂಟುಮಾಡುತ್ತದೆ. ಉತ್ತರ ಕರ್ನಾಟಕದಲ್ಲಿ ಬೆಳದಿಂಗಳ ಹಾಕುವುದು ಎಂದು ಈ ಆಚರಣೆಯನ್ನು ಕರೆದರೆ, ದಕ್ಷಿಣ ಕರ್ನಾಟಕದ ಭಾಗದಲ್ಲಿ ತಿಂಗಳ ಮಾವನಪೂಜೆ ಎಂದು ಗುರುತಿಸುತ್ತಾರೆ. ಹೆಚ್ಚಾಗಿ ಸ್ತ್ರೀಯರೆ ರಚಿಸುವ ಈ ಕಲಾಪ್ರಕಾರ ಫಲವಂತಿಕೆಯ ಸಂಕೇತವಾಗಿಯೂ ಪ್ರಚಲಿತದಲ್ಲಿದೆ. ಪ್ರತಿಯೊಂದು ದಿನ ರಚಿಸುವ ಬೇರೆ ಬೇರೆ ಚಿತ್ರಗಳ ಹಿನ್ನೆಲೆಯಲ್ಲಿ ಹಾಡುವ ಹಾಡುಗಳು ಆ ಸಂದರ್ಭದ ಚಿತ್ರ ಮತ್ತು ಆಚರಣೆಯ ಸಂಬಂಧಗಳ ಸಂಕೇತದಂತಿರುತ್ತದೆ. ಇಂತಹ ಹಲವಾರು ಸಂಗತಿಗಳು ಇಲ್ಲಿ ವಿವೇಚನೆಗೊಂಡಿವೆ. ಬೆಳದಿಂಗಳ ಚಿತ್ರಕಲೆಯ ಕುರಿತಾಗಿರುವ ಈ ಪುಸ್ತಕವು ಜನಪದ ಚಿತ್ರಕಲೆಯ ಮಹತ್ವ, ಜನಪದರ ಕಲಾತ್ಮಕ ಬದುಕು ಇವುಗಳನ್ನು ತಿಳಿಸುವುದರ ಜೊತೆಗೆ ಚಂದ್ರನ ಬೆಳಕು ಮನುಷ್ಯ ಬದುಕಿನ ಮೇಲೆ ಬೀರುವ ಪರಿಣಾಮಗಳ ಕುರಿತಾದ ವೈಜ್ಞಾನಿಕ ಕಾರಣಗಳ ಬಗೆಗೂ ಬೆಳಕು ಬೀರುತ್ತದೆ.

**ಕಸೂತಿ ಚಿತ್ರಕಲೆ :**

ದಾರ ಮತ್ತು ಬಟ್ಟೆಯ ಸಂಯೋಜನೆಯಿಂದ ವಿಶೇಷವಾಗಿ ರೂಪುಗೊಳ್ಳುವ ಕಲೆ ಕಸೂತಿ ಕಲೆ. ವಿಶ್ವದ ಕರ್ನಾಟಕದ ಕಸೂತಿಕಲೆ 'ಕಸೂತಿ ಚಿತ್ರಕಲೆ' ಈ ಕೃತಿಯನ್ನು ಮಹಾದೇವ ಜಗತಾಪ ರಚನೆಮಾಡಿದ್ದಾರೆ.[೨೦] ಈ ಪುಸ್ತಕದಲ್ಲಿ ಕಸೂತಿ ಕಲೆಯ ಕುರಿತಾಗಿ ಹಲವಾರು ಅಂಶಗಳು ಚರ್ಚಿಸಲ್ಪಟ್ಟಿವೆ. ಕಸೂತಿ ಕಲೆಯ ಪ್ರಾಚೀನತೆ, ಇತಿಹಾಸ, ರಚನಾ ಪರಿಕರಗಳು, ಮಾಧ್ಯಮಗಳು, ರಚನಾ ವಿಧಾನ, ವಸ್ತುವಿಷಯಗಳು, ಶೈಲಿ, ತಂತ್ರಗಾರಿಕೆ, ಪ್ರಭಾವ, ಪ್ರೇರಣೆ ಮತ್ತು ಉಪಯೋಗಿ ಹಿನ್ನೆಲೆಗಳನ್ನು ಕುರಿತು ವಿವೇಚಿಸಲಾಗಿದೆ. ಕಸೂತಿಯನ್ನು ಹತ್ತಿಬಟ್ಟೆ, ರೇಷ್ಮೆ ಬಟ್ಟೆಗಳಲ್ಲದೆ ವಿವಿಧ ಮಾಧ್ಯಮಗಳ ಮೇಲೆಯೂ ರಚಿಸಲಾಗುತ್ತದೆ. ಸೀರೆ ಮೇಲಿನ ಕಸೂತಿ, ಕುಪ್ಪಸದ ಮೇಲಿನ ಕಸೂತಿ, ಹಾಸಿಗೆ, ಹೊದಿಕೆಗಳ ಮೇಲಿನ ಕಸೂತಿ, ಬಾಗಿಲು ಕಿಟಕಿ ಪರದೆಗಳ ಮೇಲಿನ ಕಸೂತಿ, ಅಲಂಕಾರಿಕ ವಿನ್ಯಾಸಗಳ ಮೇಲಿನ ಕಸೂತಿ, ಹೀಗೆ ವಿಂಗಡಣೆ ಮಾಡಲಾಗಿದೆಯಲ್ಲದೆ ಅದರ ರಚನಾ ವಿನ್ಯಾಸಕ್ಕೆ ಅನುಸಾರವಾಗಿ ಮೆಂತೆ ಕಸೂತಿ, ಮುರಗಿ ಕಸೂತಿ, ಕತ್ತರಿ ಕಸೂತಿ, ಜೋಡು ಕಸೂತಿ, ಹೀಗೆ ವರ್ಗೀಕರಿಸಿ ವಿವೇಚನೆ ಮಾಡಲಾಗಿದೆ. ಕಸೂತಿಯನ್ನು ಸೂಜಿದಾರಗಳನ್ನು ಬಳಸಿ ಕೈಯಿಂದ ರಚಿಸಬಹುದಾದರೂ ಇಂದಿನ ಆಧುನಿಕ ದಿನಗಳಲ್ಲಿ ಕಸೂತಿ ರಚನೆಗಾಗಿ ಯಂತ್ರಗಳು ಬಂದಿವೆ. ಇಂತಹ ಅನೇಕ ವಿಚಾರಗಳು ಇಲ್ಲಿ ಚರ್ಚಿಸಲ್ಪಟ್ಟಿವೆ.

ಈ ಪುಸ್ತಕವು ಜನಪದ ಚಿತ್ರಕಲಾ ಪ್ರಕಾರದಲ್ಲಿ ಮುಖ್ಯವಾದ ಕಸೂತಿ ಕಲೆ ಬಗ್ಗೆ ಸ್ಥೂಲ ಮಾಹಿತಿ ನೀಡುತ್ತದೆ. ಪ್ರಾಚೀನರ ಕಲಾಬದುಕು, ಸೌಂದರ್ಯಪ್ರಜ್ಞೆ ಮತ್ತು ಸಾಂಸ್ಕೃತಿಕ ಮಹತ್ವವನ್ನು ತಿಳಿಸಿಕೊಡುತ್ತದೆ. ಸಮಕಾಲೀನ ಕಲಾವಲಯದಲ್ಲಿ ಪ್ರಾಚೀನ ಕಲಾಪ್ರಕಾರಗಳ ಬಳಕೆಯ ಸಂವೇದನೆಗಳನ್ನು ತಿಳಿಸುತ್ತದೆ.

**ರಂಗೋಲಿ ಚಿತ್ರಕಲೆ :**

ಪ್ರಾಚೀನ ಕಲಾಪ್ರಕಾರಗಳು ಪೂರ್ವಜರ ಆಂತರಿಕ ಮತ್ತು ಬಾಹ್ಯ ಬದುಕುಗಳನ್ನು ಸುಂದರಗೊಳಿಸಿವೆ. ಜನಪದರ ಜೀವನಾಡಿಯಾಗಿ, ಸಾಂಸ್ಕೃತಿಕ ಹಿರಿಮೆಯಾಗಿ, ಅವರ ಕಲಾಬದುಕಿನ ಆಚರಣೆಯಾಗಿ ರಂಗೋಲಿ ಕಲೆ ಬೆಳೆದು ಬಂದಿರುವುದು ಮಾತ್ರವಲ್ಲದೆ ಇಂದಿಗೂ ತನ್ನ ವಿಶಿಷ್ಟತೆಯನ್ನು

೨೦. ಮಹಾದೇವ ಜಗತಾಪ : ಕಸೂತಿ ಚಿತ್ರಕಲೆ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೪

ಉಳಿಸಿಕೊಂಡಿದೆ. ಇಂತಹ ಮಹತ್ವ ಪೂರ್ಣವಾದ ರಂಗೋಲಿ ಚಿತ್ರಕಲೆಯ ಬಗ್ಗೆ ಡಾ.ಎಸ್.ಸಿ.ಪಾಟೀಲ ಪುಸ್ತಕ ಬರೆದಿದ್ದಾರೆ.[೨೧] ಈ ಕೃತಿಯಲ್ಲಿ ರಂಗೋಲಿ ಚಿತ್ರಕಲೆಯ ಐತಿಹಾಸಿಕ ಹಿನ್ನೆಲೆ, ಪ್ರಾದೇಶಿಕ ವೈಶಿಷ್ಟ್ಯತೆ, ರಂಗೋಲಿ ಚಿತ್ರಕಲೆಯ ಪ್ರಕಾರಗಳು, ಪರಿಕರಗಳು, ರಚನಾ ವಿಧಾನ, ರಂಗೋಲಿ ಕಲೆಯ ರಚನಾ ಸಂದರ್ಭಗಳು, ವಸ್ತುವಿಷಯಗಳು, ನಂಬಿಕೆ, ಆಚರಣೆಗಳು, ರಚನಾಕಾರರು, ವೈವಿಧ್ಯತೆ ಹಾಗೂ ಶೈಲಿಗಳ ಕುರಿತಾಗಿ ವಿವೇಚಿಸಲಾಗಿದೆ. ಪ್ರಾಚೀನ ಪರಂಪರೆ ಹೊಂದಿದ ರಂಗೋಲಿ ಚಿತ್ರಕಲೆಯು ವಿವಿಧ ಸಂದರ್ಭಗಳಲ್ಲಿ ರಚನೆಯಾಗಿರುತ್ತದೆ. ದಿನನಿತ್ಯ ಬಾಗಿಲ ಮುಂದೆ ಹಾಕುವ ರಂಗೋಲಿಯಿಂದ ತೊಡಗಿ ಬೇರೆ ಬೇರೆ ಹಬ್ಬ ಹರಿದಿನ, ಶುಭಕಾರ್ಯ, ಮದುವೆ ಮುಂಜಿವೆಗಳಲ್ಲಿ ರಚಿಸಲ್ಪಡುತ್ತದೆ. ಮಾಟ-ಮಂತ್ರಗಳ ಆವಾಹಣೆ, ಸಿದ್ಧಿ-ಸಾಧನಗಳ ಕ್ರಿಯಾ ವಿಧಾನಗಳಲ್ಲಿ, ಮೋಡಿಯಾಟ, ದುಷ್ಟಶಕ್ತಿಗಳ ವಶೀಕರಣ ಸಂದರ್ಭ, ಹೀಗೆ ಭಯಾನಕ ಆಚರಣೆಗಳಲ್ಲಿ ಈ ಕಲಾಪ್ರಕಾರ ಬಳಸಲ್ಪಡುತ್ತದೆ. ಕರಾವಳಿ ಭಾಗದ ನಾಗಮಂಡಲ, ಭೂತಾರಾಧನೆ ಸಂದರ್ಭಗಳಲ್ಲಿ ವಿಶಿಷ್ಟ ರೀತಿಯ ರಂಗೋಲಿ ರಚಿಸಲಾಗುತ್ತದೆ. ಇಂತಹ ಅನೇಕ ವಿಚಾರಗಳು ಈ ಕೃತಿಯಲ್ಲಿ ಚರ್ಚಿಸಲ್ಪಟ್ಟಿವೆ.

ಈ ಪುಸ್ತಕವು ಜನಪದ ಮತ್ತು ಶಿಷ್ಟಪದ ಕಲೆಗಳ ಸಮನ್ವಯದ ಕೊಂಡಿಯಂತಿರುವ ರಂಗೋಲಿ ಚಿತ್ರಕಲೆಯ ಕುರಿತಾಗಿದ್ದು, ಆಧುನಿಕ ಜೀವನ ಪದ್ಧತಿಯಲ್ಲಿ ಈ ಕಲಾಪ್ರಕಾರದ ಅನಿವಾರ್ಯತೆಯನ್ನು ಬಿಂಬಿಸುತ್ತದೆ. ಅಲ್ಲದೆ ಕಲಾಕ್ಷೇತ್ರದಲ್ಲಿ ಹೊಸ ಆಯಾಮಗಳನ್ನು ಸೃಷ್ಟಿಸುವಲ್ಲಿ ಮಾರ್ಗದರ್ಶಿಯಾಗಿದೆ.

**ಶೀಗಿ ಚಿತ್ರಕಲೆ :**

ಭಾರತೀಯ ಹಬ್ಬಗಳು ವಿವಿಧ ಕಲೆಗಳನ್ನು ಪೋಷಿಸಿಕೊಂಡು ಬಂದಿವೆ. ಅವುಗಳಲ್ಲಿ ಚಿತ್ರಕಲೆಯು ಒಂದು ಮುಖ್ಯವಾದ ಕಲಾ ಪ್ರಕಾರವಾಗಿದೆ. ವಿವಿಧ ಹಬ್ಬಗಳು ಮತ್ತು ಆಚರಣೆಗಳ ಹಿನ್ನೆಲೆಯಲ್ಲಿ ಚಿತ್ರರಚನೆ ಮಾಡಲಾಗುತ್ತದೆ. ಕರ್ನಾಟಕದಲ್ಲಿ ಆಚರಣೆಯಲ್ಲಿರುವ ಶೀಗಿ ಸಂಪ್ರದಾಯದಲ್ಲಿ ವೈವಿಧ್ಯ ಚಿತ್ರರಚನೆ ನಡೆಯುತ್ತದೆ. ಈ ಚಿತ್ರಕಲೆಗೆ ಶೀಗಿ ಚಿತ್ರಕಲೆ ಎನ್ನಲಾಗುತ್ತದೆ. ಶೀಗಿ ಚಿತ್ರಕಲೆಯ ಬಗ್ಗೆ ಡಾ.ಯಾದಪ್ಪ ಪರದೇಶಿಯವರು ಪುಸ್ತಕ ರಚಿಸಿದ್ದಾರೆ.[೨೨] ಈ ಕೃತಿಯಲ್ಲಿ ಶೀಗಿ ಆಚರಣೆಯಲ್ಲಿ ರಚನೆಯಾಗುವ ಚಿತ್ರಕಲೆಯ ವಿವರಗಳನ್ನು ಕೊಡಲಾಗಿದೆ. ಉತ್ತರ ಕರ್ನಾಟಕ ಭಾಗದಲ್ಲಿ ವಿಶೇಷವಾಗಿ ರಚನೆಯಾಗುವ ಈ ಕಲಾಪ್ರಕಾರದ ರಚನಾ ಉದ್ದೇಶ, ರಚನಾ ವಿಧಾನ, ಪರಿಕರಗಳು, ಸ್ವರೂಪ,ಶೈಲಿ, ವಸ್ತುವಿಷಯ ಮತ್ತು ರಚನಾಕಾರರು, ಆ ಸಂದರ್ಭದಲ್ಲಿ ಹೇಳಲಾಗುವ ಹಾಡುಗಳನ್ನು ಕುರಿತು ಚರ್ಚಿಸಲಾಗಿದೆ. ಶೀಗಿ ಹುಣ್ಣಿಮೆ ಏಳು ದಿನವಿದ್ದಾಗ ಪ್ರತಿ ಸಂಜೆ ಮನೆಯ ಹೊರಭಾಗ ಮತ್ತು ಒಳಭಾಗಗಳ ಗೋಡೆಗಳಲ್ಲಿ ಈ ಶೀಗಿ ಚಿತ್ರಗಳನ್ನು ರಚಿಸಲಾಗುತ್ತದೆ. ಹೊರಭಾಗದ ಚಿತ್ರಗಳು ಉಬ್ಬುಶಿಲ್ಪದ ವಿನ್ಯಾಸದಲ್ಲಿದ್ದು ಸಗಣಿ, ಜೇಡಿಮಣ್ಣುಗಳಿಂದ ರಚನೆಯಾದರೆ, ಒಳಭಾಗದ ಗೋಡೆಯ ಚಿತ್ರಗಳು ವರ್ಣಗಳಿಂದ ರಚಿತವಾಗುತ್ತವೆ. ಏಳು ದಿನಗಳಲ್ಲಿ ಪ್ರತಿಯೊಂದು ದಿನವೂ ಬೇರೆ ಬೇರೆ ವಿಷಯದ ಚಿತ್ರಗಳನ್ನು ಬರೆಯಲಾಗುತ್ತದೆ. ಇಂತಹ ಅನೇಕ ವಿಷಯಗಳನ್ನು ಇಲ್ಲಿ ವಿವೇಚಿಸಲಾಗಿದೆ. ಈ ಕೃತಿಯು ಕರ್ನಾಟಕದ ಜನಪದ ಚಿತ್ರಕಲಾ ಪ್ರಕಾರಗಳಲ್ಲಿ ಮಹತ್ವದ್ದಾಗಿರುವ ಮತ್ತು ನಶಿಸುತ್ತಿರುವ ಶೀಗಿ ಚಿತ್ರಕಲೆಯ ಬಗ್ಗೆ ಬೆಳಕು ಬೀರುತ್ತದೆ.

೨೧. ಡಾ.ಎಸ್.ಸಿ.ಪಾಟೀಲ : ರಂಗೋಲಿ ಚಿತ್ರಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು- ೨೦೦೪

೨೨. ಡಾ.ಯಾದಪ್ಪ ಪರದೇಶಿ : ಶೀಗಿ ಚಿತ್ರಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು- ೨೦೦೪

ಪ್ರಾಚೀನ ಪರಂಪರೆ, ನಂಬಿಕೆ, ಆಚರಣೆ, ಸಾಂಸ್ಕೃತಿಕ ವಿವರಗಳನ್ನು ಕಟ್ಟಿಕೊಡುವ ಈ ಕೃತಿಯು ಸಮಕಾಲೀನ ಕಲಾ ಜಗತ್ತಿಗೂ ಪ್ರಸ್ತುತವಾಗಿದೆ. ನಮ್ಮ ಸಂಸ್ಕೃತಿಯ ಮೂಲ ಬೇರುಗಳ ಸತ್ವವನ್ನು ಸಮಕಾಲೀನ ಸಂದರ್ಭದಲ್ಲಿ ಅಳವಡಿಸಿಕೊಳ್ಳುವ ಅನಿವಾರ್ಯತೆಯನ್ನು ಈ ಕೃತಿ ತಿಳಿಸುತ್ತದೆ.

**ಹಚ್ಚೆ ಚಿತ್ರಕಲೆ :**

ಮಾನವನ ಮೈಮೇಲೆ ರಚಿಸಲಾಗುವ ಹಚ್ಚೆ ಚಿತ್ರಕಲೆಯು ಆತನ ಮೈಮನಸ್ಸುಗಳೊಂದಿಗೆ ಬೆರೆತುಕೊಂಡಿರುವ ಕಲಾಪ್ರಕಾರವಾಗಿದೆ. ಇದರ ಬಗ್ಗೆ ಡಾ.ಎಸ್.ಸಿ.ಪಾಟೀಲ ಪುಸ್ತಕ ಬರೆದಿದ್ದಾರೆ.[೨೩] ರಾಜ್ಯ ಲಲಿತಕಲಾ ಅಕಾಡಮಿಯವರು ಪ್ರಕಟಿಸಿದ್ದಾರೆ. ಹಚ್ಚೆ ಚಿತ್ರಕಲೆಯ ಬಗ್ಗೆ ಅನೇಕ ವಿವರಗಳಿವೆ. ಈ ಕಲೆಯ ಐತಿಹಾಸಿಕ ಹಿನ್ನೆಲೆ, ಪ್ರಾಚೀನತೆ, ಪ್ರಾದೇಶಿಕ ವಿಶಿಷ್ಟತೆ, ರಚನಾ ಪರಿಕರಗಳು, ರಚನಾ ವಿಧಾನ, ಹಚ್ಚೆಯ ಬಗೆಗಿನ ನಂಬಿಕೆಗಳು, ಹಚ್ಚೆ ಕಲಾವಿದರ ಶೈಲಿ, ಪ್ರಭಾವ ಮತ್ತು ಪ್ರೇರಣೆಗಳ ಕುರಿತಾಗಿ ವಿವೇಚಿಸಲಾಗಿದೆ.

ಹಚ್ಚೆ ಕಲೆಯು ವಿಶ್ವದಾದ್ಯಂತ ಅನೇಕ ಪ್ರಾಂತಗಳಲ್ಲಿ ಪ್ರಚಲಿತದಲ್ಲಿದೆ. ಭಾರತದಲ್ಲಿ ಸಿಂಧೂ ನಾಗರಿಕತೆಯ ಕಾಲದಲ್ಲಿ ರೂಢಿಯಲ್ಲಿದ್ದ ಬಗ್ಗೆ ಸಾಕ್ಷ್ಯಗಳು ದೊರಕಿವೆ. ಇಜಿಪ್ತ, ಗ್ರೀಕ್, ಮೆಸೊಪೆಟೋಮಿಯಾ ನಾಗರಿಕತೆಗಳಲ್ಲೂ ಇದರ ಕುರುಹುಗಳು ಲಭ್ಯವಾಗಿವೆ. ಇಂತಹ ಪ್ರಾಚೀನ ಪರಂಪರೆ ಹೊಂದಿದ ಹಚ್ಚೆ ಚಿತ್ರಕಲೆಯು ಪಾಶ್ಚಾತ್ಯ ದೇಶಗಳಲ್ಲಿ ಒಂದು ರೀತಿಯ ಫ್ಯಾಶನ್ ಎಂಬಂತಾಗಿದೆ. ಸ್ತ್ರೀ, ಪುರುಷರಾದಿಯಾಗಿ ವಿವಿಧ ವಯೋಮಾನದವರು ಮೈತುಂಬ ಹಚ್ಚೆ ಹಾಕಿಸಿಕೊಳ್ಳುತ್ತಿದ್ದಾರೆ. ಮೊದಲಿಗೆ ಕಪ್ಪು ನೀಲಿ, ಹಸಿರು ಮಿಶ್ರಿತ ಹಚ್ಚೆವರ್ಣ ಬಳಕೆಯಲ್ಲಿದ್ದರೆ, ಇಂದು ಪಾಶ್ಚಾತ್ಯರಲ್ಲಿ ಹಲವಾರು ಬಣ್ಣಗಳಲ್ಲಿ ಹಚ್ಚೆ ಹಾಕಲಾಗುತ್ತದೆ. ಹಚ್ಚೆಯನ್ನು ಹಾಕುವ ಸಂದರ್ಭ, ಹಾಡುಗಳು, ಭಾರತೀಯ ಸಂಸ್ಕೃತಿಯಲ್ಲಿ ಹಚ್ಚೆಗಿರುವ ಸ್ಥಾನಮಾನ ಮುಂತಾದ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ. ಈ ಕೃತಿಯು ಹಚ್ಚೆ ಚಿತ್ರಕಲೆಯ ಮೂಲಕ ಸಾಂಸ್ಕೃತಿಕ, ಸಾಮಾಜಿಕ, ಐತಿಹಾಸಿಕ, ಕಲಾತ್ಮಕ ಬದುಕಿನ ವಿವರಗಳನ್ನು ಬಿಚ್ಚಿಡುತ್ತದೆ. ಆಂತರಿಕ ಮತ್ತು ಬಾಹ್ಯ ಬದುಕಿನಲ್ಲಿ ಹಚ್ಚೆ ಕಲೆಯು ಬೀರುವ ಪರಿಣಾಮಗಳು ಇಲ್ಲಿ ಚರ್ಚಿಸಲ್ಪಟ್ಟಿವೆ. ಕಲಾಕ್ಷೇತ್ರಕ್ಕೆ ಮಾತ್ರವಲ್ಲದೆ ಸಾಮಾಜಿಕ ಕ್ಷೇತ್ರಕ್ಕೂ ಈ ಕೃತಿ ಉತ್ತಮ ಕೊಡುಗೆಯಾಗಿದೆ.

**ಬಿದರಿ ಚಿತ್ರಕಲೆ :**

ಕರ್ನಾಟಕದ ಕಲಾವಲಯದಲ್ಲಿ ಬಿದರಿ ಕಲೆಗೆ ಈ ಚಿತ್ರಕಲಾ ಪ್ರಕಾರದ ಬಗ್ಗೆ ವಿ.ಎಮ್. ಬಾಗಾಯತ್ ಪುಸ್ತಕ ಬರೆದಿದ್ದಾರೆ.[೨೪] ಬೀದರಿನಲ್ಲಿ ಆಳ್ವಿಕೆ ಮಾಡಿದ ಬಹಮನಿ ಸುಲ್ತಾನರ ಕಾಲದಿಂದ ಬೆಳೆದು ಬಂದ ಈ ಕಲಾಪ್ರಕಾರವು ಅಂತರಾಷ್ಟ್ರೀಯ ಮನ್ನಣೆ ಪಡೆದುಕೊಂಡಿದೆ. ಉಪಯೋಗಿ ವಸ್ತುಗಳ ಮೇಲೆ ಅದರಲ್ಲೂ ಲೋಹ ಪಾತ್ರೆಗಳ ಮೇಲೆ ಮತ್ತು ಮೂರ್ತಿಗಳ ಮೇಲೆ ರಚಿಸಲಾಗುವ ಈ ಕಲೆಯು ಕರ್ನಾಟಕದ ಬೀದರ್ ಪ್ರಾಂತ್ಯದಲ್ಲಿ ಮಾತ್ರ ರಚನೆಯಾಗುತ್ತದೆ, ಅಲ್ಲಿನ ವಿಶಿಷ್ಟ ಗುಣಹೊಂದಿರುವ ಮಣ್ಣು ಇದಕ್ಕೆ ಕಾರಣ ಎನ್ನಲಾಗುತ್ತದೆ. ಇಂತಹ ವಿಷಯಗಳು ಇದರಲ್ಲಿ ಚರ್ಚಿಸಲ್ಪಟ್ಟಿವೆ. ಈ ಪುಸ್ತಕವು ಬಿದರಿಕಲೆಯ ಐತಿಹಾಸಿಕ ಹಿನ್ನೆಲೆ, ರಚನಾ ಪರಿಕರಗಳು,ವಿಧಾನ,

---

೨೩. ಡಾ.ಎಸ್.ಸಿ.ಪಾಟೀಲ : ಹಚ್ಚ ಚಿತ್ರಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು- ೨೦೦೪

೨೪. ವಿ.ಎಮ್.ಬಾಗಾಯತ್ : ಬಿದರಿ ಚಿತ್ರಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು- ೨೦೦೪

ವಸ್ತುವಿಷಯಗಳು, ಕಲಾವಿದರು, ಶೈಲಿ, ಮಾರಾಟ ವ್ಯವಸ್ಥೆ, ಪ್ರಭಾವ, ಪ್ರೇರಣೆ ಇವುಗಳ ಜೊತೆಗೆ ಸಮಕಾಲೀನ ಕಲಾಕ್ಷೇತ್ರ ಮತ್ತು ವಾಣಿಜ್ಯ ಕ್ಷೇತ್ರಗಳಲ್ಲಿ ಬಿದರಿ ಕಲೆಯ ಸ್ಥಾನಮಾನಗಳನ್ನು ಕುರಿತು ಚರ್ಚಿಸಲಾಗಿದೆ. ಬಿದರಿ ಚಿತ್ರಕಲೆಯ ರಚನಾ ವಿಧಾನ ಕುತೂಹಲವಾಗಿದೆ. ಮೊದಲಿಗೆ ಕಪ್ಪು ಮಣ್ಣಿನಿಂದ ಪಾತ್ರೆಗಳನ್ನು ಹದವಾದ ಬೆಂಕಿಯಲ್ಲಿ ಸುಟ್ಟು ಅದರ ಮೇಲೆ ಚೂಪಾದ ಸಾಧನಗಳಿಂದ ಚಿತ್ರಗಳನ್ನು ಕೊರೆಯುತ್ತಾರೆ. ನಂತರ ಹೀಗೆ ಕೊರೆದ ಚಿತ್ರಗಳ ಹೊರ ರೇಖೆಯ ತಗ್ಗಿನಲ್ಲಿ ಬಂಗಾರ, ಬೆಳ್ಳಿ, ಅಬ್ರಕ, ಸೀಸ, ತಾಮ್ರ ಮುಂತಾದ ಲೋಹದ ರಸವನ್ನು ಹಾಕುತ್ತಾರೆ. ನಂತರ ಇದು ಒಣಗಿದ ಮೇಲೆ ನುಣುಪುಗೊಳಿಸಲು ಪಾಲಿಸ್ ಮಾಡುತ್ತಾರೆ. ಹೀಗೆ ಈ ಕಲೆಯ ಸಮಗ್ರ ರಚನಾ ವಿಧಾನದ ಜೊತೆಗೆ ಹಲವಾರು ಸಂಗತಿಗಳು ಇಲ್ಲಿ ಹೇಳಲ್ಪಟ್ಟಿವೆ.

ಈ ಪುಸ್ತಕವು ಬಹಮನಿ ಸುಲ್ತಾನರ ಕಾಲದ ವಿಶೇಷ ಕಲಾ ಪ್ರಕಾರದ ಬಗ್ಗೆ ಬೆಳಕು ಚೆಲ್ಲುವುದರ ಜೊತೆಗೆ ಕಲಾವಲಯದ ವಾಣಿಜ್ಯಿಕ ಅಂಶಗಳನ್ನು ಸಮಕಾಲೀನ ಬದುಕಿನಲ್ಲಿ ಹೇಗೆ ಅಳವಡಿಸಿಕೊಳ್ಳಬೇಕು ಎಂಬುದರ ಬಗ್ಗೆ ಸ್ಥೂಲ ನೋಟ ಕೊಡುತ್ತದೆ.

**ಯಕ್ಷಗಾನ ಮತ್ತು ಚಿತ್ರಕಲೆ :**

ಕರಾವಳಿ ಭಾಗದ ಪ್ರಮುಖ ಪ್ರದರ್ಶನ ಕಲೆಯಾದ ಯಕ್ಷಗಾನವು ಸಂಗೀತ, ಸಾಹಿತ್ಯ, ನೃತ್ಯ ಮತ್ತು ಚಿತ್ರಕಲೆಗಳಂತಹ ಪೂರಕ ಕಲೆಗಳನ್ನು ಪೋಷಿಸಿಕೊಂಡು ಬಂದಿದೆ. ಕರಾವಳಿ ಭಾಗವನ್ನು ಸಂಕೇತಿಸುವ ಪ್ರಮುಖ ಲಕ್ಷಣವಾಗಿಯೂ ಈ ಕಲಾ ಪ್ರಕಾರ ವಿಶಿಷ್ಟತೆ ಪಡೆದುಕೊಂಡಿದೆ. ಈ ಕಲೆಯಲ್ಲಿರುವ ಚಿತ್ರಕಲಾ ಅಂಶಗಳ ಬಗ್ಗೆ ಉಪಾಧ್ಯಾಯ ಮೂಡುಬೆಳ್ಳ ಪುಸ್ತಕ ಬರೆದಿದ್ದಾರೆ.[೨೫] ಯಕ್ಷಗಾನದಲ್ಲಿ ಬರುವ ಚಿತ್ರಕಲಾ ಅಂಶಗಳ ಬಗ್ಗೆ ಪ್ರಮುಖವಾಗಿ ಈ ಪುಸ್ತಕ ಬೆಳಕು ಬೀರುತ್ತದೆ. ಯಕ್ಷಗಾನದ ಮುಖವರ್ಣಿಕೆ, ರಂಗಸಜ್ಜಿಕೆ, ವೇಷಭೂಷಣಗಳು, ಆಯುಧಗಳು, ಹೀಗೆ ಹಲವು ರೀತಿಯಲ್ಲಿ ಕಂಡುಬರುವ ಚಿತ್ರಕಲಾ ಅಂಶಗಳನ್ನು ಇಲ್ಲಿ ವಿವೇಚಿಸಲಾಗಿದೆ. ತೆಂಕುತಿಟ್ಟು ಮತ್ತು ಬಡಗುತಿಟ್ಟು ಪ್ರಕಾರಗಳ ಕಲಾ ಅಂಶಗಳನ್ನು ವಿಭಿನ್ನವಾಗಿ ನೋಡುವುದರ ಜೊತೆಗೆ ತೌಲನಿಕವಾಗಿ ಚರ್ಚಿಸಲಾಗಿದೆ.

ಪ್ರತಿಯೊಂದು ಪಾತ್ರವು ಬೇರೆ ಬೇರೆ ರೀತಿಯ ಮುಖವರ್ಣಿಕೆ ಹೊಂದಿರುತ್ತವೆ. ದೇವತೆಗಳು, ರಾಕ್ಷಸರು, ಸಾಮಾನ್ಯರು, ಸ್ತ್ರೀಯರು, ಪುರುಷರು ಹೀಗೆ ವೈವಿಧ್ಯ ಪಾತ್ರಗಳಿಗೆ ಅದರದ್ದೇ ಆದ ಮುಖವರ್ಣಿಕೆ ಮತ್ತು ವೇಷ–ಭೂಷಣಗಳಿವೆ. ಯಕ್ಷಗಾನದ ಕಿರೀಟ, ಆಯುಧಗಳು ವಿವಿಧ ಬಗೆಯ ರೇಖಾವಿನ್ಯಾಸ ಮತ್ತು ಬಣ್ಣ ಲೇಪನದಿಂದ ಅಲಂಕೃತಗೊಂಡಿವೆ. ಇಂತಹ ವಿಷಯಗಳನ್ನು ಇಲ್ಲಿ ವಿವೇಚಿಸಲಾಗಿದೆ.

ಯಕ್ಷಗಾನ ಮುಖವರ್ಣಿಕೆಯಲ್ಲಿ ಬಳಸುವ ಪ್ರಾಕೃತಿಕ ವರ್ಣಗಳು, ಪರಿಕರಗಳು, ರಚನಾ ವಿಧಾನ, ವಿನ್ಯಾಸ, ಶೈಲಿ, ಪ್ರಭಾವ, ಪ್ರೇರಣೆ ಮತ್ತು ಪ್ರಾದೇಶಿಕ ವಿಶೇಷತೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಚೌಕಿಮನೆ, ಬಣ್ಣದಮನೆ, ರಂಗಸ್ಥಳ ಇವುಗಳ ಕಲಾಅಂಶಗಳನ್ನು ಇಲ್ಲಿ ಪರಿಶೀಲಿಸಲಾಗಿದೆ. ಯಕ್ಷಗಾನ ಕಲೆಯಲ್ಲಿ ಒಳಗೊಳ್ಳುವ ಚಿತ್ರಕಲಾ ಅಂಶಗಳ ಬಗ್ಗೆ ಸ್ಥೂಲವಾದ ಮಾಹಿತಿಯನ್ನು ಈ ಪುಸ್ತಕ ಒದಗಿಸುತ್ತದೆ.

---

೨೫. ಉಪಾಧ್ಯಾಯ ಮೂಡಬೆಳ್ಳ : ಯಕ್ಷಗಾನ ಮತ್ತು ಚಿತ್ರಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು–೨೦೦೪.

**ಕರ್ನಾಟಕದ ಜನಪದ ಚಿತ್ತಾರಗಳು ಹಾಗೂ ಶಿಲ್ಪಗಳು :**

ಜನಪದ ಕಲಾಪ್ರಕಾರಗಳಲ್ಲಿ ವೈವಿಧ್ಯತೆ, ವೈಶಿಷ್ಟ್ಯತೆ ಇರುವಂತೆ ಸಹಜ ಅಭಿವ್ಯಕ್ತಿಯ ಆನಂದದಾಯಕ ರಸಪ್ರಸಂಗಗಳೂ ಇವೆ. ಜನಪದ ಕಲೆಗಳಲ್ಲಿ ಶಿಷ್ಟಪರಂಪರೆಯ ರಚನೆಗಳಿಗಿಂತ ಭಿನ್ನವಾದ ಸಹಜಾಭಿವ್ಯಕ್ತಿಯ ರೂಪಗಳು ಮೈದಾಳುತ್ತವೆ. ಚಿತ್ರಶಿಲ್ಪಗಳಿಗೆ ಈ ಮಾತು ಇನ್ನಷ್ಟು ಹತ್ತಿರವಾಗುತ್ತದೆ. ಕರ್ನಾಟಕದ ಜನಪದ ಕಲಾಕ್ಷೇತ್ರದಲ್ಲಿ ವಿವಿಧ ಬಗೆಯ ಚಿತ್ರಶಿಲ್ಪಗಳು ವಿವಿಧ ಸಂದರ್ಭ ಮತ್ತು ಸನ್ನಿವೇಶಗಳಲ್ಲಿ ರಚನೆಯಾಗುತ್ತವೆ. ಇಂತಹ ಕೆಲವು ಜನಪದ ಚಿತ್ತಾರಗಳು ಮತ್ತು ಶಿಲ್ಪಗಳ ಬಗ್ಗೆ ಪ್ರಸ್ತುತ ಪುಸ್ತಕವನ್ನು ಮಹಾದೇವ ಜಗತಾಪ ರಚಿಸಿದ್ದಾರೆ.[೨೬] ಒಟ್ಟು ಹದಿನೆಂಟು ಅಧ್ಯಾಯಗಳಲ್ಲಿ ವಿಷಯ ನಿರೂಪಿಸಲಾಗಿದೆ. ಆರು ಅಧ್ಯಾಯಗಳು ಪ್ರಾಚೀನ ಭಿತ್ತಿಚಿತ್ರಗಳಿಗೆ ಸಂಬಂಧಿಸಿದ್ದರೆ, ಇನ್ನುಳಿದವು ಬೇರೆ ಬೇರೆ ಕಲಾ ಪ್ರಕಾರಗಳಿಗೆ ಒಳಪಟ್ಟಿವೆ. ಕಾರ್ಮಿಕರ ಕೈಚಳಕ, ಚಂದ್ರಕಾಳಿಯ ಚಿತ್ತಾರದ ಸೀರೆ ಇವು ನೇಯ್ಗೆ ಕಲೆಗೆ ಸಂಬಂಧಿಸಿದ್ದರೆ, ಮಂಗಲಕಾರ್ಯಕ್ರಮದ ಚಿತ್ತಾರಗಳು, ಬೆಳದಿಂಗಳ ಚಿತ್ತಾರ, ಇವು ವಿವಿಧ ಹಬ್ಬಗಳಲ್ಲಿ ಗೋಡೆ, ನೆಲಹಾಸಿನ ಮೇಲೆ ಬರೆಯುವ ಚಿತ್ರಗಳಿಗೆ ಸಂಬಂಧಿಸಿವೆ. ಯುಗಾದಿಯ ಶಿಲ್ಪಗಳು, ಶೆಟಿಗೆವ್ವನ ಪೂಜೆ, ಗ್ರಾಮೀಣ ಶಿಲ್ಪಗಳು, ಬಾಗಿಲು, ಮಾಡಗಳು ಎನ್ನುವ ಲೇಖನಗಳು ಜನಪದ ಶಿಲ್ಪಗಳನ್ನು ಕುರಿತು ಹೇಳಿವೆ. ಎರಡು ಲೇಖನಗಳು ಗುಳೇದಗುಡ್ಡದ ಪ್ರಾಚೀನ ಗಾಜಿನ ಚಿತ್ರಗಳ ಬಗ್ಗೆ ಹೇಳಿದರೆ, ಮತ್ತೊಂದು ಕಸೂತಿ ಕಲೆಯ ಬಗ್ಗೆ ಮತ್ತು ಇನ್ನೊಂದು ಹೋಳಿಹಬ್ಬದ ಚಿತ್ತಾರಗಳ ಬಗ್ಗೆ ವಿವರಿಸುತ್ತದೆ.

ಪ್ರಸ್ತುತ ಪುಸ್ತಕವು ಕಲಾ ಪ್ರಕಾರಗಳ ಕಲಸು ಮೇಲೋಗರದಂತೆ ಇದ್ದು, ಇದರಲ್ಲಿ ಜನಪದವಲ್ಲದೆ ಶಿಷ್ಟ ಪರಂಪರೆಯು ಸೇರಿಕೊಂಡಿವೆ. ಭಾಷೆಯ ದೃಷ್ಟಿಯಿಂದ ತೀರ ಕೆಳಮಟ್ಟದಲ್ಲಿರುವ ಈ ಕೃತಿಯು ಗಂಭೀರತೆಯನ್ನು ಕಳೆದುಕೊಂಡಿದೆ. ವಿವಿಧ ಕಲಾ ಪ್ರಕಾರಗಳ ಬಗ್ಗೆ ಸ್ಥೂಲ ಮಾಹಿತಿಯನ್ನು ನೀಡುತ್ತದೆ ಎನ್ನುವುದಕ್ಕೆ ಅಷ್ಟೇ ಪ್ರಸ್ತುತವಾಗುತ್ತದೆ ವಿನಹ ಗಂಭೀರ ಪ್ರಯತ್ನ ಇಲ್ಲಿಲ್ಲ.

**ಹಸೆ ಚಿತ್ತಾರ :**

ಹಸೆ ಚಿತ್ರಕಲೆಯು ಕರ್ನಾಟಕದ ಮಲೆನಾಡು ಮತ್ತು ಕರಾವಳಿ ಭಾಗದಲ್ಲಿ ರಚನೆಯಾಗುವ ಕಲಾಪ್ರಕಾರ. ಹಾಲಕ್ಕಿಗಳು, ಕುಣಬಿಯರು, ಗೌಳಿಗರು, ಯರವರು, ಸೋಲಿಗರು, ಹಲಸರು ಮತ್ತು ದೀವರ ಜನಾಂಗದವರಂತಹ ಅನೇಕ ಬುಡಕಟ್ಟು ಸಮುದಾಯಗಳು ಈ ಭಾಗದಲ್ಲಿದ್ದು ಅವರಲ್ಲಿ ಪ್ರಚಲಿತದಲ್ಲಿರುವ ಜನಪದ ಚಿತ್ರಕಲಾ ಪ್ರಕಾರವೇ ಹಸೆ ಚಿತ್ರಕಲೆಯಾಗಿದೆ. ಶಾಲಿನಿ ರಘುನಾಥ 'ಹಸೆಚಿತ್ತಾರ' ಎಂಬ ಕಿರುಪುಸ್ತಕವನ್ನು ರಚನೆ ಮಾಡಿದ್ದಾರೆ.[೨೭] ಹಸೆ ಚಿತ್ರಕಲೆಯ ಸ್ವರೂಪ, ಲಕ್ಷಣ, ಪ್ರಕಾರಗಳು, ಜೊತೆಗೆ ಅದರ ಹುಟ್ಟು ಬೆಳವಣಿಗೆಗಳನ್ನು ಸ್ಥೂಲವಾಗಿ ಗಮನಿಸಲಾಗಿದೆ. ಹಸೆ ಚಿತ್ರಕಲೆಯನ್ನು ರಚಿಸುವ ಪ್ರದೇಶಗಳು, ಜನಾಂಗಗಳು, ಪ್ರಾದೇಶಿಕ ಗುಣಲಕ್ಷಣಗಳು, ಚಿತ್ರ ಬರೆಯುವ ನೆಲೆಗಳು, ಉದ್ದೇಶ, ಚಿತ್ರಶೈಲಿ, ಪ್ರಭಾವ ಮತ್ತು ಪ್ರೇರಣೆಗಳ ಬಗ್ಗೆ ಸಂಕ್ಷಿಪ್ತವಾಗಿ ಹೇಳಲಾಗಿದೆ.

ಇಂತಹ ಅಂಶಗಳಲ್ಲದೆ ಹಸೆ ಚಿತ್ತಾರದ ವ್ಯಾಖ್ಯಾನ, ಚಿತ್ರ ಬರೆಯಲು ಬೇಕಾಗುವ ಪರಿಕರಗಳಾದ ಬಣ್ಣ, ಕುಂಚ, ಪಾತ್ರೆ, ಅಂಟುದ್ರಾವಕಗಳು, ಚಿತ್ರರಚನೆಯವಿಧಾನಗಳು ಮತ್ತು ಚಿತ್ರಗಳ ವಸ್ತುವಿಷಯಗಳನ್ನು ಕುರಿತು ವಿವೇಚಿಸಲಾಗಿದೆ. ಹಸೆ ಚಿತ್ತಾರಗಳನ್ನು ಬರೆಯುವ ಭೂಮಣ್ಣಿನ ಚಿಕ್ಕ ಬುಟ್ಟಿಗಳ ಮೇಲೆ ಬರೆಯುವ ವಿವಿಧ ರೀತಿಯ ಚಿತ್ರಗಳು ಮತ್ತು ಸಂಕೇತಗಳ ಬಗ್ಗೆ ಹೇಳಲಾಗಿದೆ.

---

೨೬. ಮಹಾದೇವ ನಾ.ಜಗತಾಪ : ಕರ್ನಾಟಕದ ಜನಪದ ಚಿತ್ತಾರಗಳು ಹಾಗೂ ಶಿಲ್ಪಗಳು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೨೦೦೪
೨೭. ಶಾಲಿನಿ ರಘುನಾಥ:ಹಸೆ ಚಿತ್ತಾರ : ಸೌಮ್ಯ ಎಂ.ಎನ್.ವೈದೇಹಿ ಪ್ರಕಾಶನ, ಬಸವನಗುಡಿ ಬೆಂಗಳೂರು –೨೦೦೫

ಈ ಕಿರು ಪುಸ್ತಕವು ತೀರಾ ಸರಳವಾದ ಭಾಷೆಯಲ್ಲಿ ಹಸೆ ಚಿತ್ರಕಲೆಯ ಬಗ್ಗೆ ಮಾಹಿತಿ ಕೊಡುತ್ತದೆ. ಇದರ ಸ್ವರೂಪ, ಭಾಷಾ ಹಿನ್ನೆಲೆ ಗಮನಿಸಿದಾಗ ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿದ ಪುಸ್ತಕ ಇದಾಗಿದೆ. ಕಲಾಸಾಹಿತ್ಯಕ್ಕೆ ಇದೊಂದು ಕಿರುಕೊಡುಗೆಯಾಗಿದೆ. ಕರ್ನಾಟಕದ ಪ್ರಾಗಿತಿಹಾಸ ಕಾಲದ ಚಿತ್ರಕಲಾ ಸಾಹಿತ್ಯದಲ್ಲಿ ಹೆಚ್ಚಿನ ಗ್ರಂಥಗಳು ರಚನೆಯಾಗಿಲ್ಲ. ಅ.ಸುಂದರ ಅವರ ಕರ್ನಾಟಕದ ಪ್ರಾಗಿತಿಹಾಸ ಕಾಲದ ಕಲೆ ಪುಸ್ತಕ ಮಾತ್ರ ಕನ್ನಡದಲ್ಲಿ ಪ್ರಕಟಗೊಂಡಿದೆ. ಈ ಕಲೆಯ ಬಗ್ಗೆ ಲೇಖನಗಳು ಮತ್ತು ಸಂಶೋಧನಾ ಪ್ರಬಂಧಗಳ ಚಿತ್ರಕಲಾ ಸಾಹಿತ್ಯವು ರಚನೆಗೊಂಡಿದ್ದರೂ ಅವು ಪುಸ್ತಕರೂಪದಲ್ಲಿ ಇನ್ನೂ ಪ್ರಕಟಗೊಂಡಿಲ್ಲ. ಈ ವಿಷಯವಾಗಿ ಬೇರೆ ಬೇರೆ ಸಂಪಾದನಾ ಗ್ರಂಥಗಳಲ್ಲಿ ಬಿಡಿಲೇಖನಗಳು ಕಂಡುಬರುತ್ತವೆ. ಜನಪದ ಚಿತ್ರಕಲಾ ಪ್ರಕಾರದಲ್ಲಿ ಸೂತ್ರದ ಗೊಂಬೆಯಾಟ, ತೊಗಲುಗೊಂಬೆಯಾಟ, ರಂಗೋಲಿ, ಹಸೆಚಿತ್ತಾರ, ಬೆಳದಿಂಗಳ ಚಿತ್ರಕಲೆ, ಶೀಗಿಚಿತ್ರಕಲೆ, ಬಿದರಿಚಿತ್ರಕಲೆ, ಕಿನ್ನಾಳಕಲೆ, ಕಾವಿಕಲೆ, ಗಂಜೀಫಾ ಕಲೆ ಇವುಗಳ ಬಗೆಗೆ ಪುಸ್ತಕಗಳು ಬಂದಿವೆ.

**ಬ. ಕರ್ನಾಟಕದ ಕರಕುಶಲ ಮತ್ತು ಶೈಕ್ಷಣಿಕ ಹಿನ್ನೆಲೆಯ ಚಿತ್ರಕಲಾ ಸಾಹಿತ್ಯ :**

ಈ ಪ್ರಕಾರದಲ್ಲಿ ಗೊಂಬೆತಯಾರಿಕೆ, ಬೆಂಡಿನಿಂದ ಹಾರಗಳನ್ನು ತಯಾರಿಸುವುದು, ಕಾಗದದಿಂದ ವಿವಿಧ ಅಲಂಕಾರಿಕ ವಸ್ತುಗಳನ್ನು ನಿರ್ಮಿಸುವುದು, ಎಂಬೋಜಿಂಗ್ ಕೃತಿಗಳನ್ನು ರಚಿಸುವುದು ಮುಂತಾದವುಗಳನ್ನು ಇಲ್ಲಿನ ಕೃತಿಗಳು ಒಳಗೊಂಡಿವೆ. ಮಹಿಳೆಯರ ಅಲಂಕಾರ, ಕಸೂತಿ, ಹೊಲಿಗೆ, ಹೆಣಿಗೆ, ಇಕೆಬಾನದಂತಹ ಹವ್ಯಾಸಗಳ ವಿವರಗಳು ಇಲ್ಲಿನ ಕೃತಿಗಳಲ್ಲಿ ಕಂಡುಬರುತ್ತವೆ.

**ಕುಶಲ ಕಲೆಗಳು :**

ಮೈಸೂರು ವಿಶ್ವವಿದ್ಯಾಲಯವು ನಾಡಿನ ಅನೇಕ ಭಾಗಗಳಲ್ಲಿ ಪ್ರಚಾರ ಉಪನ್ಯಾಸಗಳನ್ನು ಏರ್ಪಡಿಸಿ ಅವುಗಳನ್ನು ಪ್ರಕಟಿಸಿ ಸುಲಭ ಬೆಲೆಗೆ ಜನರಿಗೆ ದಕ್ಕುವಂತೆ ಮಾಡುತ್ತ ಬಂದಿದೆ. ಈ ಪ್ರಚಾರೋಪನ್ಯಾಸ ಮಾಲೆಯಲ್ಲಿ ಪ್ರಕಟಗೊಂಡ ಕೃತಿಯನ್ನು ಡಿ.ಗಣೇಶ ಬರೆದಿದ್ದಾರೆ.[೨೮] ಈ ಕೃತಿಯಲ್ಲಿ ಚಿತ್ರಕಲೆಯನ್ನು ಮುಖ್ಯವಾಗಿಟ್ಟುಕೊಂಡು ಅದಕ್ಕೆ ಪೂರಕವಾಗಿ ರಚನೆಯಾಗುವ ಕುಶಲ ಕಲೆಗಳ ಬಗ್ಗೆ ವಿವೇಚಿಸಲಾಗಿದೆ. ಚಿತ್ರಕಲೆ ಅದರ ಪರಂಪರೆ, ನೀವು ಚಿತ್ರ ಬರೆಯಬಹುದು ಎಂಬುದಾಗಿ ಸರಳ ವಿಧಾನಗಳಿಂದ ತಿಳಿಸಲಾಗಿದೆ. ಎರಡನೆಯ ಹಂತದಲ್ಲಿ ಆಧುನಿಕ ಚಿತ್ರಕಲೆಯಲ್ಲಿ ನವ್ಯ ಪ್ರಯೋಗ ಪಾಶ್ಚಾತ್ಯ ನವ್ಯಶೈಲಿಗಳು, ಭಾರತದ ಮೇಲೆ ಅವುಗಳ ಪ್ರಭಾವ, ಪ್ರೇರಣೆ, ತೈಲವರ್ಣ ಚಿತ್ರರಚನೆಯ ವಿಧಿ–ವಿಧಾನಗಳು, ಅಮೂರ್ತ ಕಲೆ ಮುಂತಾದ ಅಂಶಗಳನ್ನು ಬಿಂಬಿಸಲಾಗಿದೆ.

ಮುದ್ರಣಕಲೆ ಇತ್ತೀಚೆಗೆ ಕ್ರಾಂತಿಯನ್ನೇ ಉಂಟುಮಾಡಿದೆ. ಇದಕ್ಕೆ ಕೊರೆಚಿತ್ರರಚನೆ ಎಂಬುದಾಗಿಯೂ ಹೇಳುತ್ತಾರೆ. ವುಡ್‌ಕಟ್, ಲಿನೋಕಟ್, ಲಿಥೋಗ್ರಫಿ, ಇವುಗಳ ಜೊತೆಗೆ ತವರ ಮತ್ತು ತಾಮ್ರ ಫಲಕಗಳ ಮೇಲೆ ಚಿತ್ರಕೊರೆದು ಮುದ್ರಿಸಲಾಗುತ್ತದೆ. ಈ ಕೊರೆಚಿತ್ರಗಳನ್ನು ಹೇಗೆ ವಾಣಿಜ್ಯಕ್ಕೆ ಪೂರಕವಾಗಿ ಬಳಸಿಕೊಳ್ಳಬೇಕೆಂದು ತಿಳಿಸಲಾಗಿದೆ. ಅನಂತರದಲ್ಲಿ ಎಂಬೋಜಿಂಗ್ ಎಂದು ಕರೆಯಲಾಗುವ ಉಬ್ಬುಶಿಲ್ಪ ರಚನಾ ವಿಧಾನದಲ್ಲಿ ಬೇರೆ ಬೇರೆ ಲೋಹ ಮತ್ತು ಗಾಜಿನ ಮೇಲೆ ಉಬ್ಬು ಚಿತ್ರಗಳನ್ನು ರಚಿಸುವ ಕ್ರಮಗಳನ್ನು ಹೇಳಿದೆ. ಅದರಂತೆ ಬೆಂಡಿನಿಂದ ತಯಾರಿಸುವ ವಿವಿಧ ಹೂಗಳು ಮತ್ತು ಮಾಲೆಗಳು, ಸೀಸೆಗಳಿಂದ ರಚಿಸುವ ಅಲಂಕಾರಗಳು ಅವುಗಳನ್ನು ಯಾವ ರೀತಿಯಲ್ಲಿ ವಾಣಿಜ್ಯಕ್ಕೆ ಬಳಸಿಕೊಳ್ಳಬೇಕು ಎನ್ನುವ ಸಂಗತಿಗಳನ್ನು ತಿಳಿಸಲಾಗಿದೆ.

---

೨೮. ಡಿ.ಗಣೇಶ : ಕುಶಲ ಕಲೆಗಳು : ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ ಮೈಸೂರು-೧೯೮೨

**ಕರ್ನಾಟಕದ ಕಲೆಗಳು :**

ಕನ್ನಡ ಸಾಹಿತ್ಯ ಪರಿಷತ್ತು ಕರ್ನಾಟಕದ ಕಲೆಗಳ ಬಗ್ಗೆ ಪ್ರತ್ಯೇಕ ಸಂಪುಟಗಳನ್ನು ಹೊರತಂದಿದೆ. ಚಿತ್ರಕಲೆ, ಶಿಲ್ಪಕಲೆ, ವಾಸ್ತುಕಲೆ, ಸಂಗೀತ ಮತ್ತು ಕರಕುಶಲ ಕಲೆಗಳು ಹೀಗೆ ಒಂದೊಂದು ಕಲಾಪ್ರಕಾರಕ್ಕೆ ಒಂದೊಂದು ಸಂಪುಟಗಳನ್ನು ವಿವಿಧ ವಿದ್ವಾಂಸರಿಂದ ಬರೆಯಿಸಿ ಪ್ರಕಟಿಸಲಾಗಿದೆ. ಪ್ರಸ್ತುತ ಈ ಸಂಪುಟವನ್ನು ಬೆನಕನಹಳ್ಳಿ.ಜಿ.ನಾಯಕ್ ಬರೆದಿದ್ದಾರೆ.[೨೯] ಇದು ಕರ್ನಾಟಕ ಪ್ರದೇಶದ ವಿವಿಧ ಪ್ರದೇಶದ ಕರಕುಶಲ ಕಲೆಗಳ ಕುರಿತು ಸ್ಥೂಲ ಮಾಹಿತಿ ನೀಡುತ್ತದೆ. ಈ ಸಂಪುಟದಲ್ಲಿ ಕರಕುಶಲ ಕಲೆಯ ಹುಟ್ಟು, ಬೆಳವಣಿಗೆ, ಇತಿಹಾಸ, ಸ್ವರೂಪ, ಲಲಿತಕಲೆ ಮತ್ತು ಕರಕುಶಲ ಕಲೆಗಳಿಗೆ ಇರುವ ವ್ಯತ್ಯಾಸ ಹೋಲಿಕೆಗಳನ್ನು ಕುರಿತು ಆರಂಭದಲ್ಲಿ ತಿಳಿಸಲಾಗಿದೆ. ನಂತರದ ಹಂತದಲ್ಲಿ ಕರಕುಶಲ ಕಲೆಯ ಪ್ರಕಾರಗಳು, ಆಯಾ ಪ್ರಕಾರಗಳು ಬೆಳೆದು ಬಂದ ಹಿನ್ನೆಲೆ, ಅವುಗಳಿಗೆ ಬಳಸುವ ಪರಿಕರಗಳು, ರಚನಾ ವಿಧಾನ ಶೈಲಿ, ತಂತ್ರಗಾರಿಕೆ ಇಂತಹ ವಿಷಯಗಳನ್ನು ತಿಳಿಸಲಾಗಿದೆ.

ಜನಪದ ಕರಕುಶಲ ಕಲೆಗಳು, ಉಪಕರಣಗಳ ವಿವಿಧ ರೂಪಗಳು, ಅಲಂಕರಣ, ಆಭರಣಗಳು, ಆಯುಧಗಳು, ನಿತ್ಯಬಳಕೆಯ ವಸ್ತುಗಳು, ಮಣ್ಣಿನ ಮಾಧ್ಯಮದಲ್ಲಿ ರಚನೆಯಾಗುವ ಕರಕುಶಲ ವಸ್ತುಗಳು, ಮರ ಮಾಧ್ಯಮದ ಕರಕುಶಲ ವಸ್ತುಗಳು, ಲೋಹದ ಕರಕುಶಲಕಲೆ, ಕಲ್ಲುಕೆತ್ತನೆ. ಚರ್ಮದ ಕರಕುಶಲ ಕಲೆ, ಹೀಗೆ ಹಲವಾರು ಬಗೆಗಳು ಸೇರಿವೆ. ಕಸೂತಿ ಕಲೆಯಲ್ಲಿ ಕಂಡುಬರುವ ಚಿತ್ರವಿನ್ಯಾಸಗಳು, ಮದರಂಗಿ, ಹಚ್ಚೆ, ಕೌದಿಕಲೆಯ ಚಿತ್ರವಿನ್ಯಾಸಗಳು ವಿಶೇಷವಾಗಿವೆ. ಕಲಘಟಗಿಯ ಹಣ್ಣಿನ ಮಾದರಿ ಮತ್ತು ತೊಟ್ಟಿಲುಗಳು, ಗೋಕಾಕ ಮತ್ತು ತಾಳಿಕೋಟೆಯ ಜಿನಗಾರರು ತಯಾರಿಸುವ ದುರಗಮುರುಗಿ ಪೆಟ್ಟಿಗೆ ಮತ್ತು ಮೂರ್ತಿಗಳು, ಕಿನ್ನಾಳದ ಆಟಿಕೆಗಳು, ತೊಗಲುಗೊಂಬೆಯ ರೂಪವೈವಿಧ್ಯಗಳು, ಸೂತ್ರದ ಗೊಂಬೆಯ ಹದವರಿತ ಕಲಾತ್ಮಕ ವಿನ್ಯಾಸಗಳು ಕರಕುಶಲ ಕಲೆಯ ವಿರಾಟ್ ಸ್ವರೂಪವನ್ನು ಬಿಂಬಿಸುತ್ತವೆ.

**ಮಹಿಳೆಯರ ಅಲಂಕಾರ :**

ಮಹಿಳೆಯರ ಅಲಂಕಾರಗಳ ಬಗ್ಗೆ ಇರುವ ಈ ಕೃತಿಯನ್ನು ಶಾಂತಾದೇವಿ ಮಾಳವಾಡ ಬರೆದಿದ್ದಾರೆ.[೩೦]ಜನಪದ ಬದುಕಿನಲ್ಲಿ ಮಹಿಳೆಯರ ಅಲಂಕಾರಗಳು ಕುತೂಹಲಕರವಾಗಿರುತ್ತವೆ. ಅದರಲ್ಲೂ ಸೀರೆಯು ಮುಖ್ಯ ಪಾತ್ರವಹಿಸುತ್ತದೆ. ಪ್ರಾಚೀನ ಭಾರತೀಯ ಮಹಿಳೆಯರ ಅಲಂಕಾರಗಳ ಬಗ್ಗೆ ಪ್ರಾಚೀನ ಶಿಲ್ಪ ಮತ್ತು ಚಿತ್ರಕಲಾ ಕೃತಿಗಳಿಂದ ಅನೇಕ ಅಂಶಗಳನ್ನು ತಿಳಿದುಕೊಳ್ಳಬಹುದಾಗಿದೆ.ಈ ಕೃತಿಯಲ್ಲಿ ಪ್ರಾಚೀನ ಶಿಲ್ಪಚಿತ್ರಕಲೆಗಳಲ್ಲದೆ ಕಾವ್ಯಗಳ ಪರಿಶೀಲನೆಮಾಡಿ ವಿಷಯ ಸಂಗ್ರಹ ಮಾಡಿ ವಿಶ್ಲೇಷಣೆ ಮಾಡಲಾಗಿದೆ. ಐಹೊಳೆ, ಪಟ್ಟದಕಲ್ಲು, ಕಲ್ಯಾಣ, ಬೇಲೂರು, ಹಳೇಬೀಡು, ವಿಜಯನಗರ ದೇವಾಲಯಗಳಲ್ಲಿ ಕೆತ್ತಿದ ಸುಂದರ ಸ್ತ್ರೀ ಶಿಲ್ಪಗಳು, ಬೇಲೂರಿನ ಶಿಲಾಬಾಲಿಕೆಯರು ಮಹಿಳೆಯರ ಅಲಂಕಾರ ವಿನ್ಯಾಸಗಳಿಗೆ ಪ್ರಖ್ಯಾತವಾಗಿವೆ. ಕೇಶಾಲಂಕಾರ ಆಭರಣಗಳು, ಅದರಲ್ಲಿ ಕಿವಿಯ ಆಭರಣ. ಕೊರಳಿನ ಆಭರಣ, ಕೈಗಳು, ತೋಳುಗಳ, ಕಾಲುಗಳ, ನಡುವಿನಭಾಗ, ತಲೆಯ ಆಭರಣಗಳೆಂಬ ವಿಭಿನ್ನ ಆಭರಣಗಳಿವೆ. ಸೀರೆ ಕುಪ್ಪಸಗಳ ಧರಿಸುವಿಕೆಯ ಶೈಲಿಗಳಲ್ಲಿಯೂ ಪ್ರಾದೇಶಿಕ ವ್ಯತ್ಯಾಸಗಳಿವೆ. ಈ ಕೃತಿಯಲ್ಲಿ ಜನಪದ ಶೈಲಿಯ ವಸ್ತ್ರವಿನ್ಯಾಸವನ್ನು ಪ್ರಾದೇಶಿಕ ವಿಶಿಷ್ಟತೆಯೊಂದಿಗೆ ಹೇಳಲಾಗಿದೆ.

---

೨೯. ಬೆನಕನಹಳ್ಳಿ ಜಿ.ನಾಯಕ : ಕರ್ನಾಟಕದ ಕಲೆಗಳು (ಸಂಪುಟ:೩): ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು –೧೯೮೬

೩೦. ಶಾಂತಾದೇವಿ ಮಾಳವಾಡ : ಮಹಿಳೆಯರ ಅಲಂಕಾರ : ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು –೧೯೯೬

**ಚಿಕ್ಕಮಕ್ಕಳ ಚಿತ್ರಕಲೆ :**

ಚಿತ್ರರಚನೆಯಲ್ಲಿ ದೊಡ್ಡವರಂತೆ ಮಕ್ಕಳೂ ಹೆಚ್ಚಿನ ಆಸಕ್ತಿಯಿಂದ ತೊಡಗಿಕೊಳ್ಳುತ್ತಾರೆ. ಹಲವು ಮಕ್ಕಳಂತೂ ಅದನ್ನೊಂದು ಗೀಳಾಗಿ ಹಚ್ಚಿಕೊಂಡಿರುತ್ತಾರೆ. ಕೆಲವು ಕುಟುಂಬಗಳಲ್ಲಿ ಮಕ್ಕಳನ್ನು ಒತ್ತಾಯ ಪೂರ್ವಕವಾಗಿ ಅದರಿಂದ ವಿಮುಖಗೊಳಿಸುವ ಪರಿಸ್ಥಿತಿಗಳನ್ನು ಸಹ ನೋಡುತ್ತೇವೆ. ಈ ಹಿನ್ನೆಲೆಯಲ್ಲಿ ಪ್ರತ್ಯೇಕವಾದ ಮಕ್ಕಳ ಚಿತ್ರಕಲೆ ಎಂಬ ಪ್ರಕಾರವೇ ಬೆಳೆದು ಬಂದಿದ್ದು, ಅದರ ವಿಶ್ಲೇಷಣೆ ವಿಮರ್ಶೆಗಳು ರಚನೆಯಾಗುತ್ತ ಬಂದಿವೆ. ಕನ್ನಡದಲ್ಲಿ ಇಂತಹ ಪ್ರಯತ್ನಗಳು ಇಲ್ಲವೆಂದೇ ಹೇಳಬಹುದು. ಈ ದೃಷ್ಟಿಯಿಂದ ಬಿ.ಪಿ.ಬಾಯಿರಿಯವರು ರಚಿಸಿದ ಈ ಕೃತಿಯು ಗಮನಾರ್ಹವಾಗಿವೆ.[೩೧] ಈ ಪುಸ್ತಕದಲ್ಲಿ ಚಿತ್ರಕಲೆಯ ವಿವರಗಳನ್ನು ಹೇಳುವುದರ ಜೊತೆಗೆ ಚಿತ್ರಕಲಾ ಶಿಕ್ಷಣ, ಶೈಕ್ಷಣಿಕ ಮನೋವಿಜ್ಞಾನಗಳಂತಹ ವಿಚಾರಗಳನ್ನು ಸ್ಥೂಲವಾಗಿ ಗಮನಿಸಲಾಗಿದೆ. ಚಿಕ್ಕಮಕ್ಕಳ ಚಿತ್ರಕಲೆ ಅದರ ಲಕ್ಷಣಗಳು, ಚಿತ್ರಕಲಾ ಪಾಠಗಳ ಕ್ರಮ, ಮಕ್ಕಳ ಚಿತ್ರ ಮತ್ತು ಆದಿಮಾನವ ಚಿತ್ರಗಳಲ್ಲಿ ಸಾಮ್ಯತೆ, ಮಕ್ಕಳ ಮಾನಸಿಕ ಬೆಳವಣಿಗೆಯ ಹಂತಗಳು, ಬಾಲಕ–ಬಾಲಕಿಯರ ಚಿತ್ರಗಳಲ್ಲಿ ಲಕ್ಷಣಗಳು, ಶಿಶು ಚಿತ್ರಕಲೆಯ ಇತಿಹಾಸ, ಶಿಶು ಚಿತ್ರಕಲಾ ಶಿಕ್ಷಕ ಎಂಬ ವಿಷಯಗಳ ಬಗ್ಗೆ ಪ್ರತ್ಯೇಕ ಲೇಖನಗಳಿವೆ. ಇವುಗಳ ಜೊತೆಗೆ ಪ್ರೌಢ ಮಕ್ಕಳ ಚಿತ್ರಕಲಾ ಶಿಕ್ಷಣ, ಕಲಾಶಿಕ್ಷಣದ ಉಪಕರಣಗಳು, ಕಾಗದ ಕತ್ತರಿಸುವಿಕೆ, ರಂಗೋಲಿಕಲೆ, ಮಡಿಕೆಕಲೆ, ಕಲಾ ತರಗತಿಯ ಕೋಣೆ, ಮಕ್ಕಳ ಕಲಾತರಗತಿ, ಶಿಶುಚಿತ್ರಕಲೆಯ ಜನಕ ಸಿಜಾಕ್ ಎಂಬಂತಹ ಸಂಗತಿಗಳು ಇದರಲ್ಲಿ ವಿವೇಚಿಸಲ್ಪಟ್ಟಿವೆ.

**ಚಿತ್ರಕಲಾ ಪ್ರವೇಶ :**

ಚಿತ್ರಕಲಾ ಶಿಕ್ಷಣವನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಲಾದ ಈ ಕೃತಿಯು ಶಿಕ್ಷಣ ಕ್ರಮದ ಹಲವಾರು ಹಂತಗಳ ಬಗ್ಗೆ ಮಾಹಿತಿ ನೀಡುತ್ತದೆ. ಹುದ್ದಾರ ರಚಿಸಿರುವ ಈ ಪುಸ್ತಕವು[೩೨] ಚಿತ್ರಕಲಾ ಶಿಕ್ಷಣದ ಪ್ರಾರಂಭಿಕ ಹಂತದ ವಿದ್ಯಾರ್ಥಿಗಳಿಗೆ ಹೆಚ್ಚಿನ ಉಪಯೋಗವಾಗುತ್ತದೆ. ಚಿತ್ರಕಲೆಯನ್ನು ಹಂತ ಹಂತವಾಗಿ ಹೇಗೆ ಕಲಿಯಬೇಕು. ಬಣ್ಣ ಲೇಪನವನ್ನು ಹೇಗೆ ಮಾಡಬೇಕು ಎನ್ನುವಂತಹ ಸಂಗತಿಗಳು ಇಲ್ಲಿ ಹೇಳಲ್ಪಟ್ಟಿವೆ. ವಸ್ತುಚಿತ್ರರಚನೆ, ಚಿತ್ರಕಲೆಗೆ ಬೇಕಾಗುವ ಉಪಕರಣಗಳು, ಪ್ರಕೃತಿ ಚಿತ್ರಣ, ಸ್ವಾಭಾವಿಕ ವಸ್ತುಚಿತ್ರಗಳಿಗೆ ಬಣ್ಣಹಾಕುವ ಕ್ರಮ, ಸ್ಮರಣ ಚಿತ್ರಣ ವಿಧಾನ, ನಕ್ಷಾಚಿತ್ರ ರಚನಾವಿಧಾನ, ಭೂಮಿತಿ ರಚನಾ ವಿಧಾನ, ಬಣ್ಣಗಳು ಮತ್ತು ಅವುಗಳ ಉಪಯೋಗಗಳು, ಪ್ರಾಥಮಿಕ ಬಣ್ಣಗಳು, ಮಾಧ್ಯಮಿಕ ಬಣ್ಣಗಳು, ಮಿಶ್ರಬಣ್ಣಗಳು, ಪೂರಕ ಬಣ್ಣಗಳು, ವಿರುದ್ಧ ಬಣ್ಣಗಳು, ಪಾರದರ್ಶಕ ಬಣ್ಣಗಳು ಮತ್ತು ಅಪಾರದರ್ಶಕ ಬಣ್ಣಗಳು ಹೀಗೆ ವಿವಿಧ ವಿಷಯಗಳ ಕುರಿತು ಸ್ಥೂಲ ಮಾಹಿತಿ ನೀಡಲಾಗಿದೆ.

ಮಾದರಿಗಾಗಿ ಅನೇಕ ಚಿತ್ರಗಳನ್ನು ಕೊಟ್ಟಿರುವುದು ವಿದ್ಯಾರ್ಥಿಗಳಿಗೆ ಉಪಯುಕ್ತವಾಗಿದೆ. ಚಿತ್ರರಚನಾ ಸಂದರ್ಭದಲ್ಲಿ ವಿದ್ಯಾರ್ಥಿಗಳು ಯಾವ ಅಂಶಗಳನ್ನು ಹೆಚ್ಚಿನ ಆಸಕ್ತಿಯಿಂದ ಗಮನಸಬೇಕು. ನೆರಳು ಬೆಳಕಿನ ವಿನ್ಯಾಸಗಳನ್ನು ಹೇಗೆ ರೂಪಿಸಬೇಕು. ವರ್ಣಲೇಪನ ತಂತ್ರದಲ್ಲಿ ಜಲವರ್ಣ ಮತ್ತು ತೈಲವರ್ಣಗಳ ವಿಧಾನಗಳಲ್ಲಿನ ಬದಲಾವಣೆಗಳನ್ನು ಹೇಗೆ ಗಮನಿಸಬೇಕು ಎನ್ನುವಂತಹ ಸಂಗತಿಗಳನ್ನು ತಿಳಿಸಿಕೊಡಲಾಗಿದೆ.

---

೩೧. ಬಿ.ಪಿ.ಬಾಯಿರಿ : ಚಿಕ್ಕಮಕ್ಕಳ ಚಿತ್ರಕಲೆ : ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ ಮೈಸೂರು- ೧೯೬೯

೩೨. ಹೋ.ಶ್ರೀ.ಹುದ್ದಾರ : ಚಿತ್ರಕಲಾ ಪ್ರವೇಶ : ಸಮಾಜ ಪುಸ್ತಕಾಲಯ, ಧಾರವಾಡ–೧೯೮೦

**ಚಿತ್ರಕಲಾ ಪರಿಚಯ :**

ಚಿತ್ರಕಲಾ ಪರಿಚಯ ಪುಸ್ತಕವು ವ್ಹಿ.ಟಿ.ಕಾಳೆಯವರಿಂದ ರಚಿಸಲ್ಪಟ್ಟಿದ್ದು,[೩೩] ಕಲಾಶಿಕ್ಷಣಕ್ಕೆ ಸಂಬಂಧಪಟ್ಟ ವಿಧಿ–ವಿಧಾನಗಳಿಗೆ ಅನುಸಾರವಾಗಿ ರೂಪಿತಗೊಂಡಿದೆ. ಈ ಕೃತಿಯಲ್ಲಿ ಒಳಗೊಂಡ ವಿಷಯಗಳಲ್ಲಿ ಚಿತ್ರಕಲಾ ಶಿಕ್ಷಣದ ಗುರಿ ವಸ್ತುಸ್ಥಿತಿ, ಚಿತ್ರಕಲೆಯ ಪ್ರಾಚೀನತೆ, ನಾವೇಕೆ ಚಿತ್ರಕಲೆ ಕಲಿಯಬೇಕು? ಶಾಲೆಗಳಲ್ಲಿನ ಕಲಾಭ್ಯಾಸ, ಇನ್ನಿತರ ವಿಷಯಗಳೊಂದಿಗೆ ಚಿತ್ರಕಲೆಯ ಸಂಬಂಧ, ಚಿತ್ರಕಲೆಯನ್ನು ಕಲಿಸುವ ಕ್ರಮ, ಅಪರೋಕ್ಷ ವಿಧಾನ, ಪರೋಕ್ಷ ವಿಧಾನ, ಪರೋಕ್ಷಾಪರೋಕ್ಷ ವಿಧಾನ, ಚಿತ್ರಕಲೆಯ ಉಪಕರಣಗಳು, ಚಿತ್ರಕಲಾ ಶಿಕ್ಷಕರಿಗೆ ಸೂಚನೆಗಳು, ಪ್ರಾರಂಭದ ಪಾಠಗಳು, ಭಾವಬೋಧಕ ಚಿತ್ರಲೇಖನ, ರೇಖಾಚಿತ್ರವಿಧಾನ, ಸ್ಮರಣ ಚಿತ್ರಲೇಖನ, ಮಾನವಾಕೃತಿಗಳನ್ನು ರಚಿಸುವ ವಿಧಾನ, ಪ್ರಮಾಣ, ನಿಸರ್ಗ ಚಿತ್ರಲೇಖನ ಅದನ್ನು ಕಲಿಸುವ ಕ್ರಮಗಳನ್ನು ಕುರಿತು ಹೇಳಲಾಗಿದೆ. ಇವುಗಳಲ್ಲದೆ ಸರಳಗೈ ಚಿತ್ರಲೇಖನ, ವಸ್ತು ಚಿತ್ರಲೇಖನ, ಘನಾಕೃತಿಯ ಚಿತ್ರಣ, ಛಾಯಾವರಣ ತಂತ್ರ, ಸರಳ ರೇಖಾಗಣಿತ, ಬಣ್ಣಗಳು, ನಕ್ಷೆಯ ವಿಧಗಳನ್ನು ವಿವೇಚಿಸಲಾಗಿದೆ.

ಈ ಪುಸ್ತಕವು ಕಲಾ ವಿದ್ಯಾರ್ಥಿಗಳಿಗೆ ಚಿತ್ರಕಲೆ ಕಲಿಯಲು ಉಪಯುಕ್ತ ಮಾಹಿತಿ ಕೊಡುತ್ತದೆಯಲ್ಲದೆ ಅಂದಿನ ದಿನಗಳಲ್ಲಿ ಪ್ರಚಲಿತದಲ್ಲಿದ್ದ ಲೋವರ್ ಗ್ರೇಡ್, ಹೈಯರ್ ಗ್ರೇಡ್, ಡ್ರಾಯಿಂಗ್ ಟೀಚರ್, ಟ್ರೇನಿಂಗ್ ಕಾಲೇಜ್, ವಿದ್ಯಾರ್ಥಿಗಳು, ಡಿಪ್ಲೋಮಾ, ಆರ್ಟಮಾಸ್ಟರ್, ಕಲಾ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಿದೆ. ವಿಷಯಕ್ಕೆ ಪೂರಕವಾಗಿ ಅಲ್ಲಲ್ಲಿ ಸುಮಾರು ಎರಡು ಸಾವಿರ ಚಿತ್ರಗಳನ್ನು ಅಳವಡಿಸಲಾಗಿದೆ. ಈ ಪುಸ್ತಕದಲ್ಲಿ ಆಯಾ ವಿಭಾಗದ ಚಿತ್ರಕಲೆಯನ್ನು ಕಲಿಸುವ ವಿಧಾನದ ಜೊತೆಗೆ ಪ್ರಾಯೋಗಿಕ ವಿವರವನ್ನು ಚಿತ್ರಸಹಿತವಾಗಿ ವಿವರಿಸಲಾಗಿದೆ.

**ಕಲಾ ಚರಿತ್ರೆ :**

ಕಲಾಚರಿತ್ರೆ ಪುಸ್ತಕವನ್ನು ಅಶೋಕ ಅಕ್ಕಿಯವರು ಬರೆದಿದ್ದಾರೆ.[೩೪] ಕಲಾ ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚನೆಮಾಡಿದ ಈ ಕೃತಿಯಲ್ಲಿ ಜಗತ್ತಿನ ಕಲಾಚರಿತ್ರೆಯ ಸ್ಥೂಲನೋಟ ಕೊಡಲಾಗಿದೆ. ಕಲಾಚರಿತ್ರೆಯನ್ನು ಬೇರೆ ಬೇರೆ ವಿಭಾಗ ಮಾಡಿ ವಿವರಿಸಲಾಗಿದೆ. ಜಾಗತಿಕ ಕಲೆ, ಭಾರತೀಯ ಕಲೆ, ಕರ್ನಾಟಕದ ಕಲೆ ಎಂಬ ಭಾಗಗಳಲ್ಲದೆ ಕಲಾವಿದರು ಮತ್ತು ಕಲಾಶಿಕ್ಷಣ ಎಂಬ ವಿಭಾಗಗಳನ್ನು ಮಾಡಿಕೊಳ್ಳಲಾಗಿದೆ. ಕೊನೆಯಲ್ಲಿ ಯಥಾದರ್ಶನ ಮತ್ತು ಜಾಮೆಟ್ರಿ ಅಭ್ಯಾಸದ ಮಾದರಿಗಳನ್ನು ಕೊಡಲಾಗಿದೆ. ಜಾಗತಿಕ ಕಲೆ ಎಂಬ ಭಾಗದಲ್ಲಿ ಈಜಿಪ್ತ, ಮೆಸೋಪೆಟೋಮಿಯಾ, ರೋಮ್, ಗ್ರೀಕ್, ಬೆಂಜೆಂಟೈನಾ ಮುಂತಾದ ಸಂಸ್ಕೃತಿಗಳಲ್ಲದೆ ಕ್ರಿಶ್ಚಿಯನ್ ಆರಂಭ ಕಾಲದ ಸಂಸ್ಕೃತಿ, ಬಾರೋಕ್, ರೋಕೋಕೋ ಗಾಥಿಕ್ ಕಲಾಶೈಲಿಗಳನ್ನು ಹೇಳಿದೆ. ನಂತರದಲ್ಲಿ ಆಧುನಿಕ ಕಲಾಶೈಲಿಗಳಾದ ಇಂಪ್ರೆಷನಿಜಂ, ಎಕ್ಸಪ್ರೆಸ್‌ನಿಜಂ, ಸರ್ರಿಯಲಿಜಂ, ಕ್ಯೂಬಿಜಂ ಮುಂತಾದ ಕಲಾಶೈಲಿಗಳ ಬಗ್ಗೆ ವಿವೇಚಿಸಲಾಗಿದೆ. ಜೊತೆಗೆ ಪಾಶ್ಚಾತ್ಯ ಪುನರುಜ್ಜೀವನ ಕಾಲದ ಕಲೆ ಮತ್ತು ಕಲಾವಿದರ ಬಗ್ಗೆಯೂ ವಿವರಿಸಿದೆ. ಭಾರತೀಯ ಕಲೆ ವಿಭಾಗದಲ್ಲಿ ಶಿಲಾಯುಗ ಕಾಲದ ಚಿತ್ರಕಲೆ, ಸಿಂಧೂನಾಗರಿಕತೆಯ ಚಿತ್ರಕಲೆ, ವೇದಕಾಲದ ಕಲೆ, ಮೌರ್ಯರ ಕಲೆ, ಕುಶಾನರ ಕಲೆ, ಗಾಂಧಾರ ಕಲೆ, ಶಾತವಾಹನರ ಕಲೆ, ಅಜಂತಾಕಲೆ, ಎಲ್ಲೋರಾ, ಎಲಿಫೆಂಟಾ, ಚಾಲುಕ್ಯರು, ಹೊಯ್ಸಳರು,

---

೩೩. ವ್ಹಿ.ಟಿ.ಕಾಳೆ : ಚಿತ್ರಕಲಾ ಪರಿಚಯ : ವಿಜಯ ಬುಕ್‌ಡಿಪೋ, ಸ್ಟೇಷನ್ ರೋಡ್, ಗದಗ–೧೯೮೫

೩೪. ಅಶೋಕ ಅಕ್ಕಿ : ಕಲಾಚರಿತ್ರೆ : ಶಾಬಾದಿಮಠ ಬುಕ್‌ಡಿಪೋ, ಗದಗ–೧೯೮೭

ಗಂಗರು ಮತ್ತು ರಾಷ್ಟ್ರಕೂಟರ ಕಲೆ ಹಾಗೂ ಮೊಗಲ್ ಕಲೆ, ದಖನಿ ಕಲೆ, ರಾಜಸ್ಥಾನಿ ಕಿರುರೂಪ ಚಿತ್ರಕಲೆಗಳ ಬಗ್ಗೆ ವಿವರಿಸಲಾಗಿದೆ. ಕರ್ನಾಟಕದ ಕಲೆಯ ಭಾಗದಲ್ಲಿ ವಿಜಯನಗರ ಕಾಲದ ಕಲೆ, ವಿಜಾಪುರ ಸುಲ್ತಾನರ ಕಾಲದಕಲೆ, ನಾಯಕರು ಮತ್ತು ಸಂಸ್ಥಾನಿಕರ ಕಲೆ, ಪ್ರಮುಖ ಐತಿಹಾಸಿಕ, ಕಲಾತ್ಮಕ ಸ್ಥಳಗಳನ್ನು ಪರಿಚಯಿಸಲಾಗಿದೆ. ಕಲಾವಿದರು ಎಂಬ ಭಾಗದಲ್ಲಿ ಪಾಶ್ಚಾತ್ಯ ಕಲಾವಿದರು, ಭಾರತೀಯ ಕಲಾವಿದರು ಮತ್ತು ಕರ್ನಾಟಕದ ಕಲಾವಿದರ ಬಗ್ಗೆ ಹೇಳಲಾಗಿದೆ. ಲಿಯೋನಾರ್ಡೋ-ಡ-ವಿನ್ಸಿ, ಮೈಕಲ್ ಎಂಜಲೋ, ರೆಂಬ್ರಾಂಟ್, ರೂಬೆನ್ಸ್, ರಾಫೆಲ್, ಗಾಗಿನ್, ಪಿಕಾಸೋ, ವೆಂಕಟಪ್ಪ, ರವೀಂದ್ರನಾಥ ಟ್ಯಾಗೋರ್, ಅಬನೀಂದ್ರನಾಥ ಟ್ಯಾಗೋರ್, ಎಸ್.ಎಮ್. ಪಂಡಿತ್, ಡಿ.ವಿ.ಹಾಲಭಾವಿ, ಟಿ.ಪಿ.ಅಕ್ಕಿ, ಮಿಣಜಗಿ, ಎಂ.ಎ.ಚಟ್ಟಿ, ಮುಂತಾದ ಕಲಾವಿದರ ಪರಿಚಯವಿದೆ. ಕಲಾಶಿಕ್ಷಣ ವಿಭಾಗದಲ್ಲಿ ಚಿತ್ರಕಲಾ ಶಿಕ್ಷಣಕ್ಕೆ ಸಂಬಂಧಿಸಿದ ಲೇಖನಗಳಿವೆ.

**ವಿಕಾಸ ಕಂಡ ಕರ್ನಾಟಕದ ಚಿತ್ರಕಲೆ :**

ಈ ಕಿರು ಪುಸ್ತಕವನ್ನು ಅ.ಲ.ನರಸಿಂಹನ್ ಬರೆದಿದ್ದು,[೩೫] ಚಿಕ್ಕ ಬಾಲಕನು ಕರ್ನಾಟಕದ ಚಿತ್ರಕಲೆಯನ್ನು ಸರಳವಾಗಿ ತಿಳಿದುಕೊಳ್ಳುವಂತೆ ಚಿಕ್ಕ ಚಿಕ್ಕ ವಿಷಯಗಳಾಗಿ ವಿಂಗಡಿಸಿ ಸರಳ ಭಾಷೆಯಲ್ಲಿ ಹೇಳಲಾಗಿದೆ. ಚಿಕ್ಕಮಕ್ಕಳು ಚಿತ್ರಲೆಯ ಬಗ್ಗೆ ತಿಳಿದುಕೊಳ್ಳಲು ಉಪಯುಕ್ತವಾದ ಈ ಪುಸ್ತಕದಲ್ಲಿ ವಿಕಾಸ ಎಂಬ ಬಾಲಕನು ಕರ್ನಾಟಕದ ಚಿತ್ರಕಲೆಯನ್ನು ಪರಿಚಯ ಮಾಡಿಕೊಳ್ಳುವಂತೆ ಚಿತ್ರಿಸಲಾಗಿದೆ. ಚಿತ್ರಕಲೆ ಹುಟ್ಟು, ಅದರ ಪೌರಾಣಿಕ ಹಿನ್ನೆಲೆ, ರಾಜಾರವಿವರ್ಮನ ಚಿತ್ರಗಳು, ಇತಿಹಾಸ ಪೂರ್ವಕಾಲದ ಚಿತ್ರಕಲೆ, ಮಣ್ಣಿನ ಪಾತ್ರೆಗಳ ಮೇಲೆ ರಚಿಸುವ ಚಿತ್ರವಿನ್ಯಾಸಗಳು, ಅಜಂತಾ ಭಿತ್ತಿಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಮುಸ್ಲಿಂ ಶೈಲಿಯ ಭಿತ್ತಿಚಿತ್ರ ಕಿರುರೂಪ ಚಿತ್ರ, ದಖನಿ ಚಿತ್ರಗಳು, ವಿಜಯನಗರ ಚಿತ್ರಶೈಲಿ, ಸಮಕಾಲೀನ ಚಿತ್ರಕಲಾಶೈಲಿ, ಜನಪದ ಚಿತ್ರಕಲೆ, ಮುಂತಾದ ಕಲಾ ಪ್ರಕಾರಗಳ ಬಗ್ಗೆ ಸ್ಥೂಲವಾಗಿ ವಿವೇಚಿಸಲಾಗಿದೆ.

**ಶಿಕ್ಷಣ – ಸೃಜನಶೀಲ ಕಲೆ :**

ಶಿಕ್ಷಣ ಒಂದು ಸೃಜನಶೀಲ ಕಲೆಯಾದರೆ, ಕಲಾಶಿಕ್ಷಣವು ಮನುಷ್ಯನಲ್ಲಿ ಸೃಜನಶೀಲತೆಯನ್ನು ಅಭಿವ್ಯಕ್ತಿಸುವ ಜೀವಧಾತುವಾಗಿದೆ. ಶಿಕ್ಷಣಕ್ರಮದಲ್ಲಿ ಕಲೆಯನ್ನು ಅಳವಡಿಸಿಕೊಂಡಾಗ ಪರಿಣಾಮಕಾರಿಯಾದ ಫಲಿತಾಂಶಗಳು ಉಂಟಾಗುವುದು ಸ್ವಾಭಾವಿಕವಾಗಿದೆ. ಅದರಲ್ಲೂ ಚಿಕ್ಕಮಕ್ಕಳ ಮನೋಸ್ಥಿತಿ ಅಕ್ಷರಗಳಿಗಿಂತ ಆಕಾರಗಳನ್ನು ಹೆಚ್ಚು ತಟ್ಟುವ ಹಂತವಾಗಿದ್ದು ಇಲ್ಲಿ ಕಲೆಯ ಪಾತ್ರ ಮುಖ್ಯವಾಗುತ್ತದೆ. ಈ ಪುಸ್ತಕವನ್ನು ಎನ್. ಶ್ರೀಪತಿ ರಚನೆಮಾಡಿದ್ದು,[೩೬]ಇದರಲ್ಲಿ ಕಲೆ ಮತ್ತು ಶಿಕ್ಷಣಕ್ಕೆ ಸಂಬಂಧಿಸಿದ ಅಂಶಗಳು ಚರ್ಚಿತಗೊಂಡಿವೆ. ಈ ಪುಸ್ತಕವು ಚಿತ್ರಕಲಾ ಶಿಕ್ಷಕರಿಗೆ, ಚಿತ್ರಕಲಾ ಪ್ರಶಿಕ್ಷಕರಾಗಿ ವ್ಯಾಸಂಗ ಮಾಡುತ್ತಿರುವ ಡಿ.ಎಂ.ಸಿ. ಕಲಾಮೂಲ ತರಗತಿ, ಎ.ಟಿ.ಸಿ., ಎ.ಎಂ.ಜಿ.ಡಿ. ವಿಶೇಷ ಪರಿಣತಿ ತರಗತಿ ಮತ್ತು ಟಿ.ಸಿ.ಎಚ್. (ಡಿ.ಎಡ್) ವಿದ್ಯಾರ್ಥಿಗಳಿಗೆ ಬಹಳ ಉಪಯುಕ್ತವಾಗಿದೆ. ಚಿತ್ರಕಲೆಯನ್ನು ಕಲಾಶಿಕ್ಷಕರು ಕಲಿಸುವಲ್ಲಿ ಅನೇಕ ವಿಧಾನಗಳಿವೆ. ಅವುಗಳಲ್ಲಿ ಪರೋಕ್ಷ ವಿಧಾನ, ಅಪರೋಕ್ಷ ವಿಧಾನ ಮತ್ತು ಪರೋಕ್ಷಾಪರೋಕ್ಷ ವಿಧಾನಗಳೆಂಬ ಮೂರು ರೀತಿಗಳು ಮುಖ್ಯವಾಗಿವೆ. ಇವುಗಳಲ್ಲಿ ವಿದ್ಯಾರ್ಥಿಗಳ ಮನೋಸ್ಥಿತಿ, ಸಾಮರ್ಥ್ಯ, ವಯೋಮಾನಗಳನ್ನು ಅನುಸರಿಸಿ ಅವರಿಗೆ ಹೊಂದುವ ವಿಧಾನವನ್ನು ಆರಿಸಿಕೊಳ್ಳಬೇಕಾಗುತ್ತದೆ. ಮಕ್ಕಳ ವಯೋಗುಣಕ್ಕನುಗುಣವಾದ ಕ್ರಿಯಾತ್ಮಕ

೩೫. ಅ.ಲ.ನರಸಿಂಹನ್ : ವಿಕಾಸ ಕಂಡ ಕರ್ನಾಟಕದ ಚಿತ್ರಕಲೆ : ಪ್ರಕಾಶ ಸಾಹಿತ್ಯ, ಬೆಂಗಳೂರು- ೧೯೪೯
೩೬. ಎನ್.ಶ್ರೀಪತಿ : ಶಿಕ್ಷಣ, ಸೃಜನಶೀಲಕಲೆ : ರಶ್ಮಿ ಪ್ರಕಾಶನ, ಬೆಂಗಳೂರು-೧೯೯೩

ಚಟುವಟಿಕೆಗಳನ್ನು ಹಮ್ಮಿಕೊಂಡು ಅವರಲ್ಲಿರುವ ಸೃಜನಶೀಲತೆಯನ್ನು, ಪ್ರತಿಭೆಯನ್ನು ಹೊರಹಾಕಬೇಕು ಎನ್ನುವ ಅಂಶಗಳನ್ನು ಇಲ್ಲಿ ಹೇಳಿದೆ. ಜೊತೆಗೆ ಶಿಕ್ಷಣವು ಬೆಳೆದು ಬಂದ ರೀತಿ, ಶಿಕ್ಷಣ ಕ್ರಮದಲ್ಲಿನ ಪ್ರಯೋಗಗಳು, ಕಲೆ ಕೌಶಲಗಳ ಮಹತ್ವ, ವಿವಿಧ ಮಟ್ಟಗಳು, ಪಾಠಕ್ರಮ, ಮುಂತಾದ ಶಿಕ್ಷಣದ ಅಂಶಗಳನ್ನು ತಿಳಿಸಿಕೊಡಲಾಗಿದೆ. ಒಟ್ಟು ಆರು ಅಧ್ಯಾಯಗಳನ್ನು ಹೊಂದಿದ ಈ ಪುಸ್ತಕದಲ್ಲಿ ಮಕ್ಕಳು ರಚಿಸಿದ ಚಿತ್ರಗಳ ಛಾಯಾಚಿತ್ರಗಳನ್ನು ವಿವರಣೆಗೆ ಅನುಸಾರವಾಗಿ ಬಳಸಿಕೊಳ್ಳಲಾಗಿದೆ.

**ಚಿತ್ರಕಲಾ ಶಿಕ್ಷಕರ ಕೈಪಿಡಿ :**

ಕರ್ನಾಟಕ ಸರಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ ಪಠ್ಯಪುಸ್ತಕ ನಿರ್ದೇಶನಾಲಯವು ಈ 'ಚಿತ್ರಕಲಾ ಶಿಕ್ಷಕರ ಕೈಪಿಡಿ'ಯನ್ನು ರೂಪಿಸಿದೆ.[೩೭]ಇದರಲ್ಲಿ ಒಂದರಿಂದ ಹತ್ತನೇ ತರಗತಿಯ ವಿದ್ಯಾರ್ಥಿಗಳಿಗೆ ಯಾವ ರೀತಿಯಲ್ಲಿ ಮತ್ತು ಎಷ್ಟು ಪ್ರಮಾಣದಲ್ಲಿ ಚಿತ್ರಕಲೆಯ ವಿಷಯವನ್ನು ಕಲಿಸಬೇಕೆಂಬುದನ್ನು ತಿಳಿಸಲಾಗಿದೆ. ಒಂದನೇ ತರಗತಿಗೆ ಕಲೆ ಮತ್ತು ಸೃಜನಶೀಲ ಅಭಿವ್ಯಕ್ತಿ ಎಂದು ಹೆಸರಿಸಿ ಸುಮಾರು ಇಪ್ಪತ್ತು ಅಂಶಗಳನ್ನು ವಿವಿಧ ಮಾಧ್ಯಮಗಳ ಹಿನ್ನೆಲೆಯಲ್ಲಿ ಕಲಿಸಲು ತಿಳಿಸಲಾಗಿದೆ. ಮಣ್ಣು, ಕಾಗದ, ನಿತ್ಯಬಳಕೆಯ ವಸ್ತುಗಳು, ಈ ಹಂತದ ಕಲಾಕಲಿಕೆಗಾಗಿ ಗೊತ್ತುಪಡಿಸಲಾಗಿದೆ. ಮೂರನೆ ಮತ್ತು ನಾಲ್ಕನೆಯ ತರಗತಿಯ ವಿದ್ಯಾರ್ಥಿಗಳಿಗೆ ಸರಳವಾದ ಪಕ್ಷಿಗಳು, ಪ್ರಾಣಿಗಳು, ಗಿಡ–ಮರಗಳು, ಮನೆ–ಶಾಲೆಗಳು, ನಿತ್ಯದ ವಸ್ತುಗಳನ್ನು ಚಿತ್ರಿಸಲು ಸೂಚಿಸಿದ್ದರೆ, ಐದು, ಆರು ಮತ್ತು ಏಳನೇ ತರಗತಿಯ ವಿದ್ಯಾರ್ಥಿಗಳಿಗೆ ತಮಗೆ ಕಂಡ ದೃಶ್ಯಗಳನ್ನು ತಾವು ನೋಡಿದಂತೆ ಚಿತ್ರಿಸಲು ಹೇಳಿದೆ. ಹಣ್ಣು ಮಾರುವವರು, ಬಲೂನು ಮಾರುವವ, ಗೊಂಬೆ ಮಾರುವವ, ಕೆಲಸದಲ್ಲಿ ನಿತರ ಸ್ತ್ರೀ–ಪುರುಷರು, ಹೀಗೆ ವಿಂಗಡಣೆ ಮಾಡಿ ಚಿತ್ರಿಸಲು ಹೇಳಿದೆ. ಪ್ರೌಢಶಾಲೆಯ ವಿದ್ಯಾರ್ಥಿಗಳಿಗೆ ತಾವು ಬಿಡಿಸಿದ ಚಿತ್ರಕ್ಕೆ ವರ್ಣಲೇಪನ ಮಾಡಲು ಮತ್ತು ಪೆನ್ಸಿಲ್‌ದಿಂದ ನೆರಳು ಬೆಳಕು ರೂಪಿಸಲು ಸೂಚಿಸಿದೆ. ಈ ಎಲ್ಲ ಅಂಶಗಳನ್ನು ಚಿತ್ರಕಲಾ ಶಿಕ್ಷಕರು ಹೇಗೆ ಅಳವಡಿಸಿಕೊಂಡು ವಿದ್ಯಾರ್ಥಿಗಳಿಗೆ ಕಲಿಸಬೇಕು ಎನ್ನುವ ಅಂಶಗಳನ್ನು ತಿಳಿಸಲಾಗಿದೆ.

**ವಿನ್ಯಾಸ ಜಗತ್ತು :**

ಚಿತ್ರಕಲಾ ಶಿಕ್ಷಣದಲ್ಲಿ ಕಲಿಕೆಯ ಹಿನ್ನೆಲೆಯಲ್ಲಿ ಹಲವಾರು ವಿಧಾನಗಳಿವೆ. ಚಿತ್ರಕಲಾ ಶಿಕ್ಷಣವನ್ನು ಪಡೆದಿರದವರಿಗಾಗಿ ಚಿತ್ರಕಲೆಯನ್ನು ಕಲಿಸುವ ವಿಧಾನಗಳು ಇನ್ನೂ ಬೇರೆಯಾಗಿರುತ್ತವೆ. ಇಂತಹ ಒಂದು ಪ್ರಯತ್ನದ ಹಿನ್ನೆಲೆಯಲ್ಲಿ ಪ್ರಸ್ತುತ ಕೃತಿಯನ್ನು ಬಾಗೂರು ಮಾರ್ಕಂಡೇಯ ರಚನೆ ಮಾಡಿದ್ದಾರೆ.[೩೮] ಈ ಕೃತಿಯು ಬೇರೆ ಕ್ಷೇತ್ರದಲ್ಲಿದ್ದುಕೊಂಡು ಹವ್ಯಾಸಕ್ಕಾಗಿ ಚಿತ್ರಕಲೆ ಕಲಿಯಬೇಕು ಎನ್ನುವವರಿಗೆ ಉಪಯುಕ್ತವಾಗುವಂತೆ ರಚನೆಯಾಗಿದೆ. ಈ ಪುಸ್ತಕದಲ್ಲಿ ವೃತ್ತ, ಆಯತ, ಚೌಕ, ಹೀಗೆ ಬೇರೆ ಬೇರೆ ವಿನ್ಯಾಸಗಳಲ್ಲಿ ಪ್ರಾಣಿ, ಪಕ್ಷಿ, ಎಲೆಬಳ್ಳಿ ಇವುಗಳ ನೈಜರೂಪವನ್ನು ಚಿತ್ರಿಸಿ, ಅವುಗಳನ್ನು ಅಲಂಕಾರಿಕ ಮಾದರಿಯಲ್ಲಿ ನಕ್ಷೆಯಾಗಿ ಹೇಗೆ ಬಳಸಿಕೊಳ್ಳಬಹುದು ಎನ್ನುವ ಬಗ್ಗೆ ತಿಳಿಸಲಾಗಿದೆ. ಒಂದು ವಸ್ತು, ಸಸ್ಯ, ಅದರ ಭಾಗಗಳಾದ ಕಾಂಡ, ಬೇರು, ಎಲೆ, ಹೂ, ಹಣ್ಣು, ಮುಂತಾದ ಅಂಶಗಳು, ಪ್ರಾಣಿ–ಪಕ್ಷಿಗಳು, ಮಾನವಾಕಾರಗಳು ಹೀಗೆ ಪ್ರಮುಖ ಆಕಾರಗಳನ್ನು ನಕ್ಷೆಯ ರೂಪಕ್ಕೆ ಪರಿವರ್ತಿಸುವ ವಿಧಾನವನ್ನು ಇಲ್ಲಿ ಚಿತ್ರಗಳ ಮೂಲಕ ಉದಾಹರಣೆಗಳ ಸಹಿತ ಕೊಡಲಾಗಿದೆ. ಈ ಪುಸ್ತಕದಲ್ಲಿ ಒಟ್ಟು ಬೇರೆ ಬೇರೆ ವಿನ್ಯಾಸದಲ್ಲಿರುವ ೮೦ ನಕ್ಷೆಗಳು ರಚನೆಯಾಗಿವೆ.

---

೩೭. ವಿ.ಪಿ.ತಿಪ್ಪಯ್ಯ : ಚಿತ್ರಕಲಾ ಶಿಕ್ಷಕರ ಕೈಪಿಡಿ : ಸಾರ್ವಜನಿಕ ಶಿಕ್ಷಣ ಇಲಾಖೆ, ಕರ್ನಾಟಕ ಸರಕಾರ, ಬೆಂಗಳೂರು–೧೯೯೫

೩೮. ಬಾಗೂರು ಮಾರ್ಕಂಡೇಯ : ವಿನ್ಯಾಸ ಜಗತ್ತು : ಸ್ವಪ್ನ ಬುಕ್‌ಸ್ಟಾಲ್ ಬೆಂಗಳೂರು–೧೯೯೭

**ನೀವೂ ಕಲಾವಿದರಾಗಬೇಕೆ? :**

ನೀವೂ ಕಲಾವಿದರಾಗಬೇಕೆ? ಪುಸ್ತಕವನ್ನು ಬಾಗೂರು ಮಾರ್ಕಂಡೇಯ ರಚನೆ ಮಾಡಿದ್ದು,[೩೯] ಚಿತ್ರಕಲೆಯನ್ನು ಹೇಗೆ ಕಲಿಯಬೇಕು? ಎಂಬುದನ್ನು ಹಂತ ಹಂತವಾಗಿ ಇದರಲ್ಲಿ ತಿಳಿಸಿ ಕೊಟ್ಟಿದ್ದಾರೆ. ಮೊದಲು ಕೇವಲ ರೇಖೆಗಳನ್ನು ಎಳೆಯುವದು, ಉದ್ದ, ಅಡ್ಡ, ವಕ್ರ, ವೃತ್ತಾಕಾರ ಹೀಗೆ ವಿವಿಧ ವಿನ್ಯಾಸದ ರೇಖೆ ರಚಿಸುವುದು, ನಂತರದಲ್ಲಿ ಸರಳವಾಗಿರುವ ಚಿತ್ರಗಳನ್ನು ನೋಡಿ ಚಿತ್ರಿಸಲು ಹೇಳಲಾಗುತ್ತದೆ. ಆಮೇಲೆ ಮನುಷ್ಯ, ಪ್ರಾಣಿ, ಪಕ್ಷಿ, ಗಿಡ-ಮರ, ಪ್ರತಿಯೊಂದು ವಸ್ತುವನ್ನು ನೋಡಿ ಯಥಾವತ್ತಾಗಿ ಚಿತ್ರಿಸಲು ಪ್ರೇರೇಪಿಸಲಾಗುತ್ತದೆ. ಈ ಹಂತದಲ್ಲಿ ಈಗಾಗಲೆ ರಚನೆಮಾಡಿದ ಉತ್ತಮ ಚಿತ್ರಗಳನ್ನು ನಕಲು ಮಾಡಲಾಗುವುದು. ಆಕಾರಗಳು ಹೋಲಿಕೆಯ ಸ್ವರೂಪಕ್ಕೆ ಬಂದಾಗ ನೆರಳು-ಬೆಳಕಿನ ಪರಿಣಾಮ ಉಂಟುಮಾಡಿ ಚಿತ್ರಗಳಿಗೆ ದುಂಡುತನವನ್ನು ತರಲು ತಿಳಿಸಲಾಗುವುದು. ಆಮೇಲೆ ವರ್ಣಲೇಪನ, ಬಣ್ಣಗಳ ಮೈವಳಿಕೆ ಹೀಗೆ ಹಂತಗಳನ್ನು ಅನುಸರಿಸಲಾಗುವುದು. ಚಿತ್ರಗಳಲ್ಲಿ ಸ್ಮರಣಚಿತ್ರಣ, ಕಲ್ಪನಾಚಿತ್ರಣ, ಸಂಯೋಜನಾ ಚಿತ್ರಣ, ನಿಸರ್ಗಚಿತ್ರಣ, ವಸ್ತುಚಿತ್ರಣ, ಸ್ಥಿರಚಿತ್ರಣ ಹೀಗೆ ವಿವಿಧ ಪ್ರಕಾರಗಳಿವೆ. ಅಲ್ಲದೇ ವ್ಯಕ್ತಿಚಿತ್ರ ಮತ್ತು ಭಾವಚಿತ್ರಗಳೂ ಉಂಟು. ಇವೆಲ್ಲವುಗಳನ್ನು ಹೇಗೆ ಚಿತ್ರಿಸಬೇಕೆಂಬ ವಿಧಿ-ವಿಧಾನಗಳನ್ನು ಈ ಪುಸ್ತಕದಲ್ಲಿ ತಿಳಿಸಿಕೊಡಲಾಗಿದೆ. ಚುಕ್ಕೆ ಚಿತ್ರಗಳು, ಕರಡು ರೇಖಾಚಿತ್ರಗಳು, ರೇಖೆಗಳಲ್ಲಿ ಪ್ರಾಣಿ-ಪಕ್ಷಿಗಳು, ಹೂ-ಬಳ್ಳಿಗಳು, ಹಣ್ಣು-ಹಂಪಲುಗಳು, ಯಥಾದರ್ಶನ ಶಾಸ್ತ್ರ, ಕಲ್ಪನಾ ಚಿತ್ರಣ, ವಿವಿಧ ಭಾವ-ಭಂಗಿಗಳಲ್ಲಿ ಅವಯವಗಳನ್ನು ಚಿತ್ರಿಸಿರುವ ರೀತಿ, ನವ್ಯಚಿತ್ರರಚನೆಯ ಸಂಗತಿಗಳ ಬಗ್ಗೆ ಚಿತ್ರಸಹಿತ ವಿವರಣೆಯನ್ನು ಈ ಕೃತಿಯಲ್ಲಿ ಕೊಡಲಾಗಿದೆ.

**ಚುಕ್ಕೆ ಚಿತ್ರ, ನೀವೂ ರಚಿಸಬೇಕೆ? :**

ಕೆಲವು ಜನ ಹವ್ಯಾಸಕ್ಕಾಗಿ ಚಿತ್ರಕಲೆಯನ್ನು ಕಲಿಯಬೇಕೆಂದು ಆಸೆಪಡುತ್ತಾರೆ. ಇಂತವರು ಕಲಾಶಾಲೆಯ ಶೈಕ್ಷಣಿಕ ಶಿಸ್ತುಗಳಿಗೆ ಒಳಪಡದೆ ತಮ್ಮ ಬಿಡುವಿನ ವೇಳೆಯಲ್ಲಿ ಚಿತ್ರಕಲೆ ಕಲಿಯುತ್ತಾರೆ. ಅಂತಹವರಿಗಾಗಿ ಈ ಪುಸ್ತಕವನ್ನು ಬಾಗೂರು ಮಾರ್ಕಂಡೇಯ ರಚನೆ ಮಾಡಿದ್ದು,[೪೦] ಚುಕ್ಕೇಚಿತ್ರ ರಚನೆಯನ್ನು ಹೇಗೆ ಮಾಡಬೇಕೆಂಬ ಬಗ್ಗೆ ಮಾಹಿತಿ ನೀಡುತ್ತದೆ.

ಈ ಪುಸ್ತಕದ ಪ್ರತಿಯೊಂದು ಪುಟದಲ್ಲಿಯೂ ಚಿತ್ರಗಳಿದ್ದು ಅದಕ್ಕೆ ಪೂರಕವಾಗಿರುವ ಮಾಹಿತಿಯನ್ನು ಕೆಳಗೆ ಬರೆಯಲಾಗಿದೆ. ಚುಕ್ಕೆಚಿತ್ರ ರಚನೆಯಲ್ಲಿ ಹೇಗೆ ಹಂತಗಳನ್ನು ಮಾಡಿಕೊಳ್ಳಬೇಕು, ಯಾವ ರೀತಿ ಸಾಗಬೇಕು ಎನ್ನುವ ವಿವರಗಳನ್ನು ಉದಾಹರಣೆಗಳ ಸಹಿತ ತಿಳಿಸಿಕೊಡಲಾಗಿದೆ. ಇಲ್ಲಿ ಮುಖ್ಯವಾಗಿ ಚುಕ್ಕೇಚಿತ್ರ ರಚನೆಯ ಪರಿಕರಗಳು, ಶುಭ ಆರಂಭ, ಬಿಂದು, ಪ್ರಶ್ನೆಗಳು, ರೇಖಾಚಿತ್ರಮಾದರಿ, ಚುಕ್ಕೇಚಿತ್ರ ಮಾದರಿ ಇವೆರಡಕ್ಕೂ ಇರುವ ವ್ಯತ್ಯಾಸಗಳು, ನವರಸಗಳು, ಈ ಕಲಾಪ್ರಕಾರದ ಕಲಿಕೆಯನ್ನು ಹೇಗೆ ಕಲಿಯಬೇಕು, ಗಮನಿಸುವಂತಹ ಅಂಶಗಳು, ಸರಳತೆಯಿಂದ ಸಾಗಿರಿ, ನೆರಳು-ಬೆಳಕಿನ ವಿನ್ಯಾಸ ರೂಪಿಸುವ ರೀತಿ, ಕಣ್ಣು, ಮೂಗು, ಬಾಯಿಗಳಂತಹ ಅಂಗಾಂಗಗಳನ್ನು ಚುಕ್ಕೇ ವಿನ್ಯಾಸದಲ್ಲಿ ರಚಿಸುವ ರೀತಿಗಳನ್ನು ಮತ್ತು ಚಿತ್ರಪೂರ್ಣಗೊಂಡ ನಂತರ ಅವಶ್ಯವಿದ್ದಲ್ಲಿ ಚುಕ್ಕೇ ವಿನ್ಯಾಸದಿಂದ ಹಿನ್ನೆಲೆಯನ್ನು ರಚಿಸುವ ವಿಧಾನ ಮುಂತಾದ ಅಂಶಗಳನ್ನು ತಿಳಿಸಲಾಗಿದೆ.

---

೩೯. ಬಾಗೂರು ಮಾರ್ಕಂಡೇಯ : ನೀವೂ ಕಲಾವಿದರಾಗಬೇಕೆ? : ಕರ್ನಾಟಕ ಬುಕ್ ಡಿಪೋ, ಬೆಂಗಳೂರು-೧೯೯೭

೪೦. ಬಾಗೂರು ಮಾರ್ಕಂಡೇಯ : ಚುಕ್ಕೇಚಿತ್ರ, ನೀವೂ ರಚಿಸಬೇಕೆ? : ಸ್ವಪ್ನ ಬುಕ್ ಹೌಸ್, ಗಾಂಧಿನಗರ, ಬೆಂಗಳೂರು-೨೦೦೨

**ಕ. ಕರ್ನಾಟಕದ ಕಲಾಪರಿಚಯ ಮತ್ತು ಕ್ಯಾಟಲಾಗ್ ಚಿತ್ರಕಲಾ ಸಾಹಿತ್ಯ :**

ಇಲ್ಲಿ ಕರ್ನಾಟಕದ ಕಲೆಯ ಬಗ್ಗೆ ಪರಿಚಯಾತ್ಮಕ ನೋಟಕೊಡುವ ಸಾಹಿತ್ಯಕೃತಿಗಳು ಮತ್ತು ಕಲಾಪ್ರದರ್ಶನಗಳ ಹಿನ್ನೆಲೆಯಲ್ಲಿ ರಚನೆಗೊಂಡ ಕ್ಯಾಟಲಾಗ್ ಮಾದರಿಯ ಸಾಹಿತ್ಯ ಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಅವುಗಳ ಸಂಕ್ಷಿಪ್ತ ನೋಟವನ್ನು ಈ ಕೆಳಗಿನಂತೆ ಬಿಂಬಿಸಬಹುದು.

**ಕರ್ನಾಟಕದ ಚಿತ್ರಕಲೆ :**

ಪ್ರಸ್ತುತ ಕರ್ನಾಟದಲ್ಲಿ ಚಿತ್ರಕಲೆ ಪುಸ್ತಕವನ್ನು ಶಿವರಾಂ ಕಾರಂತ ಬರೆದಿದ್ದಾರೆ.[೪೧]ಕಲೆ ಹೇಗೆ ಭಾವನಾತ್ಮಕವಾಗಿ ರೂಪುಗೊಳ್ಳುತ್ತದೆ, ಕಲೆ ಅನ್ನುವುದು ಯಾವುದು?, ಕೆಲವು ಪುರಾತನ ಚಿತ್ರಗಳು, ಚಾಲುಕ್ಯರ ಕಾಲದ ಚಿತ್ರಗಳು, ವಿಜಯನಗರ ಮತ್ತು ಬಹಮನಿ ರಾಜರ ಚಿತ್ರಕಲೆ, ಮುಂದಿನ ಶತಮಾನಗಳಲ್ಲಿ ಚಿತ್ರಕಲೆ ಹೀಗೆ ವಿಂಗಡಿಸಿ ವಿಷಯ ಪ್ರಸ್ತಾಪಿಸಲಾಗಿದೆ. ಸ್ಪೇನ್, ಫ್ರಾನ್ಸ್, ಆಫ್ರಿಕಾ, ಸಹರಾ, ಭಾರತದ ಹೊಷೆಂಗಾಬಾದ್, ಭೂಪಾಲ, ಚಿತ್ರಗಳಲ್ಲದೆ ಕರ್ನಾಟಕದ ಅಂಕಲಿಮಠ, ಹಂಪೆ, ಆನೆಗುಂದಿ, ಮುಂತಾದ ಪ್ರದೇಶದ ಪ್ರಾಗಿತಿಹಾಸ ಕಾಲದ ಚಿತ್ರಗಳನ್ನು ಕುರಿತು ಹೇಳಲಾಗಿದೆ. ಅಜಂತಾ, ಬಿಜಾಪೂರ, ಬಾದಾಮಿ ಚಿತ್ರಗಳು, ಹಂಪೆಯ ವಿರುಪಾಕ್ಷದೇವಾಲಯದ ಚಿತ್ರಗಳು ಇಲ್ಲಿ ಸ್ಥೂಲವಾಗಿ ಪ್ರಸ್ತಾಪಿತವಾಗಿವೆ. ನಂತರದಲ್ಲಿ ನಿಪ್ಪಾಣಿ, ನರಗುಂದ, ಶ್ರವಣಬೆಳಗೋಳ, ಶ್ರೀರಂಗಪಟ್ಟಣ, ಸಿಬಿ ಮತ್ತು ಸಿರಾಗಳಲ್ಲಿನ ಭಿತ್ತಿಚಿತ್ರಗಳು ಹಾಗೂ ಉದ್ಧರಣೆಯ ಪಟಗಳಲ್ಲಿನ ಚಿತ್ರಗಳ ಬಗ್ಗೆ ಹೇಳಲಾಗಿದೆ. ಈ ಚಿಕ್ಕ ಪುಸ್ತಕವು ಕರ್ನಾಟಕದಲ್ಲಿ ಚಿತ್ರಕಲೆ ಬೆಳೆದುಬಂದ ರೀತಿಯನ್ನು ಸಂಕ್ಷಿಪ್ತವಾಗಿ ತಿಳಿಸಿಕೊಡುತ್ತದೆ. ಈ ಪ್ರದೇಶದಲ್ಲಿ ಕಾಲಕಾಲಕ್ಕೆ ಪ್ರಾದೇಶಿಕ ಶೈಲಿಗಳು ಹುಟ್ಟಿಕೊಂಡಿದ್ದು, ಅವುಗಳಿಗೆ ಸ್ಥಳಿಯ ಅರಸರು ಮತ್ತು ಇನ್ನಿತರರು ಪ್ರೋತ್ಸಾಹ ನೀಡಿ ಬೆಳೆಸಿದ್ದು, ಇಂತಹ ಸಂಗತಿಗಳನ್ನು ಇಲ್ಲಿ ತಿಳಿಸಲಾಗಿದೆ.

**ಕರ್ನಾಟಕದ ಕಲೆಗಳು :**

ಕನ್ನಡ ಸಾಹಿತ್ಯ ಪರಿಷತ್ತು ಕರ್ನಾಟಕದ ಕಲೆಗಳ ಬಗ್ಗೆ ಹತ್ತು ಸಂಪುಟಗಳನ್ನು ಹೊರತಂದಿದೆ. ಅವುಗಳಲ್ಲಿ ಸಂಗೀತ, ಶಿಲ್ಪ, ವಾಸ್ತು ಮತ್ತು ಚಿತ್ರಕಲೆ ಹೀಗೆ ವಿವಿಧ ಪ್ರಕಾರಗಳಿಗೆ ಸಂಬಂಧಿಸಿವೆ. ಇವುಗಳಲ್ಲಿ ಪ್ರಸ್ತುತ ಹತ್ತನೆಯ ಸಂಪುಟವು ಕನ್ನಡ ನಾಡಿನ ಕಲಾವಿದರು ಎಂಬುದಾಗಿದ್ದು, ಪಿ.ಆರ್.ತಿಪ್ಪೇಸ್ವಾಮಿಯವರು ಬರೆದಿದ್ದಾರೆ.[೪೨]ಇದರಲ್ಲಿ ಕನ್ನಡ ನಾಡಿನ ಕಲಾವಿದರ ಜೀವನ, ಸಾಧನೆ, ಕಲಾಬದುಕು, ವಿಶಿಷ್ಟ ಮೈಲುಗಲ್ಲುಗಳನ್ನು ಬಿಂಬಿಸಲಾಗಿದೆ.

ಕಲಾವಿದರ ಕುರಿತಾಗಿರುವ ಈ ಸಂಪುಟದಲ್ಲಿ ಐದು ಭಾಗಗಳನ್ನು ಮಾಡಿಕೊಂಡು ವಿಷಯ ಪ್ರಸ್ತಾಪಿಸಲಾಗಿದೆ. ಮೊದಲನೆಯ ಭಾಗದಲ್ಲಿ ಚಿತ್ರಕಲಾವಿದರು, ಎರಡನೆಯ ಭಾಗದಲ್ಲಿ ಜನಪದ ಕಲಾವಿದರು, ಮೂರನೆಯ ಭಾಗದಲ್ಲಿ ರಂಗಭೂಮಿ ಕಲಾವಿದರು, ನಾಲ್ಕನೆಯ ಭಾಗದಲ್ಲಿ ಸಂಗೀತ ಕಲಾವಿದರು ಐದನೆಯ ಭಾಗದಲ್ಲಿ ಪ್ರಸಿದ್ಧಿಪಡೆದ ಕೆಲವು ಜನ ಕಲಾವಿದರ ಸಂಕ್ಷಿಪ್ತ ಜೀವನ ಚರಿತ್ರೆ ಕೊಡಲಾಗಿದೆ. ಕಲಾವಿದರ ಬಗ್ಗೆ ವಿವರ ಕೊಡುವಾಗ ಅಲ್ಲಲ್ಲಿ ಆಯಾ ಕಲಾವಿದರ ಕೃತಿಗಳ ವಿಮರ್ಶೆ, ಕಲಾಶೈಲಿಯ ಲಕ್ಷಣಗಳು, ಪ್ರೇರಣೆ, ಪ್ರಭಾವ ಮತ್ತು ತಂತ್ರಗಾರಿಕೆಗಳಲ್ಲದೆ ಅವರ ಪ್ರದರ್ಶನಗಳ ಬಗ್ಗೆಯೂ ಸ್ಥೂಲ ಮಾಹಿತಿ ಕೊಡಲಾಗಿದೆ.

---

೪೧. ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ : ಐ.ಬಿ.ಎಚ್.ಪ್ರಕಾಶನ, ಬೆಂಗಳೂರು–೧೯೭೫

೪೨. ಪಿ.ಆರ್.ತಿಪ್ಪೇಸ್ವಾಮಿ : ಕರ್ನಾಟಕದ ಕಲೆಗಳು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು– ೧೯೮೬

**ವಿಜಯನಗರದ ಕಲೆ ಮತ್ತು ಸಾಹಿತ್ಯ :**

ವಿಜಯನಗರದ ಕಲೆ ಮತ್ತು ಸಾಹಿತ್ಯದ ಬಗ್ಗೆ ಇರುವ ಈ ಕೃತಿಯನ್ನು ಶಾಮಲಾಲ್ ಪುಲುಮತಿ ರಚಿಸಿದ್ದಾರೆ.[೪೩]ಇದರಲ್ಲಿ ಕಲೆ ಮತ್ತು ಸಾಹಿತ್ಯಗಳನ್ನು ಪ್ರತ್ಯೇಕ ಭಾಗಗಳಾಗಿ ವಿಂಗಡಿಸಿ ವಿವೇಚನೆ ಮಾಡಲಾಗಿದೆ. ಕಲೆ ವಿಭಾಗದಲ್ಲಿ ವಾಸ್ತುಕಲೆ, ಶಿಲ್ಪಕಲೆ, ಚಿತ್ರಕಲೆಗಳು ಮುಖ್ಯವಾಗಿ ವಿವೇಚನೆಗೊಳಪಟ್ಟಿವೆ. ವಾಸ್ತುಕಲೆಯನ್ನು ಹೇಳುವಾಗ ಅಲ್ಲಿನ ಚಿತ್ರಕಲೆಯ ಬಗ್ಗೆಯೂ ಪ್ರಸ್ತಾಪಿಸಲಾಗಿದೆ. ವಿರೂಪಾಕ್ಷ ದೇವಾಲಯದ ಭಿತ್ತಿಚಿತ್ರಗಳು, ಲೇಪಾಕ್ಷಿಯಲ್ಲಿನ ಭಿತ್ತಿಚಿತ್ರಗಳು, ತಮಿಳುನಾಡಿನ ಕೆಲವು ಪ್ರದೇಶಗಳಲ್ಲಿನ ಭಿತ್ತಿಚಿತ್ರಗಳ ಬಗ್ಗೆ ಹೇಳಿದೆ. ವಿರೂಪಾಕ್ಷ ದೇವಾಲಯದ ಭಿತ್ತಿಚಿತ್ರಗಳ ಬಗ್ಗೆ ಹೇಳುವಾಗ ಅಲ್ಲಿಯ ಚಿತ್ರಗಳ ಕಾಲಮಾನ, ಬರೆಸಿದ ರಾಜರು, ವಸ್ತುವಿಷಯಗಳು, ಬಣ್ಣಗಾರಿಕೆ, ರೇಖಾವಿನ್ಯಾಸ, ಭಿತ್ತಿಸಿದ್ಧತೆಯ ವಿಧಾನ ಮತ್ತು ಚಿತ್ರರಚನಾ ವಿವರಗಳನ್ನು ಸ್ಥೂಲವಾಗಿ ಹೇಳಲಾಗಿದೆ. ಇಂತಹ ಚಿತ್ರಕಲೆಯ ಬಗೆಗಿನ ವಿವರಗಳ ಹಿನ್ನೆಲೆಯಲ್ಲಿ ಇದನ್ನು ಕಲಾ ಸಾಹಿತ್ಯದಲ್ಲಿ ಉತ್ತಮ ಗ್ರಂಥಗಳ ಸಾಲಿಗೆ ಸೇರಿಸಬಹುದಾಗಿದೆ.

**ಬಣ್ಣದ ವೇಷ ಮತ್ತು ಇತರ ಉಪನ್ಯಾಸಗಳು :**

ಈ ಕೃತಿಯನ್ನು ಮಳಿಯ ಮಹಾಬಲಭಟ್ಟ ಬರೆದಿದ್ದು,[೪೪]ಯಕ್ಷಗಾನದ ವಿವಿಧ ಆಯಾಮಗಳನ್ನು ಕುರಿತ ಒಟ್ಟು ಎಂಟು ಲೇಖನಗಳಿವೆ.  ಯಕ್ಷಗಾನದಲ್ಲಿ ಪ್ರತಿಯೊಂದು ಅಂಶಗಳೂ ಮಹತ್ವ ಪಡೆದುಕೊಂಡಿವೆ. ಕುಣಿತ, ಹಾಡುಗಾರಿಕೆ, ಕಥಾಪ್ರಸಂಗ, ರಂಗಸಜ್ಜಿಕೆ ನಿರ್ಮಾಣ ಯಕ್ಷಗಾನ ಪಾತ್ರಧಾರಿಗಳ ಮುಖವರ್ಣಿಕೆ, ವೇಷ-ಭೂಷಣಗಳು, ರಂಗವಿನ್ಯಾಸಗಳು ಕಲೆಯ ಹಿನ್ನೆಲೆಯನ್ನು ಒಳಗೊಂಡಿವೆ. ಪ್ರತಿಯೊಂದು ಪಾತ್ರಧಾರಿಗೆ ಅದರ ಗುಣಲಕ್ಷಣಕ್ಕೆ ಅನುಸಾರವಾಗಿ ಮುಖವರ್ಣಿಕೆ ಸಿದ್ಧಪಡಿಸಲಾಗುತ್ತದೆ. ಇಂತಹ ಕಲಾ ಅಂಶಗಳ ಬಗ್ಗೆ ಇಲ್ಲಿನ ಲೇಖನದಲ್ಲಿ ಮಾಹಿತಿ ಇದೆ. ಇದರಲ್ಲಿ ಯಕ್ಷಗಾನ ರಂಗಭೂಮಿಯ ಬೆಳವಣಿಗೆ, ಬಣ್ಣದ ವೇಷ, ಬಯಲಾಟದ ಬಣ್ಣಗಾರಿಕೆ, ಯಕ್ಷಗಾನದ ಮಾತಿನ ಮಿತಿ, ಪರಂಪರೆಯ ಪ್ರಯೋಗ, ಧಾರ್ಮಿಕ ಹಿನ್ನೆಲೆ, ಅರ್ಥವಂತಿಕೆ, ರಸವಿಚಾರವಾದ, ಯಕ್ಷಗಾನದ ವಸ್ತು ಎಂಬ ವಿಷಯಗಳ ಬಗ್ಗೆ ಲೇಖನಗಳಿವೆ. ಈ ಕೃತಿಯು ಬಣ್ಣ ಮತ್ತು ಚಿತ್ರ ವಿನ್ಯಾಸದ ಹಿನ್ನೆಲೆಯಲ್ಲಿ ಪ್ರಸ್ತುತವಾಗುತ್ತದೆ.

**ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ :**

ಈ ಪುಸ್ತಕವನ್ನು ಕೆ.ವಿ.ಕಾಳೆ ಬರೆದಿದ್ದಾರೆ.[೪೫]ಚಿತ್ರಕಲಾವಿದರು ಬಳಸುವ ಬಣ್ಣಗಳನ್ನು ಎಣ್ಣೆ ಬಣ್ಣ, ನೀರು ಬಣ್ಣ, ಹುಡಿ ಬಣ್ಣ, ಪ್ಲಾಸ್ಟರ್ ಬಣ್ಣ, ಅಕ್ರಾಲಿಕ್ ಬಣ್ಣ, ಪೇಷ್ಟಲ್ ಬಣ್ಣ, ಮುಂತಾಗಿ ವಿಂಗಡಿಸಿಕೊಂಡು ವಿವೇಚಿಸಲಾಗಿದೆ. ಇತಿಹಾಸ ಪೂರ್ವಕಾಲದಲ್ಲಿ ಬಣ್ಣದ ಬಳಕೆ, ಹಸ್ತಪ್ರತಿ ಚಿತ್ರಗಳಲ್ಲಿ ಬಣ್ಣದ ಬಳಕೆ, ತೊಗಲುಗೊಂಬೆ ಚಿತ್ರಕಲೆ, ಸೂತ್ರದ ಗೊಂಬೆ ಚಿತ್ರಕಲೆ, ಆಟಿಕೆ ಗೊಂಬೆಗಳಲ್ಲಿ ಬಣ್ಣದ ಬಳಕೆ ಇವುಗಳ ಬಗ್ಗೆ ಹೇಳಿದೆ. ನಂತರದಲ್ಲಿ ಕಾವಿಕಲೆಯಲ್ಲಿ ಬಣ್ಣ, ಮದರಂಗಿ ಬಣ್ಣ, ಹಚ್ಚೆ ಕಲೆಯಲ್ಲಿ ಬಣ್ಣ, ಗಂಜೀಫಾ ಕಲೆಯಲ್ಲಿ ಬಣ್ಣ, ಗಾಜಿನ ಚಿತ್ರಕಲೆಯಲ್ಲಿ ಬಣ್ಣದ ಬಳಕೆಯ ವಿವರ ಕೊಡಲಾಗಿದೆ. ಅದೇ ರೀತಿ ಮೈಸೂರು ಸಾಂಪ್ರದಾಯಿಕ ಕಲೆ, ಬಯಲಾಟದ ಪ್ರಸಾಧನ ಕಲೆ, ರಂಗಭೂಮಿ ಪರದೆಗಳು ಯಕ್ಷಗಾನ ಮುಖವರ್ಣಿಕೆ ಮತ್ತು ರಂಗಸಜ್ಜಿಕೆ ಕಲೆಗಳಲ್ಲಿ ಬಣ್ಣದ ಬಳಕೆಯ ವಿಧಾನಗಳನ್ನು ಕುರಿತು ಹೇಳಲಾಗಿದೆ.

---

೪೩. ಶಾಮಲಾಲ್ ಪುಲುಮತಿ : ವಿಜಯನಗರದ ಕಲೆ ಮತ್ತು ಸಾಹಿತ್ಯ : ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು-೧೯೮೬
೪೪. ಮಳಿಯ ಮಹಾಬಲಭಟ್ಟ :ಬಣ್ಣದವೇಷ ಮತ್ತು ಇತರ ಉಪನ್ಯಾಸಗಳು:ಮಹಾಬಲಭಟ್ಟ ಪ್ರಕಾಶನ ಕರಂಗಲಪಾಡಿ, ಬೆಂಗಳೂರು-೧೯೮೮
೪೫. ಕೆ.ವಿ.ಕಾಳೆ : ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ : ಕನ್ನಡ ವಿಶ್ವವಿದ್ಯಾಲಯ ಹಂಪಿ-೨೦೦೦

ಮುಂದಿನ ಹಂತದಲ್ಲಿ ಸಮಕಾಲೀನ ಚಿತ್ರಕಲೆ ಮತ್ತು ಸಾಂಪ್ರದಾಯಿಕ ಚಿತ್ರಕಲೆಗಳಲ್ಲಿ ಯಾವ ರೀತಿಯ ಬಣ್ಣಗಳನ್ನು ಬಳಸುತ್ತಾರೆ ಎಂಬ ಬಗ್ಗೆ ವಿವರ ಕೊಟ್ಟಿದ್ದಾರೆ. ಪಾರಂಪರಿಕ ಬಣ್ಣ ತಯಾರಿಸಿ ಖನಿಜ ಮೂಲ, ಸಸ್ಯಮೂಲ, ಪ್ರಾಣಿ ಮೂಲ ವಸ್ತುಗಳಿಂದ ಬಣ್ಣ ತಯಾರಿಸಿಕೊಂಡು ಚಿತ್ರಕ್ಕೆ ಬಳಸುತ್ತಿದ್ದರು. ಕುಂಚಗಳನ್ನು ಮತ್ತು ಬಣ್ಣ ಮಿಶ್ರಮಾಡಿಕೊಳ್ಳಲು ಬೇಕಾಗುವ ಅಂಟು ದ್ರಾವಕವನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರು. ಆದರೆ ಸಮಕಾಲೀನ ಚಿತ್ರಕಲಾವಿದರಿಗೆ ಸಿದ್ಧ ಬಣ್ಣಗಳ ಹಲವಾರು ವೈವಿಧ್ಯತೆಗಳು ಲಭ್ಯವಾಗಿವೆ. ಪ್ರಾಚೀನ ಕಲಾವಿದರು ಬಣ್ಣ ತಯಾರಿಕೆಯನ್ನು ಒಂದು ಕಲಾತ್ಮಕ ಕ್ರಿಯೆಯಾಗಿ ಚಿತ್ರರಚನೆಯ ಜೊತೆಗೆ ಕಲಿತುಕೊಳ್ಳುತ್ತಿದ್ದರು ಎಂಬಂತಹ ವಿವಿಧ ವಿಷಯಗಳು ಈ ಪುಸ್ತಕದಲ್ಲಿ ನಿರೂಪಿಸಲ್ಪಟ್ಟಿವೆ.

**ವರ್ಣ ಸಂಚಯ :**

ಚಿತ್ರಕಲೆಯ ಕುರಿತು ವಿವಿಧ ಲೇಖನಗಳಿರುವ ಈ ಕೃತಿಯನ್ನು ಡಾ.ಎಸ್.ಸಿ.ಪಾಟೀಲ ರಚನೆಮಾಡಿದ್ದಾರೆ.[೪೬] ಇಲ್ಲಿರುವ ಲೇಖನಗಳು ಸಂಶೋಧನಾತ್ಮಕ ಹಿನ್ನೆಲೆಯಿಂದ ರಚನೆಯಾಗಿವೆ. ಆದಿಮಾನವ ಚಿತ್ರಕಲೆ, ಶಿಷ್ಟಪದ ಚಿತ್ರಕಲೆ, ಕಲೆಯ ತತ್ವಗಳು, ಕಲಾ ತಂತ್ರಗಾರಿಕೆ, ಹಸ್ತಪ್ರತಿ ಚಿತ್ರಕಲೆ, ಚಿತ್ರಕಲಾ ಶಿಕ್ಷಣ, ಜನಪದ ಚಿತ್ರಕಲೆ, ಆಧುನಿಕ ಕಲೆ ಮತ್ತು ಕಲೆಯ ಬಗೆಗಿನ ವಿಮರ್ಶಾತ್ಮಕ ವಿಷಯಗಳನ್ನು ಇವು ಒಳಗೊಂಡಿವೆ. ಆದಿಮಾನವ ಚಿತ್ರಕಲೆ ಹಿನ್ನೆಲೆಯಲ್ಲಿ ಬಾಗಲಕೋಟ ಜಿಲ್ಲೆಯ ಪ್ರಾಗಿತಿಹಾಸ ಚಿತ್ರಕಲೆ ಲೇಖನವಿದ್ದರೆ, ಜನಪದ ಪ್ರಕಾರದಲ್ಲಿ ಜನಪದ ಚಿತ್ರಕಲೆಯ ವರ್ಗೀಕರಣ, ಜನಪದ ಕೌದಿ ಚಿತ್ರಕಲೆಯ ವಿನ್ಯಾಸಗಳು, ಕಸೂತಿ ಚಿತ್ರಕಲಾ ವಿನ್ಯಾಸಗಳು ಎಂಬ ಲೇಖನಗಳಿವೆ. ಚಿತ್ರಕಲೆಯ ತತ್ವಗಳಡಿಯಲ್ಲಿ ಚಿತ್ರಕಲೆಯ ಷಡಂಗಗಳ ಕುರಿತು ಬರೆಯಲಾಗಿದೆ. ತಂತ್ರಗಾರಿಕೆಯಲ್ಲಿ ರೇಖಾಚಿತ್ರಕಲೆ, ಶಬ್ದರೇಖೆ, ವರ್ಣ, ಅಂತರ್‌ಶಾಸ್ತ್ರೀಯ ಅಧ್ಯಯನಗಳಿವೆ. ಕಲಾಶಿಕ್ಷಣಕ್ಕೆ ಸಂಬಂಧಿಸಿದಂತೆ ಚಿತ್ರಕಲೆ ಮತ್ತು ಶಿಕ್ಷಣ, ಕರ್ನಾಟಕದಲ್ಲಿ ಚಿತ್ರಕಲಾ ಶಿಕ್ಷಣ, ಲೇಖನಗಳು, ಕಲಾ ಶಿಕ್ಷಣದ ಸ್ವರೂಪ, ಬೆಳವಣಿಗೆ, ಸ್ಥಿತಿಗತಿಗಳನ್ನು ತಿಳಿಸಿ ಕೊಡುತ್ತವೆ. ಭಾರತೀಯ ಚಿತ್ರಕಲೆಯ ಆಧುನಿಕ ಒಲವುಗಳು ಎಂಬ ಲೇಖನದಲ್ಲಿ ಸಮಕಾಲೀನ ಸಂದರ್ಭದ ಕಲಾ ವಿವರಗಳು ರಚನಾ ಹಿನ್ನೆಲೆ, ಮೌಲ್ಯಗಳು, ವಿಮರ್ಶೆ ಹೀಗೆ ಹಲವು ಅಂಶಗಳು ಚರ್ಚಿಸಲ್ಪಟ್ಟಿವೆ. ಧಾರವಾಡ ಜಿಲ್ಲೆಯ ಚಿತ್ರಕಲಾ ಕೊಡುಗೆ ಎನ್ನುವ ಲೇಖನದಲ್ಲಿ ಈ ಜಿಲ್ಲೆಯ ಪ್ರಾಗಿತಿಹಾಸ ಚಿತ್ರಕಲೆ, ಶಿಷ್ಟಪದ ಚಿತ್ರಕಲೆ, ಭಿತ್ತಿಚಿತ್ರಕಲೆ, ಜನಪದ ಚಿತ್ರಕಲೆ, ಆಧುನಿಕ ಚಿತ್ರಕಲೆ, ಕಲಾಶಾಲೆಗಳು, ಕಲಾವಿದರು, ಮುಂತಾದ ಅಂಶಗಳನ್ನು ಬಿಂಬಿಸಲಾಗಿದೆ. ಹಸ್ತಪ್ರತಿ ಚಿತ್ರಕಲೆ ಎನ್ನುವ ಲೇಖನದಲ್ಲಿ ಈ ಚಿತ್ರಕಲೆಯ ವಿಂಗಡಣೆ, ರಚನೆಯ ಉದ್ದೇಶ, ಪರಿಕರಗಳು, ರಚನಾ ಕ್ರಮಗಳನ್ನು ಹೇಳಲಾಗಿದೆ. ಧಾರ್ಮಿಕವಾಗಿ ಹಸ್ತಪ್ರತಿಗಳನ್ನು ವಿಂಗಡಿಸಿ ವಿಶ್ಲೇಷಣೆ ಮಾಡಲಾಗಿದೆ.

**ಕರ್ನಾಟಕದಲ್ಲಿ ಚಿತ್ರಕಲಾ ಬೆಳವಣಿಗೆ ಒಂದು ಸಮೀಕ್ಷೆ :**

ಅಖಿಲ ಭಾರತ ೭೨ನೇ ಸಾಹಿತ್ಯ ಸಮ್ಮೇಳನವು ಬೀದರಿನಲ್ಲಿ ನಡೆದಾಗ ಅದರಂಗವಾಗಿ ಪ್ರಕಟಗೊಂಡ ಇದನ್ನು ಎಲ್. ಶಿವಲಿಂಗಪ್ಪ ಬರೆದಿದ್ದಾರೆ.[೪೭] ಕರ್ನಾಟಕದ ಚಿತ್ರಕಲಾ ಬೆಳವಣಿಗೆಯನ್ನು ವಿವಿಧ ಹಂತಗಳಲ್ಲಿ, ಕಾಲಘಟ್ಟಗಳಲ್ಲಿ ಸ್ಥೂಲವಾಗಿ ನಿರೂಪಿಸುವ ಪ್ರಯತ್ನ ಇಲ್ಲಿದೆ. ಆದಿಮಾನವ ಚಿತ್ರಕಲೆಯಿಂದ ಇಂದಿನ ಕಂಪ್ಯೂಟರ್ ಕಲೆಯವರೆಗೆ ಕರ್ನಾಟಕದ ಕಲಾ ಬೆಳವಣಿಗೆಯನ್ನು

೪೬. ಡಾ.ಎಸ್.ಸಿ.ಪಾಟೀಲ : ವರ್ಣ ಸಂಚಯ : ವಿಜಯ ಚಿತ್ರಕಲಾ ಮಹಾವಿದ್ಯಾಲಯ ಇಲಕಲ್–೨೦೦೧

೪೭. ಎಲ್.ಶಿವಲಿಂಗಪ್ಪ : ಕರ್ನಾಟಕದಲ್ಲಿ ಚಿತ್ರಕಲಾ ಬೆಳವಣಿಗೆ : ಒಂದು ಸಮೀಕ್ಷೆ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೨೦೦೬

ಗುರುತಿಸಲಾಗಿದೆ. ಈ ಪುಸ್ತಕದಲ್ಲಿ ಒಟ್ಟು ಹನ್ನೆರಡು ಅಧ್ಯಾಯಗಳಲ್ಲಿ ವಿಷಯ ನಿರೂಪಣೆಯಾಗಿದೆ. ಬಂಡೆಯಾಸರೆ ಚಿತ್ರಗಳು, ಗುಹಾಚಿತ್ರಗಳು, ಭಿತ್ತಿಚಿತ್ರಗಳು, ದಖಿನ್ ಚಿತ್ರಕಲೆ, ಹಸ್ತಪ್ರತಿ ಚಿತ್ರಕಲೆ, ವಿವಿಧ ಶೈಲಿಗಳು, ಕಲಾಶಿಕ್ಷಣ ಸಂಸ್ಥೆಗಳು ಮತ್ತು ಕಲಾಶಾಲೆಗಳು, ಪಾಶ್ಚಾತ್ಯ ಶೈಲಿಗಳ ಪ್ರಭಾವ, ಗಂಜೀಫಾ ಕಲೆ, ಕಲಾ ಪ್ರದರ್ಶನಗಳು, ಕಂಪ್ಯೂಟರ್ ಕಲೆಯ ಪರಿಣಾಮಗಳು, ಕಲಾ ಬೆಳವಣಿಗೆಯಲ್ಲಿ ಪುಸ್ತಕಗಳು, ಹೀಗೆ ವಿವಿಧ ರೀತಿಯಲ್ಲಿ ವಿಂಗಡಿಸಿಕೊಂಡು ವಿಷಯ ಪ್ರಸ್ತಾಪಿಸಲಾಗಿದೆ.

ಆದಿಮಾನವ ಚಿತ್ರಗಳ ಪ್ರಕಾರಗಳು, ಶೈಲಿ, ವಸ್ತುವಿಷಯಗಳು, ಬಣ್ಣಗಾರಿಕೆ ಪರಿಕರಗಳು ಇಲ್ಲಿ ವಿವೇಚಿಸಲ್ಪಟ್ಟಿವೆ. ಯಾವ ದೊರೆಗಳು ಕಲೆಗೆ ಹೆಚ್ಚು ಪ್ರೋತ್ಸಾಹ ನೀಡಿದರು, ಯಾವ ಕಲಾವಿದರು ಚಿತ್ರರಚನೆ ಮಾಡಿದರು ಎನ್ನುವ ಸಂಗತಿಗಳು ಇಲ್ಲಿ ನಿರೂಪಿತಗೊಂಡಿವೆ. ಆಧುನಿಕ ಕಲಾಶೈಲಿಗಳು ಕರ್ನಾಟಕವನ್ನು ಪ್ರವೇಶಿಸಿದ ನಂತರ ಇಲ್ಲಿನ ಬದಲಾದ ಕಲಾವಲಯ, ಅಭಿಪ್ರಾಯಗಳು ಹೇಳಲ್ಪಟ್ಟಿವೆ. ಕಲಾವಿದರಾದವರಿಗೆ ಸಾಹಿತ್ಯದ ಬಗ್ಗೆ ಏಕೆ ತಿಳುವಳಿಕೆ ಇರಬೇಕು? ಎನ್ನುವ ಬಗ್ಗೆ ವಿಶ್ಲೇಷಿಸಲಾಗಿದೆ. ಈ ಪುಸ್ತಕವು ಕೆಲವು ಉಪಯುಕ್ತ ಮಾಹಿತಿಗಳನ್ನು ನೀಡುತ್ತದೆಯಾದರೂ ಹಲವು ಕೊರತೆಗಳನ್ನು ಹೊಂದಿದೆ.

**ಕರ್ನಾಟಕ ಕಲಾ ಯಾತ್ರೆ-೮೪ :**

ಕರ್ನಾಟಕದ ಸಮಕಾಲೀನ ಕಲಾವಲಯದಲ್ಲಿ ಅನೇಕ ಪ್ರಯೋಗಗಳು ನಡೆದಿವೆ. ಅಂತಹ ಒಂದು ಪ್ರಯೋಗ ೧೯೮೪ರಲ್ಲಿ ನಡೆದ ಕಲಾಯಾತ್ರೆಯಾಗಿದ್ದು ರಾಜ್ಯದ ಕೆಲವು ಜನ ಕಲಾವಿದರು ಸೇರಿಕೊಂಡು ಸ್ವಂತ ಆರ್ಥಿಕ ವ್ಯವಸ್ಥೆ ಮಾಡಿಕೊಂಡು ರಾಜ್ಯದ ೩೫ ಸ್ಥಳಗಳಲ್ಲಿ ತಮ್ಮ ಕೃತಿಗಳ ಪ್ರದರ್ಶನ ಮಾಡಿದ್ದಾರೆ. ಇದರ ಸವಿನೆನಪಿಗಾಗಿ 'ಕರ್ನಾಟಕ ಕಲಾಯಾತ್ರೆ-೮೪' ಎಂಬ ಕ್ಯಾಟಲಾಗ್ ಹೊರತಂದಿದ್ದು,[೪೮] ಇದರಲ್ಲಿ ಕಲಾಯಾತ್ರೆಯಲ್ಲಿ ಭಾಗವಹಿಸಿದ ಕಲಾವಿದರ ಒಂದೊಂದು ಕೃತಿ ಮತ್ತು ಅವರ ಸಂಕ್ಷಿಪ್ತ ಬಯೋಡಾಟಾಗಳನ್ನು ಕೊಡಲಾಗಿದೆ.

ಈ ಕಲಾಯಾತ್ರೆಯಲ್ಲಿ ವಿ.ಜಿ.ಅಂದಾನಿ, ಸಿ.ಚಂದ್ರಶೇಖರ್, ಎಸ್.ಧನಲಕ್ಷ್ಮೀ, ಆರ್.ಎಂ.ಹಡಪದ, ಜೆ.ಎಸ್.ಖಂಡೇರಾವ್, ಚಿ.ಸು.ಕೃಷ್ಣಶೆಟ್ಟಿ, ಪ.ಸ.ಕುಮಾರ, ಜೆ.ಎಮ್.ಎಸ್.ಮಣಿ, ಎನ್.ಮರಿಶಾಮಾಚಾರ್, ಅ.ಲ.ನರಸಿಂಹನ್, ಎಂ.ಬಿ.ಪಾಟೀಲ, ಶಂಕರ ಪಾಟೀಲ, ಕೆ.ಟಿ.ಶಿವಪ್ರಸಾದ್, ವೆಂಕಟಾಚಲಪತಿ, ವಿಜಯ ಸಿಂಧೂರ ಮತ್ತು ಯುಸೂಫ್ ಅರಕ್ಕಲ್ ಅವರುಗಳು ಭಾಗವಹಿಸಿದ್ದಾರೆ. ಕಲಾಕೃತಿಗಳನ್ನು ಪ್ರದರ್ಶಿಸಿದ ಸ್ಥಳಗಳಲ್ಲಿ ಬೆಂಗಳೂರು, ಮೈಸೂರು, ಮಂಡ್ಯ, ಹಾಸನ, ಮಡಿಕೇರಿ, ಮಂಗಳೂರು, ಉಡುಪಿ, ಮೂಡಗೆರೆ, ಚಿಕ್ಕಮಗಳೂರು, ತೀರ್ಥಹಳ್ಳಿ, ಶಿವಮೊಗ್ಗ, ಭದ್ರಾವತಿ, ದಾವಣಗೆರೆ, ಧಾರವಾಡ, ಹುಬ್ಬಳ್ಳಿ, ಬೆಳಗಾಂವ, ಗದಗ, ಬಿಜಾಪುರ, ಗುಲಬರ್ಗಾ, ಬೀದರ್, ರಾಯಚೂರು, ಬಳ್ಳಾರಿ, ತುಮಕೂರು, ಕೋಲಾರ, ಕೆ.ಜಿ.ಎಫ್, ಚಿಂತಾಮಣಿ ಮುಖ್ಯವಾಗಿವೆ.

ಕಲಾಕೃತಿಗಳ ಪ್ರದರ್ಶನ ಸಂದರ್ಭದಲ್ಲಿ ಕಲಾವಿದರ ಕೃತಿಗಳ ಮಾರಾಟ, ಗ್ರೀಟಿಂಗ್ ಕಾರ್ಡ ಮಾರಾಟಗಳನ್ನು ಹಮ್ಮಿಕೊಳ್ಳಲಾಗಿದ್ದು ಕಲೆಯ ಕುರಿತು ಉಪನ್ಯಾಸಗಳು, ಸ್ಲೈಡ್ ಶೋಗಳು ಮತ್ತು ಒಬ್ಬೊಬ್ಬ ಕಲಾವಿದರಿಂದ ಒಂದೊಂದು ಸ್ಥಳದಲ್ಲಿ ಕಲಾ ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸಲಾಗಿತ್ತು. ಪ್ರದರ್ಶನದ ಹಿನ್ನೆಲೆಯಲ್ಲಿ ಈ ಕ್ಯಾಟಲಾಗ್ ಗಮನಾರ್ಹವಾದರೂ ಕಲಾ ಸಾಹಿತ್ಯದ ಬಗೆಗಿನ ವಿವರಗಳು ಇಲ್ಲಿ ಹೆಚ್ಚಾಗಿ ಕಂಡು ಬರುವುದಿಲ್ಲ.

---

೪೮. ಸಿ.ಚಂದ್ರಶೇಖರ್ : ಕರ್ನಾಟಕ ಕಲಾ ಯಾತ್ರೆ-೮೪ : ಕರ್ನಾಟಕ ಕಲಾಯಾತ್ರೆ ಬೆಂಗಳೂರು -೧೯೮೪

**ಚಿತ್ರ ಯಾತ್ರೆ :**

ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿಯು ಸಮಕಾಲೀನ ಕಲಾವಿದರ ಕೃತಿಗಳನ್ನು ರಾಜ್ಯದ ತುಂಬಾ ಸಂಚಾರೀ ಪ್ರದರ್ಶನದಲ್ಲಿ ಪ್ರದರ್ಶಿಸಿತು. ಈ ಪ್ರದರ್ಶನ ಕುರಿತು ವಿವರಗಳನ್ನೊಳಗೊಂಡ ಕ್ಯಾಟಲಾಗ್ ಮಾದರಿಯ ಪುಸ್ತಕವನ್ನು ಹೊರತಂದಿತು. ಇದು ಬೃಹತ್ ಪುಸ್ತಕವಾಗಿದ್ದು. ಪ್ರದರ್ಶನದಲ್ಲಿ ಭಾಗವಹಿಸಿದ ಕಲಾವಿದರ ಸಂಕ್ಷಿಪ್ತ ಬಯೋಡಾಟಾ, ಕಲಾಕೃತಿಗಳ ಶೈಲಿ, ಪ್ರಭಾವ, ತಂತ್ರಗಾರಿಕೆ, ರಚನಾ ವಿಧಾನ, ವಸ್ತುವಿಷಯಗಳ ಬಗ್ಗೆ ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ. ಈ ಪುಸ್ತಕವನ್ನು ಬಿ.ವಿ.ಕೆ.ಶಾಸ್ತ್ರೀರಚನೆ ಮಾಡಿದ್ದಾರೆ.[೪೯] ಇದರಲ್ಲಿ ಒಟ್ಟು ಐವತ್ತು ಜನ ಕಲಾವಿದರ ಬಗ್ಗೆ ವಿವರವಿದೆ. ವ್ಹಿ.ಜಿ.ಅಂದಾನಿ, ಭಾಸ್ಕರರಾವ್, ಯು.ವೈ.ಚಂದ್ರಹಾಸ, ಎಂ.ಸಿ.ಚಟ್ಟಿ, ಧನಂಜಯ ಶಿಲ್ಪಿ, ಈರಣ್ಣ ದಂಡಿನ, ಆರ್.ಎಮ್.ಹಡಪದ, ವ್ಹಿ.ಬಿ.ಹಿರೇಗೌಡರ, ಜೆ.ಎಸ್.ಖಂಡೇರಾವ್, ಎಂ.ಬಿ.ಪಾಟೀಲ, ರಾಮದಾಸ್ ಅಡ್ಯಂತಾಯ್, ವ್ಹಿ.ಜಿ.ಸಿಂಧೂರ, ವೆಂಕಟಾಚಲಪತಿ, ಯುಸೂಫ್ ಅರಕ್ಕಲ್ ಮುಂತಾದವರು ಈ ಪ್ರದರ್ಶನದಲ್ಲಿ ಭಾಗವಹಿಸಿದ ಪ್ರಮುಖ ಕಲಾವಿದರಾಗಿದ್ದಾರೆ. ಭಾಗವಹಿಸಿದ ಐವತ್ತು ಜನರ ಬಗ್ಗೆ ಲೇಖಕರು ಅವರ ಕಲಾಪ್ರಕಾರ, ಕಲಾಶೈಲಿ, ಕಲಾಕೃತಿ ಒಳಗೊಂಡಂತೆ ಪರಿಚಯ ಲೇಖನ ಬರೆದಿದ್ದಾರೆ.

ಈ ಪುಸ್ತಕವು ಕರ್ನಾಟಕ ಸಮಕಾಲೀನ ಕಲೆ, ಕಲಾವಿದರು, ಕಲಾಶೈಲಿ, ತಂತ್ರಗಾರಿಕೆ ಮುಂತಾದ ಅಂಶಗಳ ಬಗ್ಗೆ ಉಪಯುಕ್ತ ಮಾಹಿತಿ ನೀಡುವ ಆಕರವಾಗಿದೆ. ಇಲ್ಲಿ ಆಯಾ ಕಲಾವಿದರ ಕಲಾಕೃತಿಗಳ ಛಾಯಾಚಿತ್ರಗಳನ್ನು ಮುದ್ರಿಸಲಾಗಿದೆ.

**ಅಕಾಡೆಮಿ ಸಂಗ್ರಹದ ಹಿರಿಯ ಕಲಾವಿದರ ಕಲಾಕೃತಿಗಳ ಪ್ರದರ್ಶನ :**

ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿಯು ತನ್ನ ಸಂಗ್ರಹದಲ್ಲಿರುವ ಹಿರಿಯ ಕಲಾವಿದರ ಕಲಾಕೃತಿಗಳನ್ನು ರಾಜ್ಯಾದ್ಯಂತ ಸಂಚಾರಿ ಪ್ರದರ್ಶನದಲ್ಲಿ ಪ್ರದರ್ಶಿಸಿತು. ಈ ಪ್ರದರ್ಶನವು ಅನೇಕ ಜನರ ಮೆಚ್ಚುಗೆಯನ್ನು ಗಳಿಸಿತು. ಇದರ ಸವಿನೆನಪಿಗಾಗಿ ಅಕಾಡೆಮಿಯು ಕ್ಯಾಟಲಾಗ್ ರೂಪದ ಚಿಕ್ಕ ಪುಸ್ತಕವನ್ನು ಹೊರತಂದಿತು. ಇದನ್ನು ಎಚ್.ಎ.ಅನಿಲಕುಮಾರ್ ಬರೆದಿದ್ದಾರೆ.[೫೦] ಈ ಕಲಾ ಪ್ರದರ್ಶನದಲ್ಲಿ ಆಯ್ಕೆ ಮಾಡಿದ ಕಲಾವಿದರ ಕೃತಿಗಳನ್ನು ಮಾತ್ರ ಪ್ರದರ್ಶಿಸಲಾಗಿದ್ದು ಅವರ ಕುರಿತಾಗಿ ಮತ್ತು ಅವರ ಕಲಾಕೃತಿ ಕಲಾಶೈಲಿಗಳ ಬಗೆಗೆ ಸ್ಥೂಲ ಮಾಹಿತಿಯನ್ನು ಹೇಳಲಾಗಿದೆ.

ಇದರಲ್ಲಿ ಒಟ್ಟು ಮೂವತ್ತು ಜನ ಕಲಾವಿದರ ಒಂದೊಂದು ಕಲಾಕೃತಿ ಮತ್ತು ಅವರ ಕಲಾಶೈಲಿ, ಮಾಧ್ಯಮ, ಪ್ರಭಾವ, ರಚನಾ ವಿಧಾನ, ತಂತ್ರಗಾರಿಕೆ, ಮುಂತಾದ ಅಂಶಗಳ ಬಗ್ಗೆ ಸಂಕ್ಷಿಪ್ತದಲ್ಲಿ ಹೇಳಿದೆ. ಅಲಮೇಲಕರ, ಎಂ.ಎ.ಚೆಟ್ಟಿ, ಎನ್.ಹನುಮಯ್ಯ, ಡಿ.ವಿ.ಹಾಲಭಾವಿ, ಬಿ.ಕೆ.ಹುಬ್ಬಳ್ಳಿ, ಎಸ್.ಎಸ್.ಕುಕ್ಕೆ, ಎಂ.ವಿ.ಮಿಣಜಗಿ, ರುಮಾಲೆ ಚನ್ನಬಸವಯ್ಯ, ಎಸ್.ಎನ್.ಸ್ವಾಮಿ, ವೈ.ಸುಬ್ರಹ್ಮಣ್ಯರಾಜು, ಸೂಫಿ, ಶುದ್ಧೋಧನ, ಬಿ.ಜಿ.ವಾರಿ, ಮುಂತಾದವರು ಭಾಗವಹಿಸಿದ ಕಲಾವಿದರಲ್ಲಿ ಪ್ರಮುಖರಾಗಿದ್ದಾರೆ. ಕಲಾವಿದರ ಕಲಾಶೈಲಿ, ಅವರ ಚಿತ್ರಗಳ ವಸ್ತುವಿಷಯ, ರಚನಾ ಶೈಲಿಗಳು ಅವರ ಸ್ವಪರಿಚಯ ಕೊಡಲಾಗಿದೆ. ಅವರು ಕಲಾಕ್ಷೇತ್ರದಲ್ಲಿ ಸಾಧಿಸಿದ ಪ್ರಗತಿ, ಪಡೆದ ಪ್ರಶಸ್ತಿ ಪುರಸ್ಕಾರಗಳು, ಭಾಗವಹಿಸಿದ ಪ್ರಮುಖ ಕಲಾಶಿಬಿರ ಮತ್ತು ಪ್ರದರ್ಶನಗಳ ಬಗ್ಗೆಯೂ ತಿಳಿಸಲಾಗಿದೆ.

---

೪೯. ಬಿ.ವಿ.ಕೆ.ಶಾಸ್ತ್ರೀ : ಚಿತ್ರಯಾತ್ರೆ; ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೫

೫೦. ಎಚ್.ಎ.ಅನಲಕುಮಾರ : ಅಕಾಡೆಮಿ ಸಂಗ್ರಹದ ಹಿರಿಯ ಕಲಾವಿದರ ಕಲಾಕೃತಿಗಳ ಪ್ರದರ್ಶನ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೦

ಕರ್ನಾಟಕದ ಕಲಾಪರಿಚಯ ಕುರಿತ ಸಾಹಿತ್ಯದಲ್ಲಿ ಕರ್ನಾಟಕದ ಚಿತ್ರಕಲಾ ಪರಂಪರೆಯನ್ನು ಸ್ಥೂಲವಾಗಿ ಬಿಂಬಿಸುವ ಕೃತಿಗಳನ್ನು ಪರಿಗಣಿಸಲಾಗಿದೆ. ಪ್ರಾಗಿತಿಹಾಸ ಕಾಲ, ಇತಿಹಾಸ ಆರಂಭಕಾಲ, ಬೇರೆ ಬೇರೆ ಅರಸರ ಕಾಲಾವಧಿಯಲ್ಲಿ ಮತ್ತು ಜನಪದರಲ್ಲಿ ಕರ್ನಾಟಕದ ಪರಂಪರೆ ಹೇಗೆ ಬೆಳೆದುಬಂದಿತು ಎಂಬುದರ ಮಾಹಿತಿಯನ್ನು ಇಲ್ಲಿನ ಕೃತಿಗಳು ಒಳಗೊಂಡಿವೆ. ಕಲಾಪ್ರದರ್ಶನಗಳ ಕ್ಯಾಟ್‌ಲಾಗ್ ಸಾಹಿತ್ಯದಲ್ಲಿ ಕಲಾವಿದರು ನಡೆಸಿದ ಪ್ರದರ್ಶನಗಳ ಬಗ್ಗೆ ಮಾಹಿತಿಕೊಡುವುದು, ಆಯಾಕಲಾವಿದರ ಸಾಧನೆ, ಸಿದ್ಧಿಗಳನ್ನು ಸ್ಥೂಲವಾಗಿ ತಿಳಿಸುವುದು ಮತ್ತು ಅವರ ಚಿತ್ರಶೈಲಿ ಹಾಗೂ ಕೃತಿಗಳ ಸಂಕ್ಷಿಪ್ತ ವಿವರಗಳು ಒಳಗೊಂಡಿವೆ.

**೨. ಭಾರತೀಯ ಚಿತ್ರಕಲಾ ಸಾಹಿತ್ಯ :**

ಈ ವಿಭಾಗದಲ್ಲಿ ಸಾಮಾನ್ಯವಾಗಿ ಭಾರತೀಯ ಚಿತ್ರಕಲೆಯನ್ನು ಸ್ಥೂಲವಾಗಿ ಬಿಂಬಿಸುವ ಕೃತಿಗಳನ್ನು ಪರಿಗಣಿಸಲಾಗಿದೆ. ಸಿಂಧೂನಾಗರೀಕತೆಯಿಂದ ಆರಂಭಗೊಂಡು ವೇದಕಾಲ, ಮೌರ್ಯರು, ಶಾತವಾಹನರು, ವಾಕಾಟಕರು, ಗುಪ್ತರು, ಚಾಲುಕ್ಯರು, ವಿಜಯನಗರದವರು, ಮೈಸೂರು ಸಂಸ್ಥಾನಿಕರು ಹೀಗೆ ವಿವಿಧ ಕಾಲಘಟ್ಟಗಳಲ್ಲಿ ಭಾರತೀಯ ಕಲೆ ಹೇಗೆ ಬೆಳೆದುಬಂದಿತು ಎಂಬಂತಹ ಅಂಶಗಳನ್ನು ಪರಿಗಣಿಸಲಾದ ಕೃತಿಗಳಿವೆ. ಅದೇ ರೀತಿ ಅಜಂತಾ, ಎಲ್ಲೋರಾ, ಸಿತ್ತನಿವಾಸಲ್, ಸಿಗೇರಿಯ ಮುಂತಾದ ಕಲಾನೆಲೆಗಳು ಮತ್ತು ಅಲ್ಲಿನ ಚಿತ್ರಗಳ ಬಗ್ಗೆ ಇಲ್ಲಿನ ಕೃತಿಗಳು ಬೆಳಕುಚೆಲ್ಲುತ್ತವೆ. ಈ ಎಲ್ಲ ಮಾಹಿತಿಯನ್ನು ಒಳಗೊಂಡ ಭಾರತೀಯ ಚಿತ್ರಕಲಾ ಸಾಹಿತ್ಯವನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ವಿಂಗಡಿಸಬಹುದು.

ಅ. ಭಾರತೀಯ ಚಿತ್ರಕಲಾ ಪರಿಚಯಾತ್ಮಕ ಸಾಹಿತ್ಯ.

ಬ. ಭಾರತೀಯ ಜನಪದ, ಕರಕುಶಲ, ಗ್ರಾಫಿಕ್ಸ್ ಮತ್ತು ನವ್ಯ ಚಿತ್ರಕಲಾ ಸಾಹಿತ್ಯ.

**ಅ. ಭಾರತೀಯ ಚಿತ್ರಕಲಾ ಪರಿಚಯಾತ್ಮಕ ಸಾಹಿತ್ಯ :**

ಈ ವಿಂಗಡಣೆಯಲ್ಲಿ ಕನ್ನಡದಲ್ಲಿ ಭಾರತೀಯ ಚಿತ್ರಕಲೆಯ ಬಗ್ಗೆ ಬಂದ ಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಇಲ್ಲಿನ ಸಾಹಿತ್ಯಕೃತಿಗಳು ಭಾರತೀಯ ಪ್ರಾಚೀನ ಚಿತ್ರಪರಂಪರೆ, ವಿವಿಧ ಕಾಲಘಟ್ಟಗಳಲ್ಲಿ ಭಾರತೀಯ ಕಲೆ ಬೆಳೆದು ಬಂದ ರೀತಿ, ಕಲಾನೆಲೆಗಳು ಮತ್ತು ಆ ಪ್ರದೇಶದಲ್ಲಿ ವಿಶಿಷ್ಟವಾಗಿರುವ ಕಲಾಶೈಲಿಗಳನ್ನು ಬಿಂಬಿಸುವ ಕೃತಿಗಳು ಇಲ್ಲಿವೆ.

**ಭಾರತೇಯ ಚಿತ್ರಕಲೆ :**

ಭಾರತೀಯ ಚಿತ್ರಕಲೆಯ ಬಗೆಗಿರುವ ಮಹತ್ವದ ಕೃತಿಗಳಲ್ಲಿ ಈ ಕೃತಿಯೂ ಒಂದಾಗಿದೆ. ಡಾ.ಶಿವರಾಮ ಕಾರಂತ ಬರೆದ[೫೧] ಈ ಪುಸ್ತಕದಲ್ಲಿ ಭಾರತೀಯ ಕಲೆಯ ಕುರಿತಾಗಿ ಹಲವಾರು ಸಂಗತಿಗಳು ವಿವೇಚಿಸಲ್ಪಟ್ಟಿವೆ. 'ಕಲೆಯ ನೆಲೆ' ಎಂಬ ತಲೆಬರಹದಡಿಯಲ್ಲಿ ಸತ್ಯ ಮತ್ತು ಸೌಂದರ್ಯ ಕುರಿತು ಚರ್ಚಿಸಲಾಗಿದೆ. ರೂಪಚಿತ್ರ ಮತ್ತು ಭಾವಚಿತ್ರಗಳ ಹಿನ್ನೆಲೆಗಳನ್ನು ತಿಳಿಸುವುದರ ಜೊತೆಗೆ ಚಿತ್ರದ ಷಡಂಗಗಳಾದ ರೂಪಭೇದ, ಪ್ರಮಾಣ, ಭಾವ, ಲಾವಣ್ಯ ಯೋಜನೆ, ಸಾದೃಶ್ಯ ಮತ್ತು ವರ್ಣಿಕಾಭಂಗ ಇವುಗಳ ಬಗೆಗೂ ಚರ್ಚಿಸಲಾಗಿದೆ. ಭಾರತೀಯ ಪ್ರಾಚೀನ ಚಿತ್ರಕಲೆ, ಮೊಗಲ್ ಚಿತ್ರಕಲೆ, ಲಕ್ಷಣಗಳು ಈ ಶೈಲಿ ಬೆಳೆದು ಬಂದ ರೀತಿಗಳು ಇದರಲ್ಲಿವೆ. ರಜಪೂತ ಚಿತ್ರಕಲಾ ಶೈಲಿಯ ಪ್ರಮುಖ ಲಕ್ಷಣಗಳು, ನೆಲೆಗಳು ವಸ್ತುವಿಷಯಗಳ ಕುರಿತಾಗಿಯೂ ಇಲ್ಲಿ ವಿವರಣೆ

೫೧. ಶಿವರಾಮ ಕಾರಂತ : ಭಾರತೇಯ ಚಿತ್ರಕಲೆ : ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರಕಾರ, ಬೆಂಗಳೂರು-೧೯೩೦

ಕಂಡು ಬರುತ್ತದೆ. ಸಾಹಿತ್ಯ, ಸಂಗೀತ, ಚಿತ್ರ ಮತ್ತು ಶಿಲ್ಪ ಹೀಗೆ ಯಾವುದೇ ಕಲೆಗಳಾಗಲಿ ನಮಗೆ ಧ್ಯೇಯಾತ್ಮಕ ಬುದ್ಧಿಯನ್ನು ಪ್ರೇರೇಪಿಸದಿದ್ದರೆ ಅವು ಕಲೆಗಳಲ್ಲ ಎಂಬ ಹಿನ್ನೆಲೆಯೊಂದಿಗೆ ಭಾರತೀಯ ಚಿತ್ರಕಲೆಯನ್ನು ಇಲ್ಲಿ ವಿಮರ್ಶೆಗೊಳಪಡಿಸಿದ್ದಾರೆ. ನವ್ಯಕಲೆಯು ಭಾರತದಲ್ಲಿ ಆರಂಭಗೊಂಡ ರೀತಿ, ಪ್ರಸಾರ, ಕೃತಿಗಳು ಬಂಗಾಳಿ ಕಲಾಶೈಲಿಯ ಪ್ರಮುಖ ಪ್ರವರ್ತಕರಾದ ಅಬನೀಂದ್ರನಾಥ ಟ್ಯಾಗೋರರ ಬಗ್ಗೆ ವಿವರವು ಇಲ್ಲಿರುವುದು. ಅಲ್ಲದೆ ನಂದಲಾಲಬೋಸ್, ಪ್ರಮೋದಕುಮಾರ ಚಟರ್ಜಿ, ಅಸೀತ್ ಕುಮಾರ ಹಲ್ದಾರ, ರಾಮಕಿಂಕರ ಬೈಂಜ್, ವೆಂಕಟಪ್ಪ ಮುಂತಾದವರ ಕಲಾಬದುಕು ಮತ್ತು ಕೃತಿಗಳ ಕುರಿತಾಗಿ ಸ್ಥೂಲ ಮಾಹಿತಿ ಇಲ್ಲಿದೆ. ಈ ಕೃತಿಯು ಒಳಗೊಂಡ ಮಾಹಿತಿಯು ಕಲಾ ಇತಿಹಾಸಕಾರರಿಗೆ, ಅಧ್ಯಯನಕಾರರಿಗೆ, ಆಸಕ್ತ ಓದುಗರಿಗೆ ಉಪಯುಕ್ತವಾಗಿದ್ದು ಭಾರತೀಯ ಪ್ರಾಚೀನ ಚಿತ್ರಕಲೆಯ ಬಗೆಗೆ ಸ್ಥೂಲನೋಟವನ್ನು ಒದಗಿಸಿಕೊಡುತ್ತದೆ.

**ಬೆಳೆದು ಬಂದ ಭಾರತದ ಚಿತ್ರಕಲೆ :**

ಕರ್ನಾಟಕದ ಕಲಾವಲಯದಲ್ಲಿ ಪಿ.ಆರ್.ತಿಪ್ಪೇಸ್ವಾಮಿ ಅವರದು ಗಮನಾರ್ಹವಾದ ಸ್ಥಾನ ಎಂದು ಹೇಳಬಹುದು. ಕಲಾವಿದರಾಗಿ, ಕಲಾ ಬರಹಗಾರರಾಗಿ ಈ ನಾಡಿನ ಕಲಾಕ್ಷೇತ್ರಕ್ಕೆ ಅಮೂಲ್ಯ ಸೇವೆ ಮಾಡಿದ್ದಾರೆ. ಇವರೆ ರಚಿಸಿರುವ ಪ್ರಸ್ತುತ ಕೃತಿಯು ಇವರ ಕಲಾ ಲೇಖನಗಳ ಸಂಗ್ರಹವಾಗಿದೆ. ಆಗಾಗ ಪತ್ರಿಕೆಗಳಲ್ಲಿ ಬಂದಂತಹ ಲೇಖನಗಳನ್ನು ಒಟ್ಟು ಮಾಡಿ ಈ ಪುಸ್ತಕವನ್ನು ಪ್ರಕಟಿಸಿದ್ದಾರೆ.[೫೨]ಐದು ಲೇಖನಗಳು ಇದರಲ್ಲಿದ್ದು, ಮೊದಲನೆಯ ಲೇಖನವು ಪ್ರಾಚೀನ ಭಾರತದ ಭಿತ್ತಿಚಿತ್ರಗಳು ಎಂಬುದಾಗಿದೆ. ಇಲ್ಲಿ ಅಜಂತಾ, ಎಲ್ಲೋರಾ, ಸಿತ್ತನಿವಾಸಲ್, ಎಲಿಫೆಂಟಾ, ಕರ್ನಾಟಕದ ಸಿಬಿ, ಶಿರಾ, ಮುಡುಕುತೊರೆ, ಬಾದಾಮಿ, ಭಿತ್ತಿಚಿತ್ರಗಳನ್ನು ಕುರಿತು ಹೇಳಲಾಗಿದೆ. ಪ್ರಾಚೀನ ಕಾಲದ ಭಿತ್ತಿ ಸಿದ್ಧತೆಯ ವಿಧಿ–ವಿಧಾನಗಳು, ಪರಿಕರಗಳ ಬಗೆಗೆ ಸ್ಥೂಲ ಮಾಹಿತಿ ಕೊಡಲಾಗಿದೆ. ಎರಡನೆಯ ಲೇಖನವು ಆಧುನಿಕ ಚಿತ್ರಕಲೆಯು ಹರಿದ ದಾರಿ ಎಂಬುವುದಾಗಿದ್ದು, ಇಲ್ಲಿ ಆಧುನಿಕ ಕಲೆಯ ಹಲವು ವಿಷಯಗಳು ಚರ್ಚಿಸಲ್ಪಟ್ಟಿವೆ. ಆಧುನಿಕ ಕಲಾಕೃತಿಗಳು, ಕಲಾವಿದರು, ಅಮೂರ್ತ ಸ್ವರೂಪ, ಸಹೃದಯನ ಪಾತ್ರ, ವಿಮರ್ಶಾತ್ಮಕ ನೋಟ ಮುಂತಾದ ಅಂಶಗಳು ಬಿಂಬಿಸಲ್ಪಟ್ಟಿವೆ. ವಿವಿಧ ಕಲಾಶೈಲಿಗಳ ಬಗ್ಗೆ ಸ್ಥೂಲ ಮಾಹಿತಿ ಲಭ್ಯವಾಗುತ್ತದೆ. ಮೂರನೆಯ ಲೇಖನವು ದಸರಾ ಚಿತ್ರಕಲಾ ಪ್ರದರ್ಶನವು ಪ್ರಗತಿ ಪಥದಲ್ಲಿದೆಯೇ? ಎಂಬುದಾಗಿದ್ದು, ದಸರಾ ಪ್ರದರ್ಶನದ ಸ್ವರೂಪ, ಲೋಪದೋಷಗಳು, ಆಗುಹೋಗುಗಳು, ಕೈಗೊಳ್ಳಬಹುದಾದ ಸುಧಾರಣಾ ಕ್ರಮಗಳು ಮುಂತಾದ ಅಂಶಗಳನ್ನು ಚರ್ಚಿಸಲಾಗಿದೆ. ನಾಲ್ಕನೆಯ ಲೇಖನದಲ್ಲಿ ಹಂಗೇರಿ ದೇಶದವರ ಕಲಾ ಪ್ರೋತ್ಸಾಹದ ಮಾದರಿಯನ್ನು ಬಿಂಬಿಸಲಾಗಿದೆ. ಆ ದೇಶದ ಜನರು ಕಲೆಯನ್ನು ಹೇಗೆ ಪ್ರೋತ್ಸಾಹಿಸುತ್ತಾರೆ, ಕಲಾವಿದರಿಗೆ ಯಾವ ಉಚ್ಚಸ್ಥಾನ ಕಲ್ಪಿಸಿದ್ದಾರೆ, ಪ್ರಾಚೀನ ಕಲೆಯನ್ನು ಹೇಗೆ ಕಾಯ್ದುಕೊಂಡಿದ್ದಾರೆ ಮುಂತಾದ ಸಂಗತಿಗಳನ್ನು ಇಲ್ಲಿ ಹೇಳಲಾಗಿದೆ. ಐದನೆಯ ಲೇಖನವು ಬೆಳೆದು ಬಂದ ಭಾರತದ ಚಿತ್ರಕಲೆ ಎನ್ನುವುದಾಗಿದೆ. ಇಲ್ಲಿ ಪ್ರಾಚೀನ ಕಾಲದಿಂದ ಭಾರತೀಯ ಕಲೆ ಹೇಗೆ ಬೆಳೆಯಿತು ಎಂದು ಸ್ಥೂಲ ನೋಟ ಕೊಡಲಾಗಿದೆ.

**ಅಜಂತಾ ಮತ್ತು ಎಲ್ಲೋರಾ :**

ಪ್ರಸ್ತುತ ಅಜಂತಾ ಮತ್ತು ಎಲ್ಲೋರಾ ಕೃತಿಯನ್ನು ಎಂ.ಎಚ್.ಕೃಷ್ಣ ರಚನೆ ಮಾಡಿದ್ದಾರೆ.[೫೩]ಈ

೫೨. ಪಿ.ಆರ್. ತಿಪ್ಪೇಸ್ವಾಮಿ : ಬೆಳೆದುಬಂದ ಭಾರತದ ಚಿತ್ರಕಲೆ :ಕಲಾಕ್ಷೇತ್ರ, ಮೈಸೂರು– ೧೯೬೨

೫೩. ಎಂ.ಎಚ್.ಕೃಷ್ಣ : ಅಜಂತಾ ಮತ್ತು ಎಲ್ಲೋರಾ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ಮೈಸೂರು–೧೯೬೭

ಕೃತಿಯು ಸ್ವಾತಂತ್ರ್ಯ ಪೂರ್ವದಲ್ಲೇ ರಚನೆಯಾಗಿದೆ. ೧೯೪೧ರಲ್ಲಿ ಮೊದಲ ಮುದ್ರಣ ಕಂಡ ಇದು ೧೯೫೭ರಲ್ಲಿ ದ್ವಿತೀಯ ಮತ್ತು ೧೯೬೭ರಲ್ಲಿ ತೃತೀಯ ಮುದ್ರಣ ಕಂಡಿದೆ. ಈ ಕೃತಿಯಲ್ಲಿ ಮುಖ್ಯವಾಗಿ ಅಜಂತಾ ಮತ್ತು ಎಲ್ಲೋರಾಗಳ ಚಿತ್ರಶಿಲ್ಪ ಮತ್ತು ವಾಸ್ತುಕಲೆಗಳನ್ನು ಪ್ರತ್ಯೇಕವಾಗಿ ವಿಭಾಗ ಮಾಡಿಕೊಂಡು ವಿಶ್ಲೇಷಣೆ ಮಾಡಲಾಗಿದೆ. ಮೊದಲನೆಯ ಭಾಗ ಪ್ರವೇಶವಾಗಿದ್ದು, ಇದರಲ್ಲಿ ಕಲೆಯ ಚಾರಿತ್ರಿಕ ಹಿನ್ನೆಲೆಯನ್ನು ಸ್ಥೂಲವಾಗಿ ಹೇಳಲಾಗಿದೆ. ಎರಡನೆಯ ಭಾಗವನ್ನು ಅಜಂತಾ ಎಂದು ಹೆಸರಿಸಲಾಗಿದ್ದು ಪ್ರತ್ಯೇಕವಾಗಿ ಅಜಂತಾ ಬಗೆಗೆ ವಿವರಿಸಲಾಗಿದೆ. ಅಜಂತಾದ ಭೌಗೋಳಿಕ ಲಕ್ಷಣಗಳು, ಇಲ್ಲಿನ ಭಿತ್ತಿಚಿತ್ರಗಳ ಬಗ್ಗೆ ವಿವೇಚಿಸಲಾಗಿದೆ. ಇಲ್ಲಿರುವ ಭಿತ್ತಿಚಿತ್ರಗಳ ವಸ್ತು ವಿಷಯ, ವರ್ಣವಿನ್ಯಾಸ, ರೇಖಾಲಾಲಿತ್ಯ, ಸಂಯೋಜನೆ ವಿಧಾನಗಳ ಜೊತೆಗೆ ಭಿತ್ತಿ ತಯಾರಿಕೆಯ ಕ್ರಮಗಳನ್ನು ಹೇಳಲಾಗಿದೆ. ಮೂರನೆಯ ಭಾಗ ಎಲ್ಲೋರಾ ಆಗಿದ್ದು, ಇದರ ವಾಸ್ತುಶಿಲ್ಪ ರಚನೆಯ ಪ್ರಾಮುಖ್ಯತೆಯನ್ನು ಬಿಂಬಿಸಲಾಗಿದೆ. ಅಖಂಡ ಶಿಲೆಯಲ್ಲಿ ಕೊರೆದ ಕೈಲಾಸ ದೇವಾಲಯ, ಪ್ರಾಕಾರ, ಶಿಬಿರ, ಶಿಲ್ಪಕೃತಿಗಳ ವಿವರ, ಎಲ್ಲೋರಾದ ಸಾಂಸ್ಕೃತಿಕ ಮತ್ತು ಐತಿಹಾಸಿಕ ಹಿನ್ನೆಲೆಗಳನ್ನು ಬಿಂಬಿಸಲಾಗಿದೆ. ನಾಲ್ಕನೆಯ ಭಾಗವು ಉಪಸಂಹಾರವಾಗಿದ್ದು ಅಜಂತಾ ಎಲ್ಲೋರಾಗಳ ಸಾಂಸ್ಕೃತಿಕ, ಐತಿಹಾಸಿಕ ಮತ್ತು ಕಲಾತ್ಮಕ ಪ್ರಾಮುಖ್ಯತೆಗಳನ್ನು ಇಲ್ಲಿ ವಿವೇಚಿಸಲಾಗಿದೆ.

**ಚಿತ್ರಕಲೆ :**

ಈ ಪುಸ್ತಕವು ಅ.ನ.ಕೃ. ಅವರಿಂದ ರಚನೆಯಾಗಿದ್ದು,[೫೪] ಭಾರತೀಯ ಕಲೆಯ ಬಗ್ಗೆ ತಿಳಿಸುತ್ತದೆ. ಒಟ್ಟು ಒಂಭತ್ತು ಅಧ್ಯಾಯಗಳಿದ್ದು ಒಂದನೆಯ ಅಧ್ಯಾಯದಲ್ಲಿ ಭಾರತೀಯ ಚಿತ್ರಕಲೆಯ ಸಂಕ್ಷಿಪ್ತ ಇತಿಹಾಸ ಕೊಡಲಾಗಿದೆ. ಸಾಂಸ್ಕೃತಿಕ ಅಸ್ತಿಭಾರ, ಮಧ್ಯಕಾಲದ ವಿಕಾಸ, ಆಧುನಿಕ ಪುನರುಜ್ಜೀವನ ಎಂಬ ಭಾಗಗಳಲ್ಲಿ ವಿಷಯ ನಿರೂಪಣೆ ಮಾಡಲಾಗಿದೆ. ಭಾರತೀಯ ಚಿತ್ರಕಲೆಯ ವಿಕಾಸ ಎಂಬ ಎರಡನೆಯ ಅಧ್ಯಾಯದಲ್ಲಿ ಇತಿಹಾಸ ಯುಗ, ಭಾರತೀಯ ಚಿತ್ರಕಲೆಯ ಷಡಂಗಗಳು, ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಚಿತ್ರಕಲೆಯ ಉಲ್ಲೇಖಗಳು, ಅಜಂತಾ ಬೌದ್ಧ ಚಿತ್ರಗಳು, ಮೊಗಲ್ ರಜಪೂತ ಸಂಪ್ರದಾಯಗಳು, ಆಧುನಿಕ ಕಾಲ, ಆಧುನಿಕ ಭಾರತೀಯ ಚಿತ್ರಕಲೆ, ಕರ್ನಾಟಕದ ಚಿತ್ರಕಲೆ ಎಂಬುದಾಗಿ ವಿಂಗಡಿಸಿಕೊಂಡು ವಿಶ್ಲೇಷಿಸಲಾಗಿದೆ.

ಅಜಂತಾದ ಶಿಲ್ಪಕಲೆ ಎಂಬ ಮೂರನೆಯ ಅಧ್ಯಾಯದಲ್ಲಿ ಅಲ್ಲಿನ ವಾಸ್ತುರಚನೆಗಳು ಮತ್ತು ಶಿಲ್ಪಕೃತಿಗಳ ಸ್ಥೂಲ ಪರಿಚಯವಿದೆ. ಚೈತ್ಯ ವಿಹಾರಗಳು, ಬೌದ್ಧ ಮೂರ್ತಿಗಳು, ಅವುಗಳ ವಿಷಯಗಳು ಇಲ್ಲಿ ಹೇಳಿವೆ. ಅಜಂತಾ ಚಿತ್ರಕಲೆ ಎಂಬ ನಾಲ್ಕನೆಯ ಅಧ್ಯಾಯದಲ್ಲಿ ಪ್ರತ್ಯೇಕವಾಗಿ ಇಲ್ಲಿಯ ಚಿತ್ರಕಲೆಯ ಬಗ್ಗೆ ವಿವೇಚಿಸಲಾಗಿದೆ. ಯಾವ ಗುಹೆಗಳಲ್ಲಿ ಚಿತ್ರಗಳಿವೆ, ಅವುಗಳ ವಸ್ತುವಿಷಯಗಳೇನು? ಶೈಲಿ, ತಂತ್ರಗಾರಿಕೆ, ರಚನಾಕ್ರಮ, ವರ್ಣವಿನ್ಯಾಸ, ಸಂಯೋಜನೆ ಮುಂತಾದ ಅಂಶಗಳ ಬಗ್ಗೆ ಸ್ಥೂಲವಾಗಿ ಹೇಳಲಾಗಿದೆ. ನಿಗೂಢ ಚಿತ್ರಕಲೆ ಎನ್ನುವ ಅಧ್ಯಾಯದಲ್ಲಿ ಅಮೂರ್ತ ಕಲೆಯ ಬಗ್ಗೆ ವಿವೇಚನೆ ಇದೆ. ಅಮೂರ್ತ ಕಲೆಯು ಹೇಗೆ ಹುಟ್ಟಿಕೊಂಡಿತು, ವಿಶ್ವದಾದ್ಯಂತ ಹೇಗೆ ಪಸರಿಸಿತು? ಕಲಾವಿದರು ಹೆಚ್ಚಾಗಿ ಏಕೆ ಇದನ್ನು ಅನುಸರಿಸುತ್ತಾರೆ? ಎಂಬಂತಹ ವಿವರಗಳು ಇಲ್ಲಿವೆ. ಕಲಾವಿದ ದೇವಿಪ್ರಸಾದ್ ರಾಯಚೌಧರಿ ಇವರ ಬಗ್ಗೆ ಹೇಳುವಾಗ ಮುಖ್ಯವಾಗಿ ಅವರ ಜೀವನ ಮತ್ತು ಕಲೆಯ ಬಗ್ಗೆ ಒತ್ತು ಕೊಡಲಾಗಿದೆ. ಇದರಲ್ಲಿ ವ್ಯಕ್ತಿ ಪರಿಚಯ, ಚಿತ್ರಕಲೆ, ಶಿಲ್ಪಕಲೆ,

---

೫೪. ಅ.ನ.ಕೃ : ಚಿತ್ರಕಲೆ : ವಿದ್ಯಾನಿಧಿ ಬುಕ್ ಡಿಪೋ, ಮೈಸೂರು-೧೯೭೦

ಭವಿಷ್ಯ ಎಂಬ ಭಾಗಗಳನ್ನು ಮಾಡಿಕೊಂಡು ಅವರ ಕಲಾಬದುಕನ್ನು ಕಟ್ಟಿಕೊಡಲಾಗಿದೆ. ಮುಂದಿನ ಭಾಗವು 'ರಾಗಮಾಲಾ ಚಿತ್ರಗಳು' ಎನ್ನುವುದಾಗಿದೆ. ಇದರಲ್ಲಿ ರಾಗಮಾಲಾ ಚಿತ್ರಕಲೆಯ ಮಹತ್ವ ಭಾರತೀಯ ಕಲಾಕ್ಷೇತ್ರದಲ್ಲಿ ಅವುಗಳನ್ನು ರಚಿಸುತ್ತಿರುವ ಕಲಾವಿದರು, ಇದರಲ್ಲಿ ಎಂ.ವ್ಹಿ.ಮಿಣಜಗಿ ಬಗ್ಗೆ ಮತ್ತು ರಾಗಮಾಲಾ ಚಿತ್ರಗಳ ಸ್ವರೂಪ, ವೈವಿಧ್ಯತೆ ಬಗ್ಗೆ ಹೇಳಲಾಗಿದೆ. ಮಾಲಕಂಸ, ಗುರ್ಜರಿ, ತೋಡಿ, ಜೋಗಿಯಾ ಅಸಾವೇರಿ,ಪಟಮಂಜರಿ ಮತ್ತು ಮೇಘ ಮಲ್ಹಾರ ರಾಗಗಳು, ಅವುಗಳ ಚಿತ್ರ ವಿವರಣೆಗಳನ್ನು ಕೊಡಲಾಗಿದೆ. ಮುಂದಿನ ಅಧ್ಯಾಯ ಲಲಿತಕಲೆಗಳು ಎಂಬುದಾಗಿದ್ದು, ಇದರಲ್ಲಿ ಲಲಿತಕಲೆಗಳ ಗುಣಲಕ್ಷಣಗಳನ್ನು ಬಿಂಬಿಸಲಾಗಿದೆ. ಕೊನೆಯ ಭಾಗವು ಸಂಸ್ಕೃತಿ ಮತ್ತು ಲಲಿತಕಲೆಗಳು ಎಂದಿದ್ದು, ಇದರಲ್ಲಿ ಭಾರತೀಯ ಸಂಸ್ಕೃತಿಯಲ್ಲಿ ಲಲಿತಕಲೆಗಳು ವಹಿಸಿದ ಪಾತ್ರವನ್ನು ಉದಾಹರಣೆಗಳ ಸಹಿತ ಬಿಂಬಿಸಲಾಗಿದೆ. ಹೀಗೆ ಭಾರತೀಯ ಕಲೆಯ ಬಗ್ಗೆ ಅನೇಕ ವಿಚಾರಗಳನ್ನು, ಈ ಭಾರತೀಯ ಪ್ರಾಚೀನ ಲಲಿತಕಲೆ, ಪರಂಪರಾಗತ ಸಂಪ್ರದಾಯದ ಭದ್ರಬುನಾದಿಯ ಮೇಲೆ ಬೆಳೆದಿವೆ. ಸಂಪ್ರದಾಯದಲ್ಲಿ ಗೌಣವಾಗಿರುವುದನ್ನು ಅವು ಹೆಚ್ಚಿನ ಸಂದರ್ಭದಲ್ಲಿ ಅಂಗೀಕರಿಸಿಲ್ಲ. ಹಾಗೆಯೇ ಕಲಾವಿದರ ಪ್ರತಿಭಾ ವಿಲಾಸಕ್ಕೆ ಸಂಪ್ರದಾಯ ಅಡ್ಡಿಯೊದಗಿಸಿಲ್ಲ. ಸಾವಿರಾರು ವರ್ಷಗಳಿಂದ ಯಾವ ನಿತ್ಯ ತತ್ವಗಳನ್ನು ಹಿರಿಯರು ಆರಾಧಿಸಿಕೊಂಡು ಬಂದರೋ ಆ ತತ್ವ ಸಮರ್ಥನೆಯನ್ನಷ್ಟೇ ಸಂಪ್ರದಾಯ ಬಯಸುವುದು ಎನ್ನುವ ಅಭಿಪ್ರಾಯಗಳನ್ನು ಲೇಖಕರು ಇಲ್ಲಿ ವ್ಯಕ್ತಪಡಿಸುತ್ತಾರೆ. ಸಹಸ್ರಾರು ವರ್ಷಗಳ ಸಾಮಾಜಿಕ, ರಾಜಕೀಯ ವಿಚಾರ ಕ್ರಾಂತಿಯನ್ನು ಮೈಗೂಡಿಸಿಕೊಂಡು ಬೆಳೆದು ಬಂದಿರುವ ಭಾರತೀಯ ಲಲಿತಕಲೆಗಳು ತಮ್ಮ ಪರಿಪೂರ್ಣತೆಯಲ್ಲಿಯೇ ಬದಲಾಗುತ್ತಿರುವ ಕಾಲಮಾನಕ್ಕೆ ಸ್ಪಂದಿಸುತ್ತ ನಡೆದಿವೆ ಎಂಬುದು ಈ ಕೃತಿಯ ಆಶಯವಾಗಿದೆ.

**ಭಾರತೀಯ ಚಿತ್ರಕಲೆ :**

ಭಾರತೀಯ ಚಿತ್ರಕಲಾ ಕ್ಷೇತ್ರದಲ್ಲಿ ಹಲವು ಕಲಾಶೈಲಿಗಳು ಕಾಲದಿಂದ ಕಾಲಕ್ಕೆ ಆಗಿಹೋದಂತೆ, ವಿವಿಧ ಧರ್ಮಗಳ ಪ್ರೋತ್ಸಾಹದಡಿಯಲ್ಲಿ ಕಲೆಯು ಬೆಳೆದು ಬಂದಿರುವುದು ತಿಳಿದು ಬರುತ್ತದೆ. ಆರಂಭಿಕ ಹಂತದಲ್ಲಿ ಆದಿಮಾನವರ ಚಿತ್ರರಚನೆಗಳು ಅವರ ಕಾಲದ ಜೀವನ ಪದ್ಧತಿ ಮತ್ತು ಕಲಾ ಹಿನ್ನೆಲೆಯನ್ನು ಬಿಂಬಿಸಿದರೆ, ಇತಿಹಾಸ ಕಾಲದ ಆರಂಭಕ್ಕಾಗಲೇ ಕಲೆಯು ಧರ್ಮಮೂಲವಾಗಿ ಬೆಳವಣಿಗೆ ಹೊಂದುತ್ತ ಬಂದಿದೆ. ಇಂತಹ ಸಂಗತಿಗಳನ್ನು ತಿಳಿಸಿಕೊಡುವ ಈ ಪುಸ್ತಕವನ್ನು ಎಸ್.ಎಮ್.ಶಿರಹಟ್ಟಿ ಬರೆದಿದ್ದಾರೆ.[೫೫] ಬೌದ್ಧ ಧರ್ಮದ ಹಿನ್ನೆಲೆಯಲ್ಲಿ ರಚನೆಗೊಂಡ ಚಿತ್ರಗಳು ಅಜಂತಾ ಭಾಗ, ಸಿತ್ತನಿವಾಸಲ್ ಮುಂತಾದ ನೆಲೆಗಳಲ್ಲಿದ್ದು ಅದರ ವ್ಯಾಪಕತೆಯನ್ನು ಬಿಂಬಿಸುತ್ತವೆ. ಅಜಂತಾ ನಂತರದಲ್ಲೂ ಭಾರತದಲ್ಲಿ ಅನೇಕ ನೆಲೆಗಳಲ್ಲಿ ಚಿತ್ರಗಳು ರಚನೆಗೊಂಡಿವೆ. ಭಿತ್ತಿಚಿತ್ರ ರಚನೆಯ ನಂತರ ಕಿರುರೂಪ ಚಿತ್ರಗಳು ಭಾರತದಲ್ಲಿ ರಚನೆಯಾಗತೊಡಗಿದವು. ಇದರಲ್ಲಿ ಪ್ರಾದೇಶಿಕವಾಗಿ ವಿವಿಧ ಶೈಲಿಗಳು ಹುಟ್ಟಿಕೊಂಡು ವಿಶಿಷ್ಟವಾಗಿ ಬೆಳೆದು ಬಂದಿವೆ. ಆಮೇಲಿನ ಬ್ರಿಟಿಷ್ ಅವಧಿ, ಬಂಗಾಲ ಕಲಾಶೈಲಿಯ ಸ್ವರೂಪ ಮುಂತಾದವುಗಳು ಈ ಕಿರು ಪುಸ್ತಕದಲ್ಲಿ ಸ್ಥೂಲವಾಗಿ ಹೇಳಲ್ಪಟ್ಟಿವೆ. ಈ ಕೃತಿಯಲ್ಲಿ ಮೂರು ಪ್ರಮುಖ ವಿಭಾಗಗಳನ್ನಾಗಿ ಮಾಡಿಕೊಳ್ಳಲಾಗಿದೆ. ಪ್ರಾಗೈತಿಹಾಸಿಕ ಯುಗ, ಬೌದ್ಧ ಚಿತ್ರಶೈಲಿ, ಜೈನಚಿತ್ರಶೈಲಿ, ನಂತರ ಆಧುನಿಕ ಕಾಲ ಹೀಗೆ ವಿಂಗಡಿಸಿ ವಿಷಯ ನಿರೂಪಣೆ ಮಾಡಲಾಗಿದೆ. ಚಿಕ್ಕದಾದ ಈ ಕೃತಿಯು ಕೈಪಿಡಿಯ ಮಾದರಿಯಲ್ಲಿದೆ.

---

೫೫. ಎಸ್.ಎಮ್.ಶಿರಹಟ್ಟಿ : ಭಾರತೀಯ ಚಿತ್ರಕಲೆ : ವಿಜಯ ಕಲಾಮಂದಿರ, ಗದಗ-೧೯೭೭

**ಶಿಲ್ಪ ಚಿತ್ರ ವಾಸ್ತು ಕಲೆಗಳು :**

ಭಾರತೀಯ ಕಲೆಯ ಬಗ್ಗೆ ಹಲವಾರು ಲೇಖನ ಮತ್ತು ಪುಸ್ತಕಗಳನ್ನು ರಚಿಸಿರುವ ಶಿವರಾಮ ಕಾರಂತರು ಪ್ರಸ್ತುತ ಈ ಕೃತಿಯನ್ನು ರಚಿಸಿದ್ದಾರೆ.[೫೬] ಅತ್ಯಂತ ಚಿಕ್ಕದಾದ ಈ ಪುಸ್ತಕದಲ್ಲಿ ಭಾರತೀಯ ಶಿಲ್ಪಕಲೆ, ಚಿತ್ರಕಲೆ ಮತ್ತು ವಾಸ್ತುಕಲೆಗಳ ಬಗ್ಗೆ ಸ್ಥೂಲವಾದ ಮಾಹಿತಿ ಇದೆ. ಶಿಲ್ಪಭಾಗದಲ್ಲಿ ಶಾತವಾಹನರು, ಮೌರ್ಯರು, ಕುಷಾನರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರ ಶಿಲ್ಪಕಲೆಯನ್ನು ಗಮನಿಸಲಾಗಿದೆ. ವಾಸ್ತುಕಲೆಯಲ್ಲಿ ದ್ರಾವಿಡ, ನಾಗರ ಮತ್ತು ವೇಸರ ಶೈಲಿಯ ದೇವಾಲಯಗಳ ಕುರಿತು ಹೇಳುವುದರ ಜೊತೆಗೆ ಏಕಶಿಲೆಯಲ್ಲಿ ಕೊರೆದ ಗುಹಾ ದೇವಾಲಯಗಳ ಬಗ್ಗೆ ಚರ್ಚಿಸಲಾಗಿದೆ.

ಚಿತ್ರಕಲೆಯನ್ನು ಕುರಿತು ಹೇಳುವಾಗ ಕರ್ನಾಟಕದ ಕಲಾಪರಂಪರೆ ಬೆಳೆದು ಬಂದ ರೀತಿಯನ್ನು ಸ್ಥೂಲವಾಗಿ ಹೇಳಿ ಬಾದಾಮಿಯ ವೈಷ್ಣವಗುಹೆಯ ಚಿತ್ರಗಳನ್ನು ಕುರಿತು ವಿವೇಚಿಸಲಾಗಿದೆ. ಇಲ್ಲಿನ ಚಿತ್ರಗಳ ವಸ್ತು ವಿಷಯಗಳು, ತಂತ್ರಗಾರಿಕೆ, ಶೈಲಿ ಮತ್ತು ಬಣ್ಣಗಾರಿಕೆ, ರೇಖಾವಿನ್ಯಾಸ, ಸಂಯೋಜನೆ ತತ್ವಗಳಂತಹ ತಾಂತ್ರಿಕ ಅಂಶಗಳನ್ನು ಸ್ಥೂಲವಾಗಿ ಹೇಳಿದೆ. ಗುಹೆಯ ಮೇಲ್ಭಾಗದ ಛಾವಣಿಯ ಮೇಲೆ ಚಿತ್ರಗಳಿದ್ದು ಈಗ ಹೆಚ್ಚಿನ ಚಿತ್ರಗಳು ನಾಶವಾಗಿದ್ದು ಕೆಲವೇ ಚಿತ್ರಗಳು ಮಸುಕಾಗಿ ಉಳಿದುಕೊಂಡಿವೆ ಎಂಬುದಾಗಿ ತಿಳಿಸುತ್ತಾರೆ. ಹಿಂದೂ ಪರವಾದ ಈ ಚಿತ್ರಗಳು ಕರ್ನಾಟಕದ ಪ್ರಾಚೀನ ಶಿಷ್ಟ ಪರಂಪರೆಯ ಚಿತ್ರಗಳಾಗಿದ್ದು ಮಂಗಳೇಶನ ಕಾಲಕ್ಕೆ ರಚನೆಗೊಂಡಿವೆ. ಇವುಗಳ ಬಗ್ಗೆ ಕಿರು ಮಾಹಿತಿ ಈ ಕೃತಿಯಲ್ಲಿ ಲಭ್ಯವಿದೆ.

**ಭಾರತೀಯ ಚಿತ್ರಕಲೆ :**

ಭಾರತೀಯ ಚಿತ್ರಕಲೆಯ ಬಗ್ಗೆ ಹಲವು ವಿಷಯಗಳನ್ನು ಒಳಗೊಂಡ ಈ ಪುಸ್ತಕವನ್ನು ಬಿ.ಪಿ.ಬಾಯಿರಿ ಬರೆದಿದ್ದಾರೆ.[೫೭] ಇದರಲ್ಲಿ ಭಾರತೀಯ ಚಿತ್ರಕಲೆಯನ್ನು ಹಂತ ಹಂತವಾಗಿ ಪ್ರತ್ಯೇಕ ಲೇಖನಗಳ ಸ್ವರೂಪದಲ್ಲಿ ವಿವರಿಸಲಾಗಿದೆ. ಕೊನೆಯಲ್ಲಿ ಕೆಲವು ಪ್ರಸಿದ್ಧ ಭಾರತೀಯ ಕಲಾವಿದರ ಬಗ್ಗೆ ಪರಿಚಯಾತ್ಮಕ ಲೇಖನಗಳಿವೆ. ಮೊದಲಿಗೆ ಸಿಂಧೂ ನಾಗರಿಕತೆಯ ಕಲೆಯನ್ನು ಕುರಿತು ಹೇಳಲಾಗಿದೆ. ಈ ಸಂಸ್ಕೃತಿಯ ನಗರ ರಚನೆ, ವಾಸ್ತುವಿನ್ಯಾಸಗಳು, ಕಲಾತ್ಮಕ ಮುದ್ರೆಗಳು, ವಿವಿಧ ಮಾಧ್ಯಮದ ಶಿಲ್ಪಕಲಾ ಕೃತಿಗಳು, ಪಾತ್ರೆ ಮತ್ತು ವಿವಿಧ ವಸ್ತುಗಳ ಮೇಲೆ ರಚಿಸಿದ ಚಿತ್ರಗಳ ಬಗ್ಗೆ ವಿವರಿಸಲಾಗಿದೆ. ವೇದ ಕಾಲದ ಕಲೆಯಲ್ಲಿ ಋಷಿಮುನಿಗಳು ಕುಟೀರ, ಯಜ್ಞಕಟ್ಟೆಗಳಲ್ಲಿ ರಚಿಸುತ್ತಿದ್ದ ಚಿತ್ರಗಳ ಬಗ್ಗೆ ಹೇಳಿದೆ. ಜೊತೆಗೆ ರಾಮಾಯಣ, ಮಹಾಭಾರತ ಕಾಲಗಳಲ್ಲಿನ ಕಲಾಸ್ವರೂಪವನ್ನು ತಿಳಿಸಲಾಗಿದೆ. ಮೌರ್ಯರ ಕಾಲದ ಕಲೆಯಲ್ಲಿ ಅವರ ವಾಸ್ತು, ಶಿಲ್ಪ ಮತ್ತು ಚಿತ್ರಕಲೆಗಳನ್ನು ವಿವೇಚಿಸಲಾಗಿದೆ. ಅಜಂತಾ ಪ್ರದೇಶದಲ್ಲಿ ಚಿತ್ರರಚನೆಯು ಇವರ ಕಾಲದಲ್ಲಿಯೇ ಆರಂಭಗೊಂಡಿತು. ಮೃತ್ ಪಾತ್ರೆಯ ಮೇಲಿನ ಚಿತ್ರಗಳು ಶಾತವಾಹನರ ಕಾಲದಲ್ಲಿ ಹೆಚ್ಚಿಗೆ ಕಂಡು ಬಂದಿವೆ. ಗಾಂಧಾರ ಕಲೆಯಲ್ಲಿ ಈ ಕಲೆಯ ಲಕ್ಷಣಗಳು, ಶಿಲ್ಪ ಚಿತ್ರಗಳ ವಿವರ ಕೊಡಲಾಗಿದೆ. ಈ ಶೈಲಿಯ ಬುದ್ಧ ವಿಗ್ರಹಗಳು ಪ್ರಖ್ಯಾತವಾಗಿವೆ. ಗುಪ್ತರ ಕಾಲದಲ್ಲಿ ಕಲೆ ಸಾಹಿತ್ಯಗಳ ಸ್ವರ್ಣ ಯುಗವಾಗಿತ್ತು. ಇವರ ಕಾಲದಲ್ಲಿ ಕಲಾತ್ಮಕ ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳು ಜೊತೆಗೆ ಚಿತ್ರಕಲೆ ರಚನೆಯಾಯಿತು. ದಕ್ಷಿಣದಲ್ಲಿ ಬಾದಾಮಿ ಚಾಲುಕ್ಯರ ಕಾಲದಲ್ಲಿ ಭಿತ್ತಿಚಿತ್ರ ಪರಂಪರೆ ವ್ಯಾಪಕವಾಗಿ ಬೆಳವಣಿಗೆ

೫೬. ಶಿವರಾಮ ಕಾರಂತ : ಶಿಲ್ಪ ಚಿತ್ರ ವಾಸ್ತುಕಲೆಗಳು : ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-೧೯೭೫

೫೭. ಬಿ.ಪಿ.ಬಾಯಿರಿ : ಭಾರತೀಯ ಚಿತ್ರಕಲೆ : ಸಮಾಜ ಪುಸ್ತಕಾಲಯ, ಧಾರವಾಡ-೧೯೮೦

ಹೊಂದಿತು. ಇಲ್ಲಿನ ವೈಷ್ಣವ ಗುಹೆಯ ಚಿತ್ರಗಳನ್ನು ಇಲ್ಲಿ ವಿವರಿಸಲಾಗಿದೆ. ಇದರ ಜೊತೆಗೆ ಅಜಂತಾ, ಎಲ್ಲೋರಾ, ಎಲಿಫೆಂಟಾ, ಪಲ್ಲವರ ಕಲೆ, ಚೋಳರ ಕಲೆ, ರಾಗಮಾಲಾ ಚಿತ್ರಕಲೆ, ಮೊಗಲರ ಕಲೆ, ರಜಪೂತ ಕಲೆ, ಬಂಗಾಳ ಕಲೆ, ಇವುಗಳ ಬಗ್ಗೆ ಸ್ಥೂಲ ಮಾಹಿತಿ ಕೊಡಲಾಗಿದೆ. ನಂತರದಲ್ಲಿ ಅಬನೀಂದ್ರನಾಥ ಟ್ಯಾಗೋರ್, ನಂದಲಾಲ್‌ಬೋಸ್‌ರಂತಹ ಪ್ರಮುಖ ಕಲಾವಿದರು ಮತ್ತು ನವ್ಯಕಲೆ ಬಗ್ಗೆ ಲೇಖನವಿದೆ.

**ಚಿತ್ರಕಲಾ ಕೈದೀಪ :**

ಎಸ್.ಎಂ.ಶಿರಹಟ್ಟಿ ಬರೆದ[೫೮]ಈ ಕೃತಿಯಲ್ಲಿ ಭಾರತೀಯ ಚಿತ್ರಕಲೆ ಮತ್ತು ಜಾಗತಿಕ ಚಿತ್ರಕಲೆಯ ಹಲವಾರು ಅಂಶಗಳು ಹೇಳಲ್ಪಟ್ಟಿವೆ. ಭಾರತೀಯ ಚಿತ್ರಕಲೆಯ ಬಗೆಗೆ ಹೆಚ್ಚಿನ ಮಾಹಿತಿ ಒಳಗೊಂಡಿದೆ. ಇದರಲ್ಲಿ ಹೇಳಲಾದ ವಿಷಯಗಳು ಅತ್ಯಂತ ಸ್ಥೂಲವಾಗಿ ನಿರೂಪಿಸಲ್ಪಟ್ಟಿವೆ. ಭಾರತದ ಪ್ರಮುಖ ಕಲಾಶೈಲಿಗಳು, ಕಲಾವಿದರು, ಕಲಾನೆಲೆಗಳು, ವಾಸ್ತುಕಲೆ ಮತ್ತು ಶಿಲ್ಪಕಲೆ, ದೇವಾಲಯ ಶೈಲಿಗಳು, ಚೈತ್ಯ ವಿಹಾರ ಮತ್ತು ಸ್ತೂಪಗಳು, ಶುಂಗರಕಲಾಶೈಲಿ, ಗುಪ್ತಶೈಲಿ, ಹೊಯ್ಸಳ ಶೈಲಿ, ವಿಜಯನಗರ ಶೈಲಿಯನ್ನೊಳಗೊಂಡಂತೆ ಚಿತ್ರ, ಶಿಲ್ಪ ಮತ್ತು ವಾಸ್ತಕಲೆಗೆ ಸಂಬಂಧಪಟ್ಟ ಮಾಹಿತಿಗಳು ಈ ಪುಸ್ತಕದಲ್ಲಿವೆ. ವಿಶ್ವಕಲಾ ಕ್ಷೇತ್ರದಲ್ಲಿ ನವ್ಯಕಲಾ ಶೈಲಿಗಳು, ಅವುಗಳ ಧ್ಯೇಯ ಧೋರಣೆಗಳು, ಕಲಾಕೃತಿಗಳು ಪ್ರಮುಖ ಕಲಾವಿದರು ಬಾರೋಕ್, ರೋಕೋಕೋ, ಗಾಥಿಕ್ ಕಲಾಶೈಲಿಗಳು, ಭಾರತೀಯ ಚಿತ್ರಕಲೆಯಲ್ಲಿ ಅಜಂತಾ, ಭಾಗ, ಸಿತ್ತನಿವಾಸಲ್, ಬಾದಾಮಿ ಮುಂತಾದವುಗಳ ಕುರಿತು ಹೇಳಿದೆ. ದೇವಾಲಯಗಳ ಶೈಲಿಯಲ್ಲಿ ದ್ರಾವಿಡ, ನಾಗರ ಮತ್ತು ವೇಸರ ಶೈಲಿಗಳನ್ನು ಹೇಳುತ್ತ ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ದೊರೆಗಳು ದೇವಾಲಯ ವಾಸ್ತಕಲೆಗೆ ಹೇಗೆ ಪ್ರೋತ್ಸಾಹ ನೀಡಿದರು ಮತ್ತು ಅವುಗಳನ್ನು ಕಲಾತ್ಮಕವಾಗಿ ನಿರೂಪಿಸುವಲ್ಲಿ ಯಾವ ಪಾತ್ರವಹಿಸಿದರು ಎನ್ನುವ ಅಂಶಗಳನ್ನು ಪ್ರಸ್ತುತ ಕೃತಿಯಲ್ಲಿ ಹೇಳಲ್ಪಟ್ಟಿವೆ.

**ಚಿತ್ರಕಲಾ ದರ್ಪಣ :**

ಚಿತ್ರಕಲಾ ದರ್ಪಣ ಕೃತಿಯನ್ನು ವ್ಹಿ.ಟಿ.ಕಾಳೆಯವರು ರಚಿಸಿದ್ದಾರೆ.[೫೯]ಇದರಲ್ಲಿ ಕಲೆಯ ಕುರಿತು ಹಲವಾರು ಮಾಹಿತಿಗಳು ಸ್ಥೂಲ ರೂಪದಲ್ಲಿ ಹೇಳಲ್ಪಟ್ಟಿವೆ. ಕಲೆಯ ಹಲವು ಪ್ರಕಾರಗಳ ಬಗ್ಗೆ ಬೆಳಕು ಚಲ್ಲುವ ಇದು ವಿಶ್ವಕೋಶ ಮಾದರಿಯಲ್ಲಿದೆ. ಜಾಗತಿಕ ಕಲೆ, ಭಾರತೀಯ ಕಲೆ, ಕರ್ನಾಟಕದ ಕಲೆಯ ಬಗೆಗೆ ವಿವರಗಳಿವೆ. ಪ್ರಾಗಿತಿಹಾಸ ಕಲೆಯಿಂದ ತೊಡಗಿ ಆಧುನಿಕ ಕಲೆಯವರೆಗೆ ಹಲವು ಸಂಗತಿಗಳು ಬಿಂಬಿತಗೊಂಡಿವೆ. ಕಲೆ ಎಂದರೇನು? ಇತಿಹಾಸ ಪೂರ್ವ ಕಾಲದ ಕಲೆ, ಪ್ರಾಚೀನ ಕಲಾ ಸಂಸ್ಕೃತಿಗಳು, ಭಾರತೀಯ ಕಲಾ ಪರಂಪರೆಗಳು, ಭಿತ್ತಿಚಿತ್ರಗಳು, ಕಿರುರೂಪ ಶೈಲಿಯ ಚಿತ್ರಗಳು, ಮುಸ್ಲಿಂ ಶೈಲಿಯ ಚಿತ್ರಗಳು, ದಕ್ಷಿಣ ಭಾರತದ ಚಿತ್ರಕಲೆ, ವಿಜಯನಗರ, ಮೈಸೂರು, ತಂಜಾವೂರು ಮತ್ತು ನಾಯಕ ಶೈಲಿಯ ಚಿತ್ರಕಲೆ ಬಗೆಗೆ ಹೇಳಲಾಗಿದೆ. ಮುಂದಿನ ಹಂತದಲ್ಲಿ ಪಾಶ್ಚಾತ್ಯ ಕಲಾ ಸಂಪ್ರದಾಯಗಳು, ಪಾಶ್ಚಾತ್ಯ ಪುನರುಜ್ಜೀವನ ಕಾಲದ ಕಲೆ, ಬಾರೋಕ ಕಲೆ, ರೋಕೋಕೋ ಕಲೆ, ಗಾಥಿಕ್ ಕಲೆ, ರಮ್ಯಕಲಾಶೈಲಿ, ಬ್ರಿಟಿಷ ಕಲೆ, ಜಪಾನೀ ಚಿತ್ರಕಲೆ, ಅಮೇರಿಕಾ ಕಲೆ, ಆಧುನಿಕ ಕಲಾ ಪಂಥಗಳು, ಬೆಂಜೆಂಟೈನಾ ಕಲೆ, ಆಫ್ರಿಕನ್ ಕಲೆ, ಜರ್ಮನ್ ಕಲೆ, ಚೀನಾ ಕಲೆಗಳ ಕುರಿತು ವಿವೇಚಿಸಲಾಗಿದೆ.

೫೮. ಎಸ್.ಎಮ್.ಶಿರಹಟ್ಟಿ : ಚಿತ್ರಕಲಾ ಕೈದೀಪ : ಪಿಹಾಮಿ ಪಬ್ಲಿಕೇಷನ್ಸ, ಗದಗ-೧೯೮೨

೫೯. ವ್ಹಿ.ಟಿ.ಕಾಳೆ : ಚಿತ್ರಕಲಾ ದರ್ಪಣ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೪

ನಂತರದಲ್ಲಿ ಭಾರತೀಯ ಕಲೆಯಲ್ಲಿ ಕಂಡು ಬರುವ ಪ್ರಮುಖ ಕಲಾಕೃತಿಗಳು, ವರ್ಣಗಳು ಮತ್ತು ವರ್ಣಚಿತ್ರರಚನೆಯ ವಿಧಾನಗಳು ಹೇಳಲ್ಪಟ್ಟಿವೆ. ಭಾರತದ ಅಜಂತಾ ಜೈನ ಹಸ್ತಪ್ರತಿ ಚಿತ್ರಕಲೆ, ರಾಜಸ್ತಾನ ಪ್ರದೇಶದ ಕಿರುರೂಪ ಚಿತ್ರಶೈಲಿಗಳು, ಕರ್ನಾಟಕದ ಪ್ರಾದೇಶಿಕ ಚಿತ್ರಶೈಲಿಗಳು ನವ್ಯಕಲಾ ಪರಂಪರೆ ಕಲಾವಿದರು ಮತ್ತು ಕಲಾಕೃತಿಗಳ ಬಗ್ಗೆ ಸ್ಥೂಲ ಮಾಹಿತಿಯು ಈ ಕೃತಿಯಲ್ಲಿದೆ.

**ಭಾರತೀಯ ಚಿತ್ರಕಲೆ :**

ಭಾರತೀಯ ಚಿತ್ರಕಲೆಯ ಬಗೆಗೆ ಇರುವ ಈ ಪುಸ್ತಕವನ್ನು ಆರ್.ಜಿ.ರಾಯ್ಕರ್ ಬರೆದಿದ್ದಾರೆ.[೬೦] ಇದರಲ್ಲಿ ಭಾರತೀಯ ಚಿತ್ರಕಲೆಯ ವಿವಿಧ ವಿಷಯಗಳು ಬಿಂಬಿತಗೊಂಡಿವೆ. ಮೊದಲಿಗೆ ಆದಿಮಾನವ ಚಿತ್ರಕಲೆಯನ್ನು ಹೇಳಿ, ಭಾರತದಲ್ಲಿ ಎಲ್ಲೆಲ್ಲಿ ಈ ಚಿತ್ರಗಳಿವೆ, ಅವುಗಳ ಪ್ರಕಾರ ಮತ್ತು ವಿಷಯಗಳು, ಉದ್ದೇಶ, ಶೈಲಿ, ವರ್ಣಗಾರಿಕೆ ಮುಂತಾದ ಅಂಶಗಳನ್ನು ಸ್ಥೂಲವಾಗಿ ತಿಳಿಸಲಾಗಿದೆ. ನಂತರ ಸಿಂಧೂ ಸಂಸ್ಕೃತಿಯಲ್ಲಿ ಚಿತ್ರಕಲೆಯ ಜೊತೆಗೆ ಶಿಲ್ಪ, ವಾಸ್ತುಕಲೆಗಳು ಅಭಿವೃದ್ಧಿ ಹೊಂದಿದ್ದವು ಎಂದು ಹೇಳಿ ವೇದಗಳ ಯುಗದಲ್ಲಿ ಚಿತ್ರಕಲೆ ಯಾವ ಸ್ವರೂಪದಲ್ಲಿತ್ತು ಎನ್ನುವುದನ್ನು ಬಿಂಬಿಸಲಾಗಿದೆ.

ಬೌದ್ಧ ಚಿತ್ರಕಲೆಯು ಧಾರ್ಮಿಕವಾಗಿ ಹೇಗೆ ಬೆಳೆಯಿತು ಎನ್ನುವ ಸಂಗತಿಗಳನ್ನು ಉದಾಹರಣೆಗಳ ಸಹಿತ ವಿವೇಚಿಸಲಾಗಿದೆ. ನಂತರ ಅಜಂತಾದಲ್ಲಿ ರಚನೆಯಾದ ಭಿತ್ತಿಚಿತ್ರಗಳನ್ನು ಕುರಿತು ಹೇಳಿದೆ. ಶಾತವಾಹನರು, ವಾಕಾಟಕರು, ಚಾಲುಕ್ಯರು ಹೀಗೆ ಮೂರು ಅರಸು ಮನೆತನಗಳ ಪ್ರೋತ್ಸಾಹದಡಿಯಲ್ಲಿ ರಚನೆಯಾದ ಇಲ್ಲಿನ ಚಿತ್ರಕಲೆಯು ಕ್ರಿ.ಪೂ.೧ನೇ ಶತಮಾನದಿಂದ ಕ್ರಿ.ಶ.೮ನೇ ಶತಮಾನದವರೆಗೂ ರಚನೆಯಾಗಿದೆ. ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಇಲ್ಲಿನ ಚಿತ್ರಗಳನ್ನು ಮೂರು ರೀತಿಯಲ್ಲಿ ವಿಂಗಡಿಸಬಹುದಾಗಿದೆ. ಆಮೇಲಿನ ಬಾದಾಮಿ ಚಾಲುಕ್ಯರ ಮೇಣಬಸದಿಯ ವೈಷ್ಣವ ಗುಹೆಯ ಹಿಂದೂಧರ್ಮದ ಚಿತ್ರಗಳು ಮತ್ತು ಚೋಳರ ಕಾಲದ ಚಿತ್ರಗಳನ್ನು ಕುರಿತು ಹೇಳಲಾಗಿದೆ. ಬೌದ್ಧ ಚಿತ್ರಕಲೆಯಂತೆ ಜೈನ ಚಿತ್ರಕಲೆಯೂ ಭಾರತದಲ್ಲಿ ಮುಖ್ಯವಾಗಿದ್ದು ಇದರ ಕುರಿತು ಸ್ಥೂಲ ಮಾಹಿತಿ ಕೊಡಲಾಗಿದೆ. ಅದರಂತೆ ದಖನಿ ಚಿತ್ರಕಲೆ, ವಿಜಯನಗರ ಚಿತ್ರಕಲೆ, ಮೊಘಲ್ ಚಿತ್ರಕಲೆ, ರಜಪೂತ ಚಿತ್ರಕಲೆ, ಬಸೋಲಿ ಚಿತ್ರಕಲೆ, ಕಾಂಗ್ರಾ ಚಿತ್ರಕಲೆ, ಬಂಗಾಳ ಕಲಾಶೈಲಿ, ಮೈಸೂರು ಚಿತ್ರಕಲೆ ಇವುಗಳ ಬಗೆಗೆ ಸ್ಥೂಲವಾದ ಮಾಹಿತಿಯು ಈ ಪುಸ್ತಕದಲ್ಲಿದೆ.

**ದಖನಿ ಚಿತ್ರಕಲೆ :**

ಭಾರತೀಯ ಚಿತ್ರಕಲಾ ಕ್ಷೇತ್ರದಲ್ಲಿ ದಖನಿ ಚಿತ್ರಕಲಾ ಶೈಲಿ ವಿಶಿಷ್ಟವಾಗಿ ಗುರುತಿಸಲಾಗುತ್ತಿದೆ. ಭಾರತದ ದಕ್ಷಿಣ ಭಾಗದಲ್ಲಿ ಬೆಳೆದುಬಂದ ಈ ಕಲಾಶೈಲಿಯ ಬಗ್ಗೆ ಎಸ್.ಕೆ.ಅರುಣಿಯವರು ಕೃತಿರಚನೆ ಮಾಡಿದ್ದಾರೆ.[೬೧]ದಖನಿ ಚಿತ್ರಕಲೆಯು ಬಿಜಾಪುರ, ಅಹಮ್ಮದನಗರ, ಬೀದರ್, ಗೋಲ್ಕೊಂಡ ಮತ್ತು ಬಿರಾರ್‌ಳಗಲ್ಲಿ ರಚನೆಯಾದರೂ ಹೆಚ್ಚಿನ ಚಿತ್ರಗಳು ಬಿಜಾಪುರ ಸುಲ್ತಾನರ ಪ್ರೋತ್ಸಾಹದಡಿಯಲ್ಲಿ ರಚನೆಯಾಗಿರುವುದು ಕಂಡುಬರುತ್ತದೆ. ದಖನಿ ಶೈಲಿಯ ಚಿತ್ರಗಳಲ್ಲಿ ವಿವಿಧ ವಿಷಯಗಳ ಜೊತೆಗೆ ರಾಜಮಹಾರಾಜರು, ರಾಜಪರಿವಾರ, ಅಧಿಕಾರಿಗಳ ಭಾವಚಿತ್ರ ಮತ್ತು ವ್ಯಕ್ತಿಚಿತ್ರಗಳೂ ಕಂಡು ಬರುತ್ತವೆ. ದಖನಿ ಶೈಲಿಯ ಚಿತ್ರಗಳಲ್ಲಿ ಯೋಗಿನಿಯರ ಚಿತ್ರಗಳು ವಿಶಿಷ್ಟವಾಗಿದ್ದು, ಹಿಂದೂ ಮುಸ್ಲಿಂ ಸಂಸ್ಕೃತಿಗಳ ಸಮನ್ವಯತೆಗಳನ್ನು ಬಿಂಬಿಸುತ್ತವೆ. ದಖನ್ ಸುಲ್ತಾನರಿಂದ (೧೩೪೭) ಬ್ರಿಟಿಷ್ ಕಾಲದವರೆಗೆ (೧೯೦೦) ಈ ಶೈಲಿಯಲ್ಲಿ ರಚನೆಯಾದ ಚಿತ್ರಕಲೆಯನ್ನು ಸ್ಥೂಲವಾಗಿ ಇಲ್ಲಿ

೬೦. ಭಾರತೀಯ ಚಿತ್ರಕಲೆ : ಆರ್.ಜಿ.ರಾಯ್ಕರ್ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು -೧೯೯೬

೬೧. ಎಸ್.ಕೆ.ಅರುಣಿ : ದಖನಿ ಚಿತ್ರಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೨೦೦೧

ಗಮನಿಸಲಾಗಿದೆ. ಈ ಪುಸ್ತಕದಲ್ಲಿ ಹದಿಮೂರು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ವಿಷಯ ವಿಶ್ಲೇಷಣೆ ಮಾಡಲಾಗಿದೆ. ಈ ಕೃತಿಯಲ್ಲಿ ದಖಿನ್ ಅರ್ಥ, ಭೌಗೋಳಿಕ ವಿಸ್ತಾರ, ೧೫೭೫ ಮುಂಚಿನ ಚಿತ್ರಕಲೆ, ಐತಿಹಾಸಿಕ ಹಿನ್ನೆಲೆ, ಬಹಮನಿ ಚಿತ್ರಕಲೆ, ಶಾಹೀ ಚಿತ್ರಕಲೆ, ದಖಿನ್‌ದಲ್ಲಿ ಮೊಘ್ಲ ಚಿತ್ರಕಲೆ, ಮರಾಠರ ಚಿತ್ರಕಲೆ, ಹೈದರಾಬಾದ್ ನಿಜಾಮರ ಚಿತ್ರಕಲೆ, ಮನ್ನೂರ್ಲ್ ನವಾಬರ ಚಿತ್ರಕಲೆ, ಕಂಪನಿ ಚಿತ್ರಕಲೆ, ಹಸ್ತಪ್ರತಿ ಚಿತ್ರಕಲೆ, ಉದ್ದರಣೆ ಚಿತ್ರಗಳು, ಗಡವಾಲ್ ಮತ್ತು ವನಪರ್ತಿ ಸಂಸ್ಥಾನಗಳ ಚಿತ್ರಕಲೆ, ಸುರಪುರ ಸಂಸ್ಥಾನದ ಚಿತ್ರಕಲೆ, ಆಂಧ್ರದ ರಾಮಾಯಣ ಚಿತ್ರಗಳು ಒಳಗೊಂಡಿವೆ. ಸುಮಾರು ಐದು ಶತಮಾನಗಳ ಕಾಲ ಬೆಳೆದು ಬಂದ ದಖಿನಿ ಚಿತ್ರಕಲೆ ಅನೇಕ ಉಪಶೈಲಿಗಳಿಂದ ಕೂಡಿದೆ. ಈ ಉಪಶೈಲಿಗಳ ತೌಲನಿಕ ಅಧ್ಯಯನಕ್ಕಾಗಿ ಆಯಾ ಶೈಲಿಗಳ ಪ್ರಮುಖ ಲಕ್ಷಣಗಳನ್ನು ಕೊಟ್ಟಿರುವುದು ಈ ಪುಸ್ತಕದ ಮೌಲ್ಯವನ್ನು ಹೆಚ್ಚಿಸಿದೆ.

ಕರ್ನಾಟಕದ ಚಿತ್ರಕಲಾ ಪರಿಚಯಾತ್ಮಕ ಸಾಹಿತ್ಯದಲ್ಲಿ ಕಲಾಪ್ರಕಾರಗಳು, ಕಲಾವಿದರು, ಕಲಾಪ್ರೋತ್ಸಾಹ, ಕಲಾಶೈಲಿ, ಕಲಾನೆಲೆಗಳು, ರಚನಾಕ್ರಮಗಳು, ಪ್ರಭಾವ, ಪ್ರೇರಣೆಗಳು ಒಳಗೊಂಡ ಸಾಹಿತ್ಯ ಕೃತಿಗಳು ವಿಶ್ಲೇಷಣೆಗೆ ಒಳಪಟ್ಟಿವೆ.

**ಬ. ಭಾರತೀಯ ಜನಪದ, ಕರಕುಶಲ, ಗ್ರಾಫಿಕ್ಸ್ ಮತ್ತು ನವ್ಯ ಚಿತ್ರಕಲಾ ಸಾಹಿತ್ಯ :**

ಈ ವಿಂಗಡಣೆಯಲ್ಲಿ ಭಾರತೀಯ ಜನಪದ, ಗ್ರಾಫಿಕ್ಸ್ ಮತ್ತು ನವ್ಯಕಲೆಯ ಬಗ್ಗೆ ಇರುವ ಕೃತಿಗಳನ್ನು ವಿವೇಚಿಸಲಾಗಿದೆ. ಜನಪದ ಚಿತ್ರಕಲಾ ಸಾಹಿತ್ಯದಲ್ಲಿ ಎರಡು, ಕರಕುಶಲಕಲೆಯಲ್ಲಿ, ಗ್ರಾಫಿಕ್ಸ್ ಕಲೆಯಲ್ಲಿ ಮತ್ತು ನವ್ಯಚಿತ್ರಕಲಾ ಸಾಹಿತ್ಯದಲ್ಲಿ ಒಂದೊಂದು ಪುಸ್ತಕಗಳು ಅಧ್ಯಯನಕ್ಕೊಳಪಟ್ಟಿವೆ. ಅವುಗಳ ಸ್ಥೂಲ ರೂಪ ಈ ಕೆಳಗಿನಂತಿವೆ.

**ಭಾರತದ ಜನಪದ ಕಲೆ :**

ಈ ಕೃತಿಯಲ್ಲಿ ಭಾರತದ ವಿವಿಧ ಜನಪದ ಕಲೆಗಳನ್ನು ಕುರಿತು ಸ್ಥೂಲವಾದ ಮಾಹಿತಿ ಇದೆ. ಎನ್.ಮರಿಶಾಮಾಚಾರ್ ಬರೆದಿರುವ ಈ ಪುಸ್ತಕದಲ್ಲಿ[೬೨] ವಿವಿಧ ಜನಪದ ಕಲಾ ಪ್ರಕಾರಗಳ ಬಗೆಗೆ ಚಿಕ್ಕ ಲೇಖನಗಳಿವೆ. ಪ್ರಾಚೀನ ಕಲೆ ಎನ್ನುವ ಲೇಖನದಲ್ಲಿ ಭಾರತದ ಪ್ರಾಚೀನ ಚಿತ್ರಕಲೆಯ ಸ್ವರೂಪ, ವೈವಿಧ್ಯತೆ, ಪ್ರಕಾರ, ವಸ್ತುವಿಷಯ ಮತ್ತು ತಂತ್ರಗಾರಿಕೆಗಳ ಬಗ್ಗೆ ವಿವರಿಸಲಾಗಿದೆ. ಇಲ್ಲಿ ಪ್ರಾಗಿತಿಹಾಸ ಚಿತ್ರಗಳು, ಭಿತ್ತಿಚಿತ್ರಗಳು, ಕಿರುರೂಪ ಚಿತ್ರಗಳು, ಜನಪದ ಚಿತ್ರಕಲೆಗಳ ಸ್ಥೂಲನೋಟವಿದೆ. 'ರಂಗೋಲಿ' ಎಂಬ ಭಾಗದಲ್ಲಿ ವಿಶ್ವದಲ್ಲಿ ಇದರ ಪ್ರಸಾರ, ಭಾರತ ಮತ್ತು ಕರ್ನಾಟಕದಲ್ಲಿ ಇದರ ಪ್ರಾಚೀನತೆ, ವಿವಿಧ ಪ್ರದೇಶ, ಜನಸಮುದಾಯಗಳಲ್ಲಿ ರಚನೆಗೊಳ್ಳುವ ರಂಗೋಲಿಯ ಪ್ರಕಾರಗಳು ಧಾರ್ಮಿಕ ಮತ್ತು ಸಾಮಾಜಿಕ ಮಹತ್ವಗಳನ್ನು ಬಿಂಬಿಸಲಾಗಿದೆ. ವಾರ್ಲಿ ಜನಾಂಗವು ಆದಿವಾಸಿ ಬುಡಕಟ್ಟು ಸಮುದಾಯದ ತನ್ನ ಮೂಲ ಸ್ವರೂಪವನ್ನು ಉಳಿಸಿಕೊಂಡು ಬದುಕುತ್ತಿದ್ದು, ಅವರ ಚಿತ್ರಕಲೆಯು ವಿಶೇಷವಾಗಿ ರಚನೆಯಾಗುತ್ತದೆ ಎನ್ನುವುದನ್ನು ಇಲ್ಲಿ ಹೇಳಿದೆ. ಮಹಾರಾಷ್ಟ್ರದ ಚಿತ್ರಕಥಿಗಳು ಮತ್ತು ಗುಜರಾತ್ ಕಸೂತಿ ಚಿತ್ರಗಳ ಬಗ್ಗೆ ಇಲ್ಲಿ ವಿವರಿಸಲಾಗಿದೆ. ರಥವಾ ಚಿತ್ರಗಳು ಜನಪದ ಕಲಾ ಪ್ರಕಾರದಲ್ಲಿ ವಿಶಿಷ್ಟವಾಗಿದ್ದು, ಈ ಕಥಾಚಿತ್ರಗಳ ಶೈಲಿ, ವೈವಿಧ್ಯತೆಗಳನ್ನು ಹೇಳುವುದರ ಜೊತೆಗೆ ಮಧುಬನಿ ಕಲಾಪ್ರಕಾರದ ವಿಶೇಷತೆಯನ್ನು ತಿಳಿಸಲಾಗಿದೆ. ಬಂಗಾಳ ಪ್ರಾಂತ್ಯದಲ್ಲಿನ ಕಾಳಿಘಾಟ್ ಚಿತ್ರಪರಂಪರೆಯ ದಪ್ಪನಾದ ರೇಖೆಗಳು ಅವುಗಳ ಸ್ವರೂಪ ರಚನಾಕ್ರಮಗಳನ್ನು

೬೨. ಎನ್.ಮರಿಶಾಮಾಚಾರ್ : ಭಾರತದ ಜನಪದ ಕಲೆ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು –೧೯೯೧

ಸಹಿತ ಇಲ್ಲಿ ವಿವೇಚಿಸಲಾಗಿದೆ. ಓರಿಸ್ಸಾದ ಪಟಚಿತ್ರಗಳು ಕಥಾಪರಂಪರೆಯಲ್ಲಿ ಗಮನಾರ್ಹ ಸ್ಥಾನ ಗಳಿಸಿದ್ದು ಇವುಗಳ ರಚನೆಯಲ್ಲಿ ಸ್ಥಳೀಯ ಪರಿಕರಗಳನ್ನು ವಿಶೇಷವಾಗಿ ಬಳಸುತ್ತಾರೆ. ಅದರಂತೆ ಆಂಧ್ರದ ಕಲಂಕಾರಿ ಚಿತ್ರಗಳು ಇದೇ ಹಿನ್ನೆಲೆಯಲ್ಲಿ ಬಿಂಬಿತಗೊಂಡಿದ್ದು, ಅದರ ಜೊತೆಗೆ ಗಂಜೀಫಾ ಕಲೆ, ಜನಪದ ಶಿಲ್ಪಗಳು, ಅಡಕತ್ತರಿ, ಗಂಟೆ, ದೀವಿಗೆ, ಬಾಚಣಿಕೆ, ರಥ, ಕುಂಭಕಲಾ ವಿನ್ಯಾಸಗಳು ಮುಂತಾದ ವಿಷಯಗಳ ಬಗ್ಗೆ ಈ ಕೃತಿಯಲ್ಲಿ ಮಾಹಿತಿ ಇದೆ.

**ಭಾರತೀಯ ಸಂಸ್ಕೃತಿಯಲ್ಲಿ ರಂಗವಲ್ಲಿ :**

ಈ ಕಲಾಪ್ರಕಾರದ ಬಗ್ಗೆ ಬಿ.ಪಿ.ಬಾಯಿರಿಯವರು ಪುಸ್ತಕ ಬರೆದಿದ್ದಾರೆ.[೬೩] ಅನಾದಿ ಕಾಲದಿಂದ ರಂಗೋಲಿಯು ಭಾರತೀಯ ಸಂಸ್ಕೃತಿಯ ಅಂಗವಾಗಿ ಬಂದಿದ್ದು, ಜನರ ಆಧುನಿಕ ಮನೋಭಾವಗಳು ಈಕಲೆಯ ಅನಾದರಣೆಗೆ ಆಪತ್ತು ಒಡ್ಡಿವೆ. ಇಂತಹ ಅಂಶಗಳನ್ನು ಇಲ್ಲಿ ಗಮನಿಸಲಾಗಿದೆ. ಈ ಪುಸ್ತಕದಲ್ಲಿ ಚರ್ಚಿಸಲ್ಪಟ್ಟಿರುವ ಮುಖ್ಯ ಸಂಗತಿಗಳೆಂದರೆ, ಕಾವ್ಯ, ಶಾಸನ, ಜನಪದರಲ್ಲಿ ರಂಗವಲ್ಲಿ, ರಂಗೋಲಿಯನ್ನು ಉಲ್ಲೇಖಿಸುವ ಶಾಸನಗಳು, ರಂಗೋಲಿ ನೋಡಿ ಮದುವೆ, ಹಬ್ಬ-ಹುಣ್ಣಿಮೆಗಳಲ್ಲಿ ರಂಗವಲ್ಲಿ, ಪ್ರಾಚೀನ ರಂಗವಲ್ಲಿಯ ಸ್ವರೂಪ, ಐತಿಹಾಸಿಕ ಹಿನ್ನೆಲೆ, ರಂಗೋಲಿಯ ಪರಿಕರಗಳು, ರಚನಾ ವಿಧಾನ, ನಂಬುಗೆಗಳು, ರಂಗೋಲಿ ಬಗೆಗಿನ ಹಾಡುಗಳು, ಆಚರಣೆಗಳು, ಶೈಲಿಗಳು, ರಂಗೋಲಿ ವ್ರತ, ರಂಗೋಲಿಯ ಪ್ರಾದೇಶಿಕ ಲಕ್ಷಣಗಳು, ರಂಗೋಲಿಯಲ್ಲಿ ಬಣ್ಣಗಳ ಪ್ರಭಾವ ಹೀಗೆ ಹಲವಾರು ಸಂಗತಿಗಳನ್ನು ವಿವೇಚಿಸಲಾಗಿದೆ. ಚುಕ್ಕೆಗಳನ್ನು ಇಡುವ ವಿಧಾನ, ರೇಖೆಗಳನ್ನು ಎಳೆಯುವುದು, ಬಣ್ಣ ತುಂಬುವುದು, ಪೂರಕ ಚಿತ್ರಗಳನ್ನು ರೂಪಿಸುವುದು, ಆಧುನಿಕತೆಯ ಸ್ವರೂಪದಲ್ಲಿ ಬದಲಾಗುತ್ತಿರುವ ರಂಗೋಲಿಯ ಪರಿಕರಗಳು, ರಚನಾ ವಿಧಾನ, ಸಾಮಾಜಿಕ ವ್ಯವಸ್ಥೆಯಲ್ಲಿ ಈ ಕಲೆಗೆ ಇಂದು ದೊರಕುತ್ತಿರುವ ಸ್ಥಾನಮಾನಗಳ ಬಗ್ಗೆಯೂ ಇಲ್ಲಿ ಹೇಳಲಾಗಿದೆ. ಕಲೆಯ ದೃಷ್ಟಿಯಿಂದ ಇದೊಂದು ಗಮನಾರ್ಹ ಕೃತಿಯಾಗಿದೆ.

**ಕಲಾ ಅರ್ಪಣ :**

ಭಾರತೀಯ ಕರಕುಶಲ ಕಲೆಗಳಲ್ಲಿ ಹಲವಾರು ಪ್ರಕಾರಗಳಿವೆ. ಕಸೂತಿ, ಮದರಂಗಿ, ರಂಗೋಲಿ, ಗೊಂಬೆ ತಯಾರಿಕೆ ಮುಂತಾದ ರೀತಿಯ ಕುಶಲ ಕಲೆಗಳು ಒಂದು ಬಗೆಯಾದರೆ, ಆಧುನಿಕ ಸ್ಪರ್ಶದಿಂದ ಒಡಗೂಡಿದ ಮತ್ತು ವಿದೇಶಿ ಪ್ರಭಾವಗಳಿಂದ ಪ್ರೇರಿತವಾದ ಮತ್ತು ಬೇರೆ ದೇಶಗಳಿಂದಲೇ ಇಲ್ಲಿಗೆ ಪಸರಿಸಿದ ಕೆಲವು ಕರಕುಶಲ ಕಲಾ ಪ್ರಕಾರಗಳೂ ಭಾರತದಲ್ಲಿವೆ. ಪ್ರಸ್ತುತ ಚಿಕ್ಕ ಪುಸ್ತಕವು ಬಾಟಿಕ್, ಮೇಣಕಲೆ, ಇಕೆಬಾನ ಮತ್ತು ಪುಷ್ಪಜೋಡಣೆ ಕಲೆಯ ಕುರಿತು ಸ್ಥೂಲ ಮಾಹಿತಿ ನೀಡುತ್ತಿದ್ದು, ಇದನ್ನು ಶ್ರೀಮತಿ,ಪ್ರಭಾಶಂಕರ ಬರೆದಿದ್ದಾರೆ.[೬೪] ಬಾಟಿಕ್ ಕಲೆ ಕುರಿತು ಹೇಳುವಲ್ಲಿ ಅದರ ಮೂಲ, ರಚನಾ ವಿಧಾನ, ಬಣ್ಣಗಳು, ಮೇಣ ತಯಾರಿಸುವ ವಿಧಾನ, ಹಳದಿ-ಕಪ್ಪು ಬಣ್ಣ ತಯಾರಿಸುವ ವಿಧಾನಗಳು ಮೇಣದ ಕಲೆಯಲ್ಲಿ ಅದರ ಮೂಲ, ಮಾಡುವ ವಿಧಾನ, ಬೇಕಾಗುವ ಸಾಮಾನುಗಳು, ಬಣ್ಣ ಹಾಕುವ ರೀತಿಗಳನ್ನು ಹೇಳಿದೆ. ಇಕೆಬಾನ ಕಲೆಯಲ್ಲಿ ಅದರ ರೀತಿ, ಶೈಲಿ, ಬೇಕಾಗುವ ಸಾಮಾನುಗಳು, ರಚನಾ ವಿಧಾನ, ಜಪಾನ್ ಶೈಲಿಯ ಕ್ರಮಗಳನ್ನು ಹೇಳಿ ಕೊಡಲಾಗಿದೆ. ಕೊನೆಯಲ್ಲಿ ಭಾರತೀಯ ಸಂಪ್ರದಾಯದ ಪುಷ್ಪಜೋಡಣೆ ವಿಧಾನ, ಅದರ ಪರಂಪರೆ, ರಚನಾ ಕ್ರಮ, ಪರಿಕರಗಳ ಬಗ್ಗೆ ವಿವೇಚಿಸಲಾಗಿದೆ. ಇವುಗಳ ವ್ಯತ್ಯಾಸ ಹೋಲಿಕೆಗಳನ್ನು ತಿಳಿಸಲಾಗಿದೆ.

---

೬೩. ಬಿ.ಪಿ.ಬಾಯಿರಿ : ಭಾರತೀಯ ಸಂಸ್ಕೃತಿಯಲ್ಲಿ ರಂಗವಲ್ಲಿ : ಚಿತ್ರಕುಟೀರ, ಉಡುಪಿ- ೧೯೯೨

೬೪. ಶ್ರೀಮತಿ.ಪ್ರಭಾಶಂಕರ್ : ಕಲಾ ಅರ್ಪಣ : ಶ್ರೀಮತಿ. ಪ್ರಭಾಶಂಕರ್ ಪ್ರಕಾಶನ, ಬೆಂಗಳೂರು -೧೯೮೩

ಅಲ್ಲಲ್ಲಿ ಪ್ರಾಯೋಗಿಕ ವಿಧಾನದ ಛಾಯಾ ಚಿತ್ರಗಳು ಮತ್ತು ಸಂಬಂಧಿಸಿದ ರೇಖಾಚಿತ್ರಗಳನ್ನು ಕೊಡಲಾಗಿದೆ. ಈ ಪುಸ್ತಕವು ಕರಕುಶಲ ಕಲೆಯ ಕಲಿಕೆಯ ಬಗ್ಗೆ ಸ್ಥೂಲ ಮಾಹಿತಿ ಕೊಡುವ ಒಂದು ಚಿಕ್ಕ ಪುಸ್ತಕವಾಗಿದ್ದು, ಮಹಿಳೆಯರನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿತವಾಗಿದೆ. ವಾಕ್ಯಗಳು ಮತ್ತು ಮುದ್ರಣ ದೋಷದಿಂದ ಕೂಡಿದ ಈ ಪುಸ್ತಕ ಪ್ರಾಯೋಗಿಕ ವಿಧಾನಗಳನ್ನು ತಿಳಿಸಿ ಕೊಡುವಲ್ಲಿ ಮಾತ್ರ ಸಫಲವಾಗಿದೆ.

**ಗ್ರಾಫಿಕ್ ಕಲೆ :**

ಗ್ರಾಫಿಕ್ ಕಲಾಪ್ರಕಾರವು ಚಿತ್ರಕಲಾ ಪ್ರಕಾರಕ್ಕಿಂತ ಭಿನ್ನವಾದ ಸ್ವರೂಪವನ್ನು ಹೊಂದಿದೆ. ಇಲ್ಲಿ ಕೆತ್ತುವ ಮೂಲಕ, ಕೊರೆಯುವ ಮೂಲಕ ಇಲ್ಲವೆ ಉಬ್ಬು ವಿನ್ಯಾಸಗಳನ್ನು ರಚಿಸುವ ಮೂಲಕ ಅವುಗಳನ್ನು ಮುದ್ರಣ ವಿಧಾನದಲ್ಲಿ ಅಳವಡಿಸಿ ಚಿತ್ರಗಳನ್ನು ಪಡೆಯುತ್ತಾರೆ. ಗ್ರಾಫಿಕ್ ಕಲೆಯ ಬಗೆಗೆ ಹಲವು ಸಂಗತಿಗಳನ್ನು ಒಳಗೊಂಡ ಈ ಕೃತಿಯನ್ನು ರವಿಕುಮಾರ ಕಾಶಿ ಬರೆದಿದ್ದಾರೆ.[೬೫] ಗ್ರಾಫಿಕ್ ಕಲಾಮಾಧ್ಯಮವು ಪ್ರಾಚೀನ ಪರಂಪರೆಯನ್ನು ಹೊಂದಿದ್ದು ವಿಶ್ವದ ಪ್ರಮುಖ ಚಿತ್ರಕಲಾವಿದರಾದ ಪಿಕಾಸೋ, ಹೆನ್ರಿಮಾಟಿಸ್, ವ್ಯಾನ್‌ಗಾಗ್, ಪಾಲ್‌ಗಾಗಿನ್ ಮುಂತಾದವರು ಗ್ರಾಫಿಕ್ ಕಲಾಕೃತಿಗಳನ್ನು ರಚನೆ ಮಾಡಿದ್ದಾರೆ. ಗ್ರಾಫಿಕ್ ಕಲೆಯಲ್ಲಿ ಲಿಥೋ, ಲಿನೋ, ಉಡ್‌ಕಟ್ ಎಚ್ಚಿಂಗ್, ಗ್ಲಾಸ್ ಡಿಜೈನ್, ಸ್ಕ್ರೀನ್ ಪ್ರಿಂಟಿಂಗ್, ಸಿರಿಯೋಗ್ರಫಿ ಮುಂತಾದ ಮಾಧ್ಯಮಗಳು ಕೃತಿರಚನೆಯ ಹಿನ್ನೆಲೆಯಲ್ಲಿ ಬಳಸಲ್ಪಡುತ್ತವೆ. ಇಲ್ಲಿ ಕಲಾವಿದನ ಅಭಿವ್ಯಕ್ತಿಗಳಿಗೆ ಬಹುಮಟ್ಟಿಗೆ ಯಂತ್ರಗಳು, ರಾಸಾಯನಕಗಳು ಪೂರಕವಾಗಿ ಕೆಲಸ ಮಾಡುತ್ತವೆ ಎನ್ನಬಹುದು. ಇಂತಹ ವಿವಿಧ ವಿಷಯಗಳು ಈ ಪುಸ್ತಕದಲ್ಲಿ ಹೇಳಲ್ಪಟ್ಟಿದ್ದು, ರಿಲೀಫ್ ಮುದ್ರಣ, ಉಡ್‌ಕಟ್ ಇತಿಹಾಸ, ವುಡ್‌ಕಟ್ ಉಪಕರಣಗಳು, ವುಡ್ ಎನ್‌ಗ್ರೇವಿಂಗ್, ಅದರ ಉಪಕರಣಗಳು, ಲಿನೋಕಟ್ ಮುದ್ರಣ, ಅದರ ತಂತ್ರಗಳು, ಇಟಾಂಗ್ಲಿಯೋ ಮುದ್ರಣ, ಎನ್‌ಗ್ರೇವಿಂಗ್ ಮತ್ತು ಎಚ್ಚಿಂಗ್ ಇತಿಹಾಸ, ಎಚ್ಚಿಂಗ್ ತಂತ್ರಗಳು, ಅಕ್ವಾಟಿಂಟ್, ಸಾಫ್ಟ್‌ಗ್ರೌಂಡ್, ವಿಸ್ಕೋಸಿಟಿ ತಂತ್ರ, ಲಿಥೋಗ್ರಾಫಿ ಮುದ್ರಣ, ಸೇರಿಗ್ರಾಫಿ ವಿಧಾನಗಳ ಬಗ್ಗೆ ಸ್ಥೂಲ ನೋಟ ಕೊಡಲಾಗಿದೆ. ಜೊತೆಗೆ ಭಾರತದಲ್ಲಿ ಮುದ್ರಣಕಲೆ ಬೆಳೆದುಬಂದ ರೀತಿ ಚಿತ್ರಗಳ ವಸ್ತುವಿಷಯಗಳು, ಬಳಕೆಯ ಪರಿಕರಗಳು, ರಚನಾ ವಿಧಾನ ಮುಂತಾದ ವಿಷಯಗಳು ಇಲ್ಲಿ ಸಂಕ್ಷಿಪ್ತವಾಗಿ ಹೇಳಲ್ಪಟ್ಟಿವೆ. ಗ್ರಾಫಿಕ್ ಕಲೆಯ ಮಾಹಿತಿ ಮತ್ತು ತಂತ್ರಗಾರಿಕೆಯನ್ನು ತಿಳಿಯುವ ಹಿನ್ನೆಲೆಯಲ್ಲಿ ಈ ಪುಸ್ತಕ ಉತ್ತಮವಾಗಿದೆ.

**ಭಾರತದಲ್ಲಿ ಸಮಕಾಲೀನ ಕಲೆ :**

ಭಾರತದ ಸಮಕಾಲೀನ ಕಲೆಯ ಬಗ್ಗೆ ಇರುವ ಈ ಪುಸ್ತಕವನ್ನು ಎನ್.ಮರಿಶಾಮಾಚಾರ್ ರಚನೆ ಮಾಡಿದ್ದಾರೆ.[೬೬] ಇದರಲ್ಲಿ ಭಾರತದ ಸಮಕಾಲೀನ ಕಲೆಯು ಬೆಳೆದು ಬಂದ ರೀತಿಯನ್ನು ಸ್ಥೂಲವಾಗಿ ಕೊಡಲಾಗಿದೆ. ಬ್ರಿಟಿಷ್ ಕಂಪನಿ ಚಿತ್ರಕಲೆ, ಬ್ರಿಟಿಷರು ಭಾರತದಲ್ಲಿ ಕಲಾಶಾಲೆಗಳನ್ನು ಆರಂಭಿಸಿದ್ದು, ಬಂಗಾಳ ಕಲೆಯ ಹಿನ್ನೆಲೆಯನ್ನು ಕೊಡಲಾಗಿದೆ. ನಂತರ ಇಲ್ಲಿಯವರೆಗೆ ಭಾರತದಲ್ಲಿ ಬೆಳೆದ ಕಲಾಶೈಲಿಗಳ ಸ್ಥೂಲನೋಟ ಕೊಟ್ಟಿರುವುದು ವಿಶೇಷವಾಗಿದೆ. ಭಾರತದ ಸಮಕಾಲೀನ ಕಲೆಯ ಆರಂಭ, ಬೆಳವಣಿಗೆ, ವ್ಯಾಪಕತೆ ಇವುಗಳೊಂದಿಗೆ ಪ್ರಮುಖ ಕಲಾವಿದರು, ಕಲಾಕೃತಿಗಳು, ಅವರ ಕಲಾಶೈಲಿಯ ವಿಧಾನಗಳು, ವಸ್ತುವಿಷಯಗಳಂತಹ ಸಂಗತಿಗಳನ್ನು ಇಲ್ಲಿ ವಿವೇಚಿಸಲಾಗಿದೆ.

---

೬೫. ರವಿಕುಮಾರ ಕಾಶಿ : ಗ್ರಾಫಿಕ್ ಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೬

೬೬. ಎನ್.ಮರಿಶಾಮಾಚಾರ್ : ಭಾರತದಲ್ಲಿ ಸಮಕಾಲೀನ ಕಲೆ : ಸಿ.ಎಂ.ಎನ್.ಪ್ರಕಾಶನ; ಬೆಂಗಳೂರು -೧೯೮೬

ಭಾರತದ ಸಮಕಾಲೀನ ಕಲಾವಿದರ ಬಗ್ಗೆ ಹೇಳುವ ಪೂರ್ವದಲ್ಲಿ ರವಿವರ್ಮ ಮತ್ತು ಅವನ ಕಲಾಶೈಲಿ, ಸಾಮಾಜಿಕ ಪ್ರಭಾವಗಳನ್ನು ಕುರಿತು ಚರ್ಚಿಸಲಾಗಿದೆ. ಎಂ.ಎಫ್.ಹುಸೇನ್, ಎನ್.ಎಸ್.ಬೇಂದ್ರೆ, ಕೆ.ಕೆ.ಹೆಬ್ಬಾರ್, ಕೆ.ಸಿ.ಎಸ್.ಫಣಿಕರ್, ಯುಸೂಫ್ ಅರಕ್ಕಲ್, ಜಾಮಿನಿರಾಯ್, ಜಿ.ಎಸ್.ಶೆಣೈ, ಆರ್.ಎಂ.ಹಡಪದ್‌ರಂತಹ ಖ್ಯಾತ ಸಮಕಾಲೀನ ಕಲಾವಿದರ ಕುರಿತು ಸ್ಥೂಲನೋಟ ಕೊಡಲಾಗಿದೆ. ಪ್ರಸ್ತುತ ಕೃತಿಯು ಕನ್ನಡದಲ್ಲಿ ಸಮಕಾಲೀನ ಕಲೆಯ ಬಗ್ಗೆ ರಚನೆಯಾಗಿರುವ ಕಲಾ ಸಾಹಿತ್ಯದ ಕೊರತೆಯನ್ನು ನೀಗಿಸುವ ನಿಟ್ಟಿನಲ್ಲಿ ಸಹಾಯ ಮಾಡುತ್ತದೆಯಾದರೂ ಇನ್ನೂ ಹೆಚ್ಚಿನ ವಿವರಗಳನ್ನು ಅಪೇಕ್ಷಿಸುತ್ತದೆ. ಪುಸ್ತಕದಲ್ಲಿ ಅಲ್ಲಲ್ಲಿ ಮೇಲೆ ಹೇಳಲಾದ ಕಲಾವಿದರ ಕಲಾಕೃತಿಗಳ ಛಾಯಾಚಿತ್ರಗಳನ್ನು ಹಾಕಿ ಅವುಗಳ ಬಗ್ಗೆ ವಿಮರ್ಶೆ ಮಾಡಲಾಗಿದೆ.

ಈ ವಿಂಗಡಣೆಯಲ್ಲಿ ಭಾರತೀಯ ಜನಪದ ಚಿತ್ರಕಲಾಪ್ರಕಾರಗಳು ಕರಕುಶಲಕಲೆಯ ಪ್ರಕಾರಗಳು ಮತ್ತು ಗ್ರಾಫಿಕ್ಸ್ ಕಲೆಯ ಬಗ್ಗೆ ಬಂದಂತಹ ಕೃತಿಗಳ ಜೊತೆಗೆ ನವ್ಯಕಲೆಯ ಬಗ್ಗೆ ಬಂದ ಕೃತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಜನಪದ ಕಲೆಯಲ್ಲಿ ವಾರ್ಲಿ ಕಲೆ, ಕಾಳಿಘಾಟ, ವನಪರ್ತಿ, ಮದುಬನಿ, ಪಟುವಾ ಮುಂತಾದ ಶೈಲಿಗಳು ವಿಶ್ಲೇಷಣೆಗೆ ಒಳಪಟ್ಟಿವೆ. ಕರಕುಶಲಕಲೆಯಲ್ಲಿ ಮಹಿಳೆಯರ ಅಲಂಕಾರದ ಬಗ್ಗೆ ಹೆಚ್ಚು ಒತ್ತುಕೊಡಲಾಗಿದೆ. ಗ್ರಾಫಿಕ್ಸ್ ಕಲಾಪ್ರಕಾರದಲ್ಲಿ ಲೀಥೊ, ಲೀನೊ, ಎಚ್ಚಿಂಗ್, ಉಡ್‌ಕಟಿಂಗ್, ಸ್ಕ್ರೀನ್‌ಪ್ರಿಂಟಿಂಗ್ ಮುಂತಾದ ಪ್ರಕಾರಗಳನ್ನು ಹೇಳಲಾಗಿದ್ದರೆ, ನವ್ಯಕಲೆಯ ಕುರಿತ ಕೃತಿಯಲ್ಲಿ ಭಾರತದಲ್ಲಿ ಆಧುನಿಕ ಕಲೆ ಬೆಳೆದುಬಂದ ರೀತಿಯನ್ನು ಸ್ಥೂಲವಾಗಿ ತಿಳಿಸಲಾಗಿದೆ.

**೩.ಜಾಗತಿಕ ಚಿತ್ರಕಲಾ ಸಾಹಿತ್ಯ :**

ಕನ್ನಡದಲ್ಲಿ ಜಾಗತಿಕ ಚಿತ್ರಕಲೆಯ ಬಗ್ಗೆ ಬಂದ ಸಾಹಿತ್ಯವು ತೀರಾ ಕಡಿಮೆ. ಅದರಲ್ಲಿ ಬಹುಮಟ್ಟಿನ ಸಾಹಿತ್ಯವು ಪ್ರಾಚೀನ ನಾಗರೀಕತೆಗಳ ಕಲೆ, ಆಧುನಿಕ ಕಲಾಶೈಲಿಗಳ ಬಗ್ಗೆ ಕಂಡುಬರುತ್ತದೆ. ಇವುಗಳನ್ನು ಹೊರತುಪಡಿಸಿದರೆ ಮಧ್ಯಕಾಲೀನ ಪಾಶ್ಚಾತ್ಯ ಕಲಾವಾತಾವರಣದ ಬಗ್ಗೆ ಮತ್ತು ಕಲಾವಿದರಬಗ್ಗೆ ಸ್ವಲ್ಪಮಟ್ಟಿನ ಬರಹಗಳು ಬಂದಿವೆ. ಇದುವರೆಗೆ ಬಂದ ಈ ಪ್ರಕಾರದ ಜಾಗತಿಕ ಚಿತ್ರಕಲಾ ಸಾಹಿತ್ಯವನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ವಿಂಗಡಿಸಿ ವಿಶ್ಲೇಷಿಸಬಹುದಾಗಿದೆ.

ಅ. ಜಾಗತಿಕ ಪ್ರಾಚೀನ ಚಿತ್ರಕಲಾ ಸಾಹಿತ್ಯ.

ಬ. ಜಾಗತಿಕ ನವ್ಯ ಚಿತ್ರಕಲಾ ಸಾಹಿತ್ಯ.

**ಅ. ಜಾಗತಿಕ ಪ್ರಾಚೀನ ಚಿತ್ರಕಲಾ ಸಾಹಿತ್ಯ :**

ಇಲ್ಲಿ ಜಗತ್ತಿನ ಪ್ರಾಚೀನ ನಾಗರೀಕತೆಗಳಲ್ಲಿ ಬೆಳೆದುಬಂದ ಚಿತ್ರಕಲೆಯನ್ನು ಕುರಿತು ಹೆಚ್ಚಿನಕೃತಿಗಳಿವೆ. ಜೊತೆಗೆ ಪಾಶ್ಚಾತ್ಯ ಪ್ರಾಚೀನ ಕ್ರೈಸ್ತಚಿತ್ರಕಲೆ, ಬಾರೋಕ್ ಕಲೆ, ರೋಕೋಕೊ ಕಲೆ ಮತ್ತು ಗೋಥಿಕ್ ಕಲಾಪ್ರಕಾರಗಳು, ಪುನರುಜ್ಜೀವನ ಕಾಲದ ಕಲೆ, ಕೆಲವು ಪ್ರಮುಖ ಕಲಾವಿದರ ಕುರಿತು ಹೇಳಲಾದ ಸಾಹಿತ್ಯಕೃತಿಗಳನ್ನು ಇಲ್ಲಿ ಪರಿಗಣಿಸಲಾಗಿದ್ದು ಅವು ಕೆಳಗಿನಂತಿವೆ.

**ನಾಗರಿಕತೆಯ ಹೊಸ್ತಿಲಲ್ಲಿ :**

ಜಗತ್ತಿನ ಅನೇಕ ಪ್ರಮುಖ ನದಿಗಳು ನಾಗರಿಕತೆಯ ತೊಟ್ಟಿಲಾಗಿದ್ದವು. ನದಿಗಳ ಪ್ರಸ್ಥಭೂಮಿಗಳಲ್ಲೇ ಪ್ರಪಂಚದ ಪ್ರಾಚೀನ ನಾಗರಿಕತೆಗಳೆಲ್ಲ ಬಾಳಿ ಬೆಳಗಿದವು. ಅಂತಹ ಪ್ರಮುಖ ನಾಗರಿಕತೆಗಳ ಬಗೆಗೆ ಸ್ಥೂಲವಾದ ನೋಟ ಕೊಡುವ ಈ ಕೃತಿಯನ್ನು ಶಿವರಾಮ ಕಾರಂತ

ಬರೆದಿದ್ದಾರೆ.[೬೭] ಮಾನವನ ಪ್ರಾರಂಭಿಕ ಹಂತದ ಕಲಾ ಚಟುವಟಿಕೆಯಿಂದ ತೊಡಗಿ, ನಾಗರಿಕತೆಗೆ ಕಾಲಿಡುವ ಹಂತದವರೆಗೆ ಕಲೆಯ ವಿವಿಧ ಆಯಾಮಗಳನ್ನು ವಿಶ್ಲೇಷಿಸಲಾಗಿದೆ. ಆದಿಮಾನವರ ಕಲ್ಲಾಸರೆಯ ಚಿತ್ರಗಳು, ಮೆಸೋಪೊಟೇಮಿಯಾ ನಾಗರಿಕತೆಯ ಕಲೆ, ನೈಲ್ ನಾಗರಿಕತೆಯ ಸಂಸ್ಕೃತಿ ಮತ್ತು ಕಲೆ, ಇಟ್ರುಸ್ಕನ್ ನಾಗರಿಕತೆಯ ಕಲೆ, ಚೀನಾ ನಾಗರಿಕತೆಯ ಕಲೆ, ಪುರಾತನ ಅಮೇರಿಕನ್ ನಾಗರಿಕತೆಯ ಕಲೆ, ಮೆಕ್ಸಿಕೋ ನಾಗರಿಕತೆಯ ಕಲೆ, ಮಾಯಾ ಜನರ ನಾಗರಿಕತೆ ಮತ್ತು ಕಲೆ, ಇಂಕಾ ನಾಗರಿಕತೆ ಮತ್ತು ಕಲೆಯ ಕುರಿತಾಗಿ ಹೇಳಲಾಗಿದೆ. ಈ ಎಲ್ಲ ಜಾಗತಿಕ ನಾಗರಿಕತೆಯ ಜೊತೆಗೆ ಭಾರತದ ಸಿಂಧೂ ನಾಗರಿಕತೆಯ ಬಗೆಗೂ ಸ್ಥೂಲವಾಗಿ ಹೇಳಿದ್ದಾರೆ.

ಈ ಕೃತಿಯಲ್ಲಿ ಆಯಾ ನಾಗರಿಕತೆಯ ಕುರಿತು ಹೇಳುವಾಗ ಅವರ ಸಂಸ್ಕೃತಿಯ ಜೊತೆಗೆ ಕಲಾವಿಚಾರವನ್ನು ಪ್ರಸ್ತಾಪಿಸಲಾಗಿದೆ. ಅವರ ನಗರ ಯೋಜನೆಗಳು, ವಾಸ್ತುಶಿಲ್ಪ, ಶಿಲ್ಪಕಲೆ ಮತ್ತು ಚಿತ್ರಕಲಾ ವಿಷಯವಾಗಿ ವಿವರಿಸಲಾಗಿದೆ. ವಾಸ್ತುಶಿಲ್ಪ ರಚನೆಯಲ್ಲಿ ಅವರ ದೇವಾಲಯ, ಅರಮನೆ, ಸಾಮಾನ್ಯರ ನಿವಾಸಗಳು, ಸಾರ್ವಜನಿಕ ಕಟ್ಟಡಗಳು, ಸ್ನಾನಗ್ರಹ, ಉಗ್ರಾಣ, ಕೋಟೆ ಕೊತ್ತಲಗಳು ಒಳಗೊಂಡರೆ, ಶಿಲ್ಪರಚನೆಯಲ್ಲಿ ಶಿಲಾ ಶಿಲ್ಪಗಳು, ಮರದ ಶಿಲ್ಪಗಳು, ಮೃತ್ ಶಿಲ್ಪಗಳು, ಲೋಹ ಶಿಲ್ಪಗಳು ಒಳಗೊಳ್ಳುತ್ತವೆ. ಚಿತ್ರರಚನೆಯಲ್ಲಿ ಬೃಹತ್ ಭಿತ್ತಿಚಿತ್ರಗಳು, ಹಸ್ತಪ್ರತಿಯ ಸಾಂದರ್ಭಿಕ ಚಿತ್ರಗಳು, ಪಾತ್ರೆಗಳ ಮೇಲೆ ಅಲಂಕಾರಕ್ಕೆ ಬಿಡಿಸಿದ ಚಿತ್ರಗಳು, ಬಟ್ಟೆ, ಚರ್ಮ, ಮರ, ಲೋಹ ಮುಂತಾದ ಮಾಧ್ಯಮಗಳ ಮೇಲೆ ರಚಿಸಿದ ಚಿತ್ರಗಳು ಸೇರುತ್ತವೆ. ಹೀಗೆ ಪ್ರಾಚೀನ ನಾಗರಿಕತೆಗಳ ಹತ್ತು ಹಲವು ಕಲಾವಿಚಾರಗಳು ಈ ಸಾಹಿತ್ಯ ಕೃತಿಯಲ್ಲಿ ಕಂಡುಬರುತ್ತವೆ.

**ಜಾಗತಿಕ ಚಿತ್ರಕಲೆ :**

ಜಾಗತಿಕ ಚಿತ್ರಕಲೆಯ ಕುರಿತು ಹಲವು ವಿಷಯಗಳನ್ನು ತಿಳಿಸುವ ಈ ಕೃತಿಯನ್ನು ಬಿ.ಪಿ.ಬಾಯಿರಿ ರಚಿಸಿದ್ದಾರೆ.[೬೮] ಇದರಲ್ಲಿ ಜಗತ್ತಿನ ಅನೇಕ ಭಾಗಗಳ ಕಲೆಯನ್ನು ಭಾರತವೂ ಒಳಗೊಂಡಂತೆ ಸ್ಥೂಲವಾಗಿ ಪರಿಚಯಿಸಲಾಗಿದೆ. ಇಲ್ಲಿ ಫ್ರಾನ್ಸ, ಸ್ಪೇನ್, ಆಫ್ರಿಕಾ, ಆಸ್ಟ್ರೇಲಿಯಾ ಹೀಗೆ ಜಗತ್ತಿನ ವಿವಿಧ ಭಾಗಗಳಲ್ಲಿ ಇರುವ ಆದಿಮಾನವ ಚಿತ್ರಕಲೆಯನ್ನು ವಿವೇಚಿಸಲಾಗಿದೆ. ಭಾರತೀಯ ಕಲೆ ಲೇಖನದಲ್ಲಿ ಇಲ್ಲಿನ ಇತಿಹಾಸ ಪೂರ್ವ ಚಿತ್ರಕಲೆ, ಸಿಂಧೂ ನಾಗರಿಕತೆ, ವೇದಕಾಲದ ಸಂಸ್ಕೃತಿ, ಮಧ್ಯಯುಗೀನ ಕಲೆ ಕುರಿತು ಹೇಳಿದೆ. ಜಪಾನ್ ಮತ್ತು ಚೀನಾ ದೇಶದ ಕಲೆಗಳನ್ನು ಎರಡು ಪ್ರತ್ಯೇಕ ಲೇಖನಗಳಲ್ಲಿ ಬಿಂಬಿಸಲಾಗಿದೆ. ಅದೇ ರೀತಿ ಅಮೇರಿಕನ್ ಕಲೆಯನ್ನು ಹೇಳುವಾಗ ಇಲ್ಲಿನ ಮೂಲ ನಿವಾಸಿಗಳಾದ ಇಂಕಾ ಜನರ ಕಲೆಯನ್ನು ಕುರಿತು ವಿವೇಚನೆ ಮಾಡಲಾಗಿದ್ದರೆ, ಗ್ರೀಕ್ ಕಲೆಯಲ್ಲಿ ಅಲ್ಲಿನ ಚಿತ್ರ ಮತ್ತು ಶಿಲ್ಪಗಳ ಬಗ್ಗೆ ಒತ್ತು ಕೊಡಲಾಗಿದೆ. ಮೆಸೋಪೆಟೋಮಿಯಾ, ಬೆಂಜೆಂಟೈನಾ ಪ್ರಾಚೀನ ಸಂಸ್ಕೃತಿಗಳ ಕಲೆಯನ್ನು ಹೇಳಿ ರೋಮ್ ಪ್ರದೇಶದ ಕಲಾ ಪರಂಪರೆ ತಿಳಿಸಿದೆ. ಪಾಂಪಿನಗರದ ಪ್ರಾಚೀನ ಚಿತ್ರಕಲೆ, ಪರ್ಶಿಯನ್ ಕಲೆ, ಇಜಿಪ್ತ ಕಲಾ ಸಂಸ್ಕೃತಿ, ಪಿರಾಮಿಡ್‌ಗಳು, ಸ್ಫಿಂಕ್ಸಗಳು, ದೇವಾಲಯಗಳು, ಓಬೆಲಿಸ್ಕಗಳ ಕುರಿತು ಮಾಹಿತಿ ಕಂಡುಬರುವುದು. ಶ್ರೀಲಂಕಾ ಕಲೆ, ಅಲ್ಲಿನ ಪ್ರಾಚೀನ ಹಿಂದು ಪರವಾದ ಕಲೆ, ನಂತರದಲ್ಲಿ ಬೌದ್ಧ ಮತವನ್ನು ಅಳವಡಿಸಿಕೊಂಡ ಅಲ್ಲಿನ ಕಲಾ ಸಂಪ್ರದಾಯಗಳು ಬಿಂಬಿತಗೊಂಡಿವೆ. ಪ್ರಸಿದ್ಧ ಕಲಾವಿದರ ಬಗ್ಗೆ ಸ್ಥೂಲ ಮಾಹಿತಿ ಕೊಡುವ ಲೇಖನಗಳಿವೆ. ಮೈಕಲ್ ಎಂಜಲೋ, ಡಾವಿನ್ಸಿ,

---

೬೭. ಶಿವರಾಮ ಕಾರಂತ : ನಾಗರಿಕತೆಯ ಹೊಸ್ತಿಲಲ್ಲಿ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ -೧೯೬೯

೬೮. ಬಿ.ಪಿ.ಬಾಯಿರಿ : ಜಾಗತಿಕ ಚಿತ್ರಕಲೆ : ಪ್ರತಿಭಾ ಗ್ರಂಥಮಾಲೆ, ಧಾರವಾಡ-೧೯೮೫

ರಾಫೆಲ್, ಗಾಗಿನ್, ರೂಬೆನ್ಸ್, ಪಿಕಾಸೋ ಮುಂತಾದ ಕಲಾವಿದರು ಇದರಲ್ಲಿ ಒಳಗೊಂಡಿದ್ದಾರೆ. ಕೊನೆಯಲ್ಲಿ ಕಲಾ ಶಿಕ್ಷಣದ ಬಗ್ಗೆ ಲೇಖನಗಳಿವೆ. ಇದರಲ್ಲಿ ಚಿಕ್ಕ ಮಕ್ಕಳ ಚಿತ್ರಕಲೆ, ಮಕ್ಕಳ ಕಲಿಕೆಯ ಸಾಮರ್ಥ್ಯಗಳನ್ನು ಬಿಂಬಿಸುವ ಮೂರು ಲೇಖನಗಳಿವೆ.

**ಬಾರೋಕ್ ಕಲೆ :**

ಪಾಶ್ಚಾತ್ಯ ಕಲಾವಲಯದಲ್ಲಿ ಕಾಲಕಾಲಕ್ಕೆ ವಿವಿಧ ಕಲಾಶೈಲಿಗಳು ಹುಟ್ಟಿಕೊಂಡು ಅಭಿವೃದ್ಧಿಗೊಂಡಿವೆ. ಕ್ರಿ.ಶ.೧೬ನೇ ಶತಮಾನದಲ್ಲಿ ಹುಟ್ಟಿದ ಬಾರೋಕ್ ಕಲೆಯು ಚಿತ್ರ, ಶಿಲ್ಪ ಮತ್ತು ವಾಸ್ತುಕಲೆಗಳಲ್ಲಿ ವಿಶೇಷವಾಗಿ ಬೆಳೆಯಿತು. ಈ ಕಲಾ ಪ್ರಕಾರವನ್ನು ಕುರಿತು ಕನ್ನಡದಲ್ಲಿ ಎಸ್.ಸಿ.ಪಾಟೀಲ ಪುಸ್ತಕ ರಚನೆ ಮಾಡಿದ್ದಾರೆ.[೬೯] ಈ ಕೃತಿಯು ಸಂಶೋಧನಾತ್ಮಕವಾಗಿದ್ದು, ಬಾರೋಕ್ ಕಲೆಯ ಹಲವು ಅಂಶಗಳನ್ನು ಒಳಗೊಂಡಿದೆ. ಬಾರೋಕ ಎಂದರೆ ಬಿರಿದ ಮುತ್ತು ಎನ್ನುವ ಅರ್ಥವಿದ್ದು ಚಿತ್ರಕಲೆಯಲ್ಲಿ ಆಕೃತಿಗಳು ತಮ್ಮ ಎಲ್ಲೆಯನ್ನು ಮೀರಿ ಹೊರಬರುತ್ತವೆ ಎನ್ನುವಂತೆ ಭ್ರಾಮಕ ಕಲ್ಪನೆಯ ಹಿನ್ನೆಲೆಯಲ್ಲಿ ಕೃತಿ ರಚನೆಮಾಡಲಾಗಿರುತ್ತದೆ. ಈ ಶೈಲಿಯ ವಾಸ್ತುರಚನೆಯಲ್ಲಿ ಇಗರ್ಜಿ ಮತ್ತು ಪೂಜಾ ಮಂದಿರಗಳಂತಹ ರಚನೆಗಳು ಹೆಚ್ಚಾಗಿ ಕಂಡುಬರುತ್ತವೆ. ಇಲ್ಲಿ ಚರ್ಚುಗಳ ಮೇಲಿನ ಗೋಪುರಗಳು ಚೂಪಾಗಿ ಮೇಲಕ್ಕೆ ಚಾಚಿಕೊಂಡಿರುವುದರ ಜೊತೆಗೆ ಒಟ್ಟೊಟ್ಟಿಗೆ ಕೂಡಿಕೊಂಡಿರುತ್ತವೆ. ಬಾರೋಕ್ ಚಿತ್ರಕಲೆಯಲ್ಲಿ ಆಯ್ದುಕೊಂಡ ವಸ್ತುವಿಷಯಗಳಲ್ಲಿ ಹೆಚ್ಚಾಗಿ ಕ್ರಿಸ್ತ ಧರ್ಮಕ್ಕೆ ಸಂಬಂಧಿಸದವುಗಳಾಗಿದ್ದು, ಉಜ್ವಲ ಬಣ್ಣ ಲೇಪನವನ್ನು ಹೊಂದಿವೆ. ಈ ಶೈಲಿಯ ಕಲಾವಿದರು ಆಕೃತಿಗಳನ್ನು ಒತ್ತೊತ್ತಾಗಿ ತಮ್ಮ ಕೃತಿಗಳಲ್ಲಿ ತುಂಬಿಸಿದ್ದಾರೆ.

ಈ ಕೃತಿಯಲ್ಲಿ ಚಿತ್ರಕಲೆಯ ಜೊತೆಗೆ ಸ್ಥೂಲವಾಗಿ ಶಿಲ್ಪ ಮತ್ತು ವಾಸ್ತುಕಲೆಯನ್ನು ಗಮನಿಸಲಾಗಿದೆ. ಹದಿನಾರನೆಯ ಶತಮಾನದಿಂದ ತೊಡಗಿ ಮುಂದಿನ ಮೂರು ಶತಮಾನಗಳ ಕಾಲ ವೈಭವದಿಂದ ಮೆರೆದ ಈ ಕಲಾ ಪ್ರಕಾರವು ಜಗತ್ತಿನ ಕಲಾಶೈಲಿಗಳಲ್ಲಿ ಪ್ರಮುಖವಾಗಿದೆ. ಇಲ್ಲಿ ಬಾರೋಕ್ ಕಲೆಯ ಹುಟ್ಟು, ಬೆಳವಣಿಗೆ, ಬಾರೋಕ್ ವಾಸ್ತಕಲೆ, ಶಿಲ್ಪಕಲೆ, ಬಾರೋಕ್ ಚಿತ್ರಕಲೆ, ಬಾರೋಕ್ ಶೈಲಿಯ ಕಲಾವಿದರು ಮತ್ತು ಅವರ ಕಲಾಕೃತಿಗಳ ವಿಶ್ಲೇಷಣೆಗಳನ್ನು ಅನುಕ್ರಮವಾಗಿ ಮಾಡಿಕೊಡಲಾಗಿದೆ. ಬಾರೋಕ್ ಕಲಾ ಪ್ರಕಾರವನ್ನು ಕುರಿತು ಅತ್ಯಂತ ಮಹತ್ವದ ಅಂಶಗಳನ್ನು ಚರ್ಚಿಸಿದ ಈ ಕೃತಿಯು ಕನ್ನಡದಲ್ಲಿ ಬಾರೋಕ್ ಕಲೆಯ ಬಗ್ಗೆ ಇರುವ ಅಪರೂಪದ ಕೃತಿಯಾಗಿದೆ.

ಜಾಗತಿಕ ಪ್ರಾಚೀನ ಚಿತ್ರಕಲಾ ಸಾಹಿತ್ಯದಲ್ಲಿ ಅನೇಕ ಅಂಶಗಳು ಕಂಡುಬರುತ್ತವೆ. ಪ್ರಾಚೀನ ನಾಗರೀಕತೆಗಳಲ್ಲಿ ಈಜಿಪ್ತ, ಮೆಸೊಪೊಟೋಮಿಯಾ, ಗ್ರೀಕ್, ರೋಮ್, ಚೀನಾ, ಜಪಾನ, ಭಾರತ, ಶ್ರೀಲಂಕಾ, ಇಂಕಾ ನಾಗರೀಕತೆಯ ಕಲಾಸಂಸ್ಕೃತಿಗಳು ಇಲ್ಲಿ ಬಿಂಬಿತಗೊಂಡಿವೆ. ನಂತರ ಕ್ರಿ.ಪೂ. ಆರಂಭಿಕ ಶತಮಾನಗಳ ಕಾಲದಲ್ಲಿ ಜಾಗತಿಕ ಕಲೆ ಬೆಳೆದುಬಂದ ರೀತಿ, ಪ್ರಾಚೀನ ಬೌದ್ಧ, ಕ್ರೈಸ್ತ, ಜೈನ, ಹಿಂದೂ ಧಾರ್ಮಿಕ ಕಲೆ, ಮಧ್ಯಯುಗೀನ ಕಾಲದ ಜಾಗತಿಕ ಕಲಾಪರಿಸರ, ಬಾರೋಕ್ ಕಲೆ, ರೋಕೋಕೊ, ಗಾಥಿಕ್ ಕಲಾಶೈಲಿಗಳು, ಪುನರುಜ್ಜೀವನ ಕಾಲದ ಕಲೆ, ನವ್ಯಕಲಾಪಂಥಗಳು ಹಾಗೂ ಕಲೆಗಾರರ ಬಗ್ಗೆ ಇಲ್ಲಿ ತಿಳಿಸಲಾಗಿದೆ.

---

೬೯. ಎಸ್.ಸಿ.ಪಾಟೀಲ : ಬಾರೋಕ್ ಕಲೆ : ಭಾರತೀಯ ಕಲಾಕೇಂದ್ರ, ಧಾರವಾಡ-೧೯೮೭

**ಬ. ಜಾಗತಿಕ ನವ್ಯ ಚಿತ್ರಕಲಾ ಸಾಹಿತ್ಯ :**

ಈ ವಿಭಾಗದಲ್ಲಿ ಜಾಗತಿಕ ಕಲಾಕ್ಷೇತ್ರದಲ್ಲಿ ಕ್ರಾಂತಿಯನ್ನುಂಟು ಮಾಡಿದ ಆಧುನಿಕ ಕಲಾಪಂಥಗಳು ಮತ್ತು ಕಲಾವಿದರ ಬಗ್ಗೆ ಬಂದಿರುವ ಸಾಹಿತ್ಯ ಕೃತಿಗಳನ್ನು ಪರಿಗಣಿಸಲಾಗಿದೆ. ಇದರಲ್ಲಿ ಕೆಲವು ಕೃತಿಗಳು ಕಲಾಪಂಥಗಳ ಬಗ್ಗೆ ವಿಶ್ಲೇಷಿಸಿದರೆ ಮತ್ತೆ ಕೆಲವು ಆಧುನಿಕ ಕಲಾವಿದರ ಕುರಿತು ತಿಳಿಸುತ್ತವೆ. ಇಲ್ಲಿನ ಸಾಹಿತ್ಯ ಕೃತಿಗಳು ಯಾವ ಅಂಶಗಳನ್ನು ಒಳಗೊಂಡಿವೆ ಎಂಬುದನ್ನು ಕೆಳಗಿನ ಕೃತಿಗಳ ವಿಶ್ಲೇಷಣೆಯಿಂದ ಕಂಡುಕೊಳ್ಳಬಹುದು.

**ನವ್ಯಕಲೆ ಮತ್ತು ಕಲೆಗಾರರು :**

ಆಧುನಿಕ ಚಿತ್ರಕಲೆಯ ಈ ಪುಸ್ತಕವನ್ನು ಬಿ.ಪಿ.ಬಾಯಿರಿಯವರು ಬರೆದಿದ್ದಾರೆ.[೭೦] ಪ್ರಾಚೀನ ಕಲಾ ಪದ್ಧತಿಗಳಿಗೆ ಪರ್ಯಾಯವಾಗಿ ಹುಟ್ಟಿಕೊಂಡ ಆಧುನಿಕ ಕಲಾಪಂಥಗಳು ಹೊಸ ಆಯಾಮಗಳನ್ನು ಸೃಷ್ಟಿಸಿದವು. ಪಾಶ್ಚಾತ್ಯ ಕಲಾವಲಯದಲ್ಲಿ ಈ ನವ್ಯಕಲಾ ಪರಂಪರೆ ಅತಿ ಬೇಗನೆ ಜನಪ್ರಿಯಗೊಂಡಿತಲ್ಲದೇ ಹೆಚ್ಚಿನ ಕಲಾವಿದರು ಆ ಕಡೆಗೆ ಆಕರ್ಷಿತಗೊಂಡರು. ನವ್ಯಕಲೆಯ ಕೃತಿಗಳು ಹೆಚ್ಚು ಹೆಚ್ಚಾಗಿ ರಚನೆಗೊಳ್ಳಗೊಡಗಿದಂತೆ ಅದಕ್ಕೆ ಸಂವಾದಿಯಾಗಿ ಕೃತಿಗಳ ಕುರಿತಾಗಿ ವಿಮರ್ಶಾ ಸಾಹಿತ್ಯವೂ ಪಾಶ್ಚಾತ್ಯರಲ್ಲಿ ರಚನೆಯಾಗುತ್ತ ಬಂದಿತು. ಆದರೆ ಭಾರತದಲ್ಲಿ ಈ ಪ್ರಯತ್ನ ತೀರಾ ತಡವಾಗಿ ಆರಂಭಗೊಂಡಿತು. ನವ್ಯಕಲಾ ಪಂಥಗಳ ಪರಿಣಾಮವೇ ಇತ್ತೀಚೆಗೆ ಉಂಟಾಗಿದ್ದು, ಅದರ ಕುರಿತಾಗಿ ವಿಮರ್ಶಾ ಸಾಹಿತ್ಯವು ಇತ್ತೀಚಿನ ದಿನಗಳಲ್ಲಿ ಮಾತ್ರ ರಚನೆಯಾಗುತ್ತಲಿದೆ.

ಕರ್ನಾಟಕದ ಮಟ್ಟಿಗಂತೂ ಇಂತಹ ಪ್ರಯತ್ನಗಳು ಅರವತ್ತರ ದಶಕದಿಂದ ನಂತರದಲ್ಲಿ ತೊಡಗಿಕೊಂಡವು. ಅರವತ್ತರ ದಶಕದ ನಂತರದಲ್ಲಿ ಕೆಲವು ಕಲಾ ವಿದ್ಯಾರ್ಥಿಗಳು ಬರೋಡ, ಶಾಂತಿನಿಕೇತನ, ದೆಹಲಿ ಮುಂತಾದ ಹೊರ ರಾಜ್ಯಗಳಿಗೆ ತೆರಳಿ ಕಲಾಭ್ಯಾಸ ಮುಗಿಸಿಕೊಂಡು ಬಂದ ಮೇಲೆ ಕರ್ನಾಟಕದಲ್ಲಿ ನವ್ಯಕಲೆಯ ಪ್ರಭಾವ ಮತ್ತು ಪರಿಣಾಮಗಳು ತೀವ್ರಗೊಂಡವು. ಈ ಸಂದರ್ಭದಲ್ಲಿಯೇ ಕೆಲವರು ಕಲೆಯ ಬಗೆಗೆ ಬರವಣಿಗೆ ಮಾಡತೊಡಗಿದರಾದರೂ ಆಧುನಿಕ ಕಲೆಯ ವಿಚಾರಗಳ ಕುರಿತು ಬರೆದಿದ್ದು ಕಡಿಮೆ ಎನ್ನಬಹುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಕೃತಿ 'ನವ್ಯಕಲೆ ಮತ್ತು ಕಲೆಗಾರರು' ಹೆಚ್ಚು ಮಹತ್ವ ಪಡೆದುಕೊಳ್ಳುತ್ತದೆ. ಈ ಗ್ರಂಥದಲ್ಲಿ ನವ್ಯಕಲೆ, ಕಲಾಪಂಥಗಳು, ಪ್ರಭಾವ, ಪ್ರೇರಣೆಗಳು, ನವ್ಯಕಲೆಯ ವಿಕಾಸ ಮತ್ತು ಕಲಾವಿದರ ಬಗ್ಗೆ ಹೇಳಲಾಗಿದೆ.

ಪ್ರಾಚೀನ ಕಾಲದಿಂದಲೂ ಕಲೆಯಲ್ಲಿ ಆಗಾಗ ನವ್ಯತೆಯು ತಲೆದೋರುತ್ತ ಕಲೆಯನ್ನು ಸಂಪನ್ನ ಮಾಡಿದೆ. ಅದು ಆ ಕಾಲದ ಸಂಸ್ಕೃತಿಯ ವಿಕಾಸಕ್ಕೂ ಪರಿಸ್ಥಿತಿಗೂ ಸಂಬಂಧಿಸಿದ್ದಾಗಿರುತ್ತದೆ ಎಂದು ಹೇಳುವ ಲೇಖಕರು ನವ್ಯಕಲೆಯ ವಿವಿಧ ಪಂಥಗಳನ್ನು ಕುರಿತು ಬರೆದಿದ್ದಾರೆ. ಬಿಳಿಯಾಗಿರುವ ಬೆಳಕು ಗಾಜಿನ ಪಟ್ಟಕದ ಮೂಲಕ ಚಲಿಸಿದಾಗ ಏಳುವರ್ಣಗಳ ಬಿಂಬವಾಗಿ ಪ್ರತಿಫಲನ ಹೊಂದುವ ವೈಜ್ಞಾನಿಕ ವಿಚಾರಗಳು ಕಲಾವಿದರ ಮೇಲೂ ಪ್ರಭಾವ ಬೀರಿದವು. ಮಾತ್ರವಲ್ಲದೆ ಸೂರ್ಯಕಿರಣಗಳು ಒಂದು ವಸ್ತುವಿನ ಮೇಲೆ ವಿವಿಧ ಕಾಲಮಾನದಲ್ಲಿ ಪ್ರತಿಫಲನ ಹೊಂದಿದಾಗ ಅದರಿಂದ ಭಿನ್ನವಾದ ನೋಟಗಳು ಲಭ್ಯವಾಗುತ್ತವೆ ಎನ್ನುವುದನ್ನು ಕಲಾವಿದರು ಕಂಡುಕೊಂಡರು. ಇಂತಹ ಹಲವು ವಿಚಾರಗಳ ಮಂಥನದ ಫಲವಾಗಿ 'ಇಂಪ್ರೆಷನಿಜಮ್' ಅಥವಾ ಕ್ಷಣಬಿಂಬವಾದ ಎಂಬ ಕಲಾಶೈಲಿ ಹುಟ್ಟಿಕೊಂಡಿತು. ಇದನ್ನು ಕಲಾವಿದರು ಅನುಸರಿಸಿದರು ಎನ್ನುವ ಸಂಗತಿ ಈ ಪುಸ್ತಕದಲ್ಲಿದೆ.

೭೦. ಬಿ.ಪಿ.ಬಾಯಿರಿ : ನವ್ಯಕಲೆ ಮತ್ತು ಕಲೆಗಾರರು : ಪ್ರತಿಭಾ ಗ್ರಂಥಮಾಲೆ, ಧಾರವಾಡ–೧೯೮೨

ಒಂದು ದೃಶ್ಯ ಎಲ್ಲ ಕಾಲದಲ್ಲೂ ಎಲ್ಲರಿಗೂ ಒಂದೇ ತೆರನಾಗಿ ಗೋಚರಿಸದೆ ವೈವಿಧ್ಯ ಪರಿಣಾಮಗಳನ್ನು ಉಂಟು ಮಾಡುತ್ತದೆ ಎನ್ನುವ ಹಿನ್ನೆಲೆಯಲ್ಲಿ ಎಕ್ಸಪ್ರೆಸ್‌ನಿಜಮ್ ಕಲಾ ಪಂಥ ಹುಟ್ಟಿಕೊಂಡಿತು. ಹಾಗೆಯೇ ಸೃಷ್ಟಿಯ ವಸ್ತುಗಳೆಲ್ಲ ಘನಾಕೃತಿಯಲ್ಲಿವೆ ಎಂಬ ಸತ್ಯದ ಹಿನ್ನೆಲೆಯಲ್ಲಿ ಕ್ಯೂಬಿಜಂ ಕಲಾಶೈಲಿ, ಆತ್ಮದ ನಿರಾಕಾರದ ಕಲ್ಪನೆಯಲ್ಲಿ ಅಮೂರ್ತಕಲಾ ಪಂಥಗಳು ಮೈದಾಳಿದವು. ಸುಪ್ತ ಮನಸ್ಸಿನ ಭಾವನೆಗಳಿಗೆ ವ್ಯಕ್ತರೂಪ ನೀಡುವುದಕ್ಕಾಗಿ ಸರ್‍ರಿಯಲಿಜಂ ಶೈಲಿ, ಕಲಾವಲಯದ ದಬ್ಬಾಳಿಕೆಯ ಪ್ರವೃತ್ತಿಯನ್ನು ಬಿಂಬಿಸುವಲ್ಲಿ ದಾದಾಯಿಜಂ ಕಲಾಶೈಲಿಗಳು ಹುಟ್ಟಿಕೊಂಡವು. ಹೀಗೆ ಅನೇಕ ನವ್ಯಕಲಾ ಶೈಲಿಗಳು ಮತ್ತು ಆಯಾ ಕಲಾಶೈಲಿಗಳನ್ನು ಅನುಸರಿಸಿದ ಪ್ರಮುಖ ಕಲಾವಿದರ ಬಗೆಗೆ ಈ ಗ್ರಂಥದಲ್ಲಿ ಸ್ಥೂಲ ಮಾಹಿತಿ ಕೊಡಲಾಗಿದೆ.

ನವ್ಯಕಲಾವಿದರಲ್ಲಿ ಪ್ರಮುಖರಾದ ಪಿಕಾಸೋ, ಪಾಲ್‌ಗಾಗಿನ್, ಹೆನ್ರಿಮಾತಿಸ್, ವಿನ್ಸೆಂಟ್ ವ್ಯಾನ್‌ಗಾಗ್, ಪಾಲ್‌ಕ್ಲೀ ಮುಂತಾದವರ ಸಂಕ್ಷಿಪ್ತ ಜೀವನ ಚರಿತ್ರೆ, ಕಲಾಶೈಲಿ, ಕಲಾಕೃತಿರಚನೆ ಇಂತಹ ವಿಷಯಗಳ ಕುರಿತಾಗಿ ಮಾಹಿತಿ ಇದೆ. ಜೊತೆಗೆ ಅಲ್ಲಲ್ಲಿ ಸಾಂದರ್ಭಿಕವಾಗಿ ಸಂಬಂಧಿಸಿದ ಚಿತ್ರಕಲಾಕೃತಿಗಳ ಛಾಯಾಚಿತ್ರಗಳನ್ನು ಅಳವಡಿಸಲಾಗಿದೆ. ಕರ್ನಾಟಕದ ಚಿತ್ರಕಲೆ ಸಾಹಿತ್ಯದಲ್ಲಿ ಬರವಣಿಗೆಗಳೇ ಇಲ್ಲದ ಸಂದರ್ಭದಲ್ಲಿ ನವ್ಯಕಲೆಯ ವಿಷಯವಾಗಿ ರಚನೆಗೊಂಡ ಈ ಕೃತಿಯು ಮಹತ್ವ ಪೂರ್ಣವಾದುದೆಂದು ಹೇಳಬಹುದು.

**ಇಂಪ್ರೆಷನಿಜಂ :**

ಪ್ರಸ್ತುತ ಕೃತಿಯನ್ನು ಅ.ಲ.ನರಸಿಂಹನ್ ರಚನೆ ಮಾಡಿದ್ದಾರೆ.[೭೧]ಇದರಲ್ಲಿ ಈ ಕಲೆಯ ಕುರಿತಾದ ಹಲವಾರು ಅಂಶಗಳು ಹೇಳಲ್ಪಟ್ಟಿವೆ. ಇಂಪ್ರೆಷನಿಜಂ ಪಂಥಕ್ಕೆ ಕ್ಷಣಬಿಂಬವಾದ ಎಂತಲೂ ಕರೆಯುತ್ತಾರೆ. ಹತ್ತೊಂಭತ್ತನೆಯ ಶತಮಾನದ ಪ್ರಾರಂಭದಲ್ಲಿ ಎಲ್ಲ ಕ್ಷೇತ್ರಗಳಲ್ಲಿ ವೈಜ್ಞಾನಿಕ ಬೆಳವಣಿಗೆಯ ಪ್ರಭಾವಗಳು ಗೋಚರಿಸತೊಡಗಿದವು. ಸೂರ್ಯನ ಬೆಳಕು ಒಂದೇ ವಸ್ತುವಿನ ಮೇಲೆ ವಿವಿಧ ಸಂದರ್ಭಗಳಲ್ಲಿ ಬೇರೆ ಬೇರೆ ಕೋನಗಳಿಂದ ಬೀಳುವ ಮೂಲಕ ಹೊಸ ಆಯಾಮಗಳನ್ನು ಸೃಷ್ಟಿಸುತ್ತದೆ ಎನ್ನುವಂತಹ ಸಂಗತಿಗಳನ್ನು ವಿಜ್ಞಾನಿಗಳು ಕಂಡುಕೊಂಡರು. ಇಂತಹ ಸಂಗತಿಗಳಿಂದ ಪ್ರಭಾವಿತಗೊಂಡ ಕಲಾವಿದರೂ ಸಹಿತ ಈ ರೀತಿಯ ಅಂಶಗಳನ್ನು ಕಲಾಕೃತಿಯಲ್ಲಿ ಅಳವಡಿಸಿಕೊಳ್ಳಲು ಪ್ರಾರಂಭಿಸಿದರು.

ಇಂಪ್ರೆಷನಿಜಂ ಕಲಾಶೈಲಿಯಲ್ಲಿ ಮುಖ್ಯವಾಗಿ ಸೂರ್ಯನ ಬೆಳಕಿನ ವಿನ್ಯಾಸವನ್ನೇ ಪ್ರಧಾನವಾಗಿಟ್ಟುಕೊಂಡು ಚಿತ್ರ ರಚಿಸಲಾಗುತ್ತದೆ. ಸೂರ್ಯನ ಕಿರಣಗಳು ಕ್ಷಣಕ್ಷಣಕ್ಕೂ ಆ ವಸ್ತುವಿನ ಸ್ವರೂಪದ ಮೇಲೆ ಬೇರೆ ಬೇರೆ ಆಯಾಮಗಳನ್ನು ಉಂಟು ಮಾಡುತ್ತಲಿರುತ್ತವೆ. ಇಂತಹ ವಿಷಯಗಳನ್ನು ಗಮನಿಸಿ ಈ ಶೈಲಿಯ ಕಲಾವಿದರು ಚಿತ್ರರಚನೆ ಆರಂಭಿಸಿದರು. ಅದುವರೆಗೂ ಸ್ಟುಡಿಯೋ ಒಳಗೆ ಚಿತ್ರಿಸುತ್ತಿದ್ದ ಕಲಾವಿದರು ಈಗ ಪ್ರಕೃತಿಯ ಮಡಿಲಲ್ಲಿ ಚಿತ್ರಿಸಿದರು. ಇಂಪ್ರೆಷನಿಜಂ ಅರ್ಥ, ಉಗಮ ಮತ್ತು ಸ್ವರೂಪ, ಈ ಕಲಾವಿದರ ಕೃತಿಗಳು, ಆರಂಭದ ಕಾಲ, ೧೮೭೦ರಲ್ಲಿ ಇಂಪ್ರೆಷನಿಜಂ, ಪ್ರೌಢಾವಸ್ಥೆಯ ಇಂಪ್ರೆಷನಿಜಂ, ಪೋಷ್ಟ ಇಂಪ್ರೆಷನಿಜಂ, ಇಂಪ್ರೆಷನಿಜಂ ಶಿಲ್ಪಗಳು, ಭಾರತದಲ್ಲಿ ಇಂಪ್ರೆಷನಿಜಂ ಬೆಳವಣಿಗೆ ಹೀಗೆ ಈ ಕಲಾ ಪಂಥದ ಹಲವಾರು ಸಂಗತಿಗಳು ಸ್ಥೂಲವಾಗಿ ವ್ಯಕ್ತಗೊಂಡಿವೆ.

---

೭೧. ಅ.ಲ.ನರಸಿಂಹನ್ : ಇಂಪ್ರೆಷನಿಜಂ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೪

**ಪೋಟೋರಿಯಲಿಜಂ :**

ಕಲಾಶೈಲಿಗಳು ಕಾಲದಿಂದ ಕಾಲಕ್ಕೆ ವಿವಿಧ ರೀತಿಯಲ್ಲಿ ಬದಲಾಗುತ್ತ ಬಂದಿವೆ. ಆಧುನಿಕ ಕಲಾಶೈಲಿಗಳು ಆಧುನಿಕೋತ್ತರ ಕಲಾಶೈಲಿಗಳಿಗೆ ಪ್ರೇರಣಾ ಶಕ್ತಿಯಾಗಿವೆ. ಪಾಪ್ ಕಲೆಯ ಮುಂದುವರಿದ ರೂಪವಾಗಿ ಪೋಟೋರಿಯಲಿಜಂ ಕಲಾಶೈಲಿಯನ್ನು ಗುರುತಿಸಲಾಗುತ್ತದೆ. ಈ ಪುಸ್ತಕವನ್ನು ಕೆ.ವಿ.ಸುಬ್ರಹ್ಮಣ್ಯ ರಚನೆ ಮಾಡಿದ್ದಾರೆ.[೭೨] ಇದರಲ್ಲಿ ಈ ಕಲಾಶೈಲಿಯ ಹಲವು ಅಂಶಗಳು ಹೇಳಲ್ಪಟ್ಟಿವೆ. ಪಾಪ್ ಕಲೆಯಲ್ಲಿ ಜನಪ್ರಿಯವಾಗಿರುವ ವಸ್ತುಗಳನ್ನು ಬಳಸಿಕೊಂಡು ಕೃತಿರಚನೆ ಮಾಡಲಾಗುತ್ತದೆ. ಅಂದರೆ ಜನಪ್ರಿಯವಾಗಿರುವ ಸಿನಿಮಾ ಮಾಧ್ಯಮ, ಟಿ.ವಿ.ಜಾಹಿರಾತುಗಳು, ಸಿನಿಮಾ ತಾರೆಯರು, ವಸ್ತುಗಳು, ಪ್ರಸಿದ್ಧ ಕಲಾವಿದರ ಚಿತ್ರಗಳು ಹೀಗೆ ಅನೇಕ ಸಂಗತಿಗಳನ್ನು ಬಳಸಿಕೊಂಡು ಕೃತಿರಚನೆ ಮಾಡುತ್ತಾರೆ. ಈ ಮೇಲಿನ ವಿಷಯಗಳು ಹೇಗಿವೆಯೋ ಹಾಗೆ ಮಾಡಿಕೊಂಡು ಬಣ್ಣದ ವಿನ್ಯಾಸ, ಸಂಯೋಜನಾ ವಿಧಾನಗಳನ್ನು ಬದಲು ಮಾಡುವ ರೀತಿ ಇಲ್ಲಿ ಕಂಡು ಬರುತ್ತದೆ. ಪಾಶ್ಚಾತ್ಯ ಚಿತ್ರರಂಗದ ಜನಪ್ರಿಯತಾರೆ ಮರ್ಲಿನ್ ಮನ್ರೋ, ಡಾ.ವಿನ್ಸಿಯ ಮೊನಾಲಿಸಾದಂತಹ ವಿಷಯಗಳು ವ್ಯಂಗ್ಯವಾಗಿ ಇಲ್ಲಿ ಅಭಿವ್ಯಕ್ತಿಸಲ್ಪಡುತ್ತವೆ. ಸಾಮಾನ್ಯವಾದ ಟೂಥ್‌ಪೇಸ್ಟಿನಿಂದ ಪಾಯಿಖಾನೆಯ ಕಮೋಡುಗಳು ಇಲ್ಲಿ ಕಲಾಕೃತಿಯ ರೂಪು ಪಡೆದುಕೊಳ್ಳುತ್ತವೆ. ಕಲಾಕೃತಿಯನ್ನು ಕಾಗದ, ಕ್ಯಾನ್‌ವಾಸ್‌ಗಳಂತಹ ಮಾಧ್ಯಮಗಳ ಮೇಲೆ ರಚನೆ ಮಾಡಬೇಕೆಂಬುದಿಲ್ಲ. ಸ್ಥಳಾವಕಾಶದ ಹಿನ್ನೆಲೆ ಬಳಸಿಕೊಂಡು ತಕ್ಷಣದಲ್ಲೇ ಅಭಿವ್ಯಕ್ತಿಯ ರೂಪು ಪಡೆಯುತ್ತದೆ. ಇಂತಹ ಹಲವಾರು ಸಂಗತಿಗಳು ಈ ಕೃತಿಯಲ್ಲಿ ಬಿಂಬಿತಗೊಂಡಿವೆ.

**ಸರ್‌ರಿಯಲಿಜಂ :**

ಈ ಪುಸ್ತಕವು ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಕಾಣಿಸಿಕೊಂಡ ಹೊಸ ಕಲಾಪಂಥಗಳಲ್ಲಿ ಒಂದಾದ ಸರ್‌ರಿಯಲಿಜಂ ಶೈಲಿಯನ್ನು ಕುರಿತಾಗಿದೆ. ಇದನ್ನು ಎನ್.ಮರಿಶಾಮಾಚಾರ್ ರಚಿಸಿದ್ದಾರೆ.[೭೩] ಸರ್‌ರಿಯಲಿಜಂ ಎಂಬುದನ್ನು ನಿಜಾತೀತಪಂಥದ ಕಲಾಶೈಲಿಎಂದೂ ಹೇಳಲಾಗುತ್ತದೆ. ಸುಪ್ತ ಮನಸ್ಸಿನ ಭಾವನೆಗಳ ವ್ಯಕ್ತರೂಪವೇ ಇಲ್ಲಿ ಆಕಾರ ಪಡೆದುಕೊಳ್ಳುತ್ತದೆ. ಮನಶಾಸ್ತ್ರದ ಹಿನ್ನೆಲೆಯಲ್ಲಿ ಸುಪ್ತ ಮನಸ್ಸು ಮತ್ತು ಕನಸು, ಭ್ರಮಾಲೋಕಗಳ ಸಾಂಕೇತಿಕ ಅಭಿವ್ಯಕ್ತಿಗಳನ್ನು ಕಲಾಕೃತಿಯ ಮೂಲಕ ಬಿಂಬಿಸುವ ಪ್ರಯತ್ನ ಈ ಶೈಲಿಯಲ್ಲಿ ಕಂಡು ಬರುತ್ತದೆ. ಸಿಲ್ವೆಡರ್ ಡಾಲಿ, ಚೆರಿಕೋ ಮುಂತಾದ ಕಲಾವಿದರು ಈ ಶೈಲಿಗೆ ಒಂದು ನಿರ್ಧಿಷ್ಟ ರೂಪಕೊಟ್ಟು ಕೃತಿ ರಚಿಸತೊಡಗಿದರು. ಈ ಶೈಲಿಯ ಚಿತ್ರಗಳಲ್ಲಿ ನಿಜಬದುಕಿಗೆ ಅತೀತವಾಗಿರುವ ಅಂಶಗಳು ಕಂಡುಬರುತ್ತವೆ. ಆನೆಯಂತಹ ಬೃಹತ್ ಪ್ರಾಣಿಗೆ ಸೂಜಿಯ ಮೊನೆಯಂತಹ ಚಿಕ್ಕಕಾಲುಗಳು, ಗಡಿಯಾರ. ರೇಡಿಯೋದಂತಹ ಘನವಸ್ತುಗಳನ್ನು, ಬಟ್ಟೆಯನ್ನು ನೇತುಹಾಕಿದ ಹಾಗೆ ಕೊಂಬೆ ಮತ್ತು ಗೋಡೆಗಳಿಗೆ ನೇತುಬಿಡುವುದು, ವ್ಯಕ್ತಿಯ ಮುಖವು ಯಾಂತ್ರಿಕೃತ ಅವಯವಗಳಿಂದ ಕೂಡಿರುವುದು ಹೀಗೆ ಭ್ರಮಾಲೋಕವನ್ನು ಸೃಷ್ಟಿಸುವ ಸಂಗತಿಗಳು ಇದರಲ್ಲಿವೆ. ಇಲ್ಲಿನ ಚಿತ್ರಶೈಲಿ, ರೇಖಾವಿನ್ಯಾಸ, ಸಂಯೋಜನಾ ದೃಷ್ಟಿ, ಬಣ್ಣಗಾರಿಕೆಯಂತಹ ಸಂಗತಿಗಳು ಸರ್‌ರಿಯಲಿಜಂ, ಅರ್ಥ ಸ್ವರೂಪ, ಹುಟ್ಟು, ಬೆಳವಣಿಗೆ, ಕಲಾವಿದರು, ಕಲಾಕೃತಿಗಳು, ರಚನಾ ಹಿನ್ನೆಲೆ, ವಸ್ತುವಿಷಯಗಳು, ಉದ್ದೇಶ, ಕಲಾವಿದನ ಮನೋಸ್ಥಿತಿ, ಮುಂತಾದ ಅಂಶಗಳು ಸ್ಥೂಲವಾಗಿ ವಿವೇಚಿಸಲ್ಪಟ್ಟಿವೆ.

---

೭೨. ಕೆ.ವಿ.ಸುಬ್ರಹ್ಮಣ್ಯ : ಪೋಟೋರಿಯಲಿಜಂ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು -೧೯೯೫

೭೩. ಎನ್.ಮರಿಶಾಮಾಚಾರ್ : ಸರ್‌ರಿಯಲಿಜಂ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು -೧೯೯೫

**ಅಬ್‌ಸ್ಟ್ರಾಕ್ಟ್ ಕಲೆ :**

ಆಧುನಿಕ ಕಲಾ ಪರಂಪರೆಯಲ್ಲಿ ಅಮೂರ್ತಕಲೆಗೆ ವಿಶಿಷ್ಟಸ್ಥಾನವಿದೆ. ನಿರ್ಧಿಷ್ಟ ರೂಪವಿರದ ಆಕಾರಗಳು ನೋಡುಗರ ಕಲ್ಪನೆಗೆ ವಿಭಿನ್ನ ಆಯಾಮಗಳನ್ನು ಉಂಟುಮಾಡುತ್ತವೆ. ಇಂತಹ ಒಂದು ಕಲಾ ಪ್ರಕಾರವಾದ ಅಬ್‌ಸ್ಟ್ರಾಕ್ಟ್ ಕಲೆ ಬಗ್ಗೆ ಆರ್.ಎ.ಶಾಂತರಾಜ್ ಕೃತಿ ರಚನೆಮಾಡಿದ್ದಾರೆ.[೭೪] ಈ ಕಲಾಶೈಲಿಯಲ್ಲಿ ನಿರ್ಧಿಷ್ಟ ಮೂರ್ತರೂಪಗಳು ತಕ್ಷಣದ ಭಾವತೀವ್ರತೆಯಿಂದ ಈ ಶೈಲಿಯ ಮೂಲ ತತ್ವವನ್ನು ಆಧ್ಯಾತ್ಮದ ಹಿನ್ನೆಲೆಯಲ್ಲಿ ಸಮೀಕರಿಸಲಾಗುತ್ತದೆ. ಆತ್ಮವು ಅನಂತ, ಅವಿನಾಶಿಯಾಗಿದ್ದು, ಅದು ಯಾವುದೇ ನಿರ್ಧಿಷ್ಟ ಆಕಾರವನ್ನು ಮೂಲದಲ್ಲಿ ಪಡೆದುಕೊಂಡಿರುವುದಿಲ್ಲ. ಆದರೆ ಚೈತನ್ಯ ಸ್ವರೂಪನಾದ ಆತ್ಮವು ತಾನು ಧರಿಸುವ ದೇಹದ ಆಕಾರವನ್ನು ನಿರ್ಧಿಷ್ಟ ಅವಧಿಗೆ ಪಡೆದುಕೊಳ್ಳುತ್ತದೆ. ನಂತರ ದೇಹವುನಶಿಸಿದ ಮೇಲೆ ಮತ್ತೆ ಆತ್ಮವು ಮೂಲ ಸ್ವರೂಪದಲ್ಲಿ ಪುನಹ ದೇಹ ಪಡೆದುಕೊಳ್ಳುವವರೆಗೆ ಅಮೂರ್ತ ರೂಪದಲ್ಲೇ ಇರುತ್ತದೆ. ಅದೇ ರೀತಿ ಸೃಷ್ಟಿಯ ಚೈತನ್ಯಶಕ್ತಿಯು ಅಮೂರ್ತ ರೂಪದಲ್ಲಿದ್ದು ಅದನ್ನು ಪ್ರತಿನಿಧಿಸುವ ನಮ್ಮ ಕೃತಿಗಳು ಅಮೂರ್ತವಾಗರಿಬೇಕಲ್ಲದೆ ನಿರ್ಧಿಷ್ಟ ಆಕಾರಗಳನ್ನು ನೀಡಿ ಪ್ರತಿಬಂಧಿಸಬಾರದು ಎನ್ನುವುದು ಈ ಶೈಲಿಯ ಪ್ರತಿಪಾದಕರ ವಾದವಾಗಿದೆ. ಈ ಪುಸ್ತಕದಲ್ಲಿ ಅಮೂರ್ತಕಲೆಯ ಅರ್ಥ, ಅದರ ಚರಿತ್ರೆ, ಮೂರ್ತ ಅಮೂರ್ತಗಳ ನೆಲೆ, ಅದರ ವಿವಿಧ ಆಯಾಮಗಳು, ಶತಮಾನದ ಅಮೂರ್ತಕಲೆ, ಲಕ್ಷಣಗಳು, ರಚನಾ ಶೈಲಿ, ಅಮೂರ್ತಶೈಲಿಯ ಪ್ರಮುಖ ಕಲಾವಿದರು, ಇದರಲ್ಲಿ ಜಗತ್ತಿನ, ಭಾರತದ ಮತ್ತು ರಾಜ್ಯದ ಪ್ರಮುಖ ಅಮೂರ್ತ ಕಲಾವಿದರನ್ನು ಹೆಸರಿಸಲಾಗಿದೆ. ಹೀಗೆ ಹಲವು ವಿಷಯಗಳು ಇಲ್ಲಿ ಬಿಂಬಿತಗೊಂಡಿವೆ.

**ಪೋಸ್ಟ ಮಾಡರ್ನಿಜಂ :**

ಕಲಾವಲಯದಲ್ಲಿ ಕಾಲಮಾನವನ್ನು ಆಧರಿಸಿ ಪ್ರಾಚೀನ ಕಲೆ, ಇತಿಹಾಸ ಕಾಲದ ಕಲೆ, ಮಧ್ಯಯುಗೀನ ಕಲೆ, ನವ್ಯ ಅಥವಾ ಆಧುನಿಕ ಕಲೆ ಎಂಬುದಾಗಿ ಗುರುತಿಸಲಾಗುತ್ತದೆ. ಇಲ್ಲಿ 'ಪೋಸ್ಟ ಮಾಡರ್ನಿಜಂ' ಕೃತಿಯನ್ನು ನೇಮಿರಾಜ ಶೆಟ್ಟಿ ಬರೆದಿದ್ದು,[೭೫] ಇದು ಆಧುನಿಕೋತ್ತರ ಕಲೆಯನ್ನು ಕುರಿತಾಗಿದೆ. ಕಲೆ ಮತ್ತು ಕಲಾವಿದರಲ್ಲಿ ಸೃಜನಶೀಲ ಪ್ರಕ್ರಿಯೆಯನ್ನು ಹುಟ್ಟು ಹಾಕಿದ ಆಧುನಿಕ ಕಲಾ ಪರಂಪರೆ ವಿವಿಧ ಕಲಾ ಶೈಲಿಗಳಲ್ಲಿ ರೂಪುಗೊಂಡಿತು. ಒಂದೊಂದು ಕಲಾ ಪ್ರಕಾರವು ಒಂದೊಂದು ಹೆಸರಿನಿಂದ ಗುರುತಿಸಿಕೊಂಡವು. ಆಧುನಿಕ ಕಲಾ ಪ್ರಕಾರಗಳಲ್ಲಿ ಇಂಪ್ರೆಷನಿಜಂ, ಕ್ಯೂಬಿಜಂ, ಸರ್ರಿಯಲಿಜಂ, ಎಕ್ಸಪ್ರೆಷನಿಜಂ ಪಂಥಗಳಲ್ಲದೆ ಅಮೂರ್ತ ವಿಧಾನವು ಹೊಸತನಗಳನ್ನು ತಂದುಕೊಟ್ಟವು. ಆಧುನಿಕ ಕಲಾವಿದರು ವಿಭಿನ್ನ ನೆಲೆಯಲ್ಲಿ ವಿಚಾರಮಾಡಿ ಸಾಂಪ್ರದಾಯಿಕ ವಿಧಾನಗಳನ್ನು ಬದಿಗೊತ್ತಿ ಕೃತಿ ರಚನೆ ಮಾಡತೊಡಗಿದರು. ಚಿತ್ರಕಲಾ ಪ್ರಕಾರವನ್ನು ಬಣ್ಣ ರೇಖೆಗೆ ಮಾತ್ರ ಸೀಮಿತಗೊಳಿಸದೆ ವಿಸ್ತಾರವಾದ ಹರವನ್ನು ನೀಡಿದರು. ಆಧುನಿಕೋತ್ತರ ಕಲಾಪ್ರಕಾರದಲ್ಲಿ ಇನ್ನೂ ಹೆಚ್ಚಿನ ಸೃಜನಶೀಲ ಮನೋಭೂಮಿಕೆಯಿಂದ ಚಿತ್ರರಚನೆ ಮಾಡತೊಡಗಿದ ಕಲಾವಿದರು ಕೃತಿರಚನೆಗಾಗಿ ಹಲವಾರು ವಸ್ತುಗಳನ್ನು ಆರಿಸಿಕೊಂಡರು. ಪಾಪುಲರ್ ಹಿನ್ನೆಲೆಯ ಪಾಪ್‌ಕಲೆ ಇದೇ ಹಂತದಲ್ಲಿ ಬೆಳೆದುಬಂದಿತು. ಅಡಿಗೆಮನೆಯ ವಸ್ತುಗಳಿಂದ ಹಿಡಿದು ಪಾಯಿಖಾನೆಯಲ್ಲಿನ ಕಮೋಡುಗಳು, ತೊಟ್ಟಿಗಳು ಕೃತಿರೂಪ ಪಡೆಯತೊಡಗಿದವು.

೭೪. ಆರ್.ಎ.ಶಾಂತರಾಜ್: ಅಬ್‌ಸ್ಟ್ರಾಕ್ಟ್ ಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ,ಬೆಂಗಳೂರು -೧೯೯೫
೭೫. ನೇಮಿರಾಜ ಶೆಟ್ಟಿ : ಪೋಷ್ಟ ಮಾಡರ್ನಿಜಂ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೬

ಇಂತಹ ಅಂಶಗಳು ಈ ಕೃತಿಯಲ್ಲಿ ಹೇಳಲ್ಪಟ್ಟಿವೆ. ಇದರ ಜೊತೆಗೆ ಪ್ರಾಚೀನ ಮಾನವನ ಕಲಾಸೃಷ್ಟಿ, ನಾಗರೀಕತೆಯ ಕಾಲದ ಕಲಾ ಬೆಳವಣಿಗೆ, ಪುನರುಜ್ಜೀವನ ಯುಗ, ಆಧುನಿಕ ಕಲೆ ಇವುಗಳನ್ನು ಸಂಕ್ಷಿಪ್ತವಾಗಿ ವಿವೇಚಿಸಿ ನಂತರ ಆಧುನಿಕೋತ್ತರ ಕಾಲದ ಕಲಾವಿಚಾರಗಳ ಬಗ್ಗೆ ಹೇಳಲಾಗಿದೆ. ಜೊತೆಗೆ ಪಾಶ್ಚಾತ್ಯ, ಭಾರತೀಯ ಮತ್ತು ಕರ್ನಾಟಕದ ಆಧುನಿಕೋತ್ತರ ಕಲೆ ಮತ್ತು ಕಲಾವಿದರನ್ನು ಕುರಿತು ಹೇಳುತ್ತ ಅವರ ಕಲಾಕೃತಿಗಳನ್ನು ವಿಶ್ಲೇಷಿಸಲಾಗಿದೆ.

**ಪಾಪ್ ಕಲೆ :**

ಆಧುನಿಕೋತ್ತರ ಕಲೆಯಲ್ಲಿ ಪಾಪ್‌ಕಲೆಯು ಬಹುಮುಖ್ಯ ಪಾತ್ರವಹಿಸಿದೆ. ಇತ್ತೀಚಿನ ಪ್ರತಿಷ್ಠಾಪನಾ ಕಲೆಯ ಮೂಲಗಳನ್ನು ಆಧುನಿಕರು ಇದರಲ್ಲಿ ಗುರುತಿಸುತ್ತಾರೆ. ಪಾಪ್‌ಕಲೆಯು ಪಾಪುಲರ್ ಎಂಬ ಶಬ್ದದಿಂದ ನಿಷ್ಪತ್ತಿಗೊಂಡಿದೆ. ಪಾಪುಲರ್ ಆಗಿರುವ ಅಂದರೆ ಜನಪ್ರಿಯವಾಗಿರುವ ವಸ್ತುಗಳನ್ನು ಬಳಸಿಕೊಂಡು ಕೃತಿರಚನೆ ಮಾಡುವುದು ಇಲ್ಲಿ ಕಂಡುಬರುತ್ತದೆ. ನ್ಯೂಯಾರ್ಕನಲ್ಲಿ ರೂಪುಗೊಂಡ ಈ ಕಲಾಶೈಲಿಯು ನಂತರ ಬ್ರಿಟನ್‌ಗೆ ಹಬ್ಬಿತು. ಅಲ್ಲಿಂದ ವಿಶ್ವದ ಇತರ ರಾಷ್ಟ್ರಗಳಿಗೂ ಪಸರಿಸುವ ಮೂಲಕ ತನ್ನ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡಿತು. ಮಾರ್ಷಲ್ ಡುಚಾಂಪ್ ಈ ಕಲಾಶೈಲಿಯಲ್ಲಿ ಹೆಚ್ಚಿನ ಕೃತಿಗಳನ್ನು ರಚಿಸಿದನಲ್ಲದೆ ಇದಕ್ಕೊಂದು ನಿರ್ಧಿಷ್ಟರೂಪು ನೀಡಲು ಪ್ರಯತ್ನಿಸಿದನು. ಇಂತಹ ಎಲ್ಲ ವಿಷಯಗಳನ್ನು ಹೊಂದಿದ ಈ ಚಿಕ್ಕ ಕೃತಿಯನ್ನು ರವಿಕುಮಾರ ಕಾಶಿಯವರು ರಚಿಸಿದ್ದಾರೆ.[೭೬] ಇದರಲ್ಲಿ ಮುಖ್ಯವಾಗಿ ಪಾಪ್‌ಕಲೆಯ ಅರ್ಥ, ವ್ಯಾಪ್ತಿ, ಪಾಪ್ ಪ್ರತೀಕ್ಷೆ, ನ್ಯೂಯಾರ್ಕನಲ್ಲಿ ಪಾಪ್, ಬ್ರಿಟನ್ ಮತ್ತು ಇತರ ದೇಶಗಳಲ್ಲಿ ಪಾಪ್‌ಕಲೆ, ೫೦ರ ದಶಕದಲ್ಲಿ ಪಾಪ್‌ಕಲೆಯ ಹೆಜ್ಜೆಗಳು, ಭಾರತದಲ್ಲಿ ಪಾಪ್‌ಕಲೆಯ ಸ್ವರೂಪ, ಈ ಶೈಲಿಯ ಕಲಾವಿದರು ಮತ್ತು ಕಲಾಕೃತಿಗಳ ಬಗ್ಗೆ ಸ್ಥೂಲ ಮಾಹಿತಿ ಇದೆ.

ರವಿಕುಮಾರ ಕಾಶಿಯವರೆ ಒಂದು ವರ್ಷದ ನಂತರ ಇದೇ ಪಾಪ್‌ಕಲೆಯ ಕುರಿತು ಮತ್ತೊಂದು ಪುಸ್ತಕ ರಚನೆ ಮಾಡಿದ್ದು,[೭೭] ಅದು ಕೂಡಾ ರಾಜ್ಯ ಲಲಿತಕಲಾ ಅಕಾಡೆಮಿಯಿಂದ ಪ್ರಕಟಗೊಂಡಿದೆ. ಮೊದಲು ರಚಿಸಿದ ಪಾಪ್‌ಕಲೆಯ ಪುಸ್ತಕ ಚಿಕ್ಕದಾಗಿದ್ದು, ನಂತರ ರಚಿಸಿದ ಪಾಪ್‌ಕಲೆ ಪುಸ್ತಕವು ಆಕಾರದಲ್ಲಿ ದೊಡ್ಡದಾಗಿದೆ. ಈ ಎರಡೂ ಪುಸ್ತಕಗಳಲ್ಲಿನ ವಿಷಯ, ಶೀರ್ಷಿಕೆ ಒಂದೇ ಆಗಿದ್ದು ಯಾವ ಬದಲಾವಣೆಗಳೂ ಇಲ್ಲ. ಕೇವಲ ಪುಸ್ತಕದ ಆಕಾರವನ್ನು ದೊಡ್ಡದಾಗಿ ಮಾಡಿ ಅಕ್ಷರಗಳನ್ನು ದೊಡ್ಡದಾಗಿ ಮುದ್ರಿಸಿದ್ದಾರೆ. ಜಾಗತಿಕ ಆಧುನಿಕ ಚಿತ್ರಕಲಾ ಸಾಹಿತ್ಯದಲ್ಲಿ ಹದಿನೆಂಟನೆಯ ಶತಮಾನದಲ್ಲಿ ಪ್ರಖ್ಯಾತಿಯನ್ನು ಪಡೆದಂತಹ ಕಲಾಪಂಥಗಳ ಕುರಿತು ವಿವೇಚಿಸಲಾಗಿದೆ. ಇದರಲ್ಲಿ ಆಧುನಿಕ ಮತ್ತು ಆಧುನಿಕೋತ್ತರ ಕಾಲದ ಕಲಾಪರಿಸ್ಥಿತಿಯನ್ನು ಬಿಂಬಿಸುವ ಪ್ರಯತ್ನವು ಕಂಡುಬರುತ್ತದೆ. ಪಾಪ್‌ಕಲೆ ಮತ್ತು ಅಮೂರ್ತಕಲೆಗಳು ಆಧುನಿಕೋತ್ತರ ಕಲೆಗೆ ಉತ್ತಮ ನಿದರ್ಶನಗಳಾಗಿ ಕಂಡುಬಂದಿದ್ದನ್ನು ಇಲ್ಲಿ ತಿಳಿಸಲಾಗಿದೆ.

**೪. ಕಲಾಪ್ರಕಾರ, ಸೌಂದರ್ಯ, ವಿಮರ್ಶೆ ಮತ್ತು ಸಾಹಿತ್ಯ ಪ್ರಧಾನ ಚಿತ್ರಕಲಾ ಸಾಹಿತ್ಯ :**

ಈ ವಿಭಾಗದಲ್ಲಿ ಜಾಗತಿಕ, ಭಾರತ ಮತ್ತು ಕರ್ನಾಟಕವನ್ನೊಳಗೊಂಡಂತೆ ವಿವಿಧ ಕಲಾಪ್ರಕಾರಗಳನ್ನು ಕುರಿತ ಸಾಹಿತ್ಯ ಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಅದರಂತೆ

---

೭೬. ರವಿಕುಮಾರ ಕಾಶಿ : ಪಾಪ್‌ಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು– ೧೯೯೬

೭೭. ರವಿಕುಮಾರ ಕಾಶಿ : ಪಾಪ್‌ಕಲೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು– ೧೯೯೭

ಸೌಂದರ್ಯಶಾಸ್ತ್ರ, ಕಲಾವಿಮರ್ಶೆ ಮತ್ತು ಸಾಹಿತ್ಯದಲ್ಲಿ ಬರುವ ಚಿತ್ರಕಲಾ ಉಲ್ಲೇಖಗಳನ್ನು ಒಳಗೊಂಡಿರುವ ಗ್ರಂಥಗಳ ಬಗ್ಗೆ ಇಲ್ಲಿ ಪರಿಶೀಲಿಸಲಾಗಿದೆ. ಅವು ಈ ಕೆಳಗಿನಂತಿವೆ.

**ಕಲೆಯ ದರ್ಶನ :**

ಕನ್ನಡದಲ್ಲಿ ಕಲೆಯ ಕುರಿತು ಬರೆಯಬಲ್ಲ ವಿದ್ವಾಂಸರ ಕೊರತೆ ಇದ್ದಾಗ ಶಿವರಾಮ ಕಾರಂತರು ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಜಾಗತಿಕ ಚಿತ್ರಕಲೆ, ಭಾರತೀಯ ಚಿತ್ರಕಲೆ, ಕರ್ನಾಟಕದ ಚಿತ್ರಕಲೆಗಳ ಬಗೆಗೆ ಹಲವಾರು ವಿಮರ್ಶಾಲೇಖನಗಳನ್ನು ಇವರು ಬರೆದಿದ್ದು ಅಂತಹ ಅವರ ಕೆಲವು ಲೇಖನಗಳು ಈ ಕೃತಿಯಲ್ಲಿವೆ.[೭೮] ಕಲೆಯ ಉಗಮ, ಪ್ರೇಕ್ಷಕ, ವಿಮರ್ಶಕ, ಸ್ವಭಾವದಿಂದ ಬೇರೆಯಾದ ಗುಣ, ನಮ್ಮ ಆವರಣ, ತನ್ನತನ, ಪರತನ, ಸೃಷ್ಟಿಶಕ್ತಿ, ಸೃಷ್ಟಿಯ ರೀತಿ, ಅನ್ಯ ಸಮಸ್ಯೆಯ ವರ್ಚಸ್ಸು, ಅನುಭವಗಳು, ಪ್ರಕ್ರಿಯೆಗಳು, ನಾದರಾಜ್ಯದಲ್ಲಿ ಪ್ರತಿಕ್ರಿಯೆ, ಅನುಭವಗಳಲ್ಲಿ ಹಳೆತನ ಮತ್ತು ಹೊಸತನ, ಪರಿವರ್ತನೆಯ ಹಿಂದಿರುವ ಸತ್ಯ, ಪ್ರೇರಕ ಶಕ್ತಿಗಳ ವಿಸ್ತಾರ, ಕಲಾಶೈಲಿಯ ಔಚಿತ್ಯ, ಹೃದಯದ ವಿಸ್ತಾರ, ವಿಮರ್ಶಕನ ಹೊಣೆ, ಕಲಾಸೃಷ್ಟಿಯ ಕ್ಷಣ, ಸೌಂದರ್ಯಾನುಭವ, ಹೀಗೆ ಹಲವಾರು ಸಂಗತಿಗಳು ಈ ಕೃತಿಯಲ್ಲಿ ಚರ್ಚಿಸಲ್ಪಟ್ಟಿವೆ.

ಕಲೆಯು ಕಲಾವಿದನಿಂದ ಅಭಿವ್ಯಕ್ತಿ ಪಡೆಯುವ ರೀತಿ, ಕೃತಿ ರಚನೆಯ ನಂತರ ಕಲಾಕಾರ ಮತ್ತು ಕೃತಿಯ ಸಂಬಂಧಗಳು, ನಂತರದ ಸಾಮಾಜಿಕ ಸ್ವತ್ತಾಗುವ ಕಲಾಕೃತಿ, ಸಹೃದಯ ಮತ್ತು ವಿಮರ್ಶಕರ ಅನುಭವಗಳ ಹಿನ್ನೆಲೆಯಲ್ಲಿ ಅದು ವಹಿಸುವ ಪಾತ್ರ, ಸೌಂದರ್ಯಾನುಭವ, ಮುಂತಾದ ಸಂಗತಿಗಳ ಬಗ್ಗೆ ಬೆಳಕುಬೀರುವ ಲೇಖನಗಳಿವೆ. ಕಲಾಸಾಹಿತ್ಯ ಮತ್ತು ವಿಮರ್ಶೆಯ ದೃಷ್ಟಿಯಿಂದ ಈ ಕೃತಿಯು ಪ್ರಮುಖವಾಗಿದೆ.

**ಸೌಂದರ್ಯ ಸಮೀಕ್ಷೆ :**

ಸೌಂದರ್ಯ ಕುರಿತ ಹತ್ತು ಹಲವು ವಿಷಯಗಳು ಚರ್ಚಿಸಲ್ಪಟ್ಟ ಈ ಕೃತಿ ಜಿ.ಎಸ್.ಶಿವರುದ್ರಪ್ಪನವರು ಮೈಸೂರು ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾ ಪ್ರಬಂಧವಾಗಿದೆ.[೭೯] ಸೌಂದರ್ಯವನ್ನು ಕುರಿತ ವಿಚಾರ ಅತ್ಯಂತ ಸಮ್ಮೋಹಕವಾದುದುಎಂದು ಅನ್ನಿಸಿದರೂ, ಅದನ್ನು ಬುದ್ಧಿ ಪೂರ್ವಕವಾಗಿ ಪರಿಶೀಲಿಸಿ, ವಿಶ್ಲೇಷಿಸಿ, ವಿವೇಚಿಸುವುದು ಈ ಕೃತಿಯ ಮುಖ್ಯ ಉದ್ದೇಶವಾಗಿದೆ.

ಭಾರತೀಯ ಸೌಂದರ್ಯ ಪ್ರಜ್ಞೆಯ ಜೊತೆಗೆ ಪೂರ್ವ ಮತ್ತು ಪಶ್ಚಿಮ ಸೌಂದರ್ಯ ಪ್ರಜ್ಞೆಗಳ ಗುಣಲಕ್ಷಣಗಳು, ಪ್ರಾಚೀನ, ನವೀನ ಆಲೋಚನಾ ಪರಂಪರೆಗಳು ಇಲ್ಲಿ ಹೇಳಲ್ಪಟ್ಟಿವೆ. ಇದಲ್ಲದೆ ಕಾವ್ಯಾನುಭವದ ವಿವಿಧ ಅಭಿವ್ಯಕ್ತಿಯ ಮುಖಗಳು ಪರಿಶೀಲನೆ, ಕಾವ್ಯ ವಿಮರ್ಶೆಗೆ ಹೊರಡತಕ್ಕವರು ಈ ಸೌಂದರ್ಯಾನುಭವದ ಅಭಿವ್ಯಕ್ತಿಯ ವೈಖರಿ, ವೈವಿಧ್ಯಗಳ ಪರಿಚಯ ಹೇಗೆ ಮಾಡಿಕೊಳ್ಳಬೇಕು ಎನ್ನುವ ಅಂಶಗಳು ಇದರಲ್ಲಿವೆ. ಭಾರತೀಯ ಸೌಂದರ್ಯ ದರ್ಶನ, ಪ್ರಾಚೀನ ಕನ್ನಡ ಕವಿಗಳ ಸೌಂದರ್ಯದೃಷ್ಟಿ, ನವೋದಯ ಕವಿಗಳ ಸೌಂದರ್ಯಾನುಭವ, ಮುಂತಾದ ವಿಷಯಗಳು ಇಲ್ಲಿ ಚರ್ಚಿತಗೊಂಡಿವೆ.ಈ ಕೃತಿಯನ್ನು ಸಾಹಿತ್ಯ ಓದುಗರು ಪರಾಮರ್ಶಿಸುವಂತೆ ಕಲಾ ಓದುಗರೂ ಗಮನಿಸುತ್ತಾ ಬಂದಿದ್ದಾರೆ. ಹಾಗಾಗಿ ಕಲಾ ಸಾಹಿತ್ಯದಲ್ಲಿ ಇದೊಂದು ಗಮನಾರ್ಹ ಕೃತಿ ಎನ್ನಬಹುದು.

---

೭೮. ಶಿವರಾಮ ಕಾರಂತ : ಕಲೆಯ ದರ್ಶನ : ರಾಜಲಕ್ಷ್ಮೀ ಪ್ರಕಾಶನ, ಬಳೇಪೇಟೆ ಚೌಕ, ಬೆಂಗಳೂರು-೧೯೫೦

೭೯. ಜಿ.ಎಸ್.ಶಿವರುದ್ರಪ್ಪ : ಸೌಂದರ್ಯ ಸಮೀಕ್ಷೆ : ಶಾರದಾ ಪ್ರಕಾಶನ, ಗಾಂಧಿನಗರ, ಬೆಂಗಳೂರು -೧೯೬೫

**ಸೌಂದರ್ಯ ಮೀಮಾಂಸೆ :**

ಸೌಂದರ್ಯ ಮೀಮಾಂಸೆ ಎಂಬ ಈ ಕಿರು ಪುಸ್ತಕವನ್ನು ಜಿ.ಎಸ್.ಶಿವರುದ್ರಪ್ಪ ಬರೆದಿದ್ದಾರೆ.[೮೦] ಈ ಕೃತಿಯಲ್ಲಿ ಕಲೆ ಮತ್ತು ಸೌಂದರ್ಯ ಸಿದ್ಧಾಂತದ ಬಗೆಗಿನ ವಿವರಗಳು ಚರ್ಚಿತಗೊಂಡಿವೆ. ಸೌಂದರ್ಯ ಮೀಮಾಂಸೆ ಎಂದರೇನು? ಸೌಂದರ್ಯಾನುಭವದ ಲಕ್ಷಣಗಳು, ಸೌಂದರ್ಯದ ನೆಲೆ, ಸೌಂದರ್ಯವು ಮಾನಸಿಕ ಆನಂದ, ಕಲಾ ಸಿದ್ಧಾಂತಗಳು, ಕಲೆ ವಸ್ತುವಿನ ಪ್ರತಿರೂಪ, ಕಲೆ ವರ್ಣರೇಖಾ ಸಂಯೋಜನೆ, ಕಲೆ ಅಭಿವ್ಯಕ್ತಿ, ಕಲೆಯಲ್ಲಿ ಹಾಸ್ಯ, ದುರಂತ ಮತ್ತು ಕುರೂಪ, ಕಲೆ ಮತ್ತು ನೀತಿ, ಸತ್ಯ, ಮತೀಯ ಧರ್ಮಗಳಿಗಿರುವ ಸಂಬಂಧ, ಕಲೆ ಮತ್ತು ನೈತಿಕ ಜೀವನ, ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ರಸ ಎಂಬಂತಹ ವಿಷಯಗಳ ಬಗ್ಗೆ ಸ್ಥೂಲವಾದ ಮಾಹಿತಿ ಈ ಕೃತಿಯಲ್ಲಿದೆ. ಈ ಪುಸ್ತಕವು ಚಿಕ್ಕದಾಗಿದ್ದರೂ ಇದರಲ್ಲಿನ ಕೆಲವು ವಿಷಯಗಳು ಕಲಾತತ್ವ ಶಾಸ್ತ್ರದ ದೃಷ್ಟಿಯಿಂದ ಉಪಯುಕ್ತವಾಗಿವೆ. ಕಲಾ ಸಿದ್ಧಾಂತಗಳು ಎಂಬ ಲೇಖನದಲ್ಲಿ ಭಾರತೀಯ ಕಲಾ ಸಿದ್ಧಾಂತಗಳ ಬಗೆಗೆ ವಿವೇಚಿಸಲಾಗಿದ್ದರೆ, ಕಲೆ ವರ್ಣರೇಖಾ ಸಂಯೋಜನೆ ಈ ಲೇಖನದಲ್ಲಿ ಕಲೆಯ ತಾಂತ್ರಿಕ ಅಂಶಗಳು ಹೇಳಲ್ಪಟ್ಟಿವೆ. ಇನ್ನುಳಿದವು ಕಲೆ ಮತ್ತು ಸೌಂದರ್ಯದ ಅಂಶಗಳ ಕಡೆಗೆ ಬೆಳಕು ಚೆಲ್ಲುತ್ತವೆ.

**ಕಲಾನುಭವ :**

ಕಲೆ ಮತ್ತು ಕಲಾನುಭವಗಳನ್ನು ವಿಭಿನ್ನ ದೃಷ್ಟಿಕೋನದಲ್ಲಿ ನೋಡುವ ಪ್ರಯತ್ನ ಕುರಿತಂತೆ ರಚನೆಯಾಗಿರುವ ಈ ಕೃತಿಯನ್ನು ವಿ.ಸೀತಾರಾಮಯ್ಯನವರು ಬರೆದಿದ್ದಾರೆ.[೮೧]ಕಲಾಕೃತಿಯೊಂದು ರಚನಾ ಪೂರ್ವದಲ್ಲಿ ಕಲಾವಿದನ ಮನಸ್ಸಿನಲ್ಲಿ ರೂಪುಗೊಳ್ಳುತ್ತದೆ. ಅದು ಅಭಿವ್ಯಕ್ತಿಯಲ್ಲಿ ಮೂಡಿದ ರೂಪಗಳಿಗೆ ಚಿತ್ರಕಲಾವಿದ ರೇಖೆ ಬಣ್ಣ ಮತ್ತು ಆಕಾರಗಳ ಮೂಲಕ ಮಾಧ್ಯಮಗಳ ಸಹಾಯದಿಂದ ಬಾಹ್ಯವಾಗಿ ಸಂಯೋಜನೆಗೊಳಿಸುತ್ತಾನೆ. ಈ ಹಂತದಲ್ಲಿ ಕಲಾಕೃತಿ ಮತ್ತು ಕಲಾವಿದನ ಸಂಬಂಧಗಳು ಕೃತಿರಚನೆಯಾಗುತ್ತ ಹೋದಂತೆ ಬಿಡುಗಡೆಗೊಳ್ಳತೊಡಗುತ್ತವೆ. ಕಲಾವಿದನ ಆಂತರಿಕ ಸಂಬಂಧಗಳಿಂದ ಬಿಡುಗಡೆಗೊಂಡ ಕಲಾಕೃತಿಯ ಸಂಬಂಧಗಳು ಸಹೃದಯನೊಂದಿಗೆ ಬೆಸೆದುಕೊಳ್ಳುತ್ತವೆ. ಹೀಗೆ ಕಲಾಕೃತಿ ರಚನೆಯ ಪೂರ್ವದಲ್ಲಿನ ಕಲಾವಿದನ ಅನುಭವ, ಕೃತಿರಚನೆಯ ಸಂದರ್ಭದಲ್ಲಿ ಕಲಾವಿದನ ಮನೋಸ್ಥಿತಿ ಹಾಗೂ ಕೃತಿರಚನೆಯ ನಂತರ ಅದು ಸಹೃದಯರೊಂದಿಗೆ ಬೆರೆತು ಸಮಾಜ ಮುಖಿಯಾಗುವ ಪರಿಗಳು ಹೀಗೆ ಕಲೆ ಮತ್ತು ಕಲಾನುಭವದ ಕುರಿತಂತೆ ಸ್ಥೂಲ ಮಾಹಿತಿ ಇಲ್ಲಿದೆ.

**ಕಲೆಯ ನೆಲೆ :**

ಈ ಪುಸ್ತಕದಲ್ಲಿ ವಿ.ಕೃ.ಗೋಕಾಕ್ ಬರೆದ ಕಲೆಗೆ ಸಂಬಂಧಿಸಿದ ಮೂರು ಲೇಖನಗಳಿವೆ.[೮೨] ಕಲಾರೂಪ ಹಾಗೂ ಸಾಹಿತ್ಯ ಸ್ವರೂಪ, ಕಲಾವಿಧಾನಗಳು, ಕಲೆ ಹಾಗೂ ಅನುಕೃತಿ ಎಂಬ ಲೇಖನಗಳಿವೆ. ಅದರಲ್ಲಿ ಕಲಾದೈವತ, ಕಲಾಮೂಲ, ಕಲಾವಿಧಾನ, ಕಲಾವಿದನ ಪ್ರಜ್ಞೆ, ಕಲಾಕೃತಿಯ ಅಂಗಗಳು, ಸಹೃದಯನ ಪ್ರಜ್ಞೆ, ಸಮಾಜ, ಸ್ಫೂರ್ತಿ, ಪ್ರತಿಭೆ, ಅನುಕೃತಿ, ಅಭಿವ್ಯಕ್ತಿ, ನಿರೂಪಣೆ, ರಸ, ರಸಜ್ಞತೆ, ಸಂಚಾರೀಭಾವ, ರೂಪ, ಔಚಿತ್ಯ ಮುಂತಾದ ವಿಷಯಗಳ ಬಗ್ಗೆ ವಿವೇಚಿಸಲಾಗಿದೆ. ಪ್ರಮುಖವಾಗಿ ಸಾಹಿತ್ಯ ಸಂಬಂಧಿಯಾಗಿ ರಚನೆಯಾಗಿರುವ ಈ ಕೃತಿಯು ಚಿತ್ರಕಲಾ ತತ್ವಶಾಸ್ತ್ರದ ದೃಷ್ಟಿಯಿಂದಲೂ ಮುಖ್ಯವಾಗಿದೆ.

---

೮೦. ಜಿ.ಎಸ್.ಶಿವರುದ್ರಪ್ಪ : ಸೌಂದರ್ಯ ಮೀಮಾಂಸೆ : ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು -೧೯೭೩

೮೧. ವಿ.ಸೀತಾರಾಮಯ್ಯ : ಕಲಾನುಭವ : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು -೧೯೭೬

೮೨. ವಿ.ಕೃ.ಗೋಕಾಕ್ : ಕಲೆಯ ನೆಲೆ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ-೧೯೭೮

**ಕಳೆ–ಕಲೆ :**

ಈ ಕೃತಿಯನ್ನು ಡಾ.ಜ.ಚ.ನಿ. ಬರೆದಿದ್ದು,[೮೩] ಕಲೆ ಮತ್ತು ಆಧ್ಯಾತ್ಮದ ಹಿನ್ನೆಲೆಯಲ್ಲಿ ವಿವೇಚಿಸಿರುವ ಪ್ರಯತ್ನ ಇಲ್ಲಿದೆ. ಕಲೆ ಮತ್ತು ಆಧ್ಯಾತ್ಮದ ವಿಷಯಗಳ ಸಮನ್ವಯದ ಹತ್ತು ಲೇಖನಗಳು ಈ ಪುಸ್ತಕದಲ್ಲಿವೆ. ಕಳೆ–ಕಲೆ, ಚಿತ್ಕಳೆ–ಸತ್ಕಲೆ, ಘಟಸ್ಥದಲ್ಲಿ ಷಟ್‌ಕಲೆ, ನಾದ–ಬಿಂದು–ಕಲೆ, ಮಾಟ–ನೋಟ, ಕಲಾದೃಶ್ಯ, ಕಲೆಯ ನೆಲೆ ಚಿತ್ಕಳೆ ಹೀಗೆ ಆಧ್ಯಾತ್ಮದ ಮತ್ತು ಕಲೆಯನ್ನು ಸಮೀಕರಿಸಿ ವಿಶ್ಲೇಷಿಸಲಾಗಿದೆ.

ಪ್ರಾಚೀನರು ಕಲೆಯನ್ನು ಆಧ್ಯಾತ್ಮದ ಹಿನ್ನೆಲೆಯಲ್ಲಿಯೇ ಪರಿಗಣಿಸುತ್ತಿದ್ದರು. ಕಲಾಕೃತಿ ರಚನೆಯನ್ನು ಪವಿತ್ರ ಭಾವದಿಂದ ಪರಿಗಣಿಸುತ್ತಿದ್ದ ಪ್ರಾಚೀನರು ಪೂಜಾ ವಿಧಿಗಳಿಗೆ ಅನುಸರಿಸುತ್ತಿದ್ದ ಪಾವಿತ್ರ್ಯ ಮಯವಾದ ಅನುಸರಣೆಯನ್ನು ಇಲ್ಲಿಯೂ ಮಾಡುತ್ತಿದ್ದುದು ತಿಳಿದು ಬರುತ್ತದೆ. ಭಕ್ತಿ, ಪೂಜೆಗಳು ಹೇಗೆ ದೈವಸಾಕ್ಷಾತ್ಕಾರಕ್ಕೆ, ಮುಕ್ತಿಮಾರ್ಗಕ್ಕೆ ಸಾಧನಗಳೋ ಹಾಗೆ ಕಲಾಕೃತಿ ರಚನೆಯೂ ಮತ್ತೊಂದು ರೀತಿಯಲ್ಲಿ ಮುಕ್ತಿ ಪ್ರಧಾನವಾಗಿದೆ. ಆಧ್ಯಾತ್ಮ ಆಚರಣೆಯ ಹಿನ್ನೆಲೆಯಲ್ಲಿ ಲಭ್ಯವಾಗುವ ಅತ್ಯಂತಿಕ ಆನಂದಕ್ಕೆ ಕಲಾಕೃತಿ ಉಂಟುಮಾಡುವ ರಸಾನುಭವವನ್ನು ಸಮೀಕರಿಸಲಾಗಿದೆ. ನಾನು ಎಂಬ ಅಹಂಕಾರವನ್ನು ತೊರೆದಾಗ ಮಾತ್ರ ಕೃತಿ ರಚನೆಯಿಂದ ದೊರಕುವ ಫಲಪ್ರಾಪ್ತಿಗಳು ಲಭ್ಯವಾಗುತ್ತವೆ ಎನ್ನುವ ಹಿನ್ನೆಲೆಯಿಂದ ಪ್ರಾಚೀನ ಕಲಾವಿದರು ತಮ್ಮ ಕಲಾಕೃತಿಗಳಲ್ಲಿ ರಚನಾಕಾರರ ಹೆಸರನ್ನು ನಮೂದಿಸದೇ ಇರುವುದು ತಿಳಿದು ಬರುತ್ತದೆ. ಹೀಗೆ ಆಧ್ಯಾತ್ಮ ಹಿನ್ನೆಲೆಯಲ್ಲಿ ಕಲೆಯನ್ನು ವಿವೇಚಿಸಿರುವುದು ಈ ಪುಸ್ತಕದಲ್ಲಿ ಕಂಡು ಬರುತ್ತದೆ.

**ಟಾಲ್‌ಸ್ಟಾಯ್ ಕಲಾ ಮೀಮಾಂಸೆ :**

ಪಾಶ್ಚಾತ್ಯ ವಿದ್ವಾಂಸ ಲಿಯೋಟಾಲ್‌ಸ್ಟಾಯ್ ಅವರು ವಿವಿಧ ಕ್ಷೇತ್ರಗಳಲ್ಲಿ ಪಾಂಡಿತ್ಯ ಹೊಂದಿದವರು, ಕಲೆ ಮತ್ತು ಕಲಾಮೀಮಾಂಸೆಯ ದಾರಿ ವಿಶಿಷ್ಟವಾದುದು. ಪ್ರಸ್ತುತ ಕೃತಿಯನ್ನು ಸಿ.ಪಿ.ಕೃಷ್ಣಕುಮಾರ ಬರೆದಿದ್ದು,[೮೪] ಇದರಲ್ಲಿ ಟಾಲ್‌ಸ್ಟಾಯ್ ಅವರು ಕಲಾಮೀಮಾಂಸೆಯ ದೃಷ್ಟಿಕೋನಗಳನ್ನು ಸ್ಥೂಲವಾಗಿ ಹೇಳಲಾಗಿದೆ. ಚಿಕ್ಕದಾದ ಈ ಕೃತಿಯಲ್ಲಿ ಟಾಲ್‌ಸ್ಟಾಯ್ ಅವರ ಕಲಾಜಿಜ್ಞಾಸೆಯ ಸ್ವರೂಪ, ವೈಶಿಷ್ಟ್ಯ, ಮಹತ್ವಗಳನ್ನು ಸಾಂದರ್ಭಿಕ, ಉದ್ಧೃತಿಗಳೊಡನೆ ಪ್ರಸ್ತಾಪಿಸಲಾಗಿದೆ. ಕಲೆಯ ಬಗೆಗಿನ ವಿವರ, ಕಲಾ ಸಂದರ್ಭ, ಸಾಮಾಜಿಕ ಸ್ಥಿತ್ಯಂತರಗಳಲ್ಲಿ ಕಲೆಯ ಪರಿಕಲ್ಪನೆಯಂತಹ ವಿಷಯಗಳು ಇಲ್ಲಿ ಚರ್ಚಿಸಲ್ಪಟ್ಟಿವೆ. ಭಾರತೀಯ ಕಲಾಮೀಮಾಂಸೆಗಿಂತ ಭಿನ್ನವಾದ ಒಳನೋಟಗಳು ಇದರಲ್ಲಿವೆ. ಭಾರತೀಯ ಕಲಾಮೀಮಾಂಸೆಗೂ, ಪಾಶ್ಚಾತ್ಯ ಮೀಮಾಂಸೆಗೂ ಇರುವ ವ್ಯತ್ಯಾಸ, ಸಂಬಂಧ, ವೈರುಧ್ಯಗಳಂತಹ ವಿಷಯಗಳನ್ನು ಈ ಕೃತಿಯಿಂದ ತಿಳಿದುಕೊಳ್ಳಬಹುದಾಗಿದೆ.

ಇನ್ನಿತರ ಸಾಹಿತ್ಯಕ ವಿಷಯಗಳು, ವಿಮರ್ಶೆಗಳು ಗಟ್ಟಿನೆಲೆಯನ್ನು ಕಂಡುಕೊಂಡ ಹಂತದಲ್ಲಿ ಕಲಾ ವಿಮರ್ಶೆ, ಚರ್ಚೆಗಳಿಗೆ ಅಡಿಪಾಯವನ್ನು ಹಾಕಿಕೊಳ್ಳುವ ಪ್ರಯತ್ನ ಕರ್ನಾಟಕದಲ್ಲಿ ಕಂಡು ಬರುವುದು. ೧೯ನೇ ಶತಮಾನದ ರಶಿಯಾದಲ್ಲಿ ಟಾಲ್‌ಸ್ಟಾಯ್‌ಗಿಂತ ಮೊದಲೇ ಬೆಲಿನಿಸ್ಕಿ ಮತ್ತು ಅವನ ಶಿಷ್ಯರು ಶೋಷಿಯೋ ರಿಯಾಲಿಸ್ಟಿಕ್(Socio-realistic) ಎಂಬ ಸಿದ್ಧಾಂತವನ್ನು ಕಲಾಕ್ಷೇತ್ರದಲ್ಲಿ ತಂದಿದ್ದರು. ಇದರ ಮುಂದುವರಿಕೆಯಾಗಿ ಇಲ್ಲಿನ ವಿಚಾರಗಳು ವ್ಯಕ್ತಗೊಂಡಿವೆ.ಟಾಲ್‌ಸ್ಟಾಯ್ ಅವರು ಕಲೆಯ ಕುರಿತು ಅನೇಕ ಪುಸ್ತಕ, ಲೇಖನಗಳನ್ನು ಬರೆದಿದ್ದು, ಅವುಗಳಲ್ಲಿ What is Art?

೮೩. ಕಳೆ–ಕಲೆ : ಡಾ.ಜ.ಚ.ನಿ : ಜಗದ್ಗುರು ಶ್ರೀಶೈಲ ನಿಡುಮಾಮಿಡಿ ಪುಸ್ತಕ ಭಂಡಾರ, ಬೆಂಗಳೂರು –೧೯೮೦

೮೪. ಸಿ.ಪಿ.ಕೃಷ್ಣಕುಮಾರ : ಟಾಲ್‌ಸ್ಟಾಯ್ ಕಲಾ ಮೀಮಾಂಸೆ : ತಳಿಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು–೧೯೮೭

ಎಂಬ ಪುಸ್ತಕ ಮತ್ತು On Art ಎಂಬ ಪ್ರಬಂಧಗಳು ಮುಖ್ಯವಾಗಿವೆ. ಪ್ರಸ್ತುತ ಕೃತಿಯಲ್ಲಿನ ವಿಚಾರಗಳನ್ನು ಈ ಎರಡರಿಂದ ಆಯ್ದುಕೊಳ್ಳಲಾಗಿದೆ. ಕನ್ನಡ ಕಲಾ ಸಾಹಿತ್ಯದಲ್ಲಿ ಚಿಕ್ಕದಾದರೂ ಇದೊಂದು ಪರಿಣಾಮಕಾರಿಯಾದ ಪುಸ್ತಕವಾಗಿದೆ.

**ಸಾಹಿತ್ಯ ಮತ್ತು ಚಿತ್ರಕಲೆ :**

ಸಾಹಿತ್ಯ ಮತ್ತು ಚಿತ್ರಕಲೆ ಎರಡೂ ವಿಷಯಗಳ ಕುರಿತಂತೆ ಈ ಕೃತಿ ರಚನೆಯಾಗಿದೆ. ಎಂ.ವಿ.ಸೀತಾರಾಮಯ್ಯ ಬರೆದ ಪ್ರಸ್ತುತ ಕೃತಿಯಲ್ಲಿ[೮೫] ಸಾಹಿತ್ಯ ಮತ್ತು ಚಿತ್ರಕಲೆಯ ಗುಣಲಕ್ಷಣಗಳ ಬಗೆಗೆ ಲೇಖನಗಳಿವೆ. ಈ ಕೃತಿಯಲ್ಲಿ ಸಾಹಿತ್ಯ ಚಿತ್ರಕಲೆಯ ಸ್ವರೂಪ, ಅರ್ಥವ್ಯಾಪ್ತಿಯನ್ನು ಹೇಳಿದೆ. ಲೋಕ ಘಟನೆಗಳಿಂದ ಪ್ರೇರಿತನಾಗಿ ಕಲಾವಿದನಲ್ಲಿ ಅವು ಅಭಿವ್ಯಕ್ತಿಗೊಳ್ಳುವ ಬಗೆ, ಕಲಾಕೃತಿ ರಚನೆಯ ಹಿಂದಿನ ವಿಶಿಷ್ಟ ಭಾವನಾತ್ಮಕ ದೃಷ್ಟಿಕೋನ, ಸಾಹಿತ್ಯ ಮತ್ತು ಚಿತ್ರಕಲೆಗಳು ಒಂದೇ ತೆರನಾದ ಭಾವನೆ ಎನ್ನುವ ಅಂಶಗಳ ಬಗ್ಗೆ ಚರ್ಚಿಸಲಾಗಿದೆ. ಇಂತಹ ವಿಷಯಗಳಲ್ಲದೆ ಸತ್ಯಾಂಶ, ಸೌಂದರ್ಯಾತಿಶಯ, ದಿವ್ಯಭಾವದ ಪ್ರತ್ಯೇಕ ರೂಪಗಳೆಂಬಂತಹ ವಿಷಯಗಳು ಹೇಳಲ್ಪಟ್ಟಿವೆ. ಇದರ ಜೊತೆಗೆ ಶ್ರೇಷ್ಠವಾದ ಸಾಹಿತ್ಯದ ಲಕ್ಷಣಗಳು, ಸಾಹಿತ್ಯದಲ್ಲಿ ಗ್ರೀಕರ ವಿಚಾರಗಳು, ಚಿತ್ರಕಾರನ ಚಿತ್ರಗಳಲ್ಲಿ ಸಾಕ್ಷಾತ್ಕಾರವೇನಿದೆ, ಚಿತ್ರಕಾರ ಯಾವ ವಸ್ತುವನ್ನು ಚಿತ್ರಿಸುತ್ತಾನೆ, ಅನುಕರಣೆಯು ಚಿತ್ರಕಲೆಯೇ?, ಸೃಜನಾತ್ಮಕ ಅಂಶಗಳಾವುವು ಎಂಬಂತಹ ವಿಷಯಗಳು ಇಲ್ಲಿ ಚರ್ಚಿತಗೊಂಡಿವೆ.

**ಶ್ರೀ ಅರವಿಂದರ ತತ್ವಯೋಗ ಮತ್ತು ಕಲೆ :**

ಶ್ರೀ ಅರವಿಂದರ ಆಧ್ಯಾತ್ಮ ವಿಚಾರಗಳು, ಬೋಧನೆಗಳು ಜನ ಸಾಮಾನ್ಯರಿಂದ ಹಿಡಿದು ಉನ್ನತ ಸ್ಥರದವರಿಗೂ ಮೆಚ್ಚುಗೆಯಾದವುಗಳಾಗಿವೆ. ಕೆಲವರು ಅವರ ಅನುಯಾಯಿಗಳಾದರೆ ಮತ್ತೆ ಕೆಲವರು ಅವರಿಂದ ಪ್ರಭಾವಿತರಾಗಿದ್ದಾರೆ. ಮತ್ತು ಕೆಲವರು ಅರವಿಂದರ ಪ್ರಭಾವಕ್ಕೊಳಗಾಗಿ ಅವರ ತತ್ವಯೋಗ, ಧಾರ್ಮಿಕಪ್ರಜ್ಞೆ, ಉಪದೇಶಗಳು ಮತ್ತು ಬದುಕುವ ಕಲೆಗಳ ಬಗ್ಗೆ ಪುಸ್ತಕ ಮತ್ತು ಲೇಖನಗಳನ್ನು ಬರೆದಿದ್ದಾರೆ. ಈ ಹಿನ್ನೆಲೆಯಲ್ಲಿಯೇ ಬಂದ 'ಶ್ರೀ ಅರವಿಂದರ ತತ್ವಯೋಗ ಮತ್ತು ಕಲೆ' ಕೃತಿಯನ್ನು ಡಾ.ಜಿ.ಎಸ್.ಕುಂದರಗಿ ಬರೆದಿದ್ದಾರೆ.[೮೬] ಇದು ಮುಖ್ಯವಾಗಿ ಅರವಿಂದರ ತತ್ವಯೋಗ ಮತ್ತು ಧಾರ್ಮಿಕ ಪ್ರಜ್ಞೆಗಳಿಗೆ ಸಂಬಂಧಿಸಿದ್ದರೂ ಸ್ವಲ್ಪ ಪ್ರಮಾಣದಲ್ಲಿ ಕಲೆಯ ಬಗ್ಗೆ ವಿವರ ಇದೆ. ಈ ಪುಸ್ತಕದಲ್ಲಿ ಅರವಿಂದರ ವ್ಯಕ್ತಿತ್ವ, ಅವರ ತತ್ವಯೋಗ, ಇವುಗಳ ರೂಪುರೇಷೆಗಳು, ತತ್ವಜ್ಞಾನ, ಕಲೆಯ ರಾಷ್ಟ್ರೀಯ ಮೌಲ್ಯ, ಅರವಿಂದರ ಸಂಕ್ಷಿಪ್ತ ಜೀವನ ಚರಿತ್ರೆ, ಅವರ ಸಮನ್ವಯ ದೃಷ್ಟಿ, ಸಮನ್ವಯ ಸಿದ್ಧಾಂತ, ಅಭೀಪ್ಸೆ ಮತ್ತು ಉತ್ಸಾಹ, ಶಾಸ್ತ್ರ, ಗುರು, ಕಾಲ ಇವುಗಳ ಕಲ್ಪನೆಗಳ ಬಗ್ಗೆ ಸ್ಥೂಲವಾಗಿ ಚರ್ಚಿಸಲಾಗಿದೆ.

ಪ್ರಸ್ತುತ ಕೃತಿಯಲ್ಲಿ ಚಿತ್ರಕಲೆಯ ಬಗ್ಗೆ ಸ್ವಲ್ಪ ಪ್ರಮಾಣದಲ್ಲಿ ಮಾತ್ರ ಹೇಳಿದ್ದರೂ ಕಲಾತತ್ವ ಶಾಸ್ತ್ರದ ಹಿನ್ನೆಲೆಯಿಂದ ಈ ಕೃತಿಯಲ್ಲಿ ಉಪಯುಕ್ತ ಮಾಹಿತಿಗಳು ಲಭ್ಯವಾಗುತ್ತವೆ. ಆ ಕಾರಣದಿಂದ ಈ ಕೃತಿಯನ್ನು ಚಿತ್ರಕಲಾ ಸಾಹಿತ್ಯ ಕ್ಷೇತ್ರಕ್ಕೆ ಸೇರಿಸಬಹುದಾಗಿದೆ.

---

೮೫. ಎಂ.ವಿ.ಸೀತಾರಾಮಯ್ಯ : ಸಾಹಿತ್ಯ ಮತ್ತು ಚಿತ್ರಕಲೆ : ರಾಘವ ಪ್ರಕಾಶನ ಗವಿಪುರಂ ಬೆಂಗಳೂರು-೧೯೮೫

೮೬. ಡಾ.ಜಿ.ಎಸ್.ಕುಂದರಗಿ : ಶ್ರೀ ಅರವಿಂದರ ತತ್ವಯೋಗ ಮತ್ತು ಕಲೆ : ಉಷಾ ಸಾಹಿತ್ಯಮಾಲೆ ಮೈಸೂರು-೧೯೮೬

**ಕಲೆ ಮತ್ತು ನಾನು :**

ಪ್ರತ್ಯಕ್ಷ, ಸ್ವತಹ ನೋಡಿ, ಪ್ರಾಯೋಗಿಕ ಹಿನ್ನೆಲೆಯಿಂದ ಕಲಿಯಬೇಕಾದ ಚಿತ್ರಕಲೆಯನ್ನು ಅಂಚೆಯ ಮೂಲಕ ಅಪ್ರತ್ಯಕ್ಷವಾಗಿಯೂ ಕಲಿಯಬಹುದೆಂಬ ಪರಿಕಲ್ಪನೆಯನ್ನು ಕರ್ನಾಟಕದಲ್ಲಿ ಮೊದಲ ಬಾರಿಗೆ ಮಾಡಿಸಿದವರು ಎಂ.ಟಿ.ವಿ.ಆಚಾರ್ಯರು. ಇದಕ್ಕಾಗಿಯೇ ಅವರು ಆಚಾರ್ಯ ಚಿತ್ರಕಲಾ ಭವನವನ್ನು ಸ್ಥಾಪಿಸಿದರು. ಹಲವಾರು ಪತ್ರಿಕೆಗಳಲ್ಲಿ ಆಚಾರ್ಯರು ಪ್ರಧಾನ ಕಲಾವಿದರಾಗಿದ್ದರು. ಮುಖ್ಯವಾಗಿ ಚಂದಮಾಮ ಗುಂಪಿನ ಪತ್ರಿಕೆಗಳಲ್ಲಿ ಅವರು ಸಲ್ಲಿಸಿದ ಸೇವೆ ಸ್ಮರಣೀಯ. ಅಲ್ಲಿಂದ 'ಗೋಕುಲ' ಗುಂಪಿನ ಪತ್ರಿಕೆಗಳಿಗೆ ಅವರನ್ನು ಕರೆತರಲಾಯಿತಾದರೂ ಆ ಪತ್ರಿಕೆಗಳು ಹೆಚ್ಚು ದಿನಗಳು ನಡೆಯಲಿಲ್ಲ. ಮುಂದಿನ ದಿನಗಳಲ್ಲಿ ಕನ್ನಡ ಪ್ರಭ ದಿನ ಪತ್ರಿಕೆಗೆ ಕಲೆಯ ಬಗೆಗಿನ ಲೇಖನಗಳನ್ನು ಬರೆಯತೊಡಗಿದರು. ಈ ದಿನಪತ್ರಿಕೆಯ ಪ್ರತಿ ಭಾನುವಾರದ ಸಂಚಿಕೆಗಳಲ್ಲಿ ೧೯೮೦ ರಿಂದ ೮೧ರವರೆಗೆ ಒಂದು ವರ್ಷಕಾಲ ನಿರಂತರವಾಗಿ 'ಕಲೆ ಮತ್ತು ನಾನು' ಎಂಬ ಲೇಖನ ಮಾಲೆಯನ್ನು ಧಾರಾವಾಹಿಯ ಹಾಗೆ ಬರೆದರು. ಇದೇ ಲೇಖನ ಮಾಲೆಯನ್ನು ೧೯೮೫ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಿಸಿದರು.[೮೭] ಈ ಪುಸ್ತಕದಲ್ಲಿ ಆಚಾರ್ಯರು ತಮ್ಮ ಕಲಾ ಜೀವನವನ್ನು ತೆರೆದಿರುವುದರ ಜೊತೆಗೆ ರಾಜ್ಯ, ರಾಷ್ಟ್ರ ಮತ್ತು ಪ್ರಪಂಚದ ಕಲೆಯ ಬಗೆಗೆ ಹಲವಾರು ಸಂಗತಿಗಳನ್ನು ತಿಳಿಸಿದ್ದಾರೆ.

ಈ ಲೇಖನ ಮಾಲೆಯ ಯಥಾವತ್ ನಿರೂಪಣೆಯನ್ನೇ ಪುಸ್ತಕ ರೂಪದಲ್ಲಿ ಪ್ರಕಟಿಸಲಾಗಿದ್ದು, ಕೆಲವೊಂದು ಚಿತ್ರಗಳನ್ನು ಮಾತ್ರ ಹೆಚ್ಚಾಗಿ ಬಳಸಿಕೊಳ್ಳಲಾಗಿದೆ. ಈ ಲೇಖನ ಮಾಲೆಯಲ್ಲಿ ಒಟ್ಟು ೭೦ಕ್ಕೂ ಹೆಚ್ಚು ನಮೂದುಗಳಿದ್ದು ಅವುಗಳ ಅಡಿಯಲ್ಲಿ ವಿಷಯ ನಿರೂಪಣೆಗೊಂಡಿದೆ. ಕಲೆಯು ಒಂದುವರ್ಗದ ಸ್ವತ್ತಲ್ಲ, ಪ್ರಕೃತಿಯೇ ಕಲಾವಿದನ ಗುರು, ವಿಮಾನ ಕಾರ್ಖಾನೆಯಲ್ಲಿ ಉದ್ಯೋಗ, ಮದರಾಸಿನಲ್ಲಿ ಪ್ರಥಮ ಏಕವ್ಯಕ್ತಿ ಪ್ರದರ್ಶನ, ಮನಮೆಚ್ಚಿದ ಕಲಾಕೃತಿಗಳ ರಚನೆ, ಲೇಖನದ ಹವ್ಯಾಸ, ಸ್ವತಂತ್ರ ಕಲಾಜೀವನ, ಕಾರ್ಟೂನ್ ಚಿತ್ರ ಪ್ರಪಂಚ, ಚಂದಮಾಮ ಕಲಾವಿದ ಮತ್ತು ಸಂಪಾದಕತ್ವದ ಹೊಣೆ, ಸಂಪಾಕತ್ವದಿಂದ ವಿಮುಕ್ತಿ, ಮುಂಬೈಯಲ್ಲಿ ಪ್ರದರ್ಶನ, ಕಲಾವಿದನಿಗೆ ಸಾಮಾಜಿಕ ಪ್ರಜ್ಞೆ ಮುಖ್ಯ, ಕಲೆಯ ಆಡಳಿತದಲ್ಲಿ ಪಟ್ಟ ಭದ್ರಹಿತಾಸಕ್ತಿ, ಅಮೇರಿಕಾದ ಸ್ಕಾಲರ್‌ಷಿಪ್, ತಾಯಿನಾಡಿನಲ್ಲಿ ಉದ್ಯೋಗ, ಅಂಚೆ ಮೂಲಕ ಕಲಾಶಿಕ್ಷಣಕ್ಕೆ ಸ್ಫೂರ್ತಿ, ಪಾಶ್ಚಾತ್ಯ ಕಲೆಯ ಇತಿಹಾಸ, ನವ್ಯಕಲೆಯ ಜನನ, ನವ್ಯಕಲಾ ಪ್ರಬೇಧಗಳು, ಭಾರತೀಯ ಲಲಿತಕಲಾ ಅಕಾಡೆಮಿಗಳು, ಭಾರತೀಯ ಕಲೆಯಲ್ಲಿ ಅಭಿವ್ಯಕ್ತಿಸ್ವಾತಂತ್ರ್ಯ, ಕಲೆಯ ಶ್ರೇಷ್ಠ ಮೌಲ್ಯವೇನು? ಮುಂತಾದ ಲೇಖನಗಳಿವೆ.

ತಮ್ಮ ಆತ್ಮ ಕಥನವನ್ನು ಈ ಮೂಲಕ ತೆರೆದಿಟ್ಟ ಆಚಾರ್ಯರು ಕಲೆ ಮತ್ತುಸಮಾಜದ ಸಂಬಂಧಗಳನ್ನು ಮುಖ್ಯವಾಗಿ ತಿಳಿಸಲು ಪ್ರಯತ್ನಿಸಿದ್ದಾರೆ. ಕಲಾವಿದನಿಗಿರಬೇಕಾದ ಅರ್ಹತೆ, ಪ್ರಾಮಾಣಿಕತೆಗಳು, ಅಭಿವ್ಯಕ್ತಿಯ ಹಿನ್ನೆಲೆಯಲ್ಲಿ ಕಡಿವಾಣಗಳು, ಸಾಮಾಜಿಕ ಆಗು-ಹೋಗುಗಳ ಬಗ್ಗೆ ಅರಿವಿನ ಹರವು ಇವುಗಳ ಬಗ್ಗೆ ತಿಳಿಸುವ ಆಚಾರ್ಯರು ಕಲಾ ವಿಮರ್ಶಕ ಮತ್ತು ಬರಹಗಾರನಿಗೂ ಕೆಲವು ಮಾರ್ಗಸೂಚಿಗಳನ್ನು ಹಾಕಿಕೊಡುತ್ತಾರೆ. ಕಲೆಯ ಕುರಿತಾಗಿರುವ ಅವರ ಅಭಿಪ್ರಾಯದಲ್ಲಿ ಪಾರಂಪರಿಕ ಕಲಾ ಪ್ರಕಾರಗಳು ಅವುಗಳ ಪ್ರಮುಖ ಗುಣಲಕ್ಷಣಗಳನ್ನು ಯುವಪೀಳಿಗೆ ತಿಳಿದುಕೊಳ್ಳಬೇಕು. ಅಂಧಾನುಕರಣೆಯಿಂದ ನಮ್ಮ ಪರಂಪರೆಯನ್ನು ತಿರಸ್ಕರಿಸಿ

---

೮೭. ಎಂ.ಟಿ.ವಿ.ಆಚಾರ್ಯ : ಕಲೆ ಮತ್ತು ನಾನು : ಆಚಾರ್ಯ ಚಿತ್ರಕಲಾ ಭವನ, ಗಾಂಧಿನಗರ, ಬೆಂಗಳೂರು-೧೯೮೫

ನವ್ಯವನ್ನು ಅಪ್ಪಿಕೊಳ್ಳವುದಿಲ್ಲ. ಹಳೆ ಬೇರು, ಹೊಸ ಚಿಗುರು ಕೂಡಿರಲು ಮರ ಸೊಬಗು' ಎಂಬ ಕವಿಸೂಕ್ತಿಯಂತೆ ಪರಂಪರೆಯ ಅಡಿಪಾಯದ ಮೇಲೆ ನವ್ಯತೆಯ ಸೌಧ ಕಟ್ಟಿದಾಗ ಅದಕ್ಕೊಂದು ಅರ್ಥವಂತಿಕೆ, ಭದ್ರತೆಗಳೂ ಒದಗುತ್ತವೆ ಎನ್ನುತ್ತಾರೆ. ಹಾಗೆಯೇ ಮುಖ್ಯವಾಗಿ ಅತಿಯಾದ ಮೋಹದಿಂದ ಕೂಡಿದವರಾಗಿ ಪರಂಪರೆಯ ಪರವಾಗಿಯೂ ನಿಲ್ಲಬಾರದು ಎಂದೂ ಎಚ್ಚರಿಸುತ್ತಾರೆ. ಇ.ಬಿ.ಹಾವೆಲ್, ಆನಂದಕುಮಾರಸ್ವಾಮಿ, ಪರ್ಶಿಬ್ರೌನ್, ಅಬನೀಂದ್ರನಾಥ ಟ್ಯಾಗೋರರಂತಹ ಮಹಾನ್ ವ್ಯಕ್ತಿಗಳನ್ನೇ ಆಚಾರ್ಯರಯ ಪ್ರಶ್ನಿಸುತ್ತಾರೆ. ಇವರೆಲ್ಲ ಸಮೂಹಸನ್ನಿಯ ಪ್ರಭಾವದಿಂದ, ಮೋಹಗಳಿಂದ ಭಾರತೀಯ ಕಲೆಯ ಬಗ್ಗೆ ಮಾತನಾಡುತ್ತಾರೆ ಎಂಬುದಾಗಿ ತಿಳಿಸುತ್ತಾರೆ. ಇಂತಹ ವಿಚಾರಗಳಲ್ಲದೇ ಕಲಾ ಅಕಾಡೆಮಿಗಳು, ಕಲಾಬರಹಗಾರರು, ಕಲಾವಿಮರ್ಶಕರು, ಗ್ಯಾಲರಿಗಳು, ಪತ್ರಿಕಾ ಸಂಪಾದಕರು, ಪತ್ರಿಕೆಯ ಕಲಾವಿದರು, ಮುಂತಾದ ವಿಷಯಗಳ ಕುರಿತು ಆಚಾರ್ಯರು ತಮ್ಮ ಈ ಆತ್ಮ ಕಥನದಲ್ಲಿ ಹೇಳುತ್ತಾರೆ.

**ಶೃಂಗಾರ ಲಹರಿ :**

ಚಿತ್ರಕಲೆಯ ಯಥಾವತ್ ನಿರೂಪಣೆಗಿಂತ ಭಿನ್ನವಾಗಿ ವೈಚಾರಿಕವಾಗಿ ಮತ್ತು ವಿಮರ್ಶಾತ್ಮಕವಾಗಿ ಚಿತ್ರಕಲೆಯ ಕುರಿತು ಹೇಗೆ ಹೇಳಬಹುದು ಎನ್ನುವುದಕ್ಕೆ ಈ ಕೃತಿ ಮಾದರಿಯಾಗಿದೆ. ಪ್ರಸ್ತುತ ಪುಸ್ತಕವನ್ನು ಎಂ.ಎಚ್.ಕೃಷ್ಣಯ್ಯ ಬರೆದಿದ್ದಾರೆ.[೮೮] ಇದರಲ್ಲಿ ಅವರೇ ಬರೆದಿರುವ ಚಿತ್ರಕಲೆಯ ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದ ಲೇಖನಗಳಿವೆ.

ಮೊದಲನೆಯದು 'ಭಾರತೀಯ ಚಿತ್ರಕಲೆಯಲ್ಲಿ ಶೃಂಗಾರ ಲಹರಿ' ಎಂಬುದಾಗಿದೆ. ಇದರಲ್ಲಿ ಪ್ರಾಚೀನ ಭಾರತೀಯ ಭಿತ್ತಿಚಿತ್ರಗಳು, ಕಿರುರೂಪ ಚಿತ್ರಗಳು, ಸಾಹಿತ್ಯಗಳಲ್ಲಿ ಬರುವ ಚಿತ್ರಕಲಾ ವಿವರಣೆಗಳಿಂದ ಶೃಂಗಾರಕ್ಕೆ ಸಂಬಂಧಿಸಿದ ವಿಷಯಗಳನ್ನು ಆಯ್ದುಕೊಂಡು ಚರ್ಚಿಸಲಾಗಿದೆ. ಅಜಂತಾ ಚಿತ್ರಗಳು, ರಜಪೂತ ಚಿತ್ರಗಳು, ಪಹಾಡಿ, ಕಾಂಗ್ರಾ ಮತ್ತು ಬಸೋಲಿ ಶೈಲಿಗಳು, ಮೈಸೂರು ಶೈಲಿ, ಬಂಗಾಲಿ ಶೈಲಿ ಹೀಗೆ ವಿವಿಧ ಕಲಾಶೈಲಿಗಳಲ್ಲಿನ ಶೃಂಗಾರ ಚಿತ್ರಗಳ ಬಗ್ಗೆ ವಿಮರ್ಶೆ ಮಾಡಲಾಗಿದೆ. ಎರಡನೆಯ ಲೇಖನವು 'ಕರ್ನಾಟಕದಲ್ಲಿ ಚಿತ್ರಕಲೆಯ ಪರಂಪರೆ' ಎಂಬುವುದಾಗಿದೆ. ಇಲ್ಲಿ ಬಾದಾಮಿ ಚಾಲುಕ್ಯರ ಕಾಲದಿಂದ ತೊಡಗಿ ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ದೊರೆಗಳು, ಮೈಸೂರು ಅರಸರು ಕಲೆಗೆ ನೀಡಿದ ಪ್ರೋತ್ಸಾಹ ಮತ್ತು ಅವರ ಕೃತಿಗಳ ಬಗ್ಗೆ ಹೇಳಲಾಗಿದೆ. ಮೂರನೆಯ ಲೇಖನದಲ್ಲಿ ಕಲೆ ಮತ್ತು ಪ್ರಾಯೋಗಿಕ ವಿಮರ್ಶೆ, ನಾಲ್ಕನೆಯ ಲೇಖನದಲ್ಲಿ ಡಿ.ವಿ.ಜಿ.ಯವರ ಸೌಂದರ್ಯಮೀಮಾಂಸೆ ಬಗೆಗೆ ಮಾಹಿತಿ ಇದೆ. ಅಮೂರ್ತತೆ ಮತ್ತು ಅಮೂರ್ತಕಲೆ ಎನ್ನುವ ಐದನೆಯ ಲೇಖನದಲ್ಲಿ ನವ್ಯಕಲೆಯ ಅನೇಕ ಆಯಾಮಗಳು ಚರ್ಚಿಸಲ್ಪಟ್ಟಿವೆ. ಚೈತನ್ಯಲಹರಿಯ ಅಭಿವ್ಯಕ್ತಿ ಎನ್ನುವ ಆರನೆಯ ಲೇಖನದಲ್ಲಿ ಸಮಕಾಲೀನ ಕಲೆಯ ಸಂದರ್ಭಗಳು, ಶೈಲಿ, ವಿನ್ಯಾಸ, ಸಂಯೋಜನೆಗಳಂತಹ ಸಂಗತಿಗಳು ಚರ್ಚಿಸಲ್ಪಟ್ಟಿವೆ.

**ಸಾಹಿತ್ಯದಲ್ಲಿ ಚಿತ್ರಕಲೆ :**

ಕಲೆ ಮತ್ತು ಕಲಾ ಸಾಹಿತ್ಯ ಎರಡೂ ವಿಭಿನ್ನ ನೆಲೆಗಳನ್ನು ಹೊಂದಿದವುಗಳಾಗಿವೆ. ಚಿತ್ರಕಲೆಯ ಉಲ್ಲೇಖಗಳನ್ನು ಹೊಂದಿದ ಸಾಹಿತ್ಯ ಕೃತಿಗಳು ಪ್ರಾಚೀನ ಕಾಲದಲ್ಲಿಯೇ ರಚನೆಯಾಗುತ್ತ ಬಂದಿವೆ.

೮೮. ಎಂ.ಎಚ್.ಕೃಷ್ಣಯ್ಯ : ಶೃಂಗಾರ ಲಹರಿ : ಸಿ.ಎಂ.ಎನ್. ಪ್ರಕಾಶನ, ಬೆಂಗಳೂರು-೧೯೮೯

ಕೆಲವು ಸಾಹಿತ್ಯ ಕೃತಿಗಳಲ್ಲಿ ಚಿತ್ರಕಲೆಯ ಬಗೆಗೆ ಒಂದೊಂದು ಅಧ್ಯಾಯ ಅಥವಾ ಭಾಗಗಳನ್ನು ಮೀಸಲಾಗಿರಿಸಿದ್ದರೆ, ಮತ್ತೆ ಕೆಲವು ಸಾಹಿತ್ಯ ಕೃತಿಗಳಲ್ಲಿ ಸಾಂದರ್ಭಿಕವಾಗಿ ಚಿತ್ರಕಲೆಯ ವಿಷಯಗಳನ್ನು ಹೇಳಲಾಗಿದೆ. 'ಸಾಹಿತ್ಯದಲ್ಲಿ ಚಿತ್ರಕಲೆ' ಎಂಬ ಪ್ರಸ್ತುತ ಕೃತಿಯನ್ನು ಎನ್.ಮರಿಶಾಮಾಚಾರ್ ರಚನೆ ಮಾಡಿದ್ದು,[೮೯] ಯಾವ ಯಾವ ಸಾಹಿತ್ಯ ಕೃತಿಗಳಲ್ಲಿ ಚಿತ್ರಕಲೆಯ ಉಲ್ಲೇಖಗಳಿವೆ ಎಂಬ ಬಗ್ಗೆ ಸ್ಥೂಲ ನೋಟ ಕೊಟ್ಟಿದ್ದಾರೆ.

ಚಿತ್ರಕಲೆಯ ಉಲ್ಲೇಖಗಳು ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ವೇದಗಳು ಮತ್ತು ಮಹಾಕಾವ್ಯಗಳ ಕಾಲದಿಂದಲೇ ಕಂಡುಬಂದಿವೆ. ಅಲ್ಲಿಂದ ನಂತರದಲ್ಲಿ ಯಾವ ಕೃತಿಗಳಲ್ಲಿ ಕಲೆಯ ಅಂಶಗಳಿವೆ ಎನ್ನುವುದು ಈ ಕೃತಿಯ ಮುಖ್ಯ ವಿಷಯವಾಗಿದೆ. ಇದರಲ್ಲಿ ರಾಮಾಯಣ, ಮಹಾಭಾರತ, ಜೈನ ಸಾಹಿತ್ಯ, ಬೌದ್ಧ ಸಾಹಿತ್ಯ, ವಿಷ್ಣು ಧರ್ಮೋತ್ತರ ಪುರಾಣ, ಸಮರಾಂಗಣ ಸೂತ್ರಧಾರ, ಮಾನಸೋಲ್ಲಾಸ, ಪಂಚದಶಿ, ಅಷ್ಟಾಧ್ಯಾಯ, ಅರ್ಥಶಾಸ್ತ್ರ, ನಾಟ್ಯಶಾಸ್ತ್ರ, ಮೇಘದೂತ, ಕಾಮಸೂತ್ರ, ಬೃಹತ್ ಸಂಹಿತಾ, ಕಾದಂಬರಿ, ಹರ್ಷಚರಿತ, ದಶಕುಮಾರ ಚರಿತ್ರೆ, ಕುಟ್ಟನಿಮೀತ, ತಿಲಕಮಂಜರಿ, ಕಥಾಸರಿತ್ಸಾಗರ, ನೈಷಧ ಚರಿತ, ಹರಿವಂಶ ಪುರಾಣ, ಅಗ್ನಿಪುರಾಣ, ಗರುಡಪುರಾಣ, ಪದ್ಮಪುರಾಣ ಹೀಗೆ ಅನೇಕ ಗ್ರಂಥಗಳಲ್ಲಿ ಉಲ್ಲೇಖಗೊಂಡಿರುವ ಚಿತ್ರಕಲಾ ಅಂಶಗಳನ್ನು ಸ್ಥೂಲ ರೂಪದಲ್ಲಿ ಹೇಳಲಾಗಿದೆ.

**ಕಲೆ, ಅನುಭವ ಮತ್ತು ಅನುಭಾವ :**

ಈ ಪುಸ್ತಕದಲ್ಲಿ ಕಲೆಮತ್ತು ಕಲಾಕೃತಿ, ಅನುಭವ ಮತ್ತು ಅನುಭಾವ ಕುರಿತಾಗಿ ಅನೇಕ ಸಂಗತಿಗಳನ್ನು ಹೇಳಲಾಗಿದೆ. ಕಲೆಯ ಪ್ರಾಚೀನತೆ, ಪ್ರೇರಣೆ, ಸಮಕಾಲೀನತೆ, ಕೃತಿರಚನೆ, ಮಿತಿ, ಕಲೆಯ ಅರ್ಥ, ಬಣ್ಣ, ರೇಖೆ, ಕಲೆಯ ಹುಟ್ಟು, ಪ್ರಯೋಗ, ಚಿತ್ರವರ್ತನೆ, ಯಥಾರ್ಥ ಮತ್ತು ಕಲ್ಪನೆ, ಮಾನಸಿಕ ಅವಸ್ಥೆ ಹೀಗೆ ಸುಮಾರು ಒಂದು ನೂರು ವಿಷಯಗಳ ಬಗ್ಗೆ ನಾಲ್ಕರಿಂದ ಎಂಟು ಸಾಲುಗಳಲ್ಲಿ ಚಿಕ್ಕ ಮಾಹಿತಿ ನೀಡಲಾಗಿದೆ. ಚಂದ್ರಕಾಂತ ಕುಸನೂರ ಬರೆದಿರುವ[೯೦] ಈ ಕೃತಿಯಲ್ಲಿ ಕಲಾಪ್ರಕಾರ, ಕಲಾತಂತ್ರಗಾರಿಕೆ, ಐತಿಹಾಸಿಕತೆ, ಪೌರಾಣಿಕತೆ, ಚಿತ್ರರಚನಾ ಪದ್ಧತಿ, ಶೈಲಿ, ಸಂಯೋಜನೆ, ಚಿತ್ರ ವಿಮರ್ಶೆ, ಚಿತ್ರಕಲಾ ಸಾಹಿತ್ಯ, ಬಣ್ಣಗಳು, ಕುಂಚಗಳು, ಆಧುನಿಕತೆ, ಹೀಗೆ ಹಲವು ವಿಷಯಗಳು ಹೇಳಲ್ಪಟ್ಟಿವೆ.

**ಕಲಾ ಸಂಕಲನ :**

ಕಲೆಯ ಕುರಿತ ವಿವಿಧ ಲೇಖನಗಳ ಸಂಗ್ರಹ ಇದಾಗಿದ್ದು, ಇವುಗಳೆಲ್ಲವನ್ನು ಎನ್.ಮರಿಶಾಮಾಚಾರ್ ಬರೆದಿದ್ದಾರೆ.[೯೧] ಕಲಾವಿಮರ್ಶೆಯ ಹೊಣೆಗಳು ಎನ್ನುವ ಮೊದಲನೆಯ ಲೇಖನದಲ್ಲಿ ಕಲಾ ವಿಮರ್ಶೆಯ ಪರಿಭಾಷೆ, ಅರ್ಥವ್ಯಾಪ್ತಿಗಳನ್ನು ಹೇಳುತ್ತ ಕಲಾವಿಮರ್ಶಕನು ನಿರ್ವಹಿಸಬೇಕಾದ ಪಾತ್ರಗಳ ಬಗ್ಗೆ ಹೇಳಿದ್ದಾರೆ. ಮತ್ತೊಂದು ಲೇಖನದಲ್ಲಿ ಚಿತ್ರಕಲೆ, ಶಿಲ್ಪಕಲೆಗಳ ಪ್ರಾಧಾನ್ಯತೆ ಗುಣಲಕ್ಷಣಗಳನ್ನು ವಿವರಿಸಿದ್ದಾರೆ. ಕಲಾವಲಯದಲ್ಲಿ ಮ್ಯೂಜಿಯಂಗಳ ಪಾತ್ರ, ಇಂದಿನ ಪರಿಸ್ಥಿತಿಯಲ್ಲಿ ಅವು ನಿರ್ವಹಿಸುತ್ತಿರುವ ಕಾರ್ಯವಿಧಾನಗಳ ಸಂಗತಿಗಳಿವೆ. ಇಲ್ಲಿನ ಲೇಖನಗಳಲ್ಲಿ ಚರ್ಚಿತಗೊಂಡ ಒಟ್ಟು ವಿಷಯಗಳನ್ನು ಈ ಕೆಳಗಿನಂತೆ ಸ್ಥೂಲವಾಗಿ ಹೇಳಬಹುದು.

೮೯. ಎನ್.ಮರಿಶಾಮಾಚಾರ್ : ಸಾಹಿತ್ಯದಲ್ಲಿ ಚಿತ್ರಕಲೆ : ಸಿ.ಎಂ.ಎಸ್.ಪ್ರಕಾಶನ, ಬೆಂಗಳೂರು- ೧೯೮೯

೯೦. ಚಂದ್ರಕಾಂತ ಕುಸನೂರ : ಕಲೆ, ಅನುಭವ ಮತ್ತು ಅನುಭಾವ : ಮಾಲಗತ್ತಿ ಪಬ್ಲಿಸಿಂಗ್ ಹೌಸ, ಸದಾಶಿವನಗರ, ಬೆಳಗಾವಿ-೧೯೯೦

೯೧. ಎನ್.ಮರಿಶಾಮಾಚಾರ್ : ಕಲಾಸಂಕಲನ : ಸಿ.ಎಂ.ಎನ್.ಪ್ರಕಾಶನ ಜಯನಗರ, ಬೆಂಗಳೂರು -೧೯೯೪

ಚಿತ್ರಕಲೆಯ ಭಾಷೆ, ಶಾರೀರಿಕವಾಗಿ, ಮಾನಸಿಕವಾಗಿ, ವ್ಯಾವಹಾರಿಕವಾಗಿ, ಅನುಭವದ ಅಭಿವ್ಯಕ್ತಿಯಲ್ಲಿ ಕಲೆಯ ಪರಿಣಾಮಗಳು, ಕಲೆಯಲ್ಲಿ ಮಾನವಾಕೃತಿಗಳ ಪ್ರತಿಬಿಂಬ, ಪಾಶ್ಚಿಮಾತ್ಯ ಮತ್ತು ಭಾರತೀಯ ಕಲೆಯ ಲಕ್ಷಣಗಳು, ಈಜಿಪ್ತ, ಗ್ರೀಕ್, ಕಲೆಗಳ ವಿಷಯಗಳು ಇಲ್ಲಿ ಚರ್ಚಿತಗೊಂಡಿವೆ. ಕಲೆ ಮತ್ತು ಸಮಾಜ, ಲಲಿತಕಲೆಗಳು ಸಮಾಜದ ಮೇಲೆ ಉಂಟುಮಾಡುವ ಪರಿಣಾಮಗಳು, ಕಲೆಯ ಚಿಂತನೆ, ಕಲೆ ಮತ್ತು ತಂತ್ರಜ್ಞಾನ, ಕಲೆಯಲ್ಲಿ ಕುಶಲತೆ, ವಿನ್ಯಾಸಗಾರಿಕೆ, ಶಿಕ್ಷಣ, ಸಂಸ್ಕೃತಿಗಳ ಸಂಬಂಧ, ಕಲೆ ವಿಜ್ಞಾನಗಳ ಒಗ್ಗೂಡುವಿಕೆ, ಕಲಾ ಮೌಲ್ಯಗಳು ಮತ್ತು ಭಾರತೀಯ ಚಿತ್ರಕಲಾ ಇತಿಹಾಸದಲ್ಲಿ ಮೈಸೂರು ಚಿತ್ರಕಲಾ ಶೈಲಿಯ ಪ್ರಾಮುಖ್ಯತೆ ಮುಂತಾದ ಸಂಗತಿಗಳ ಕುರಿತಾಗಿ ಇಲ್ಲಿ ವಿವರಣೆ ಕಂಡುಬರುತ್ತದೆ.

**ಚಿತ್ರಕಲೆ ಮತ್ತು ಮನೋವಿಕಾಸ :**

ಈ ಪುಸ್ತಕವನ್ನು ಮನೋವೈದ್ಯರಾದ ಡಾ. ಸಿ.ಆರ್.ಚಂದ್ರಶೇಖರ್ ಬರೆದಿದ್ದಾರೆ.[೯೨] ಮನಸ್ಸು ಎಂದರೇನು? ಇದ್, ಇಗೋ, ಸುಪರ್ ಇಗೋ, ದೇಶ, ಜನಾಂಗ, ಸಂಸ್ಕೃತಿ, ಮಿದುಳಿನ ವಿಕಾಸ, ಕಲಾಸಾಮರ್ಥ್ಯ, ಅದರ ಬೆಳವಣಿಗೆ, ಮನುಷ್ಯ ಚಿತ್ರ ಬರೆಯುವ ಪರೀಕ್ಷೆ, ಸೆಗ್ವಿನ್ ಫಾರ್ಮ್ ಬೋರ್ಡ್, ನಿರೀಕ್ಷೆ, ಬೆರಳಿನಿಂದ ಚಿತ್ರ ಬಿಡಿಸುವುದು, ಚಿತ್ರಗಳ ಮೂಲಕ ಕಲಿಕೆ, ಕಲಾ ಚಿಕಿತ್ಸೆ, ಕಲೆಯಿಂದ ಮನೋವಿಕಾಸ, ಮಾನಸಿಕ ಆರೋಗ್ಯ ಹೀಗೆ ಅನೇಕ ವಿಷಯಗಳು ಸಂಕ್ಷಿಪ್ತವಾಗಿ ನಿರೂಪಿಸಿವೆ. ಚಿತ್ರಕಲೆ ಮಾನವನ ಮನಸ್ಸಿನ ವಿಕಾಸದೊಂದಿಗೆ ಬೆಳೆಯುತ್ತ ಬೇರೆಬೇರೆ ಹಂತಗಳನ್ನು ಪಡೆದುಕೊಳ್ಳುತ್ತದೆ. ಇದನ್ನು ಮನೋವಿಜ್ಞಾನದ ಹಿನ್ನೆಲೆಯಲ್ಲಿ ಲೇಖಕರು ಇಲ್ಲಿ ಸ್ಥೂಲವಾಗಿ ಹೇಳಿದ್ದಾರೆ.

**ಚಿತ್ರಕಲಾ ಚಿಂತನೆ :**

ಚಿತ್ರಕಲೆಯ ಹಲವಾರು ವಿಷಯಗಳನ್ನು ಕುರಿತು ಚರ್ಚೆ ಮಾಡಲಾಗಿರುವ ಈ ಕೃತಿಯನ್ನು ಶಂಕರ ಪಾಟೀಲ ಬರೆದಿದ್ದಾರೆ.[೯೩] ಪ್ರಾಚೀನ ಭಾರತೀಯ ಚಿತ್ರಕಲಾ ಪರಂಪರೆ, ಭಿತ್ತಿಚಿತ್ರ, ಕಿರುರೂಪ ಚಿತ್ರ, ಹಸ್ತಪ್ರತಿ ಚಿತ್ರ, ವಿವಿಧ ಕಲಾಶೈಲಿಗಳು, ಧಾರ್ಮಿಕ ಹಿನ್ನೆಲೆಯ ಚಿತ್ರಕಲೆ, ಐತಿಹಾಸಿಕ ಮಹತ್ವ, ಪ್ರಮುಖ ಗ್ರಂಥಗಳಲ್ಲಿ ಮೂಡಿಬಂದಿರುವ ಚಿತ್ರಕಲೆ ಬಗೆಗಿನ ವಿವರಣೆಗಳು ಕಲಾ ಸಂದರ್ಭಗಳ ಬಗೆಗೂ ಇಲ್ಲಿ ಚರ್ಚೆ ಮಾಡಲಾಗಿದೆ. ಇಲ್ಲಿನ ಮುಖ್ಯ ಲೇಖನಗಳಲ್ಲಿ ಚಿತ್ರಕಲಾ ಪರಂಪರೆ, ಸೌಂದರ್ಯ ಶಾಸ್ತ್ರ, ತತ್ವ, ಆದರ್ಶ, ಧರ್ಮ ಹಾಗೂ ಕಲೆ, ಮನೋವಿಜ್ಞಾನ ಮತ್ತು ಕಲೆ, ವಿವಿಧ ಶಿಸ್ತುಗಳ ಅನ್ಯೋನ್ಯತೆ, ಕಲೆ-ಕಲಾವಿದ-ಕಲಾಶೈಲಿ, ವ್ಯಕ್ತಿಚಿತ್ರ, ವಿಚಾರ-ವಿವರ-ವಿಶ್ಲೇಷಣೆ, ರೇಖೆ-ಬಣ್ಣ-ವಿನ್ಯಾಸ, ನವ್ಯಕಲೆ-ಸಮಕಾಲೀನ ಕಲೆ, ಕಲಾವಿಮರ್ಶೆ, ಕಲಾ ಶಿಕ್ಷಣ ಎನ್ನುವ ಲೇಖನಗಳು ಸೇರಿವೆ. ಚಿತ್ರಕಲಾ ವಿಮರ್ಶಾ ದೃಷ್ಟಿಯಿಂದ ಪ್ರಮುಖ ಪುಸ್ತಕ ಇದಾಗಿದೆ.

ಚಿತ್ರಕಲೆಯ ವಿಷಯಗಳನ್ನು ಸಂಶೋಧನಾತ್ಮಕವಾಗಿ ನಿರೂಪಿಸುವ ಸೃಜನಶೀಲ ಪ್ರಯತ್ನ ಇಲ್ಲಿದೆ. ಚಿತ್ರಕಲೆಯೊಂದಿಗೆ ಬೆಸೆದು ಕೊಂಡಿರುವ ಮತ್ತು ಪೂರಕವಾಗಿರುವ ಸಂಗತಿಗಳನ್ನು ಅನಾವರಣಗೊಳಿಸುವ ಹಿನ್ನೆಲೆಯನ್ನು ಇಲ್ಲಿನ ಬರಹಗಳಲ್ಲಿ ನೋಡಬಹುದಾಗಿದೆ. ಸೌಂದಯಾನುಭವವನ್ನು ಪಾಶ್ಚಾತ್ಯ ಹಾಗೂ ಪೌರಾತ್ಯ ಎರಡೂ ನಿಲುವಿನಿಂದ ವಿವೇಚಿಸುವ ಪ್ರಯತ್ನ ಇಲ್ಲಿ ಕಂಡು ಬರುತ್ತದೆ.

---

೯೨. ಡಾ.ಸಿ.ಆರ್.ಚಂದ್ರಶೇಖರ್ : ಚಿತ್ರಕಲೆ ಮತ್ತು ಮನೋವಿಕಾಸ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೫

೯೩. ಶಂಕರ ಪಾಟೀಲ : ಚಿತ್ರಕಲಾ ಚಿಂತನೆ : ಪ್ರಗತಿ ಪ್ರಕಾಶನ, ವಿದ್ಯಾನಗರ, ದಾವಣಗೆರೆ- ೧೯೯೫

**ದೃಶ್ಯಕಲೆಗಳ ಗುಣಗ್ರಹಣ :**

ದೃಶ್ಯಕಲೆಗಳ ಗುಣಗ್ರಹಣ ಈ ಕಿರು ಪುಸ್ತಕವನ್ನು ಅ.ಲ.ನರಸಿಂಹನ್ ಬರೆದಿದ್ದಾರೆ.[೯೪] ಇದರಲ್ಲಿ ಪ್ರಮುಖವಾಗಿ ಚಿತ್ರ ಮತ್ತು ಶಿಲ್ಪಕಲೆಗಳನ್ನು ಇಟ್ಟುಕೊಂಡು ಅವುಗಳ ಗುಣಗ್ರಹಣ ಮತ್ತು ಮೌಲ್ಯಗಳ ಕುರಿತಾಗಿ ಚರ್ಚಿಸಿದ್ದಾರೆ. ಲಲಿತಕಲೆಗಳಲ್ಲಿ ಪ್ರಮುಖವಾಗಿರುವ ಚಿತ್ರ, ಶಿಲ್ಪಕಲೆಗಳಲ್ಲಿ ವಿಭಿನ್ನತೆ ಕಂಡುಬರುತ್ತದೆ. ಚಿತ್ರಕಲೆಯು ಉದ್ದ, ಅಗಲಗಳನ್ನು ಮಾತ್ರ ಹೊಂದಿರುವ ದ್ವಿ ಆಯಾಮದಲ್ಲಿದ್ದರೆ, ಶಿಲ್ಪವು ಉದ್ದ, ಅಗಲಗಳ ಜೊತೆಗೆ ದಪ್ಪಳತೆಯನ್ನು ಹೊಂದಿದ್ದು, ತ್ರಿ ಆಯಾಮದಲ್ಲಿ ರಚನೆಯಾಗಿರುತ್ತದೆ.

ಯಾವುದೇ ಕಲಾಕೃತಿ ರಚನೆಯ ಸಂದರ್ಭದಲ್ಲಿ ಕೃತಿಕಾರನು ಅನುಭವಿಸಿದ ವಿಶಿಷ್ಟ ಅನುಭವಗಳನ್ನು ಸಹೃದಯ ನೋಡುಗನೂ ಅನುಭವಿಸುತ್ತಾನೆ ಇವರಿಬ್ಬರಲ್ಲಿ ಉಂಟಾದ ಭಾವನಾತ್ಮಕ ಪ್ರಕ್ರಿಯೆಗಳು ಒಂದೇ ತೆರನಾಗಿ ಇರಬೇಕೆಂದೇನೂ ಇಲ್ಲ. ಹಾಗಾದಾಗ ಅದು ಆಕಸ್ಮಿಕ ಮಾತ್ರವಾಗಿರುತ್ತದೆ. ಕಲಾಕೃತಿಯೊಂದರ ಮುಂದೆ ನಿಂತಾಗ ಸಹೃದಯನಿಗೆ ವಿಶಿಷ್ಟ ತರಂಗಗಳನ್ನು ಸೃಷ್ಟಿಸುವುದು. ಇಂತಹ ಹಲವಾರು ಸಂಗತಿಗಳು ಈ ಕೃತಿಯಲ್ಲಿ ಚರ್ಚಿಸಲ್ಪಟ್ಟಿವೆ. ಭಿತ್ತಿ, ಫಲಕ, ಬಣ್ಣ, ಆಧುನಿಕ ಕಲೆ, ಕುಂಚಗಳು, ಆದಿಮ ಚಿತ್ರಗಳು, ಮಧ್ಯಯುಗದ ಕಲೆ, ರಸಭಾವಗಳು, ಸಂಕೇತಗಳು, ಸಂಯೋಜನೆ, ಹೀಗೆ ವಿವಿಧ ಬಗೆಯ ಸಂಗತಿಗಳ ಬಗೆಗೆ ಈ ಪುಸ್ತಕದಲ್ಲಿ ಚರ್ಚಿಸಲಾಗಿದೆ.

**ಚಿತ್ರಕಲೆ ಮತ್ತು ಸಂವಹನ :**

ಚಿತ್ರಕಲೆ ಮತ್ತು ಸಂವಹನ ಕೃತಿಯನ್ನು ಜೆ.ಮಲ್ಲಿಕಾರ್ಜುನ ಬರೆದಿದ್ದಾರೆ.[೯೫] ಈ ಕೃತಿಯಲ್ಲಿ ಕಲೆ ಮತ್ತು ಸಂವಹನ ಇವುಗಳ ಸಮನ್ವಯತೆ ಕುರಿತು ವಿವರಿಸಿದ್ದಾರೆ. ಮಕ್ಕಳಿಂದ ಮುದುಕರವರೆಗೆ, ಅವಿದ್ಯಾವಂತರಿಂದ ವಿದ್ಯಾವಂತರವರೆಗೆ ಎಲ್ಲರಿಗೂ ಸುಲಭವಾಗಿ ಮುಟ್ಟಬಲ್ಲ ಸಂವಹನ ಮಾಧ್ಯಮವು ಚಿತ್ರಕಲೆಯಾಗಿದೆ. ಸಂವಹನ ಎಂದರೇನು? ಎನ್ನುವುದರ ಅರ್ಥ ವ್ಯಾಪ್ತಿಯನ್ನು ಹೇಳುವುದರ ಜೊತೆಗೆ ಅಕ್ಷರಗಳ ಸೃಷ್ಟಿಯಲ್ಲಿ, ಧರ್ಮ ಪ್ರಚಾರದಲ್ಲಿ, ಅಭಿವ್ಯಕ್ತಿ ಮಾಧ್ಯಮವಾಗಿ, ಪ್ರಚಾರಕಲೆ, ಭಿತ್ತಿಪತ್ರಗಳ ಹಿನ್ನೆಲೆಯಲ್ಲಿ ಕಲೆಯ ಕೊಡುಗೆಗಳನ್ನು ಬಿಂಬಿಸಲಾಗಿದೆ.

ಚಿತ್ರಫಲಕಗಳು, ಲಿಪಿ ಬೆಳವಣಿಗೆಯ ಹಂತ, ಹೆನ್ರಿ, ತೌಲೂಸ್ ಲಾತ್ರೆಯು ೧೮೯೨ರಲ್ಲಿ ರಚಿಸಿದ ಭಿತ್ತಿ ಚಿತ್ರಫಲಕ, ಕಾರಲ್ ಸಮರ್ಸನ್ ಮರದಚ್ಚಿನ ಪ್ರತಿಕೃತಿ, ಸ್ಪೇನಿನ ಅಲ್ತಮೀರಾ ಗುಹೆಯ ಚಿತ್ರ, ಹೆಸ್ಪರ್‌ನ ಗೋರಿಯ ಮರದ ಬಾಗಿಲಿನ ಕೆತ್ತನೆಯ ಚಿತ್ರಗಳು, ೧೩೦೬ರಲ್ಲಿ ಜಿಯತ್ತೋ ರಚಿಸಿದ ಚಿತ್ರ, ಮುಂತಾದ ಕೃತಿಗಳನ್ನು ಕೃತಿಯಲ್ಲಿ ಅಳವಡಿಸಲಾಗಿದೆಯಲ್ಲದೇ ಅವುಗಳ ಬಗ್ಗೆ ವಿಮರ್ಶೆ ಬರೆಯಲಾಗಿದೆ.

ಕಲೆಯು ವಿಸ್ತಾರವಾಗಿ ಬೆಳೆದಂತೆ ಮಾನವನ ಬದುಕಿನ ಅನಿವಾರ್ಯ ಅಂಗವಾಗಿ ರೂಪುಗೊಂಡ ಬಗೆ, ಸಂವಹನ ಮಾಧ್ಯಮವಾಗಿ ಅದು ವಿವಿಧ ಕಾಲಘಟ್ಟಗಳಲ್ಲಿ ವಿವಿಧ ವಿನ್ಯಾಸಗಳಲ್ಲಿ ಅನಾವರಣಗೊಂಡ ರೀತಿಗಳನ್ನು ಈ ಕೃತಿಯಲ್ಲಿ ಸ್ಥೂಲವಾಗಿ ಬಿಂಬಿಸಲಾಗಿದೆ.

---

೯೪. ಡಾ.ಅ.ಲ.ನರಸಿಂಹನ್ : ದೃಶ್ಯಕಲೆಗಳ ಗುಣಗ್ರಹಣ : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು-೧೯೯೫

೯೫. ಜೆ.ಮಲ್ಲಿಕಾರ್ಜುನ : ಚಿತ್ರಕಲೆ ಮತ್ತು ಸಂವಹನ : ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು-೧೯೯೬

**ಕಲಾ ಸಂವೇದನೆಯ ಒಳನೋಟಗಳು :**

ರಾಜ್ಯ ಲಲಿತಕಲಾ ಅಕಾಡೆಮಿಯು ಪ್ರಕಟಿಸಿರುವ ಈ ಕೃತಿಯಲ್ಲಿ ಕಲೆ ಮತ್ತು ಕಲಾ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳಿವೆ. ಇವುಗಳನ್ನು ಕೆ.ವಿ.ಸುಬ್ರಹ್ಮಣ್ಯ ಬರೆದಿದ್ದು,[೯೬] ವಿವಿಧ ವಿಷಯಗಳಿಗೆ ಸಂಬಂಧಿಸಿವೆ. ಒಟ್ಟು ೧೯ ಲೇಖನಗಳು ಈ ಪುಸ್ತಕದಲ್ಲಿದ್ದು, ಚಿತ್ರಕಲೆ, ಕಲಾವಿದ, ಭಾರತೀಯ ಚಿತ್ರಕಲೆ, ಕನ್ನಡ ಕಲಾ ಸಾಹಿತ್ಯ, ಕಲಾಸೃಷ್ಟಿ, ಸಂವೇದನೆ, ಸಮಕಾಲೀನತೆ, ಪಾಶ್ಚಾತ್ಯ ಪ್ರಭಾವ, ಶಿಲ್ಪಕಲೆ, ಮಾಧ್ಯಮ, ಅಭಿವ್ಯಕ್ತಿ, ಹೀಗೆಹಲವು ವಿಷಯಗಳ ಬಗೆಗೆ ಚರ್ಚಿಸಲಾಗಿದೆ. ರಾಜಾ ರವಿವರ್ಮ ಮತ್ತು ಭಾರತೀಯ ಕಲೆ ಎಂಬ ಲೇಖನದಲ್ಲಿ ರವಿವರ್ಮನ ಕಲಾಶೈಲಿ, ವಸ್ತುವಿಷಯ, ತಂತ್ರಗಾರಿಕೆ, ಸಾಮಾಜಿಕ ಪರಿಣಾಮಗಳ ಕುರಿತು ವಿವೇಚಿಸಲಾಗಿದೆ. ಮತ್ತೊಂದು ಲೇಖನ 'ಚಿತ್ರಕಲೆಯಲ್ಲಿ ಸಮಕಾಲೀನತೆ' ಯಲ್ಲಿ ಕಲಾವಿದನಿಗೆ ಸಮಕಾಲೀನ ಪ್ರಜ್ಞೆ ಎಚ್ಚರವಾಗಿರುವ ರೀತಿ, ಸುತ್ತಲಿನ ಪ್ರಭಾವ, ಪ್ರೇರಣೆಗಳ ಬಗೆಗೆ ವಿವರಿಸಿದೆ. 'ಕಲಾಸೃಷ್ಟಿಯ ಒಂದು ಟಿಪ್ಪಣಿ'ಯಲ್ಲಿ ಕಲಾಕೃತಿಯ ರಚನೆಯ ಹಿನ್ನೆಲೆ, ಭಾವನಾತ್ಮಕ ಅಭಿವ್ಯಕ್ತಿ, ಕಲಾಕೃತಿ ಮತ್ತು ಕಲಾವಿದನಿಗಿರುವ ಸಂಬಂಧ, ಹಾಗೆ ಕೃತಿ ಮತ್ತು ನೋಡುಗರಿಗಿರುವ ಸಂಬಂಧಗಳ ಬಗ್ಗೆ ಚರ್ಚಿಸಲಾಗಿದೆ. ಭಾರತೀಯ ಚಿತ್ರ ಮತ್ತು ಶಿಲ್ಪಗಳಲ್ಲಿ ಪಾಶ್ಚಾತ್ಯ ಪ್ರಭಾವ ಹೇಗಾಗುತ್ತದೆಎಂಬುದನ್ನು ಉದಾಹರಣೆಗಳೊಂದಿಗೆ ಬಿಂಬಿಸಲಾಗಿದೆ. ಸಂವೇದನೆಯ ಹೊಳಹುಗಳು' ಇದರಲ್ಲಿ ಕಲಾವಿದ, ಸಹೃದಯ ಮತ್ತು ಕಲಾಕೃತಿ, ಇವುಗಳ ಸಹ ಸಂಬಂಧ ಮತ್ತು ಸಾಮಾಜಿಕ ಆಯಾಮಗಳನ್ನು ಕಟ್ಟಿಕೊಡಲಾಗಿದೆ. ಅಭಿವ್ಯಕ್ತಿ ಮಾಧ್ಯಮವಾಗಿ ಭೂಮಿ ಎಂಬ ಲೇಖನದಲ್ಲಿ ಇತ್ತೀಚೆಗೆ ಪ್ರಚಾರದಲ್ಲಿ ಬರುತ್ತಿರುವ ಅರ್ಥ ಆರ್ಟ ಬಗೆಗೆ ವಿವೇಚಿಲಾಗಿದ್ದರೆ, ಮತ್ತೊಂದು ಲೇಖನದಲ್ಲಿ ಆರ್.ಎಮ್.ಹಡಪದರ ಶಿಲ್ಪ ಮತ್ತು ಪ್ರಿಂಟ್‌ಗಳ ಬಗ್ಗೆ ಹೇಳಲಾಗಿದೆ. ಹೀಗೆ ಒಟ್ಟು ೧೯ ಲೇಖನಗಳು ವಿವಿಧ ವಿಷಯಗಳನ್ನು ಪ್ರಸ್ತುತ ಪಡಿಸುತ್ತವೆ.

**ನೋಟ – ಪಲ್ಲಟ :**

ಕಲಾವಿಮರ್ಶೆಯ ಬಗೆಗಿರುವ ಈ ಕೃತಿಯಲ್ಲಿ ಶ್ರೀ.ಎಚ್.ಎ.ಅನಿಲಕುಮಾರ ಬರೆದ ಹತ್ತುಲೇಖನಗಳಿವೆ.[೯೭] ಚಿತ್ರಕಲೆಯ ಪರಿಭಾಷೆ, ಸಹೃದಯನ ಅನುಭವದ ಪರಿಮಿತಿ, ರಸಾನುಭವದ ಕಲ್ಪನೆ, ಕಲಾಕೃತಿಯೊಂದನ್ನು ನೋಡುವ ರೀತಿ, ಪರಿಭಾವಿಸುವ ಶಕ್ತಿ, ಕಲಾವಿದ ಮತ್ತು ಕೃತಿಯೊಂದಿಗಿನ ಸಂಬಂಧಗಳು, ಕಲೆ ವ್ಯಾವಹಾರಿಕವಾಗಿ ಬಳಕೆಗೊಳ್ಳುವ ಪರಿಣಾಮಗಳು ಇಲ್ಲಿ ಬಿಂಬಿಸಿವೆ. ಕೃತಿಯೊಂದರ ವಿಮರ್ಶೆ, ಚರ್ಚೆ ಮತ್ತು ಮೌಲ್ಯಗಳ ಅಂತರಾವಲೋಕನಗಳನ್ನು ಇಲ್ಲಿನ ಲೇಖನಗಳು ಹೇಳುತ್ತವೆ. ಇಲ್ಲಿನ ಬರವಣಿಗೆಯಲ್ಲಿ ಭಿನ್ನತೆ ಇದ್ದು, ಕಲಾ ಪ್ರಪಂಚಕ್ಕೆ ಬೇರೆಯದೇ ಆದ ತಾಂತ್ರಿಕ ಭಾಷೆಯನ್ನು ಬಳಸಿರುವುದು ಇಲ್ಲಿ ಕಾಣಬಹುದು. ದೃಶ್ಯಕಲೆಯ ಪರಿಭಾವನೆಯ ಬಗೆಗೆ ಹೊಸನೋಟ, ಹೊಸ ಚಿಂತನೆಯನ್ನು ರೂಪಿಸುವ ಪ್ರಯತ್ನ ಇಲ್ಲಿಯ ಲೇಖನಗಳಲ್ಲಿ ಕಂಡು ಬರುತ್ತದೆ. ಚಿತ್ರಕಲಾ ಸಾಹಿತ್ಯದ ದೃಷ್ಟಿಯಿಂದ ಮತ್ತು ಕಲಾ ವಿಮರ್ಶೆಯ ಹಿನ್ನೆಲೆಯಲ್ಲಿ ಮಹತ್ವದ ಕೃತಿಯಾಗಿ ಇದು ಕಂಡು ಬರುತ್ತದೆ.

---

೯೬. ಕೆ.ವಿ.ಸುಬ್ರಹ್ಮಣ್ಯ : ಕಲಾ ಸಂವೇದನೆಯ ಒಳನೋಟಗಳು : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೭

೯೭. ಎಚ್.ಎ.ಅನಿಲಕುಮಾರ : ನೋಟ ಪಲ್ಲಟ : ಅಭಿನವ ಪ್ರಕಾಶನ, ಬೆಂಗಳೂರು-೧೯೯೮

**ಆಲೇಖ್ಯ :**

ಚಿತ್ರಕಲೆಯ ವಿವಿಧ ಆಯಾಮಗಳಿಗೆ ಸಂಬಂಧಿಸಿದ ಒಟ್ಟು ಹದಿನಾರು ಲೇಖನಗಳು ಇರುವ ಆಲೇಖ್ಯ ಕೃತಿಯನ್ನು ಅ.ಲ.ನರಸಿಂಹನ್ ರಚನೆ ಮಾಡಿದ್ದಾರೆ.[೯೮] ವಿವಿಧ ಸಂದರ್ಭಗಳಲ್ಲಿ ಬರೆದ ಮತ್ತು ಅಲ್ಲಲ್ಲಿ ಪ್ರಬಂಧ ಮಂಡಿಸಿದ ವಿಷಯಗಳನ್ನು ಒಟ್ಟಾಗಿ ಆಲೇಖ್ಯ ಎಂಬ ಹೆಸರಿನಲ್ಲಿ ಪ್ರಕಟಿಸಲಾಗಿದೆ. ಇಲ್ಲಿನ ಲೇಖನಗಳಲ್ಲಿ ಶಿಷ್ಟಪದ ಚಿತ್ರಕಲೆಯು ಹೇಗೆ ಹುಟ್ಟಿಕೊಂಡಿತು, ಅದರ ರೀತಿನೀತಿಗಳೇನು? ಜನಪದ ಕಲೆಯಿಂದ ಹೇಗೆ ಭಿನ್ನವಾಗಿದೆ ಎನ್ನುವ ಅಂಶಗಳನ್ನು ಹೇಳಲಾಗಿದೆ. ಜೊತೆಗೆ ವಿಜಯನಗರ, ಮೈಸೂರು ಅರಸರ ಕಾಲದಲ್ಲಿ ಬೆಳೆದ ಶಿಷ್ಟಪರಂಪರೆಯ ಚಿತ್ರಕಲೆಯನ್ನು ಕುರಿತು ವಿವೇಚಿಸಲಾಗಿದೆ. ಈ ಕಾಲದ ದೇವಾಲಯಗಳಲ್ಲಿ ರಚನೆಯಾದ ಅಂದಿನ ಕಾಲದ ಚಿತ್ರಗಳಲ್ಲಿ ಹಂಪೆ, ಲೇಪಾಕ್ಷಿ, ಸಿರಾ, ಸಿಬಿ ದೇವಾಲಯಗಳ ಚಿತ್ರಗಳ ಬಗ್ಗೆ ಚರ್ಚಿಸಲಾಗಿದೆ. ಅಲ್ಲದೆ ಕರ್ನಾಟಕದ ಪ್ರಾಚೀನ ಚಿತ್ರಕಲೆಯನ್ನು ಧಾರ್ಮಿಕ ಹಿನ್ನೆಲೆಯಲ್ಲಿ ವಿಂಗಡಿಸಿ, ಶೈವ, ವೈಷ್ಣವ ಪರವಾದ ಚಿತ್ರಗಳೆಂದು ಹೇಳಿದೆ. ಅಲ್ಲದೆ ಕರ್ನಾಟಕದಲ್ಲಿ ಕಂಡು ಬರುವ ಪ್ರಾಚೀನ ಭಿತ್ತಿಚಿತ್ರಗಳಲ್ಲಿ ಹೆಚ್ಚಾಗಿ ವೈಷ್ಣವ ಪರವಾದ ಚಿತ್ರಗಳಿವೆ ಎಂದು ತಿಳಿಸುತ್ತಾರೆ. ಯಾವ ದೇವರಗುಡಿ ಇರುತ್ತದೋ ಆ ದೇವರಿಗೆ ಸಂಬಂಧಿಸಿದ ಚಿತ್ರಗಳು ಹೆಚ್ಚಾಗಿರುತ್ತವೆ. ವೈಷ್ಣವ ದೇವಾಲಯಗಳಲ್ಲಿ ವೈಷ್ಣವ ಪರವಾದ ಮತ್ತು ಶೈವ ದೇವಾಲಯಗಳಲ್ಲಿ ಶೈವ ಪರವಾದ ಚಿತ್ರಗಳು ಕಂಡು ಬರುತ್ತವೆ ಎಂದು ಈ ಲೇಖನಗಳಲ್ಲಿ ಹೇಳಿದ್ದಾರೆ.

ಕರ್ನಾಟಕದ ಚಿತ್ರಕಲೆಯಲ್ಲಿ ಸಂಸ್ಕೃತಿ ಲೇಖನದಲ್ಲಿ ಜನಜೀವನದ ರೀತಿ-ನೀತಿಗಳು, ಧಾರ್ಮಿಕ ಅಂಶಗಳು, ವೇಷ-ಭೂಷಣಗಳು, ವಸ್ತು ಆಯುಧಗಳು ಹೀಗೆ ಅನೇಕ ಅಂಶಗಳನ್ನು ಗಮನಿಸಲಾಗಿದೆ. ಸಂಪ್ರದಾಯ ಚಿತ್ರಕಲೆ ಮುಂದುವರಿದ ರೂಪಗಳು ಎನ್ನುವ ಲೇಖನದಲ್ಲಿ ವಿಜಯನಗರ ಕಾಲದಿಂದ ತೊಡಗಿ ಈ ಶತಮಾನದ ಆರಂಭ ಕಾಲದವರೆಗಿನ ಚಿತ್ರಕಲೆಯಲ್ಲಿ ಬದಲಾದ ಶೈಲಿ, ಮುಂದುವರೆದ ಚಿತ್ರರೂಪಗಳನ್ನು ಕುರಿತು ಸ್ಥೂಲವಾಗಿ ಹೇಳಲಾಗಿದೆ. ಇಲ್ಲಿ ಚಿತ್ರಕಲೆಯ ತಾಂತ್ರಿಕ ಮತ್ತು ಕಲಾತ್ಮಕ ಅಂಶಗಳಿಗಿಂತ ಅಂದಿನವರು ಅವುಗಳ ದೈವಿಕತೆ, ಧಾರ್ಮಿಕ ವಿಚಾರ ಮತ್ತು ಪೂಜಾರ್ಹತೆಯ ಸಂಗತಿಗಳಿಗೆ ಹೆಚ್ಚಿನ ಮಹತ್ವ ನೀಡುತ್ತಿದ್ದರು ಎಂದು ತಿಳಿಸುತ್ತಾರೆ. ನವ್ಯಕಲೆಯನ್ನು ಕುರಿತ ಲೇಖನದಲ್ಲಿ ಪಾಶ್ಚಾತ್ಯ ನವ್ಯಕಲಾ ಶೈಲಿಗಳನ್ನು ಕುರಿತು ವಿವೇಚಿಸಲಾಗಿದೆ. ಹೀಗೆ ಇಲ್ಲಿನ ಲೇಖನಗಳು ಕಲೆಯ ಕುರಿತು ಹಲವು ಅಂಶಗಳನ್ನು ತಿಳಿಸಿ ಕೊಡುತ್ತವೆ.

**ಚಿತ್ರ ಚಿತ್ತ :**

ಚಿ.ಸು.ಕೃಷ್ಣಶೆಟ್ಟಿಯವರು ರಚಿಸಿದ ಈ ಕೃತಿಯು ಕಲಾವಿಮರ್ಶೆಯ ದೃಷ್ಟಿಯಿಂದ ಗಮನಾರ್ಹವಾದುದಾಗಿದೆ.[೯೯] ಇದರಲ್ಲಿ ಅವರೇ ಬರೆದಿರುವ ಹನ್ನೆರಡು ಲೇಖನಗಳಿದ್ದು, ಅವು ಕಲೆಯ ವಿವಿಧ ಆಯಾಮಗಳನ್ನು ತೆರೆದಿಡುತ್ತವೆ. ಕಲೆಯಲ್ಲಿ ನಗ್ನತೆ ಎನ್ನುವ ಲೇಖನದಲ್ಲಿ ಪ್ರಾಚೀನ ಕಾಲದ ಕೃತಿಗಳಲ್ಲಿನ ನಗ್ನತೆಯ ಅಂಶವನ್ನು ಸಮಕಾಲೀನ ಕಲೆಯ ನಗ್ನತೆಯೊಂದಿಗೆ ತೌಲನಿಕವಾಗಿ ವಿವೇಚಿಸಲಾಗಿದೆಯಲ್ಲದೇ ಜನರ ಮನೋಭೂಮಿಕೆಯನ್ನು ಈ ಹಿನ್ನೆಲೆಯಲ್ಲಿ ಪ್ರಶ್ನಿಸುವ ಪ್ರಯತ್ನ ಮಾಡಿದ್ದಾರೆ.

---

೯೮. ಡಾ.ಅ.ಲ.ನರಸಿಂಹನ್ : ಆಲೇಖ್ಯ : ಸಂಯೋಜಿತ ಪ್ರಕಾಶನ, ಬೆಂಗಳೂರು-೧೯೯೯

೯೯. ಚಿ.ಸು.ಕೃಷ್ಣಶೆಟ್ಟಿ : ಚಿತ್ರ-ಚಿತ್ತ : ಇಳಾ ಪ್ರಕಾಶನ; ಬೆಂಗಳೂರು-೨೦೦೦

ಚಿಕಣಿ ಚಿತ್ರಗಳು ಮತ್ತು ಸಮಕಾಲೀನ ಚಿತ್ರಗಳ ದಾಂಪತ್ಯ ಲೇಖನದಲ್ಲಿ ಅವುಗಳ ವಸ್ತುವಿಷಯ, ರೇಖಾಲಾವಣ್ಯ ಹಾಗೂ ವೈರುಧ್ಯಗಳ ಬಗೆಗೆ ವಿವೇಚಿಸಲಾಗಿದೆ. ಸಾಹಿತ್ಯ ಮತ್ತು ಚಿತ್ರಕಲೆ ಲೇಖನದಲ್ಲಿ ಸಾಹಿತ್ಯ ಕೃತಿಯಗಳಲ್ಲಿ ಉಲ್ಲೇಖಗೊಂಡ ಚಿತ್ರಕಲಾ ವಿಷಯಗಳನ್ನು ಪ್ರತಿಬಿಂಬಿಸಿದ್ದರೆ, ನಮ್ಮ ಸಮಕಾಲೀನ ಕಲೆಯಲ್ಲಿನ ಪ್ರವೃತ್ತಿಗಳು ವಿಷಯದಡಿ ಸಮಕಾಲೀನ ಕಲೆಯ ಕೃತಿರಚನೆ, ತಾಂತ್ರಿಕತೆ, ವಸ್ತುವಿಷಯಗಳಲ್ಲದೆ ಮನೋಭೂಮಿಕೆಗಳ ಕುರಿತಾಗಿ ಚರ್ಚಿಸಿದ್ದಾರೆ. ಗ್ರಾಫಿಕ್ ಕಲೆಯ ಹುಟ್ಟು, ಬೆಳವಣಿಗೆ, ಅದರ ಪ್ರಕಾರಗಳು ರಚನಾ ತಂತ್ರಗಾರಿಕೆ, ಲಿಥೋ, ಎಚ್ಚಿಂಗ್, ಸ್ಕ್ರೀನ್ ಪ್ರಿಂಟಿಂಗ್, ಉಡ್‌ಕಟ್ ಮುಂತಾದ ವಿಷಯಗಳ ಜೊತೆಗೆ ಚಿತ್ರಕಲೆಗೆ ಹೋಲಿಸಿದಾಗ ಇನ್ನೂ ಶೈಶವಾವಸ್ಥೆಯಲ್ಲಿಯೇ ಈ ಕಲಾ ಪ್ರಕಾರ ಉಳಿದಿದೆ ಎನ್ನುವ ಅಂಶವನ್ನು ಶೈಶವಾವಸ್ಥೆಯಲ್ಲಿಯೇ ಬದುಕುತ್ತಿರುವ ಗ್ರಾಫಿಕ್ ಕಲೆ ಲೇಖನದಲ್ಲಿ ಹೇಳಿದ್ದಾರೆ.

ದೃಶ್ಯ ಗೋಚರವಾಗುವ ಕಲಾ ಪ್ರಕಾರಗಳಾದ ಚಿತ್ರಕಲೆ, ಶಿಲ್ಪಕಲೆಗಳ ವಿಷಯವಾಗಿ ದೃಶ್ಯಕಲೆ ಎಂದರೇನು? ಲೇಖನದಲ್ಲಿ ಹೇಳಿದ್ದರೆ, ಪರಂಪರೆಯಲ್ಲಿನ ಪಲ್ಲಟ ವಿಷಯದಡಿಯಲ್ಲಿ ಪ್ರಾಚೀನ ಕಾಲದಿಂದ ಇಂದಿನವರೆಗೆ ಕಲಾವಲಯಗಳಲ್ಲಿ ಹೇಗೆ ಬದಲಾವಣೆಗಳು ಉಂಟಾದವು, ವಿಷಯ ಆಯ್ಕೆ ಮತ್ತು ಮೌಲ್ಯಗಳಲ್ಲಿ ಯಾವ ರೀತಿಯ ಸ್ಥಿತ್ಯಂತರಗಳುಂಟಾದವು ಎಂದು ಬಿಂಬಿಸಲಾಗಿದೆ. ಪಾಶ್ಚಾತ್ಯ ಕಲಾವಿದರಲ್ಲಿ ಪ್ರಖ್ಯಾತನಾದ ಪಾಬ್ಲೋ ಪಿಕಾಸೋ ರಚಿಸಿದ ಕೃತಿಗಳಲ್ಲಿ ಗೆರ್ನಿಕಾ ಚಿತ್ರವು ವಿಶ್ವಪ್ರಸಿದ್ಧ ಕೃತಿಯಾಗಿದೆ. ಇದನ್ನು ಫ್ರಾನ್ಸಿನ ಅಂತರ್ ಯುದ್ಧದ ಹಿನ್ನೆಲೆಯಲ್ಲಿ ರಚನೆ ಮಾಡಲಾಗಿದೆ. ಯುದ್ಧದ ಭೀಕರತೆ, ಕ್ರೌರ್ಯ, ದಯನೀಯತೆ, ಅಸಹಾಯಕತೆ, ನಂತರದ ಯಾತನಾಮಯ ಪರಿಸ್ಥಿತಿ ಮುಂತಾದ ಅಂಶಗಳನ್ನು ಗೆರ್ನಿಕಾ ಕಲಾಕೃತಿಯು ಪರಿಣಾಮಕಾರಿಯಾಗಿ ಹಿಡಿದಿಟ್ಟಿದೆ. ಈ ಅಂಶಗಳನ್ನು ಯುದ್ಧಗಳ ಮೇಲೆ ಯುದ್ಧ ಸಾರಿದ ಗೆರ್ನಿಕಾ ಲೇಖನದಲ್ಲಿ ಚರ್ಚಿಸಲಾಗಿದೆ.

ಕರ್ನಾಟಕದಲ್ಲಿ ಆಧುನಿಕ ಶಿಲ್ಪಕಲೆಯು ಬೆಳೆದು ಬಂದ ರೀತಿ, ಈ ವಿಷಯದ ಆಯ್ಕೆ, ಆಧುನಿಕ ಶಿಲ್ಪಕಲಾವಿದರು, ಬದಲಾದ ಮಾಧ್ಯಮ, ದೃಷ್ಟಿಕೋನ ಮುಂತಾದ ಅಂಶಗಳನ್ನು ಕರ್ನಾಟಕದಲ್ಲಿ ಆಧುನಿಕ ಶಿಲ್ಪಕಲೆ ಲೇಖನದಲ್ಲಿ ವಿವೇಚಿಸಲಾಗಿದೆ. ನವ್ಯಕಲೆಯ ಕೃತಿಗಳ ಕುರಿತಾಗಿ ಸಾಮಾನ್ಯ ಜನರು ಮಾತ್ರವಲ್ಲದೆ ವಿದ್ಯಾವಂತರೇ ತಿರಸ್ಕಾರದ ಭಾವನೆ ತಾಳಿರುವುದು ಅದರ ಬಗೆಗಿನ ತಿಳುವಳಿಕೆಯ ಕೊರತೆಯಿಂದಾಗಿ. ಚಿತ್ರಕಲೆಯನ್ನು ಹೇಗೆ ನೋಡಬೇಕು? ಹೇಗೆ ಆಸ್ವಾದಿಸಬೇಕು? ಅದಕ್ಕಾಗಿಯೇ ಪ್ರತ್ಯೇಕ ವ್ಯಾಕರಣ ಪದ್ಧತಿ ಇದ್ದು ಅದನ್ನು ಅನುಸರಿಸಬೇಕು ಎನ್ನುವ ಅಂಶಗಳನ್ನು 'ನವ್ಯಕಲೆಯನ್ನು ಆಸ್ವಾದಿಸುವ ಕಲೆ' ಲೇಖನದಲ್ಲಿ ಚರ್ಚಿಸಿದ್ದಾರೆ.

ಭಾರತದ ಸಮಕಾಲೀನ ರೇಖಾಚಿತ್ರಗಳು ಲೇಖನದಲ್ಲಿ ಆಧುನಿಕ ಚಿತ್ರಕಲೆಯ ರೇಖಾವಿನ್ಯಾಸವನ್ನು ಬಿಂಬಿಸಿದರೆ, ಆಧುನಿಕ ಕಲೆಯಲ್ಲಿನ ವಿಶಿಷ್ಟ ಪ್ರಯೋಗಗಳು ಸಮಕಾಲೀನ ಕಲೆಯಲ್ಲಿ ಹೇಗೆ ಸೀಮಾತೀತವಾಗಿ ಕೃತಿರಚನೆಯಾಗುತ್ತಿವೆ, ವಿಷಯದ ಆಯ್ಕೆ ಮತ್ತು ಮಾಧ್ಯಮಗಳ ಬಳಕೆಯಲ್ಲಿ ಹೇಗೆ ವಿವಿಧತೆ ತುಂಬಿಕೊಂಡಿದೆ ಎನ್ನುವ ಅಂಶಗಳನ್ನು ಹೇಳಿದ್ದಾರೆ. ಇದರ ಜೊತೆಗೆ ಹುಸೇನರ ಸರಸ್ವತಿಚಿತ್ರ, ವೀನಸ್ ಆಫ್ ವಿಲೆನ್ ಡಾರ್ಫ, ಡೇವಿಡ್, ಯಕ್ಷಿವಿಗ್ರಹ, ರಾಜಸ್ಥಾನದ ಶೈಲ ಜೋಯಿಲ್, ಹೆಬ್ಬಾರರ ಯುದ್ಧ ಮತ್ತು ಶಾಂತಿ, ಲೂಯಿಸ್‌ರ ಲೇಡಿ ಆ್ಯಂಡ್ ಹಾರ್ಸ, ಎನ್‌ಕೌಂಟರ್, ಬಾದಾಮಿ ಸರಣಿಯ ಕೃತಿಗಳು, ಗೆರ್ನಿಕಾ ಮುಂತಾದ ಕೃತಿಗಳ ಬಗ್ಗೆ ವಿಮರ್ಶೆ ಮಾಡಿದ್ದಾರೆ.

**ಅಭಿನವ ಗುಪ್ತ :**

ಅಭಿನವಗುಪ್ತ ಮತ್ತು ಅವನ ತಾಂತ್ರಿಕ ನಿಲುವುಗಳನ್ನು ಕುರಿತು ರಚಿತವಾದ ಕೃತಿ ಇದಾಗಿದೆ. ಕಾಶ್ಮೀರದ ರಾಜಲಲಿತಾದಿತ್ಯನು ಅತ್ರಿಗುಪ್ತನಿಂದ ಬಹಳ ಪ್ರಭಾವಿತನಾಗಿ ಆ ವಿದ್ವಾಂಸನನ್ನು ತನ್ನೊಡನೆ ಕಾಶ್ಮೀರಕ್ಕೆ ಬರುವಂತೆ ಕೋರಿದ. ಲಲಿತಾದಿತ್ಯನು ಯಶೋವರ್ಮನ ಮೇಲೆ ಜಯಗಳಿಸಿದ ಕಾಲವನ್ನು ಕ್ರಿಶ. ೭೪೦ ಎನ್ನಲಾಗಿದೆ. ಅತ್ರಿಗುಪ್ತನ ಜೊತೆಗೆ ಅಭಿನವಗುಪ್ತನು ತನ್ನ ತಾತ ವರಾಹ ಗುಪ್ತನನ್ನು ಹೆಸರಿಸುತ್ತಾನೆ. ಆ ಕುಟುಂಬದಲ್ಲಿ ವಿದ್ವತ್ತಿನ ಸಂಪ್ರದಾಯವನ್ನು ತಲೆಮಾರಿನಿಂದ ತಲೆಮಾರಿಗೆ ರಕ್ಷಿಸಿಕೊಂಡು ಬರಲಾಗಿತ್ತು. ಈ ಕೃತಿಯ ಶಿವಾದ್ವಯ ದರ್ಶನದಲ್ಲಿರುವಂತೆ ಅದರ ತಾತ್ವಿಕ ತಳಹದಿಯನ್ನು ಓದುಗರಿಗೆ ಪರಿಚಯ ಮಾಡಿಕೊಡುವ ಪ್ರಯತ್ನ ಈ ಕೃತಿಯಲ್ಲಿದೆ.[೧೦೦]

ರಸ ಮತ್ತು ಧ್ವನಿಯ ನಿರೂಪಣೆ, ನಾಲ್ಕು ಮತ್ತು ಐದನೆಯ ಅಧ್ಯಾಯಗಳಲ್ಲಿ ಬರುತ್ತದೆ. ಮೂರನೆಯ ಅಧ್ಯಾಯವು ರಸ ನಿಷ್ಪತ್ತಿಯ ಕುರಿತು ಹೇಳುತ್ತದೆ. ಈ ಮೂರು ಅಧ್ಯಾಯಗಳು ಈ ಪುಸ್ತಕದ ಕೇಂದ್ರವಾಗಿವೆ. ಅದಕ್ಕೆ ಹಿಂದಿನ ಅಧ್ಯಾಯದಲ್ಲಿ ಅಭಿನವಗುಪ್ತನ ವೈಯಕ್ತಿಕ ಜೀವನ ಮತ್ತು ಕೃತಿಗಳ ಮೇಲಿನ ವಿಮರ್ಶೆಗಳಿವೆ. ಇನ್ನುಳಿದ ಅಧ್ಯಾಯಗಳಲ್ಲಿ ಅವನ ಪ್ರಭಾವ ಮತ್ತು ಭಾರತೀಯ ಚಿಂತನೆಗೆ ಅವನ ಕೊಡುಗೆಗಳನ್ನು ಕುರಿತು ಹೇಳಿದೆ. ಒಬ್ಬ ವ್ಯಕ್ತಿಯಾಗಿ, ಒಬ್ಬ ಸೌಂದರ್ಯಶಾಸ್ತ್ರಜ್ಞನಾಗಿ ಮತ್ತು ಶಿವಾದ್ವಯ ದರ್ಶನದ ಪ್ರತಿಪಾದಕನಾಗಿ ಅಭಿನವಗುಪ್ತನ ಪಾತ್ರ ಏನು ಎಂದು ಗುರುತಿಸುವ ಪ್ರಯತ್ನ ನಂತರದ ಅಧ್ಯಾಯದಲ್ಲಿದೆ. ಕಲಾಕೃತಿಯೊಂದರ ಸೌಂದರ್ಯ, ಕಲಾತ್ಮಕತೆಗಳು, ಮುಖ್ಯವಾಗಿ ಆ ಕೃತಿಯ ವಿಷಯಗಳಲ್ಲಿ ಸಮರಸವಾದ ಐಕ್ಯತೆಯನ್ನು ಹೊಂದಿರುತ್ತವೆ. ಅಭಿನವನು ಹೇಳುವಂತೆ ಕಲೆಯಲ್ಲಿ ಭಾವನೆ ಒಂದು ಮಾನಸಿಕಕ್ರಿಯೆ, ಅದರಲ್ಲಿ ಅನುಭಾವಿಯೊಬ್ಬ ಗ್ರಹಿಸಲು ಪ್ರಯತ್ನಿಸುವ ಕಲ್ಪನೆಯು ಅವನ ಸತತ ಅಭ್ಯಾಸದ ಮೂಲಕ ಕ್ರಮೇಣ ಸ್ಪಷ್ಟಗೊಳ್ಳುತ್ತ ಹೋಗುತ್ತದೆ ಎನ್ನುತ್ತಾನೆ. ಇಂತಹ ವಿಷಯಗಳು ಈ ಕೃತಿಯಲ್ಲಿವೆ.

**ವರ್ಣಾವರಣ :**

ಸಮಕಾಲೀನ ಕಲೆಯ ಬಗ್ಗೆ ಚರ್ಚಿಸುವ ಮತ್ತು ಬರೆಯಬಲ್ಲ ಕಲಾ ಲೇಖಕರಲ್ಲಿ ಚಿ.ಸು. ಕೃಷ್ಣಶೆಟ್ಟಿಯವರು ಒಬ್ಬರಾಗಿದ್ದಾರೆ. ಅಲ್ಲದೆ ಪತ್ರಿಕೆಗಳಲ್ಲಿ ಕಲೆಯ ಬಗ್ಗೆ ಬರೆಯುವ ಲೇಖಕರಲ್ಲಿಯೂ ಇವರು ಪ್ರಮುಖರಾಗಿದ್ದಾರೆ. ಬೆಂಗಳೂರು ಮತ್ತು ಇನ್ನಿತರ ಕಡೆಗೆ ನಡೆಯುವ ಕಲಾ ಪ್ರದರ್ಶನಗಳ ಬಗ್ಗೆ ವಿಮರ್ಶೆಗಳನ್ನು ಕೃಷ್ಣಶೆಟ್ಟಿಯವರು ಬರೆದು ಪ್ರಜಾವಾಣಿ ಪತ್ರಿಕೆಗಳಲ್ಲಿ ಪ್ರಕಟಿಸುತ್ತ ಬಂದಿದ್ದಾರೆ. ಈ ಎಲ್ಲ ಲೇಖನಗಳನ್ನು ಒಟ್ಟುಗೂಡಿಸಿ ಈ ಕೃತಿಯಲ್ಲಿ ಪ್ರಕಟಿಸಲಾಗಿದೆ.[೧೦೧] ಕಲಾ ಪ್ರದರ್ಶನಗಳ ಕುರಿತಾದ ಈ ಲೇಖನಗಳಲ್ಲಿ ವಿವಿಧ ಕಲಾ ಪ್ರಕಾರಗಳಿಗೆ ಸಂಬಂಧಿಸಿದ ವಿವರಗಳಿವೆ. ಚಿತ್ರ, ಶಿಲ್ಪ, ಗ್ರಾಫಿಕ್, ಕೋಲಾಜ್ ಮಾತ್ರವಲ್ಲದೇ ಪ್ರತಿಷ್ಠಾಪನೆ ಕಲೆಯ ಪ್ರದರ್ಶನಗಳ ಬಗ್ಗೆಯೂ ಲೇಖನಗಳಿವೆ. ಹೊಸ್ತಿಲಲ್ಲಿ ಗ್ರಾಫಿಕ್ ಕೃತಿಗಳ ವೈಭವ, ವಿಲಕ್ಷಣವಾದ ಮನಸ್ಸಿಗೆ ತಂತ್ರದ ನೆರವು, ವಿಭಿನ್ನ ಕತೆ ಹೇಳುವ ರೂಪಕಗಳ ಜಗತ್ತು, ರೇಖೆಗಳ ಸಾನಿಧ್ಯದಲ್ಲಿ ಅನುಭಾವಿಕ ಹುಡುಕಾಟ, ಉದಯೋನ್ಮುಖರದ್ದೇ ಅಧಿಪತ್ಯ, ಪರಿಚಿತರದ್ದು ಬರಿಯ ಪಾರುಪತ್ಯ, ಹೊಸ ಪಿರಮಿಡ್ ಏರಿದ ಹಳೆಯ ಹುಲಿ, ಮಾತಿಗೆ ದಕ್ಕದಿದ್ದು ಮನಸ್ಸಿಗೆ ತಕ್ಕದಿದ್ದು, ಹೀಗೆ ವಿವಿಧ ಲೇಖನಗಳಿವೆ.

---

೧೦೦. ಎನ್. ಬಾಲಸುಬ್ರಹ್ಮಣ್ಯ : ಅಭಿನವಗುಪ್ತ ; ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು– ೨೦೦೦

೧೦೧. ಚಿ.ಸಿ.ಕೃಷ್ಣಶೆಟ್ಟಿ : ವರ್ಣಾವರಣ : ಚಿತ್ತಾರ ಪ್ರಕಾಶನ, ಬೆಂಗಳೂರು–೨೦೦೧

ಈ ಎಲ್ಲ ಲೇಖನಗಳಲ್ಲಿ ಚಿತ್ರಕಲೆಯೊಂದಿಗೆ ಇನ್ನಿತರ ಕಲಾ ಪ್ರಕಾರಗಳನ್ನು ಎದುರಾಗಿಸಿ ನೋಡುವ ದೃಷ್ಟಿ ದೋರಣೆಯಿಂದಾಗಿ ಇಲ್ಲಿನ ಲೇಖನಗಳಿಗೆ ವಿಶೇಷ ಮಹತ್ವವಿದೆ. ಚಿತ್ರಕಲೆಯ ಅಭಿವ್ಯಕ್ತಿ ಮತ್ತು ಗ್ರಹಿಕೆಯನ್ನು ಕುರಿತು ಸಾಮಾಜಿಕ ಸಮಸ್ಯೆಗಳು ಈ ವಿಮರ್ಶಾ ಲೇಖನಗಳಲ್ಲಿ ಚರ್ಚಿತವಾಗಿವೆ. ಅಭಿರುಚಿ, ನಿರ್ಮಾಣ, ಸಮಕಾಲೀನ ಎಚ್ಚರ, ಕಲೆಯ ಸಾಮಾಜಿಕತೆಯಂತಹ ಮುಖ್ಯ ತಾತ್ವಿಕ ನೆಲೆಗಳು ಇಲ್ಲಿನ ವಿಮರ್ಶೆಗೆ ವಿಶಿಷ್ಟತೆಯನ್ನು ತಂದುಕೊಟ್ಟಿವೆ.

**ದೃಶ್ಯಕಲಾ :**

ದೃಶ್ಯಕಲೆಯ ಕುರಿತು ವಿವಿಧ ವಿಷಯಗಳನ್ನು ತಿಳಿಸಿಕೊಡುವ ಲೇಖನಗಳಿರುವ ಈ ಪುಸ್ತಕವನ್ನು ಎನ್.ಮರಿಶಾಮಾಚಾರ್ ಬರೆದಿದ್ದಾರೆ.[೧೦೨]ಇದರಲ್ಲಿರುವ ಹದಿನೆಂಟು ಲೇಖನಗಳಲ್ಲಿ ಕೆಲವು ಚಿತ್ರಕಲಾ ಸಾಹಿತ್ಯಕ್ಕೆ ಸಂಬಂಧಿಸಿದ್ದರೆ, ಮತ್ತೆ ಕೆಲವು ಶಾಸ್ತ್ರ ಗ್ರಂಥಗಳು ಅವುಗಳಲ್ಲಿನ ಕಲಾ ವಿಚಾರಗಳಿಗೆ ಸಂಬಂಧಿಸಿವೆ. ನಾಲ್ಕು ಲೇಖನಗಳು ಕಲಾವಿದರ ಕುರಿತು ಪರಿಚಯಾತ್ಮಕ ವಿವರ ನೀಡುತ್ತವೆ. ಇದಲ್ಲದೆ ಕಲಾವಿಮರ್ಶೆ ಮತ್ತು ಆಧುನಿಕ ಕಲೆಯ ಬಗ್ಗೆಯೂ ಇಲ್ಲಿ ಲೇಖನಗಳಿವೆ. ಅದೇ ರೀತಿ ಜನಪದ ಕಲೆಯ ಬಗ್ಗೆಯೂ ಲೇಖನ ಇಲ್ಲಿವೆ. ಸಾಹಿತ್ಯದಲ್ಲಿ ಚಿತ್ರಕಲೆ ಲೇಖನವು ಇನ್ನುಳಿದ ಲೇಖನಗಳಿಗಿಂತ ದೊಡ್ಡದಾಗಿದ್ದು ಹೆಚ್ಚಿನ ಮಾಹಿತಿಯನ್ನು ಒಳಗೊಂಡಿದೆ. ರಾಮಾಯಣ, ಮಹಾಭಾರತ, ಪುರಾಣಗಳು, ಅದರಲ್ಲಿ ವಿಷ್ಣುಧರ್ಮೋತ್ತರಪುರಾಣ, ಸಮರಾಂಗಣ ಸೂತ್ರಧಾರ, ಕಾಶ್ಯಪ ಶಿಲ್ಪಶಾಸ್ತ್ರ, ಮಾನಸಾರ, ಅಭಿಲಷಿತಾರ್ಥ ಚಿಂತಾಮಣಿ, ಶಿಲ್ಪರತ್ನ, ಅರ್ಥಶಾಸ್ತ್ರ ಮುಂತಾದ ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖವಾಗಿರುವ ಚಿತ್ರಕಲಾ ವಿಚಾರಗಳನ್ನು ಹೇಳಲಾಗಿದೆ.

ಆಧುನಿಕ ಕಲೆಯ ಬಗೆಗಿರುವ ಲೇಖನಗಳಲ್ಲಿ ಭಾರತದಲ್ಲಿ ಆಧುನಿಕ ಕಲೆಯ ಆರಂಭ, ಅದರ ಹಿನ್ನೆಲೆ, ಕಂಪನಿ ಕಲಾಶೈಲಿ, ಬ್ರಿಟೀಷ ಕಾಲದ ಕಲೆ, ರವಿವರ್ಮ ಮತ್ತು ಅವನ ಕಲೆ, ಬಂಗಾಲ ಕಲಾಶೈಲಿ, ಇವುಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಆಧುನಿಕ ಕಲೆಯನ್ನು ಹೇಳಲಾಗಿದೆ. ಇದರಲ್ಲಿ ಅಮೃತಾ ಶೇರ್‌ಗಿಲ್, ಜಾಮಿನಿರಾಯ್, ನಂದಲಾಲ್‌ಬೋಸ್ ಮುಂತಾದವರ ಬಗ್ಗೆ ಹೇಳಿದೆ. ಜನಪದ ಕಲೆಯ ಬಗ್ಗೆ ಇರುವ ಲೇಖನಗಳಲ್ಲಿ ಶಿಷ್ಟಪದ ಕಲೆಗಿಂತ ಇದು ಹೇಗೆ ಭಿನ್ನವಾಗಿದೆ ಎನ್ನುವ ಅಂಶಗಳನ್ನು ಹೇಳುತ್ತ ಜನಪದ ಕಲಾ ಪ್ರಕಾರಗಳನ್ನು ವಿವೇಚಿಸಲಾಗಿದೆ. ಇದರಲ್ಲಿ ಹಬ್ಬಹರಿದಿನ, ಮದುವೆ ಮುಂಜಿವೆ, ಜಾತ್ರೆ–ಉತ್ಸವಗಳಂತಹ ಸಂದರ್ಭಗಳಲ್ಲಿ ರಚನೆಯಾಗುವ ಜನಪದ ಚಿತ್ರಗಳನ್ನು ಸ್ಥೂಲವಾಗಿ ಹೇಳಿ ಪ್ರಾದೇಶಿಕ ಜನಪದ ಚಿತ್ರಶೈಲಿಗಳನ್ನು ಕುರಿತು ಹೇಳಿದೆ.

**ಚತುಷ್ಷಷ್ಠಿ ಕಲೆ :**

ಕಲೆ ಮತ್ತು ಕಲಾ ಪ್ರಕಾರಗಳನ್ನು ಕುರಿತು ಲೇಖನಗಳು ಅಪರೂಪವಾಗಿರುವ ಈ ಸಂದರ್ಭದಲ್ಲಿ ಟಿ.ಎಸ್.ಸತ್ಯವತಿ ಬರೆದಿರುವ[೧೦೩]ಈ ಕೃತಿಯಲ್ಲಿ ಒಟ್ಟು ಎಂಟು ಲೇಖನಗಳಿವೆ. ಇದರಲ್ಲಿರುವ ಲೇಖನಗಳು ಚಿತ್ರಕಲೆ, ಶಿಲ್ಪಕಲೆ, ವಾಣಿಜ್ಯ ಕಲೆ, ಕಲಾಸಾಹಿತ್ಯ, ವಿಮರ್ಶೆ ಹೀಗೆ ವಿವಿಧ ವಿಷಯಗಳಿಗೆ ಸಂಬಂಧಿಸಿದವುಗಳಾಗಿವೆ. ಕಲಾದರ್ಶನ, ಕಲಾವಲೋಕನ, ವಿಜ್ಞಾನಕಲೆ, ಲಲಿತಕಲೆ ಮತ್ತು ಕುಶಲಕಲೆ, ಲಲಿತಕಲೆಗಳು, ಕುಶಲಕಲೆಗಳು, ವಾಣಿಜ್ಯ ಕಲೆಗಳು, ವಿನೋದ ಕಲೆಗಳು, ಸಂಕೀರ್ಣ ಕಲೆಗಳು ಎಂಬ ಲೇಖನಗಳು ವಿವಿಧ ವಿಷಯಗಳನ್ನು ಕುರಿತು ಹೇಳುತ್ತವೆ. ಕಲೆ ಎಂದರೇನು? ಕಲೆ ಶಬ್ದದ ನಿಷ್ಪತ್ತಿ, ವಿದ್ಯೆ, ಕಲೆ, ಶಿಲ್ಪಕಲೆ, ಕಲೆಯ ಉತ್ಕೃಷ್ಟತೆ, ಸಮಷ್ಟಿ ದೃಷ್ಟಿ, ಕಲೆಕಾವ್ಯ, ಚಿತ್ರಾಶ್ವಯೋಗ,

---

೧೦೨. ಎನ್.ಮರಿಶಾಮಾಚಾರ್ : ದೃಶ್ಯಕಲಾ : ಸಿ.ಎಂ.ಎನ್.ಪ್ರಕಾಶನ; ಬೆಂಗಳೂರು–೨೦೦೧

೧೦೩. ಟಿ.ಎಸ್.ಸತ್ಯವತಿ : ಚತುಷ್ಷಷ್ಠಿ ಕಲೆ : ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಅಧ್ಯಯನ ಪೀಠ, ಬೆಂಗಳೂರು–೨೦೦೨

ನೃತ್ಯ-ನಾಟ್ಯ, ಕ್ರಿಯಾಕಲ್ಪ, ವಾದ್ಯ, ಮಣಿಭೂಮಿಕಾ ಕರ್ಮ, ಧಾತುವಾದ, ಯಂತ್ರ ಮಾತೃಕಾ ಮುಂತಾದ ಉಪವಿಷಯಗಳು ಸ್ಥೂಲ ವಿವರಣೆಯೊಂದಿಗೆ ಹೇಳಲ್ಪಟ್ಟಿವೆ. ಈ ಕೃತಿಯ ರಚನೆಯ ಹಿನ್ನೆಲೆಯಲ್ಲಿ ಲೇಖಕರು ಅನೇಕ ಪ್ರಾಚೀನ ಶಾಸ್ತ್ರ ಗ್ರಂಥಗಳು, ಸಮಕಾಲೀನ ಕೃತಿಗಳನ್ನು ಅಧ್ಯಯನ ಮಾಡಿದ್ದಾರೆ. ತಾವು ಅಧ್ಯಯನ ಮಾಡಿದ ಮತ್ತು ಬರವಣಿಗೆಯಲ್ಲಿ ಉಲ್ಲೇಖಿಸಿದ ಪುಸ್ತಕಗಳ ಗ್ರಂಥ ಋಣವನ್ನು ಕೊನೆಯಲ್ಲಿ ಕೊಟ್ಟಿದ್ದು ಈ ಕೃತಿಯ ಮೌಲ್ಯವನ್ನು ಹೆಚ್ಚಿಸಿದೆ.

**ಕಲಾ ಮನೋವಿಜ್ಞಾನ :**

ಕನ್ನಡದಲ್ಲಿ ಕಲೆಯ ಬಗೆಗೆ ಬರವಣಿಗೆಗಳೇ ಕಡಿಮೆ ಇರುವಾಗ ಕಲೆ ಮತ್ತು ಮನೋವಿಜ್ಞಾನಗಳ ಕುರಿತಾಗಿ ಈಕೃತಿಯನ್ನು ಹೊರತಂದಿರುವ ಎನ್.ಮರಿಶಾಮಾಚಾರ್ ಪ್ರಯತ್ನ ಶ್ಲಾಘನೀಯವೇ ಆಗಿದೆ.[೧೦೪]ಚಿಕ್ಕದಾದ ಈ ಕೃತಿಯಲ್ಲಿ ಕಲೆ ಮತ್ತು ಮನೋವಿಜ್ಞಾನಗಳ ಬಗ್ಗೆ ಹದಿನಾಲ್ಕು ಲೇಖನಗಳಿವೆ. ಮೊದಲನೆಯ ಲೇಖನ ಕಲಾಕಾರ್ಯ ಎಂಬುದಾಗಿದೆ. ಕಲೆ ಮಾನವನಿಗೆ ಮೂಲಭೂತ ವಿಷಯಗಳನ್ನು ಕಂಡುಕೊಳ್ಳಲು, ನೆರವಾಗಿದೆ. ಹೊಸ ದೃಷ್ಟಿ ಮತ್ತು ಕಾರ್ಯ ಕಲಾಪದ ಮನೋರಂಜನೆಯನ್ನು ಉಂಟುಮಾಡಿದೆ. ಯಾವುದನ್ನು ಕ್ರಿಯೇಟಿವ್ ಎನ್ನುತ್ತೇವೋ ಅದು ನಮ್ಮ ತಿಳುವಳಿಕೆಯನ್ನು ವಿಸ್ತರಿಸಿ ಜೀವನಾನುಭವಗಳನ್ನು ಹೊಸದಾಗಿಸುತ್ತದೆ ಎಂಬಂತಹ ವಿಚಾರಗಳು ಈ ಲೇಖನದಲ್ಲಿ ಹೇಳಲ್ಪಟ್ಟಿವೆ.

ಎರಡನೆಯ ಲೇಖನವು ಮಕ್ಕಳ ಕಲೆಯ ಬಗ್ಗೆ ಸ್ಥೂಲನೋಟ ಕೊಡುವುದು. ಮಗು ತನ್ನದೇ ಆದ ಕಲ್ಪನಾ ಲೋಕದಲ್ಲಿ ವಿಹರಿಸುತ್ತದೆ. ದೊಡ್ಡವರಿಗಿಂತಲೂ ಇವರ ಕಲ್ಪನೆಗಳು ಭಿನ್ನವಾಗಿರುತ್ತವೆ. ಮಗುವು ಕಲೆಯ ಮೂಲಕ ಅಭಿವ್ಯಕ್ತಿಸುವಾಗ ತಾನು ಕಂಡಂತೆ ವಸ್ತುಗಳನ್ನು ಚಿತ್ರಿಸದೇ ತಾನು ಭಾವಿಸಿದಂತೆ ರಚಿಸುತ್ತದೆ ಎನ್ನುವ ಅಂಶಗಳು ಇಲ್ಲಿ ನಿರೂಪಿಸಲ್ಪಟ್ಟಿವೆ. ಆತಂಕ, ಉದ್ವೇಗಗಳು ಕಲಾವಿದನಲ್ಲಿ ಉಂಟಾದಾಗ ಆತನ ಕೃತಿಗಳಲ್ಲಾಗುವ ಬದಲಾವಣೆಗಳು ಮತ್ತು ಆತನ ಸೃಜನಶೀಲತೆಯಲ್ಲಿ ಅಡ್ಡ ಪರಿಣಾಮಗಳು ಉಂಟಾಗುತ್ತವೆ ಎನ್ನುವ ಅಂಶ ಮೂರನೆಯ ಲೇಖನದಲ್ಲಿದೆ. ಸೃಜನಾತ್ಮಕ ಕೊಡುಗೆಯಲ್ಲಿ ಜೀವನದ ತೀವ್ರವಾದ ಅನುಭವವಿರುತ್ತದೆ. ಆಯ್ಕೆ ಮಾಡಿಕೊಂಡ ವಸ್ತುವು ಗಮನ ಹರಿಸುವಂತಹದ್ದಾಗಿರುತ್ತದೆ. ಅಂತಹ ವಿಚಾರಗಳು ಜ್ಞಾಪಕದಲ್ಲಿರುತ್ತವೆ. ಈ ರೀತಿಯ ಸೃಜನಾತ್ಮಕ ಕಲ್ಪನೆಗಳು ಪ್ರಾಮಾಣಿಕವಾಗಿ ಸೇರ್ಪಡೆಯಾಗಿರುತ್ತವೆ ಎನ್ನುವಂತಹ ಸಂಗತಿಗಳು ಕಲಾ ಅರ್ಹತೆ ಎಂಬ ಲೇಖನದಲ್ಲಿ ನಮೂದಿಸಲ್ಪಟ್ಟಿವೆ.

ಕಲ್ಪನೆಗಳು ಅಥವಾ ಪ್ರತಿಮೆಗಳು ಸುಪ್ತ ಮನಸ್ಸಿನಿಂದ ಜಾಗೃತ ಮನಸ್ಸಿಗೆ, ಅಲ್ಲಿಂದ ಸೂಪರ್ ಜಾಗೃತ ಮನಸ್ಸಿಗೆ ವರ್ಗಾವಣೆಗೊಳ್ಳುವಾಗ ಮಹತ್ತರವಾದ ಸೃಜನಾತ್ಮಕತೆಯಲ್ಲಿ ತೊಡಗುತ್ತವೆ ಎನ್ನುವಂತಹ ವಿಚಾರಗಳು ಐದನೆಯ ಲೇಖನದಲ್ಲಿವೆ. ರಮ್ಯಕಲ್ಪನೆ ಮತ್ತುಸೃಜನಾತ್ಮಕತೆ ಇವುಗಳ ಬಗ್ಗೆಆರನೆಯ ಲೇಖನ ಹೇಳಿದರೆ, ಏಳನೆಯ ಲೇಖನವು ಕಲಾತ್ಮಕ ಗ್ರಹಿಕೆ ಕುರಿತು ವಿವರಿಸಿದೆ. ಮಕ್ಕಳಿಗೇಕೆ ಚಿತ್ರಕಲೆಯ ಒಲವು ಮೂಡಿಸಬೇಕು ಎನ್ನುವ ವಿಷಯವಾಗಿಎಂಟನೆಯ ಲೇಖನವು ಚರ್ಚಿಸಿದರೆ, ಕಲೆಯಲ್ಲಿ ಅಂಗರಚನಾ ಶಾಸ್ತ್ರದ ಉಪಯೋಗ ಕುರಿತು ಒಂಭತ್ತನೆಯ ಲೇಖನ ಹೇಳುತ್ತದೆ. ಹತ್ತನೆಯ ಲೇಖನವು ಕಲೆ ಮತ್ತು ಮನಸ್ಸನ್ನು ಕುರಿತಾಗಿದೆ. ಕಲೆಯಷ್ಟೇ ಕಲೆಯನ್ನು ಕೊಡುವ ಕಣ್ಣು ಮುಖ್ಯ ಎನ್ನುವ ವಿಷಯವನ್ನು ಹನ್ನೊಂದನೆ ಲೇಖನವು ಹೇಳುತ್ತದೆ. ಹನ್ನೆರಡನೆ

೧೦೪. ಎನ್.ವಿಶ್ವರೂಪಾಚಾರ್ : ಕಲಾ ಮನೋವಿಜ್ಞಾನ : ವಿಶ್ವರೂಪ ಪ್ರಕಾಶನ, ಕೆಂಗೇರಿ, ಬೆಂಗಳೂರು-೨೦೦೪.

ಲೇಖನದಲ್ಲಿ ನಮ್ಮ ಕಲೆಯ ಉತ್ತೇಜನ, ಪ್ರತಿಕ್ರಿಯೆ ಎಂತಹುದು ಎಂಬ ವಿಷಯವಾಗಿ ಚರ್ಚಿಸಿದ್ದರೆ, ಹದಿಮೂರನೆಯ ಲೇಖನವ ಸೃಜನಶೀಲ ವ್ಯಕ್ತಿತ್ವದ ಬಗ್ಗೆ ಹೇಳಿದೆ. ಹದಿನಾಲ್ಕನೆಯ ಲೇಖನದಲ್ಲಿ ಕಲಾವಿದರು ಮತ್ತು ಕಲಾಚಿಂತಕರು ಕಲೆಯ ಕುರಿತು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಕೊಡಲಾಗಿದೆ. ಪ್ರಸ್ತುತ ಪುಸ್ತಕದಲ್ಲಿನ ಹದಿನಾಲ್ಕು ಲೇಖನಗಳಲ್ಲಿ ಬಹುಪಾಲು ಲೇಖನಗಳು ಕಲಾ ಮನೋವಿಜ್ಞಾನಕ್ಕೆ ಸಂಬಂಧಿಸಿದ್ದರೂ ಅಂತಹ ಗಂಭೀರ ವಿಚಾರಗಳು ಚರ್ಚಿಸಲ್ಪಟ್ಟಿಲ್ಲ. ಕಲಾವಿದನ ಸೃಜನಶೀಲತೆ ಮನೋವಿಜ್ಞಾನದ ಬಗ್ಗೆ ತಿಳಿದುಕೊಳ್ಳಲು ಹಾಗೂ ಕಲೆಯ ಸೃಜನಶೀಲತೆಗೆ ಮನೋವಿಜ್ಞಾನ ಎಷ್ಟು ಉಪಯುಕ್ತ ಎಂಬುದನ್ನು ತಿಳಿದುಕೊಳ್ಳಲು ಈ ಕೃತಿ ಕೊಂಚ ಸಹಕಾರಿಯಾಗಿದೆ ಎನ್ನುಬಹುದು. ಸೃಜನಾತ್ಮಕ ಕೊಡುಗೆಯಲ್ಲಿ ಜೀವನದ ತೀವ್ರವಾದ ಅನುಭವವಿರುತ್ತದೆ. ಆಯ್ಕೆ ಮಾಡಿಕೊಂಡ ವಸ್ತುವು ಗಮನ ಹರಿಸುವಂತಹದ್ದಾಗಿರುತ್ತದೆ. ಅಂತಹ ವಿಚಾರಗಳು ಜ್ಞಾಪಕದಲ್ಲಿರುತ್ತವೆ. ಈ ರೀತಿಯ ಸೃಜನಾತ್ಮಕ ಕಲ್ಪನೆಗಳು ಪ್ರಾಮಾಣಿಕವಾಗಿ ಸೇರ್ಪಡೆಯಾಗಿರುತ್ತವೆ ಎನ್ನುವಂತಹ ಸಂಗತಿಗಳು ಕಲಾ ಅರ್ಹತೆ ಎಂಬ ಲೇಖನದಲ್ಲಿ ನಮೂದಿಸಲ್ಪಟ್ಟಿವೆ.

ಕಲ್ಪನೆಗಳು ಅಥವಾ ಪ್ರತಿಮೆಗಳು ಸುಪ್ತ ಮನಸ್ಸಿನಿಂದ ಜಾಗೃತ ಮನಸ್ಸಿಗೆ, ಅಲ್ಲಿಂದ ಸೂಪರ್ ಜಾಗೃತ ಮನಸ್ಸಿಗೆ ವರ್ಗಾವಣೆಗೊಳ್ಳುವಾಗ ಮಹತ್ತರವಾದ ಸೃಜನಾತ್ಮಕತೆಯಲ್ಲಿ ತೊಡಗುತ್ತವೆ ಎನ್ನುವಂತಹ ವಿಚಾರಗಳು ಐದನೆಯ ಲೇಖನದಲ್ಲಿವೆ. ರಮ್ಯಕಲ್ಪನೆ ಮತ್ತುಸೃಜನಾತ್ಮಕತೆ ಇವುಗಳ ಬಗ್ಗೆಆರನೆಯ ಲೇಖನ ಹೇಳಿದರೆ, ಏಳನೆಯ ಲೇಖನವು ಕಲಾತ್ಮಕ ಗ್ರಹಿಕೆ ಕುರಿತು ವಿವರಿಸಿದೆ. ಮಕ್ಕಳಿಗೇಕೆ ಚಿತ್ರಕಲೆಯ ಒಲವು ಮೂಡಿಸಬೇಕು ಎನ್ನುವ ವಿಷಯವಾಗಿ ಎಂಟನೆಯ ಲೇಖನವು ಚರ್ಚಿಸಿದರೆ, ಕಲೆಯಲ್ಲಿ ಅಂಗರಚನಾ ಶಾಸ್ತ್ರದ ಉಪಯೋಗ ಕುರಿತು ಒಂಭತ್ತನೆಯ ಲೇಖನ ಹೇಳುತ್ತದೆ. ಹತ್ತನೆಯ ಲೇಖನವು ಕಲೆ ಮತ್ತು ಮನಸ್ಸನ್ನು ಕುರಿತಾಗಿದೆ. ಕಲೆಯಷ್ಟೇ ಕಲೆಯನ್ನು ಕೊಡುವ ಕಣ್ಣು ಮುಖ್ಯ ಎನ್ನುವ ವಿಷಯವನ್ನು ಹನ್ನೊಂದನೆ ಲೇಖನವು ಹೇಳುತ್ತದೆ. ಹನ್ನೆರಡನೆ ಲೇಖನದಲ್ಲಿ ನಮ್ಮ ಕಲೆಯ ಉತ್ತೇಜನ, ಪ್ರತಿಕ್ರಿಯೆ ಎಂತಹುದು ಎಂಬ ವಿಷಯವಾಗಿ ಚರ್ಚಿಸಿದ್ದರೆ, ಹದಿಮೂರನೆಯ ಲೇಖನ ಸೃಜನಶೀಲ ವ್ಯಕ್ತಿತ್ವದ ಬಗ್ಗೆ ಹೇಳಿದೆ. ಹದಿನಾಲ್ಕನೆಯ ಲೇಖನದಲ್ಲಿ ಕಲಾವಿದರು ಮತ್ತು ಕಲಾಚಿಂತಕರು ಕಲೆಯ ಕುರಿತು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಕೊಡಲಾಗಿದೆ.

ಪ್ರಸ್ತುತ ಪುಸ್ತಕದಲ್ಲಿನ ಹದಿನಾಲ್ಕು ಲೇಖನಗಳಲ್ಲಿ ಬಹುಪಾಲು ಲೇಖನಗಳು ಕಲಾ ಮನೋವಿಜ್ಞಾನಕ್ಕೆ ಸಂಬಂಧಿಸಿದ್ದರೂ ಅಂತಹ ಗಂಭೀರ ವಿಚಾರಗಳು ಚರ್ಚಿಸಲ್ಪಟ್ಟಿಲ್ಲ. ಕಲಾವಿದನ ಸೃಜನಶೀಲತೆ ಮನೋವಿಜ್ಞಾನದ ಬಗ್ಗೆ ತಿಳಿದುಕೊಳ್ಳಲು ಹಾಗೂ ಕಲೆಯ ಸೃಜನಶೀಲತೆಗೆ ಮನೋವಿಜ್ಞಾನ ಎಷ್ಟು ಉಪಯುಕ್ತ ಎಂಬುದನ್ನು ತಿಳಿದುಕೊಳ್ಳಲು ಈ ಕೃತಿ ಕೊಂಚ ಸಹಕಾರಿಯಾಗಿದೆ ಎನ್ನುಬಹುದು. ಕಲಾಪ್ರಕಾರ, ಸೌಂದರ್ಯ, ವಿಮರ್ಶೆ ಮತ್ತು ಸಾಹಿತ್ಯ ಪ್ರಧಾನ ಚಿತ್ರಕಲಾ ಸಾಹಿತ್ಯ ಎಂಬ ಈ ವಿಂಗಡಣೆಯಲ್ಲಿ ವೈವಿಧ್ಯಮಯ ಕೃತಿಗಳು ಅಧ್ಯಯನಕ್ಕೆ ಒಳಪಟ್ಟಿವೆ. ಕಲೆಯ ಮೂಲತತ್ವಗಳು, ಕಲೆ ಮತ್ತು ಸೌಂದರ್ಯ, ಕಲಾನುಭವ, ಸೌಂದರ್ಯ ಮೀಮಾಂಸೆ, ಸಾಹಿತ್ಯ ಮತ್ತು ಚಿತ್ರಕಲೆ, ದೃಶ್ಯಕಲೆಗಳ ಗುಣಗ್ರಹಣಗಳಂತಹ ಹಲವಾರು ಸಂಗತಿಗಳು ಇಲ್ಲಿನ ಕೃತಿಗಳ ಮೂಲಕ ಬಿಂಬಿತಗೊಂಡಿವೆ.

ಚಿತ್ರಕಲಾ ಸಂಕೀರ್ಣ ಸಾಹಿತ್ಯದಲ್ಲಿ ವೈವಿಧ್ಯ ವಿಷಯಗಳ ಕುರಿತ ಕೃತಿಗಳು ಅಧ್ಯಯನಕ್ಕೆ ಒಳಪಟ್ಟಿವೆ. ಕರ್ನಾಟಕ, ಭಾರತ ಮತ್ತು ಜಾಗತಿಕ ಕಲೆಯ ಬಗೆಗಿನ ವಿಷಯಗಳು ಇಲ್ಲಿ ಹೇಳಲ್ಪಟ್ಟಿವೆ. ಜನಪದ ಕಲೆ, ಪ್ರಾಗಿತಿಹಾಸ ಕಲೆ, ಪಾರಂಪರಿಕ ಕಲಾಪ್ರಕಾರಗಳು, ಕಲಾನೆಲೆಗಳು, ಕಲೆಯ

ಐತಿಹಾಸಿಕ ಹಿನ್ನೆಲೆ ಇಂತಹ ಸಂಗತಿಗಳು ಇಲ್ಲಿನ ಕೃತಿಗಳಲ್ಲಿ ಬಿಂಬಿತಗೊಂಡಿವೆ. ಇದರ ಜೊತೆಗೆ ಗ್ರಾಫಿಕ್ಸ್ ಕಲೆ, ನವ್ಯಕಲೆ, ಕಲಾವಿಮರ್ಶೆ, ಕಲೆ ಮತ್ತು ಸೌಂದರ್ಯ, ಸಾಮಾಜಿಕವಾಗಿ ಕಲೆಯ ಮೌಲ್ಯಗಳು ಮುಂತಾದ ವಿಚಾರಗಳು ಇಲ್ಲಿನ ಕೃತಿಗಳಲ್ಲಿ ಹೇಳಲ್ಪಟಿವೆ. ಈ ಅಧ್ಯಾಯದಲ್ಲಿ ವ್ಯಕ್ತಿಅಧ್ಯಯನ, ಸಂಪಾದನಾ ಕೃತಿಗಳು, ಸಂಶೋಧನಾ ಕೃತಿಗಳು, ಪ್ರವಾಸ ಸಾಹಿತ್ಯ ಮತ್ತು ಅನುವಾದ ಗ್ರಂಥಗಳನ್ನು ಹೊರತುಪಡಿಸಿ, ಉಳಿದೆಲ್ಲ ಚಿತ್ರಕಲಾ ಸಾಹಿತ್ಯ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಗಾಗಿ ಇದರ ವೈವಿಧ್ಯತೆ ಅಪಾರವಾಗಿದೆ.

ಪ್ರಾಗಿತಿಹಾಸ ಕಲೆಯಲ್ಲಿ ಕರ್ನಾಟಕದಲ್ಲಿ ಕಂಡುಬರುವ ಪ್ರಮುಖ ನೆಲೆಗಳನ್ನು ಕುರಿತು ವಿವೇಚಿಸಿರುವದು ಒಂದು ಕೃತಿಯಲ್ಲಿ ಮಾತ್ರ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಇದರ ಬಗೆಗಿನ ಪುಸ್ತಕಗಳ ಕೊರತೆ ಕಂಡುಬರುತ್ತದೆ. ಜನಪದ ಕಲಾಪ್ರಕಾರದಲ್ಲಿ ಕರ್ನಾಟಕದ ಜನಪದ ಚಿತ್ರಕಲೆ ಮತ್ತು ಭಾರತದ ಜನಪದ ಚಿತ್ರಕಲೆಗಳನ್ನು ವಿವೇಚಿಸಿರುವ ಕೃತಿಗಳಿವೆ. ಕರ್ನಾಟಕದ ಹಚ್ಚೆ, ರಂಗೋಲಿ, ಹಸೆ, ಕಾವಿಕಲೆ, ಮದರಂಗಿ, ಗಂಜೀಫಾ, ಶೀಗಿಚಿತ್ರಕಲೆ, ಬೆಳದಿಂಗಳ ಚಿತ್ರ, ನಾಗಾರಾಧನೆ, ಬಿದರಿಕಲೆ, ತೊಗಲುಗೊಂಬೆ, ಸೂತ್ರದಗೊಂಬೆ ಮುಂತಾದ ಕಲಾಪ್ರಕಾರಗಳ ಬಗ್ಗೆ ಇಲ್ಲಿನ ಕೃತಿಗಳು ಮಾಹಿತಿನೀಡುತ್ತವೆ. ಅದರಂತೆ ಭಾರತೀಯ ಜನಪದ ಚಿತ್ರಕಲೆಯಲ್ಲಿ ಮಧುಬನಿ, ವಾರ್ಲಿ, ಪಟುವಾ, ರಥವಾ, ಕಾಳಿಘಾಟನಂತಹ ಚಿತ್ರಕಲಾ ಪ್ರಕಾರಗಳ ಬಗ್ಗೆ ವಿವರಗಳು ಇಲ್ಲಿನ ಕೃತಿಗಳಿಂದ ದೊರಕುತ್ತವೆ.

ಪರಿಚಯಾತ್ಮಕ ಚಿತ್ರಕಲಾ ಸಾಹಿತ್ಯದಲ್ಲಿ ಕರ್ನಾಟಕ, ಭಾರತ ಮತ್ತು ಜಾಗತಿಕ ಚಿತ್ರಕಲಾ ಪರಂಪರೆ, ಕಲಾಪ್ರಕಾರಗಳು, ಕಲಾನೆಲೆಗಳು, ಐತಿಹಾಸಿಕ ಹಿನ್ನೆಲೆ ಮತ್ತು ನವ್ಯಕಲೆಯ ಬಗ್ಗೆ ಮಾಹಿತಿ ಇರುವ ಗ್ರಂಥಗಳಿವೆ. ಇನ್ನುಳಿದಂತೆ ಕಲಾತತ್ವ, ಸೌಂದರ್ಯಶಾಸ್ತ್ರ, ಕಲಾವಿಮರ್ಶೆ, ಮೀಮಾಂಸೆ ಮುಂತಾದ ವಿಷಯಗಳು ಈ ಅಧ್ಯಾಯದಲ್ಲಿನ ಕೃತಿಗಳಿಂದ ತಿಳಿದುಬರುವ ಸಂಗತಿಗಳಾಗಿವೆ.

ಕರ್ನಾಟಕದ ಚಿತ್ರಕಲಾ ಸಂಕೀರ್ಣ ಸಾಹಿತ್ಯವನ್ನು ಗಮನಿಸಿದಾಗ ಇಲ್ಲಿಯೂ ಕಲಾವಿದರು, ಕಲಾಹಿನ್ನೆಲೆಯುಳ್ಳವರು ಕೃತಿಗಳನ್ನು ಬರೆದಿರುವಂತೆ ಬೇರೆ ಕ್ಷೇತ್ರದ ವಿದ್ವಾಂಸರೂ ಚಿತ್ರಕಲಾ ಸಾಹಿತ್ಯ ಕೃತಿಗಳನ್ನು ರಚನೆಮಾಡಿರುವುದು ಕಂಡುಬರುತ್ತದೆ. ಇದರಲ್ಲಿ ಬೇರೆ ಕ್ಷೇತ್ರದ ವಿದ್ವಾಂಸರಿಂದಲೇ ಹೆಚ್ಚಿನ ಕೃತಿಗಳು ರಚನೆಗೊಂಡಿದ್ದು ಈಗಾಗಲೇ ಹೇಳಿರುವಂತೆ ಕಲಾ ಪ್ರಾಯೋಗಿಕತೆ ಮತ್ತು ತಾಂತ್ರಿಕ ಅಂಶಗಳನ್ನು ಬಿಂಬಿಸುವಲ್ಲಿ ವಿಫಲವಾಗಿವೆ. ಸಂಕೀರ್ಣ ಚಿತ್ರಕಲಾ ಸಾಹಿತ್ಯದಲ್ಲಿ ಮಾಡಿಕೊಂಡಿರುವ ಮೊದಲ ವಿಂಗಡಣೆಯು ಕರ್ನಾಟಕದ ಚಿತ್ರಕಲಾ ಸಾಹಿತ್ಯವಾಗಿದ್ದು ಇದರಲ್ಲಿ ಕರ್ನಾಟಕದ ಪ್ರಾಗೈತಿಹಾಸ ಕಾಲದ ಕಲೆ, ಗೊಂಬೆಯಾಟ, ತೊಗಲುಗೊಂಬೆಯಾಟ, ರಂಗೋಲಿ, ಕಿನ್ನಾಳ ಚಿತ್ರಕಲೆ, ಶೀಗಿ ಹಾಡುಗಳು, ಕಾವಿ ಕಲೆ, ಗಂಜೀಫಾ ಕಲೆ, ಗ್ರಾಮೀಣ ಚಿತ್ರಗಳು, ಜನಪದ ಕಸೂತಿ, ಚಿತ್ತಾರ, ಹಸೆ, ಶೀಗಿ ಚಿತ್ರಕಲೆ, ಬಿದರಿ ಚಿತ್ರಕಲೆ, ಹಚ್ಚೆಚಿತ್ರಕಲೆ, ಬೆಳದಿಂಗಳ ಚಿತ್ರಕಲೆ, ಭೂತಾರಾಧನೆಯಲ್ಲಿ ಚಿತ್ರಕಲೆ, ಚಿತ್ತಾರದ ಗೊಂಬೆಗಳು, ಯಕ್ಷಗಾನ ಚಿತ್ರಕಲೆ, ಕರ್ನಾಟಕದ ಜನಪದ ಚಿತ್ತಾರಗಳು ಹಾಗೂ ಶಿಲ್ಪಗಳು, ಕುಶಲಕಲೆಗಳು, ಕರ್ನಾಟಕದ ಕಲೆಗಳು, ಮಹಿಳೆಯರ ಅಲಂಕಾರ, ಚಿಕ್ಕಮಕ್ಕಳ ಚಿತ್ರಕಲೆ, ಚಿತ್ರಕಲಾ ಪ್ರವೇ, ಚಿತ್ರಕಲಾ ಪರಿಚಯ, ಕಲಾಚರಿತ್ರೆ, ವಿಕಾಸ ಕಂಡ ಕರ್ನಾಟಕದ ಚಿತ್ರಕಲೆ, ಶಿಕ್ಷಣ ಸೃಜನಶೀಲ ಕಲೆ, ಚಿತ್ರಕಲಾ ಶಿಕ್ಷಕರ ಕೈಪಿಡಿ, ವಿನ್ಯಾಸ ಜಗತ್ತು, ನೀವೂ ಕಲಾವಿದರಾಗಬೇಕೆ? ಚುಕ್ಕೆ ಚಿತ್ರ ನೀವೂ ರಚಿಸಬೇಕೆ? ಕರ್ನಾಟಕದಲ್ಲಿ ಚಿತ್ರಕಲೆ, ಕನ್ನಡ ನಾಡಿನ

ಕಲಾವಿದರು, ವಿಜಯನಗರದ ಕಲೆ ಮತ್ತು ಸಾಹಿತ್ಯ, ಬಣ್ಣದ ವೇಷ ಮತ್ತು ಇತರ ಉಪನ್ಯಾಸಗಳು, ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ, ವರ್ಣಸಂಚಯ, ಕರ್ನಾಟಕದಲ್ಲಿ ಚಿತ್ರಕಲಾ ಬೆಳವಣಿಗೆ ಒಂದು ಸಮೀಕ್ಷೆ, ಕರ್ನಾಟಕದ ಕಲಾ ಯಾತ್ರೆ, ಚಿತ್ರಯಾತ್ರೆ, ಹಿರಿಯ ಕಲಾವಿದರ ಕೃತಿಗಳ ಪ್ರದರ್ಶನ ಎಂಬಂತಹ ಕೃತಿಗಳು ವಿಶ್ಲೇಷಣೆಗೊಳಪಟ್ಟಿವೆ. ಇವುಗಳಲ್ಲಿ ಜನಪದ ಚಿತ್ರಕಲೆಯ ಬಗ್ಗೆ ಹೆಚ್ಚಿನ ಕೃತಿಗಳು ಪ್ರಕಟಗೊಂಡಿದ್ದು ಪ್ರಾಚೀನ ಭಿತ್ತಿಚಿತ್ರಕಲೆ, ಹಸ್ತಪ್ರತಿ ಚಿತ್ರಕಲೆ, ಪ್ರಾಗೈತಿಹಾಸ ಕಾಲದ ಚಿತ್ರಕಲೆ, ಮಧ್ಯಯುಗೀನ ಕಾಲದ ಕರ್ನಾಟಕದ ಚಿತ್ರಕಲೆ, ಕಿರುರೂಪ ಚಿತ್ರಕಲೆ, ಕರ್ನಾಟಕದ ಆಧುನಿಕ ಚಿತ್ರಕಲೆಯಂತಹ ವಿಷಯಗಳ ಬಗ್ಗೆ ಪುಸ್ತಕಳ ಕೊರತೆ ಕಂಡುಬರುತ್ತದೆ. ಅಲ್ಲದೆ ಈಗಾಗಲೆ ಪ್ರಕಟಗೊಂಡ ಕೃತಿಗಳಲ್ಲಿ ಐತಿಹಾಸಿಕ ಮತ್ತು ಸರಳ ವಿವರಣೆಗಳು ಹೆಚ್ಚಾಗಿದ್ದು ವಿಮರ್ಶೆ, ವಿಶ್ಲೇಷಣೆ, ತೌಲನಿಕತೆಯ ಅಂಶಗಳು ಕಂಡುಬರುವುದಿಲ್ಲ. ಕರ್ನಾಟಕದ ಚಿತ್ರಕಲೆ ಭಾರತದ ಇತರ ಭಾಗದ ಚಿತ್ರಕಲೆಗಿಂತ ಹೇಗೆ ಭಿನ್ನವಾಗಿದೆ, ಅದರ ಪ್ರಾದೇಶಿಕ ಗುಣಲಕ್ಷಣಗಳೇನು? ಎನ್ನುವಂತಹ ಸಂಗತಿಗಳ ಬಗ್ಗೆ ಯಾವುದೆ ಕೃತಿ ಮಾಹಿತಿ ನೀಡುವುದಿಲ್ಲ. ಅಂಥಹ ಪ್ರಯತ್ನಗಳು ನಡೆಯಬೇಕಿದೆ.

ಎರಡನೆಯ ಭಾಗವಾದ ಭಾರತೀಯ ಚಿತ್ರಕಲಾ ಸಾಹಿತ್ಯದಲ್ಲಿ ಭಾರತೇಯ ಚಿತ್ರಕಲೆ, ಬೆಳೆದು ಬಂದ ಭಾರತದ ಚಿತ್ರಕಲೆ, ಅಜಂತಾ ಮತ್ತು ಎಲ್ಲೋರಾ, ಚಿತ್ರಕಲೆ, ಭಾರತೀಯ ಚಿತ್ರಕಲೆ, ಶಿಲ್ಪ, ಚಿತ್ರ, ವಾಸ್ತುಕಲೆಗಳು, ಚಿತ್ರಕಲಾ ಕೈದೀಪ, ಚಿತ್ರಕಲಾ ದರ್ಪಣ, ದಖನಿ ಚಿತ್ರಕಲೆ, ಭಾರತದ ಜನಪದ ಚಿತ್ರಕಲೆ, ಭಾರತೀಯ ಸಂಸ್ಕೃತಿಯಲ್ಲಿ ರಂಗವಲ್ಲಿ, ಕಲಾ ಅರ್ಪಣ, ಗ್ರಾಫಿಕ್ ಕಲೆ, ಭಾರತದಲ್ಲಿ ಸಮಕಾಲೀನ ಕಲೆ ಎಂಬ ಕೃತಿಗಳು ವಿಶ್ಲೇಷಣೆಗೊಳಪಟ್ಟಿವೆ. ಇವುಗಳಲ್ಲಿ ಹೆಚ್ಚಿನವು ಭಾರತದ ಪ್ರಾಚೀನ ಚಿತ್ರಕಲೆಯ ಬಗ್ಗೆ ಸ್ಥೂಲನೋಟ ಕೊಡುವ ಕೃತಿಗಳಾಗಿವೆ ಮತ್ತು ಒಂದೇ ವಿಷಯವನ್ನೇ ಹೇಳಿವೆ.

ಇಲ್ಲಿ ಭಾರತದ ಜನಪದ ಚಿತ್ರಕಲೆ, ಗ್ರಾಫಿಕ್ ಚಿತ್ರಕಲೆ, ಸಮಕಾಲೀನ ಚಿತ್ರಕಲೆ ಬಗ್ಗೆ ಒಂದೊಂದೆ ಕೃತಿಗಳು ಪ್ರಕಟಗೊಂಡಿದ್ದು ಈ ಕ್ಷೇತ್ರದ ಬಗ್ಗೆ ಮತ್ತು ಸ್ವಾತಂತ್ರೋತ್ತರ ಭಾರತದ ಚಿತ್ರಕಲೆ, ಆಧುನಿಕೋತ್ತರ ಚಿತ್ರಕಲೆಗಳ ಕುರಿತ ಸಾಹಿತ್ಯವು ರಚನೆಗೊಳ್ಳಬೇಕಾದ ಅವಶ್ಯಕತೆ ಇದೆ. ಎಲ್ಲಕ್ಕಿಂತ ಮುಖ್ಯವಾಗಿ ರಾಷ್ಟ್ರಮಟ್ಟದಲ್ಲಿ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಕಲೆಯ ಸ್ಥಿತಿಗಳ ಬಗ್ಗೆ ತಿಳುವಳಿಕೆ ನೀಡುವ ಪುಸ್ತಕಗಳು ಇಂದು ಬೇಕಾಗಿವೆ. ಇವುಗಳ ಜೊತೆಗೆ ಚಿತ್ರಕಲಾ ಕ್ಷೇತ್ರದಲ್ಲಿ ಗಣಕಯಂತ್ರವು ಕ್ರಾಂತಿಯನ್ನೇ ಉಂಟುಮಾಡಿದ್ದು ಆ ಕುರಿತ ಸಾಹಿತ್ಯಕ ಮಾಹಿತಿಯು ಕನ್ನಡದಲ್ಲಿ ಪುಸ್ತಕಗಳ ರೂಪದಲ್ಲಿ ಹೊರಬರಬೇಕಾದ ಅನಿವಾರ್ಯತೆ ಇಂದು ಹೆಚ್ಚಾಗಿದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಕರ್ನಾಟಕದಲ್ಲಿ ಭಾರತೀಯ ಮತ್ತು ಅಂತರಾಷ್ಟ್ರೀಯ ಕಲೆಯ ಬಗ್ಗೆ ಹೆಚ್ಚಿನ ಪುಸ್ತಕಗಳು ರಚನೆಯಾಗಿಲ್ಲ ಎನ್ನಬಹುದು.

ಗುಣಮಟ್ಟದ ದೃಷ್ಟಿಯಿಂದಲೂ ಅಷ್ಟೊಂದು ಮೌಲಿಕತೆಯನ್ನ ಈ ಕೃತಿಗಳು ಹೊಂದಿಲ್ಲ. ಶಿವರಾಮ ಕಾರಂತರನ್ನೊಳಗೊಂಡು ಅ.ನ.ಕೃ., ಪಿ.ಆರ್.ತಿಪ್ಪೇಸ್ವಾಮಿ, ಎಂ.ಎಚ್.ಕೃಷ್ಣ, ಎಸ್. ಎಮ್.ಶಿರಹಟ್ಟಿ, ಬಿ.ಪಿ.ಬಾಯಿರಿ, ವ್ಹಿ.ಟಿ.ಕಾಳೆ, ಆರ್.ಜಿ.ರಾಯ್ಕರ್, ಎಸ್.ಕೆ.ಅರುಣಿ, ಎನ್.ಮರಿಶಾಮಾಚಾರ್ ಇವರೆಲ್ಲ ಬರೆದ ಕೃತಿಗಳು ಪರ್ಸಿಬ್ರೌನ್, ಇ.ಬಿ.ಹ್ಯಾವೆಲ್, ಆನಂದಕುಮಾರಸ್ವಾಮಿ, ಸ್ಟೆಲ್ಲಾಕಾಮ್ರಿಶ್, ಓ.ಪಿ.ಅಗರವಾಲ, ಸಿ.ಶಿವರಾಮಮೂರ್ತಿ, ಹಡ್ಸನ್ ಮುಂತಾದ ವಿದ್ವಾಂಸರ ಇಂಗ್ಲೀಷ ಕೃತಿಗಳಲ್ಲಿನ ಅಂಶಗಳನ್ನು ಒಳಗೊಂಡಿವೆ. ವಿಮರ್ಶಾ ದೃಷ್ಟಿಕೋನದ ಕೊರತೆ ಇಲ್ಲಿ ಕಂಡುಬರುತ್ತದೆ.

ಜಾಗತಿಕ ಚಿತ್ರಕಲಾ ಸಾಹಿತ್ಯವು ಮೂರನೆಯ ವಿಂಗಡಣೆಯಾಗಿದ್ದು, ಇದರಲ್ಲಿ ನಾಗರಿಕತೆಯ ಹೊಸ್ತಿಲಲ್ಲಿ, ಜಾಗತಿಕ ಚಿತ್ರಕಲೆ, ಬಾರೋಕ್ ಚಿತ್ರಕಲೆ, ನವ್ಯಕಲೆ ಮತ್ತು ಕಲೆಗಾರರು, ಇಂಪ್ರೆಷನಿಜಂ, ಫೋಟೋರಿಯಲಿಜಂ, ಸರ್ರಿಯಾಲಿಜಂ, ಅಬ್‌ಸ್ಟ್ರ್ಯಾಕ್ಟ್ ಕಲೆ, ಪೋಷ್ಟ ಮಾಡರ್ನಿಜಂ, ಪಾಪ್‌ಕಲೆ, ಕ್ಯೂಬಿಜಂ ಎಂಬ ವಿಷಯಗಳ ಬಗ್ಗೆ ಬಂದ ಕೃತಿಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಈ ಕೃತಿಗಳನ್ನು ಗಮನಿಸಿದಾಗ ಜಾಗತಿಕ ಚಿತ್ರಕಲೆಯ ಬಗ್ಗೆ ಬೇರೆ ಬೇರೆ ವಿಷಯಗಳಿಗೆ ಅನುಸಾರವಾಗಿ ಪ್ರತ್ಯೇಕ ಪುಸ್ತಕಗಳ ಕೊರತೆ ಕಂಡುಬರುತ್ತದೆ. ಜಗತ್ತಿನ ಪ್ರಾಚೀನ ಚಿತ್ರಕಲೆ, ಪ್ರಾಚೀನ ಕ್ರೈಸ್ತ ಚಿತ್ರಕಲೆ, ಮಧ್ಯಯುಗೀನ ಚಿತ್ರಕಲೆ, ಪುನರುಜ್ಜೀವನ ಕಾಲದ ಚಿತ್ರಕಲೆ ಬೇರೆ ಬೇರೆ ದೇಶಗಳ ಚಿತ್ರಕಲೆಯ ಬಗ್ಗೆ ಪ್ರತ್ಯೇಕ ಪುಸ್ತಕಗಳ ರಚನೆ, ಕನ್ನಡದಲ್ಲಿ ಆಗಲೇಬೇಕಾದ ಅನಿವಾರ್ಯತೆ ಇದೆ. ಇದರ ಜೊತೆಗೆ ಜಾಗತಿಕ ಪ್ರಸಿದ್ಧ ಕಲಾವಿದರಾದ ಮೈಕೆಲ್ ಎಂಜೆಲೋ, ಡಾ–ವಿನ್ಸಿ, ರೂಬೆನ್ಸ್, ರೆಂಬ್ರಾಂಟ್, ಪಿಕಾಸೋ, ವ್ಯಾನ್‌ಗಾಗ್, ಗಾಗಿನ್, ಮಾಟಿಸ್, ಮಾನೆ, ಪಾಲ್‌ಕ್ಲೀ, ಕಾನಸ್ಟೇಬಲ್ ಮುಂತಾದ ಹಲವಾರು ಕಲಾವಿದರ ಬಗ್ಗೆ ಚಿಕ್ಕಲೇಖನಗಳಿವೆಯೆ ಹೊರತು ಪುಸ್ತಕ ರೂಪದ ಮಾಹಿತಿ ಕನ್ನಡದಲ್ಲಿ ಲಭ್ಯವಿಲ್ಲ. ಇದರ ಜೊತೆಗೆ ಗ್ರಾಫಿಕ್ ಚಿತ್ರಕಲೆ, ಅಂತರ್‌ಜಾಲದಲ್ಲಿ (ಇಂಟರ್‌ನೆಟ್) ಚಿತ್ರಕಲೆಯ ಸ್ಥಿತಿಗತಿಗಳ ಬಗ್ಗೆ ಕನ್ನಡದಲ್ಲಿ ಪುಸ್ತಕಗಳು ಇಂದು ರಚನೆಯಾಗಬೇಕಿದೆ. ಈ ಹಿನ್ನೆಲೆಯಲ್ಲಿ ಈಗಾಗಲೇ ಕನ್ನಡದಲ್ಲಿ ರಚನೆಗೊಂಡ ಜಾಗತಿಕ ಚಿತ್ರಕಲಾ ಸಾಹಿತ್ಯ ಕೃತಿಗಳು ಇಂದಿನ ಸಂದರ್ಭಕ್ಕೆ ಅಷ್ಟೊಂದು ಸ್ಪಂದನಕಾರಿಯಾಗಿಲ್ಲ ಎಂದೇ ಹೇಳಬಹುದು. ಕಾರಣ ಆಧುನಿಕ ಸಂದರ್ಭದಲ್ಲಿ ವಿಶ್ವವಿದ್ಯಾಲಯ ಮಟ್ಟದಲ್ಲಿ ಕಲಾಶಿಕ್ಷಣ ನೀಡತೊಡಗಿದ್ದು ಅಲ್ಲಿನ ಪಠ್ಯಕ್ರಮದ ವಿಷಯಗಳ ಅವಶ್ಯಕತೆಗಳನ್ನು ಕನ್ನಡದಲ್ಲಿ ಪ್ರಕಟಗೊಂಡ ಈ ಕೃತಿಗಳು ಪೂರೈಸುತ್ತಿಲ್ಲ. ಸಂದರ್ಭಕ್ಕೆ ತಕ್ಕಂತೆ ಇವುಗಳನ್ನು ಪುನರ್‌ರೂಪಿಸಬೇಕಾದ ಅವಶ್ಯಕತೆ ಇದೆ.

ಕಲಾಪ್ರಕಾರ, ತತ್ವ, ವಿಮರ್ಶೆ ಮತ್ತು ಸಾಹಿತ್ಯ ಪ್ರಧಾನ ಚಿತ್ರಕಲಾ ಸಾಹಿತ್ಯವು ನಾಲ್ಕನೆಯ ವಿಂಗಡಣೆಯಾಗಿದೆ. ಇದರಲ್ಲಿ ಕಲೆಯ ದರ್ಶನ, ಸೌಂದರ್ಯ ಸಮೀಕ್ಷೆ, ಸೌಂದರ್ಯ ಮೀಮಾಂಸೆ, ಕಲಾನುಭವ, ಕಲೆಯ ನೆಲೆ, ಕಳೆ–ಕಲೆ, ಟಾಲ್‌ಸ್ಟಾಯ್ ಕಲಾಮೀಮಾಂಸೆ, ಸಾಹಿತ್ಯ ಮತ್ತು ಚಿತ್ರಕಲೆ, ಶ್ರೀಅರವಿಂದರ ತತ್ವಯೋಗ ಮತ್ತು ಕಲೆ, ಕಲೆ ಮತ್ತು ನಾನು, ಶೃಂಗಾರ ಲಹರಿ, ಸಾಹಿತ್ಯದಲ್ಲಿ ಚಿತ್ರಕಲೆ, ಕಲೆ, ಅನುಭವ ಮತ್ತು ಅನುಭಾವ, ಕಲಾ ಸಂಕಲನ, ಚಿತ್ರಕಲೆ ಮತ್ತು ಮನೋವಿಕಾಸ, ಚಿತ್ರಕಲಾ ಚಿಂತನೆ, ದೃಶ್ಯಕಲೆಗಳ ಗುಣಗ್ರಹಣ, ಚಿತ್ರಕಲೆ ಮತ್ತು ಸಂವಹನ, ಕಲಾಸಂವೇದನೆಯ ಒಳನೋಟಗಳು, ನೋಟಪಲ್ಲಟ, ಆಲೇಖ್ಯ, ಚಿತ್ರಾ–ಚಿತ್ತ, ಅಭಿನವಗುಪ್ತ, ವರ್ಣಾವರಣ, ದೃಶ್ಯಕಲಾ, ಚತುಷಷ್ಟಿ ಕಲೆ, ಕಲಾಮನೋವಿಜ್ಞಾನ ಎಂಬ ಕೃತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇಲ್ಲಿಯೂ ಕೆಲವು ಕೃತಿಗಳನ್ನು ಅನ್ಯಕ್ಷೇತ್ರದ ವಿದ್ವಾಂಸರು ರಚಿಸಿದ್ದಾರೆ. ಮತ್ತೆ ಕೆಲವನ್ನು ಕಲಾವಿದರು ರಚಿಸಿದ್ದಾರೆ.

ಒಟ್ಟು ಕರ್ನಾಟಕದ ಚಿತ್ರಕಲಾ ಸಾಹಿತ್ಯವನ್ನು ಅವಲೋಕಿಸಿದಾಗ ಕೆಲವು ಕುತೂಹಲಕರವಾದ ಸಂಗತಿಗಳು ತಿಳಿದುಬರುತ್ತವೆ. ಕರ್ನಾಟಕದ ಚಿತ್ರಕಲಾ ಸಾಹಿತ್ಯವನ್ನು ಸ್ವಾತಂತ್ರ್ಯ ಪೂರ್ವದ ಘಟ್ಟ, ಸ್ವಾತಂತ್ರ್ಯೋತ್ತರ ಘಟ್ಟ, ಅರವತ್ತರಿಂದ ಎಂಭತ್ತರ ದಶಕದ ವರೆಗಿನ ಘಟ್ಟ ಮತ್ತು ಎಂಭತ್ತರಿಂದ ಇಲ್ಲಿಯ ವರೆಗಿನ ಹಂತವೆಂಬುದಾಗಿ ವಿಂಗಡಿಸಿಕೊಳ್ಳಬಹುದು.

ಸ್ವಾತಂತ್ರ್ಯ ಪೂರ್ವದ ಕರ್ನಾಟಕದ ಚಿತ್ರಕಲಾ ಸಾಹಿತ್ಯವನ್ನು ಹೆಚ್ಚಾಗಿ ಪಾಶ್ಚಾತ್ಯ ವಿದ್ವಾಂಸರು ರಚನೆಮಾಡಿದ ಕೃತಿಗಳಲ್ಲಿ ಕಾಣಬಹುದು. ಭಾರತ ಇಲ್ಲವೆ ದಕ್ಷಿಣ ಭಾರತದ ಚಿತ್ರಕಲೆಯನ್ನು

ಕುರಿತು ಹೇಳುವಾಗ ಅಥವಾ ವಾಸ್ತುಶಿಲ್ಪಕಲೆಯನ್ನು ಕುರಿತು ಬರೆಯುವಾಗ ಸಾಂದರ್ಭಿಕವಾಗಿ ಕರ್ನಾಟಕದ ಚಿತ್ರಕಲೆಯ ಬಗ್ಗೆ ಹೇಳಲಾಗಿದೆ. ಇದರ ಜೋತೆಗೆ ಮೂವತ್ತರ ದಶಕದಲ್ಲಿ ಅ.ನ.ಸು., ಅ.ನ.ಕೃ., ಶಿವರಾಮ ಕಾರಂತ, ವಿ.ಸೀತಾರಾಮಯ್ಯ, ವಿ.ಕೃ.ಗೋಕಾಕ ಮುಂತಾದ ಸಾಹಿತಿಗಳು ಕಲೆಯ ಬಗ್ಗೆ ಸಾಹಿತ್ಯ ರಚನೆಮಾಡಿದ್ದು ಕಂಡುಬರುತ್ತದೆ. ಇವು ಈಗಾಗಲೇ ಹೇಳಿರುವಂತೆ ಪಾಶ್ಚಾತ್ಯ ವಿದ್ವಾಂಸರ ಇಂಗ್ಲೀಷ್ ಬರವಣಿಗೆಗಳ ಆಧಾರ ಹೊಂದಿದ್ದು ಬರವಣಿಗೆಯ ಶೈಲಿ, ವ್ಯಾಕರಣದ ಹಿನ್ನೆಲೆಯಿಂದ ಉತ್ಕೃಷ್ಟವಾಗಿವೆ. ಆದರೆ ಕಲೆಯು ತಾಂತ್ರಿಕತೆಯ ಅಂಶಗಳ ಕೊರತೆ ಇಲ್ಲಿದೆ. ಇದರಲ್ಲಿ ಶಿವರಾಮ ಕಾರಂತರು ಸ್ವಲ್ಪಮಟ್ಟಿನ ಕಲಾತಾಂತ್ರಿಕತೆಯನ್ನು ತಮ್ಮ ಬರವಣಿಗೆಗಳಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಿದರೂ ಪ್ರಾಯೋಗಿಕ ಅನುಭವದ ಕೊರತೆ ಅಲ್ಲಿದೆ. ಮುಂದೆ ಸ್ವಾತಂತ್ರ್ಯ ನಂತರದಲ್ಲಿ ಪಿ.ಆರ್.ತಿಪ್ಪೇಸ್ವಾಮಿ, ಬಿ.ವಿ.ಕೆ.ಶಾಸ್ತ್ರಿ, ಎಂ.ಎಚ್.ಕೃಷ್ಣ, ಬಿ.ಪಿ.ಬಾಯಿರಿ, ಆರ್.ಜಿ.ರಾಯ್ಕರ್, ವ್ಹಿ.ಟಿ.ಕಾಳೆಯವರಂತಹ ವಿದ್ವಾಂಸರು ಕಲೆಯ ಕುರಿತು ಬರೆಯತೊಡಗಿದರು. ಇದರಲ್ಲಿ ಕೆಲವರು ಕಲೆಯ ಹಿನ್ನೆಲೆ ಹೊಂದಿದವರಾಗಿದ್ದು ಬರವಣಿಗೆಯನ್ನೂ ಬಲ್ಲವರಾಗಿದ್ದರೂ ಕೂಡಾ ಸಾಹಿತಿಗಳಂತಹ ಅತಿರಂಜಿತ ವರ್ಣನೆಯ, ನಿಖರವಾದ ವಾಕ್ಯರಚನೆಯ ಕೌಶಲ ಸಾಹಿತಿಗಳ ಬರವಣಿಗೆಗಿಂತ ಕಡಿಮೆಯಾಗಿರುವುದು ಕಂಡುಬರುತ್ತದೆ. ಇವರ ಬರವಣಿಗೆಗಳು ಹಿಂದಿನ ಸಾಹಿತಿಗಳ ಬರವಣಿಗೆಗಳಿಗಿಂತ ಭಿನ್ನವಾಗಿದ್ದರೂ ಕಲೆಯ ವಿಷಯವನ್ನು ತಿಳಿಸುವ ಮಟ್ಟಕ್ಕೆ ಸೀಮಿತಗೊಂಡವು. ಎಂಭತ್ತ ದಶಕದ ಹೊತ್ತಿಗೆ ಕೆಲವು ಜನ ಮುಂಬೈ, ಶಾಂತಿನಿಕೇತನ, ಬರೋಡ, ಮದ್ರಾಸ್ ಹೀಗೆ ಬೇರೆ ಸ್ಥಳಗಳಿಗೆ ಹೋಗಿಬಂದು ಕಲಾವಿಮರ್ಶೆ, ಕಲೆಯ ತತ್ವಗಳ ಬಗ್ಗೆ ತೌಲನಿಕವಾಗಿ ಬರೆಯತೊಡಗಿದರೂ ಸಹಿತ ಅವರಲ್ಲಿ ಬರವಣಿಗೆಯ ವಿಧಿ-ವಿಧಾನಗಳು, ಹಂತಗಳು ಅಷ್ಟೊಂದು ಪಕ್ವಗೊಂಡಂತೆ ಕಂಡುಬರುವುದಿಲ್ಲ. ಆದರೆ ಕರ್ನಾಟಕದಲ್ಲಿ ಎಂಭತ್ತ ದಶಕದಿಂದೀಚೆಗೆ ಕಲಾಕ್ಷೇತ್ರದಲ್ಲಿ ಸಂಶೋಧನೆ ಆರಂಭಗೊಂಡು ಮೌಲಿಕವಾದ ಬರವಣಿಗೆಗಳು ಬರತೊಡಗಿದವು. ಡಾ.ಬಿ.ಕೆ.ಹಿರೇಮಠ, ಡಾ.ಎಸ್.ಸಿ.ಪಾಟೀಲ, ಡಾ.ಅ.ಲ.ನರಸಿಂಹನ್ ಮುಂತಾದವರು ಉಭಯ ಕ್ಷೇತ್ರಗಳಲ್ಲಿ ಜ್ಞಾನ ಪಡೆದವರಾಗಿದ್ದು ಕಲೆ ಮತ್ತು ಸಾಹಿತ್ಯ, ಸಂಶೋಧನೆ ಹಿನ್ನೆಲೆ ಇವುಗಳೊಂದಿಗೆ ಬರವಣಿಗೆಯ ನಿಖರತೆಯನ್ನು ತಿಳಿಸಿಕೊಟ್ಟರು. ಹಾಗಾಗಿ ಇಂದು ಕರ್ನಾಟಕದಲ್ಲಿ ಕಲಾ ಬರವಣಿಗೆಯಲ್ಲಿ ಸಂಶೋಧನಾ ಹಿನ್ನೆಲೆಯ ಬರವಣಿಗೆಯ ದೊಡ್ಡ ಪಡೆಯೇ ಸಜ್ಜುಗೊಂಡಿದೆ. ಡಾ.ಬಿ.ಕೆ.ಹಿರೇಮಠ ಮತ್ತು ಡಾ.ಎಸ್.ಸಿ.ಪಾಟೀಲ ಇವರ ಶಿಷ್ಯಬಳಗ ಇಡೀ ಕರ್ನಾಟಕದಲ್ಲಿ ಚಿತ್ರಕಲಾ ಸಾಹಿತ್ಯ ರಚನೆಯ ಮೌಲಿಕತೆಯಲ್ಲಿ ಮುಂಚೂಣೆಯಲ್ಲಿದ್ದು ಒಂದು ಹೊಸ ಆಯಾಮವನ್ನೇ ಸೃಷ್ಟಿಸಿದೆ. ಪಿಹೆಚ್.ಡಿ. ಪ್ರಬಂಧಗಳು, ಎಂ.ಫಿಲ್. ಪ್ರಬಂಧಗಳು, ಡಿ.ಲಿಟ್. ಪ್ರಬಂಧಗಳಲ್ಲದೆ, ಸ್ನಾತಕೋತ್ತರ ಮತ್ತು ಸ್ನಾತಕ ಪದವಿಯ ಹಿನ್ನೆಲೆಯಲ್ಲಿ ಹಲವಾರು ವಿಷಯಗಳ ಬಗ್ಗೆ ಚಿತ್ರಕಲಾ ಸಾಹಿತ್ಯ ರಚನೆಯಾಗಿದೆ. ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಡಾ.ಎಸ್.ಸಿ.ಪಾಟೀಲರ ಮಾರ್ಗದರ್ಶನದಲ್ಲಿ ಅತೀ ಹೆಚ್ಚಿನ ಪಿಹೆಚ್.ಡಿ. ಮತ್ತು ಎಂ.ಫಿಲ್. ಪ್ರಬಂಧಗಳು ಪ್ರಕಟಗೊಂಡಿವೆ. ಕರ್ನಾಟಕದಲ್ಲಿ ಇದುವರೆಗೆ ಸಲ್ಲಿಸಲ್ಪಟ್ಟ ಚಿತ್ರಕಲಾ ಪ್ರಬಂಧಗಳಲ್ಲಿ ಹೆಚ್ಚಿನವುಗಳು ಕನ್ನಡ ವಿ. ವಿ. ಯಲ್ಲಿ ಸಲ್ಲಿಸಲ್ಪಟ್ಟಿವೆ. ಇವುಗಳಲ್ಲದೆ ಸ್ನಾತಕೋತ್ತರ ಪದವಿಯ ಹಿನ್ನೆಲೆಯಲ್ಲಿ ಗುಲಬರ್ಗಾ ವಿ. ವಿ.ಯಲ್ಲಿ ಸುಮಾರು ೩೫೦, ಕನ್ನಡ ವಿ. ವಿ.ಯಲ್ಲಿ ಸುಮಾರು ೨೦೦, ಬೆಂಗಳೂರು ವಿ. ವಿ. ಯಲ್ಲಿ ೧೦೦, ಮೈಸೂರು ವಿ.ವಿ.ಯಲ್ಲಿ ೫೦, ಧಾರವಾಡ ವಿ.ವಿ.ಯಲ್ಲಿ ೪೦ಕ್ಕಿಂತಲೂ ಹೆಚ್ಚು ಕಿರು ಪ್ರಬಂಧಗಳು ಸಲ್ಲಿಸಲ್ಪಟ್ಟಿವೆ. ಸ್ನಾತಕ ಪದವಿಯ ಹಿನ್ನೆಲೆಯ

ಕಿರುಯೋನಾ ವರದಿಗಳು ವಿಫುಲವಾಗಿ ರಚನೆಯಾಗುತ್ತಲಿವೆ. ಕನ್ನಡ ವಿ. ವಿ.ಹಂಪಿಯ ಬಾದಾಮಿ ಶಾಖೆಯಲ್ಲಿ ೭೫, ಇಡೀ ಕರ್ನಾಟಕದ ಕಲಾಶಾಲೆಗಳಲ್ಲಿ ಸುಮಾರು ೧೦೦೦ (ಒಂದು ಸಾವಿರ) ಕಿರುಯೋಜನಾ ವರದಿಗಳು ಸಲ್ಲಿಸಲ್ಪಟ್ಟಿವೆ. ವಿಷಯದ ಆಯ್ಕೆಯಲ್ಲಿಯೂ ವೈವಿಧ್ಯತೆ ಇದೆ.

ಹೀಗೆ ಎಂಭತ್ತರ ದಶಕದಿಂದ ನಿಖರತೆಯನ್ನು ಪಡೆದುಕೊಂಡ ಕರ್ನಾಟಕದ ಕಲಾಸಾಹಿತ್ಯ ಇಂದು ವೈವಿಧ್ಯಮಯವಾಗಿ ಬೆಳೆಯುತ್ತಲಿದೆ. ಕನ್ನಡ ಸಾಹಿತ್ಯವೆಂದರೆ ಕೇವಲ ಪ್ರಾಚೀನ ಕವಿಗಳನ್ನು ಪ್ರತಿಬಿಂಬಿಸುವ ಸಾಹಿತ್ಯವಲ್ಲ. ಅದರ ಜೊತೆಗೆ ವೈದ್ಯಕೀಯ ಸಾಹಿತ್ಯ, ಕೃಷಿ ಸಾಹಿತ್ಯ, ವಾಣಿಜ್ಯ ಸಾಹಿತ್ಯ, ವಿಜ್ಞಾನ ಸಾಹಿತ್ಯ, ಮತ್ತು ಕಲಾ ಸಾಹಿತ್ಯಗಳಂತಹ ಶಿಸ್ತುಗಳನ್ನು ಒಳಗೊಂಡ ಪ್ರಬುದ್ಧ ಸಾಹಿತ್ಯ ಎಂಬುದನ್ನು ಪರಿಗಣಿಸಬೇಕಾಗಿದೆ.

ಇಂತಹ ಒಂದು ಮಹತ್ತರ ಬದಲಾವಣೆಗೆ ಪ್ರಮುಖ ಕಾರಣವೆಂದರೆ ತೊಂಭತ್ತರ ದಶಕದಿಂದೀಚೆಗೆ ಕಲೆ, ಸಾಹಿತ್ಯ, ಸಂಶೋಧನೆ ಈ ಮೂರು ಕ್ಷೇತ್ರಗಳ ಅನುಭವ ಹೊಂದಿದ ವಿದ್ವಾಂಸರು ಕಲಾ ಬರವಣಿಗೆಯನ್ನು ಮಾಡಲು ಆರಂಭಿಸಿದ್ದೆನ್ನಬಹುದು. ಈ ನಿಟ್ಟಿನಲ್ಲಿ ತೊಂಭತ್ತರ ದಶಕದಿಂದ ಇತ್ತೀಚಿನ ವರೆಗೆ ಬಂದ ಚಿತ್ರಕಲಾ ಸಾಹಿತ್ಯದಲ್ಲಿ ಕಲೆಯ ಪ್ರಾಯೋಗಿಕ ಮತ್ತು ತಾಂತ್ರಿಕ ವಿವರಗಳು, ಸಂಶೋಧನೆಯ ವಿಧಾನಗಳು, ಸಾಹಿತ್ಯಕ ಅಂಶಗಳು ಒಳಗೊಂಡಿರುವುದು ಕಂಡುಬರುತ್ತದೆ.

ಇತ್ತೀಚಿನ ದಿನಗಳಲ್ಲಿ ಕ್ಯಾಟ್‌ಲಾಗ್ ಸಾಹಿತ್ಯವು ಚಿತ್ರಕಲಾ ಕ್ಷೇತ್ರದಲ್ಲಿ ವಿಶೇಷವಾಗಿ ರಚನೆಯಾಗುತ್ತಲಿದ್ದು ಕಲೆಯ ಬಗೆಗಿನ ಹಲವಾರು ಅಂಶಗಳ ಬಗ್ಗೆ ಬೆಳಕು ಬೀರುತ್ತವೆ. ಕಲಾಪ್ರದರ್ಶನಗಳ ಹಿನ್ನೆಲೆಯಲ್ಲಿ ರಚನೆಯಾಗುವ ಈ ಸಾಹಿತ್ಯದಲ್ಲಿ ಪ್ರಾಚೀನ ಚಿತ್ರಕಲೆಯ ಪರಂಪರೆ, ಕಲಾಶೈಲಿಗಳು, ಆಧುನಿಕ ಕಲಾಪಂಥಗಳು, ಸಮಕಾಲೀನ ಕಲೆಯ ಆಗುಹೋಗುಗಳು, ಬೇರೆ ಬೇರೆ ಪ್ರದೇಶದ ಕಲಾಶೈಲಿಗಳು, ಪ್ರಭಾವ, ಪ್ರೇರಣೆ, ಮಹತ್ವ ಮುಂತಾದ ಸಂಗತಿಗಳು ಸಾಂದರ್ಭಿಕವಾಗಿ ಉಲ್ಲೇಖಗೊಂಡಿರುತ್ತವೆ.

ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಕರ್ನಾಟಕದ ಚಿತ್ರಕಲಾ ಸಾಹಿತ್ಯವು ಪಾಶ್ಚಾತ್ಯ ವಿದ್ವಾಂಸರ ದೃಷ್ಟಿಕೋನಗಳಿಂದ ಆರಂಭವಾಗಿ ನಮ್ಮ ಸಾಹಿತಿಗಳ ಶಬ್ದಗಳಲ್ಲಿ ಅರಳಿ, ಕಲಾವಿದರ ಶಾಬ್ದಿಕ ಭಾವನೆಗಳಲ್ಲಿ ಅನಾವರಣಗೊಂಡು ಸಂಶೋಧನಾ ಹಂತದ ಬರವಣಿಗೆಯಲ್ಲಿ ಫಲ ಕೊಡುತ್ತಲಿದೆ ಎನ್ನಬಹುದು.

****

ನಾಡಿನ ಸಾಂಸ್ಕೃತಿಕ ಅಧ್ಯಯನದಲ್ಲಿ ಚಿತ್ರಕಲೆಗೆ ವಿಶಿಷ್ಟವಾದ ಮತ್ತು ಮಹತ್ವಪೂರ್ಣವಾದ ಪಾತ್ರವಿದೆ. ಅದರಂತೆ ಚಿತ್ರಕಲೆಯನ್ನು ಅನುಸರಿಸಿಕೊಂಡು ಬೆಳೆದುಬಂದ ಚಿತ್ರಕಲಾ ಸಾಹಿತ್ಯಕ್ಕೂ ಮೌಲಿಕವಾದ ಸ್ಥಾನವಿದೆ. ಶರೀರ ಮತ್ತು ಶಾರೀರ ಭಿನ್ನ ರೀತಿಯ ಪರಿಕಲ್ಪನೆಗಳನ್ನು ಹೊಂದಿದ್ದರೂ ಅವು ಒಂದೇ ನಾಣ್ಯದ ಎರಡು ಮುಖಗಳಿದ್ದಹಾಗೆ. ಶಾರೀರದಿಂದಲೇ ಶರೀರಕ್ಕೆ ಮಹತ್ವ ಮತ್ತು ಪ್ರಾಧಾನ್ಯತೆ ಉಂಟಾಗುವಂತೆ ಚಿತ್ರಕಲೆ ಶರೀರವಾದರೆ, ಚಿತ್ರಕಲಾ ಸಾಹಿತ್ಯವು ಅದರ ಶಾರೀರವಿದ್ದಂತೆ. ಅಂದರೆ ಚಿತ್ರಕಲೆಯ ಕುರಿತು ತಿಳಿದುಕೊಳ್ಳಬೇಕಿದ್ದರೆ, ಬಹುಮಟ್ಟಿಗೆ ಅದರ ಶಾರೀರದಂತಿರುವ ಸಾಹಿತ್ಯದಿಂದಲೆ ಎಂದರೆ ತಪ್ಪಾಗಲಾರದು. ಚಿತ್ರಕಲೆಯ ಬಗೆಗಿನ ಅನೇಕ ವಿವರಗಳು ನಮಗಿಂದು ಅದರ ಬಗ್ಗೆ ರಚಿತವಾದ ಸಾಹಿತ್ಯದಿಂದಲೆ ತಿಳಿದು ಬರುತ್ತವೆ. ಚಿತ್ರದ ರಚನಾಕಾಲ, ಕಲಾವಿದರು, ರಚನಾಶೈಲಿ, ಸಂಯೋಜನಾ ರೀತಿ, ರಚನಾಕ್ರಮ, ಉದ್ದೇಶ ತಂತ್ರಗಾರಿಕೆ ಮುಂತಾದ ಸಂಗತಿಗಳು ಆ ಚಿತ್ರದ ಬಗ್ಗೆ ಬರೆದ ಸಾಹಿತ್ಯದಿಂದ ತಿಳಿದು ಬರುತ್ತವೆ. ಹಾಗಾಗಿ ಚಿತ್ರಕಲೆಯ ಅಧ್ಯಯನದಷ್ಟೆ ಮಹತ್ವವು ಚಿತ್ರಕಲಾ ಸಾಹಿತ್ಯದ ಅಧ್ಯಯನಕ್ಕೂ ಇದೆ ಎಂದರೆ ಅತಿಶಯೋಕ್ತಿಯಾಗಲಾರದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ರೂಪುಗೊಂಡಿದೆ.ಪ್ರಸ್ತುತ ಅಧ್ಯಯನವು ಒಟ್ಟು ಎಂಟು ಅಧ್ಯಾಯಗಳಲ್ಲಿ ಹರಡಿಕೊಂಡಿದ್ದು, ಪ್ರತಿಯೊಂದು ಅಧ್ಯಾಯದಲ್ಲಿ ವಿವೇಚನೆಗೊಂಡ ಪ್ರಮುಖ ಅಂಶಗಳು ಈ ಕೆಳಗಿನಂತಿವೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವೈಧಾನಿಕತೆ ಮತ್ತು ವ್ಯಾಪ್ತಿಗಳನ್ನು ಹೇಳಲಾಗಿದೆ. ಚಿತ್ರಕಲಾ ಸಾಹಿತ್ಯದ ಪರಿಕಲ್ಪನೆ, ಅರ್ಥವ್ಯಾಪ್ತಿಗಳು, ಅದರ ಮಹತ್ವ ಇವುಗಳನ್ನು ತಿಳಿಸುವುದರ ಜೊತೆಗೆ ಈ ಅಧ್ಯಯನವನ್ನು ಏತಕ್ಕಾಗಿ ಕೈಗೊಳ್ಳಲಾಗಿದೆ, ಅದರ ಪ್ರಮುಖ ಉದ್ದೇಶಗಳೇನು, ಎಂಬಂತಹ ಸಂಗತಿಗಳನ್ನು ಬಿಂಬಿಸಲಾಗಿದೆ. ಅಲ್ಲದೆ ಚಿತ್ರಕಲಾ ಸಾಹಿತ್ಯದ ಕುರಿತಾಗಿರುವ ಈ ಅಧ್ಯಯನದಿಂದಾಗುವ ಪ್ರಯೋಜನಗಳನ್ನು ತಿಳಿಸಲಾಗಿದೆ. ಚಿತ್ರಕಲಾಕ್ಷೇತ್ರ, ಸಾಹಿತ್ಯಕ್ಷೇತ್ರ, ಸಾಂಸ್ಕೃತಿಕ ಕ್ಷೇತ್ರಗಳಿಗೆ ಪ್ರಸ್ತುತ ಅಧ್ಯಯನದಿಂದಾಗುವ ಪ್ರಯೋಜನಗಳನ್ನು ತಿಳಿಸಿ ಕೊಡುವುದರ ಜೊತೆಗೆ ಸಮಾಜಕ್ಕೆ ಇದರ ಫಲಶೃತಿಗಳ ಪರಿಣಾಮಗಳು ಮತ್ತು ಈ ಅಧ್ಯಯನದ ಪ್ರಸ್ತುತತೆಯನ್ನು ಬಿಂಬಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಚಿತ್ರಕಲಾ ಸಾಹಿತ್ಯದ ಚಾರಿತ್ರಿಕ ಬೆಳವಣಿಗೆಯನ್ನು ಕ್ರಮಾನುಗತವಾಗಿ ಕಟ್ಟಿಕೊಡಲಾಗಿದೆ. ಕರ್ನಾಟಕದಲ್ಲಿ ಚಿತ್ರಕಲಾ ಸಾಹಿತ್ಯ ಬೆಳೆದುಬಂದ ಹೆಜ್ಜೆಗಳು ತೀರ ಅಸ್ಪಷ್ಟವಾಗಿರುವ ಈ ಸಂದರ್ಭದಲ್ಲಿ ಅದರ ಇತಿಹಾಸವನ್ನು ಕ್ರಮಾನುಗತ ರೀತಿಯಲ್ಲಿ ಕಟ್ಟಿಕೊಡುವ ಪ್ರಥಮ ಪ್ರಯತ್ನ ಇಲ್ಲಿದೆ. ಚಾಲುಕ್ಯರ ಕಾಲದಿಂದ ಕವಿರಾಜಮಾರ್ಗದ ವರೆಗಿನ ಚಿತ್ರಕಲಾ ಸಾಹಿತ್ಯ, ಕವಿರಾಜಮಾರ್ಗದಿಂದ ವಚನಸಾಹಿತ್ಯದ ವರೆಗಿನ ಚಿತ್ರಕಲಾ ಸಾಹಿತ್ಯ, ವಚನಸಾಹಿತ್ಯದಿಂದ ವಿಜಯನಗರದ ವರೆಗಿನ ಚಿತ್ರಕಲಾ ಸಾಹಿತ್ಯ, ವಿಜಯನಗರದಿಂದ ಮೈಸೂರು ಅರಸರ ವರೆಗಿನ ಚಿತ್ರಕಲಾ ಸಾಹಿತ್ಯ, ಮೈಸೂರು ಅರಸರಿಂದ ಸ್ವಾತಂತ್ರ್ಯದ ವರೆಗಿನ ಚಿತ್ರಕಲಾ ಸಾಹಿತ್ಯ, ಸ್ವಾತಂತ್ರ್ಯೋತ್ತರ ಕಾಲದಿಂದ ಕ್ರಿ.ಶ. ೨೦೦೦ ವರೆಗಿನ ಚಿತ್ರಕಲಾ ಸಾಹಿತ್ಯ ಎಂಬುದಾಗಿ ಹಂತಗಳನ್ನು ಮಾಡಿಕೊಂಡು ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಕ್ರಮಬದ್ಧ ಇತಿಹಾಸವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಪ್ರಾಗಿತಿಹಾಸ ಕಾಲದ ಚಿತ್ರಕಲಾ ಸಾಹಿತ್ಯದಲ್ಲಿ ಚಿತ್ರಕಲಾಕೃತಿಗಳೇ ಸಾಹಿತ್ಯದ ಪಾತ್ರವನ್ನು ನಿರ್ವಹಿಸಿದ್ದರ ಬಗ್ಗೆ ತಿಳಿಸಲಾಗಿದೆ. ಕ್ರಿ.ಪೂ.೫ನೇ ಶತಮಾನದಿಂದ ಕವಿರಾಜಮಾರ್ಗದವರೆಗಿನ ಚಿತ್ರಕಲಾ ಸಾಹಿತ್ಯವನ್ನು ರೂಪಿಸುವಲ್ಲಿ ಶಾಸನ ಬರಹಗಳೇ ಪ್ರಮುಖ ಪಾತ್ರ ವಹಿಸಿರುವುದನ್ನು ಬಿಂಬಿಸಲಾಗಿದೆ. ಕವಿರಾಜ ಮಾರ್ಗದಿಂದ ಇಸ್ಲಾಂ ದೊರೆಗಳವರೆಗಿನ ಕಾಲಮಾನದಲ್ಲಿ ವೈವಿಧ್ಯ ರೀತಿಯ ಸಾಹಿತ್ಯ ರಚನೆಗೊಂಡಿದ್ದು, ಅವೆಲ್ಲವುಗಳಲ್ಲಿ ಉಲ್ಲೇಖಗೊಂಡಿರುವ ಮತ್ತು ಸಾಂದರ್ಭಿಕವಾಗಿ ಪ್ರಸ್ತಾಪಗೊಂಡಿರುವ ಚಿತ್ರಕಲಾ ಸಂಗತಿ ಗಳನ್ನು ಬಳಸಿಕೊಂಡು ಆ ಕಾಲದ ಚಿತ್ರಕಲಾ ಇತಿಹಾಸವನ್ನು ಕ್ರಮಾನುಗತವಾಗಿ ರೂಪಿಸಲಾಗಿದೆ: ಇಸ್ಲಾಂ ದೊರೆಗಳ ಕಾಲದಲ್ಲಿ ರಚನೆಗೊಂಡ ಪರ್ಶಿಯನ್ ಮತ್ತು ಇತರ ಭಾಷೆಯ ಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಇಪ್ಪತ್ತನೆಯ ಶತಮಾನದಿಂದ ಕ್ರಿ.ಶ.೨೦೦೬ರ ವರೆಗಿನ ಕಾಲಮಾನದಲ್ಲಿ ಕರ್ನಾಟಕದ ಚಿತ್ರಕಲಾ ಸಾಹಿತ್ಯವು ವೈವಿಧ್ಯಮಯವಾಗಿ ಬೆಳೆದುಬಂದಿದ್ದು, ಈ ಹಂತದ ಬೆಳವಣಿಗೆಯನ್ನು ಪ್ರತ್ಯೇಕ ದಶಕಗಳಾಗಿ ವಿಂಗಡಿಸಿಕೊಂಡು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಚಿತ್ರಕಲಾ ಸಾಹಿತ್ಯ ಕೃತಿಗಳು ಲಭ್ಯವಿಲ್ಲದ ಸಂದರ್ಭದಲ್ಲಿ ಸಮಕಾಲೀನ ಶಾಸನಗಳು, ಭಿತ್ತಿಚಿತ್ರಗಳು ಮತ್ತು ಹಸ್ತಪ್ರತಿ ಚಿತ್ರಗಳನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ.

ಈ ಅಧ್ಯಾಯದಲ್ಲಿ ಚಿತ್ರಕಲಾ ಇತಿಹಾಸವನ್ನು ರೂಪಿಸುವ ಸಂದರ್ಭದಲ್ಲಿ ಪ್ರಾಚೀನ ಪ್ರಾಕೃತ, ಸಂಸ್ಕೃತ, ಕನ್ನಡ, ಇಂಗ್ಲೀಷ್, ಹಿಂದಿ ಮುಂತಾದ ಇತರೆ ಭಾಷಾ ಕೃತಿಗಳನ್ನು ಸಂದರ್ಭಾನುಸಾರವಾಗಿ ಬಳಸಿಕೊಂಡು ಆಯಾ ಕಾಲದ ಚಿತ್ರಕಲಾ ಇತಿಹಾಸವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಚಿತ್ರಕಲಾ ಸಂಪಾದನಾ ಸಾಹಿತ್ಯವನ್ನು ಕುರಿತು ಅಧ್ಯಯನ ಮಾಡಲಾಗಿದೆ. ಕರ್ನಾಟಕದಲ್ಲಿ ಕನ್ನಡ ದಲ್ಲಿ ಚಿತ್ರಕಲಾ ಸಾಹಿತ್ಯವು ಪ್ರಾರಂಭಿಕ ಹಂತದಲ್ಲಿ ಹೆಚ್ಚು ರಚನೆಗೊಳ್ಳ ತೊಡಗಿದ್ದು ಸಂಪಾದನಾ ಸ್ವರೂಪದಲ್ಲಿಯೆ ಎನ್ನಬಹುದು. ಚಿತ್ರಕಲಾ ಸಂಪಾದನಾ ಸಾಹಿತ್ಯವನ್ನು ಅಭಿನಂದನೆ ಹಿನ್ನೆಲೆಯ ಸಂಪಾದನಾ ಸಾಹಿತ್ಯ, ಸ್ಮರಣಸಂಚಿಕೆ ಹಿನ್ನೆಲೆಯ ಸಂಪಾದನಾ ಸಾಹಿತ್ಯ ಮತ್ತು ಸಂಕೀರ್ಣ ಹಿನ್ನೆಲೆಯ ಸಂಪಾದನಾ ಸಾಹಿತ್ಯ ಎಂಬುದಾಗಿ ಮೂರು ರೀತಿಯಲ್ಲಿ ವಿಂಗಡಿಸಿಕೊಂಡು ವಿಶ್ಲೇಷಿಸಲಾಗಿದೆ.

ಅಭಿನಂದನೆ ಹಿನ್ನೆಲೆಯ ಸಂಪಾದನಾ ಸಾಹಿತ್ಯವು ವ್ಯಕ್ತಿಗಳ ಅಭಿನಂದನಾ ಸಮಾರಂಭದ ಸವಿನೆನಪಿಗಾಗಿ ರಚನೆಗೊಂಡಿದೆ. ಅದರಲ್ಲಿ ಅವರ ವ್ಯಕ್ತಿತ್ವ, ಆಸಕ್ತಿಯ ಕ್ಷೇತ್ರ ಮತ್ತು ಕಲಾಕ್ಷೇತ್ರಕ್ಕೆ ಅವರು ನೀಡಿದ ಕೊಡುಗೆಗಳನ್ನು ಕುರಿತ ಲೇಖನಗಳು ಹಾಗೂ ಚಿತ್ರಕಲೆಯ ಬೇರೆ ಬೇರೆ ಪ್ರಕಾರಗಳಿಗೆ ಸಂಬಂಧಿಸಿದ ಲೇಖನಗಳನ್ನು ಅಳವಡಿಸಿ ಸಂಪಾದನೆ ಮಾಡಲಾಗಿದೆ. ಅವೆಲ್ಲವುಗಳನ್ನು ಇಲ್ಲಿ ವಿವೇಚಿಸಲಾಗಿದೆ.

ಶಾಲೆ-ಕಾಲೇಜುಗಳು, ಸಂಘ-ಸಂಸ್ಥೆಗಳು, ತಮ್ಮ ವಾರ್ಷಿಕೋತ್ಸವ ಸಮಾರಂಭದ ಸವಿನೆನಪಿಗಾಗಿ ಹೊರತಂದ ಸ್ಮರಣ ಸಂಚಿಕೆಗಳಲ್ಲಿ ಕಲೆಯ ಕುರಿತು ಲೇಖನಗಳಿದ್ದು, ಅವುಗಳನ್ನು ಸ್ಮರಣ ಸಂಚಿಕೆ ಹಿನ್ನೆಲೆಯ ಸಂಪಾದನಾ ಸಾಹಿತ್ಯ ಎಂಬ ವಿಂಗಡಣೆಯಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಇವುಗಳಲ್ಲದೆ ಕೆಲವು ಸಮ್ಮೇಳನಗಳಲ್ಲಿ ಮಂಡಿತವಾದ ಪ್ರಬಂಧಗಳನ್ನು ಒಬ್ಬರು ಇಲ್ಲವೆ ಇಬ್ಬರು ಸಂಪಾದನೆ ಮಾಡಿ ಪ್ರಕಟಿಸಲಾಗುತ್ತದೆ. ಇಂತಹ ವಿಶೇಷ ಸಂದರ್ಭಗಳಲ್ಲದೆ ಕೆಲವು ವ್ಯಕ್ತಿಗಳು ತಾವು ಬರೆದ ಬೇರೆ ಬೇರೆ ಲೇಖನಗಳನ್ನು ಸಂಪಾದಿಸಿ ಪ್ರಕಟಿಸುವುದೂ ಕಂಡುಬರುತ್ತದೆ. ಇಂತಹ ಎಲ್ಲ ಪ್ರಕಾರದ ಸಂಪಾದನಾ ಕೃತಿಗಳನ್ನು ಸಂಕೀರ್ಣ ಹಿನ್ನೆಲೆಯ ಸಂಪಾದನಾ ಸಾಹಿತ್ಯ ಎಂಬುದಾಗಿ ಪರಿಗಣಿಸಿ ಅಧ್ಯಯನಕ್ಕೊಳಪಡಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಚಿತ್ರಕಲಾ ವ್ಯಕ್ತಿ ಅಧ್ಯಯನ ಸಾಹಿತ್ಯವನ್ನು ಕುರಿತು ವಿವೇಚಿಸಲಾಗಿದೆ. ಕರ್ನಾಟಕದಲ್ಲಿ ಕನ್ನಡದಲ್ಲಿ ಹೊರಬಂದ ಚಿತ್ರಕಲಾ ಸಾಹಿತ್ಯದಲ್ಲಿ ಹೆಚ್ಚಿನ ಪ್ರಮಾಣ ಕಲಾವಿದರ ಕುರಿತ ಅಧ್ಯಯನವೇ ಆಗಿದೆ. ಇದರಲ್ಲಿ ಬಹುಮಟ್ಟಿನ ಕೃತಿಗಳು ರಾಜ್ಯ ಲಲಿತಕಲಾ ಅಕಾಡಮಿಯಿಂದ ಪ್ರಕಟಗೊಂಡಿರುವುದು ತಿಳಿದುಬರುತ್ತದೆ. ವ್ಯಕ್ತಿ ಅಧ್ಯಯನ ಕುರಿತ ಈ ಅಧ್ಯಾಯದಲ್ಲಿ ಉತ್ತರ ಕರ್ನಾಟಕದ ಕಲಾವಿದರ ಬಗ್ಗೆ ಬಂದ ಸಾಹಿತ್ಯ, ದಕ್ಷಿಣ ಕರ್ನಾಟಕದ ಕಲಾವಿದರ ಬಗ್ಗೆ ಬಂದ ಸಾಹಿತ್ಯ, ಕರಾವಳಿ ಕರ್ನಾಟಕದ ಕಲಾವಿದರ ಬಗ್ಗೆ ಬಂದ ಸಾಹಿತ್ಯ, ಹೊರರಾಜ್ಯದ ಕಲಾವಿದರ ಬಗ್ಗೆ ಬಂದ ಸಾಹಿತ್ಯ, ಅಂತರಾಷ್ಟ್ರೀಯ ಕಲಾವಿದರ ಬಗ್ಗೆ ಬಂದ ಸಾಹಿತ್ಯ ಮತ್ತು ಕಲಾವಿದರ ಪರಿಚಯ ಲೇಖನಗಳ ಸಾಹಿತ್ಯ ಎಂಬುದಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.ಕನ್ನಡದಲ್ಲಿ ಪ್ರಕಟಗೊಂಡ ವ್ಯಕ್ತಿ ಅಧ್ಯಯನದ ಕುರಿತ ಕೃತಿಗಳು ಬಹುಮಟ್ಟಿಗೆ ಒಂದು ಸಿದ್ಧ ಮಾದರಿಯನ್ನು ಅನುಸರಿಸಿದಂತೆ ಕಂಡುಬರುತ್ತದೆ. ರಾಜ್ಯ ಲಲಿತಕಲಾ ಅಕಾಡೆಮಿಯು ಹೊರತಂದ ಕೃತಿಗಳಿಗೆ ಈ ಮಾತು ಹೆಚ್ಚು ಅನ್ವಯಿಸುತ್ತದೆ. ಕಲಾವಿದರ ಸಂಕ್ಷಿಪ್ತ ಜೀವನ, ಅದರಲ್ಲಿ ಅವರ ಬಾಲ್ಯ, ಶಿಕ್ಷಣ, ಕಲಾಶಿಕ್ಷಣ, ವೃತ್ತಿ, ಪ್ರವೃತ್ತಿ, ಕಲಾಬದುಕು, ಕಲಾಶೈಲಿ, ಕಲಾಕೃತಿಗಳು, ಸಂದ ಪ್ರಶಸ್ತಿ ಪುರಸ್ಕಾರಗಳು ಇವುಗಳ ಬಗ್ಗೆ ಸ್ಥೂಲ ಮಾಹಿತಿ ಕೊಡಲಾಗಿದೆ. ಕಲಾಕೃತಿಗಳ ಬಗೆಗಿನ ವಿಶ್ಲೇಷಣೆ, ವಿಮರ್ಶೆ, ತೌಲನಿಕ ಅಧ್ಯಯನ ಗಳಂತಹ ಕೊರತೆಗಳು ಇಲ್ಲಿ ಕಂಡುಬಂದರೂ ಕಲಾವಿದರ ಬಗೆಗಿನ ಪ್ರಾಥಮಿಕ ಹಂತದ ಮಾಹಿತಿಯನ್ನು ಈ ಕೃತಿಗಳಿಂದ ಪಡೆಯ ಬಹುದಾಗಿದೆ ಎಂಬುದನ್ನು ಇಲ್ಲಿ ತಿಳಿಸಲಾಗಿದೆ.

ಉತ್ತರ ಕರ್ನಾಟಕದ ಕಲಾವಿದರು ಮುಂಬೈ ಆಡಳಿತ ವ್ಯವಸ್ಥೆಯ ಪ್ರಾಂತ್ಯದಲ್ಲಿದ್ದವರಾಗಿದ್ದರಿಂದ ಸಹಜವಾಗಿ ಹೆಚ್ಚಿನ ಕಲಾ ಶಿಕ್ಷಣಕ್ಕಾಗಿ ಮುಂಬೈ ಜೆ.ಜೆ.ಕಲಾಶಾಲೆಗೆ ಹೋಗಿ ಬಂದಿರುವುದು ತಿಳಿಯುತ್ತದೆ. ಅದರಂತೆ ಕರಾವಳಿ ಕರ್ನಾಟಕದ ಕಲಾವಿದರ ಕೃತಿಗಳಲ್ಲಿ ಸಮುದ್ರ, ಅಲ್ಲಿನ ಸಾಂಸ್ಕೃತಿಕ ಪರಂಪರೆಗಳು, ಪ್ರಭಾವ ಬೀರಿರುವುದು ಕಂಡುಬರುತ್ತದೆ. ಹೊರರಾಜ್ಯದ ಕಲಾವಿದರ ಬಗ್ಗೆ ಬಂದ ಸಾಹಿತ್ಯದಲ್ಲಿ ಅವರ ಕಲೆ, ಕಲಾಕೃತಿಗಳ ಬಗೆಗಿನ ವಿವರಗಳಿಗಿಂತ ಕಲಾಚಟುವಟಿಕೆಗಳನ್ನು ಗಮನದಲ್ಲಿರಿಸಿ ಕೊಂಡು ಕೃತಿ ರಚಿಸಿದ್ದು ಕಂಡುಬರುತ್ತದೆ. ಅಂತರಾಷ್ಟ್ರೀಯ ಕಲಾವಿದರ ಬಗ್ಗೆ ಬಂದ ಸಾಹಿತ್ಯದಲ್ಲಿ ಅವರ ಕಲಾ ಸಿದ್ಧಾಂತಗಳು, ಕಲಾ ಚಟುವಟಿಕೆಗಳು ಮತ್ತು ಸಂಕ್ಷಿಪ್ತ ಕಲಾಬದುಕು ನಿರೂಪಣೆಗೊಂಡಿವೆ. ಹೀಗೆ ಹತ್ತು ಹಲವು ಸಂಗತಿಗಳು ಕಲಾವಿದರ ಬಗ್ಗೆ ಈ ಅಧ್ಯಾಯದಲ್ಲಿ ವಿಶ್ಲೇಷಣೆಗೆ ಒಳಪಟ್ಟಿವೆ.

ಐದನೆಯ ಅಧ್ಯಾಯದಲ್ಲಿ ಚಿತ್ರಕಲಾ ಅನುವಾದ ಸಾಹಿತ್ಯ, ಇಂಗ್ಲೀಷ್ ಭಾಷೆಯಲ್ಲಿ ಬಂದ ಸಾಹಿತ್ಯ ಮತ್ತು ಪ್ರವಾಸ ಸಾಹಿತ್ಯ ಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಚಿತ್ರಕಲಾ ಅನುವಾದ ಸಾಹಿತ್ಯದಲ್ಲಿ ಪ್ರಾಚೀನ ಸಂಸ್ಕೃತ ಸಾಹಿತ್ಯ ಕೃತಿಗಳ ಅನುವಾದ ಸಾಹಿತ್ಯ, ಇಂಗ್ಲೀಷ ಮತ್ತು ಇತರ ಭಾಷೆಯ ಸಾಹಿತ್ಯ ಕೃತಿಗಳ ಅನುವಾದ ಸಾಹಿತ್ಯ ಎಂಬುದಾಗಿ ವಿಂಗಡಿಸಿಕೊಂಡು ವಿವೇಚಿಸಲಾಗಿದೆ. ಪ್ರಾಚೀನ ಸಂಸ್ಕೃತ ಸಾಹಿತ್ಯ ಕೃತಿಗಳ ಅನುವಾದ ಸಾಹಿತ್ಯದಲ್ಲಿ ವಿಷ್ಣು ಧರ್ಮೋತ್ತರ ಪುರಾಣ, ಮಾನಸೋಲ್ಲಾಸ, ಕಾಮಸೂತ್ರ, ಕಾಶ್ಯಪ ಶಿಲ್ಪಶಾಸ್ತ್ರ, ಶಿವತತ್ವ ರತ್ನಾಕರ, ಶ್ರೀತತ್ವನಿಧಿ, ಬ್ರಾಹ್ಮೀ ಚಿತ್ರಕರ್ಮಶಾಸ್ತ್ರಂ, ಸೌಗಂಧಿಕಾ ಪರಿಣಯಗಳಂತಹ ಚಿತ್ರಕಲಾ ಮಹತ್ವದ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಂಗ್ಲೀಷ ಮತ್ತು ಇತರ ಭಾಷಾ ಸಾಹಿತ್ಯ ಕೃತಿಗಳ ಅನುವಾದ ಸಾಹಿತ್ಯದಲ್ಲಿ ಇಂಗ್ಲೀಷ, ಹಿಂದಿ, ತೆಲುಗು ಮತ್ತು ಮರಾಠಿ ಭಾಷೆಯಿಂದ ಕನ್ನಡಕ್ಕೆ ಅನುವಾದಗೊಂಡ ಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಅದರಂತೆ ಚಿತ್ರಕಲಾ ಇಂಗ್ಲೀಷ ಭಾಷೆಯ ಸಾಹಿತ್ಯದಲ್ಲಿ ಕ್ರಿ.ಶ.೧೮೬೬ ರಲ್ಲಿ ಪ್ರಕಟಗೊಂಡ ಮೆಡೋಸ್ ಟೇಲರ್ ಆರ್ಕಿಟೆಕ್ಚರ್ ಆಫ್ ಬಿಜಾಪೂರ ಎಂಬ ಕೃತಿಯಿಂದ ಆರಂಭಿಸಿ ಹಲವಾರು ಪ್ರಖ್ಯಾತ ಬರಹಗಾರರು ರಚಿಸಿರುವ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮೆಡೋಸ್ ಟೇಲರ್ ಅಲ್ಲದೆ ಸ್ಟೆಲ್ಲಾಕ್ರಾಮ್ರಿಶ್ಚ, ಆನಂದ ಕುಮಾರಸ್ವಾಮಿ, ಇ.ಬಿ.ಹ್ಯಾವೆಲ್, ಸಿ.ಶಿವರಾಮಮೂರ್ತಿ, ಶಿವರಾಮಕಾರಂತ ರಂತಹ ಖ್ಯಾತ ಬರಹಗಾರರು ಬರೆದ ಇಂಗ್ಲೀಷ ಕೃತಿಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಇಂದಿಗೂ ಬಹುಮಟ್ಟಿನ ಅಧಿಕೃತ ಕಲಾವಿಷಯಗಳು ಇಂಗ್ಲೀಷ ಗ್ರಂಥಗಳಿಂದ ತಿಳಿದು ಬರುತ್ತಿದ್ದು, ಈ ಅಧ್ಯಾಯದಲ್ಲಿ ಈ ಕೃತಿಗಳಲ್ಲಿನ ಕಲಾ ವಿಷಯಗಳ ಬಗ್ಗೆ ವಿಶ್ಲೇಷಿಸಲಾಗಿದೆ.

ಚಿತ್ರಕಲಾ ಪ್ರವಾಸ ಸಾಹಿತ್ಯದಲ್ಲಿ ಎರಡು ರೀತಿಯ ಕೃತಿಗಳನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಮೊದಲ ಗುಂಪಿನ ಕೃತಿಗಳು ಪ್ರವಾಸ ಸಂದರ್ಭದಲ್ಲಿ ಪ್ರಾಸಂಗಿಕವಾಗಿ ಬರುವ ಕಲಾವಿವರಗಳನ್ನು ಒಳಗೊಂಡಿದ್ದು, ಅದರಲ್ಲಿ ಆ ಪ್ರದೇಶದ ಕಲಾಸಂಸ್ಕೃತಿ, ಕಲಾನೆಲೆಗಳು, ಕಲಾವಿದರು, ಕಲಾಪ್ರಕಾರಗಳು, ಕಲಾ ಸಂಗ್ರಹಾಲಯಗಳು, ಕಲಾಶೈಲಿಗಳು ಮುಂತಾದ ಸಂಗತಿಗಳನ್ನು ಹೇಳಲಾಗಿದೆ. ಅದರಂತೆ ಎರಡನೆ ಗುಂಪಿನ ಕೃತಿಗಳಲ್ಲಿ ನಿರ್ದಿಷ್ಟ ಪ್ರದೇಶ ಒಂದರಲ್ಲಿ ಕಲಾಪ್ರವಾಸ ಕೈಗೊಂಡು ಅಲ್ಲಿನ ಕಲೆ, ಐತಿಹಾಸಿಕ ಹಿನ್ನೆಲೆ, ಕಲಾವಿದರು, ಕಲಾಪ್ರಕಾರಗಳು, ಕಲಾನೆಲೆಗಳು, ಕಲಾಶೈಲಿಗಳು, ವೈಶಿಷ್ಟತೆ, ಕಲಾಶಾಲೆಗಳು, ಮುಂತಾದ ವಿವರಗಳನ್ನು ಬಿಂಬಿಸಲಾಗಿದ್ದು ಅವುಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಈ ಮೂಲಕ ಹೊರರಾಜ್ಯ ಮತ್ತು ಅಂತರಾಷ್ಟ್ರೀಯ ಕಲಾವಿವರಗಳು ಕನ್ನಡದಲ್ಲಿ ವ್ಯಕ್ತಗೊಂಡಿರುವುದನ್ನು ಪ್ರಸ್ತುತ ಅಧ್ಯಾಯದಲ್ಲಿ ವಿವೇಚನೆಗೆ ಒಳಪಡಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಚಿತ್ರಕಲಾ ಸಂಶೋಧನಾ ಸಾಹಿತ್ಯವನ್ನು ಕುರಿತು ವಿಶ್ಲೇಷಿಸಲಾಗಿದೆ. ಪಿಎಚ್.ಡಿ. ಸಂಶೋಧನಾ ಸಾಹಿತ್ಯ, ಎಂ.ಫಿಲ್.ಸಂಶೋಧನಾ ಸಾಹಿತ್ಯ, ಡಿ.ಲಿಟ್.ಸಂಶೋಧನಾ ಸಾಹಿತ್ಯ, ಸ್ನಾತಕೋತ್ತರ ಪದವಿ ಮಟ್ಟದ ಪ್ರಬಂಧಗಳು ಮತ್ತು ಸ್ನಾತಕ ಪದವಿ ಮಟ್ಟದ ಕಿರು ಪ್ರಬಂಧಗಳೆಂಬುದಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಪಿ.ಎಚ್.ಡಿ. ಪ್ರಬಂಧಗಳಲ್ಲಿ ಮತ್ತು ಎಂ.ಫಿಲ್. ಪ್ರಬಂಧಗಳಲ್ಲಿ ಕ್ಷೇತ್ರೀಯ ಅಧ್ಯಯನಗಳು ಹಾಗೂ ವ್ಯಕ್ತಿ ಅಧ್ಯಯನಗಳು ಎಂಬುದಾಗಿ ಮತ್ತೆ ಎರಡು ಬಗೆಯಲ್ಲಿ ವಿಂಗಡಿಸಿ ವಿಶ್ಲೇಷಣೆ ಮಾಡಲಾಗಿದೆ.

ಚಿತ್ರಕಲಾ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಸಂಶೋಧನಾ ಸಾಹಿತ್ಯವು ಗಂಭೀರ ಸ್ವರೂಪದ ಸಾಹಿತ್ಯವಾಗಿದ್ದು, ಇಲ್ಲಿರುವ ವಿವರಗಳು ಹೆಚ್ಚು ವೈಜ್ಞಾನಿಕ ಹಿನ್ನೆಲೆಯಿಂದ ಕೂಡಿರುತ್ತವೆ. ಹಾಗಾಗಿ ಈ ಪ್ರಕಾರದ ಸಾಹಿತ್ಯವು ವಿಶಿಷ್ಟ ಸ್ಥಾನವನ್ನು ಪಡೆದು ಕೊಂಡಿದೆ ಎಂಬಂತಹ ಸಂಗತಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬಿಂಬಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಚಿತ್ರಕಲಾ ಸಂಕೀರ್ಣ ಸಾಹಿತ್ಯವನ್ನು ಕುರಿತು ವಿವೇಚಿಸಲಾಗಿದೆ. ಇಲ್ಲಿ ಮುಖ್ಯವಾಗಿ ಕರ್ನಾಟಕದ ಚಿತ್ರಕಲಾ ಸಾಹಿತ್ಯ, ಭಾರತೀಯ ಚಿತ್ರಕಲಾ ಸಾಹಿತ್ಯ, ಜಾಗತಿಕ ಚಿತ್ರಕಲಾ ಸಾಹಿತ್ಯ, ಕಲಾಪ್ರಕಾರ, ತತ್ವ, ವಿಮರ್ಶೆ ಮತ್ತು ಸಾಹಿತ್ಯ ಪ್ರಧಾನ ಚಿತ್ರಕಲಾ ಸಾಹಿತ್ಯ ಎಂಬುದಾಗಿ ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ. ಈ ನಾಲ್ಕು ಬಗೆಯ ವಿಂಗಡಣೆಯಲ್ಲಿ ಮತ್ತೆ ಉಪವಿಭಾಗಗಳನ್ನು ಮಾಡಿಕೊಂಡು ವಿಷಯ ನಿರೂಪಣೆ ಮಾಡಲಾಗಿದೆ.

ಕರ್ನಾಟಕದ ಚಿತ್ರಕಲಾ ಸಾಹಿತ್ಯದಲ್ಲಿ ಪ್ರಾಗಿತಿಹಾಸ ಚಿತ್ರಕಲಾ ಸಾಹಿತ್ಯ, ಜನಪದ ಚಿತ್ರಕಲಾ ಸಾಹಿತ್ಯ, ಕರಕುಶಲ ಚಿತ್ರಕಲಾ ಸಾಹಿತ್ಯ, ಶೈಕ್ಷಣಿಕ ಹಿನ್ನೆಲೆಯ ಚಿತ್ರಕಲಾ ಸಾಹಿತ್ಯ, ಚಿತ್ರಕಲಾ ಪರಿಚಯಾತ್ಮಕ ಸಾಹಿತ್ಯ ಮತ್ತು ಕಲಾಪ್ರದರ್ಶನಗಳ ಕ್ಯಾಟಲಾಗ್ ಸಾಹಿತ್ಯ ಎಂದು ವಿಂಗಡಿಸಿ ವಿವರಿಸಲಾಗಿದೆ.

ಪ್ರಾಗಿತಿಹಾಸ ಚಿತ್ರಕಲಾ ಸಾಹಿತ್ಯದಲ್ಲಿ ಕರ್ನಾಟಕದ ಆದಿಮಾನವ ಕಾಲದ ಶಿಲಾಶ್ರಯ ಮತ್ತು ಬಯಲು ಬಂಡೆಯ ಚಿತ್ರಗಳ ಬಗ್ಗೆ ವಿವೇಚಿಸಿರುವ ಕೃತಿಯನ್ನು ಪರಿಗಣಿಸಲಾಗಿದೆ. ಅದರಂತೆ ಜನಪದ ಚಿತ್ರಕಲಾ ಸಾಹಿತ್ಯದಲ್ಲಿ ರಂಗೋಲಿ, ಹಚ್ಚೆ, ಕಸೂತಿ, ಹಸೆ, ಬೆಳದಿಂಗಳ ಚಿತ್ರಕಲೆ, ಶೀಗಿ ಚಿತ್ರಕಲೆ, ಬಿದರಿ ಚಿತ್ರಕಲೆ, ಕಿನ್ನಾಳ ಚಿತ್ರಕಲೆ, ತೊಗಲುಗೊಂಬೆ ಕಲೆ, ಕಾವಿಕಲೆ, ಗಂಜೀಫಾಕಲೆ, ಮುಂತಾದವುಗಳ ಬಗ್ಗೆ ಬಂದಿರುವ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕರಕುಶಲ ಚಿತ್ರಕಲಾ ಸಾಹಿತ್ಯದಲ್ಲಿ ಗೊಂಬೆ ತಯಾರಿಕೆ, ಬೆಂಡಿನಿಂದ ಹಾರಗಳನ್ನು ತಯಾರಿಸುವುದು, ಕಾಗದದಿಂದ ವಿವಿಧ ಅಲಂಕಾರಿಕ ವಸ್ತುಗಳನ್ನು ನಿರ್ಮಿಸುವುದು, ಎಂಬೋಜಿಂಗ್ ಕೃತಿಗಳನ್ನು ರಚಿಸುವುದು, ಕಸೂತಿ, ಹೊಲಿಗೆ, ಹೆಣಿಗೆ, ಇಕೆಬಾನಾ ಮತ್ತು ಮಹಿಳೆಯರ ಅಲಂಕಾರಗಳಂತಹ ವಿಷಯಗಳು ಸ್ಥೂಲವಾಗಿ ಹೇಳಲ್ಪಟ್ಟಿವೆ,

ಶೈಕ್ಷಣಿಕ ಹಿನ್ನೆಲೆಯ ಚಿತ್ರಕಲಾ ಸಾಹಿತ್ಯದಲ್ಲಿ ಚಿಕ್ಕಮಕ್ಕಳ ಚಿತ್ರಕಲೆ, ಮಕ್ಕಳು ಚಿತ್ರಕಲೆಯನ್ನು ಹೇಗೆ ಕಲಿಯಬೇಕು, ಹವ್ಯಾಸಕ್ಕಾಗಿ ಕಲಿಯುವವರು ಚಿತ್ರಕಲೆಯನ್ನು ಯಾವ ರೀತಿ ಕಲಿಯಬೇಕು, ರೇಖಾಚಿತ್ರ, ನಕ್ಷಾಚಿತ್ರ, ಚುಕ್ಕಿಚಿತ್ರ, ಸ್ಮರಣಚಿತ್ರ, ವರ್ಣಲೇಪನ ಮುಂತಾದ ಅಂಶಗಳನ್ನು ಸುಲಭವಾಗಿ ಯಾವ ರೀತಿಯಲ್ಲಿ ಕಲಿಯಬೇಕೆಂಬುದರ ಬಗ್ಗೆ ಇಲ್ಲಿನ ಕೃತಿಗಳು ವಿವರ ಕೊಡುತ್ತವೆ ಎಂಬುದನ್ನು ತಿಳಿಸಲಾಗಿದೆ.

ಕರ್ನಾಟಕದ ಚಿತ್ರಕಲಾ ಪರಿಚಯಾತ್ಮಕ ಸಾಹಿತ್ಯದಲ್ಲಿ ಕರ್ನಾಟಕದ ಚಿತ್ರಕಲಾ ಪರಂಪರೆ, ಐತಿಹಾಸಿಕ ಹಿನ್ನೆಲೆ, ಕಲಾಪ್ರಕಾರಗಳು, ಶೈಲಿಗಳು, ರಚನಾಕ್ರಮ, ಕಲಾಪರಿಕರಗಳಂತಹ ಸಂಗತಿಗಳು ಬಿಂಬಿಸಲ್ಪಟ್ಟಿವೆ. ಅದರಂತೆ ಕಲಾಪ್ರದರ್ಶನಗಳ ಕ್ಯಾಟಲಾಗ್ ಸಾಹಿತ್ಯದಲ್ಲಿ ಕಲಾಪ್ರದರ್ಶನ ಮಾಡಿದ ಕಲಾವಿದರ ಸಂಕ್ಷಿಪ್ತ ಪರಿಚಯ, ಕಲಾಕೃತಿ, ಕಲಾವಿಮರ್ಶೆ, ಕಲಾಶೈಲಿಗಳ ಬಗ್ಗೆ ಸ್ಥೂಲವಾಗಿ ತಿಳಿಸಲಾಗಿದೆ.

ಭಾರತೀಯ ಚಿತ್ರಕಲಾ ಸಾಹಿತ್ಯದಲ್ಲಿ ಚಿತ್ರಕಲಾ ಪರಿಚಯಾತ್ಮಕ ಸಾಹಿತ್ಯ ಮತ್ತು ಭಾರತೀಯ ಜನಪದ, ಕರಕುಶಲ ಗ್ರಾಫಿಕ್ಸ್ ಮತ್ತು ನವ್ಯಚಿತ್ರಕಲಾ ಸಾಹಿತ್ಯ ಎಂಬುದಾಗಿ ವಿಂಗಡಿಸಿ ವಿವೇಚಿಸಲಾಗಿದೆ. ಚಿತ್ರಕಲಾ ಪರಿಚಯಾತ್ಮಕ ಸಾಹಿತ್ಯದಲ್ಲಿ ಭಾರತೀಯ ಚಿತ್ರಕಲಾ ಪರಂಪರೆ, ಐತಿಹಾಸಿಕ ಹಿನ್ನೆಲೆ, ಕಲಾಪ್ರಕಾರಗಳು, ಕಲಾಶೈಲಿಗಳು, ಕಲಾನೆಲೆಗಳು, ಮುಂತಾದ ಸಂಗತಿಗಳನ್ನು ಬಿಂಬಿಸಲಾಗಿದೆ. ಜಾನಪದ ಚಿತ್ರಕಲಾ ಸಾಹಿತ್ಯದಲ್ಲಿ ಮಧುಬನಿ, ವಾರ್ಲಿ, ರಥವಾ, ಪಟಚಿತ್ರ, ಗಂಜೀಫಾ, ರಂಗೋಲಿ, ಕಾಳಿಘಾಟ್ ಮುಂತಾದ ಜನಪದ ಕಲಾಪ್ರಕಾರಗಳ ಬಗ್ಗೆ ಮಾಹಿತಿ ಕೊಡಲಾಗಿದೆ. ಇದರ ಜೊತೆಗೆ ಭಾರತೀಯ ಕರಕುಶಲ ಕಲೆಯ ಕುರಿತ ಕೃತಿಗಳಲ್ಲಿ ರಂಗೋಲಿ, ಬಾಟಿಕ್ ಕಸೂತಿ, ಹೊಲಿಗೆ, ಹೆಣಿಗೆ, ಇಕೆಬಾನ, ಮೇಣಕಲೆ, ಪುಷ್ಪ ಜೋಡಣೆಯಂತಹ ವಿಷಯಗಳನ್ನು ಬಿಂಬಿಸಲಾಗಿರುವುದನ್ನು ತಿಳಿಸಲಾಗಿದೆ.

ಭಾರತೀಯ ಗ್ರಾಫಿಕ್ಸ್ ಕಲಾ ಸಾಹಿತ್ಯದಲ್ಲಿ ಭಾತರದಲ್ಲಿ ಗ್ರಾಫಿಕ್ ಕಲೆ ಬೆಳೆದುಬಂದ ಸಂಕ್ಷಿಪ್ತ ಇತಿಹಾಸ, ಲಿಥೋಗ್ರಾಫಿ, ಎಚ್ಚಿಂಗ್, ಲಿನೋಕಟ್, ಸ್ಕ್ರೀನ್‌ಪ್ರಿಂಟಿಂಗ್, ವುಡ್‌ಕಟ್‌ಗಳಂತಹ ಮಾಧ್ಯಮಗಳನ್ನು ಬಳಸುವ ವಿಧಾನಗಳನ್ನು ತಿಳಿಸಲಾಗಿದೆ. ಅಲ್ಲದೆ ಪ್ರತಿಯೊಂದು ಮಾಧ್ಯಮಗಳಲ್ಲಿ ಕೃತಿ ರಚಿಸುವ ವಿಧಾನಗಳ ಜೊತೆಗೆ ಅಲ್ಲಿ ಬಳಕೆಗೊಳ್ಳುವ ರಾಸಾಯನಿಕಗಳ ಬಗ್ಗೆಯೂ ಹೇಳಲಾಗಿದೆ. ಭಾರತೀಯ ನವ್ಯಚಿತ್ರಕಲಾ ಸಾಹಿತ್ಯದಲ್ಲಿ ಭಾರತದಲ್ಲಿ ನವ್ಯಕಲೆಯ ಆರಂಭ, ಬೆಳವಣಿಗೆ, ಪ್ರಮುಖ ಕಲಾವಿದರು, ಕಲಾಕೃತಿಗಳು, ಅವರ ಕಲಾಶೈಲಿ ತಂತ್ರಗಾರಿಕೆ, ವಸ್ತುವಿಷಯಗಳಂತಹ ಸಂಗತಿಗಳನ್ನು ಬಿಂಬಿಸಲಾಗಿದೆ.

ಜಾಗತಿಕ ಚಿತ್ರಕಲಾ ಸಾಹಿತ್ಯದಲ್ಲಿ ಪ್ರಾಚೀನ ಚಿತ್ರಕಲಾ ಸಾಹಿತ್ಯ, ನವ್ಯಚಿತ್ರಕಲಾ ಸಾಹಿತ್ಯ ಎಂಬುದಾಗಿ ವಿಂಗಡಿಸಿ ವಿವೇಚಿಸಲಾಗಿದೆ. ಪ್ರಾಚೀನ ಚಿತ್ರಕಲಾ ಸಾಹಿತ್ಯದಲ್ಲಿ ಇಜಿಪ್ತ, ಮೆಸೋಪೊಟೇಮಿಯಾ, ಬೆಬಿಲೋನ್, ಇಟ್ರುಸ್ಕನ್, ಚೀನಾ, ಮೆಕ್ಸಿಕೋ, ಮಾಯಾ ಮತ್ತು ಇಂಕಾ ನಾಗರಿಕತೆಯ ಬಗ್ಗೆ ಹೇಳಲಾಗಿದೆ.

ಜಾಗತಿಕ ನವ್ಯ ಚಿತ್ರಕಲಾ ಸಾಹಿತ್ಯದಲ್ಲಿ ನವ್ಯಕಲೆ ಆರಂಭಗೊಂಡು ಬೆಳೆದುಬಂದ ರೀತಿ, ಇಂಪ್ರೆಸ್‌ನಿಜಮ್, ಪೋಟೆರಿಯಲಿಜಮ್, ಎಕ್ಸಪ್ರೆಸ್‌ನಿಜಮ್, ಸರ್ರಿಯಲಿಜಂ, ಅಬ್‌ಸ್ಟ್ರಾಕ್ಟ್ ಕಲೆ, ಪೋಷ್ಟಮಾಡರ್ನಿಜಂ, ಪಾಪ್‌ಕಲೆ ಮುಂತಾದವುಗಳ ಬಗ್ಗೆ ವಿವೇಚಿಸಲಾಗಿದೆ. ಹೀಗೆ ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿತಗೊಂಡ ವಿಷಯಗಳ ಮುಖ್ಯ ಫಲಿತಗಳನ್ನು ಮೇಲಿನಂತೆ ಹೇಳಬಹುದಾಗಿದೆ.

ಪ್ರಸ್ತುತ ಕರ್ನಾಟಕದ ಚಿತ್ರಕಲಾ ಸಾಹಿತ್ಯ ಕುರಿತಾದ ಈ ಅಧ್ಯಯನದಿಂದ ಒಟ್ಟಾರೆಯಾಗಿ ಕೆಳಗಿನ ಪ್ರಮುಖ ಅಂಶಗಳನ್ನು ಕಂಡುಕೊಳ್ಳಲಾಗಿದೆ.

೧. ಕರ್ನಾಟಕದ ಚಿತ್ರಕಲಾ ಸಾಹಿತ್ಯವು ಬೇರೆ ಬೇರೆ ಗ್ರಂಥಗಳಲ್ಲಿ ಶಾಸನ ಬರಹಗಳಲ್ಲಿ ಸಾಂದರ್ಭಿಕವಾಗಿ ಪ್ರಾಚೀನ ಕಾಲದಿಂದಲೆ ರಚನೆಗೊಳ್ಳುತ್ತ ಬಂದಿದ್ದರೂ ಚಿತ್ರಕಲೆ ಕುರಿತ ಪ್ರತ್ಯೇಕ ಸಾಹಿತ್ಯ ಕೃತಿಗಳು ಕನ್ನಡದಲ್ಲಿ ಕ್ರಿ.ಶ. ೧೮ನೇ ಶತಮಾನದವರೆಗೂ ರಚನೆಯಾದಂತೆ ಕಂಡುಬರುವುದಿಲ್ಲ.

೨. ಮೈಸೂರು ಅರಸರ ಕಾಲದಲ್ಲಿ ಶ್ರೀತತ್ವನಿಧಿ, ಸೌಗಂಧಿಕಾ ಪರಿಣಯ, ಸಚಿತ್ರ ಭಾರತ ಮುಂತಾದ ಕೃತಿಗಳು ಚಿತ್ರಕಲೆಯನ್ನ ಹೆಚ್ಚಾಗಿ ಅಳವಡಿಸಿಕೊಂಡಿದ್ದರೂ ಪ್ರತ್ಯೇಕ ಚಿತ್ರಕಲಾ ಸಾಹಿತ್ಯ ಕೃತಿಗಳಾಗಿ ಅವು ಕಂಡುಬರುವುದಿಲ್ಲ.

೩. ಕರ್ನಾಟಕದ ಕಲಾಸಾಹಿತ್ಯ ಅದರಲ್ಲೂ ಚಿತ್ರಕಲಾ ಸಾಹಿತ್ಯ ರಚನೆಯ ಪ್ರತ್ಯೇಕ ಪ್ರಯತ್ನಗಳು ಪಾಶ್ಚಾತ್ಯರಿಂದ ಆರಂಭಗೊಂಡಂತೆ ತಿಳಿದು ಬರುತ್ತದೆ. ಮೆಡೋಸ್ ಟೇಲರ್, ಸ್ಟೆಲ್ಲಾಕ್ರಾಮ್ರಿಶ್, ಆನಂದಕುಮಾರಸ್ವಾಮಿ, ಇ.ಬಿ.ಹ್ಯಾವೆಲ್ ಇವರ ಕಲೆಯ ಕುರಿತ ಬರಹಗಳಲ್ಲಿ ಪ್ರಾಸಂಗಿಕವಾಗಿ ಕರ್ನಾಟಕದ ಚಿತ್ರಕಲೆಯ ಬಗ್ಗೆ ಪ್ರಸ್ತಾಪಗೊಂಡಿರುವುದು ಗಮನಿಸಬಹುದಾಗಿದೆ.

೪. ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಇತಿಹಾಸವನ್ನು ಕ್ರಮಾನುಗತವಾಗಿ ಪ್ರಾಗಿತಿಹಾಸ ಕಾಲದಿಂದಲೆ ಕಟ್ಟಿಕೊಡುವ ಮೊದಲ ಪ್ರಯತ್ನ ಇಲ್ಲಿ ಕಂಡುಬರುತ್ತದೆ. ಕರ್ನಾಟಕದ ಚಿತ್ರಕಲಾ ಇತಿಹಾಸವನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಆಯಾಕಾಲದ ಶಾಸನ ಬರಹಗಳು, ಬೇರೆ ಸಾಹಿತ್ಯ ಕೃತಿಗಳಲ್ಲಿ ಸಾಂದರ್ಭಿಕವಾಗಿ ಉಲ್ಲೇಖಗೊಂಡ ಚಿತ್ರಕಲಾ ಸಂಗತಿಗಳುಮತ್ತು ಚಿತ್ರಕಲಾ ಕೃತಿಗಳ ಆಧಾರವನ್ನು ಬಳಸಿಕೊಳ್ಳಲಾಗಿದೆ.

೫. ಕರ್ನಾಟಕದ ಚಿತ್ರಕಲಾ ಸಾಹಿತ್ಯದಲ್ಲಿ ಸಂಪಾದನಾ ಸಾಹಿತ್ಯ, ವ್ಯಕ್ತಿ ಅಧ್ಯಯನ ಸಾಹಿತ್ಯ, ಸಂಶೋಧನಾ ಸಾಹಿತ್ಯ, ಪ್ರವಾಸ ಸಾಹಿತ್ಯ, ಅನುವಾದ ಸಾಹಿತ್ಯ, ಬೇರೆ ಭಾಷೆಗಳ ಸಾಹಿತ್ಯ, ಎಂಬುದಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಿರುವುದು ಮೊದಲ ಪ್ರಯತ್ನವಾಗಿದೆ.

೬.ಕನ್ನಡದಲ್ಲಿ ಚಿತ್ರಕಲಾ ಸಾಹಿತ್ಯ ರಚನೆಯು ಪ್ರತ್ಯೇಕವಾಗಿ ಇಪ್ಪತ್ತನೆಯ ಶತಮಾನದ ಆರಂಭಿಕ ಹಂತದಲ್ಲಿ ತೊಡಗಿಕೊಂಡಿದ್ದು, ಲೇಖನಗಳ ಸ್ವರೂಪದಿಂದ ಆರಂಭಗೊಂಡಿದೆ. ಮೊದಲ ಘಟ್ಟದ ಬರವಣಿಗೆಗಳು ಹೆಚ್ಚಾಗಿ ಇಂಗ್ಲೀಷ್ ಬರವಣಿಗೆಗಳ ಆಧಾರವನ್ನು ಹೊಂದಿರುವುದು ಕಂಡುಬರುತ್ತದೆ.

೭. ಇಪ್ಪತ್ತನೆಯ ಶತಮಾನದ ಅರವತ್ತರ ದಶಕದಲ್ಲಿ ಕರ್ನಾಟಕದ ಕಲಾವಲಯದಲ್ಲಿ ಹೊಸ ಬದಲಾವಣೆಗಳು ಉಂಟಾಗ ತೊಡಗಿದಂತೆ, ಕಲಾಸಾಹಿತ್ಯವೂ ವೈವಿಧ್ಯಮಯವಾಗಿ ರೂಪುಗೊಳ್ಳ ತೊಡಗಿರುವುದನ್ನು ಇಲ್ಲಿ ಗುರುತಿಸಲಾಗಿದೆ.

೮. ಆಧುನಿಕ ಸಾಹಿತ್ಯ ಕ್ಷೇತ್ರದಲ್ಲಿ ವಿಮರ್ಶೆ, ತೌಲನಿಕ ಮತ್ತು ವೈಚಾರಿಕ ಬರಹಗಳು ಹೆಚ್ಚಾಗುತ್ತಿದ್ದು, ಕಲಾ ಸಾಹಿತ್ಯದಲ್ಲಿ ಅದರಲ್ಲೂ ಚಿತ್ರಕಲಾ ಸಾಹಿತ್ಯದಲ್ಲಿ ಇಂತಹ ಪ್ರಯತ್ನಗಳ ಕೊರತೆ ಕಂಡುಬರುತ್ತದೆ.

೯. ಚಿತ್ರಕಲೆಯ ಹಿನ್ನೆಲೆಯಲ್ಲಿ ಚಿತ್ರಕಲಾ ಸಾಹಿತ್ಯ ರೂಪುಗೊಳ್ಳುತ್ತ ಬಂದಿದ್ದರೂ ಚಿತ್ರಕಲೆಯನ್ನು ದೃಶ್ಯಭಾಷೆಯಾಗಿ ಪರಿಗಣಿಸಿ, ಆ ಹಿನ್ನೆಲೆಯ ಕಲಾಸಾಹಿತ್ಯ ಕನ್ನಡದಲ್ಲಿ ರಚನೆಗೊಳ್ಳಬೇಕಾದ ಅವಶ್ಯಕತೆಯನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೧೦.ಕರ್ನಾಟಕದ ಚಿತ್ರಕಲಾ ಸಾಹಿತ್ಯದಲ್ಲಿ ಇದುವರೆಗೆ ಕನ್ನಡದಲ್ಲಿ ರಚನೆಗೊಂಡ ಸಾಹಿತ್ಯವು ಹೆಚ್ಚಿನ ಪ್ರಮಾಣದಲ್ಲಿ ಪರಿಚಯಾತ್ಮಕವಾಗಿರುವುದೇ ಕಂಡುಬರುತ್ತದೆ. ಅದರಲ್ಲೂ ಚಿತ್ರದ ವಸ್ತುವಿಷಯಗಳು, ಭಾವಭಂಗಿಗಳು ಮತ್ತು ಆಶಯಗಳು, ಸ್ವಲ್ಪಮಟ್ಟಿಗೆ ಬಣ್ಣಲೇಪನ, ರೇಖಾವಿನ್ಯಾಸಗಳ ಕುರಿತು ತಿಳಿಸುವ ಪ್ರಯತ್ನಗಳಾಗಿವೆ. ಆದರೆ ಚಿತ್ರದ ಸಂಯೋಜನೆ, ರಚನಾವಿನ್ಯಾಸ, ಮೈವಳೀಕೆ, ಸ್ಥಳಾವಕಾಶ, ಬಣ್ಣಲೇಪನದ ಪ್ರಭಾವ, ಅದರ ಹಿಂದಿರುವ ಭಾವನಾತ್ಮಕ ಸಂಗತಿಗಳು, ಮಾಧ್ಯಮ,

ಇಂತಹ ತಾಂತ್ರಿಕ ಸಂಗತಿಗಳ ಬಗ್ಗೆ ಹೆಚ್ಚು ಗಮನ ಕೊಡದಿರುವ ಕೊರತೆಯನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಹೀಗೆ ಹಲವಾರು ಫಲಿತಗಳು ಈ ಅಧ್ಯಯನದಿಂದ ಹೊರಬಂದಿವೆ.

ಪ್ರಸ್ತುತ ಅಧ್ಯಯನವು ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಕೆಲವು ಅಂಶಗಳಿಗೆ ಸಂಬಂಧಿಸಿದ್ದಾಗಿದೆ. ಮೊದಲ ಪ್ರಯತ್ನ ಇದಾಗಿರುವುದರಿಂದ ಪ್ರತಿಯೊಂದು ಪ್ರಕಾರಗಳಲ್ಲೂ ಆಳವಾದ, ವಿಮರ್ಶಾತ್ಮಕ, ಮತ್ತು ತೌಲನಿಕ ಅಂಶಗಳನ್ನು ಹೆಚ್ಚಾಗಿ ಬಳಸಿಕೊಂಡಿಲ್ಲ ಎಂಬಂತಹ ಮಿತಿ ಇದಕ್ಕಿದೆ. ಚಿತ್ರಕಲಾ ಸಾಹಿತ್ಯದಲ್ಲಿ ಪತ್ರಿಕಾ ಸಾಹಿತ್ಯವು ಸಹಿತ ವಿಫಲವಾಗಿ ಬೆಳವಣಿಗೆಯಾಗಿದ್ದು ಅಧ್ಯಯನದ ಸೀಮಿತ ವ್ಯಾಪ್ತಿಯಿಂದಾಗಿ ಪ್ರಸ್ತುತ ಅಧ್ಯಯನವು ಚಿತ್ರಕಲಾ ಸಾಹಿತ್ಯಕ್ಕೆ, ಕಲಾಕ್ಷೇತ್ರಕ್ಕೆ, ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಅನೇಕ ಮಹತ್ವ ಪೂರ್ಣವಾದ ಅಂಶಗಳನ್ನು ಬೆಳಕಿಗೆ ತಂದಿದೆ ಎಂದು ಹೇಳಬಹುದು. ಇದಲ್ಲದೆ ಕರ್ನಾಟಕ ಚಿತ್ರಕಲಾ ಸಾಹಿತ್ಯದ ಬಗ್ಗೆ ಇನ್ನೂ ಅನೇಕ ದೃಷ್ಟಿಕೋನಗಳಿಂದ ಹಾಗೂ ಇಲ್ಲಿರುವ ವಿಂಗಡಣೆಗಳನ್ನು ಆಯ್ದುಕೊಂಡು ಪ್ರತ್ಯೇಕ ಅಧ್ಯಯನ ಮಾಡುವ ಅವಕಾಶಗಳಿವೆ ಎಂಬುದನ್ನು ಹೇಳಬಯಸುತ್ತೇನೆ.

ಮುಂದಿನ ಅಧ್ಯಯನಗಳಿಗೆ ಪ್ರಸ್ತುತ ಅಧ್ಯಯನ ಒಂದು ಆಕರ ಸಾಮಗ್ರಿಯಾಗಿದೆ. ಸುಮಾರು ಮೂರುನೂರಕ್ಕೂ ಹೆಚ್ಚು ಚಿತ್ರಕಲಾ ಸಾಹಿತ್ಯ ಕೃತಿಗಳು ಕರ್ನಾಟಕದಲ್ಲಿ ರಚನೆಗೊಂಡಿವೆ. ಅವುಗಳನ್ನೆಲ್ಲ ಇಲ್ಲಿ ಸ್ಥೂಲವಾಗಿ ಸಮೀಕ್ಷೆಯ ರೂಪದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇನ್ನು ನಮ್ಮ ಗಮನಕ್ಕೆ ಬಾರದ ಅಲ್ಲಲ್ಲಿ ಕೆಲವು ಗ್ರಂಥಗಳು ಉಳಿದುರುವ ಸಾಧ್ಯತೆಯಿದ್ದು, ಅವು ನಮ್ಮ ಗಮನಕ್ಕೆ ಬಂದರೆ ಅವುಗಳನ್ನು ಪ್ರಕಟಣೆಯ ಸಂದರ್ಭದಲ್ಲಿ ಗಮನಿಸಲಾಗುತ್ತದೆ. ಈ ಅಧ್ಯಯನ ಇಲ್ಲಿಯವರೆಗೆ ಪ್ರಕಟವಾದ ಚಿತ್ರಕಲಾ ಸಾಹಿತ್ಯ ಕೃತಿಗಳನ್ನು ಒಂದೆಡೆಗೆ ತಂದು ಅವುಗಳ ಕುರಿತು ವಿವೇಚಿಸಲಾಗಿದೆ. ಕೆಲವು ಸಂಶೋಧನ ಪಿಹೆಚ್.ಡಿ., ಎಂ.ಫಿಲ್. ಮಹಾಪ್ರಬಂಧಗಳು ಅಪ್ರಕಟಿತವಾಗಿದ್ದರೂ ಮೂಲ ವಿ.ವಿ.ಗಳಿಗೆ ಸಲ್ಲಿಸಿದ ಪ್ರಬಂಧಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಸಂಶೋಧನ ಯೋಜನಾ ವರದಿಗಳು, ಸ್ನಾತಕ, ಸ್ನಾತಕೋತ್ತರ ಕಿರು ಪ್ರಬಂಧಗಳದೆ ಒಂದು ಪ್ರತ್ಯೇಕ ಅಧ್ಯಯನದ ವ್ಯಾಪ್ತಿ ಹೊಂದಿರುವುದರಿಂದ ಅವುಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಿಕೊಂಡಿಲ್ಲ. ಈ ಅಧ್ಯಯನ ಪುಟಗಳ ಮಿತಿಯನ್ನು ಹೊಂದಿದ್ದು ವ್ಯಾಪಕವಾದ ಅಧ್ಯಯನ ಮಾಡಲು ಸಾಧ್ಯವಾಗಿಲ್ಲ. ಮುಂದಿನ ಅಧ್ಯಯನಕ್ಕೆ ಈ ಸಣ್ಣ ಪ್ರಯತ್ನ ಸಹಾಯಕಾರಿಯಾದರೆ ನಮ್ಮ ಶ್ರಮ ಸಾರ್ಥಕವಾದಂತಾಗುತ್ತದೆ.

***

# ಅನುಬಂಧ – ೧

## ಸಂಕ್ಷೇಪಗಳು

ಕ.ವಿ.ಹಂ. : ಕನ್ನಡ ವಿಶ್ವವಿದ್ಯಾಲಯ ಹಂಪಿ
ಕ.ವಿ.ವಿ. : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಬೆಂ.ವಿ.ವಿ. : ಬೆಂಗಳೂರು ವಿಶ್ವವಿದ್ಯಾಲಯ
ಮೈ.ವಿ.ವಿ. : ಮೈಸೂರು ವಿಶ್ವವಿದ್ಯಾಲಯ
ಕು.ವಿ.ವಿ. : ಕುವೆಂಪು ವಿಶ್ವವಿದ್ಯಾಲಯ
ಗು.ವಿ.ವಿ. : ಗುಲಬರ್ಗಾ ವಿಶ್ವವಿದ್ಯಾಲಯ
ಮ.ವಿ.ವಿ. : ಮಂಗಳೂರು ವಿಶ್ವವಿದ್ಯಾಲಯ
ಕ.ರಾ.ಮು.ವಿ. : ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ
ಕ.ಲ.ಕ.ಅ. : ಕರ್ನಾಟಕ ಲಲಿತಕಲಾ ಅಕಾಡಮಿ
ಕೇ.ಲ.ಕ.ಅ. : ಕೇಂದ್ರ ಲಲಿತಕಲಾ ಅಕಾಡಮಿ
ಕ.ಸಾ.ಪ. : ಕನ್ನಡ ಸಾಹಿತ್ಯ ಪರಿಷತ್ತು
ಕ.ಜ.ಅ. : ಕರ್ನಾಟಕ ಜನಪದ ಅಕಾಡಮಿ
ಕ.ಶಿ.ಕ.ಅ. : ಕರ್ನಾಟಕ ಶಿಲ್ಪಕಲಾ ಅಕಾಡಮಿ
ರಾ.ಪು.ಇ. : ರಾಜ್ಯ ಪುರಾತತ್ವ ಇಲಾಖೆ
ಪ್ರಾ.ರ.ಕ.ಅ.ಕೇ. : ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ
ಚಿ.ಕು.ಉ. : ಚಿತ್ರಕುಟೀರ ಉಡುಪಿ
ಕ.ರಾ.ಚಿ.ಶಿ.ಸಂ : ಕರ್ನಾಟಕ ರಾಜ್ಯ ಚಿತ್ರಕಲಾ ಶಿಕ್ಷಕರ ಸಂಘ
ಕ.ರಾ.ಅ.ಸಂ.ವೆ. : ಕರ್ನಾಟಕ ರಾಜ್ಯ ಅಕಾಡಮಿಗಳ ಸಂಯುಕ್ತ ವೇದಿಕೆ, ಬೆಂಗಳೂರು
ಬಾ.ಗ್ರಾ.ಅ.ಸಂ.ಬಾ. : ಬಾಪೂಜಿ ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಬಾಗಲಕೋಟೆ
ಚಿ.ಕ.ಪ. (ಸಿ.ಕೆ.ಪಿ.) : ಚಿತ್ರಕಲಾ ಪರಿಷತ್ತು
ಕ.ಸಂ.ನಿ. : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ವಿ.ಮಾ.ಮೌ.ಅ.ಪೀ.: ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಅಧ್ಯಯನ ಪೀಠ
ಕ.ಅ.ಪೀ.ಕ.ವಿ.ವಿ. : ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ
ಭಾ.ಕ.ಪ್ರದೆ. : ಭಾರತೀಯ ಕಲಾಪ್ರಕಾಶನ, ದೆಹಲಿ
ಸ.ಕ.ಸಾ.ಚ. : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ
ಕ.ಸಾ.ಚ. : ಕನ್ನಡ ಸಾಹಿತ್ಯ ಚರಿತ್ರೆ
ಜ.ಚ.ನಿ. : ಜಗದ್ಗುರು ಚನ್ನಮಲ್ಲ ಶಿವಾಚಾರ್ಯರು, ನಿಡುಮಾಮಿಡಿ
ಅ.ನ.ಸು. : ಅ. ನ. ಸುಬ್ಬರಾವ
ವಿ.ಸೀ. : ವಿ. ಸೀತಾರಾಮಯ್ಯ
ಜಿ.ಶಂ.ಪ. : ಜಿ. ಶಂ. ಪರಮಶಿವಯ್ಯ
ಕು.ವೆಂ.ಪು. : ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ
ಅ.ನ.ಕೃ : ಅ. ನ. ಕೃಷ್ಣರಾಯರು
ಸಾ.ಕೃ.ರಾ. : ಸಾಲಿಗ್ರಾಮ ಕೃಷ್ಣರಾಮಚಂದ್ರ ರಾಯರು
ವಿ.ಕೃ.ಗೋ : ವಿನಾಯಕ ಕೃಷ್ಣ ಗೋಕಾಕ
ಸಿ.ಪಿ.ಕೆ. : ಸಿ. ಪಿ. ಕೃಷ್ಣಕುಮಾರ

## ಅನುಬಂಧ – ೨
## ಗ್ರಂಥಋಣ

**ಕನ್ನಡ ಗ್ರಂಥಗಳು :**


೦೧. **ಅಬ್‌ಸ್ಟ್ರ್ಯಾಕ್ಟ್ ಕಲೆ** : ಆರ್.ಎ. ಶಾಂತರಾಜ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೯೫

೦೨. **ಅಜಂತಾ ಮತ್ತು ಎಲ್ಲೋರಾ** : ಎಂ.ಎಚ್.ಕೃಷ್ಣ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ–೧೯೬೭

೦೩. **ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು** : ಎಸ್.ವಿ.ವೆಂಕಟೇಶಯ್ಯ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಪ್ರಬಂಧ–೨೦೦೫

೦೪. **ಅಕಾಡಮಿ ಸಂಗ್ರಹದ ಹಿರಿಯ ಕಲಾವಿದರ ಕಲಾಕೃತಿಗಳ ಪ್ರದರ್ಶನ** : ಎಚ್.ಎ.ಅನಿಲಕುಮಾರ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೨೦೦೦

೦೫. **ಅಭಿನವ ಗುಪ್ತ** : ಜಿ.ಟಿ.ದೇಶಪಾಂಡೆ : ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು–೨೦೦೦

೦೬. **ಅಪೂರ್ವ ಪಶ್ಚಿಮ** : ಶಿವರಾಮ ಕಾರಂತ : ರಾಜಲಕ್ಷ್ಮೀ ಪ್ರಕಾಶನ, ಬಳೆಪೇಟೆ ಬೆಂಗಳೂರು–೧೯೭೭

೦೭. **ಅ.ನ.ಸುಬ್ಬರಾವ್** : ಹರಿಪ್ರಿಯ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೯೭

೦೮. **ಅಮೀನಸಾಹೇಬ ಕಮಡೊಳ್ಳಿ** : ಬಿ.ಕೆ.ಹೀರೇಮಠ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೮೪

೦೯. **ಆರ್.ಎಂ.ಹಡಪದ** : ಎನ್.ಮರಿಚಾಮಾಚಾರ್ : ಸಂಯೋಜಿತ ಸಂಸ್ಥೆ, ಬೆಂಗಳೂರು–೧೯೯೬

೧೦. **ಆರ್.ಎಂ.ಹಡಪದ** : ಎಂ.ಎಚ್.ಕೃಷ್ಣಯ್ಯ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೯೭

೧೧. **ಆಧುನಿಕ ಕಲೆ** : ಶ್ರೀನಿವಾಸಮೂರ್ತಿ :ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೯೧

೧೨. **ಆನಂದಕುಮಾರಸ್ವಾಮಿ** : ಕೆ.ಎಸ್.ಶ್ರೀನಿವಾಸಮೂರ್ತಿ : ಅಕ್ಷರ ಪ್ರಕಾಶನ, ಹೆಗ್ಗೋಡು–೧೯೯೫

೧೩. **ಆಟ–ಮಾಟ** : ಕೆ.ಎಸ್.ಶ್ರೀನಿವಾಸಮೂರ್ತಿ ಆಭಿನವ ಪ್ರಕಾಶನ, ಬೆಂಗಳೂರು–೨೦೦೨

೧೪. **ಆಲೇಖ್ಯ** : ಅ.ಲ.ನರಸಿಂಹನ್ : ಸಂಯೋಜಿತ ಪ್ರಕಾಶನ, ಬೆಂಗಳೂರು–೧೯೯೯

೧೫. **ಇಂಪ್ರೆಷ್‌ನಿಜಮ್** : ಅ.ಲ.ನರಸಿಂಹನ್ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೯೪

೧೬. **ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ** : ಯಾದಪ್ಪ ಪರದೇಶಿ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಪ್ರಬಂಧ–೨೦೦೦

೧೭. **ಋಗ್ವೇದ ಸಾರ** : ಶಂ.ಭಾ.ಜೋಶಿ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ–೧೯೭೧

೧೮. **ಎಂ.ವ್ಹಿ.ಮಿಣಜಗಿ** : ಗವೀಶ ಹಿರೇಮಠ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೮೩

೧೯. **ಎಂ.ಎ.ಚೆಟ್ಟಿ** : ಅನ್ನದಾನಿ ಹಿರೇಮಠ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು–೧೯೮೫

೨೦. **ಎಸ್.ಎಂ.ಪಂಡಿತ** : ವ್ಹಿ.ಜಿ.ಅಂದಾನಿ : ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ–೨೦೦೫

೨೧. **ಎಸ್.ಎಂ.ಪಂಡಿತ** : ವ್ಹಿ.ಟಿ.ಕಾಳೆ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು–೧೯೮೯

೨೨. **ಎಂ.ಟಿ.ಭೋಪಲೆ** : ಡಿ.ಎನ್.ಅಕ್ಕಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೯೯

೨೩. **ಎಂ.ಬಿ.ಪಾಟೀಲ** : ಬಿ.ಎಸ್.ವೆಂಕಟಲಕ್ಷ್ಮೀ : ಕರ್ನಾಟಕ ಲಲಿತಕಲಾ ಅಕಾಡಮಿ,ಬೆಂಗಳೂರು–೨೦೦೦

೨೪. **ಎಂ.ವೀರಪ್ಪ** : ಪಿ.ಆರ್.ತಿಪ್ಪೇಸ್ವಾಮಿ : ಕರ್ನಾಟಕ ಲಲಿತಕಲಾ ಅಕಾಡಮಿ. ಬೆಂಗಳೂರು–೧೯೮೬

೨೫. **ಎಸ್.ಆರ್.ಅಯ್ಯಂಗಾರ** : ಅ.ಲ.ನರಸಿಂಹನ್ :ಕರ್ನಾಟಕ ಲಲಿತಕಲಾ ಅಕಾಡಮಿ. ಬೆಂಗಳೂರು–೧೯೮೭

೨೬. **ಎನ್.ಹನಮಯ್ಯ** : ಕೆ.ವಿ.ಸುಬ್ರಹ್ಮಣ್ಯ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೯

೨೭. **ಎಂ.ಟಿ.ವ್ಹಿ.ಆಚಾರ್ಯ** : ಚಿ.ಸು.ಕೃಷ್ಣಶೆಟ್ಟಿ : ಕರ್ನಾಟಕ ಲಲಿತಕಲಾ ಅಕಾಡಮಿ. ಬೆಂಗಳೂರು-೧೯೯೦

೨೮. **ಎಸ್.ನಂಜುಂಡಸ್ವಾಮಿ** : ಪಿ.ಆರ್.ತಿಪ್ಪೇಸ್ವಾಮಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೪

೨೯. **ಎಂ.ಎಸ್.ಚಂದ್ರಶೇಖರ್** : ಯು.ಎಸ್.ವೆಂಕಟರಾಮನ್ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೪

೩೦. **ಎಂ.ಜಿ.ಶುದ್ಧೋಧನ** : ಎಚ್.ಎಂ.ಪರಮೇಶ್ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೫

೩೧. **ಎಸ್.ಎಸ್.ಕುಕ್ಕೆ** : ವ್ಹಿ.ಟಿ.ಎಸ್.ರಾವ್ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೭

೩೨. **ಎಂ.ಎಫ್.ಸೂಫಿ** : ಪಿ.ಆರ್.ತಿಪ್ಪೇಸ್ವಾಮಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೮

೩೩. **ಎಸ್.ಎಸ್.ಮುನೋಳಿ** : ಮಮತಾ ಜಿ.ಸಾಗರ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೮

೩೪. **ಎಂ.ರಾಮನರಸಯ್ಯ** : ರಾಮದಾಸ್ ಅಡ್ಯಂತಾಯ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೦

೩೫. **ಎಸ್.ಜಿ.ವಾಸುದೇವ** : ಕೆ.ವ್ಹಿ.ಸುಬ್ರಹ್ಮಣ್ಯ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೧

೩೬. **ಎನ್.ಎಸ್.ಸುಬ್ಬುಕೃಷ್ಣ** : ಎಚ್.ವ್ಹಿ.ಗಾಯತ್ರಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೮

೩೭. **ಎನ್.ಜಿ.ಪಾವಂಜೆ** : ಎಂ.ಟಿ.ವ್ಹಿ.ಆಚಾರ್ಯ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೩

೩೮. **ಎಂ.ವ್ಹಿ.ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳು** :ಸಿ.ಡಿ.ಜಟ್ಟೆಣ್ಣವರ :ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಪ್ರಬಂಧ-೨೦೦೫

೩೯. **ಕಲಾತಪಸ್ವಿ** : ಮಹಾಲಿಂಗ ಯಾಳಗಿ (ಸಂ) ಎಂ.ಎ.ಚೆಟ್ಟಿ ಅಭಿನಂದನಾ ಸಮಿತಿ, ಗದಗ-೧೯೯೧

೪೦. **ಕಲಾವಿದ ಅಂದಾನಿ ಐವತ್ತು** : ಚಂದ್ರಹಾಸ ವೈ.ಜಾಲಿಹಾಳ (ಸಂ) ಅಂದಾನಿ ಗೆಳೆಯರ ಬಳಗದ ಪ್ರಕಾಶನ, ಗುಲಬರ್ಗಾ-೧೯೯೯

೪೧. **ಕಲಾನಿವೇದನ** : ಅ.ನ.ಸುಬ್ಬರಾವ್ (ಸಂ) : ಕಲಾಪ್ರಕಾಶನ, ಕಲಾಮಂದಿರ, ಬೆಂಗಳೂರು-೧೯೬೬

೪೨. **ಕಲಾವಿಚಾರ ಸಂಕಿರಣ** : ಟಿ.ಪಿ.ಅಕ್ಕಿ (ಸಂ) : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೩

೪೩. **ಕಲಾಚೇತನ** : ಎನ್.ಮರಿಶಾಮಾಚಾರ (ಸಂ) : ಸಂಯೋಜಿತ ಸಂಸ್ಥೆ, ಬೆಂಗಳೂರು-೧೯೯೫

೪೪. **ಕಲಾಗಂಗೋತ್ರಿ** : ತುಮಕೂರು ಶಿವಕುಮಾರ (ಸಂ) : ಕಲೆ, ಸಾಹಿತ್ಯ, ಸಂಸ್ಕೃತಿ ಮತ್ತು ರಂಗಭೂಮಿ ಸಂಸ್ಥೆ, ಬೆಂಗಳೂರು-೨೦೦೦

೪೫. **ಕಲಾಕ್ವಿಜ್** : ಎನ್.ವಿಶ್ವರೂಪಾಚಾರ (ಸಂ) : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೯೦

೪೬. **ಕಲಾಕೋಶ** : ಎನ್.ಮರಿಶಾಮಾಚಾರ್, ಅ.ಲ.ನರಸಿಂಹನ್ (ಸಂ) : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೪

೪೭. **ಕಲಾ ಪಯಣಿಗರು** : ಅಶೋಕ ಶೆಟ್ಟರ (ಸಂ) : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೮

೪೮. **ಕಲಾಸ್ವರೂಪ ಮತ್ತು ಪ್ರಚಾರ ಕಲೆ** : ವ್ಹಿ.ಜಿ.ಅಂದಾನಿ (ಸಂ) : ಐಡಿಯಲ್ ಫೈನ್ ಆರ್ಟ ಸಂಸ್ಥೆ, ಗುಲಬರ್ಗಾ-೨೦೦೧

೪೯. **ಕಲಾ ಚರಿತ್ರೆ** : ಎನ್.ಮರಿಶಾಮಾಚಾರ (ಸಂ) : ಕರ್ನಾಟಕ ಶಿಲ್ಪಕಲಾ ಅಕಾಡಮಿ, ಬೆಂಗಳೂರು-೨೦೦೨

೫೦. **ಕಲಾಗುರು ದಂಡಾವತಿಮಠ** : ಬಿ.ಕೆ. ಹಿರೇಮಠ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೩

೫೧. **ಕಲೋಪಾಸಕ ಎಂ.ಜಿ.ವಾಚೇದಮಠ** : ಸುರೇಶ ಕುಲಕರ್ಣಿ : ಶ್ರೀಮತಿ, ಶಾರದಾ ವಾಚೇದಮಠ ಪ್ರಕಾಶನ, ಧಾರವಾಡ-೧೯೮೫

೫೨. **ಕಲಾತಪಸ್ವಿ ಮಿಣಜಗಿ** : ಶಂಕರ ಪಾಟೀಲ : ಜಗದ್ಗುರು ಮೂರುಸಾವಿರಮಠ, ಹುಬ್ಬಳ್ಳಿ-೧೯೮೭

೫೩. **ಕಲಾತಪಸ್ವಿ ವೆಂಕಟಪ್ಪ** : ಸಾ.ಕೃ.ರಾಮಚಂದ್ರರಾವ : ಪ್ರಾಚ್ಯವಸ್ತುಸಂಗ್ರಹಾಲಯಗಳ ನಿರ್ದೇನಾಲಯ, ಹೊಸಪೇಟೆ-೨೦೦೪

೫೪. **ಕಲಾಸಾಧಕ ಎನ್.ಮರಿಶಾಮಾಚಾರ** : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೯೬

೫೫. **ಕಲಾವಿದ ಹೆಬ್ಬಾರರ ರೇಖಾಲಾವಣ್ಯ** : ವ್ಯಾಸರಾಯ ಬಲ್ಲಾಳ : ನವಕರ್ನಾಟಕ ಪಬ್ಲಿಕೇಶನ್, ಬೆಂಗಳೂರು-೧೯೯೯

೫೬. **ಕಟ್ಟಂಗೇರಿ ಕೃಷ್ಣ ಹೆಬ್ಬಾರ ಕಲೆ ಮತ್ತು ಬದುಕು** : ಕು.ಸಿ.ಹರಿದಾಸಭಟ್ಟ : ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ-೧೯೯೮

೫೭. **ಕಲಾತತ್ವ ಮಹರ್ಷಿ ಆನಂದಕುಮಾರಸ್ವಾಮಿ** : ಸಾ.ಕೃ.ರಾಮಚಂದ್ರರಾವ : ಅಭಿಜ್ಞಾನ ಪ್ರಕಾಶನ, ಜಯನಗರ, ಬೆಂಗಳೂರು-೨೦೦೦

೫೮. **ಕಲಾವಿದ ಎಂ.ಎ.ಚೆಟ್ಟಿ ಜೀವನ ಮತ್ತು ಕಲಾಕಲಾಕೃತಿಗಳು** : ಲಕ್ಷ್ಮೀದೇವಿ ಗವಾಯಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಪ್ರಬಂಧ-೨೦೦೨

೫೯. **ಕಲಾವಿದ ಆರ್.ಎಂ.ಹಡಪದ ಒಂದು ಅಧ್ಯಯನ** : ಸಿದ್ಧಲಿಂಗಸ್ವಾಮಿ ಹಿರೇಮಠ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಪ್ರಬಂಧ-೨೦೦೩

೬೦. **ಕಲಾವಿದ ಡಿ.ವ್ಹಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು** : ಶಂಕ್ರಪ್ಪ ಕುಂದಗೋಳ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಪ್ರಬಂಧ-೨೦೦೫

೬೧. **ಕಲಾತತ್ವ** : ಸಿ.ಪಿ.ಕೃಷ್ಣಕುಮಾರ (ಅನು) : ಸಹ್ಯಾದ್ರಿ ಪ್ರಕಾಶನ, ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು-೧೯೭೬

೬೨. **ಕಲಾವಿದ ಕಂಡ ಫ್ರಾನ್ಸ್** : ಪಿ.ಆರ್.ತಿಪ್ಪೇಸ್ವಾಮಿ : ಮೈಯೂರ ಪಬ್ಲಿಕೇಶನ್ಸ್, ಬೆಂಗಳೂರು-೧೯೯೪

೬೩. **ಕಲಾವಿದನ ನೆನಪುಗಳು** : ಪಿ.ಆರ್.ತಿಪ್ಪೇಸ್ವಾಮಿ : ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು-೧೯೯೬

೬೪. **ಕಲಾಚರಿತ್ರೆ** : ಅಶೋಕ ಟಿ.ಅಕ್ಕಿ : ಶಾಬಾದಿಮಠ ಬುಕ್ ಡಿಪೋ, ಗದಗ-೧೯೮೭

೬೫. **ಕಲಾ ಅರ್ಪಣ** : ಶ್ರೀಮತಿ ಪ್ರಭಾಶಂಕರ : ಪ್ರಭಾಶಂಕರ ಪ್ರಕಾಶನ, ಬೆಂಗಳೂರು-೧೯೮೩

೬೬. **ಕಲಾನುಭವ** : ವಿ.ಸೀತಾರಾಮಯ್ಯ : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ-೧೯೭೬

೬೭. **ಕಲಾ ಸಂಕಲನ** : ಎನ್.ಮರಿಶಾಮಾಚಾರ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೯೪

೬೮. **ಕಲಾ ಸಂವೇದನೆಯ ಒಳನೋಟಗಳು** : ಕೆ.ವ್ಹಿ.ಸುಬ್ರಹ್ಮಣ್ಯ : ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು-೧೯೯೭

೬೯. **ಕಲಾ ಮನೋವಿಜ್ಞಾನ** : ಎನ್.ವಿಶ್ವರೂಪಾಚಾರ್ : ವಿಶ್ವರೂಪ ಪ್ರಕಾಶನ, ಬೆಂಗಳೂರು-೨೦೦೪

೭೦. **ಕಲೆ ಮತ್ತು ರಸಸ್ವಾದನೆ** : ಎಂ.ಎಚ್.ಕೃಷ್ಣಯ್ಯ (ಸಂ) : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೯

೭೧. **ಕಲೆ ಮತ್ತು ಮನುಷ್ಯ ಸಂಸ್ಕೃತಿ** : ಜ್ಯೋತಿ ಹೊಸೂರ (ಸಂ) : ಕಾಲಗತಿ ಗ್ರಂಥಮಾಲೆ, ಬೆಂಗಳೂರು-೧೯೯೦

೭೨. **ಕಲೆಗಾರರ ಕಥೆಗಳು** : ಬಿ.ಪಿ.ಬಾಯಿರಿ : ಸಮಾಜ ಪುಸ್ತಕಾಲಯ, ಧಾರವಾಡ-೧೯೯೫

೭೩. **ಕಲೆಯ ಅರ್ಥ** : ಎಚ್.ಎಸ್.ಶ್ರೀಮತಿ (ಅನು) : ಚಿತ್ರಕಲಾ ಪರಿಷತ್, ಬೆಂಗಳೂರು-೧೯೯೮

೭೪. **ಕಲೆ ಎಂದರೇನು?** : ಸಿ.ಪಿ.ಕೆ.(ಅನು) : ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೦

೭೫. **ಕಲೆಯ ದರ್ಶನ** : ಶಿವರಾಮ ಕಾರಂತ : ರಾಜಲಕ್ಷ್ಮೀ ಪ್ರಕಾಶನ, ಬೆಂಗಳೂರು-೧೯೫೦

೭೬. **ಕಲೆಯ ನೆಲೆ** : ವಿ.ಕೃ.ಗೋಕಾಕ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ-೧೯೮೦

೭೭. **ಕಳೆ-ಕಲೆ** : ಜ.ಚ.ನಿ. : ಜಗದ್ಗುರು ಶ್ರೀಶೈಲ ನಿಡುಮಾಮಿಡಿ ಪುಸ್ತಕ ಭಂಡಾರ, ಬೆಂಗಳೂರು-೧೯೮೦

೭೮. **ಕಲೆ ಮತ್ತು ನಾನು** : ಎಂ.ಟಿ.ವ್ಹಿ.ಆಚಾರ್ಯ : ಆಚಾರ್ಯ ಚಿತ್ರಕಲಾ ಭವನ, ಬೆಂಗಳೂರು-೧೯೮೫

೭೯. **ಕಲೆ, ಅನುಭವ ಮತ್ತು ಅನುಭಾವ** : ಚಂದ್ರಕಾಂತ ಕೂಸನೂರ : ಮಾಲಗತ್ತಿ ಪಬ್ಲಿಷಿಂಗ್ ಹೌಸ್, ಸದಾಶಿವ ನಗರ.

೮೦. **ಕಲೆ ಮತ್ತು ಮನೋವಿಕಾಸ** : ಸಿ.ಆರ್.ಚಂದ್ರಶೇಖರ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೫

೮೧. **ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ** : ಬಿ.ಕೆ.ಹಿರೇಮಠ : ವೀರಶೈವ ಅಧ್ಯಯನ ವೇದಿಕೆ, ಕಸಬಾ ಜಂಬಗಿ-೧೯೯೨

೮೨. **ಕನ್ನಡ ವೃತ್ತಿರಂಗಭೂಮಿ ಹಾಗೂ ರಂಗವಿನ್ಯಾಸ** : ದೇವದಾಸ ಕಳಸದ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಡಿ.ಲಿಟ್. ಪ್ರಬಂಧ-೨೦೦೦

೮೩. **ಕರ್ನಾಟಕದ ಜನಪದ ಕಲೆಗಳ ಕೋಶ** : ಹಿ.ಚಿ.ಬೋರಲಿಂಗಯ್ಯ (ಸಂ) : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ-೧೯೯೬

೮೪. **ಕರ್ನಾಟಕ ಕಲಾವಿದರ ಪರಿಚಾಯಾವಳಿ** : ವ್ಹಿ.ಜಿ.ಅಂದಾನಿ (ಸಂ) : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೦

೮೫. **ಕರ್ನಾಟಕದ ಜನಪದ ಚಿತ್ರಕಲೆ** : ಡಾ.ಎಸ್.ಸಿ.ಪಾಟೀಲ : ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ-೧೯೯೩

೮೬. **ಕರ್ನಾಟಕದ ಬುಡಕಟ್ಟು ಚಿತ್ರಕಲೆ** : ಎಂ.ಕೆ.ಗಿರೀಶಕುಮಾರ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಪ್ರಬಂಧ-೨೦೦೨

೮೭. **ಕರ್ನಾಟಕದ ಜನಪದ ಶಿಲ್ಪಕಲೆ** : ಶಿವಾನಂದ ಬಂಟನೂರ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಪ್ರಬಂಧ-೨೦೦೨

೮೮. **ಕರ್ನಾಟಕದ ಸಮಕಾಲೀನ ಸಾಂಸ್ಕೃತಿಕ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು** : ಜಿ.ಓ.ಶಿವಕುಮಾರ : ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಪ್ರಬಂಧ-೨೦೦೩

೮೯. **ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ** : ವಜೀರಬಾಷಾ ಬಾಗಾಯತ್ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಪ್ರಬಂಧ-೨೦೦೩

೯೦. **ಕರ್ನಾಟಕದ ತೊಗಲುಗೊಂಬೆ ಚಿತ್ರಕಲೆ** : ಶಶಿಕಲಾ ಹೂಗಾರ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಪ್ರಬಂಧ-೨೦೦೪

೯೧. **ಕರ್ನಾಟಕದ ರಥಶಿಲ್ಪ ಕಲೆ ಒಂದು ಅಧ್ಯಯನ** : ಶಿವಪ್ರಕಾಶ ತುಕ್ಕಣ್ಣವರ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಪ್ರಬಂಧ-೨೦೦೫

೯೨. **ಕರ್ನಾಟಕದ ಐತಿಹಾಸಿಕ ದೀಪಸ್ಥಂಭಗಳು** : ಗೀತಾಂಜಲಿ ಆಚಾರ್ಯ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಪ್ರಬಂಧ-೨೦೦೭

೯೩. **ಕರ್ನಾಟಕದ ಕರಾವಳಿ ಚಿತ್ರಕಲೆ** : ಆನಂದ ಪೂಜಾರ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಪ್ರಬಂಧ-೨೦೦೫

೯೪. **ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ** : ಅ.ಸುಂದರ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೪

೯೫. **ಕರ್ನಾಟಕದ ಜನಪದ ಚಿತ್ತಾರಗಳು ಹಾಗೂ ಶಿಲ್ಪಗಳು** : ಮಹದೇವ ಜಗತಾಪ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೨೦೦೪

೯೬. **ಕರ್ನಾಟಕದ ಕಲೆಗಳು** : (ಸಂಪುಟ-೩) : ಬೆನಕನಹಳ್ಳಿ ಜಿ.ನಾಯಕ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೮೬

೯೭. **ಕರ್ನಾಟಕದಲ್ಲಿ ಚಿತ್ರಕಲೆ** : ಶಿವರಾಮ ಕಾರಂತ : ಐ.ಬಿ.ಎಚ್.ಪ್ರಕಾಶನ, ಬೆಂಗಳೂರು-೧೯೭೫

೯೮. **ಕರ್ನಾಟಕ ಕಲೆಗಳು** : ಪಿ.ಆರ್.ತಿಪ್ಪೇಸ್ವಾಮಿ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೮೬

೯೯. **ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ** : ಕೆ.ವ್ಹಿ.ಕಾಳೆ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ-೨೦೦೦

೧೦೦. **ಕರ್ನಾಟಕದಲ್ಲಿ ಚಿತ್ರಕಲಾ ಬೆಳವಣಿಗೆ ಒಂದು ಸಮೀಕ್ಷೆ** : ಎಲ್.ಶಿವಲಿಂಗಪ್ಪ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೨೦೦೬

೧೦೧. **ಕರ್ನಾಟಕ ಕಲಾಯಾತ್ರೆ** : ಸಿ.ಚಂದ್ರಶೇಖರ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೪

೧೦೨. **ಕರ್ನಾಟಕದ ಭಿತ್ತಿಚಿತ್ರ ಪರಂಪರೆ** : ಅ.ಲ.ನರಸಿಂಹನ್ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೮

೧೦೩. **ಕರ್ನಾಟಕ ಸಂಸ್ಕೃತಿಯ ವಿಶ್ವರೂಪ** : ವ್ಹಿ.ಜಿ.ಮಾರಿಹಾಳ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೭೩

೧೦೪. **ಕಸೂತಿ ಚಿತ್ರಕಲೆ** : ಮಹಾದೇವ ಜಗತಾಪ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೪

೧೦೫. ಕನ್ನಡ ಅಧ್ಯಯನ ಸಂಸ್ಥೆಯ, ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾಲಯ, ಪ್ರಧಾನ ಸಂಪಾದಕರು ಡಾ. ಹಾ. ಮಾ. ನಾಯಕ.

ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ ೧ : ೧೯೭೪

ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ ೨ : ೧೯೭೫

ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ ೩ : ೧೯೭೬

ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ ೪ : ೧೯೭೭

ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ ೫ : ೧೯೮೧

೧೦೬. **ಕಾಮಸೂತ್ರ** : ವೆಂಕಟ ಜಿ.ಭಸ್ಮೆ (ಸಂ) : ಸಮಾಜ ಪುಸ್ತಕಾಲಯ, ಧಾರವಾಡ–೨೦೦೪

೧೦೭. **ಕಾಶಪಶಿಲ್ಪಶಾಸ್ತ್ರಂ** : ಜಿ.ಜ್ಞಾನಾನಂದ (ಸಂ) : ಕರ್ನಾಟಕ ಶಿಲ್ಪಕಲಾ ಅಕಾಡಮಿ, ಬೆಂಗಳೂರು–೧೯೯೮

೧೦೮. **ಕಾವಿಕಲೆ** : ಕೃಷ್ಣಾನಂದ ಕಾಮತ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೯೪

೧೦೯. **ಕಿನ್ನಾಳದ ಚಿತ್ರಕಲೆ** : ಆರ್.ಎಚ್.ಕುಲಕರ್ಣಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೯೨

೧೧೦. **ಕಿನ್ನಾಳ ಕಲೆ** : ರವಿ ವಸರಾಮ ನಾಯಕ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್.ಪ್ರಬಂಧ–೨೦೦೬

೧೧೧. **ಕುವೆಂಪು ಸಾಹಿತ್ಯ, ಚಿತ್ರಸಂಪುಟ** : ಎಂ.ಎಚ್.ಕೃಷ್ಣಯ್ಯ : ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು–೨೦೦೪

೧೧೨. **ಕುಶಲಕಲೆಗಳು** : ಡಿ.ಗಣೇಶ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ–೧೯೮೨

೧೧೩. **ಕೆ. ವೆಂಕಟಪ್ಪ ಸವಿನೆನಪು** : ಎಸ್.ಎನ್.ಚಂದ್ರಶೇಖರ (ಸಂ) : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೮೭

೧೧೪. **ಕೆ. ವೆಂಕಟಪ್ಪ** : ಪಿ.ಆರ್.ತಿಪ್ಪೇಸ್ವಾಮಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೮೩

೧೧೫. **ಕೆ.ಕೆ.ಹೆಬ್ಬಾರ** : ಎನ್.ಮರಿಶಾಮಾಚಾರ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು–೧೯೮೩

೧೧೬. **ಕೆ.ಟಿ.ಶಿವಪ್ರಸಾದ** : ಎಚ್.ಎ.ಅನಿಲಕುಮಾರ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೨೦೦೦

೧೧೭. **ಕೆ.ಕೆ.ಹೆಬ್ಬಾರ** : ಎನ್.ಮರಿಶಾಮಾಚಾರ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೮೭

೧೧೮. **ಕೆ.ಜಿ.ಸುಬ್ರಹ್ಮಣ್ಯನ್** : ಎನ್.ಮರಿಶಾಮಾಚಾರ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು–೧೯೮೬

೧೧೯. **ಕೆ.ಎಸ್.ಕುಲಕರ್ಣಿ** : ಅತುಲ್ ಭಾರದ್ವಾಜ್ : ಲಲಿತಕಲಾ ಅಕಾಡಮಿ, ನವದೆಹಲಿ–೧೯೮೮

೧೨೦. **ಕೇರಳದ ವರ್ಣಚಿತ್ರಲೋಕ** : ವೆಂಕಟರಾಜ ಪುಣಿಚಿತ್ತಾಯ್ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೮೩

೧೨೧. **ಕೊಪ್ಪಳ ಹಂಪಿ ಪ್ರದೇಶದ ಪ್ರಾಗಿತಿಹಾಸದ ಕಲೆ** : ಶರಣಬಸಪ್ಪ ಕೋಲ್ಕಾರ್ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಪ್ರಬಂಧ–೨೦೦೩

೧೨೨. **ಗಂಜೀಫಾ ಕಲೆ** : ಸಂತೋಷಕುಮಾರ ಗುಲ್ವಾಡಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೮೪

೧೨೩. **ಗಂಜೀಫಾ** : ಎಂ.ಎಲ್.ಶಿವಶಂಕರ : ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು-೧೯೯೬

೧೨೪. **ಗ್ರಾಮೀಣ ಚಿತ್ರಗಳು** : ಎಸ್.ಕೆ.ರಾಮಚಂದ್ರರಾವ್ : ಕರ್ನಾಟಕ ಜನಪದ ಅಕಾಡಮಿ, ಬೆಂಗಳೂರು-೧೯೯೬

೧೨೫. **ಗ್ರಾಫಿಕ್ ಕಲೆ** : ರವಿಕುಮಾರ ಕಾಶಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೬

೧೨೬. **ಗೊಂಬೆಯಾಟ** : ರಾಮಚಂದ್ರೇಗೌಡ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೮೦

೧೨೭. **ಚತುಷಷ್ಠಿ ಕಲೆ** : ಟಿ.ಎಸ್.ಸತ್ಯವತಿ : ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಅಧ್ಯಯನಪೀಠ, ಬೆಂಗಳೂರು-೨೦೦೨

೧೨೮. **ಚಿತ್ರಕಲಾ** : ಚೂಡಾಮಣಿ ನಂದಗೋಪಾಲ (ಸಂ) : ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು-೨೦೦೦

೧೨೯. **ಚಿತ್ರಾಕ್ಷಿ** : ಎಸ್.ಸಿ.ಪಾಟೀಲ (ಸಂ) : ಸ್ಕೂಲ್ ಆಫ್ ಆರ್ಟ ವಜ್ರಮಹೋತ್ಸವ ಸಮಿತಿ, ಧಾರವಾಡ-೧೯೯೫

೧೩೦. **ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು** : ಎಸ್.ಸಿ.ಪಾಟೀಲ (ಸಂ) : ಸ್ಕೂಲ್ ಆಫ್ ಆರ್ಟ ವಜ್ರಮಹೋತ್ಸವ ಸಮಿತಿ, ಧಾರವಾಡ-೧೯೯೫

೧೩೧. **ಚಿತ್ರಕಲಾ ಪ್ರಪಂಚ** : ಅ.ಲ.ನರಸಿಂಹನ್, ಎನ್.ಮರಿಶಾಮಾಚಾರ್ (ಸಂ) : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೩

೧೩೨. **ಚಿತ್ರಕಲಾವಿದ ಜೆ.ಎಸ್.ಖಂಡೇರಾವ್** : ಮಲ್ಲಿಕಾರ್ಜುನ ಬಾಗೋಡಿ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಪ್ರಬಂಧ-೨೦೦೨

೧೩೩. **ಚಿತ್ತಾರದ ಗೊಂಬೆ** : ಗೋವಿಂದರಾಜ ಸಿ. : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೪

೧೩೪. **ಚಿತ್ತಾರ** : ನಾ.ಡಿಸೋಜ : ರವೀಂದ್ರ ಪುಸ್ತಕಾಲಯ, ಶಿವಮೊಗ್ಗ-೨೦೦೨

೧೩೫. **ಚಿತ್ರಕಲಾ ಪ್ರವೇಶ** : ಹೋ.ಶ್ರೀ.ಹುದಾರ : ಸಮಾಜ ಪುಸ್ತಕಾಲಯ, ಧಾರವಾಡ-೧೯೮೦

೧೩೬. **ಚಿತ್ರಕಲಾ ಪರಿಚಯ** : ವ್ಹಿ.ಟಿ.ಕಾಳೆ : ವಿಜಯ ಬುಕ್ ಡಿಪೋ, ಗದಗ-೧೯೮೫

೧೩೭. **ಚಿತ್ರಕಲಾ ಶಿಕ್ಷಕರ ಕೈಪಿಡಿ** : ಬಿ.ಪಿ.ತಿಪ್ಪಯ್ಯ : ಸಾರ್ವಜನಿಕ ಶಿಕ್ಷಣ ಇಲಾಖೆ, ಕರ್ನಾಟಕ ಸರಕಾರ ಬೆಂಗಳೂರು-೧೯೯೫

೧೩೮. **ಚಿತ್ರಯಾತ್ರೆ** : ಬಿ.ವ್ಹಿ.ಕೆ.ಶಾಸ್ತ್ರಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೫

೧೩೯. **ಚಿತ್ರಕಲೆ** : ಅ.ನ.ಕೃ. : ವಿದ್ಯಾನಿಧಿ ಬುಕ್ ಡಿಪೋ, ಮೈಸೂರು-೧೯೭೦

೧೪೦. **ಚಿತ್ರಕಲಾ ಕೈದೀಪ** : ಎಸ್.ಎಂ.ಶಿರಹಟ್ಟಿ : ಷಿಹಾಮಿ ಪಬ್ಲಿಕೇಶನ್ಸ್, ಗದಗ-೧೯೮೨

೧೪೧. **ಚಿತ್ರಕಲಾ ದರ್ಪಣ** : ವ್ಹಿ.ಟಿ.ಕಾಳೆ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೪

೧೪೨. **ಚಿತ್ರಕಲಾ ಚಿಂತನೆ** : ಶಂಕರ ಪಾಟೀಲ : ಪ್ರಗತಿ ಪ್ರಕಾಶನ, ದಾವಣಗೆರೆ-೧೯೯೫

೧೪೩. **ಚಿತ್ರಕಲೆ ಮತ್ತು ಸಂವಹನ** : ಜಿ.ಮಲ್ಲಿಕಾರ್ಜುನ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೬

೧೪೪. **ಚುಕ್ಕೆಚಿತ್ರ ನೀವೂ ರಚಿಸಬೇಕೆ?** : ಬಾಗೂರು ಮಾರ್ಕಂಡೇಯ : ಸ್ವಪ್ನ ಬುಕ್ ಹೌಸ, ಬೆಂಗಳೂರು-೨೦೦೨

೧೪೫. **ಚೈತನ್ಯ** : ಎಸ್.ಎ.ಭೋಜ (ಸಂ) : ಮಾಲಗತ್ತಿ ಆಪ್‌ಸೆಟ್ ಪ್ರಿಂಟರ್ಸ್, ಬೆಳಗಾವಿ-೧೯೯೭
೧೪೬. **ಚೌಕಟ್ಟು** : ಎಚ್.ಎ.ಅನಿಲಕುಮಾರ (ಸಂ) : ಸಂಚಯ ಪ್ರಕಾಶನ, ಬೆಂಗಳೂರು-೧೯೯೭
೧೪೭. **ಜನಪದ ಕಸೂತಿ** : ಮಧುವೆಂಕಾರೆಡ್ಡಿ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ-೨೦೦೦
೧೪೮. **ಜಾಗತಿಕ ಚಿತ್ರಕಲೆ** : ಬಿ.ಪಿ.ಬಾಯಿರಿ : ಪ್ರತಿಭಾ ಗ್ರಂಥಮಾಲೆ, ಧಾರವಾಡ-೧೯೮೫
೧೪೯. **ಜಾನಪದ ಸಾಹಿತ್ಯ ದರ್ಶನ** : ಎಸ್.ಜಿ.ಇಮ್ರಾಪೂರ (ಸಂ) : ಕನ್ನಡ ಅಧ್ಯಯನಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೪
೧೫೦. **ಜಿ.ಎಸ್.ದಂಡಾವತಿಮಠ** : ವ್ಹಿ.ಸಿ.ಮಾಲಗತ್ತಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೨
೧೫೧. **ಜಿ.ಎಸ್.ಶೆಣೈ** : ಕಾಸರವಳ್ಳಿ ಜಿ.ರವೀಶ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೫
೧೫೨. **ಜಿ.ಎಸ್.ಖಂಡೇರಾವ್** : ಕುಪ್ಪಣ್ಣ ಕಂದಗಲ್ಲ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೯
೧೫೩. **ಟಾಲ್‌ಸ್ಟಾಯ್ ಕಲಾಮೀಮಾಂಸೆ** : ಸಿ.ಪಿ.ಕೃಷ್ಣಕುಮಾರ : ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು-೧೯೮೨
೧೫೪. **ಟಿ.ಪಿ.ಅಕ್ಕಿ** : ವ್ಹಿ.ಟಿ.ಕಾಳೆ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೪
೧೫೫. **ಡಿ.ಜಿ.ಬಡಿಗೇರ** : ಅನ್ನದಾನಿ ಹಿರೇಮಠ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೩
೧೫೬. **ಡಿ.ಜಿ.ಬಡಿಗೇರ** : ಶೋಭಾ ಬಡಿಗೇರ : ವೀರಶೈವ ಅಧ್ಯಯನ ಸಂಸ್ಥೆ, ಗದಗ-೧೯೮೪
೧೫೭. **ಡಿ.ವ್ಹಿ.ಹಾಲಭಾವಿ** : ಎಸ್.ಕೆ.ಹೂಗಾರ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೫
೧೫೮. **ತಮಿಳುನಾಡಿನಲ್ಲಿ ಚಿತ್ರಕಲೆ** : ಅ.ಲ.ನರಸಿಂಹನ್ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೨
೧೫೯. **ತುಳುವರ ಆಚರಣೆಯಲ್ಲಿ ಕಲಾವಂತಿಕೆ** : ಕ.ವೆಂ.ರಾಜಗೋಪಾಲ (ಸಂ) : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೯
೧೬೦. **ದಖನಿ ಚಿತ್ರಕಲೆ** : ಎಸ್.ಕೆ.ಅರುಣಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೧
೧೬೧. **ದೃಶ್ಯಕಲಾವಿದರು** : ಎನ್.ಮರಿಶಾಮಾಚಾರ್ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ-೨೦೦೩
೧೬೨. **ದೃಶ್ಯಕಲೆಗಳು ಒಂದು ತೌಲನಿಕ ಅಧ್ಯಯನ** : ಡಿ.ಎ.ಉಪಾಧ್ಯಾಯ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಡಿ.ಲಿಟ್.ಪ್ರಬಂಧ-೨೦೦೬
೧೬೩. **ದೃಶ್ಯಕಲೆಗಳ ಗುಣಗ್ರಹಣ** : ಅ.ಲ.ನರಸಿಂಹನ್ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೫
೧೬೪. **ದೃಶ್ಯಕಲೆಯ ಆರಾಧಕರು** : ಎಚ್.ಎನ್.ಸುರೇಶ (ಸಂ) : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೦
೧೬೫. **ದೃಶ್ಯಕಲಾ** : ಎನ್.ಮರಿಶಾಮಾಚಾರ್ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೨೦೦೧
೧೬೬. **ದೃಶ್ಯಕಲಾ ವಿಮರ್ಶೆ** : ವ್ಹಿ.ಜಿ.ಅಂದಾನಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು- ೨೦೦೦

೧೬೭. **ನವ್ಯಕಲೆಯ ನವ ಮುಖಗಳು** : ಬಿ.ವ್ಹಿ.ಕೆ.ಶಾಸ್ತ್ರಿ (ಸಂ) : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೨

೧೬೮. **ನನ್ನ ಸಿಲೋನ್ ಸಂದರ್ಶನ** : ಡಿ.ವ್ಹಿ.ಹಾಲಭಾವಿ : ಸುರೇಶ ಹಾಲಭಾವಿ ಪ್ರಕಾಶನ, ಧಾರವಾಡ-೧೯೮೫

೧೬೯. **ನವ್ಯಕಲೆ ಮತ್ತು ಕಲೆಗಾರರು** : ಬಿ.ಪಿ.ಬಾಯಿರಿ : ಪ್ರತಿಭಾ ಗ್ರಂಥಮಾಲೆ, ಧಾರವಾಡ-೧೯೮೨

೧೭೦. **ನಾಗಾರಾಧನೆ ಮತ್ತು ಚಿತ್ರಕಲೆ** : ಉಪಾಧ್ಯಾಯ ಮೂಡುಬೆಳ್ಳೆ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೪

೧೭೧. **ನಾಗರೀಕತೆಯ ಹೊಸ್ತಿಲಲ್ಲಿ** : ಶಿವರಾಮ ಕಾರಂತ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ-೧೯೬೯

೧೭೨. **ನಿಜದ ನೆಲೆ** : ಎಸ್.ಸಿ.ಪಾಟೀಲ, ಸತ್ಯಾನಂದ ಪಾತ್ರೋಟ (ಸಂ) : ಮಲ್ಲಣಾರ್ಯ ಪ್ರಕಾಶನ, ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟ-೨೦೦೩

೧೭೩. **ನಿಸರ್ಗ** : ಫ.ಗು.ಸಿದ್ಧಾಪುರ (ಸಂ) : ಬಾಗಲಕೋಟ, ಬಿಜಾಪೂರ ಚಿತ್ರಕಲಾ ಶಿಕ್ಷಕರ ಸಂಘ, ಬಿಜಾಪೂರ-೨೦೦೩

೧೭೪. **ನೀವೂ ಕಲಾವಿದರಾಗಬೇಕೆ?** : ಬಾಗೂರು ಮಾರ್ಕಂಡೇಯ : ಕರ್ನಾಟಕ ಬುಕ್ ಏಜನ್ಸಿ, ಬೆಂಗಳೂರು-೧೯೯೭

೧೭೫. **ನೋಟ-ಪಲ್ಲಟ** : ಎಚ್.ಎ.ಅನೀಲಕುಮಾರ : ಅಭಿನವ ಪ್ರಕಾಶನ, ಬೆಂಗಳೂರು-೧೯೯೮

೧೭೬. **ನೋವಿಗದ್ದಿದ ಕುಂಚ** : ನೇಮಿಚಂದ್ರ : ನವಕರ್ನಾಟಕ ಪಬ್ಲಿಕೇಶನ್ಸ್ ಬೆಂಗಳೂರು-೧೯೯೩

೧೭೭. **ಪರಿಚಯ** : ಎಚ್.ಶಂಕರಪ್ಪ (ಸಂ) : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೨

೧೭೮. **ಪ್ರವಾಸ ಸಾಹಿತ್ಯ** : ವಿ.ಕೃ.ಗೋಕಾಕ : ಐ.ಬಿ.ಎಚ್.ಪ್ರಕಾಶನ, ಬೆಂಗಳೂರು-೧೯೮೮

೧೭೯. **ಪ್ರಶಸ್ತಿಪಡೆದ ಕಲಾವಿದರು** : ಪಿ.ಆರ್.ತಿಪ್ಪೇಸ್ವಾಮಿ (ಸಂ) : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೭

೧೮೦. **ಪಾಶ್ಚಾತ್ಯ ಕಲಾವಿದರು** : ಕಮಲದಾನಿ ಗುರುರಾಯ : ಮುಕ್ತಾಲಿಮೋಹನರಾವ ಪ್ರಕಾಶನ, ಹಾವೇರಿ-೧೯೫೧

೧೮೧. **ಪಾಶ್ಚಾತ್ಯ ಕಲಾವಿದರು** : ಎನ್.ಮರಿಶಾಮಾಚಾರ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೪

೧೮೨. **ಪಾವಂಜೆ ಗೋಪಾಲಕೃಷ್ಣಯ್ಯ** : ಬಿ.ಎನ್.ಶಾಂತಪ್ರಿಯ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೪

೧೮೩. **ಪಾಪ್‌ಕಲೆ** : ರವಿಕುಮಾರ ಕಾಶಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೭

೧೮೪. **ಪಿ.ಆರ್.ತಿಪ್ಪೇಸ್ವಾಮಿ** : ಜಿ.ಶಂ.ಪರಮಶಿವಯ್ಯ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೪

೧೮೫. **ಪಿ.ಸುಬ್ಬರಾವ** : ಎಂ.ಎಸ್.ನಂಜುಂಡರಾವ್ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೯೪

೧೮೬. **ಪೀಟರ್ ಲೂಯಿಸ್** : ಬಾ.ನ.ಶಾಂತಪ್ರಿಯ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೨೦೦೦

೧೮೭. **ಪಿಕಾಸೋ** : ಸುರೇಶ ಕುಲಕರ್ಣಿ : ತಾರಾ ಪ್ರಕಾಶನ, ಭಾರತೀ ನಗರ, ಧಾರವಾಡ–೧೯೮೧

೧೮೮. **ಪೋಟೋರಿಯಾಲಿಜಮ್** : ಕೆ.ವ್ಹಿ.ಸುಬ್ರಹ್ಮಣ್ಯ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೯೫

೧೮೯. **ಪೋಸ್ಟ್ ಮಾಡರ್ನಿಜಮ್** : ನೇಮಿರಾಜಶೆಟ್ಟಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೯೬

೧೯೦. **ಬಸವರಾಜ ಹಳಿಜೋಳ** : ಆರ್.ಜಿ.ರಾಯ್ಕರ್ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೨೦೦೦

೧೯೧. **ಬಣ್ಣದವೇಷ ಮತ್ತು ಇತರ ಉಪನ್ಯಾಸಗಳು** : ಮಳೀಯ ಮಹಾಬಲಭಟ್ಟ : ಮಹಾಬಲಭಟ್ಟ ಪ್ರಕಾಶನ, ಕರಂಗಲಪಾಡಿ, ಮಂಗಳೂರು–೧೯೮೮

೧೯೨. **ಬಸವಣ್ಣನವರ ಸಮಗ್ರ ವಚನ ಸಂಪುಟ** : ಎಂ.ಎಂ.ಕಲಬುರ್ಗಿ (ಸಂ) : ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು–೨೦೦೨

೧೯೩. **ಬಣ್ಣ ಬಯಲು** : ಡಿ.ಎಸ್.ಚೌಗಲೆ : ಹರ್ಷ ಪ್ರಕಾಶನ, ಹುಬ್ಬಳ್ಳಿ–೨೦೦೨

೧೯೪. **ಬದರಿ ಚಿತ್ರಕಲೆ** : ವ್ಹಿ.ಎಂ.ಬಾಗಾಯತ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೨೦೦೪

೧೯೫. **ಬ್ರಾಹ್ಮೀ ಚಿತ್ರಕರ್ಮಶಾಸ್ತ್ರಂ** : ಜಿ.ಜ್ಞಾನಾನಂದ (ಸಂ) : ಸಂಸ್ಕೃತಿ ಸಾಹಿತ್ಯ ಪ್ರಸಾರ ಸಮಿತಿ, ಭಾರತನಗರ, ಕೆ.ಜಿ.ಎಫ್–೨೦೦೦

೧೯೬. **ಬಾರಾಮಾಸ** : ಶಾಂತರಸ (ಸಂ) : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ–೧೯೯೩

೧೯೭. **ಬಾರೋಕ್ ಕಲೆ** : ಎಸ್.ಸಿ.ಪಾಟೀಲ : ಭಾರತೀಯ ಕಲಾಕೇಂದ್ರ, ಧಾರವಾಡ–೧೯೮೭

೧೯೮. **ಬಾನಯ್ಯ ಗರುಡಾದ್ರಿ** : ಬಸವರಾಜ ಉಪ್ಪಿನ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೯೫

೧೯೯. **ಬಾದಾಮಿ ಒಂದು ಸಾಂಸ್ಕೃತಿಕ ಅಧ್ಯಯನ** : ಶೀಲಾಕಾಂತ ಪತ್ತಾರ : ಕನ್ನಡ ವಿಶ್ವವಿದ್ಯಾಲಯ ಹಂಪಿ–೨೦೦೦

೨೦೦. **ಬಿ.ಕೆ.ಹುಬಳಿ** : ಡಿ.ಎಸ್.ಚೌಗಲೆ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೧೯೯೯

೨೦೧. **ಬೆಳೆದುಬಂದ ಭಾರತದ ಚಿತ್ರಕಲೆ** : ಪಿ.ಆರ್.ತಿಪ್ಪೇಸ್ವಾಮಿ : ಕಲಾಕ್ಷೇತ್ರ, ಮೈಸೂರು–೧೯೭೨

೨೦೨. **ಬೆಳದಿಂಗಳ ಚಿತ್ರಕಲೆ** : ಆನಂದ ಕೆ. ಪೂಜಾರ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು–೨೦೦೪

೨೦೩. **ಭರತೇಶ ವೈಭವ** : ಟಿ.ಎಸ್.ಶ್ಯಾಮರಾವ (ಸಂ) : ಮೈಸೂರು ವಿಶ್ವವಿದ್ಯಾಲಯ–೧೯೫೫

೨೦೪. **ಭಾರತದ ದೃಶ್ಯಕಲಾವಿದರು** : ಎನ್.ಮರಿಶಾಮಾಚಾರ : ಹರಿಹರ ಪ್ರಕಾಶನ, ಬೆಂಗಳೂರು–೧೯೯೩

೨೦೫. **ಭಾರತದ ಜನಪದ ಕಲೆ** : ಎನ್.ಮರಿಶಾಮಾಚಾರ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು–೧೯೯೧

೨೦೬. **ಭಾರತದಲ್ಲಿ ಸಮಕಾಲೀನ ಕಲೆ** : ಎನ್.ಮರಿಶಾಮಾಚಾರ್ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು–೧೯೮೭

೨೦೭. **ಭಾರತೀಯ ಚಿತ್ರಕಲೆ** : ಎಸ್.ಎಂ.ಶಿರಹಟ್ಟಿ : ವಿಜಯ ಕಲಾಮಂದಿರ, ಗದಗ–೧೯೭೨

೨೦೮. **ಭಾರತೀಯ ಚಿತ್ರಕಲೆ** : ಬಿ.ಪಿ.ಬಾಯಿರಿ : ಸಮಾಜ ಪುಸ್ತಕಾಲಯ, ಧಾರವಾಡ–೧೯೮೦

೨೦೯. **ಭಾರತೀಯ ಚಿತ್ರಕಲೆ** : ಆರ್.ಜಿ.ರಾಯ್ಕರ್ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೬

೨೧೦. **ಭಾರತೀಯ ಸಂಸ್ಕೃತಿಯಲ್ಲಿ ರಂಗವಲ್ಲಿ** : ಬಿ.ಪಿ.ಬಾಯಿರಿ : ಚಿತ್ರಕುಟೀರ, ಉಡುಪಿ-೧೯೯೨

೨೧೧. **ಭಾರತೀಯ ಚಿತ್ರಕಲೆ** : ಶಿವರಾಮ ಕಾರಂತ : ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೩೦

೨೧೨. **ಭೂತಾರಾಧನೆಯಲ್ಲಿ ಬಣ್ಣಗಾರಿಕೆ** : ಬಿ.ಎ.ವಿವೇಕ ರೈ (ಸಂ) : ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ತುಳುಪೀಠ, ಮಂಗಳೂರು ವಿಶ್ವವಿದ್ಯಾಲಯ-೨೦೦೧

೨೧೩. **ಮಧ್ಯಪ್ರದೇಶದ ಮಡಿಲಲ್ಲಿ** : ಕೃಷ್ಣಾನಂದ ಕಾಮತ್ : ಪುಸ್ತಕಾಲಯ ಪ್ರಕಾಶನ, ಬೆಂಗಳೂರು-೧೯೯೩

೨೧೪. **ಮಧ್ಯಪ್ರದೇಶದ ಕಲೆ** : ಕೆ.ವ್ಹಿ.ಸುಬ್ರಹ್ಮಣ್ಯ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೫

೨೧೫. **ಮಧುಗಿರಿ ರಾಮು** : ಯು.ಎಸ್.ವೆಂಕಟರಾಮನ್ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೪

೨೧೬. **ಮಹಿಳೆಯರ ಅಲಂಕಾರ** : ಶಾಂತಾದೇವಿ ಮಾಳವಾಡ : ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೬

೨೧೭. **ಮಕ್ಕಳ ಚಿತ್ರಕಲೆ** : ಬಿ.ಪಿ.ಬಾಯಿರಿ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ-೧೯೯೮

೨೧೮. **ಮಾನಸೋಲ್ಲಾಸ** : ಎಂ.ಎಂ.ಕಲಬುರ್ಗಿ (ಸಂ) : ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೮

೨೧೯. **ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ** : ಜಿ.ಎಸ.ಶಿವರುದ್ರಪ್ಪ : ಶಾರದಾ ಪ್ರಕಾಶನ, ಗಾಂಧಿನಗರ, ಬೆಂಗಳೂರು-೧೯೭೩

೨೨೦. **ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ** : ಎ.ಎಸ್.ವಿಶ್ವನಾಥ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್.ಪ್ರಬಂಧ-೨೦೦೩

೨೨೧. **ಯಕ್ಷಗಾನ ಮತ್ತು ಚಿತ್ರಕಲೆ** : ಉಪಾಧ್ಯಾಯ ಮೂಡುಬೆಳ್ಳೆ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೪

೨೨೨. **ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ** : ಎ.ಎಸ್.ವಿಶ್ವನಾಥ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಪ್ರಬಂಧ-೨೦೦೭

೨೨೩. **ಯೂಸೂಫ್ ಅರಕ್ಕಲ್** : ಚಿ.ಸು.ಕೃಷ್ಣಶೆಟ್ಟಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೯

೨೨೪. **ರಮ್ಯಕಲೆಯ ರಸಋಷಿ, ಎಸ್.ಎಂ.ಪಂಡಿತ** : ಎನ್.ಮರಿಶಾಮಾಚಾರ್ : ವಿಶ್ವಕರ್ಮ ಪ್ರಕಾಶನ, ಮೂಡುಬಿದಿರೆ-೧೯೯೯

೨೨೫. **ರಂಗೋಲಿ ಚಿತ್ರಕಲೆ** : ಒಂದು ಸಾಂಸ್ಕೃತಿಕ ಅಧ್ಯಯನ : ವಿಶ್ವೇಶ್ವರಿ ತಿವಾರಿ : ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ.ಪ್ರಬಂಧ-೨೦೦೫

೨೨೬. **ರಂಗೋಲಿ ಚಿತ್ರಕಲೆ** : ಎಸ್.ಸಿ.ಪಾಟೀಲ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೪

೨೨೭. **ರಂಗೋಲಿ** : ಶಾಂತಿನಾಯಕ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ-೧೯೯೪

೨೨೮. **ರಂಗೋಲಿ** : ರಾಜಲಕ್ಷ್ಮೀ ವಾಸುದೇವ : ಸಂತೋಷ ಪಬ್ಲಿಕೇಶನ್ಸ್, ಬೆಂಗಳೂರು-೧೯೯೫

೨೨೯. **ರಸರೇಖೆ** : ಹರಿಪ್ರಿಯ (ಸಂ) : ಮಯೂರ ಪ್ರಕಾಶನ, ಬೆಂಗಳೂರು-೧೯೭೬

೨೩೦. **ರಾಷ್ಟ್ರಪ್ರಶಸ್ತಿ ಪಡೆದ ಕಲಾವಿದರು** : ಬಿ.ಕೆ.ಹಿರೇಮಠ (ಸಂ) : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೩

೨೩೧. **ರಾಜಾರವಿವರ್ಮ** : ಎನ್.ಮರಿಶಾಮಾಚಾರ್ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೯೪

೨೩೨. **ರುಮಾಲೆ ಚೆನಬಸಯ್ಯ** : ಕೆ.ಎಸ.ಶ್ರೀನಿವಾಸಮೂರ್ತಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೦

೨೩೩. **ರೇಖಾಚಿತ್ರ** : ಬಿ.ವಿ.ಕೆ.ಶಾಸ್ತ್ರಿ (ಸಂ) : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೯೧

೨೩೪. **ರೆಂಬ್ರಾಂಟ್** : ರಜನಿ ಪ್ರಸನ್ನ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೮೦

೨೩೫. **ಲಿಪಿಯ ಹುಟ್ಟು ಮತ್ತು ಬೆಳವಣಿಗೆ** : ದೇವರಕೊಂಡಾರೆಡ್ಡಿ : ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೨

೨೩೬. **ಲಿಯೋನಾರ್ಡೋ-ಡ-ವಿನ್ಸಿ** : ನಿರುಪಮಾ : ಸ್ವಪ್ನ ಬುಕ್ ಹೌಸ್, ಬೆಂಗಳೂರು-೨೦೦೨

೨೩೭. **ವರ್ಣಸಂಚಯ** : ಎಸ್.ಸಿ.ಪಾಟೀಲ : ವಿಜಯ ಚಿತ್ರಕಲಾ ಮಹಾವಿದ್ಯಾಲಯ ಪ್ರಕಾಶನ, ಇಲಕಲ್ಲ-೨೦೦೧

೨೩೮. **ವಿಜಯ ಸಿಂಧೂರ** : ಕೆ.ವ್ಹಿ.ಸುಬ್ರಹ್ಮಣ್ಯ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೦

೨೩೯. **ವಿಜಯನಗರದ ಭಿತ್ತಿಚಿತ್ರಕಲೆ** : ಸುಚಿತ್ರಾ ಲಿಂಗದಳ್ಳಿ : ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್.ಪ್ರಬಂಧ-೨೦೦೬

೨೪೦. **ವಿನ್ಯಾಸ ಜಗತ್ತು** : ಬಾಗೂರು ಮಾರ್ಕಂಡೇಯ : ಸ್ವಪ್ನ ಬುಕ್‌ಸ್ಟಾಲ್, ಬೆಂಗಳೂರು-೧೯೯೭

೨೪೧. **ವಿಷ್ಣುಧರ್ಮೋತ್ತರ ಪುರಾಣ** : ಸಂಕೀಘಟ್ಟ ವೆಂಕಟಾಚಾರ್ಯ (ಸಂ) : ಓರಿಯಂಟಲ್ ಲೈಬ್ರರಿ ಪಬ್ಲಿಕೇಶನ್ಸ್, ಮೈಸೂರು-೧೯೫೩

೨೪೨. **ವಿಕಾಸ ಕಂಡ ಕರ್ನಾಟಕದ ಚಿತ್ರಕಲೆ** : ಅ.ಲ.ನರಸಿಂಹನ್ : ಪ್ರಕಾಶ ಸಾಹಿತ್ಯ ಭಂಡಾರ, ಬೆಂಗಳೂರು-೧೯೮೯

೨೪೩. **ವಿಜಯನಗರದ ಕಲೆ ಮತ್ತು ಸಾಹಿತ್ಯ** : ಶಾಮಲಾಲ್ ಪುಲುಮತಿ : ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು-೧೯೮೬

೨೪೪. **ವೈ.ಸುಬ್ರಹ್ಮಣ್ಯರಾಜು** : ಎಂ.ಎಸ್.ಚಂದ್ರಶೇಖರ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೭

೨೪೫. **ವೈ.ನಾಗರಾಜು** : ಅ.ಲ.ನರಸಿಂಹನ್ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೯

೨೪೬. **ಶಂಕರರಾವ ಆಳಂದಕರ** : ಬಾಲಕೃಷ್ಣ ವಾಮನಜೋಗ (ಸಂ) : ನೂತನ ವಿದ್ಯಾಲಯ ಸೋಸಾಯಿಟಿ, ಗುಲಬರ್ಗಾ-೧೯೭೪

೨೪೭. **ಶಂಕರ ಆಳಂದಕರ** : ಎಂ.ಜಿ.ಬಿರಾದಾರ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೧೯೮೬

೨೪೮. **ಶೃಂಗಾರ ಲಹರಿ** : ಎಂ.ಎಚ್.ಕೃಷ್ಣಯ್ಯ : ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು-೧೯೮೯

೨೪೯. **ಶಾಂತಲಿಂಗಪ್ಪ ಪಾಟೀಲ** : ಎಚ್.ವ್ಹಿ.ಮಂತಟ್ಟಿ : ಕರ್ನಾಟಕ ಲಲಿತಕಲಾ ಅಕಾಡಮಿ, ಬೆಂಗಳೂರು-೨೦೦೦

